# ವೈದಿಕ ಸಾಹಿತ್ಯ ಚರಿತ್ರೆ

ಡಾ. ಎನ್. ಎಸ್. ಅನಂತರಂಗಾಚಾರ್



ಡಿ. ವಿ. ಕೆ. ಮೂರ್ತಿ
ಪ್ರಕಾಶಕರು : : ಮೈಸೂರು ೪

# ಲೇಖಕನ ವಿನಮ್ರ ವಚನಗಳು

ವಿಶ್ವದಲ್ಲೇ ಅತಿ ಪ್ರಾಚೀನವಾದುದು ವೇದವಾಙ್ಮಯ. ನಮ್ಮ ನೈತಿಕ, ಧಾರ್ಮಿಕ, ಸಾಮಾಜಿಕ ಹಾಗೂ ಆಧ್ಯಾತ್ಮಿಕವಾದ ಭಾವನೆಗಳಿಗೂ ಆದರ್ಶಗಳಿಗೂ ಮೂಲಾಧಾರವಾದವು ವೇದಗಳು. 'ಅನಂತಾ ವೈ ವೇದಾಃ' ಎಂದು ಹೇಳಿದಂತೆ ಈ ವಾಙ್ಮಯ ಅನೇಕ ಶಾಖೋಪಶಾಖೆಗಳಲ್ಲಿ ವ್ಯಾಪಕವಾಗಿ ಪಲ್ಲವಿಸಿದೆ. ಇಂದು ನಮಗೆ ಉಪಲಬ್ಧವಾಗಿರುವ ವೇದಭಾಗಗಳು ಮೂಲವೇದದ ಸಹಸ್ರಾಂಶದ ಒಂದಂಶವೂ ಆಗಿಲ್ಲವೆಂಬುದು ತಜ್ಞರ ಅಭಿಪ್ರಾಯ.

ವೇದಗಳಲ್ಲಿರುವ ಜ್ಞಾನಭಂಡಾರ ಅಪಾರವಾದುದು. ಅದರ ಉಪದೇಶ ಮಾನವ ಕುಲಕ್ಕೇ ಅನ್ವಯಿಸುತ್ತದೆ. ಒಂದು ದೇಶ, ಒಂದು ಕಾಲ, ಒಂದು ಜನಾಂಗಕ್ಕೆ ಅದು ಮೀಸಲಾದುದಲ್ಲ. ವೇದ ಮಂತ್ರಗಳಲ್ಲಿ ಗೂಢವಾದ ಅಧ್ಯಾತ್ಮಜ್ಞಾನ ಅಡಗಿದೆ. ವೇದಗಳು ಪ್ರತಿಪಾದಿಸುವ ನಿಗೂಢವಾದ ಜ್ಞಾನವನ್ನು ಅರಿಯಬೇಕೆಂಬುದೇ ಎಲ್ಲ ಸಾಧಕರ ಹಂಬಲ ವಾಗಿದ್ದಿತು. 'ಯಸ್ತನ್ನವೇದ ಕಿಂ ಋಚಾ ಕರಿಷ್ಯತಿ' (ಋ. ೧-೧೬೪-೩೯) ಎಂದು ಆ ವೇದವೇ ಹೇಳುತ್ತದೆ.

ವೇದವು ನಿತ್ಯ, ಪರಮ ಪ್ರಮಾಣ, ಅಪೌರುಷೇಯ, ಸತ್ಯ ಎಂಬುದು ನಮ್ಮ ನಂಬಿಕೆ. ಈ ವೇದಗಳ ಪ್ರಭಾವ ಅವ್ಯಕ್ತವಾದ ರೀತಿಯಲ್ಲಿ ನಮ್ಮ ದೇಶದ ಎಲ್ಲ ಧರ್ಮ ಮತ್ತು ದರ್ಶನಗಳ ಮೇಲೆಯೂ, ಅವರು ಒಪ್ಪಲಿ, ಒಪ್ಪದಿರಲಿ, ಆಗಿರುವುದೆಂಬುದು ನಿಶ್ಚಿತ.

ವೇದವಾಙ್ಮಯದ ಬಗೆಗೆ ವ್ಯಾಪಕವಾಗಿ ಸಂಶೋಧನೆಗಳು ವಿಶ್ವಾದ್ಯಂತ ಆಗಿವೆ, ಆಗುತ್ತಿವೆ. ವೈದಿಕ ಸಂಶೋಧನ ಮಂಡಲಿಗಳೇ ಸ್ಥಾಪಿತವಾಗಿವೆ. ಇಷ್ಟು ವ್ಯಾಪಕವಾದ ಸಂಶೋಧನೆ ಬೇರೆಯಾವುದರ ಬಗೆಗೂ ನಡೆದಿಲ್ಲವೆಂದರೆ ಅದು ಅತ್ಯುಕ್ತಿಯಲ್ಲ.

ಇಂಥ ಮಹತ್ವಪೂರ್ಣವಾದ ವೇದವಾಙ್ಮಯದ ಸ್ಥೂಲವಾದ ಪರಿಚಯವನ್ನು ಮಾಡಿ ಕೊಡುವ ಉದ್ದೇಶದಿಂದ ಈ ಕೃತಿಯು ರಚಿತವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಈ ಕೃತಿಯ ಪ್ರಥಮ ಮತ್ತು ದ್ವಿತೀಯ ಮುದ್ರಣವನ್ನು ಮಾಡಿ ಪ್ರಕಾಶಪಡಿಸುವ ಕೃಪೆ ಮಾಡಿದ್ದಾರೆ. ಅದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಕ್ಕೆ ನಾನು ಕೃತಜ್ಞನಾಗಿದ್ದೇನೆ. ಅನೇಕ ಸಹೃದಯ ವಿದ್ವಾಂಸರು ಈ ಕೃತಿಯ ಬಗೆಗೆ ತಮ್ಮ ಮೆಚ್ಚಿಕೆಯನ್ನು ತೋರಿ ಪ್ರೋತ್ಸಾಹಿಸಿದ್ದಾರೆ. ಅವರಿಗೆಲ್ಲಾ ನಾನು ಕೃತಜ್ಞನಾಗಿದ್ದೇನೆ. ಈ ಕೃತಿಯ ತೃತೀಯ ಮುದ್ರಣವನ್ನು ನನ್ನ ಸನ್ಮಿತ್ರರಾದ ಮಾನ್ಯ ಶ್ರೀ ಡಿ.ವಿ.ಕೆ. ಮೂರ್ತಿಯವರು ಕೃಪೆಯಿಂದ ಕೈಗೊಂಡಿದ್ದಾರೆ. ಅವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು. ಸಹೃದಯರಾದ ನಾಡಬಾಂಧವರು ಇದನ್ನು ಎಂದಿನಂತೆ ಆದರಪೂರ್ವಕವಾಗಿ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು
ವಿಕ್ರಮ ಕಾರ್ತೀಕ
ಪೂರ್ಣಿಮಾ
೧೧-೧೧-೨೦೦೭

ಇಂತು ಸಜ್ಜನವಿಧೇಯ
ಎನ್. ಎಸ್. ಅನಂತರಂಗಾಚಾರ್ಯ

# ವಿಷಯ ಸೂಚಿಕೆ

## ಪೀಠಿಕೆ

**ಸಂಸ್ಕೃತಂ ಸಂಸ್ಕೃತೋಪಮಂ**

ಗೀರ್ವಾಣಭಾಷೆಯ ಇತಿಹಾಸ ಭಾರತೀಯ ಸಂಸ್ಕೃತಿಯ ಇತಿಹಾಸವೇ ಆಗಿದೆ. ಈ ಇತಿಹಾಸ ಹತ್ತಾರು ಸಹಸ್ರಮಾನಗಳಿಗೆ ಮೀರಿದುದು. ನಮ್ಮ ದೇಶದ ಇತಿಹಾಸವನ್ನರಿಯಲೂ ಹಾಗೆಯೇ ವಿಶ್ವದ ಇತಿಹಾಸವನ್ನರಿಯಲೂ ಸಂಸ್ಕೃತ ವಾಙ್ಮಯದ ಅಧ್ಯಯನ ಅವಶ್ಯಕವಾಗಿದೆ. ವಿಶ್ವದ ಪ್ರಮುಖ ಭಾಷೆಗಳಲ್ಲಿ ಸಂಸ್ಕೃತ ಭಾಷೆಯೂ ಒಂದು. ಈ ಭಾಷೆಯಲ್ಲಿನ ಸಾಹಿತ್ಯ ವ್ಯಾಪ್ತಿಯಲ್ಲಿಯೂ, ಮಹತ್ವದಲ್ಲಿಯೂ ಅನುಪಮವಾದುದು. ಭಾರತೀಯರ ಮನೋಧರ್ಮ, ಆದರ್ಶಗಳು ಹಾಗೂ ಆಶೆ ಆಕಾಂಕ್ಷೆಗಳನ್ನು ರೂಪಿಸುವುದರಲ್ಲಿ ಇದು ಪ್ರೇರಕಶಕ್ತಿಯಾಗಿದೆ.

ಸಂಸ್ಕೃತ ವಾಙ್ಮಯದಲ್ಲಿ ಅಡಗಿರುವ ಜ್ಞಾನಭಂಡಾರ ಅಪಾರವಾಗಿದೆ. ವಿಶ್ವದಲ್ಲಿಂದು ಉಪಲಬ್ಧವಾಗಿರುವ ಆಧಾರಗಳಲ್ಲೆಲ್ಲಾ ಅತ್ಯಂತ ಪ್ರಾಚೀನತಮವಾದ ವೈದಿಕ ವಾಙ್ಮಯ ಸಂಸ್ಕೃತ ಭಾಷೆಯಲ್ಲಿದೆ. ವಿಶ್ವದ ಇತರ ಭಾಗಗಳಲ್ಲಿ ನಾಗರಿಕತೆಯ ಉದಯವಾಗುವುದಕ್ಕೂ ಮುಂಚೆಯೇ ನಮ್ಮ ದೇಶದ ಋಷಿಗಳು ಎಂಥ ಭವ್ಯವಾದ ಜೀವನದರ್ಶನವನ್ನು ಕಂಡಿದ್ದರೆಂಬುದು ನಮಗೆ ಇಲ್ಲಿ ಗೊತ್ತಾಗುತ್ತದೆ. ಈ ವೇದ ವಾಙ್ಮಯ ಸಂಹಿತೆ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳೆಂಬ ರೂಪದಲ್ಲಿ ಅಪಾರವಾಗಿದೆ. ಪರ್ವತಾಗ್ರದಿಂದ ಮೊರೆಯುತ್ತ ಪ್ರವಹಿಸುವ ನಿರ್ಝರ ಪ್ರವಾಹಗಳಂತೆ ಋಷಿಗಳ ವಾಣಿ ಇಲ್ಲಿ ಅಕ್ಷಯವಾಗಿ ಪ್ರವಹಿಸಿದೆ. ಉಪನಿಷತ್ತುಗಳಂತೂ ಶ್ರುತಿ ಶಿಖರಗಳಾಗಿ ಮಾನವ ಜೀವನದ ಗೊತ್ತುಗುರಿಗಳನ್ನು ತೋರಿಸುವ ಶಾಶ್ವತ ಜ್ಞಾನದೀಪಗಳಾಗಿವೆ.

ಈ ಶ್ರುತಿಗಳ ಮೂಲಧರ್ಮಕ್ಕನುಸಾರವಾಗಿ ಜನರ ನೀತಿನಡತೆಗಳನ್ನು ರೂಪಿಸಲು ಸ್ಮೃತಿಗಳೂ ಇತಿಹಾಸ ಪುರಾಣಗಳೂ ಪ್ರವೃತ್ತವಾಗಿವೆ. ಮಿತವಾದ ಮಾತುಗಳಲ್ಲಿ ಅಮಿತವಾದ ಅರ್ಥವನ್ನು ಪೋಷಿಸುವ ಸೂತ್ರಸಾಹಿತ್ಯ ಸಂಸ್ಕೃತಭಾಷೆಯ ಅಪೂರ್ವಸಂಪತ್ತಾಗಿದೆ. ನಮ್ಮ ಪವಿತ್ರಗ್ರಂಥಗಳಾದ ರಾಮಾಯಣ, ಭಾರತ, ಭಾಗವತ, ವಿಷ್ಣುಪುರಾಣ ಮುಂತಾದ ಇತಿಹಾಸಪುರಾಣಗಳು ಅಸಂಖ್ಯವಾದ ಆದರ್ಶಗಳಿಂದ ತುಂಬಿತುಳುಕುವ ಜ್ಞಾನಭಂಡಾರಗಳಾಗಿವೆ. ಇವುಗಳಿಗೆ ಸರಿದೊರೆಯಾಗುವ ಕೃತಿಗಳು ವಿಶ್ವದ ಮತ್ತಾವ ಸಾಹಿತ್ಯದಲ್ಲಿಯೂ ಇಲ್ಲವೆನ್ನಬಹುದು.

ವೇದಾಂತ, ಧರ್ಮಶಾಸ್ತ್ರ, ವ್ಯಾಕರಣ, ನ್ಯಾಯಶಾಸ್ತ್ರ ಮುಂತಾದ ಅನೇಕ ಶಾಸ್ತ್ರಗಳಲ್ಲಿ ಎಲ್ಲ ಕಾಲಕ್ಕೂ ನಿಲ್ಲತಕ್ಕ ಮೂಲಸೂತ್ರಗಳ ರಚನೆ ಸಂಸ್ಕೃತ ಭಾಷೆಯಲ್ಲಿ ಆಗಿದೆ. ಮೂಲಭೂತವಾದ ಈ ಸೂತ್ರಗಳ ಆಧಾರದ ಮೇಲೆಯೇ ಇಂದಿಗೂ ವಿವೇಚನೆ ನಡೆಯುತ್ತಿದೆ. ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳು, ಶಾಸ್ತ್ರಗ್ರಂಥಗಳು ಇವುಗಳು ಹೇಗೋ ಹಾಗೆಯೇ ಅಪೂರ್ವವಾದ ರಸವತ್ಕಾವ್ಯಗಳ ಸಮೃದ್ಧಿ ಸಂಸ್ಕೃತ ಸಾಹಿತ್ಯದ ವೈಶಿಷ್ಟ್ಯವಾಗಿದೆ. ಶ್ರುತಿಸ್ಮೃತಿಗಳಿಂದ ಈ ಸಾಹಿತ್ಯ ಹೇಗೆ ಪೂಜ್ಯವಾಗಿದೆಯೋ ಹಾಗೆಯೇ ಈ ಕಾವ್ಯಸಮೃದ್ಧಿಯಿಂದ ಪ್ರಿಯವೂ ಆಗಿದೆ. ಪದ್ಯ, ಗದ್ಯ, ಚಂಪೂ, ನಾಟಕ, ಸುಭಾಷಿತ,

ಮುಕ್ತಕ ಮುಂತಾದ ಅನೇಕ ಮುಖಗಳಲ್ಲಿ ಹೊರಹೊಮ್ಮಿರುವ ಅಕ್ಷಯವಾದ ಈ ಕಾವ್ಯಪ್ರವಾಹ ಸುರಭಾರತೀಯ ವಿಲಾಸವಾಗಿ ಬೆಳಗಿದೆ. ವಿಶ್ವದ ಅತ್ಯುತ್ತಮ ಕೋಟಿಯ ಕೃತಿಗಳಲ್ಲಿ ಸೇರತಕ್ಕ ಪ್ರಪತ್ತ್ವವನ್ನು ಇವುಗಳಲ್ಲಿ ಅನೇಕ ಕೃತಿಗಳು ಹೊಂದಿವೆ. ಇಂಥ ಅನುಪಮವಾದ ಕಾವ್ಯಸ್ರ್ಷ್ಟಿ ಸಂಸ್ಕೃತ ಸಾಹಿತ್ಯದ ಹೆಮ್ಮೆಯಾಗಿದೆ.

ಸಂಸ್ಕೃತ ಜನಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದ ಭಾಷೆ. ಮಾನವ ಜೀವನದ ಎಲ್ಲ ಮುಖಗಳಲ್ಲಿಯೂ ಇದು ಬಳಕೆಗೆ ಬಂದಿತು. ವೈದ್ಯಶಾಸ್ತ್ರ, ನಕ್ಷತ್ರಶಾಸ್ತ್ರ, ಶಿಲ್ಪ, ಅರ್ಥಶಾಸ್ತ್ರ, ರಾಜನೀತಿ, ನೀತಿಗ್ರಂಥಗಳು, ಅಲಂಕಾರಶಾಸ್ತ್ರ, ಗಣಿತ, ಕಾಮಶಾಸ್ತ್ರ, ರೇಖಾಶಾಸ್ತ್ರ, ಸಂಗೀತ, ನರ್ತನ ಮುಂತಾದವುಗಳೆಲ್ಲೆಲ್ಲಾ ಆಧಾರಯುತವಾದ ಪ್ರಮಾಣಗ್ರಂಥಗಳು ಈ ಭಾಷೆಯಲ್ಲಿ ರಚಿತವಾಗಿವೆ. ಅತ್ಯಪೂರ್ವವಾದ ಜ್ಞಾನಭಂಡಾರ ಇದರಲ್ಲಡಗಿದೆ. ಮಾನವಜನಾಂಗ ತನ್ನ ಉದ್ಧಾರವನ್ನು ಮಾಡಿಕೊಳ್ಳಲು ಬೇಕಾದ ಸ್ಫೂರ್ತಿಯನ್ನು ಇದು ಕೊಡುತ್ತಿದೆ. ಜ್ಞಾನವೈಪುಲ್ಯ, ಶಬ್ದಸಂಪತ್ತು ಮತ್ತು ಭಾವಪುಷ್ಟಿಯಿಂದ ಇದು ಅತ್ಯಂತ ವ್ಯಾಪಕವಾಗಿದೆ.

ಪುಣ್ಯಭೂಮಿ ಎನಿಸಿದ ನಮ್ಮ ದೇಶದ ಮೇಲೆ ಆದಷ್ಟು ಧಾಳಿ ಮತ್ತೆಲ್ಲಿಯೂ ಆಗಿಲ್ಲ. ಇದರ ಪರಿಣಾಮವಾಗಿಯೋ ಎಂಬಂತೆ ಅನೇಕ ಕೃತಿರತ್ನಗಳು ಆತ್ಯಂತಿಕವಾಗಿ ಕಳೆದುಹೋಗಿವೆ. ನಮಗಿಂದು ಉಪಲಬ್ಧವಾಗಿರುವ ಗ್ರಂಥಗಳಲ್ಲಿ ಬರುವ ಕವಿಗಳ ಮತ್ತು ಕೃತಿಗಳ ಪಟ್ಟಿಯೊಂದನ್ನು ಮಾಡಿದರೂ ಅಪಾರವಾದ ಗ್ರಂಥರಾಶಿಯೇ ಆಗುವುದು. ಅವೆಲ್ಲಾ ನಮಗೆ ಅಖಂಡವಾಗಿ ದೊರೆಯದಿರುವುದು ನಮ್ಮ ದೌರ್ಭಾಗ್ಯ. ಆದರೂ ನಮಗೆ ದೊರಕಿರುವ ಕೃತಿಗಳೇನೂ ಕಡಿಮೆಯಾಗಿಲ್ಲ. ಇವುಗಳನ್ನೆಲ್ಲಾ ಪೂರ್ಣವಾಗಿ ಅಧ್ಯಯನ ಮಾಡಬೇಕಾದರೂ ಹಲವಾರು ಪುರುಷಾಯುಸ್ಸುಗಳು ಬೇಕೇ ಬೇಕು ! ಪತಂಜಲಿಗಳು ಮನುಷ್ಯನೊಬ್ಬನು ಎಲ್ಲ ಶಾಸ್ತ್ರಗಳಲ್ಲಿಯೂ ಪರಿಣತನಾಗುವುದು ಅತ್ಯಂತ ಕಷ್ಟವೆಂಬು ದನ್ನು ಸೂಚಿಸಲು—'ಕಷ್ಟಂ ಶಾಸ್ತ್ರಂ. ಏಕಸ್ಮಿನ್ ಜನ್ಮನಿ ಏಕಮೇವ ಶಾಸ್ತ್ರಂ' ಎಂದು ಹೇಳಿದರು. ಇಂದು ಒಂದು ಶಾಸ್ತ್ರವನ್ನೂ ಸಹ ಪೂರ್ಣವಾಗಿ ಅಧ್ಯಯನ ಮಾಡಿ ಪರಿಣತರಾಗುವುದು ಕಷ್ಟಕರ. ಜೀವನದಷ್ಟೇ ವ್ಯಾಪಕವಾಗಿರುವ ಸಂಸ್ಕೃತವಾಙ್ಮಯ ಸಹಸ್ರಾರು ಶಾಖೋಪಶಾಖೆಗಳಿಂದ ಶೋಭಿಸಿದೆ. ನಿಃಸ್ಸಮಾಭ್ಯಧಿಕವಾದ ಈ ದೇವಭಾಷೆಯನ್ನು ಆ ಕಾರಣದಿಂದಲೇ 'ಸಂಸ್ಕೃತಂ ಸಂಸ್ಕೃತೋಽಪಮಂ' ಎಂದು ವರ್ಣಿಸಬೇಕಾಗಿದೆ.

## ಭಾರತವೂ ಇತಿಹಾಸವೂ

ಪ್ರಾಚೀನ ಭಾರತದ ಹಾಗೂ ಪ್ರಾಚೀನ ಸಂಸ್ಕೃತ ಸಾಹಿತ್ಯದ ಚರಿತ್ರೆಯನ್ನು ಬರೆಯುವುದು ಬಹಳ ತೊಡಕಾದ ವಿಚಾರ. ಚರಿತ್ರೆಯ ಎರಡು ಮುಖಗಳಾದ ಕಾಲ ಮತ್ತು ಘಟನೆಗಳ ವಿವರಗಳು ನಿಖರವಾಗಿ ನಮಗೆ ಗೊತ್ತಾಗದಿರುವುದು ಇದಕ್ಕೆ ಕಾರಣ. ಈ ಕಾಲದ ಚರಿತ್ರೆಯನ್ನು ನಮಗೆ ಉಪಲಬ್ಧವಾಗಿರುವ ವೇದವಾಙ್ಮಯದ ಆಪಾತಪ್ರತೀತಾರ್ಥಗಳಿಂದಲೂ, ಆಂತರಿಕವಾದ ಆಧಾರಗಳಿಂದಲೂ ಊಹಿಸಿ ಕಟ್ಟಲಾಗಿದೆ. ಆದುದರಿಂದಲೇ ಒಮ್ಮೆ ಕೈಗೊಂಡ ನಿರ್ಣಯಗಳ ಪುನರ್ವಿಮರ್ಶೆಗೆ ಅವಕಾಶವಿದೆ. ವೈದಿಕ ವಾಙ್ಮಯದ ಇತಿಹಾಸವಿರಲಿ, ಲೌಕಿಕ ಸಾಹಿತ್ಯದ ಇತಿಹಾಸವೂ ಹೀಗೆಯೇ ಊಹೆಯಲ್ಲಿಯೇ ಉಳಿದುಹೋಗಿದೆ. ಉದಾಹರಣೆಗೆ ಹೇಳುವುದಾದರೆ ಭಾರತದ ಸರ್ವಶ್ರೇಷ್ಠ ಕವಿಯಾದ ಕಾಳಿದಾಸಮಹಾಕವಿಯ ಕಾಲನಿರ್ಣಯವನ್ನು ನಿಖರವಾಗಿ ಮಾಡುವುದಕ್ಕಾಗಿಲ್ಲ. ಕಾಳಿದಾಸ

ಕವಿ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆಯೇ ವಿನಾ ಮತ್ತೇನನ್ನೂ ಹೇಳದಿರುವುದು ಇದಕ್ಕೆ ಕಾರಣ. ಅನೇಕ ಕವಿಗಳು ತಮ್ಮ ಹೆಸರನ್ನೂ ಹೇಳಿಕೊಂಡೇ ಇಲ್ಲ. ಕಾಲ ದೇಶಗಳ ಪ್ರಸ್ತಾಪವಂತೂ ಇಲ್ಲವೇ ಇಲ್ಲ. ಕೆಲವರು ತಮ್ಮ ಗ್ರಂಥಗಳು ಉಪಾದೇಯವಾಗಲೆಂಬ ಉದ್ದೇಶದಿಂದ ತಮ್ಮ ಹೆಸರುಗಳನ್ನು ಮರೆಸಿಬಿಟ್ಟಿದ್ದಾರೆ. ಹೀಗಾಗಿ ನಮಗೆ ಪ್ರಾಚೀನ ಸಂಸ್ಕೃತ ಕವಿಗಳನೇಕರ ಕಾಲದೇಶಗಳ ವಿಚಾರ ನಿಷ್ಕೃಷ್ಟವಾಗಿ ಗೊತ್ತಾಗುವಂತಿಲ್ಲ. ಆದರೆ ಕ್ರಿಸ್ತಾಬ್ದಕ್ಕೆ ಈಚಿನ ಶತಮಾನಗಳಲ್ಲಿ ಬಾಳಿದ ಕವಿಗಳು ತಮ್ಮ ವಂಶ, ಕಾಲ, ಆಶ್ರಯ ಮುಂತಾದವನ್ನು ಹೇಳಿಕೊಂಡಿದ್ದಾರೆ.

ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಕಾಲವನ್ನು ಸೂಚಿಸದೇ ಇರುವುದಕ್ಕೆ ಆ ಕಾಲದಲ್ಲಿ ಯಾವ ಶಕೆಯೂ ಪ್ರಚಾರದಲ್ಲಿಲ್ಲವೆಂದು ಕೆಲವರ ಮತ.[1] ಆದರೆ ಇದು ಎಷ್ಟರಮಟ್ಟಿಗೆ ನಿಜವೋ ಗೊತ್ತಾಗುವಂತಿಲ್ಲ. ಏಕೆಂದರೆ ಇತಿಹಾಸಗಳ ಕಾಲಕ್ಕೇ ನಮ್ಮವರಲ್ಲಿ ಯುಗದ ಕಲ್ಪನೆ ಬೆಳೆದಿತ್ತು. ವರ್ಷಗಣನೆಗೆ ಯಾವುದಾದರೊಂದು ಕ್ರಮವನ್ನು ಅವರು ಅನುಸರಿಸುತ್ತಿದ್ದರೆಂದು ನಾವು ಊಹಿಸಬಹುದು. ಲೌಕಿಕವಾದ ಶಕೆಗಳು ಕ್ರಿ. ಪೂ. ಒಂದನೆಯ ಶತಮಾನದಿಂದೀಚೆಗೆ ಆರಂಭವಾದುವು. ಕ್ರಿ. ಪೂ. 57ರಲ್ಲಿ 'ಮಾಳವಗಣ ಸ್ಥಿತಿ' ಎಂದು ಕರೆಯಲಾದ ಮೊಟ್ಟಮೊದಲನೆಯ ವಿಕ್ರಮ ಶಕೆ ಆರಂಭಗೊಂಡಿತೆಂದೂ, ಕ್ರಿ. ಶ. 78ರಲ್ಲಿ ಶಾಲೀವಾಹನ ಶಕೆಯೂ, ಕ್ರಿ.ಶ. 249ರಲ್ಲಿ ತ್ರೈಕೂಟಶಕೆಯೂ, ಕ್ರಿ.ಶ. 319ರಲ್ಲಿ ಗುಪ್ತಶಕೆಯೂ ಪ್ರಚಾರಕ್ಕೆ ಬಂದವೆಂದೂ ನಾವು ತಿಳಿಯುತ್ತೇವೆ. ಈ ಶಕೆಗಳಿಗಿಂತ ಹಿಂದಿನ ಶಕೆಗಳಾವುವನ್ನೂ ಸಂಸ್ಕೃತ ಕವಿಗಳು ನಿರ್ದೇಶ ಮಾಡಿದಂತಿಲ್ಲ. ಇವುಗಳಿದ್ದರೂ ಸಂಸ್ಕೃತ ಕವಿಗಳು ಕಾಲಘಟನೆಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಕೊಡದಿರುವುದಕ್ಕೆ ಕಾರಣವೇನಿರಬಹುದೆಂದು ನಾವು ಯೋಚಿಸಬೇಕು. ಕ್ರಿಸ್ತಪೂರ್ವ ಶತಮಾನಗಳಲ್ಲಿಯೇ ಜಟಿಲತಮವಾದ ಶಾಸ್ತ್ರಗಳಲ್ಲಿ ಅದ್ವಿತೀಯವಾದ ಪರಿಣತಿಯನ್ನು ಹೊಂದಿ ಆ ವಿಚಾರ ಧಾರೆಯನ್ನು ಸಕ್ರಮವಾಗಿಯೂ ಯುಕ್ತಿಯುಕ್ತವಾಗಿಯೂ ನಿರೂಪಿಸಬಲ್ಲ ಸಾಮರ್ಥ್ಯವನ್ನು ಹೊಂದಿದ್ದ ನಮ್ಮ ಹಿರಿಯರಿಗೆ ಇತಿಹಾಸ ಕಷ್ಟವಾಗಿತ್ತೆಂದು ನಾವು ಭಾವಿಸುವುದಕ್ಕಾಗುವುದಿಲ್ಲ. ಆದರೆ ಇತಿಹಾಸದ ವಿಚಾರದಲ್ಲಿ ಇವರು ಔದಾಸೀನ್ಯ ತೋರಿರುವುದಕ್ಕೆ ಇತಿಹಾಸದ ಬಗೆಗೆ ಇವರಿಗಿದ್ದ ಕಲ್ಪನೆಯೇ ಕಾರಣವೆನ್ನಬಹುದು. ಕಾಲಘಟನೆಗಳಿಗೆ ಪ್ರಾಧಾನ್ಯವನ್ನು ಕೊಡುವ ಬದಲು ಇವರು ಅವುಗಳಿಂದ ಕಲಿಯಬೇಕಾದ ನೀತಿಗೆ ಪ್ರಾಧಾನ್ಯ ಕೊಟ್ಟರು. ಚರಿತ್ರೆಯನ್ನೂ ಇವರು ಅದರಿಂದಲೇ ಕಾವ್ಯಮಯವನ್ನಾಗಿ ನಿರ್ಮಿಸಿದರು. ಸಂಪೂರ್ಣವಾಗಿ ಚರಿತ್ರೆಯ ಲೇಖನಕ್ಕೆ ನಮ್ಮವರು ಗಮನಕೊಡಲಿಲ್ಲವೆಂದು ಹೇಳುವುದು ಸಾಹಸದ ಮಾತು! ಏಕೆಂದರೆ ನಿಖರವಾದ ತೇದಿಗಳನ್ನು ಸೂಚಿಸುವ ಅಸಂಖ್ಯ ಶಾಸನಗಳು ದೇಶದ ನಾಲ್ಕೂ ದಿಕ್ಕುಗಳಲ್ಲಿ ಹರಡಿವೆ. ಇವು ಅವರ ಐತಿಹಾಸಿಕ ದೃಷ್ಟಿಯನ್ನು ಸಮರ್ಥಿಸುತ್ತವೆ. ಪ್ರಾಚೀನ ಸಾಹಿತ್ಯದಲ್ಲಿಯೂ ಐತಿಹಾಸಿಕವಾದ ಅಂಶಗಳ ಉಲ್ಲೇಖಗಳು ಹೇರಳವಾಗಿವೆ. ಋಗ್ವೇದ ಸಂಹಿತೆಯಲ್ಲಿ ಬರುವ ದಾಶರಾಜ್ಞ ಯುದ್ಧದ ಉಲ್ಲೇಖ ಇಂಥದು. ಅಲ್ಲಿ ಬರುವ ಆ ಉಲ್ಲೇಖ ಇಂದ್ರದೇವನ ಮಹಿಮೆಯನ್ನು ಕೊಂಡಾಡಲು ಪ್ರವೃತ್ತವಾಯಿತು. ನಮ್ಮ ಇತಿಹಾಸ ಪುರಾಣಗಳಲ್ಲಿ ಚರಿತ್ರೆಯ ಅಂಶಗಳೆಷ್ಟೋ ಇವೆ. ಆದರೆ ಅವು ಕೇವಲ

1. *History of Vedic Literature–C. V. Vaidya, P. 2.*

ಕಾಲಘಟನಾಪ್ರಧಾನವಾಗಿಲ್ಲ. ಸಂಸ್ಕೃತ ಸಾಹಿತ್ಯದಲ್ಲಿ ಮುಂದೆ ಆದ ಐತಿಹಾಸಿಕ ಗ್ರಂಥಗಳೂ ಕಾವ್ಯರೂಪದಲ್ಲಿ ಬಂದವು. ಆದುದರಿಂದ ಕಾಲಘಟನಾರೂಪವಾದ ಇತಿಹಾಸ ಗ್ರಂಥಗಳ ಅಭಾವಕ್ಕೆ ಅವರು ಇತಿಹಾಸದ ಬಗೆಗೆ ಹೊಂದಿದ್ದ ಕಲ್ಪನೆಯೇ ಕಾರಣವೆಂದು ಹೇಳಬಹುದು.

ಭಾರತದ ಪ್ರಾಚೀನಕಾಲದ ಚರಿತ್ರೆಯಲ್ಲಿ ಕೆಲವು ಘಟ್ಟಗಳು ನಿರ್ದಿಷ್ಟವಾಗಿವೆ. ಇವುಗಳಲ್ಲಿ ಮೊಟ್ಟಮೊದಲನೆಯ ಘಟ್ಟ ಕ್ರಿ. ಪೂ. 500. ಈ ಕಾಲಕ್ಕೆ ಹಿಂದೆಯೇ ಸಮಸ್ತವಾದ ವೇದವಾಙ್ಮಯವೂ ಬೆಳೆದು ನಿಂತಿದ್ದಿತು. ಜೈನಬೌದ್ಧ ಶಾಸನಗಳೂ, ಗ್ರಂಥಗಳೂ ಈ ಅಂಶವನ್ನು ಸಮರ್ಥಿಸುವುವು. ಮ್ಯಾಸಿಡೋನಿಯಾದ ಅಲೆಕ್ಸಾಂಡರ್ ದಂಡೆತ್ತಿ ಬಂದ ಕಾಲವೂ ನಿರ್ದಿಷ್ಟವಾಗಿದೆ. ಕ್ರಿ. ಪೂ. 326 ಭಾರತದ ಇತಿಹಾಸದಲ್ಲಿ ಮುಖ್ಯವಾದ ಘಟ್ಟ. ಭಾರತದ ಸಂಸ್ಕೃತಿ ಮತ್ತು ಸಾಹಿತ್ಯಗಳ ಮೇಲೆ ಗ್ರೀಕರ ಪ್ರಭಾವ ಬಿದ್ದಿತೇ, ಯಾವಾಗ ಬಿದ್ದಿತು, ಎಷ್ಟರಮಟ್ಟಿಗೆ ಇದು ಆಯಿತು ಎಂಬ ಅಂಶಗಳನ್ನು ನಿರ್ಣಯಿಸಲು ಈ ತೇದಿ ಸಹಾಯಕವಾಗುತ್ತದೆ. ಚಂದ್ರಗುಪ್ತಮೌರ್ಯ ಕ್ರಿ. ಪೂ. 315ರಲ್ಲಿ ಪಾಟಲಿಪುತ್ರದಲ್ಲಿ ಅಭಿಷಿಕ್ತನಾದನು. ಇವನ ಆಸ್ಥಾನದಲ್ಲಿ ರಾಯಭಾರಿಯಾಗಿದ್ದ ಮೆಗಾಸ್ತನೀಸನ ಬರವಣಿಗೆಯಿಂದ ಅಂದಿನ ಭಾರತದ ಪರಿಚಯ ನಮಗಾಗುತ್ತದೆ. ಇವನ ಪೌತ್ರನಾದ ಅಶೋಕ ಮೌರ್ಯನು ಕ್ರಿ. ಪೂ. 264ರಲ್ಲಿ ಮೂರ್ಧಾಭಿಷಿಕ್ತನಾದನು. ಭಾರತದ ಸಂಸ್ಕೃತಿಯ ಜೀವನಾಡಿಯಾದ ಶಾಂತಿಮಾರ್ಗವನ್ನು ತೋರಿಸಿಕೊಟ್ಟ ಮಹಾಶಯನಿವನು. ಇವನು ಬರೆಸಿದ ಶಿಲಾಶಾಸನಗಳಿಂದ ಭಾರತದ ಲಿಪಿ ಮತ್ತು ಭಾಷೆಗಳ ಅರಿವು ನಮಗುಂಟಾಗುತ್ತದೆ.

ಭಾರತದ ಇತಿಹಾಸ ರಚನೆಗೆ ಹೇಗೋ ಹಾಗೆಯೇ ಸಂಸ್ಕೃತ ಸಾಹಿತ್ಯ ಚರಿತ್ರೆಯ ರಚನೆಗೂ ಚೀಣೀಯರಿಂದ ಸಹಾಯವಾಗಿದೆ. ಕ್ರಿಸ್ತಾಬ್ದದ ಆದಿಶತಮಾನದಿಂದಲೂ ಚೀಣಾ ದೇಶದ ಯಾತ್ರಿಕರು ಭಗವಾನ್ ಬುದ್ಧನು ಅವತರಿಸಿ, ಉಪದೇಶಿಸಿ, ಪರಿನಿರ್ವಾಣ ಹೊಂದಿದ ಈ ಪವಿತ್ರಭೂಮಿಗೆ ಬರುತ್ತಿದ್ದರು. ನಮ್ಮ ಅನೇಕ ಗ್ರಂಥಗಳನ್ನಿವರು ತಮ್ಮ ಭಾಷೆಗೆ ಪರಿವರ್ತನೆಗೊಳಿಸಿದ್ದಾರೆ. ತಾವು ಅವುಗಳನ್ನು ಪರಿವರ್ತನೆ ಮಾಡಿದ ತೇದಿಗಳನ್ನು ಸೂಚಿಸಿದ್ದಾರೆ. ಹೀಗೆ ಭಾರತಕ್ಕೆ ಬಂದಿದ್ದ ಚೀಣೀ ಯಾತ್ರಿಕರಲ್ಲಿ ಕ್ರಿ. ಶ. 399ರಲ್ಲಿ ಬಂದಿದ್ದ ಫಾಹಿಯಾನನೂ, ಕ್ರಿ. ಶ. 630ರಿಂದ 645ರವರೆಗೆ ಇಲ್ಲಿ ಇದ್ದ ಹ್ಯೂಯನ್‌ತ್ಸಾಂಗನೂ, ಕ್ರಿ. ಶ. 671ರಿಂದ 695ರವರೆಗೆ ಇಲ್ಲಿದ್ದ ಇತ್ಸಿಂಗನೂ ಪ್ರಸಿದ್ಧರು. ಇವರ ಲೇಖನಗಳಿಂದ ಸಂಸ್ಕೃತ ಸಾಹಿತ್ಯ ಚರಿತ್ರೆಯ ರಚನೆಗೆ ಅಪಾರವಾಗಿ ಸಹಾಯವಾಗಿದೆ.

ಈ ಕೆಲವು ನಿರ್ದಿಷ್ಟವಾದ ತೇದಿಗಳನ್ನು ಆಧಾರವಾಗಿಟ್ಟುಕೊಂಡು ಉಳಿದ ವಿಚಾರಗಳನ್ನು ಆಯಾಕವಿಗಳ ಗ್ರಂಥಗಳ ಅಂತರಂಗಪ್ರಮಾಣಗಳಿಂದಲೂ, ಇತರ ಕವಿಗಳ ಮತ್ತು ಕೃತಿಗಳ ಉಲ್ಲೇಖನಗಳಿಂದಲೂ ಊಹಿಸಿ ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ರೂಪಿಸಬೇಕಾಗಿದೆ.

### ಸಂಸ್ಕೃತ ಸಾಹಿತ್ಯ ಚರಿತ್ರೆ

ಕ್ರಮವಾದ ಸಂಸ್ಕೃತ ಸಾಹಿತ್ಯ ಚರಿತ್ರೆಯ ಲೇಖನ ಪ್ರಪ್ರಥಮವಾಗಿ ಪಾಶ್ಚಾತ್ಯರಿಂದ ಜನ್ಮತಾಳಿತೆಂದು ಹೇಳಬಹುದು. ಈ ವಿಧವಾದ ಚರಿತ್ರೆಯ ಗ್ರಂಥಗಳನ್ನು ನಮ್ಮವರು ಬರೆಯಲಿಲ್ಲ. ವೈದಿಕವಾಙ್ಮಯ ಅಪೌರುಷೇಯವೆಂಬ ನಂಬಿಕೆ ಇದ್ದ ಕಾರಣ ಅದರ ವಿಚಾರವನ್ನೂ ಈ ದೃಷ್ಟಿಯಲ್ಲಿ ಅವರು ವಿವೇಚಿಸಲಿಲ್ಲ. ಆದರೆ ಸಂಸ್ಕೃತ ಸಾಹಿತ್ಯದ ಐತಿಹಾಸಿಕ ಪರಿವರ್ತನೆಯ ಅಂಶಗಳನ್ನು ನಿರುಕ್ತ, ಬೃಹದ್ದೇವತೆ ಮೊದಲಾದ ಗ್ರಂಥಗಳಲ್ಲಿ

ನಾವು ಕಾಣುತ್ತೇವೆ.

ಜರ್ಮನಿ, ಇಂಗ್ಲೆಂಡ್ ಮೊದಲಾದ ವಿದೇಶಗಳ ವಿದ್ವಾಂಸರು ಸಂಸ್ಕೃತ ಭಾಷೆಯನ್ನು ಅಧ್ಯಯನ ಮಾಡಿ ಅನೇಕ ಕೃತಿರತ್ನಗಳನ್ನು ಪ್ರಪಂಚದ ದೃಷ್ಟಿಗೆ ತಂದರು. ಅಪೂರ್ವವಾದ ಶ್ರದ್ಧೆ, ಆಸಕ್ತಿ ಮತ್ತು ಸಂಶೋಧನ ಕ್ರಮಗಳಿಂದ ಸಂಸ್ಕೃತ ಗ್ರಂಥಗಳನ್ನು ಪರೀಕ್ಷಿಸಿ ಪ್ರಕಟಿಸಿದರು. ನಮ್ಮ ಧಾರ್ಮಿಕ ಗ್ರಂಥಗಳನ್ನು ವಿಶಿಷ್ಟ ರೀತಿಯಲ್ಲಿ ಅಭ್ಯಸಿಸಿ ವಿಮರ್ಶಾತ್ಮಕ ದೃಷ್ಟಿಯಿಂದ ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಬರೆದರು. ಇಂಥವರಲ್ಲಿ ವಿಲ್ಸನ್, ವೆಬರ್, ಮ್ಯಾಕ್ಸ್‌ಮುಲರ್, ಮ್ಯಾಕ್ಡೊನಾಲ್ಡ್, ವಿಂಟರನಿಟ್ಸ್, ಕೀತ್ ಮುಂತಾದ ಮಹಾಶಯರು ಪ್ರಸಿದ್ಧರು. ಇವರ ಅಧ್ಯಯನ ಐತಿಹಾಸಿಕ ಮತ್ತು ವಿಮರ್ಶಾತ್ಮಕ ದೃಷ್ಟಿಯಿಂದ ಆಯಿತು. ತುಲನಾತ್ಮಕ ಭಾಷಾಶಾಸ್ತ್ರ ಮತ್ತು ಪುರಾಣಶಾಸ್ತ್ರಗಳು ಇವರ ಪರಿಶ್ರಮದಿಂದ ರೂಪುಗೊಂಡವು. ಭಾರತದಲ್ಲಿ ಅಲ್ಲಲ್ಲಿ ಹರಡಿರುವ ಶಾಸನಗಳ ಮತ್ತು ಲಿಖಿತ ಪ್ರಮಾಣಗಳ ಆಧಾರದಿಂದ ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಬರೆಯಲು ಸಾಧಕವಾದ ಅನೇಕ ಅಂಶಗಳನ್ನಿವರು ಹೊರಗೆಡಹಿದರು. ಪಾಶ್ಚಾತ್ಯ ಪಂಡಿತರು ಭಾರತದ ಇತಿಹಾಸದ ವಿವರಣೆಗೂ, ಸಂಸ್ಕೃತ ಸಾಹಿತ್ಯದ ಅಧ್ಯಯನ ಮತ್ತು ಪ್ರಚಾರಕ್ಕೂ ಮಾಡಿರುವ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ.

ವಿದೇಶ ವಿದ್ವಾಂಸರ ಪ್ರತಿಭೆ ಮತ್ತು ಪರಿಶೋಧನೆ ಅಪಾರವಾಗಿದ್ದರೂ ಅವರು ಭಾರತದ ಸಂಸ್ಕೃತಿ, ಸಂಪ್ರದಾಯ ಮತ್ತು ಪರಂಪರೆಗಳನ್ನು ಯಥಾವತ್ತಾಗಿ ವಿವರಿಸಲು ಅಶಕ್ತರಾದರು. ಅವರ ಮನಸ್ಸು ಗ್ರೀಕ್ ನಾಗರಿಕತೆಗೆ ಮಾರುಹೋಗಿದ್ದಿತು. ಇಂಡೋ ಆರ್ಯನ್ ನಾಗರಿಕತೆ ಗ್ರೀಕ್ ನಾಗರಿಕತೆಗಿಂತ ಪ್ರಾಚೀನವಾದುದೆಂದು ಇವರು ನಂಬಲಾರದೆ ಹೋದರು. ಸಂಸ್ಕೃತ ಸಾಹಿತ್ಯದ ಪ್ರಾಚೀನತೆಯನ್ನು ಇವರು ಒಪ್ಪದೆ ಹೋದರು. ಪಾಶ್ಚಾತ್ಯ ಪಂಡಿತರ ಈ ವಿಮರ್ಶನಸರಣಿ ಅನೇಕ ಭಾರತೀಯರಿಗೆ ಸರಿಹೋಗಲಿಲ್ಲ. ಭಾರತದೇಶದ ಪರಂಪರೆಯಲ್ಲಿ ಬಂದು ಈ ಮಹತ್ತಮವಾದ ಸಂಪ್ರದಾಯದ ರಹಸ್ಯವನ್ನರಿತ ಅನೇಕಾನೇಕ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ಸಪ್ರಮಾಣವಾಗಿ ಪ್ರತಿಪಾದಿಸತೊಡಗಿದರು. ಇಂಥವರಲ್ಲಿ ಡಾ|| ಭಂಡಾರ್‌ಕರ್, ಎಸ್. ಪಿ. ಪಂಡಿತ್, ಬಾಲಗಂಗಾಧರ್ ತಿಲಕ್, ಎಸ್. ಬಿ. ದೀಕ್ಷಿತ್ ಮುಂತಾದವರು ಪ್ರಸಿದ್ಧರಾಗಿದ್ದಾರೆ. ಇವರು ಸಂಸ್ಕೃತ ಸಾಹಿತ್ಯದ ಆಧ್ಯಾತ್ಮಿಕ ಮಹತ್ವವನ್ನೂ ಕಾಲವಿಚಾರವನ್ನೂ ಯುಕ್ತಿಯುಕ್ತವಾಗಿ ಚರ್ಚಿಸಿದ್ದಾರೆ.

ವೈದಿಕ ಸಾಹಿತ್ಯದಲ್ಲಿ ಪಾಶ್ಚಾತ್ಯರು ಅಪೂರ್ವವಾದ ಆಸಕ್ತಿ ತೋರಿದರು. ಆದರೆ ಅವರು ಕೊಡುವ ಅರ್ಥವ್ಯತ್ತಿ ಅಷ್ಟು ಸಮರ್ಪಕವಾಗಿಲ್ಲ. ವೇದ ಗೂಢವೂ ಗಹನವೂ ಆದುದೆಂದು ನಮ್ಮವರೇ ಅನೇಕ ಶತಮಾನಗಳಿಂದ ಹೇಳುತ್ತಿದ್ದಾರೆ. ಅವುಗಳ ಅರ್ಥನಿರ್ಣಯ ಸುಲಭವಾದ ಕೆಲಸವಲ್ಲ. ಕೇವಲ ಪದಗಳ ಪರೀಕ್ಷಣದಿಂದ ವೇದಾರ್ಥ ನಿರ್ಣಯ ಮಾಡಲು ಸಾಧ್ಯವಿಲ್ಲ. ಆದುದರಿಂದಲೇ ರುಡಾಲ್ಫ್‌ರಾತ್ ಮಹಾಶಯನ ಮಹತ್ತ್ವ ಯತ್ನದಿಂದ ಬಂದ ಹಲವಾರು ಸಂಪುಟಗಳ ವೇದವಿವರಣೆ ವಾಸ್ತವ ಪರಿಸ್ಥಿತಿಗಳಿಗೆ ದೂರವಾಗಿ ಹೋಗಿದೆ.

ಈಚೆಗೆ ಭಾರತೀಯ ವಿದ್ವಾಂಸರು ಪಾಶ್ಚಾತ್ಯರ ವಿಮರ್ಶೆಯನ್ನೂ ಅಳವಡಿಸಿಕೊಂಡು ನಮ್ಮ ಸಂಪ್ರದಾಯದ ಹಿನ್ನೆಲೆಯನ್ನೂ ಬಿಡದೆ ಎರಡನ್ನೂ ಸಮನ್ವಯಗೊಳಿಸಿ ಯುಕ್ತವಾದ ರೀತಿಯಲ್ಲಿ ಸಂಶೋಧನೆಗಳನ್ನು ನಡೆಸುತ್ತಿರುವುದು ಸಮಾಧಾನದ ಸಂಗತಿಯಾಗಿದೆ.

**ಆರ್ಯರು ಭಾರತಕ್ಕೆ ವಲಸೆ ಬಂದವರೇ?**

ಭಾರತದ ಪ್ರಾಚೀನೇತಿಹಾಸವನ್ನು ನಿರೂಪಿಸುವಾಗ ಭಾರತ ದೇಶಕ್ಕೆ ಆರ್ಯರು ಮತ್ತೆಲ್ಲಿಂದಲೋ ವಲಸೆ ಬಂದವರೆಂದು ಚರಿತ್ರಕಾರರು ಅಭಿಪ್ರಾಯಪಡುತ್ತಾರೆ. ಭಾರತಕ್ಕೆ ಬರುವ ಮೊದಲು ಆರ್ಯರು ಎಲ್ಲಿದ್ದರೆಂಬ ಅಂಶ ನಿಶ್ಚಯವಾಗಿಲ್ಲ. ಅನೇಕ ವಿದ್ವಾಂಸರುಗಳು ಈ ವಿಚಾರವನ್ನು ಚರ್ಚಿಸಿದ್ದಾರೆ; ಹಾಗೂ ಬೇರೆಬೇರೆ ವಿಧವಾಗಿ ತೀರ್ಮಾನಿಸಿದ್ದಾರೆ.

ಆಧುನಿಕಚರಿತ್ರಕಾರರು ವೇದಮಂತ್ರಗಳನ್ನು ಆಧಾರವಾಗಿ ತೋರಿ ಆರ್ಯರು ವಲಸೆ ಬಂದವರೆಂಬ ತೀರ್ಮಾನಕ್ಕೆ ಬಂದಿದ್ದಾರೆ. ವೇದಮಂತ್ರಗಳ ಅರ್ಥವ್ಯಕ್ತಿ ಬಹಳ ಸಂದಿಗ್ಧವಾಗಿರುವುದರಿಂದ ಇಂಥ ನಿರ್ಣಯ ಸುಲಭವಾಗಿ ಆಗುವುದಿಲ್ಲ. ನಮ್ಮ ಪ್ರಾಚೀನಸಾಹಿತ್ಯದ ಮಟ್ಟಿಗೆ ಹೇಳುವುದಾದರೆ ಸಂಹಿತೆ, ಬ್ರಾಹ್ಮಣ, ಉಪನಿಷತ್ತು, ಇತಿಹಾಸ, ಪುರಾಣಗಳು ಮುಂತಾದವುಗಳಲ್ಲೆಲ್ಲಿಯೂ ಆರ್ಯರು ಮತ್ತೆಲ್ಲಿಂದಲೋ ಬಂದರೆಂಬ ಸೂಚನೆ ಕಂಡುಬರುವುದಿಲ್ಲ. ಒಂದು ಭೂಭಾಗದಿಂದ ಮತ್ತೊಂದು ಭೂಭಾಗಕ್ಕೆ ವಲಸೆ ಹೋಗಿ ಬಿಡುವಂತಹ ಮಹತ್ತರವಾದ ಈ ಅಂಶವನ್ನು ಪೂರ್ಣವಾಗಿ ಜನಾಂಗವೇ ಮರೆತುಬಿಟ್ಟಿತೆಂದು ಹೇಳಬಹುದೆ ? ಹಾಗೆ ವಲಸೆ ಬಂದುದು ನಿಜವಾದರೆ ಜನಾಂಗದ ಸ್ಮೃತಿ ಪರಂಪರೆಗೇ ನಿಲುಕದ ಈ ಘಟನೆ ಮತ್ತೆಷ್ಟು ಹಿಂದೆ ನಡೆದಿರಬೇಕು ?

ನಿಪುಣರಾದ ವಿದ್ವಾಂಸರು ಈ ವಿಚಾರವನ್ನು ಕುರಿತು ಚರ್ಚಿಸಿದ್ದಾರೆ. ಅವರೂ ಬೇರೆ ಬೇರೆ ನಿರ್ಣಯಗಳಿಗೆ ಬಂದಿದ್ದಾರೆ. ಅವರ ಅಭಿಪ್ರಾಯಗಳನ್ನು ಮುಂದೆ ಸಂಗ್ರಹಿಸಿಕೊಟ್ಟಿದೆ.

ಆಧುನಿಕ ವಿಮರ್ಶಕರ ಹಾಗೂ ಐತಿಹಾಸಿಕರ ವಾದಸರಣಿ ಹೀಗಿದೆ :

(i) ಆರ್ಯರ ಪೂರ್ವಜರು ಆರ್ಯಾವರ್ತದ ಹೊರಗಿನ ಪ್ರದೇಶದಿಂದಲೇ ಬಂದಿರಬೇಕು. ಅವರ ಮೂಲನಿವಾಸ ಮಧ್ಯಏಷ್ಯಾ ಇರಬಹುದು. ಅಲ್ಲಿಂದ ವಲಸೆ ಹೊರಟು ಭಾರತ, ಇರಾನ್, ಯುರೋಪು ಮೊದಲಾದ ಪ್ರದೇಶಗಳಿಗೆ ಅವರು ತಂಡ ತಂಡವಾಗಿ ಬಂದು ನೆಲಸಿದರು. ವೇದದಲ್ಲಿ ಅನೇಕ ಕಡೆ ಅವರ ಪೂರ್ವನಿವಾಸದ ಪ್ರಸ್ತಾಪವಿದೆ.

'ಅನು ಪ್ರತ್ನಸ್ಯೌಕಸೋ ಹುವೇ ತುವಿ ಪ್ರತಿಂ ನರಂ
ಯಂ ತೇ ಪೂರ್ವಂ ಪಿತಾ ಹುವೇ ||' (ಋ. ಸಂ. 1-30.9)

ಈ ಮಂತ್ರದಲ್ಲಿ ಬರುವ 'ಪ್ರತ್ನಸ್ಯೌಕಸಃ' ಎಂಬ ಶಬ್ದ ಇವರ ಪುರಾತನವಾದ ವಾಸಸ್ಥಳವನ್ನು ಸೂಚಿಸುತ್ತದೆ. ಇಂಥ ಉಲ್ಲೇಖಗಳು ಹೇರಳವಾಗಿವೆ.

(ii) ಮಧ್ಯಏಷ್ಯಾದಿಂದ ವಲಸೆ ಬಂದ ಆರ್ಯರೇ ಯುರೋಪು, ಇರಾನ್, ಭಾರತ ಮೊದಲಾದ ದೇಶಗಳಲ್ಲಿ ನೆಲಸಿದರು. ಇವರು ಬೇರೆಬೇರೆ ದೇಶಗಳಲ್ಲಿ ನೆಲಸಿ ಬೆಳಸಿದ ಬೇರೆಬೇರೆ ಭಾಷೆಗಳಲ್ಲಿ ಗಮನಾರ್ಹವಾದ ಸಾದೃಶ್ಯವಿದೆ. ಇದರ ಆಧಾರದಿಂದ ಬೇರೆ ಬೇರೆಯಾಗಿ ತೋರುವ ಈ ಭಾಷೆಗಳು ಒಂದೇ ವಂಶಕ್ಕೆ ಸೇರಿದವೆಂದೂ ಈ ಮೂಲಭಾಷೆ ಒಂದೇ ಎಂದೂ ಊಹಿಸಬಹುದು. ಆ ಮೂಲಭಾಷೆಯೇ ಇಂಡೋ ಯೂರೋಪಿಯನ್ ಭಾಷೆ. ಅದು ಬೇರೆಬೇರೆ ದೇಶಗಳಲ್ಲಿ ಭಿನ್ನಭಿನ್ನ ಪರಿಸ್ಥಿತಿಗಳಲ್ಲಿ ಭಿನ್ನಭಿನ್ನವಾದ ಸಂಪರ್ಕಗಳಿಗೊಳಗಾಗಿ ಕಾಲ ಕಳೆದಂತೆ ಒಂದಕ್ಕೊಂದಕ್ಕೆ ಸಂಬಂಧವೂ ಇಲ್ಲವೆಂಬಂತೆ ಬೇರೆ ಬೇರೆಯಾಗಿ ಬೆಳೆದವು. ಹೀಗಾಗಿ 'ತುಲನಾತ್ಮಕ ಭಾಷಾಶಾಸ್ತ್ರ' ಬೇರೆಬೇರೆ ದೇಶಗಳಲ್ಲಿ ನೆಲಸಿ ಬೇರೆಬೇರೆ ಭಾಷೆಗಳನ್ನಾಡುತ್ತಿರುವ ಈ ಜನ ಒಂದೇ ಬುಡಕಟ್ಟಿನವರೆಂದು ಸಮರ್ಥಿಸುತ್ತದೆ.

(iii) ಪರ್ಷಿಯನ್ನರ 'ಜೆಂಡವೆಸ್ತಾ' ಗ್ರಂಥದಲ್ಲಿ 'ವೇಂದಿದಾದ್' ಪ್ರಕರಣದಲ್ಲಿ ದೇಶವರ್ಣನೆಯ ಪ್ರಸಂಗ ಬರುತ್ತದೆ. ಇಲ್ಲಿ 'ಐರ್ಯನಂಬೇಜೋ' ಎಂಬ ದೇಶದ ವರ್ಣನೆ ಮಾಡುತ್ತಾ ಇದು ಹಿಮರ್ತುಪ್ರಧಾನವಾದುದೆಂದು ಹೇಳಿದೆ. ಇದು ಪಾರಸೀಕರ ಮೂಲದೇಶ. ಈ ಅವೆಸ್ತಾದಲ್ಲಿ ಪ್ರತಿಪಾದಿಸಿರುವ ಅಂಶಗಳಿಗೂ ವೇದದಲ್ಲಿ ಬರುವ ಅಂಶಗಳಿಗೂ ನಿಕಟವಾದ ಸಾಮ್ಯವಿದೆ. ಅಗ್ನಿಪೂಜೆ ಮೊದಲಾದವು ಇದಕ್ಕೆ ನಿದರ್ಶನ. ವೇದದಲ್ಲಿ ಬರುವ ದೇವತೆಗಳ ಹೆಸರುಗಳೇ ಅವೆಸ್ತಾದಲ್ಲಿಯೂ ಬರುತ್ತವೆ. ಆದುದರಿಂದ ಇವರೂ 'ಐರ್ಯನಂಬೇಜೋ' ನಿವಾಸಿಗಳಾಗಿದ್ದಿರಬಹುದು.

(iv) ಆರ್ಯರು ಪದೇಪದೇ ಹಿಮಾಲಯದ ಉತ್ತರಪ್ರದೇಶವನ್ನು ಪರಮಪವಿತ್ರವೆಂದು ಎಣಿಸಿರುವುದೂ ಸಹ ಮಧ್ಯಏಷ್ಯಾದಿಂದಲೇ ಅವರು ವಲಸೆ ಬಂದರೆಂಬುದನ್ನು ಸಮರ್ಥಿಸುತ್ತದೆ. ಕೆಳಗಿನ ಮಂತ್ರದಲ್ಲಿ ಇಂಥ ಉಲ್ಲೇಖವನ್ನು ಕಾಣಬಹುದು :

'ಉದೀಚ್ಯಾಂ ದಿಶಿ ಪ್ರಜ್ಞಾತತರಾ ವಾಗುತ್ಪದ್ಯತೇ ಉದಂಚ ಉ ವಾವ
ಯಂತಿ ವಾಚಂ ಶಿಕ್ಷಿತುಂ ಯೋ ವಾ ತತ ಆಗಚ್ಛತಿ ತಸ್ಯ ವಾ
ಶುಶ್ರೂಷತಿ ಇತಿ ಹ ಸ್ಮಾಹೈಷಾ ಹಿ ವಾಚೋ ದಿಕ್ ಪ್ರಜ್ಞಾತಾ'

(ಕೌಷೀತಕಿ ಬ್ರಾಹ್ಮಣ. 1-7-6)

(v) ಋಗ್ವೇದದಲ್ಲಿನ 'ತೋಕಂ ಪುಷ್ಯೇಮ ತನಯಂ ಶತಂ ಹಿಮಾಃ', 'ಸುಮ್ನಂ ಮದೇಮ ಶತಹಿಮಂ ಸುವೀರಾಃ' ಮೊದಲಾದ ವಾಕ್ಯಗಳು ಆರ್ಯರ ಮೂಲ ವಸತಿ ಹಿಮರ್ತು ಪ್ರಧಾನವಾದ ದೇಶವೆಂದು ಸೂಚಿಸುತ್ತದೆ. ಹಿಮಪ್ರಪಾತ ಅಧಿಕವಾಗಿರುವ ಮಧ್ಯಏಷ್ಯಾ ಭಾಗದಲ್ಲಿ ವರ್ಷಾರಂಭವನ್ನು ಹಿಮರ್ತುವಿನಿಂದ ಆರಂಭಮಾಡುತ್ತಿದ್ದರು. ಆದ್ದರಿಂದ ಆರ್ಯರು ಅಲ್ಲಿನ ಮೂಲ ನಿವಾಸಿಗಳೇ ಇರಬಹುದು.

(vi) ಶತಪಥ ಬ್ರಾಹ್ಮಣದಲ್ಲಿನ 'ಉತ್ತರಂ ಗಿರಿಮತಿದುದ್ರಾವ' ಎಂಬ ನುಡಿ ಹಿಮಾಲಯವನ್ನವರು ದಾಟಿ ಬಂದರೆಂಬುದನ್ನು ಸೂಚಿಸುತ್ತದೆ. ಆದುದರಿಂದಲೂ ಅವರ ಮೂಲನಿವಾಸ ಮಧ್ಯಏಷ್ಯಾ ಇರಬೇಕು.

(vii) ಗ್ರೀಕ್ ಮತ್ತು ರೋಮನ್ ಜನರ ಮೂಲಬುಡಕಟ್ಟಿನವರು ಈಶಾನ್ಯ ಭೂಭಾಗದಿಂದ ಬಂದು ಇಟಲಿ ಮುಂತಾದ ಕಡೆಗಳಲ್ಲಿ ನೆಲಸಿದರೆಂಬ ಅಂಶವೂ ಆರ್ಯರು ಮಧ್ಯಏಷ್ಯಾದಿಂದ ಬಂದರೆಂಬುದನ್ನೇ ಪುಷ್ಟೀಕರಿಸುವುದು.

ಹೀಗೆ ಐತಿಹಾಸಿಕರು ಮತ್ತು ಆಧುನಿಕ ವಿಮರ್ಶಕರು ಈ ಸಮಸ್ಯೆಯನ್ನು ವಿವೇಚಿಸಿದ್ದಾರೆ.

ಬಾಲಗಂಗಾಧರ ತಿಲಕರವರು ಆರ್ಯರ ಮೂಲನಿವಾಸಿಗಳು ಪ್ರಥಮತಃ ಉತ್ತರ ಧ್ರುವನಿವಾಸಿಗಳೆಂದೂ ಅಲ್ಲಿಂದ ಅವರು ಭಾರತ ಮೊದಲಾದ ವಿವಿಧ ದೇಶಗಳಿಗೆ ವಲಸೆ ಬಂದರೆಂದೂ ಸಿದ್ಧಾಂತ ಮಾಡಿ ವೇದಮಂತ್ರಗಳನ್ನೇ ಆಧಾರವಾಗಿ ತೋರಿದ್ದಾರೆ. ಅವರ ವಾದ ಹೀಗಿದೆ :

ಪ್ರಾಚೀನಾರ್ಯರು ಉತ್ತರ ಧ್ರುವ ನಿವಾಸಿಗಳು. ಈ ಧ್ರುವದ ವೈಶಿಷ್ಟ್ಯವೇನೆಂದರೆ—

(i) ಸೂರ್ಯ ದಕ್ಷಿಣದಲ್ಲಿ ಉದಿಸುವನು.

(ii) ನಕ್ಷತ್ರಗಳು ಉದಿಸಿ ಮುಳುಗುವುದಿಲ್ಲ. ಆದರೆ 24 ಘಂಟೆಗಳಿಗೊಮ್ಮೆ ಧ್ರುವದ

ಸುತ್ತಲೂ ಪ್ರದಕ್ಷಿಣೆ ಮಾಡುವುವು.

(iii) ವರ್ಷದಲ್ಲಿ ಆರು ತಿಂಗಳು ಕಾಲದ ಒಂದು ರಾತ್ರಿಯೂ ಇನ್ನಾರು ತಿಂಗಳ ಕಾಲದ ಒಂದು ಹಗಲೂ ಆಗುವುವು.

(iv) ಸಂವತ್ಸರಕ್ಕೆಲ್ಲಾ ಒಂದೇ ಒಂದು ಪ್ರಭಾತವೂ ಒಂದೇ ಒಂದು ಸಂಜೆಯೂ ಆಗುವುವು. ಉದಯಾಸ್ತಗಳ ಅರುಣಕಾಂತಿ ಇಪ್ಪತ್ತುನಾಲ್ಕು ಘಂಟೆಗಳಿಗೊಂದಾವರ್ತಿ ಕ್ಷಿತಿಜದ ಸುತ್ತ ಸುತ್ತುತ್ತಾ ಎರಡು ತಿಂಗಳ ಕಾಲ ಇರುತ್ತದೆ.

(v) ಇಲ್ಲಿ ವರ್ಷ ಮೂರು ಭಾಗವಾಗಿರುತ್ತದೆ. ಅಖಂಡವಾದ ಒಂದು ದೀರ್ಘದಿವಸ, ಒಂದು ದೀರ್ಘರಾತ್ರಿ ಮತ್ತು ಇವುಗಳ ಸಂಧಿಕಾಲವಾದ ಅಹೋರಾತ್ರ. ಈ ಅಂಶಗಳೆಲ್ಲಾ ಇಂದಿನಂತೆ ಸಹಸ್ರಾರು ವರ್ಷಗಳ ಹಿಂದೆಯೂ ಅಚಲವಾದ ಧ್ರುವಪ್ರದೇಶದಲ್ಲಿ ಇದ್ದವು. ಇವುಗಳ ಉಲ್ಲೇಖ ವೇದಗಳಲ್ಲಿ ಕಂಡುಬರುತ್ತದೆ. ಆದುದರಿಂದ ಆರ್ಯರು ಮೂಲತಃ ಧ್ರುವನಿವಾಸಿಗಳು. ಈ ಅಂಶಗಳನ್ನು ಸೂಚಿಸುವ ಕೆಲವು ಮಂತ್ರಗಳನ್ನು ಸೂಚಿಸಬಹುದು:

ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ
ನಕ್ತಂ ದದೃಶ್ರೇ ಕುಹಚಿದ್ದಿವೇಯುಃ |
ಅದಬ್ಧಾನಿ ವರುಣಸ್ಯ ವ್ರತಾನಿ
ವಿಚಾಕಶಚ್ಚಂದ್ರಮಾ ನಕ್ತಮೇತಿ || (ಋ. ಸಂ. 1-24-10)

"ಋಕ್ಷಾಃ ಎಂದರೆ ಸಪ್ತರ್ಷಿಗಣವು ಸೃಷ್ಟಿಕರ್ತನಿಂದ ನಮ್ಮ ತಲೆಯ ಮೇಲೆ ಇಡಲ್ಪಟ್ಟಿದೆ. ಇವು ರಾತ್ರಿಯಲ್ಲಿ ಕಾಣುತ್ತವೆ. ಹಗಲಿನಲ್ಲಿ ಎಲ್ಲಿಯೋ ಮಾಯವಾಗುತ್ತವೆ. ಚಂದ್ರನೂ ರಾತ್ರಿಯಲ್ಲಿಯೇ ಪ್ರಕಾಶಿಸುತ್ತಾನೆ. ಇವೆಲ್ಲಾ ವರುಣನ ಶಾಶ್ವತವಾದ ಕರ್ಮ."

ಈ ಮಂತ್ರದಲ್ಲಿ ಸಪ್ತರ್ಷಿಮಂಡಲ ಸರ್ವದಾ ನಮ್ಮ ತಲೆಯ ಮೇಲೆಯೇ ಕಾಣುವುದೆಂದು ಹೇಳಲಾಗಿದೆ.

ಸ ಸೂರ್ಯಃ ಪರ್ಯುರೂ ವರಾಂಸ್ಯೇಂದ್ರೋ
ವವೃತ್ಯಾದ್ರಥ್ಯೇವಚಕ್ರಾ |' (ಋ. ಸಂ. 10-89-2)

ಸಾರಥಿಯು ರಥಕ್ಕೆ ಸಂಬಂಧಿಸಿದ ಚಕ್ರಗಳನ್ನು ಆವರ್ತಗೊಳಿಸುವಂತೆ ಸುವೀರ್ಯನೂ ಪ್ರಸಿದ್ಧನೂ ಆದ ಇಂದ್ರನು ಅನೇಕ ಗ್ರಹಗಳನ್ನು ಭ್ರಮಣಗೊಳಿಸುತ್ತಾನೆ. ಇಲ್ಲಿ ಬರುವ ನಕ್ಷತ್ರಭ್ರಮಣ ಧ್ರುವಪ್ರದೇಶವನ್ನು ಬಿಟ್ಟು ಮತ್ತಾವ ಪ್ರದೇಶಕ್ಕೂ ಅನ್ವಯಿಸು ವುದಿಲ್ಲ.

ಉಷಃಕಾಲದ ಸುದೀರ್ಘತ್ವವನ್ನು ಮಂತ್ರಗಳು ಹೇಳುತ್ತವೆ. ಕೆಳಗಿನ ಮಂತ್ರಗಳಲ್ಲಿ ಈ ಅಂಶ ಇದೆ :

ತಾನೀದಹಾನಿ ಬಹುಲಾನ್ಯಾಸನ್
ಯಾ ಪ್ರಾಚೀನಮುದಿತಾ ಸೂರ್ಯಸ್ಯ |
ಯತಃ ಪರಿ ಜಾರ ಇವಾಚರಂ
ತ್ಯುಷೋ ದದೃಕ್ಷೇ ನ ಪುನರ್ಯತೀವ || (ಋ. ಸಂ. 7-76-3)

'ಉಷಃಕಾಲ ಆರಂಭವಾದ ಮೇಲೆ ಸೂರ್ಯೋದಯದವರೆಗೆ ಎಷ್ಟು ದಿನಗಳು ಕಳೆದು ಹೋದವು! ಪ್ರಿಯನ ಸುತ್ತಲೂ ಪ್ರಿಯೆ ಚರಿಸುವಂತೆ ಉಷೆಯೂ ಸುತ್ತುತ್ತಿದ್ದಾಳೆ' ಎಂದು ಇಲ್ಲಿ ಹೇಳಿದೆ.

'ತಸ್ಯ ವೇನೀರನುವ್ರತಮುಷಸ್ತಿಸ್ರೋ
ಅವರ್ಧಯನ್ನಭಂತಾಮನ್ಯಕೇ ಸಮೇ |' (ಋ. ಸಂ. 8-41-3)

ಎಂಬ ಮಂತ್ರದಲ್ಲಿ ಮೂವತ್ತು ಉಷೆಯರ ವರ್ಣನೆಯಿದೆ. ಇವು ಒಂದೇ ದೀರ್ಘವಾದ ಉಷಃಕಾಲದ ಮೂವತ್ತು ಭಾಗಗಳೆಂದು ಹೇಳಬಹುದು.[2]

ಪ್ರಾತರನುವಾಕವನ್ನು 'ಪುರಾ ಶಕುನಿವಾದಾದನುಬ್ರೂಯಾತ್' ಎಂದು ವಿಧಿಸಿದೆ. ಈ ಮಂತ್ರವನ್ನು ಸಾವಿರ ಸಲ ಪಠಿಸಬೇಕೆಂಬ ವಿಧಿಯಿದೆ. ಬೇರೆ ಯಾವ ಪ್ರದೇಶದ ಉಷಃ ಕಾಲದಲ್ಲಿಯೂ ಈ ಪ್ರಾತರನುವಾಕವನ್ನು ಸಾವಿರ ಸಲ ಪಠಿಸುವುದು ಸಾಧ್ಯವಿಲ್ಲ. ಉತ್ತರ ಧ್ರುವದ ಪ್ರದೇಶದ ಉಷಃಕಾಲದಲ್ಲಿ ಮಾತ್ರ ಇದು ಸಾಧ್ಯ.

ವೇದದಲ್ಲಿ ಬರುವ ಉಷೋದೇವಿಯ ಮೂವತ್ತು ಅಡಿಗಳ ವಿಚಾರ[3] ಇಪ್ಪತ್ತನಾಲ್ಕು ಗಂಟೆಗಳ ಮೂವತ್ತು ದಿನಗಳಿಗೆ ಸ್ಪಷ್ಟವಾಗಿ ಅನ್ವಯಿಸುತ್ತದೆ.[4]

ವೇದದಲ್ಲಿ ಬರುವ ದೀರ್ಘದಿವಸ ಮತ್ತು ದೀರ್ಘರಾತ್ರಿಯ ವರ್ಣನೆಯೂ ಧ್ರುವ ಪ್ರದೇಶಕ್ಕೇ ಅನ್ವಯಿಸುತ್ತದೆ.

ವೃತ್ರವಧವರ್ಣನೆ ದೀರ್ಘರಾತ್ರಿಯನಂತರ ಉದಿಸುವ ಪ್ರಕಾಶಕ್ಕೆ ಸಂಬಂಧಿಸಿದೆ. ಆವಿಯ ರೂಪದಲ್ಲಿ ಗಗನಗಾಮಿಯಾಗುವ ಜಲ, ಸೂರ್ಯ ಮತ್ತು ಉಷಸ್ಸುಗಳು ಕೆಳಲೋಕದಿಂದ ಮೇಲಕ್ಕೆ ಬರದಂತೆ ತಡೆಯಲ್ಪಟ್ಟಿದ್ದವೆಂದು ನಂಬಲಾಗಿತ್ತು. ವೃತ್ರವಧವಾದ ಮೇಲೆ ಸೂರ್ಯನ ಅಭಿವ್ಯಕ್ತಿಯೂ ವಾತಾವರಣದ ಜಲನಿರ್ಗಮವೂ ಆಯಿತೆಂದು ವರ್ಣಿಸಿದೆ.[5]

ಇವೆಲ್ಲ ಆಧಾರಗಳಿಂದ ಆರ್ಯರು ಉತ್ತರಧ್ರುವದ ಮೂಲನಿವಾಸಿಗಳಾಗಿದ್ದರೆಂದೂ ಹಿಮಪ್ರಪಾತವಾದ ಮೇಲೆ ಆ ಪ್ರದೇಶದಿಂದ ಹೊರಟುಬಂದು ಭಾರತದೇಶದಲ್ಲಿ ನೆಲಸಿದ ರೆಂದೂ ಸಿದ್ಧವಾಗುತ್ತದೆ.

ಆರ್ಯರು ಬೇರೆಲ್ಲಿಂದಲೋ ಭಾರತಕ್ಕೆ ಬಂದರೆಂಬ ವಾದವನ್ನು ಇವರು ಮುಂದಿಟ್ಟಿದ್ದಾರೆ. ಆದರೆ ಶ್ರೀಯುತ ಅವಿನಾಶ ಚಂದ್ರದಾಸ್ ಅವರು ಆರ್ಯರ ಮೂಲವಸತಿಯನ್ನು ಚರ್ಚಿಸುತ್ತ ಆರ್ಯರು ಆರ್ಯಾವರ್ತದ ಮೂಲನಿವಾಸಿಗಳೇ ವಿನಾ ಬೇರೆ ಕಡೆಯಿಂದ ಬಂದವರಲ್ಲವೆಂದು ಅಭಿಪ್ರಾಯಕ್ಕೆ ಬಂದಿದ್ದಾರೆ.[6] ಇವರ ವಾದ ಹೀಗಿದೆ :

(ಅ) ಸಪ್ತಸಿಂಧು ಎಂದು ಕರೆಯಲಾದ ಪಂಜಾಬು ಪ್ರಾಂತವೇ ಆರ್ಯರ ಮೂಲಸ್ಥಾನ. ಋಗ್ವೇದಕಾಲದಲ್ಲಿ ಈಗಿನ ರಾಜಪುಟಾಣ ಪ್ರಾಂತದಿಂದ ಹಿಡಿದು ಅಸ್ಸಾಮಿನವರೆಗೂ ಸಾಗರ ಹರಡಿಕೊಂಡಿದ್ದಿತ್ತು. ಆಗ ದಕ್ಷಿಣಭಾರತ ಮಹಾದ್ವೀಪವಾಗಿದ್ದಿತು. ಆಗ್ಗೆ ಭಾರತ ಪ್ರಾಯಃ ಆಸ್ಟ್ರೇಲಿಯಾವರೆಗೂ ಹರಡಿಕೊಂಡಿದ್ದಿರಬಹುದು. ಋಗ್ವೇದಕಾಲವಾದನಂತರ ಎಂದೋ ಸಂಭವಿಸಿದ ಕೆಲವು ಭೂಕಂಪಗಳ ಪರಿಣಾಮವಾಗಿ ದಕ್ಷಿಣಭಾರತದ ದಕ್ಷಿಣ ಭಾಗಗಳನೇಕ ಸಮುದ್ರದಲ್ಲಿ ಲೀನವಾಗಿಹೋದವು ; ಹಾಗೂ ಇಂದಿನ ಭಾರತದ ರೂಪ ಬಂದಿತು. ಅಂಥ ಭೂಕಂಪದ ಪರಿಣಾಮವಾಗಿಯೇ ರಾಜಪುಟಾಣವು ಸಮುದ್ರಗರ್ಭದಿಂದ ಮೇಲಕ್ಕೆದ್ದಿರಬೇಕು. ಇದರಿಂದ ಆರ್ಯರಿಗೆ ದಕ್ಷಿಣಕ್ಕೆ ಹೋಗಲು ಮಾರ್ಗವೊಂದು ತೆರೆಯಿತು.

---

2. *Arctic Home in the Vedas*, p. 115
3. ಋ. ಸಂ. 6-59-6
4. *Arctic Home in the Vedas*, p. 122
5. ಋ. ಸಂ. 2-19-3, 1-32-11 : ನಿರುಕ್ತ 2-16-3 : *Arctic Home in the Vedas*. pp. 294-295
6. *Rigvedic India, Avinasha Chandra Das*

ಪುರಾಣದಲ್ಲಿ ಬರುವ ಅಗಸ್ತ್ಯರ ಸಮುದ್ರಪಾನದ ಕಥೆ ಪ್ರಾಯಃ ರಾಜಪುಟಾಣಾ ಸಾಗರದ ಶೋಷಣೆಗೆ ಅನ್ವಯಿಸಬಹುದು.

(ಆ) ಭೂಗರ್ಭಶಾಸ್ತ್ರಜ್ಞರ ಅಭಿಪ್ರಾಯದಂತೆ ಸಪ್ತಸಿಂಧು ಪ್ರದೇಶದಲ್ಲಿ ಪ್ರಾಚೀನ ಕಾಲದಿಂದ ಮಾನವಸೃಷ್ಟಿಯವರೆಗೂ ಮತ್ತೆ ಮುಂದಕ್ಕೂ ಅನ್ವಯಿಸಿದ ವಿಚಾರಗಳು ಉಪಲಬ್ಧವಾಗಿವೆ. ಇಲ್ಲಿ ಆರ್ಯರು ಎಂದಿನಿಂದ ಎಂದಿನವರೆಗೆ ಇದ್ದರೆಂದು ನಿರ್ಧರಿಸಲು ಸಾಧ್ಯವಿಲ್ಲದ ಕಾರಣ ಇದೇ ಅವರ ಮೂಲಸ್ಥಾನವಾಗಿದ್ದಿರಬಹುದು. ದುಸ್ತರವಾದ ಸಮುದ್ರವನ್ನೂ ದುರ್ಲಂಘ್ಯವಾದ ಪರ್ವತ ಮಾಲೆಯನ್ನೂ ನೆನೆದರೆ ಆರ್ಯರು ಮಧ್ಯ ಏಷ್ಯಾದಿಂದಲೋ ಉತ್ತರಧ್ರುವದಿಂದಲೋ ಬಂದರೆಂಬುದನ್ನು ನಂಬುವುದಕ್ಕಾಗುವುದಿಲ್ಲ. ಕೋಲರೂ, ದ್ರಾವಿಡರೂ ಹೇಗೆ ದಕ್ಷಿಣ ಭಾರತದ ಮೂಲನಿವಾಸಿಗಳೋ ಹಾಗೆಯೇ ಆರ್ಯರು ಸಪ್ತಸಿಂಧು ಪ್ರದೇಶದ ನಿವಾಸಿಗಳು.

(ಇ) ರಾಜಪುಟಾಣಾ ಸಮುದ್ರ ಪರಿವರ್ತನೆಗೊಂಡು ಸ್ಥೂಲವಾಗಿ ಮಾರ್ಪಾಡಾದಾಗ ಮಹಾಪ್ರಳಯವೊಂದು ಸಪ್ತಸಿಂಧುಪ್ರದೇಶದಲ್ಲಿ ಆಗಿರಬೇಕು. ಮನುವಿನ ಜಲಪ್ರಳಯವೆಂದು ಇದನ್ನೇ ವರ್ಣಿಸಿರಬೇಕು. ಈ ಅಪಾರವಾದ ಜಲರಾಶಿ ಪ್ರಾಯಃ ಉತ್ತರದ ಕಡೆ ಕೊಚ್ಚಿಹರಿದು 'ಐರ್ಯನಂಬೇಜೋ' ಅಥವಾ ಉತ್ತರಧ್ರುವದವರೆಗೂ ವಿನಾಶಕಾರಿಯಾಗಿ ಸಾರಿರಬಹುದು. ಯಮನೂ ಅವನ ಸಹಚರರೂ ತಮ್ಮ ಪ್ರಜೆಗಳನ್ನು ಉತ್ತರ ದಿಕ್ಕಿಗೆ ಓಡಿಸಿದರೆಂದು ಇದನ್ನೇ ವರ್ಣಿಸಿರಬಹುದು. ಋಗ್ವೇದ ಕಾಲವಾದ ಮೇಲೆ ಆರ್ಯರ ಕೆಲವು ತಂಡಗಳು ಉತ್ತರಧ್ರುವದ ಕಡೆ ಹೋಗಿರಬಹುದೇ ವಿನಾ ಋಗ್ವೇದ ಕಾಲದಲ್ಲಿ ಆರ್ಯರು ಎಲ್ಲಿಗೂ ಹೋಗಲೂ ಇಲ್ಲ, ಎಲ್ಲಿಂದಲೂ ಬರಲೂ ಇಲ್ಲ.

(ಈ) ಪ್ರಥಮತಃ ಸಮುದ್ರವಿದ್ದ ಕಾರಣ ಸಪ್ತಸಿಂಧುಪ್ರದೇಶ ಶೀತಲವಾಗಿದ್ದಿರಬೇಕು. ಆದುದರಿಂದ ವರ್ಷದ ಆದಿಯಲ್ಲಿ ಹಿಮರ್ತುವನ್ನು ಹೇಳಿರಬೇಕು. ರಾಜಪುಟಾಣ ಸಾಗರ ಹೋಗಿ ಪ್ರದೇಶವಾಗಿ ಪರಿವರ್ತನೆಯಾದಮೇಲೆ 'ಶರತ್' ಎಂದು ಬದಲಾಯಿಸಿದ್ದಾರೆ. ಆ ಪ್ರಾಂತದಲ್ಲಿ ಔಷ್ಣ್ಯವು ಅಧಿಕವಾದುದು ಇದಕ್ಕೆ ಕಾರಣ ಇರಬೇಕು. ಸರಸ್ವತೀ ದೃಷದ್ವತಿಗಳು ಬತ್ತಿಹೋಗಲೂ ಇದೇ ಕಾರಣವೆನ್ನಬಹುದು.

(ಉ) ಋಗ್ವೇದದಲ್ಲಿ ಬರುವ 'ದಾಸು' ಅಥವಾ 'ದಸ್ಯು'ಗಳು ಆ ಕಾಲದಲ್ಲಿದ್ದ ಹಲ ಕೆಲವು ಕಾಡು ಜನರನ್ನೋ ಅಥವಾ ಯಾಗಾದಿಗಳನ್ನಾಚರಿಸದ ನಾಸ್ತಿಕರನ್ನೋ ಹೇಳುತ್ತದೆಯೇ ವಿನಾ ಇಲ್ಲಿನ ನಿವಾಸಿಗಳಾಗಿದ್ದ ದ್ರಾವಿಡ ಭೀಲಕೋಲರನ್ನು ಹೇಳುವುದಿಲ್ಲ.

(ಊ) ಸಪ್ತಸಿಂಧು ಪ್ರದೇಶದಲ್ಲಿಯೇ ಇದ್ದ ಪಣಿಗಳೆಂಬ ವ್ಯಾಪಾರಿಗಳು ಪಶು ಚೌರ್ಯಾದಿಗಳನ್ನು ಮಾಡುತ್ತಾ ಕ್ರೂರಿಗಳಾಗಿದ್ದರು. ವೇದಧರ್ಮದಲ್ಲಿಯಾಗಲೀ ದೇವತೆಗಳಲ್ಲಿಯಾಗಲೀ ಇವರಿಗೆ ಆಸಕ್ತಿ ಇರಲಿಲ್ಲ. ಆರ್ಯರಿಂದ ಪರಾಜಿತರಾದ ಇವರು ನಾವಿಕರಾಗಿ ಸಾಗರದ ಮೇಲೆಯೇ ಇರತೊಡಗಿದರು. ರಾಜಪುಟಾಣಾ ಸಾಗರ ಬತ್ತಿದಮೇಲೆ ಇವರು ಗುಜರಾತು, ಮಲಬಾರ್ ಮೊದಲಾದ ಭಾಗಗಳಲ್ಲಿ ನೆಲಸಿರಬೇಕು. ಹೀಗೆ ಇವರಿಗೆ ಮೊದಮೊದಲು ಪಾಂಡ್ಯರು, ಕೋಲರು ಮೊದಲಾದವರ ಸಹವಾಸವೇರ್ಪಟ್ಟಿರಬೇಕು. ಅನಂತರ ಈ ಪಣಿಗಳೂ ಕೋಲರೂ 'ಚಾಲ್ಡಿಯಾ' ಪ್ರಾಂತಕ್ಕೆ ಬಂದಿರಬೇಕು. ಮೆಸಪಟೋಮಿಯಾದಲ್ಲಿ ಸ್ವತಂತ್ರವಾದ ಬ್ಯಾಬಿಲೋನಿಯನ್ ಸಾಮ್ರಾಜ್ಯಕಟ್ಟಿದವರಿವರು. ಇವರದೇ ಆದ ಮತ್ತೊಂದು ಶಾಖೆ ಪಾಂಡ್ಯರೊಡನೆ ಇರಾನ್, ಅರೇಬಿಯಾಗಳ ಕಡೆ ಹೋಗಿ ಈಜಿಪ್ಟಿನಲ್ಲಿ ನೆಲಸಿತು.

ಹೀಗೆ ವಲಸೆ ಹೋದವರೆಂದರೆ ಆರ್ಯರ ಪಣಿಗಳೆ ವಿನಾ ಇತರರಲ್ಲ ವೆಂಬುದೂ, ವಲಸೆ ಹೊರಟ್ಟಿದ್ದು ಭಾರತದಿಂದಲೇ ಎಂಬುದೂ ಸಿದ್ಧವಾಗುತ್ತದೆ.

(ಖ) ಪರ್ಷಿಯನ್ನರ ಮೂಲಪುರುಷರಾದ ಇರಾನಿಯನ್ನರು ಮೂಲತಃ ಶುದ್ಧ ಆರ್ಯರು. ಆರ್ಯಭಾಷೆಯನ್ನೇ ನುಡಿಯುತ್ತಿದ್ದರು. ಪಶುಯಜ್ಞ ಅವರಿಗೆ ಅಭಿಮತ ವಿರಲಿಲ್ಲ. ಈ ಜನ ಆರ್ಯರಿಂದ ಬೇರೆಯಾಗಿ ಕವಲೊಡೆದರು. ಇವರ ಕಲಹಗಳನ್ನೇ ದೇವಾಸುರ ಯುದ್ಧಗಳೆಂದು ವರ್ಣಿಸಿದ್ದಾರೆ. ಕೊನೆಯಲ್ಲಿ ಇವರು ಸಪ್ತಸಿಂಧು ಪ್ರದೇಶವನ್ನು ಬಿಟ್ಟುಬಿಟ್ಟು 'ಐರ್ಯನಂಬೇಜೋ' ಪ್ರಾಂತದಲ್ಲಿ ನಿಂತರು.

ಇವೆಲ್ಲವನ್ನೂ ವಿಮರ್ಶಿಸಿದರೆ ಆರ್ಯರು ಸಪ್ತಸಿಂಧು ಪ್ರದೇಶದಲ್ಲಿ ಮೊದಲಿಂದ ವಾಸವಾಗಿದ್ದರೆಂದೂ, ಇಲ್ಲಿಂದಲೇ ಇತರ ಪ್ರದೇಶಗಳಿಗೆ ವಲಸೆ ಹೋದರೆಂದೂ ಸಿದ್ಧವಾಗುತ್ತದೆ.

ಸತ್ಯವ್ರತ ಸಾಮಶ್ರಮಿಗಳೂ ಧರ್ಮಮಾರ್ತಾಂಡ ಲೇಲೇ ಅವರೂ ಉತ್ತರ ಧ್ರುವವು ಆರ್ಯರ ಮೂಲವಸತಿಯೆಂಬ ವಾದವನ್ನು ತೀವ್ರವಾಗಿ ವಿರೋಧಿಸಿ ಆರ್ಯರ ಮೂಲವಸತಿ ಆರ್ಯಾವರ್ತವೆಂದೇ ಸಮರ್ಥಿಸಿದ್ದಾರೆ. ಅವರ ವಾದಸರಣಿ ಕೆಳಕಂಡಂತೆ ಇದೆ :

(i) ಆರ್ಯರು ಮೊದಲಿಂದಲೂ ಭಾರತದಲ್ಲಿಯೇ ಇದ್ದರು. ವೇದಗಳಲ್ಲಿ ಹೆಸರಿಸಿರುವ ನದಿಗಳೂ ಪರ್ವತಗಳೂ ಪ್ರದೇಶಗಳೂ ಉತ್ತರ ಧ್ರುವದಲ್ಲಿಲ್ಲ. ಅವೆಲ್ಲಾ ಭಾರತದಲ್ಲಿಯೇ ಇವೆ.

(ii) ಉತ್ತರಧ್ರುವ ಆರ್ಯರ ಮೂಲಸ್ಥಾನವೆಂದು ಸಮರ್ಥಿಸಲು ಉದಾಹರಿಸಿರುವ ಮಂತ್ರಗಳಿಗೆ ಬೇರೆಬೇರೆ ಅರ್ಥವೇ ವಿನಾ ತಿಲಕರು ಹೇಳುವ ಅರ್ಥ ಹೊಂದುವುದಿಲ್ಲ. ಸಪ್ತರ್ಷಿಗಣವನ್ನಾಗಲೀ, ನಕ್ಷತ್ರಭ್ರಮಣವನ್ನಾಗಲಿ ಆ ಮಂತ್ರಗಳು ಹೇಳುವುದಿಲ್ಲ.

(iii) ಪ್ರಾತರನುವಾಕವನ್ನು ಸಹಸ್ರಶಃ ಪಠಿಸುವ ವಿಚಾರ ಋಗ್ವೇದದಲ್ಲಿಲ್ಲ. ಇದು ಐತರೇಯ ಬ್ರಾಹ್ಮಣದಲ್ಲಿರುವುದರಿಂದ ಐತರೇಯ ಬ್ರಾಹ್ಮಣಕಾರರು ಉತ್ತರ ಧ್ರುವ ದಲ್ಲಿದ್ದರೆಂದು ಹೇಳಬಹುದೇ ? ಪಕ್ಷಿಕೂಜನಕ್ಕೂ ಮೊದಲು ಪ್ರಾತರನುವಾಕವನ್ನು ಪಠಿಸ ಬೇಕೆಂದು ಹೇಳಿರುವುದು ಮಂತ್ರದ ಮುಖ್ಯವಾದ ಭಾಗಕ್ಕನ್ವಯಿಸುತ್ತಿತ್ತು, ಉಳಿದ ಭಾಗಗಳನ್ನು ಅನಂತರ ಪಠಿಸುತ್ತಿದ್ದರು.

(iv) ಧ್ರುವ ಪ್ರದೇಶದಲ್ಲಿ ಒಂದು ರಾತ್ರಿಯೂ ಒಂದು ಹಗಲೂ ಸೇರಿದರೆ ಒಂದು ವರ್ಷವಾಗುವುದು. ಹೀಗಿರಲು ಶ್ರುತಿಸಿದ್ಧವಾದ ನೂರುವರ್ಷಗಳ ಆಯುಸ್ಸಿನ ಗಣನೆ ಹೇಗೆ ಸಾಧ್ಯವಾಗುತ್ತದೆ ? ಮಾಸದ ಪರಿಮಿತಿ ಹೇಗೆ ? ವರ್ಷದ ಅವಧಿ ಎಷ್ಟಿರಬೇಕು ? ಮಾನವರ ಒಂದು ವರ್ಷ ದೇವತೆಗಳ ಒಂದು ದಿನವೆಂದು ಹೇಳಿರುವಲ್ಲಿಯೂ ಧ್ರುವಪ್ರದೇಶದ ಸೋಂಕಿಲ್ಲ.

ಈ ಕಾರಣಗಳಿಂದ ಧ್ರುವಪ್ರದೇಶ ಆರ್ಯರ ಮೂಲ ವಸತಿಯಲ್ಲವೆಂದು ಸೂಚಿಸಿ ಆರ್ಯರ ಮೂಲಸ್ಥಾನ ಆರ್ಯಾವರ್ತವೆಂದು ಸಮರ್ಥಿಸಲು ಕೆಳಗಿನ ಕಾರಣಗಳನ್ನು ಹೇಳುತ್ತಾರೆ:

(i) ಆರ್ಯರ ಮೂಲವಸತಿ ಹಿಮಾಲಯದ ದಕ್ಷಿಣಕ್ಕಿರುವ ಸುವಾಸ್ತು ಪ್ರದೇಶವೇ. 'ಸುವಾಸ್ತ್ವಾ ಅಧಿ ತುಗ್ವನಿ' (ಋ. ಸಂ. 8-19-37) ಎಂದು ಇದನ್ನು ನಿರ್ದೇಶಿಸಲಾಗಿದೆ. 'ಸುವಾಸ್ತುರ್ನದೀ ತುಗ್ವತೀರ್ಥಂಭವತಿ' ಎಂದು ಯಾಸ್ಕರು ತಿಳಿಸಿದ್ದಾರೆ–(ನಿರುಕ್ತ 4-15-2). ಸುವಾಸ್ತು ಪ್ರದೇಶ ವಾಸಕ್ಕೆ ಅತ್ಯಂತ ಪ್ರಶಸ್ತವಾದ ಪ್ರದೇಶವೆಂದು ತಿಳಿಸಿದ್ದಾರೆ. ಈಗಿನ 'ಸ್ವಾತ್' ನದಿ ಪುರಾತನ ಸುವಾಸ್ತು ಆಗಿರಬೇಕೆಂದು ಕನ್ನಿಂಗ್ ಹ್ಯಾಂ ಅಭಿಪ್ರಾಯ ಪಡುತ್ತಾರೆ.

(ii) ಅತಿ ಪ್ರಭಾವಶಾಲಿಯಾದ ರಸಾನದಿ ಆರ್ಯಾವರ್ತದ ಉತ್ತರ ಸೀಮೆಯಾಗಿಯೂ ಕುಭಾನದಿಯು (ಈಗಿನ ಕಾಬೂಲ್ ನದಿ ?) ಪಶ್ಚಿಮದ ಎಲ್ಲೆಯಾಗಿಯೂ ಇದ್ದಿರಬೇಕು. ಸರಯೂನದಿ ಪೂರ್ವದ ಎಲ್ಲೆಯಾಗಿರಬೇಕು. ಕುಭಾದ ಕೆಳಗೆ ಇರುವ ಕ್ರಮು ಸಿಂಧುಗಳ ಸಂಗಮವೇ ದಕ್ಷಿಣದ ಎಲ್ಲೆ ಇರಬೇಕು.[7]

(iii) ಈ ಆರ್ಯರ ವಾಸಸ್ಥಳ ಕ್ರಮೇಣ ಸಾರಸ್ವತ ಪ್ರದೇಶದ ಕಡೆಗೆ ಹರಡಿತು. ನಿರುಕ್ತದಲ್ಲಿ ಯಾಸ್ಕರು ವಿಪಾಟ್ ಶುತದ್ರುಗಳ ಸಂಗಮ ಸ್ಥಳಕ್ಕೆ ವಿಶ್ವಾಮಿತ್ರರು ಸುದಾಸ ನೊಡನೆ ಬಂದರೆಂದೂ ಇತರರು ಅವರನ್ನು ಅನುಸರಿಸಿದರೆಂದೂ ಹೇಳಿದ್ದಾರೆ.[8] ಋಗ್ವೇದ ದಲ್ಲಿ ಬರುವ ವಿಶ್ವಾಮಿತ್ರ ಮತ್ತು ನದಿಗಳ ಸಂವಾದ ಈ ಹಿನ್ನೆಲೆಯಲ್ಲಿ ಆದುದು.[9] ಈ ಸಾರಸ್ವತ ಪ್ರದೇಶವು ಯಾಗಭೂಮಿಯೆಂದು ಪಾವನತಮವಾದುದೆಂದೂ ಪ್ರಶಂಸಿಸಲ್ಪಟ್ಟಿದೆ. 'ಧಾನ್ಯಬಹುಳವೂ ಪೃಥ್ವಿಯಲ್ಲಿ ಸುಂದರವೂ ಆದ ಈ ಪ್ರದೇಶದಲ್ಲಿ ಅಗ್ನಿಯನ್ನು ವಿಶೇಷ ರೂಪದಿಂದ ಸ್ಥಾಪನೆ ಮಾಡಿಯತ್ತೇನೆ. ಈ ಪಾವನತಮವಾದ ಪ್ರದೇಶವಾದರೋ ದೃಷದ್ವತೀ ಮತ್ತು ಸರಸ್ವತೀ ನದಿಗಳ ಮಧ್ಯಪ್ರದೇಶವೇ. ಇಲ್ಲಿ ನೀನು ಸ್ವಚ್ಛಂದವಾಗಿ ಪ್ರಕಾಶ ಬೀರು' ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ :

ನಿ ತ್ವಾ ದಧೇ ವರ ಆ ಪೃಥಿವ್ಯಾ
ಇಳಾಯಾಸ್ಪದೇ ಸುದಿನತ್ವೇ ಅಹ್ನಾಮ್ ।
ದೃಷದ್ವತ್ಯಾಂ ಮಾನುಷ ಆಪಯಾಯಾಂ
ಸರಸ್ವತ್ಯಾಂ ರೇವದಗ್ನೇ ದಿದೀಹಿ ॥ (ಋ. ಸಂ. 3-23-4)

ಸರಮಾ ಪಣಿಗಳ ಸಂವಾದದಲ್ಲಿ[10] ಬರವು ರಸಾನದಿ ಆರ್ಯಾವರ್ತದ ಉತ್ತರ ದಿಕ್ಕಿನ ಎಲ್ಲೆಯಾಗಿದ್ದಿತೆಂಬುದನ್ನೇ ಸೂಚಿಸುತ್ತದೆ.

ಋಗ್ವೇದದಲ್ಲಿ ಮೂಜವಾನ್ ಪರ್ವತದ ಉಲ್ಲೇಖವಿರುವುದರಿಂದ ಆರ್ಯರು ಅಲ್ಲಿ ಮೊದಲು ವಾಸವಾಗಿದ್ದರೆಂದು ಹೇಳುವುದೂ ಸರಿಯಾಗದು. ಋಕ್‌ಸಂಹಿತೆಯ ಕಾಲಕ್ಕೆ ಈ ಮೂಜವಾನ್ ಪರ್ವತ, ಇರಾನ್‌ದೇಶ ಮೊದಲಾದುವೆಲ್ಲಾ ಆರ್ಯಾವರ್ತದಲ್ಲಿಯೇ ಸೇರಿದ್ದವೆಂದು ಕಂಡುಬರುತ್ತದೆ.

ಆದ್ದರಿಂದ ಆರ್ಯಾವರ್ತ ಇಂದಿನ ಪರ್ಷಿಯಾದ ಉತ್ತರದಲ್ಲಿರುವ ಏಷ್ಯಾಮೈನರಿ ನಿಂದ ಪೂರ್ವಕ್ಕೂ ಗಂಗಾಪ್ರದೇಶದ ಪಶ್ಚಿಮಕ್ಕೂ ಮೂಜವತ್ ಪರ್ವತದ ದಕ್ಷಿಣಕ್ಕೂ ಸಿಂಧೂನದಿ ಸಾಗರದೊಡನೆ ಸಂಗಮವಾಗುವ ಪ್ರದೇಶದಿಂದ ಉತ್ತರಕ್ಕೂ ಹರಡಿತ್ತೆಂದು ಸಿದ್ಧವಾಗುತ್ತದೆ. ಇದೇ ಆರ್ಯರ ಮೂಲವಸತಿಯಾಗಿತ್ತೆಂದು ಇವರ ಮತ.

ಈ ರೀತಿಯಲ್ಲಿ ಆರ್ಯರ ಮೂಲವಸತಿಯ ವಿಚಾರದಲ್ಲಿ ವಿದ್ವಾಂಸರು ಬಗೆಬಗೆಯ

---

7. ಮಾ ವೋ ರಸಾ ನಿತಭಾ ಕುಭಾ
ಕ್ರುಮುರ್ಮಾ ವಃ ಸಿಂಧುರ್ನಿರೀರಮತ್ ।
ಮಾ ವಃ ಪರಿಷ್ಠಾತ್ಸರಯುಃ
ಪುರೀಷಿಣ್ಯಸ್ಮೇ ಇತ್ಸುಮ್ನಮಸ್ತು ವಃ ॥ –(ಋ. ಸಂ. 5-53-9 ಮತ್ತು 1-104-4)
8. ನಿರುಕ್ತ 11-24-6
9. ಋ. ಸಂ. 3-33
10. ಋ. ಸಂ. 10-108-1

ಅಭಿಪ್ರಾಯಗಳನ್ನು ಪ್ರತಿಪಾದಿಸಿದ್ದಾರೆ. ತುಲನಾತ್ಮಕ ದೃಷ್ಟಿಯಿಂದ ಇವುಗಳನ್ನು ವಿಮರ್ಶಿಸಿದರೆ ಈ ವಿವಾದ ಇನ್ನೂ ನಿರ್ಣೀತವಾಗಿಲ್ಲವೆಂದು ಹೇಳಬಹುದು. ಆರ್ಯರು ಮಧ್ಯ ಏಷ್ಯಾದಿಂದಲೋ ಉತ್ತರ ಧ್ರುವದಿಂದಲೋ ಬಂದರೆಂಬ ವಾದಕ್ಕೆ ಆಧಾರ ದೊರೆಯುವಂತೆ ಅವರು ಆರ್ಯಾವರ್ತದಲ್ಲಿದ್ದರೆಂಬುವುದಕ್ಕೂ ಆಧಾರಗಳಿಲ್ಲದೆ ಇಲ್ಲ. ವೇದಶಬ್ದಗಳ ಅರ್ಥವ್ಯಕ್ತಿ ಸಂದಿಗ್ಧವಾಗಿರುವುದೂ ಅವಕ್ಕೂ ನಮಗೂ ಸಹಸ್ರಾರು ವರ್ಷಗಳ ಅಂತರವಿರುವುದೂ ಈ ವಿಧವಾದ ಭಿನ್ನಾಭಿಪ್ರಾಯಗಳಿಗೆ ಕಾರಣ. ಯಾಸ್ಕಾಚಾರ್ಯರ ಕಾಲಕ್ಕೇ ವೇದಮಂತ್ರಗಳು ಸುಲಭವಾಗಿ ಅರ್ಥವಾಗುತ್ತಿರಲಿಲ್ಲವೆಂದು ಹೇಳಿರುವಾಗ ಈಗ ಆ ಮಂತ್ರಗಳ ಆಧಾರದಿಂದಲೇ ಸಿದ್ಧಾಂತಗಳನ್ನು ಸ್ಥಾಪಿಸಲು ಯತ್ನಿಸುವುದು ಯಶಸ್ವಿಯಾಗದು. ಅಲ್ಲದೆ ವೇದಸೂಕ್ತಗಳು ಒಂದೇ ಕಾಲಕ್ಕೆ ಸೇರಿದವೂ ಅಲ್ಲ. ಭಿನ್ನಭಿನ್ನಕಾಲದಲ್ಲಿ ಬಿನ್ನಭಿನ್ನ ಋಷಿಗಳಿಂದ ಬೇರೆಬೇರೆ ದೇಶ ಮತ್ತು ಪರಿಸ್ಥಿತಿಗಳಲ್ಲಿ ದೃಷ್ಟವಾದ ಮಂತ್ರಗಳಿವು. ಹೀಗಾಗಿ ವೇದದಲ್ಲಿ ಉತ್ತರ ಧ್ರುವದ ಅಂಶವೂ ಇರಬಹುದು. ಆರ್ಯಾವರ್ತ ಮೂಜವದಾದಿ ವಿಚಾರಗಳೂ ಇರಬಹುದು. ಅಷ್ಟರಿಂದಲೇ ಆರ್ಯರ ಮೂಲವಸತಿ ಯಾವುದೆಂಬುದನ್ನು ಅವು ಸಾಧಿಸಲಾರವು. ಬೇರೆಬೇರೆ ಭೌಗೋಳಿಕ ಪರಿಸ್ಥಿತಿಗಳಲ್ಲಿ ಬೇರೆಬೇರೆ ಪ್ರದೇಶಗಳಿಗೆ ಅವರು ಹೋಗಿರಬಹುದು.

ಋಗ್ವೇದದಲ್ಲಿ ಬರುವ ಪರ್ವತಗಳು, ನದಿಗಳು, ಮತ್ತು ಪ್ರದೇಶಗಳು ಮೊದಲಾದ ವೆಲ್ಲಾ ಆರ್ಯಾವರ್ತಕ್ಕೆ ಸಂಬಂಧಿಸಿವೆ. ಇಂದಿನ ಪರ್ಷಿಯ, ಇರಾನ್, ಕಾಬೂಲ್ ಪ್ರಾಂತಗಳೆಲ್ಲಾ ಆರ್ಯಾವರ್ತದೊಳಗೆ ಅಡಕವಾಗಿದ್ದವೆಂದೂ ಗೊತ್ತಾಗುತ್ತದೆ. ಆರ್ಯರು ಇಲ್ಲಿಯೇ ಮೊದಲು ವಾಸವಾಗಿದ್ದು ಇಲ್ಲಿಂದಲೇ ಇತರ ಭಾಗಗಳಿಗೆ ವಲಸೆ ಹೋಗಿರ ಬೇಕೆಂದು ಸಾರುವ ವಾದ ಅಸಂಭವವಾದುದಲ್ಲ. ತುಲನಾತ್ಮಕ ಭಾಷಾಶಾಸ್ತ್ರದಂತೆ ಸಂಸ್ಕೃತ, ಇಂಗ್ಲಿಷ್, ಲ್ಯಾಟಿನ್, ಪರ್ಷಿಯನ್ ಮೊದಲಾದ ಭಾಷೆಗಳು ಇಂಡೋ ಜರ್ಮಾನಿಕ್ ವಂಶಕ್ಕೆ ಸೇರಿದವೆಂದು ಸಮರ್ಥಿಸಲಾಗಿದೆ. ಇವರೆಲ್ಲಾ ಒಂದೇ ಬುಡಕಟ್ಟಿನವರೆಂದು ಇದರಿಂದ ಸಿದ್ಧವಾಗುತ್ತದೆ. ಈ ಮೂಲ ಬುಡಕಟ್ಟಿನ ಜನ ಆರ್ಯಾವರ್ತದಿಂದಲೇ ಇತರ ಭಾಗಗಳಿಗೆ ವಲಸೆ ಹೋಗಿದ್ದಿರಬಹುದು ; ಮಧ್ಯ ಏಷ್ಯಾದಿಂದಲೇ ಬಂದಿರಬೇಕಾಗಿಲ್ಲ.

ಹರಪ್ಪ ಮತ್ತು ಮೊಹೆಂಜದಾರೋ ಪ್ರದೇಶದಲ್ಲಿ ಉಪಲಬ್ಧವಾಗಿರುವ ನಾಗರಿಕತೆಗೂ ಆರ್ಯರ ಈ ನಾಗರಿಕತೆಗೂ ಸಂಬಂಧವಿದೆಯೇ ? ಅದು ಎಂಥದು ? ಎಂಬ ಬಗೆಯೂ ವಿಚಾರ ವಿವಿಧವಾಗಿ ನಡೆದಿದೆ. ಸಿಂಧೂ ಬಯಲಿನ ಆ ನಾಗರಿಕತೆ ಹೆಚ್ಚೆಂದರೆ ಕ್ರಿ. ಪೂ. 4000 ವರ್ಷಗಳಿಗೆ ಸಂಬಂಧಿಸಿರುದೆನ್ನಲಾಗಿದೆ. ಋಗ್ವೇದ ಕಾಲ ಕ್ರಿ. ಪೂ. 5000ಕ್ಕೂ ಹಿಂದಿನದೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಈ ಪರಿಸ್ಥಿತಿಯಲ್ಲಿ ಸಿಂಧೂನದಿ ನಾಗರಿಕತೆಯು ವೇದೋತ್ತರ ಕಾಲೀನವೆ ? ಅಥವಾ ವೇದಗಳ ನಾಗರಿಕತೆಗೆ ಸಮಕಾಲೀನ ವಾಗಿದ್ದುದೇ? ಈ ಅಂಶವೂ ಚರ್ಚೆಗೊಳಗಾಗಿದೆ. ಈ ಪ್ರಶ್ನೆ ಇನ್ನೂ ಜಟಿಲವಾಗಿಯೇ ಉಳಿದಿದೆ. ಆರ್ಯರು ಮಧ್ಯ ಏಷ್ಯಾದಿಂದ ಬಂದವರೆಂಬುದು ಒಂದು ಊಹೆ ಮಾತ್ರ. ಹಾಗೆಯೇ ಆರ್ಯಾವರ್ತದಲ್ಲಿಯೇ ಇದ್ದು ಇತರ ಭಾಗಗಳಿಗೆ ಹೋದರೆಂಬುದೂ ಮತ್ತೊಂದು ಊಹೆ. ಇವುಗಳಲ್ಲಿ ಯಾವುದೊಂದನ್ನೂ ಸ್ಥಾಪಿಸುವ ಪ್ರಬಲ ಪ್ರಮಾಣಗಳು ಉಪಲಬ್ಧವಾಗುವವರೆಗೆ ಈ ಪ್ರಶ್ನೆ ಇನ್ನೂ ನಿರ್ಣೀತವಾಗಿಲ್ಲವೆಂದೇ ಹೇಳಬೇಕಾಗಿದೆ.

**ಭಾರತವೂ ಲಿಪಿಯೂ**

ಪಾಣಿನಿಗಳ ಕಾಲಕ್ಕೂ ಮೊದಲು ಭಾರತೀಯರಿಗೆ ಲಿಪಿಯ ಪರಿಚಯವಿರಲಿಲ್ಲವೆಂದು ಕೆಲವರು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[11] ನಾಗರಿ ಲಿಪಿ ಅತ್ಯಂತ ಪ್ರಾಚೀನವಾದ ಬ್ರಾಹ್ಮೀಲಿಪಿಯಿಂದ ಬಂದಿತೆಂತಲೂ ಬ್ರಹ್ಮನಿಂದಲೇ ಆದಕಾರಣ ಅದು ಬ್ರಾಹ್ಮೀಲಿಪಿ ಯೆಂಬ ಹೆಸರನ್ನು ಪಡೆಯಿತೆಂದೂ ನಮ್ಮವರು ಹೇಳುತ್ತಾರೆ. ಭ್ಯೂಲರ್ ಮಹಾಶಯನು ಸಂಶೋಧನೆ ನಡೆಸಿ ಈ ನಾಗರೀಲಿಪಿಯು ಫೋನೀಷಿಯಾ ದೇಶದ ಶಾಸನಗಳಲ್ಲಿ ಕಂಡು ಬಂದಿರುವಂತೆ ಸೆಮಿಟಿಕ್ ಲಿಪಿಯಿಂದ ಬಂದುದೆಂದೂ ಸುಮಾರು ಕ್ರಿ. ಪೂ. 800ರಲ್ಲಿ ವರ್ತಕರಿಂದ ಭಾರತಕ್ಕೆ ಇದು ತರಲ್ಪಟ್ಟಿತೆಂದೂ ತೀರ್ಮಾನಿಸಿದ್ದಾನೆ. ಭಾರತೀಯ ಲಿಪಿಯ ಮೂಲವನ್ನು ಕುರಿತು ವಿಧವಿಧವಾಗಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಮೊಹೆಂಜದಾರೋ ಮತ್ತು ಹರಪ್ಪಗಳಲ್ಲಿ ನಡೆದ ಭೂಸಂಶೋಧನೆಗಳು ಆ ಕಾಲ ದಲ್ಲಿಯೇ ಲಿಪಿಯ ಪ್ರಚಾರವಿದ್ದಿತೆಂಬುದನ್ನು ತೋರುತ್ತವೆ. ಅಲ್ಲಿ ಅನೇಕಾನೇಕ ಮುದ್ರಿಕೆಗಳು ಉಪಲಬ್ಧವಾಗಿವೆ. ಕ್ರಿ. ಪೂ. 4000 ವರ್ಷಗಳಿಗಿಂತಲೂ ಹಿಂದೆಯೇ ಭಾರತ ಉನ್ನತ ಮಟ್ಟದ ನಾಗರಿಕತೆಯನ್ನು ಮುಟ್ಟಿತ್ತೆಂದು ಒಪ್ಪಬೇಕಾಗಿರುವಾಗ ಲಿಪಿಯ ಪರಿಚಯ ಈಚೀಚೆಗೆ ಆಯಿತೆಂದು ಹೇಳುವುದಕ್ಕಾಗುವುದಿಲ್ಲ. ಆರ್ಯರು ವಲಸೆ ಬಂದವರೆಂದು ಹೇಳುವುದಾದರೆ ಅವರಿಗೂ ಅಲ್ಲಿನ ಪೂರ್ವನಿವಾಸಿಗಳಿಗೂ ನಿಕಟವಾದ ಸಂಪರ್ಕವು ಅನಿವಾರ್ಯವಾಗಿತ್ತೆಂದೂ ಲಿಪಿಯ ಜ್ಞಾನ ಒಬ್ಬರಿಂದ ಇನ್ನೊಬ್ಬರಿಗೆ ಖಂಡಿತವಾಗಿಯೂ ಆಗಿರಲೇಬೇಕೆಂದೂ ಹೇಳಬೇಕಾಗುತ್ತದೆ.

ಅಖಂಡವಾದ ವೇದಸಾಹಿತ್ಯದಲ್ಲಿ ಎಲ್ಲಿಯೂ ಲೇಖನದ ಅಥವಾ ಲೋಖನೋ ಪಕರಣಗಳ ಉಲ್ಲೇಖವೇ ಇಲ್ಲದಿರುವುದು ಲಿಪಿಯ ಅಭಾವವನ್ನು ಸಾಧಿಸುವುದೆಂದು ಕೆಲವರು ವಾದಿಸುತ್ತಾರೆ. ಈ ವಾದವನ್ನು ನಾವು ಎಚ್ಚರಿಕೆಯಿಂದ ಗಮನಿಸಬೇಕು. ಶ್ರುತಿಗಳಲ್ಲಿ ಇವುಗಳ ಉಲ್ಲೇಖವಿಲ್ಲದ ಮಾತ್ರಕ್ಕೇ ಲಿಪಿ ಇರಲಿಲ್ಲವೆಂದು ತೀರ್ಮಾನಿಸುವುದು ಸಾಧ್ಯವಿಲ್ಲವೆಂದೂ ಈಗಿನಂತೆ ಬಹಳ ಪ್ರಾಚೀನ ಕಾಲದಿಂದಲೂ ಬರವಣಿಗೆ ಪ್ರಚಾರದಲ್ಲಿದ್ದಿತೆಂದೂ ಮತ್ತೆ ಕೆಲವರು ಅಭಿಪ್ರಾಯ ಪಡುತ್ತಾರೆ.[12] ವೇದಗಳ ಕಾಲದಲ್ಲಿಯೇ ಭಾರತೀಯರಿಗೆ ಲಿಪಿಯ ಮತ್ತು ಗ್ರಂಥಗಳ ಪರಿಚಯವಿತ್ತೆಂದು ಇವರು ಹೇಳುತ್ತಾರೆ. ಪುರಾಣ, ಇತಿಹಾಸ, ಆಗಮ, ಬೌದ್ಧ, ಗ್ರಂಥಗಳು ಮೊದಲಾದುವಲ್ಲಿ ಅವುಗಳನ್ನು ಬರೆದವರಿಗೆ ಅತಿಶಯವಾದ ಪುಣ್ಯವುಂಟೆಂದು ಹೇಳಿರುವಂತೆ[13] ವೇದ ಸಾಹಿತ್ಯದ ವಿಚಾರದಲ್ಲಿ ಹೇಳದಿರುವುದು ಗಮನಾರ್ಹವಾಗಿದೆ.

ನಮ್ಮ ದೇಶದ ಪರಿಸ್ಥಿತಿಯಲ್ಲಿ ಕೆಲವು ವೈಶಿಷ್ಟ್ಯಗಳಿವೆ. ಬರವಣಿಗೆ ಚೆನ್ನಾಗಿ ಪ್ರಚಾರದಲ್ಲಿರುವ ಈ ಕಾಲದಲ್ಲಿಯೂ, ಲಕ್ಷೋಪಲಕ್ಷ ಪ್ರತಿಗಳನ್ನು ಮುದ್ರಿಸಿ ಸುಲಭ ಬೆಲೆಗೆ ದೊರಕಿಸಿಕೊಡಬಲ್ಲ ಈ ವಿಜ್ಞಾನಯುಗದಲ್ಲಿಯೂ ಸಹ ವೇದಸಮಾಮ್ನಾಯವನ್ನು ಸಹಸ್ರಾರು ಮಂದಿ ಶ್ರದ್ಧಾಳುಗಳು ಗುರುಮುಖೇನ ವಾಗ್ವ್ಯವಹಾರದಿಂದಲೇ

11. *History of Sanskrit Literature.–Maxmuller,* p. 262
12. ಬಾರ್ತ್ R. H. R. 41, 1900, 184 FF;– ಶ್ಯಾಮಜಿ ಕೃಷ್ಣವರ್ಮ
o. c VI leyden 1883. pp. 305 FF
13. 'ಲೇಖಯಿಂತೀಹ ಚ ನರಾಸ್ತೇಷಾಂವಾಸಃ ತ್ರಿವಿಷ್ಟಪೇ |'– ರಾಮಾಯಣ

ಅಧಿಕರಿಸುತ್ತಿರುವರು. ಗುರುಮುಖೇನ ಕಲಿತುದನ್ನು ಮರೆಯದೆ ಇರಲು ಪುಸ್ತಕಗಳ ಸಹಾಯವನ್ನು ತೆಗೆದುಕೊಳ್ಳುತ್ತಿದ್ದಾರೆ, ಅಷ್ಟೆ. ಇಂದು ವೇದಗ್ರಂಥಗಳೆಲ್ಲವೂ ಲುಪ್ತವಾಗಿ ಹೋದರೂ ಕೂಡ ಆಯಾ ವೇದಭಾಗಗಳನ್ನು ಸ್ವರತಃ ವರ್ಣತಃ ಅಖಂಡವಾಗಿ ನಮ್ಮ ಘನಪಾಠಿಗಳಿಂದ ನಾವು ಪಡೆಯಬಹುದು. ಅಷ್ಟು ವಾಚೋವಿಧೇಯವಾಗಿ ಇವರು ವೇದಗಳನ್ನು ಅಧಿಕರಿಸುತ್ತಾರೆ. ಹೀಗಿರಲು ಇವರಿಗೆ ಆಯಾ ಪುಸ್ತಕಗಳ ಆವಶ್ಯಕತೆ ತಾನೇ ಏನಿದ್ದೀತು! ಭಾರತದ ಕವಿಗಳ, ಅಷ್ಟೇಕೆ ವಿಶ್ವದ ಎಲ್ಲ ಕವಿಗಳ ಹಂಬಲವಾದರೂ ಜನತೆಯ ಜಿಹ್ವಾಗ್ರದಲ್ಲಿ ತಮ್ಮ ಕೃತಿಗಳು ನರ್ತಿಸಬೇಕೆಂಬುದಲ್ಲದೆ ಪುಸ್ತಕಗಳಿಂದ ಪಠಿಸಬೇಕೆಂಬುದಲ್ಲ.

ಪ್ರಾಚೀನ ಭಾರತದ ಶಿಕ್ಷಣ ಕ್ರಮವು ವಿಶಿಷ್ಟವಾದ ರೀತಿಯಲ್ಲಿ ಸಾಗುತ್ತಿತ್ತು. ಈ ಪವಿತ್ರವಾದ ಜ್ಞಾನಧಾರೆ ಒಬ್ಬರ ಹೃದಯದಿಂದ ಮತ್ತೊಬ್ಬರ ಹೃದಯಕ್ಕೆ ಧಾರೆಯೆರೆಯಲ್ಪಡುತ್ತಿದ್ದಿತು. ಆದುದರಿಂದಲೇ ಶಿಕ್ಷಣಸೂಚಿಗಳಾದ ಪದಗಳಾದರೂ ಗ್ರಹಣಾಧ್ಯಯನ, ಪ್ರಬ್ರೂಯಾತ್, ಅಧ್ಯಾಯ, ಸೂಕ್ತ, ಅನುವಾಕ, ಮಂಡಲ, ವರ್ಗ, ಅಷ್ಟಕ, ಪ್ರಶ್ನ, ಪ್ರಪಾಠಕ, ಆಹ್ನಿಕ, ಪರ್ವನ್—ಮೊದಲಾಗಿವೆ. ಇದರಿಂದ ಅಖಂಡವಾದ ವೇದಾಧ್ಯಯನಕ್ಕೆ ಲೇಖನದ ಸಹಾಯ ತೀರಾ ಅನಾವಶ್ಯಕವಾಗಿತ್ತೆಂದು ತಿಳಿಯಬಹುದು. ಅದರಿಂದಲೇ ಲೇಖನಕ್ಕೆ ಸಂಬಂಧಿಸಿದ ಪದಪ್ರಯೋಗಗಳನ್ನವರು ಮಾಡಿಲ್ಲವೆಂದು ಊಹಿಸಬಹುದು.

ಶ್ರುತಿಗಳನ್ನು ಬರವಣಿಗೆಗೊಳಪಡಿಸಕೂಡದೆಂಬುದೇ ಅವರ ಕಟ್ಟಾಜ್ಞೆಯಾಗಿತ್ತು. 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' ಎಂದಂತೆ ಜ್ಞಾನದಾಹವಿರುವವರು ತಮಗೆ ಅನುರೂಪವಾದ ಗುರುಶ್ರೇಷ್ಠರನ್ನು ಹುಡುಕಿಕೊಂಡು ಹೋಗುತ್ತಿದ್ದರು. ಪುಸ್ತಕನಿರೀಕ್ಷಣದಿಂದಲೇ ಯಾವುದೂ ಸಿದ್ಧಿಸಲಾರದೆಂಬುದನ್ನವರು ತಿಳಿದಿದ್ದರು. ಗುರುವಿನ ಆದೇಶಕ್ಕನುಸಾರವಾಗಿ ಸ್ವರವರ್ಣವಿಕಲವಾಗದಂತೆ ವೇದ ಸಮಾಮ್ನಾಯವನ್ನವರು ಅಧಿಕರಿಸುತ್ತಿದ್ದರು. ಆದುದರಿಂದಲೇ ಲೌಕಿಕಗ್ರಂಥರಾಶಿಯಲ್ಲಿ ಪಾಠಭೇದಗಳು ತಲೆದೋರಿರುವಂತೆ ವೇದ ವಾಙ್ಮಯದಲ್ಲಿ ಪಾಠಭೇದಗಳಿಲ್ಲ.

> ವೇದವಿಕ್ರಯಿಣಶ್ಚೈವ ವೇದಾನಾಂ ಚೈವ ಲೇಖಕಾಃ ।
> ವೇದಾನಾಂ ದೂಷಕಾಶ್ಚೈವ ತೇ ವೈ ನಿರಯಗಾಮಿನಃ ॥

ಎಂದು ಮಹಾಭಾರತದಲ್ಲಿ ಇದನ್ನೇ ಹೇಳಿದೆ. ಪುಸ್ತಕದಿಂದ ಪಡೆದ ಜ್ಞಾನ ಸಮ್ಮತವಲ್ಲವೆಂದು ಕುಮಾರಿಲಭಟ್ಟರು—

> ಯದ್ವೈವಾನ್ಯಾಯವಿಜ್ಞಾತಾತ್ ವೇದಾಲ್ಲೇಖ್ಯಾದಿಪೂರ್ವಕಾತ್ ।
> ಶೂದ್ರೇಣಾಧಿಗತಾದ್ವಾಪಿ ಧರ್ಮಜ್ಞಾನಂ ನ ಸಮ್ಮತಮ್ ॥ ಎಂದು ಸಾರಿದ್ದಾರೆ.

ಶ್ರುತಿಗಳನ್ನು ಬರವಣಿಗೆಗೆ ಒಳಪಡಿಸಲಿಲ್ಲವೆಂದಮಾತ್ರಕ್ಕೆ ಲಿಪಿಜ್ಞಾನವೇ ಅವರಿಗೆ ಇರಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಪುಸ್ತಕಗಳಿಂದ ವೇದಾಧ್ಯಯನ ಬಹಿಷ್ಕೃತವಾಗಿದ್ದರೂ ಇತರ ವಿಧವಾದ ಲೋಕವ್ಯವಹಾರಕ್ಕೆ ಬರವಣಿಗೆಯನ್ನು ನಿಷೇಧಿಸಲಿಲ್ಲ. ವೇದಗಳಲ್ಲಿರುವ ಪದಸಂಖ್ಯೆ, ಸೂಕ್ತಸಂಖ್ಯೆ, ಮಂತ್ರಸಂಖ್ಯೆ, ವರ್ಣಸಂಖ್ಯೆ ಮೊದಲಾದುವುಗಳನ್ನು ತಿಳಿಸುವ ಅನುಕ್ರಮಣಿಕೆಗಳ ರಚನೆಗೆ ಬರವಣಿಗೆಯ ಉಪಯೋಗವನ್ನು ಮಾಡಿಕೊಂಡಿರಬೇಕೆಂದು ತೋರುತ್ತದೆ.

ಸೂತ್ರಗಳ ಕಾಲಕ್ಕೆ ಬರವಣಿಗೆ ಹೆಚ್ಚುಹೆಚ್ಚಾಗಿ ಪ್ರಚಾರಕ್ಕೆ ಬಂದಿರಲೇಬೇಕು. ಬರವಣಿಗೆಯ ಸಹಾಯವಿಲ್ಲದೆ ಧಾರಾಳವಾಗಿ ಸೂತ್ರಗಳ ಸೃಷ್ಟಿಯನ್ನು ಮಾಡುವುದಸಾಧ್ಯ.

ಪಾಣಿನಿಯು ಅಷ್ಟಾಧ್ಯಾಯಿಯಂಥ ಗ್ರಂಥವನ್ನು ಕೇವಲ ವಾಗ್ರೂಪದಲ್ಲಿಯೇ ರಚಿಸಿದರೆಂದು ಮ್ಯಾಕ್ಸ್‌ಮುಲ್ಲರ್ ಹೇಳುವುದನ್ನು ನಂಬುವುದಕ್ಕಾಗುವುದಿಲ್ಲ. ವಿಶಿಷ್ಟವಾದ ಆನುಪೂರ್ವೀ ಸಹಿತವಾಗಿ ಸೂತ್ರಗಳನ್ನು ರಚಿಸುವುದರಲ್ಲಿ ಲೇಖನದ ಸಹಾಯ ಆವಶ್ಯಕ. 'ಸಪಾದ ಸಪ್ತಾಧ್ಯಾಯೀಂ ಪ್ರತಿ ತ್ರಿಪಾದ್ಯಸಿದ್ಧಾ' ಎಂಬ ಅರ್ಥ ಬರುವ 'ಪೂರ್ವತ್ರಾಸಿದ್ಧಂ' ಎಂಬ ಸೂತ್ರವನ್ನೂ ಮತ್ತಿತರ ಸೂತ್ರಗಳನ್ನೂ ಕೇವಲ ಮನಸ್ಸಿನಲ್ಲಿಯೇ ಭಾವಿಸಿ ರಚಿಸಿದರೆಂದು ಹೇಳುವುದಕ್ಕಾಗುವುದಿಲ್ಲ. ಪಾಣಿನಿಗಳು ತಮ್ಮ ಕೃತಿಯಲ್ಲಿ 'ಅಧಿಕೃತ್ಯ ಕೃತೇ ಗ್ರಂಥೇ' ಎಂಬ ಪ್ರಕರಣದಲ್ಲಿ 'ಅಪತ್ಯಕ್ರಂದೀಯ' ಮುಂತಾದ ಗ್ರಂಥಗಳನ್ನು ಉದಾಹರಿಸಿದ್ದಾರೆ. ಗ್ರಂಥಶಬ್ದವನ್ನೂ ಕೆಲವು ಸೂತ್ರಗಳಲ್ಲಿ ಬಳಸಲಾಗಿದೆ.[14] ಇವುಗಳಿಗೆಲ್ಲಾ ಬೇರೆಬೇರೆ ಅರ್ಥವನ್ನು ಹೇಳುವುದು ಯುಕ್ತವಾಗದು. 'ಲಿಪಿಕಾರ', 'ಯವನಾನಿ' ಎಂಬ ಶಬ್ದಗಳ ಪ್ರಯೋಗವೂ ಇಲ್ಲಿ ಕಂಡುಬಂದಿದೆ. ಇವು ಲಿಪಿಯ ಹೆಸರೆಂದು ಕಾತ್ಯಾಯನ ಪತಂಜಲಿಗಳೂ ಹೇಳುತ್ತಾರೆ. ಇವೆಲ್ಲ ಪ್ರಮಾಣಗಳಿಂದ ಪಾಣಿನಿಗೆ ಬರವಣಿಗೆ ಗೊತ್ತಿತ್ತೆಂದೂ ತನ್ನ ವ್ಯಾಕರಣವನ್ನವರು ಬರೆದರೆಂದೂ ಊಹಿಸಬಹುದು.

ಮನುಧರ್ಮಶಾಸ್ತ್ರದಲ್ಲಿ ಬರವಣಿಗೆಯ ವಿಚಾರ ಸ್ಪಷ್ಟವಾಗಿದೆ.[15] ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಲೇಖ್ಯಪ್ರಕರಣವೇ ಇದೆ. ಸಾಲವನ್ನು ತೆಗೆದ ಕ್ರಮದಲ್ಲಿಯೇ ತೀರಿಸಬೇಕೆಂದು ಯಾಜ್ಞವಲ್ಕ್ಯರ ಮತ. ತಮ್ಮ ನಿರ್ಧಾರವನ್ನು ಸಮರ್ಥಿಸುವ ಹಲವಾರು ಸ್ಮೃತಿಕಾರರ ಅಭಿಪ್ರಾಯಗಳನ್ನು ವ್ಯಾಖ್ಯಾಕಾರರು ಉದಾಹರಿಸುತ್ತಾರೆ. ಪತ್ರ ಬರೆಯುವ ವಿಧಾನವನ್ನು ಹೇಳುವುದಲ್ಲದೆ, ಋಜುಮಾಡುವ ವಿಚಾರವನ್ನು 'ಸ್ವಹಸ್ತಪರಿಚಿಹ್ನಿತಂ', 'ಸ್ವಹಸ್ತೇನ ನಾಮ ನಿವೇಶಯೇತ್' ಎಂದು ತಿಳಿಸಲಾಗಿದೆ.[16]

ಕ್ರಿ. ಪೂ. 3ನೇ ಶತಮಾನಕ್ಕೆ ಸೇರಿದ ಅಶೋಕನ ಶಾಸನಗಳು ಲಿಪಿ ಮತ್ತು ಭಾಷೆಯ ಸ್ವರೂಪವನ್ನು ವಿಶದಗೊಳಿಸುವ ಸಾಕ್ಷಿಗಳಾಗಿವೆ. ಇವು ಭಾರತೀಯ ಲಿಪಿಯ ಪ್ರಕಾರವನ್ನು ಅಭಿವ್ಯಂಜನಗೊಳಿಸುವ ಪ್ರಾಚೀನತಮವಾದ ಪ್ರಮಾಣಗಳಾಗಿವೆ. ಈ ಶಾಸನಗಳಿಂದಲೇ ಲೇಖನಸಂಪ್ರದಾಯ ಆರಂಭವಾಯಿತೆಂದು ಹೇಳುವುದಂತೂ ಸಾಧ್ಯವೇ ಇಲ್ಲ. ಕೆಲವು ಅಕ್ಷರಗಳನ್ನು ಎಂಟು ಅಥವಾ ಒಂಬತ್ತು ಬಗೆಯಲ್ಲಿ ಬರೆದಿರುವುದೂ ನಮಗೆ ಗೊತ್ತಾಗುತ್ತದೆ. ಜನಸಾಮಾನ್ಯರ ಉಪಯೋಗಕ್ಕಾಗಿ ಆಯಾ ಪ್ರಾಂತಭಾಷೆಗಳಲ್ಲಿ ಈ ಶಾಸನಗಳು ಕೆತ್ತಲ್ಪಟ್ಟವು. ಜನಸಾಮಾನ್ಯರಲ್ಲಿ ಲಿಪಿಯ ಪರಿಚಯ ಚೆನ್ನಾಗಿದ್ದಿತೆಂದು ನಾವು ಇದರಿಂದ ತಿಳಿಯಬಹುದು. ಈ ಕಾಲಕ್ಕೆ ಬಹಳ ಹಿಂದಿನ ಕಾಲದಿಂದಲೂ ಲಿಪಿಯ ಪರಿಚಯ ಜನರಿಗಾಗಿತ್ತೆಂಬುದನ್ನು ಇವು ಸ್ಥಿರಪಡಿಸುತ್ತವೆ.[17]

ಲೌಕಿಕ ವ್ಯವಹಾರಗಳಿಗೆ ಸಂಬಂಧಿಸಿದಂತೆ ರಾಯಭಾರಿಗಳ ಸಂದೇಶಗಳು,

14. ಅಷ್ಟಾಧ್ಯಾಯೀ 1-3-75, 4-3-16, 6-3-79
15. ಬಲಾದ್ದತಂ ಬಲಾದ್ಭುಕ್ತಂ ಬಲಾದ್ಯಚ್ಚಾಪಿ ಲೇಖಿತಮ್ ।
ಸರ್ವಾನ್ ಬಲಕೃತಾನರ್ಥಾನ್ ಅಕೃತಾನ್ 'ಮನುರಬ್ರವೀತ್ ॥
16. 'ಯಃ ಕಶ್ಚಿದರ್ಥೋ ನಿಷ್ಣಾತಃ ಸ್ವರುಚ್ಯಾ ತು ಪರಸ್ಪರಮ್ ।
ಲೇಖ್ಯಂ ತು ಸಾಕ್ಷಿಮತ್ಕಾರ್ಯಂ ತಸ್ಮಿನ್ನನಿಕಪೂರ್ವಕಮ್ ॥
17. ನಮಗೆ ಉಪಲಬ್ಧವಾಗಿರುವ ಶಾಸನಗಳಲ್ಲೆಲ್ಲಾ ಅತ್ಯಂತ ಪ್ರಾಚೀನತಮವಾದುದು ಶ್ರೀ ಜಯಸ್ವಾಲ್ ಅವರು ಕಂಡುಹಿಡಿದಿರುವ ಶಾಸನ. ಇದು ಕ್ರಿ. ಪೂ. ಆರನೇ ಶತಮಾನದ್ದೆಂದೂ ಇದನ್ನು ಸರಿಯಾಗಿ ಓದುವುದಕ್ಕಾಗಿಲ್ಲವೆಂದೂ ಹೇಳಲಾಗಿದೆ.

ರಾಜಘೋಷಣೆಗಳು, ವ್ಯಾಪಾರ, ಗಣಿತ, ಸರ್ಕಾರದ ಲೆಕ್ಕಪತ್ರಗಳು ಮೊದಲಾದವುಗಳಿಗೆ ಬರವಣಿಗೆಯನ್ನು ಉಪಯೋಗಿಸುತ್ತಿದ್ದರೆಂದು ತಿಳಿದುಬಂದಿದೆ. ಮೈಲಿಗಲ್ಲುಗಳನ್ನು ಗುರುತಿಸುವುದು, ಮಾರ್ಗಸೂಚಕವಾದ ಕೈಮರಗಳನ್ನು ಇಡುವುದು ಮೊದಲಾದವು ರೂಢಿಯಲ್ಲಿದ್ದವೆಂಬುದು ಮೆಗಾಸ್ತನೀಸನೇ ಮೊದಲಾದ ವಿದೇಶೀಯರ ಬರವಣಿಗೆಯಿಂದ ತಿಳಿದುಬರುತ್ತದೆ.

ಕ್ರಿ. ಪೂ. 3ನೇ ಶತಮಾನಕ್ಕಿಂತಲೂ ಹಿಂದಿನದೆಂದು ಹೇಳಲಾಗಿರುವ ಲಲಿತವಿಸ್ತರವೆಂಬ ಬೌದ್ಧ ಗ್ರಂಥದಲ್ಲಿ ಲೇಖನದ ವಿಚಾರ ಬಂದಿದೆ. ಬುದ್ಧನ ಶಿಕ್ಷಣ ವಿಚಾರವನ್ನು ವಿಮರ್ಶಿಸುತ್ತಾ ದಾರುಕಾಚಾರ್ಯನಾದ ವಿಶ್ವಾಮಿತ್ರನನ್ನೂ ಉರಗಸಾರ ಚಂದನಮಯವಾದ ಲಿಪಿಫಲಕವನ್ನೂ ಲಿಪಿಶಾಲೆಯನ್ನೂ ಈ ಗ್ರಂಥ ಉದಾಹರಿಸುವುದು. ಬೌದ್ಧ ಗ್ರಂಥಗಳಲ್ಲಿ ಲಿಪಿಯ ಉಲ್ಲೇಖ ಸ್ಪಷ್ಟವಾಗಿಯೇ ಇದೆ. ಗ್ರಂಥ ನಿರ್ಮಾಣವಷ್ಟೇ ಅಲ್ಲದೆ ಗ್ರಂಥ ಸಂಗ್ರಹವೂ ನಡೆಯುತ್ತಿದ್ದಿತೆಂಬ ಅಂಶ 'ಗ್ರಂಥ ಕುಟಿ', 'ಗ್ರಂಥಭಾಂಡಾಗಾರ' ಮುಂತಾದ ಶಬ್ದಗಳಿಂದ ಗೊತ್ತಾಗುತ್ತದೆ. ಬರವಣಿಗೆ ಪ್ರಥಮತಃ ಅಶ್ವತ್ಥಪತ್ರ ಮೊದಲಾದವುಗಳ ಮೇಲೆಯೂ ತದನಂತರ ತಾಳೆಯೋಲೆಯ ಮೇಲೆಯೂ ಇದ್ದವೆಂದು ಗೊತ್ತಾಗುತ್ತದೆ.

ಭ್ಯೂಲರ್ ಮಹಾಶಯ ಈ ವಿಚಾರವನ್ನು ಸಂಶೋಧಿಸಿ ಸುಮಾರು ಕ್ರಿ. ಪೂ. 800ರ ಕಾಲಕ್ಕೆ ಲಿಪಿಯ ಪ್ರಚಾರ ಭಾರತದಲ್ಲಿ ಆಯಿತೆಂಬ ನಿರ್ಣಯಕ್ಕೆ ಬಂದಿದ್ದಾನೆ. "ಹಿಂದೆ ಭಾರತದಲ್ಲಿ ದ್ವಿವಿಧವಾದ ವರ್ಣಮಾಲೆ ಇದ್ದಿತು. ಅವುಗಳಲ್ಲಿ ಒಂದು ಖರೋಷ್ಠಿ ಲಿಪಿ. ಇದು ಕ್ರಿ. ಪೂ. ನಾಲ್ಕನೆಯ ಶತಮಾನದಿಂದ ಕ್ರಿ. ಪೂ. 7ನೆಯ ಶತಮಾನದವರೆಗೆ ಪ್ರಚಾರದಲ್ಲಿದ್ದಿತು. ಕ್ರಿ. ಪೂ. ಐದನೆಯ ಶತಮಾನದಲ್ಲಿ ಸೆಮೆಟಿಕ್ ಶಾಖೆಯ 'ಆರ್‌ಮ್ಯೆಗ್' ವರ್ಣಮಾಲೆಯಿಂದ ಇದು ರೂಪುಗೊಂಡಿತು. ಆದುದರಿಂದಲೇ ಅದರಂತೆಯೇ ಇದನ್ನೂ ಬಲಗಡೆಯಿಂದ ಎಡಗಡೆಗೆ ಬರೆಯಲಾಗುತ್ತಿತ್ತು. ಇನ್ನೊಂದು ಲಿಪಿಯೇ ಬ್ರಾಹ್ಮೀ ಲಿಪಿ. ಇದು ಭಾರತೀಯರ ರಾಷ್ಟ್ರೀಯ ವರ್ಣಮಾಲೆ. ಇಂದು ನಾವು ಕಾಣುವ ಭಾರತೀಯ ಲಿಪಿಗಳೆಲ್ಲ ಇದರಿಂದ ಮೂಡಿ ಬಂದವು. ಈ ಲಿಪಿಯನ್ನು ಎಡಗಡೆಯಿಂದ ಬಲಗಡೆಗೆ ಬರೆಯಲಾಗುತ್ತಿತ್ತು. ಮೊದಮೊದಲು ಇದನ್ನೂ ಬಲಗಡೆಯಿಂದ ಎಡಗಡೆಗೇ ಬರೆಯುತ್ತಿದ್ದರೆಂದು ತೋರುತ್ತದೆ. ಕ್ರಿ. ಪೂ. ನಾಲ್ಕನೆಯ ಶತಮಾನದ ನಾಣ್ಯವೊಂದರಲ್ಲಿ ಈ ಬಗೆಯ ಬರವಣಿಗೆ ಇರುವುದು ಈ ಊಹೆಗೆ ಕಾರಣ. ಈ ಬ್ರಾಹ್ಮೀ ವರ್ಣಮಾಲೆಯೂ ಪುರಾತನವಾದ ಅಸ್ಸೀರಿಯಾ ದೇಶದ 'ಮೋಯಬೈಟ್' ಶಿಲಾಲೇಖದ ಉತ್ತರ ದೇಶೀಯ ಸೆಮೆಟಿಕ್ ಲೇಖನ ಪದ್ಧತಿಯಿಂದ ಪ್ರಾಪ್ತವಾದುದಾಗಿದೆ. ಮೆಸಪೊಟೋಮಿಯಾ ದೇಶದ ವರ್ತಕರ ಮೂಲಕ ಸುಮಾರು ಕ್ರಿ.ಪೂ. 800ರ ಕಾಲದಲ್ಲಿ ಇದು ಭಾರತಕ್ಕೆ ಬಂದಿರಬೇಕು." ಭ್ಯೂಲರ್ ಮಹಾಶಯನ ಅಭಿಪ್ರಾಯ ಹೀಗಿದೆ.

ಮೇಲಿನ ವಿವೇಚನೆಯಿಂದ ಭಾರತದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಲಿಪಿಯ ಪ್ರಚಾರವಿದ್ದಿತೆಂಬುದು ಸಿದ್ಧವಾಗುತ್ತದೆ. ಲಿಪಿ ಅವರಿಗೆ ಎಟುಕದ ವಿಷಯವಾಗಿರಲಿಲ್ಲ. ಆದರೆ ಅದನ್ನು ಯುಕ್ತಿಯುಕ್ತವಾಗಿ ಕೇವಲ ಲೌಕಿಕ ವಿಚಾರಗಳಿಗೇ ವ್ಯವಹರಿಸುತ್ತಿದ್ದರೇ ವಿನಾ ಪರಮ ಪವಿತ್ರದೆಂದು ಭಾವಿಸಿದ್ದ ವೇದಗಳಿಗೆ ಅನ್ವಯಿಸಲಿಲ್ಲ. ಆ ಪವಿತ್ರಜ್ಞಾನ ಭಂಡಾರದ ಪಾರಿಶುದ್ಧ್ಯಕ್ಕೆ, ಮಹತ್ತ್ವಕ್ಕೆ ಮತ್ತು ವೀರ್ಯಕ್ಕೆ ಭಂಗ ಬರದಂತೆ ಇರಲು ಈ ರೀತಿ ಅದರಿಂದ ಬರವಣಿಗೆಯನ್ನು ದೂರ ಮಾಡಿದರು. ಆದರೆ ಲೌಕಿಕ ವಿಚಾರಗಳಿಗೂ ಅದನ್ನು

ದೂರಮಾಡುವಷ್ಟು ಮೂರ್ಖತೆ ಅವರಿಗಿರಲಿಲ್ಲ.

**ಸಂಸ್ಕೃತ ವ್ಯಾವಹಾರಿಕ ಭಾಷೆಯಾಗಿದ್ದಿತೇ ?**

ಇಂದು ಜನತೆಯ ನಿತ್ಯವ್ಯವಹಾರದಿಂದ ಸಂಬಂಧ ಕಡಿದುಹೋದಂತಿರುವ ಸಂಸ್ಕೃತವನ್ನು ನೋಡಿದರೆ ಎಂದಾದರೂ ಇದು ಜನಸಾಮಾನ್ಯಕ್ಕೆ ಗೊತ್ತಾಗುತ್ತಿತ್ತೇ ಎಂಬ ಸಂಶಯ ತಲೆದೋರುವುದು ಸಹಜ. ವಿದ್ವಾಂಸರು ತಮ್ಮತಮ್ಮೊಳಗೆ ವ್ಯವಹರಿಸುತ್ತಿದ್ದ ಸಂಕೇತ ಭಾಷೆಯಿದೆಂದು ಕೆಲವರು ಈಗಲೂ ಅಭಿಪ್ರಾಯಪಡುತ್ತಾರೆ. ಇಂದು ಅತ್ಯಲ್ಪ ಸಂಖ್ಯೆಯವರಲ್ಲಿ ಹೇಗೆ ಈ ಭಾಷೆ ಉಳಿದಿದೆಯೋ ಹಾಗೆಯೇ ಹಿಂದೂ ಇದು ಕೆಲವರ ಸ್ವತ್ತಾಗಿತ್ತೇ ವಿನಾ ವ್ಯಾವಹಾರಿಕ ದೆಸೆಯಲ್ಲಿರಲಿಲ್ಲವೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಈ ಪ್ರಶ್ನೆಯನ್ನು ನಾವು ಕೂಲಂಕಷವಾಗಿ ಪರೀಕ್ಷಿಸಿ ನೋಡಿದರೆ ಸಂಸ್ಕೃತ ಜೀವಂತ ವಾಗಿ ಒಮ್ಮೆ ರಾಷ್ಟ್ರಭಾಷೆಯಾಗಿ ವಿಜೃಂಭಿಸಿತ್ತೆಂಬುದು ಗೊತ್ತಾಗುತ್ತದೆ. ಇದರಷ್ಟು ಹಿರಿಯ ಭಾಷೆ ಮತ್ತೊಂದಿಲ್ಲ. ಪ್ರೌಢವೂ ವೀರ್ಯವತ್ತರವೂ ಶಬ್ದ ಸಂಪದ್ಭರಿತವೂ ಆದುದಿದು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಹರಡಿರುವ ಭಾರತದ ಅಖಂಡ ಜನಸ್ತೋಮದ ಜೀವನಕ್ಕನ್ನಯಿಸಿ ತನ್ನ ಸಂಸ್ಕೃತಿಯ ದಿವ್ಯಪ್ರಭೆಯಿಂದ ಅವರ ನಡೆನುಡಿಗಳನ್ನು ಗಾಢವಾಗಿ ಆದರೂ ಗೂಢವಾಗಿ ಬೆಳಗುತ್ತಿರುವ ಈ ದಿವ್ಯಭಾಷೆ ಒಂದಲ್ಲ ಒಂದು ರೀತಿಯಲ್ಲಿ ಇಂದೂ ಭಾರತದ ಭಾಷೆಯಾಗಿದೆ. ನಮ್ಮ ನಾಡಿನಲ್ಲಿ ಸಂಸ್ಕೃತದ ಸಂಬಂಧವನ್ನು ಹೊಂದದಿರುವ ಪ್ರಾಂತ್ಯವು ಯಾವುದೂ ಇಲ್ಲ. ದಾಕ್ಷಿಣಾತ್ಯರೂ ಔತ್ತರೇಯರೂ ಪೌರಸ್ತ್ಯ ಪಾಶ್ಚಾತ್ಯರೂ ಒಮ್ಮನಸ್ಸಿನಿಂದ ಈ ಭಾಷೆಗೆ ಗೌರವವನ್ನು ಸಲ್ಲಿಸುತ್ತಿದ್ದಾರೆ.

ಸಂಸ್ಕೃತವು ಒಮ್ಮೆ ಭಾರತದ ವ್ಯಾವಹಾರಿಕಭಾಷೆಯಾಗಿದ್ದಿತೆಂಬುದನ್ನು ಸಮರ್ಥಿಸುವ ಪ್ರಮಾಣಗಳು ಹೇರಳವಾಗಿವೆ. ಬೆಳೆಯುವ ಭಾಷೆ 'ಬದಲಾಗುತ್ತದೆ' ಎಂಬ ನಿಯಮವನ್ನು ಸಂಸ್ಕೃತ ತನ್ನಲ್ಲಿರುವ ಬಗೆಬಗೆಯಾದ ಶಬ್ದರೂಪಗಳಿಂದಲೂ ಬದಲಾವಣೆಗಳಿಂದಲೂ ಪುಷ್ಟೀಕರಿಸುತ್ತದೆ. ವೇದಗಳಲ್ಲಿ ಕಂಡುಬರುವ ಸಂಸ್ಕೃತ ಭಾಷೆ ಅನೇಕ ಕಾಲ ಪರಿಣಾಮ ಗಳಿಗೊಳಗಾಗಿ ಕಾವ್ಯಸಂಸ್ಕೃತದ ರೂಪವನ್ನು ಹೊಂದಿತು. ಅಸಂಖ್ಯ ಜನರು ತಮ್ಮ ವ್ಯವಹಾರಗಳಲ್ಲಿ ಈ ಭಾಷೆಯನ್ನು ಬಳಸದೆ ಇದ್ದಿದ್ದರೆ 'ಇಂಥ' ಮಹತ್ತರವಾದ ಬದಲಾವಣೆಗಳಾಗುತ್ತಿರಲಿಲ್ಲ. ಇಂದು ಹಳಗನ್ನಡಕ್ಕೂ ಹೊಸಗನ್ನಡಕ್ಕೂ ಗಮನಾರ್ಹವಾದ ಅಂತರವಿದೆ. ಆದರೂ ಹಳಗನ್ನಡವೇ ನಡುಗನ್ನಡವಾಗಿ ಹೊಸಗನ್ನಡವಾಗಿ ಮೂಡಿರುವುದು ಸರ್ವವಿದಿತವೇ ಆಗಿದೆ. ಹಾಗೆಯೇ ಸಂಸ್ಕೃತವೂ ಸಹ. ಜನಜೀವನವನ್ನೂ ಜನತೆಯ ಮನೋಭಾವ ಆದರ್ಶಗಳನ್ನೂ ಸಾಹಿತ್ಯ ಪ್ರತಿಬಿಂಬಿಸುವುದರಿಂದ ಜನತೆಯ ಮನೋಭಾವ, ಪರಿಸ್ಥಿತಿ ಮತ್ತು ಸನ್ನಿವೇಶಗಳು ಬದಲಾದಂತೆಲ್ಲಾ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ತರವಾದ ಪರಿವರ್ತನೆಗಳು ಆಗುತ್ತಲೇ ಇರುವುವು. ಇಂಥ ಬದಲಾವಣೆಗಳು ಸಂಸ್ಕೃತದಲ್ಲಿ ಆಗಿರುವುದನ್ನು ನಾವು ಕಾಣುತ್ತೇವೆ. ಆದ ಕಾರಣ ಸಂಸ್ಕೃತವು ನಾಡನುಡಿಯಾಗಿ ಅನೇಕರ ನಿತ್ಯವ್ಯವಹಾರದಲ್ಲಿ ಈಗ ಬಳಕೆಯಲ್ಲಿರುವ ವ್ಯವಹಾರಿಕ ಭಾಷೆಗಳಂತೆ ಬಳಕೆ ಯಲ್ಲಿದ್ದಿತೆಂಬುದು ಸಿದ್ಧವಾಗುತ್ತದೆ.

ಯಾಸ್ಕಾಚಾರ್ಯರು ನಿಘಂಟುಗಳಿಗೆ ನಿರುಕ್ತವನ್ನು ಹೇಳುವ ಸಂದರ್ಭದಲ್ಲಿ ಕೊಟ್ಟಿರುವ ಸೂಚನೆಗಳು ಸಂಸ್ಕೃತ ವ್ಯಾವಹಾರಿಕಭಾಷೆಯಾಗಿದ್ದಿತೆಂಬುದನ್ನು ಪ್ರಮಾಣೀಕರಿಸುತ್ತವೆ. ನಿರ್ವಚನ ಕ್ರಮವನ್ನು ಹೇಳುವಾಗ ಅವರು ವೈದಿಕಶಬ್ದಗಳ ನಿರ್ವಚನಕ್ಕೆ ವ್ಯಾವಹಾರಿಕಭಾಷಾ ಪ್ರಯೋಗಗಳನ್ನು ಆಧಾರವಾಗಿಟ್ಟುಕೊಳ್ಳಬೇಕೆಂದೂ ವ್ಯಾವಹಾರಿಕ ಭಾಷೆಯ ನಿರ್ವಚನಕ್ಕೆ

ವೈದಿಕಪ್ರಯೋಗಗಳನ್ನು ಆಧಾರವಾಗಿಟ್ಟು ಕೊಳ್ಳಬೇಕೆಂದೂ ತಿಳಿಸುತ್ತಾರೆ.[18] ವ್ಯವಹಾರದಲ್ಲಿರುವ ಭಾಷಾಶಬ್ದಗಳೂ ವೇದಶಬ್ದಗಳೂ ಸಮಾನವಾಗಿರುವುದರಿಂದ ಭಾಷಾಶಬ್ದಗಳಿಗೆ ಅರ್ಥವತ್ತ್ವವಿರುವಂತೆ ವೇದಶಬ್ದಗಳಿಗೂ ಅರ್ಥವತ್ತ್ವ ಉಂಟೆಂದು 'ಶಬ್ದಸಾಮಾನ್ಯಾತ್' ಎಂಬಲ್ಲಿ[19] ವಿವರಿಸಿದ್ದಾರೆ. ಇವೆಲ್ಲದರಿಂದ ಆರ್ಯಸಂಸ್ಕೃತಿಯ ಪ್ರಕಾಶಸ್ತಂಭಗಳಾದ ವೇದಗಳ ಭಾಷೆಯೇ ವ್ಯವಹಾರಕ್ಕನುಗುಣವಾಗಿ ಕಾಲಕಳೆದಂತೆ ಕಾವ್ಯಗಳಲ್ಲಿನ ಸಂಸ್ಕೃತದ ರೂಪವನ್ನು ಪಡೆಯಿತೆಂದು ಗೋಚರಿಸುತ್ತದೆ. ಆಯಾಯಾ ಪ್ರಾಂತಗಳಲ್ಲಿರುವ ರೂಢಿಗನುಸಾರ ನಿರ್ವಚನ ಹೇಳಬೇಕೆಂಬುದು ಮತ್ತೊಂದು ಸೂಚನೆ. ಒಂದೇ ಶಬ್ದವನ್ನು ಬೇರೆಬೇರೆ ಪ್ರಾಂತಗಳಲ್ಲಿ ಬೇರೆಬೇರೆ ಅರ್ಥದಲ್ಲಿ ಬಳಸುವುದುಂಟು. ಪ್ರಾಂತೀಯ ಭೇದಗಳನ್ನು ಗಮನಿಸಿ ನಿರ್ವಚನ ಹೇಳಬೇಕೆಂದು ಯಾಸ್ಕರು ಸೂಚಿಸಿರುವುದರಿಂದಲೂ[20] ಸಂಸ್ಕೃತ ಭಾಷೆಯು ಭಾರತಾದ್ಯಂತ ವ್ಯವಹಾರದಲ್ಲಿದ್ದಿತೆಂದೇ ನಿರ್ಧರವಾಗುತ್ತದೆ. ಇಂಥ ಮಹತ್ತರವಾದ ಭೇದಗಳು ಅಂಕುರಿಸಬೇಕಾದರೆ ಇದರ ವ್ಯಾಪ್ತಿ ಬಹಳ ಹೆಚ್ಚಾಗಿತ್ತೆಂದು ತಿಳಿಯಬಹುದು.

ಪಾಣಿನಿಗಳು ತಮ್ಮ ವ್ಯಾಕರಣದಲ್ಲಿ ಸಂಸ್ಕೃತವನ್ನು 'ಭಾಷಾಯಾಂ' ಎಂದು ಹೇಳಿದ್ದಾರೆ. 'ಭಾಷ್' ಮಾತನಾಡು ಎಂಬ ಧಾತುವಿನಿಂದ ಬಂದ ಈ ಪದ ಈ ಭಾಷೆಯು ವ್ಯಾವಹಾರಿಕ ದೆಸೆಯಲ್ಲಿತ್ತೆಂಬುದನ್ನು ಸಮರ್ಥಿಸುತ್ತದೆ. ಈ ಭಾಷೆ ಬಹಳವಾಗಿ ಬದಲಾಗುತ್ತಿತ್ತೆಂಬುದನ್ನು ಪತಂಜಲಿಗಳು ತಮ್ಮ ಮಹಾಭಾಷ್ಯದಲ್ಲಿ ಸೂಚಿಸಿದ್ದಾರೆ. ಜನರು 'ಯದ್ವಾನಸ್ತದ್ವಾನಃ' ಎನ್ನಲು 'ಯರ್ವಾಣಸ್ತರ್ವಾಣಃ' ಎನ್ನುತ್ತಿದ್ದರಂತೆ. ಸೂತನೊಬ್ಬನು ರಾಜನೊಡನೆ 'ಪ್ರಾಜಿತ' ಎಂಬ ಪದದ ವ್ಯುತ್ಪತ್ತಿಯ ವಿಚಾರದಲ್ಲಿ ಚರ್ಚಿಸಿದನೆಂಬುದನ್ನು ಪತಂಜಲಿ ಹೇಳಿದ್ದಾರೆ. ಸಂಸ್ಕೃತ ವ್ಯವಹಾರದಲ್ಲಿಲ್ಲದಿದ್ದರೆ ಇಂಥ ವಿಚಾರಗಳಿಗವಕಾಶವಿರುತ್ತಿರಲಿಲ್ಲ.

ಸಂಸ್ಕೃತವು ಜನಸಾಮಾನ್ಯದ ಭಾಷೆಯಾಗಿದ್ದಿತೆಂಬುದನ್ನು ನಮ್ಮ ಇತಿಹಾಸ ಪುರಾಣ ಗಳು ಸಮರ್ಥಿಸುತ್ತವೆ. ಸರ್ವಾಧಿಕಾರಿಕವಲ್ಲದ ಶ್ರುತಿಗಳ ತತ್ತ್ವವನ್ನು ಸರ್ವವರ್ಣದವರಿಗೂ ದೊರಕಿಸಿಕೊಡಲು ಇವು ಉದ್ಭವಿಸಿದವು. ಪಂಚಮ ವೇದವೆಂಬ ಹಿರಿಮೆಯನ್ನು ಪಡೆದ ಇವು ಜನಸಾಮಾನ್ಯರಿಗೆ ಅರ್ಥವಾಗುತ್ತಿದ್ದ ಭಾಷೆಯಲ್ಲಿಯೇ ವಿರಚಿತವಾದವೆಂಬುದು ನಿಶ್ಚಿತವಾಗಿದೆ. ಯಾವ ಭಾಷೆಯಲ್ಲಿ ಇತಿಹಾಸ, ಪುರಾಣಗಳು ರಚಿತವಾಗಿವೆಯೋ ಆ ಭಾಷೆ ಜನಸಾಮಾನ್ಯರ ಭಾಷೆಯಾಗಿದ್ದಿತೆಂದು ಹೇಳಬಹುದು. ಇವುಗಳನ್ನು ಹೇಳುತ್ತಿದ್ದವರು ಸೂತರು ಮತ್ತು ಕುಶೀಲವರು. ಇವೆಲ್ಲ ಸಂಸ್ಕೃತ ಭಾಷೆಯ ವ್ಯಾವಹಾರಿಕತತ್ತ್ವವನ್ನು ಸಮರ್ಥಿಸುತ್ತವೆ.

ಸಂಸ್ಕೃತದ ವ್ಯಾವಹಾರಿಕ ಸ್ವರೂಪವನ್ನು ಸಂಸ್ಕೃತ ನಾಟಕಗಳು ನಿಖರವಾಗಿ ಗೊತ್ತುಪಡಿಸುತ್ತವೆ. ದೃಶ್ಯಕಾವ್ಯಗಳೆಂದು ಹೆಸರು ಪಡೆದ ಈ ನಾಟಕಗಳು ಕೇವಲ ಅಭಿನಯಕ್ಕಾಗಿಯೇ ಹುಟ್ಟಿದವು. ಯಾವ ದೇಶದಲ್ಲಿಯಾದರೂ ಸರಿ ಜನಸಾಮಾನ್ಯರಿಗೆ ತಿಳಿಯದ ಭಾಷೆಯಲ್ಲಿ ನಾಟಕರಚನೆಗೆ ಯಾರೂ ಕೈಹಾಕುವುದಿಲ್ಲ. ಜನಸಮೂಹದ ಮುಂದೆ

---

18. ನಿರುಕ್ತ 2-2-6,-7 19. ನಿರುಕ್ತ 1-16-1

20. 'ಶವತಿರ್ಗತಿಕರ್ಮಾ ಕಾಂಭೋಜೇಷ್ವೇವ ಭಾಷ್ಯತೇ ; ವಿಕಾರಮಸ್ಯಾರ್ಯೇಷು ಭಾಷಂತೇ ಶವ ಇತಿ. ದಾತಿರ್ಲವನಾರ್ಥೇ ಪ್ರಾಚ್ಯೇಷು ದಾತ್ರಮುದೀಚ್ಯೇಷು. ಭಾಷ್ಯತೇ, ಭಾಷಂತೇ ಎಂಬ ಪದ ಪ್ರಯೋಗವನ್ನು ಗಮನಿಸಿ. ನಿರುಕ್ತ 2-2-8

ಅಭಿನಯಿಸಿ ಅವರನ್ನು ಸಂತೋಷಗೊಳಿಸುವುದೇ ನಾಟಕದ ಗುರಿ. ಕೇವಲ ಅಲ್ಪ ಮಂದಿಯ ವ್ಯೂಹಕ್ಕಾಗಿ ನಾಟಕಗಳ ರಚನೆ ಆಗದು. ಅಂಥ ನಿರ್ಜೀವವಾದ ಭಾಷೆ ಭಾಸ, ಕಾಳಿದಾಸ ಭವಭೂತಿಗಳಂಥ ಶ್ರೇಷ್ಠ ನಾಟಕಕಾರರನ್ನು ಸೃಜಿಸಲಾರದು. ಜನಪ್ರಿಯವಾದ ನಾಟಕಗಳನ್ನು ಹೊಂದಿರುವ ಈ ಸಂಸ್ಕೃತ ಭಾಷೆ ಜನತೆಯ ವ್ಯಾವಹಾರಿಕ ಭಾಷೆಯಾಗಿದ್ದಿತೆಂಬುದು ಸಿದ್ಧವಾಗುತ್ತದೆ.

ಸಂಸ್ಕೃತವು ಕೇವಲ ಗ್ರಾಂಥಿಕಭಾಷೆಯೇ ಆಗಿರದೆ ಜನತೆಯ ವ್ಯವಹಾರದಲ್ಲಿಯೂ ಇದ್ದಿತೆಂಬ ಅಂಶವು ಶಾಸನಗಳ ಪ್ರಮಾಣದಿಂದ ದೃಢವಾಗುತ್ತದೆ. ಕ್ರಿ. ಪೂ. ಶತಮಾನಗಳಲ್ಲಿ ಉಪಲಬ್ಧವಾದ ಶಾಸನಗಳು ಪ್ರಾಕೃತ ಭಾಷೆಗಳಲ್ಲಿವೆ. ಆದರೆ ಕ್ರಿ. ಶ. ಮೂರನೇ ಶತಮಾನದಿಂದೀಚೆಗೆ ಭಾರತಾದ್ಯಂತ ಶಾಸನಗಳೆಲ್ಲಾ ಸಂಸ್ಕೃತ ಭಾಷೆಯಲ್ಲಿಯೇ ರಚಿತವಾಗಿವೆ. ಶಾಸನಗಳು ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿಯೇ ಇರುತ್ತಿದ್ದವು. ಇದರಿಂದಲೂ ಸಂಸ್ಕೃತವು ಭಾರತದ ವ್ಯವಹಾರಭಾಷೆಯಾಗಿದ್ದಿತೆಂಬುದು ಸಿದ್ಧವಾಗುತ್ತದೆ.

ಕ್ರಿ. ಶ. 4ನೇ ಶತಮಾನದವರೆಗೆ ಜೈನ ಮತ್ತು ಬೌದ್ಧಧರ್ಮ ಪ್ರಚಾರಕರು ತಮ್ಮ ಧರ್ಮಗ್ರಂಥಗಳನ್ನು ಪ್ರಾಕೃತಭಾಷೆಗಳಲ್ಲಿ ನಿರ್ಮಾಣ ಮಾಡಿದ್ದಾರೆ. ಅಲ್ಲಿಂದೀಚೆಗೆ ಇವರ ಎಲ್ಲ ಧರ್ಮಗ್ರಂಥಗಳೂ ಸಂಸ್ಕೃತದಲ್ಲಿವೆ. ಮತಪ್ರಚಾರಕ್ಕಾಗಿ ಗ್ರಂಥನಿರ್ಮಾಣ ಮಾಡುವವರು ವ್ಯಾವಹಾರಿಕ ಭಾಷೆಯಲ್ಲಿಯೇ ಬರೆಯುತ್ತಾರೆ. ಸಂಸ್ಕೃತವು ಸರ್ವತ್ರ ವ್ಯವಹಾರದಲ್ಲಿದ್ದುದರಿಂದಲೂ ಜೈನ ಬೌದ್ಧಧರ್ಮಗಳ ಖಂಡನೆ ಸಂಸ್ಕೃತದಲ್ಲಾದುದರಿಂದಲೂ ಅವುಗಳಿಗೆ ಸಮಾಧಾನವನ್ನು ಹೇಳಲು ಅವರ ಭಾಷೆಯನ್ನೇ ಬಳಸಬೇಕಾದುದು ಆವಶ್ಯಕವಾದುದರಿಂದಲೂ ಈ ಧರ್ಮಪ್ರಚಾರಕರು ಸಂಸ್ಕೃತ ಭಾಷೆಯನ್ನವಲಂಬಿಸಿ ಧರ್ಮಗ್ರಂಥಗಳ ನಿರ್ಮಾಣವನ್ನು ಮಾಡಿದರು.

ಈ ಎಲ್ಲ ಕಾರಣಗಳಿಂದ ಸಂಸ್ಕೃತ ಭಾಷೆಯು ಭರತಖಂಡದ ರಾಷ್ಟ್ರಭಾಷೆಯಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಕ್ರಿ. ಶ. 11ನೇ ಶತಮಾನದಲ್ಲಿ ವಿಧರ್ಮೀಯರ ಧಾಳಿಗಳಾದಾಗ ಸಂಸ್ಕೃತಕ್ಕೆ ಅಪಾರವಾದ ಧಕ್ಕೆಯುಂಟಾಯಿತು. ಮುಂದೆ ಆಂಗ್ಲರ ಆಳ್ವಿಕೆಯಲ್ಲಿಯೂ ಸಂಸ್ಕೃತಕ್ಕೆ ಪುರಸ್ಕಾರ ತಪ್ಪಿಹೋಗಿ ಅದು ಹಿನ್ನೆಲೆಯಲ್ಲಿಯೇ ಉಳಿಯಿತು.

## ಸಂಸ್ಕೃತ ಸಾಹಿತ್ಯದ ಪರ್ವಗಳು

ಸಂಸ್ಕೃತ ಸಾಹಿತ್ಯವನ್ನು ಸ್ಥೂಲವಾಗಿ ವೇದಗಳ ಸಂಸ್ಕೃತ ಮತ್ತು ಕಾವ್ಯ ಸಂಸ್ಕೃತ ಎಂದು ಎರಡು ಭಾಗಗಳಾಗಿ ವಿಂಗಡಿಸುತ್ತಾರೆ. ಬಹುಮುಖವಾದ ಮಹತ್ವವನ್ನು ಹೊಂದಿರುವ ಈ ವಿರಾಟ್‌ಸಾಹಿತ್ಯದ ಸ್ವರೂಪವನ್ನು ಪರಿಚಯಮಾಡಿಕೊಡಲು ಇದನ್ನು ಕಾಲದ ದೃಷ್ಟಿಯಿಂದ ಐದು ಭಾಗಗಳಾಗಿ ವಿಂಗಡಿಸಬಹುದು.

| | |
|---|---|
| (೧) ಶ್ರುತಿಯುಗ | ಕ್ರಿ. ಪೂ. 4500 ಮತ್ತು ತತ್ಪೂರ್ವ |
| (೨) ಸ್ಮೃತಿಯುಗ | ಕ್ರಿ. ಪೂ. 500 ರ ಪೂರ್ವ |
| (೩) ಕಾವ್ಯಯುಗ | ಕ್ರಿ. ಪೂ. 500 ರಿಂದ ಕ್ರಿ. ಶ. 800 |
| (೪) ವ್ಯಾಖ್ಯಾನಯುಗ | ಕ್ರಿ. ಶ. 800 ರಿಂದ ಕ್ರಿ. ಶ. 1400 |
| (೫) ನವೀನ ಕಾಲ | ಕ್ರಿ. ಶ. 1400 ರಿಂದ ಈಚಿನ ಕಾಲ. |

ಈ ವಿಭಾಗ ಪ್ರಾಯೋವಿಭಾಗವೆಂಬುದನ್ನು ನಾವು ನೆನಪಿಡಬೇಕು. ಯಾವ ಬಗೆಯ ಕೃತಿಗಳು ಬಹುತರವಾಗಿ ನಿರ್ಮಾಣವಾದವೋ ಅವುಗಳಿಗನುಸಾರವಾಗಿ ಆ ಕಾಲವನ್ನು ವಿಭಾಗ ಮಾಡಿದೆ. ಒಂದೊಂದು ಕಾಲದಲ್ಲಿಯೂ ಇತರ ಬಗೆಯ ಕೃತಿಗಳೂ ಹುಟ್ಟಿವೆ. ವ್ಯಾಖ್ಯಾನ ಯುಗವೆಂದ ಕಾಲದಲ್ಲಿ ಸ್ವತಂತ್ರಕೃತಿಗಳಿರಲೇ ಇಲ್ಲವೆಂದು ಭಾವಿಸಬೇಕಾಗಿಲ್ಲ. ಸ್ವತಂತ್ರವಾದ ಒಂದೊಂದು ಕೃತಿ ಆಗಲೂ ತೋರಿತು. ಹಾಗೆಯೇ ಇತರ ಕಾಲದಲ್ಲಿಯೂ ಬೇರೆಬೇರೆ ಬಗೆಯ ಕೃತಿಗಳು ಬಂದಿರುವುದುಂಟು.

**ಶ್ರುತಿಯುಗ** (ಕ್ರಿ. ಪೂ. 4500 ಮತ್ತು ಹಿಂದೆ) : ವೇದವಾಙ್ಮಯದ ಭಾಷೆ ವೈದಿಕ ಸಂಸ್ಕೃತ. ಪುರಾತನರಾದ ಋಷಿಗಳು ಈ ಭಾಷೆಯನ್ನು ತಮ್ಮ ನಿತ್ಯವ್ಯವಹಾರದಲ್ಲಿ ಬಳಸುತ್ತಿದ್ದರು. ತಾವು ಸಾಕ್ಷಾತ್ಕರಿಸಿಕೊಂಡ ನಿಗೂಢಜ್ಞಾನವನ್ನು ಈ ಮಂತ್ರರಾಶಿಯಲ್ಲಿ ಅಡಗಿಸಿಟ್ಟು ಅವರು ಪರಮೋಪಕಾರ ಮಾಡಿದ್ದಾರೆ. ಈ ವೈದಿಕಸಂಸ್ಕೃತ ಕಾಲಕಳೆದಂತೆ ಅನೇಕ ವ್ಯತ್ಯಾಸಗಳನ್ನು ಹೊಂದಿ ಪಾಣಿನಿ ಪತಂಜಲಿಗಳ ಕಾಲಕ್ಕೆ 'ಸಂಸ್ಕೃತ'ದ ರೂಪವನ್ನು ಹೊಂದಿತು. ಪಾಣಿನಿ ವೇದಸಂಸ್ಕೃತದ ಬಗೆಗೆ 'ವೈದಿಕಪ್ರಕ್ರಿಯೆ'ಯನ್ನು ಪ್ರತ್ಯೇಕವಾಗಿ ರಚಿಸಿದ್ದಾರೆ. ಶ್ರುತಿಗಳ ಸಂಸ್ಕೃತವನ್ನು ಶ್ರುತಿಗಳ ಭಾಷೆ ಅಥವಾ ವೈದಿಕ ಸಂಸ್ಕೃತವೆಂದು ಕರೆಯಲಾಗಿದೆ. ಒಂದೇ ಭಾಷೆ ಬೇರೆಬೇರೆ ಘಟ್ಟಗಳಲ್ಲಿ ಬೇರೆಬೇರೆ ರೂಪಗಳನ್ನೂ ವಿಶಿಷ್ಟವಾದ ಲಕ್ಷಣಗಳನ್ನೂ ಪಡೆಯಿತು. ವೇದಭಾಷೆ ವೈದಿಕ ಸಂಸ್ಕೃತವಾಗಿದ್ದು ಪಾಣಿನಿ ಪತಂಜಲಿಗಳ ಕಾಲಕ್ಕೆ ಸಂಸ್ಕೃತದ ರೂಪವನ್ನು ಹೊಂದಿ ಮುಂದೆ ಕಾವ್ಯಗಳ ಸಂಸ್ಕೃತವಾಗಿ ಬೆಳೆಯಿತು. ಭಾಷೆಯ ವ್ಯಾಕರಣ ಎಲ್ಲ ಘಟ್ಟಗಳಿಗೂ ಸರಿಸಮಾನವಾಗಿ ಅನ್ವಯಿಸಿ ಭಾಷೆಯ ಏಕರಸತೆಯನ್ನು ನಿರ್ವಿವಾದವಾಗಿ ಸ್ಥಾಪಿಸುತ್ತದೆ. ಶ್ರುತಿಗಳ ಭಾಷೆಯ ವೈಲಕ್ಷಣ್ಯಗಳನ್ನು ಮಾತ್ರ ಪಾಣಿನಿ ತಿಳಿಸಿ 'ಛಂದಸಿ', 'ಭಾಷಾಯಾಂ' ಎಂದು ಅವುಗಳಿಗೆ ಭೇದವನ್ನು ಸೂಚಿಸಿದ್ದಾರೆ. ಅಖಂಡವಾದ ವೇದವಾಙ್ಮಯವೆಲ್ಲಾ ಈ ಶ್ರುತಿಯುಗಕ್ಕೆ ಸೇರುತ್ತದೆ. ನಾಲ್ಕು ವೇದಗಳ ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕೋಪನಿಷತ್ತುಗಳು ಈ ಯುಗಕ್ಕೆ ಸೇರಿದವು.

**ಸ್ಮೃತಿಯುಗ** (ಕ್ರಿ. ಪೂ. 500ರ ಪೂರ್ವ) : ಶ್ರುತಿಗಳ ನಂತರ ಸ್ಮೃತಿಗಳು ಮೂಡಿಬಂದವು. ಇವೂ ಬಹುಮುಖವಾಗಿ ಅನೇಕ ವಿಧವಾದ ಮಹತ್ತ್ವವನ್ನು ಹೊಂದಿವೆ. ಸ್ಮೃತಿಯುಗಕ್ಕೆ ವೇದಾಂಗಗಳು, ರಾಮಾಯಣ, ಮಹಾಭಾರತ ಮೊದಲಾದ ಇತಿಹಾಸಗಳು, ಪ್ರಾಚೀನ ಪುರಾಣಗಳು ಇವು ಸೇರುತ್ತವೆ. ಈ ಕಾಲದಲ್ಲಿನ್ನೂ ಸಂಸ್ಕೃತ ಪ್ರಾಕೃತಭೇದಗಳು ಅಷ್ಟು ಗಮನಾರ್ಹವಾಗಿ ತೋರಿರಲಿಲ್ಲವೆಂದು ಕಾಣುತ್ತದೆ. ಆರ್ಯಸಂಸ್ಕೃತಿ ಭಾರತದ ಪೂರ್ವ ಹಾಗೂ ದಕ್ಷಿಣ ಭಾಗಗಳಿಗೆ ಈ ಕಾಲದಲ್ಲಿ ಹರಡಿತು. ಅನೇಕ ದಸ್ಯು ಅಥವಾ 'ದಾಸರು' ಈ ಕಾಲದಲ್ಲಿ ಆರ್ಯರ ಗುಂಪಿಗೆ ಸೇರಿಹೋದರು.[21] ಕೆಳಗಿನ ವರ್ಣದ ಸ್ತ್ರೀಯರನ್ನು ಆರ್ಯರು ವರಿಸುತ್ತಿದ್ದ ಕಾರಣ ಅವರೂ ಸಂಸ್ಕೃತವನ್ನೇ ನುಡಿಯತೊಡಗಿದರು. ತತ್ಪರಿಣಾಮವಾಗಿ ಜನಸಾಮಾನ್ಯರೂ ಮೇಲಿನ ಮೂರು ವರ್ಣಗಳ ಸ್ತ್ರೀಯರೂ ಸಂಸ್ಕೃತಭಾಷೆಯಲ್ಲಿನ ಕರ್ಕಶವರ್ಣಗಳನ್ನು ಮೃದುವರ್ಣಗಳನ್ನಾಗಿ ಉಚ್ಚರಿಸತೊಡಗಿದರು.[22] ಹೀಗೆ ಈ ಸಂದರ್ಭಗಳು ಪ್ರಾಕೃತಗಳ ಉಗಮಕ್ಕೆ ಅನುವು ಮಾಡಿಕೊಟ್ಟವು. ಬೇರೆಬೇರೆ ಪ್ರಾಂತಗಳು

---

21. ಋಗ್ವೇದದಲ್ಲಿಯೂ ಇಂದ್ರನು ಕೃಪೆಯಿಂದ ದಾಸರನ್ನೂ ಆರ್ಯರನ್ನಾಗಿ ಮಾಡಿದನೆಂದು ಉಲ್ಲೇಖಿಸಿರುವುದನ್ನು ಗಮನಿಸಬಹುದು. (ಋ. ಸಂ. 6-25-10)
22. *History of Sanskrit Literature–C. V. Vaidya*, p. 12

ಪ್ರಾಕೃತಗಳು ಬೇರೆಬೇರೆಯಾಗಿದ್ದ ಕಾರಣ ಆಯಾ ದೇಶಗಳ ರೂಢಿಗನುಸಾರವಾಗಿ ಮಾಗಧಿ, ಶೂರಸೇನೀ, ಮಹಾರಾಷ್ಟ್ರೀ, ಪೈಶಾಚೀ ಮೊದಲಾದವು ರೂಢಿಗೆ ಬಂದವು. ಈ ಕಾಲದಲ್ಲಿ ಉಚ್ಚವರ್ಗದ ಪುರುಷರ ವ್ಯವಹಾರಭಾಷೆ ಸಂಸ್ಕೃತವೇ ಆದಾಗ್ಲೂ ಸ್ತ್ರೀಯರೂ ಕೆಳವರ್ಣದವರೂ ಪ್ರಾಕೃತಗಳನ್ನು ಬಳಸುತ್ತಿದ್ದರು. ಭಗವಾನ್ ಬುದ್ಧನು ತನ್ನ ಮತವನ್ನು ಪಾಳಿಯಲ್ಲಿಯೇ ಬೋಧಿಸಿದನು. ಈ ಪ್ರಾಕೃತಗಳು ಸಂಸ್ಕೃತದ ಶಬ್ದಸಂಪತ್ತು ಮತ್ತು ವ್ಯಾಕರಣವನ್ನು ಹೊಂದಿ ಸಂಸ್ಕೃತದ ಮೃದ್ವೀಕರಣವೇ ಆಗಿದ್ದವು. ಆ ಕಾರಣದಿಂದಲೇ ಪುರುಷರು ಸಂಸ್ಕೃತವನ್ನು ಪ್ರಯೋಗಿಸಿದರೆ ಇತರರು ಅದನ್ನು ತಿಳಿಯಬಲ್ಲವರಾಗಿದ್ದರು. ಈ ಕಾಲದಲ್ಲಿ ಸಂಸ್ಕೃತ ವೈಯಾಕರಣರ ಪರಿಶ್ರಮದ ಫಲವಾಗಿ ಪರಿಷ್ಕೃತವಾಗಿ, ನಿರ್ಧರವಾದ ರೂಪನ್ನು ಪಡೆದು, ಕಾವ್ಯಗಳ ಸಂಸ್ಕೃತವಾಗಿ ಪರಿಣಾಮಗೊಂಡಿತು.

**ಕಾವ್ಯಯುಗ (ಕ್ರಿ. ಪೂ. 500ರಿಂದ ಕ್ರಿ. ಶ. 800)** : ಈ ಕಾಲದಲ್ಲಿ ಸಂಸ್ಕೃತದ ಪ್ರಚಾರ ಅಪಾರವಾಗಿ ಆಯಿತು. ಮೊದಮೊದಲು ಪಾಳಿ ಮಾಗಧೀ ಭಾಷೆಗಳನ್ನು ಬಳಸುತ್ತಿದ್ದ ಬೌದ್ಧರೂ ಮಹಾರಾಷ್ಟ್ರೀ ಮತ್ತು ಅರ್ಧ ಮಾಗಧೀಗಳನ್ನು ಬಳಸುತ್ತಿದ್ದ ಜೈನರೂ ತಮ್ಮ ಧರ್ಮಗ್ರಂಥಗಳನ್ನು ರಚಿಸಲು ಸಂಸ್ಕೃತವನ್ನು ಉಪಯೋಗಿಸಿದ ಕಾಲವಿದು. ಕಾನಿಷ್ಕನ ಕಾಲದಲ್ಲಿ ನಾಗಾರ್ಜುನನ ಮುಖಂಡತ್ವದಲ್ಲಿ ಹೀನಯಾನದಿಂದ ಬೇರ್ಪಡೆ ಹೊಂದಿದ ಮಹಾಯಾನವಂತೂ ಮತಬೋಧನೆಗೂ, ಪ್ರಚಾರಕ್ಕೂ ಸಂಸ್ಕೃತವನ್ನೇ ಉಪಯೋಗಿಸಿತು. ಈ ಕಾವ್ಯಯುಗದಲ್ಲಿ ಸಾಹಿತ್ಯದ ಸುಗ್ಗಿಯೇ ಆಯಿತು. ಅನೇಕಾನೇಕ ಕೃತಿರತ್ನಗಳು ರಚಿತವಾದ ಸ್ವರ್ಣಯುಗವಿದು. ಭಾಸ, ಕಾಳಿದಾಸ, ಅಶ್ವಘೋಷ, ಭಾರವಿ, ಮಾಘ, ಭವಭೂತಿ, ಬಾಣ, ದಂಡಿ ಮೊದಲಾದ ಅಸಂಖ್ಯರಾದ ವರಕವಿಗಳೂ ರಸಋಷಿಗಳೂ ಉದಯಿಸಿದ ಕಾಲವಿದು. ಸಂಸ್ಕೃತ ಕಾವ್ಯಾರಾಮದಲ್ಲಿ ಬಗೆಬಗೆಯ ಪರಿಮಳ ಪುಷ್ಪಗಳು ಅರಳಿದ ವಸಂತಕಾಲ ಇದು. ಶಾಸ್ತ್ರಸಂಪತ್ತು ಈ ಕಾಲದಲ್ಲಿ ಅಪಾರವಾಗಿ ವರ್ಧಿಸಿತು. ಭರತ, ದಂಡಿ, ಭಾಮಹ ಮೊದಲಾದವರ ಪರಿಶ್ರಮದಿಂದ ಕಾವ್ಯ ಮೀಮಾಂಸೆಯೂ ಬೆಳೆದ ಕಾಲ ಇದು. ನಾನಾ ಮುಖಗಳಲ್ಲಿ ಸಂಸ್ಕೃತ ಅಪೂರ್ವವಾದ ಅಭಿವೃದ್ಧಿಯನ್ನು ಪಡೆಯಿತು ಈ ಕಾಲದಲ್ಲಿ.

**ವ್ಯಾಖ್ಯಾನಯುಗ (ಕ್ರಿ. ಶ. 800ರಿಂದ ಕ್ರಿ. ಶ. 1400)**: ಭಗವಾನ್ ಶಂಕರರ ಮತ್ತು ಕುಮಾರಿಲರ ಪರಿಶ್ರಮದಿಂದ ಬೌದ್ಧ ಮತದ ಏಳಿಗೆ ಕುಂಠಿತವಾದ ಕಾಲ ಇದು. ಈ ಕಾಲದಲ್ಲಿ ವಿದ್ವಾಂಸರು ಸಂಸ್ಕೃತವನ್ನು ಅಭ್ಯಸಿಸಿ ನಿರರ್ಗಳದಾಗಿ ನುಡಿಯುತ್ತಿದ್ದರೂ ಅದರೊಡನೆ ತಮ್ಮತಮ್ಮ ಪ್ರಾಂತ ಭಾಷೆಗಳನ್ನೂ ಹೆಚ್ಚುಹೆಚ್ಚಾಗಿ ಬಳಸತೊಡಗಿದರು. ಶ್ರುತಿಗಳು ಪವಿತ್ರವೆಂಬ ನಂಬಿಕೆ ಇದ್ದುದರಿಂದಲೂ ಸ್ಮೃತಿಗಳು ತತ್ಸಮವೇ ಆದುದರಿಂದಲೂ, ಪ್ರತಿಶಾಸ್ತ್ರವೂ ಆಯಾ ಪ್ರವರ್ತಕರನ್ನು ಹೊಂದಿಬಿಟ್ಟುದರಿಂದಲೂ ಈ ಕಾಲದಲ್ಲಿ ಪುರಾತನವಾದ ಆ ಕೃತಿರತ್ನಗಳ ಮೇಲೆ ಭಾಷ್ಯ, ವ್ಯಾಖ್ಯಾನ, ಅನುವ್ಯಾಖ್ಯಾನ ಮೊದಲಾದವುಗಳನ್ನು ಬರೆದರು. ಈ ಮನೋಭಾವದ ಮುದ್ರೆ ಈ ಕಾಲದ ಕೃತಿಗಳೆಲ್ಲದರ ಮೇಲೆ ಬಿದ್ದಿರುವುದನ್ನು ಕಾಣಬಹುದು. ಲೌಕಿಕ ವ್ಯವಹಾರದಿಂದ ಹಿಡಿದು ದಾರ್ಶನಿಕ ವಿವೇಚನೆಗಳೆಲ್ಲಾ ಇದರ ಪ್ರಭಾವಕ್ಕೊಳಗಾದವು. ಈ ವ್ಯಾಖ್ಯಾನಗಳ ಕಾಲ ಶ್ರೀ ಶಂಕರಾಚಾರ್ಯರಿಂದ ಮೊದಲಾಗಿ ಶ್ರೀಮತ್ಸಾಯಣರವರೆಗೂ ಬೆಳೆದುಬಂದಿತೆಂದು ಹೇಳಬಹುದು. ಅಪ್ರತಿಮವಾದ ಪ್ರತಿಭೆ, ಉಜ್ವಲವಾದ ವಿಚಾರ ಧೋರಣೆ ಇವುಗಳನ್ನು ತೋರಿದವರು ಈ ಕಾಲದಲ್ಲಿ ಕಡಿಮೆಯಾಗಿಲ್ಲ.

ಆದರೆ ಈ ಅನುಪಮವಾದ ಶಕ್ತಿ ಪುರಾತನಕೃತಿಗಳ ವಿವರಣಕ್ಕೂ ಪ್ರವರ್ತನಕ್ಕೂ ಮೀಸಲಾಯಿತೆಂಬುದು ನಾವು ಗಮನಿಸಬೇಕಾದ ಅಂಶ. ಸ್ವತಂತ್ರವಾದ ವ್ಯಾಕರಣ ಬರೆದ ಹೇಮಚಂದ್ರನಂಥವರು ಅಲ್ಲೊಬ್ಬರು ಇಲ್ಲೊಬ್ಬರು ಇದ್ದರೂ ಈ ಕಾಲದಲ್ಲಿ ಹೇರಳವಾಗಿ ಬೆಳೆದದ್ದು ವ್ಯಾಖ್ಯಾನವೇ. ಸಕ್ರಮವಾದ ನ್ಯಾಯಶಾಸ್ತ್ರವನ್ನು (Law) ಒದಗಿಸಿರುವ ವಿಜ್ಞಾನೇಶ್ವರನೂ ಇದನ್ನು ಯಾಜ್ಞವಲ್ಕ್ಯಸ್ಮೃತಿಗೆ ಬರೆದ ಮಿತಾಕ್ಷರಾ ವ್ಯಾಖ್ಯಾನದಿಂದಲೇ ಸಾಧಿಸಿದನು ಎಂಬುದನ್ನು ನಾವು ಮರೆಯಬಾರದು. ಈ ಕಾಲದಲ್ಲಿ ಪ್ರಾಬಲ್ಯಕ್ಕೆ ಬಂದ ಆಧುನಿಕ ಪ್ರಾಂತಭಾಷೆಗಳು ಸ್ವತಂತ್ರವಾಗಿ ಬೆಳೆಯಲಾರಂಭಿಸಿದವು.

ಈ ಕಾಲದಲ್ಲಿ ಮಹಮ್ಮದೀಯರ ಧಾಳಿಗೆ ಪಂಜಾಬು ಗುರಿಯಾಯಿತು. ಇವರ ಕಾಲದಲ್ಲಿ ನ್ಯಾಯಾಲಯಗಳವರ ಉಪಯೋಗಕ್ಕಾಗಿ ಉದ್ದಾಮವಾದ ನ್ಯಾಯಗ್ರಂಥಗಳು ಸಂಸ್ಕೃತದಲ್ಲಿ ನಿರ್ಮಾಣವಾದವು. ಸನ್ನದುಗಳೂ ಶಾಸನಗಳೂ ಸಂಸ್ಕೃತದಲ್ಲಿಯೇ ಆದವು. ಸ್ವತಂತ್ರ ಗ್ರಂಥಗಳು ತೋರಿದ್ದು ಅಲಂಕಾರ ಶಾಸ್ತ್ರದಲ್ಲಿ ಮಾತ್ರ. ದಕ್ಷಿಣ ಭಾರತವೂ ಮಹಮ್ಮದೀಯರ ಧಾಳಿಗೆ ಒಳಗಾಯಿತು ಈ ಕಾಲದಲ್ಲಿ. ಕರ್ನಾಟಕ ಸಾಮ್ರಾಜ್ಯವೆಂದು ಹೆಸರಾಂತ ವಿಜಯನಗರದ ಅರಸರ ಆಶ್ರಯದಲ್ಲಿ ಸರ್ವತೋಮುಖವಾದ ಸಾಹಿತ್ಯಾಭಿವೃದ್ಧಿ ಆಯಿತು. ಅನುಪಮವೂ ಅದ್ಭುತವೂ ಆದ ವೇದಭಾಷ್ಯಗಳ ನಿರ್ಮಾಣವಾದ ಕಾಲ ಇದು.

· **ನವೀನ ಕಾಲ (ಕ್ರಿ. ಶ. 1400ರಿಂದ ಈಚೆ):** ಇಲ್ಲಿಂದ ಮುಂದೆ ಸಂಸ್ಕೃತ ಸಾಹಿತ್ಯದ ಇತಿಹಾಸವನ್ನು ನವೀನ ಕಾಲೀನವೆಂದು ಹೇಳಬಹುದು. ಈ ಕಾಲದಲ್ಲಿ ಮಹತ್ತಮವಾದ ಪ್ರಭಾವ ಬೀರುವ ಮೂಲಕೃತಿಗಳ ರಚನೆ ಕಡಮೆಯಾಯಿತು. ಹಾಗೆ ರಚಿತವಾದ ಒಂದೇ ಒಂದು ಕೃತಿರತ್ನ ರಸಗಂಗಾಧರ. ಸಂಸ್ಕೃತದ ವ್ಯವಹಾರವೂ ಕಡಮೆಯಾಗುತ್ತಾ ಬಂದು ಸಂಸ್ಕೃತ ಹಿನ್ನೆಲೆಗೆ ಬೀಳತೊಡಗಿದ ಕಾಲವಿದು. ಬಗೆಬಗೆಯ ಗ್ರಂಥಸೃಷ್ಟಿ ಈ ಕಾಲದಲ್ಲಿ ಆಗಿದ್ದರೂ ವೀರ್ಯವತ್ತರವೂ ಪುಷ್ಟವೂ ಆದ ಕೃತಿಗಳು ಅಪೂರ್ವವಾದವು. ಭಾರತ ದೇಶದಲ್ಲಿ ಆಂಗ್ಲರ ಆಳ್ವಿಕೆ ಆರಂಭವಾದ ಮೇಲಂತೂ ಭಾರತೀಯರ ದೃಷ್ಟಿ ಆಂಗ್ಲಭಾಷೆಯ ಕಡೆ ತಿರುಗಿತು. ಮೆಕಾಲೆ ಮಹಾಶಯನ ನಿರ್ಣಯದಂತೆ ಭಾರತೀಯರಿಗೆ ಆಂಗ್ಲಭಾಷೆಯ ಮೂಲಕ ವಿಜ್ಞಾನವೇ ಮೊದಲಾದ ವಿಚಾರಗಳಲ್ಲಿ ಬೋಧನ ಆರಂಭವಾದಮೇಲಂತೂ ಸಂಸ್ಕೃತ ಮರೆಯಾಗ ತೊಡಗಿತು. ಸಂಸ್ಕೃತದ ಹಿರಿಮೆಯನ್ನು ಎಲ್ಲರೂ ಒಪ್ಪಿದರೂ ಈಗಿನ ಕಾಲಕ್ಕೆ ಅದು ಸರಿಹೋಗದೆಂದು ನಿರ್ಣಯಿಸಿದುದರಿಂದ ಸಂಸ್ಕೃತಕ್ಕೆ ದೊಡ್ಡ ಆಘಾತವುಂಟಾಯಿತು. ಭಾರತವು ಸ್ವತಂತ್ರವಾದಮೇಲೆ ಈಗೀಗ ಸಂಸ್ಕೃತದ ಪುನರುಜ್ಜೀವನವಾಗುವ ಸೂಚನೆ ಕಂಡುಬರುತ್ತಿದೆ.

## ವೇದವಾಙ್ಮಯದ ವ್ಯಾಪ್ತಿ

ವೇದವಾಙ್ಮಯ ಬಹಳ ವ್ಯಾಪಕವೂ ಮಹತ್ತ್ವಪೂರ್ಣವೂ ಆದುದು. ಇದರ ಶಾಖೋಪಶಾಖೆಗಳ ಸ್ಥೂಲಪರಿಚಯವನ್ನು ಮೊದಲು ನಾವು ಮಾಡಿಕೊಳ್ಳಬೇಕು.

ವೇದ ಎಂದರೆ ಏನು ಎಂಬುದನ್ನು ಮೊದಲು ತಿಳಿಯೋಣ. ವೇದಶಬ್ದದ ಅರ್ಥನಿರ್ವಚನವನ್ನು ಪ್ರಾಚೀನರು ಅನೇಕ ರೀತಿಯಾಗಿ ಮಾಡಿದ್ದಾರೆ. ವೇದ ಎಂಬ ಶಬ್ದ 'ವಿದ್'– ತಿಳಿ ಎಂಬ ಧಾತುವಿನಿಂದ ಬಂದಿದೆ. ಗೌಣಾರ್ಥದಲ್ಲಿ ಜ್ಞಾನ ಪ್ರತಿಪಾದಕವಾದ ಗ್ರಂಥಗಳು ಎಂಬ ಅರ್ಥ ಈ ಶಬ್ದಕ್ಕೆ ಬರುತ್ತದೆ. ವೇದದ ಲಕ್ಷಣವನ್ನು ಸರಿಯಾಗಿ ಹೇಳುವುದು ಕಷ್ಟ. ಸಾಯಣಾಚಾರ್ಯರು ತಮ್ಮ ವೇದಭಾಷ್ಯ ಭೂಮಿಕೆಯಲ್ಲಿ ವೇದ ಲಕ್ಷಣವನ್ನು ಸ್ಪಷ್ಟವಾಗಿ ತಿಳಿಸುವುದು ಕಷ್ಟವೆಂದು ಪೂರ್ವಪಕ್ಷಮಾಡಿ ಅದಕ್ಕೆ ಉತ್ತರ ರೂಪವಾಗಿ ಮಂತ್ರ

ಬ್ರಾಹ್ಮಣಗಳ ಸಮುದಾಯವೇ ವೇದವೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ.[23] ಶಾಸ್ತ್ರಗಳೆಲ್ಲದರ ಗುರಿಯೂ ಜ್ಞಾನವೇ ಆಗಿರುವಾಗ ವೇದದ ವೈಶಿಷ್ಟ್ಯವೇನು ಎಂಬುದನ್ನು ಮಾಧವಾಚಾರ್ಯರು ವೇದಾರ್ಥಪ್ರಕಾಶದಲ್ಲಿ–"ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋಃ ಅಲೌಕಿಕ ಮುಪಾಯಂ ಯೋ ಗ್ರಂಥಃ ವೇದಯತಿ ಸ ವೇದಃ | ಅಲೌಕಿಕಪದೇನ ಪ್ರತ್ಯಕ್ಷಾನುಮಾನೇ ವ್ಯಾವರ್ತ್ಯೇತೇ |" ಎಂದು ತಿಳಿಸಿದ್ದಾರೆ.

ಸಂಸಾರವೆಂಬ ಜನನಮರಣಗಳ ಚಕ್ರಪರಿವರ್ತನೆಯ ಅನಿಷ್ಟವನ್ನು ಪರಿಹರಿಸಿ ಪರಬ್ರಹ್ಮಪ್ರಾಪ್ತಿ ಎಂಬ ಇಷ್ಟವನ್ನು ಪಡೆಯಲು ಮಾನವಕೋಟಿ ಅನುಸರಿಸಬೇಕಾದ ವಿಧಾನವನ್ನು ತಿಳಿಸುವುದು ವೇದ. ಆದುದರಿಂದ ವೇದ ಶಬ್ದ ಜ್ಞಾನಸಾಮಾನ್ಯಕ್ಕನ್ವಯಿಸದೆ ಬ್ರಹ್ಮಜ್ಞಾನಪ್ರತಿಪಾದಕವಾದುದಾಗಿದೆ. ಭಟ್ಟ ಭಾಸ್ಕರರು 'ವಿದ್ಯತೇ ಲಭ್ಯತೇ ಅನೇನ ಇತಿ ವೇದಃ' ಎಂದು ಹೇಳಿ ಬ್ರಹ್ಮಸಾಕ್ಷಾತ್ಕಾರ ಇದರಿಂದ ಉಂಟಾಗುವುದೆಂದಿದ್ದಾರೆ. 'ವಿದಂತಿ ಧರ್ಮಾದಿಕಂ ಅನೇನ ಇತಿ ವೇದಃ' ಧರ್ಮವೇ ಮೊದಲಾದುವನ್ನು ಇದರ ಮೂಲಕ ಅರಿಯುವುದರಿಂದ ಇದು ವೇದ ಎಂದು ಸರ್ವಾನಂದರೂ 'ವಿದಂತ್ಯನೇನ ಧರ್ಮಂ ವೇದಃ' ಎಂದು ಹೇಮಚಂದ್ರರೂ 'ವಿದಂತ್ಯನನ್ಯ ಪ್ರಮಾಣವೇದ್ಯಂ ಧರ್ಮಲಕ್ಷಣಂ ಅಸ್ಮಾತ್ ಇತಿ ವೇದಃ' ಎಂದು ಮೇಧಾತಿಥಿಗಳೂ 'ನಿಃಶ್ರೇಯಸ ಕರಾಣಿ ಕರ್ಮಾಣಿ ಆವೇದಯಂತೀತಿ ವೇದಾಃ' ಎಂದು ಮೇಧಾತಿಥಿಗಳೂ 'ನಿಃಶ್ರೇಯಸಕರಾಣಿ ಕರ್ಮಾಣಿ ಆವೇದಯಂತೀತಿ ವೇದಾಃ ' ಎಂದು ಕಪರ್ದಿಸ್ವಾಮಿಗಳೂ ವೇದ ಶಬ್ದಾರ್ಥವನ್ನು ವಿವರಿಸಿದ್ದಾರೆ. ಎಲ್ಲ ಸತ್ಯವಿದ್ಯೆಗಳನ್ನೂ ಯಾವುದರಿಂದ ಪಡೆದುಕೊಳ್ಳುವರೋ ಅದು ವೇದವೆಂದು ದಯಾನಂದ ಸರಸ್ವತಿಗಳು-'ವಿದಂತಿ ಜಾನಂತಿ, ವಿದ್ಯಂತೇ ಭವಂತಿ, ವಿಂದಂತಿ ಅಥವಾ ವಿಂದಂತೇ ಲಂಭಂತೇ' ವಿಂದಂತಿ ವಿಚಾರಯಂತಿ ಸರ್ವೇ ಮನುಷ್ಯಾಃ ಸರ್ವಾ ಸತ್ಯವಿದ್ಯಾಃ ಯೈಃ ಯೇಷು ವಾ ತಥಾ ವಿದ್ವಾಂಸಶ್ಚ ಭವಂತಿ ತೇ ವೇದಾಃ' ಎಂದು ವೇದಾರ್ಥನಿರೂಪಣೆ ಮಾಡಿದ್ದಾರೆ. ವೇದದಲ್ಲಿ ಗೂಢವಾಗಿ ಬ್ರಹ್ಮಜ್ಞಾನ ಅಡಗಿದೆ ಎಂಬುದನ್ನು ಸೂಚಿಸಲಾಗಿದೆ.[24] ಈ ವೇದಗಳು ಶ್ರವಣದ ಮೂಲಕ ಲಭ್ಯವಾದುದರಿಂದ ಶ್ರುತಿಗಳು ಎಂದು ಪ್ರಸಿದ್ಧವಾಗಿವೆ. ಇವುಗಳು ಸ್ವಯಂಸಿದ್ಧವಾದವು, ನಿತ್ಯವಾದವು, ಅಪೌರುಷೇಯವಾದುವು ಎಂಬುದು ನಮ್ಮ ಸಂಪ್ರದಾಯ.

ಋಷಿಗಳು ತಮ್ಮ ತಮ್ಮ ತಪಶ್ಶಕ್ತಿಯಿಂದ ಇದನ್ನು ತತ್ತದಾನುಪೂರ್ವೀ ವಿಶಿಷ್ಟವಾಗಿಯೇ ಸಾಕ್ಷಾತ್ಕರಿಸಿಕೊಂಡರೆಂದು ಹೇಳಲಾಗಿದೆ.[25] ಆದುದರಿಂದಲೇ ಅವರುಗಳನ್ನು ದ್ರಷ್ಟಾರರೆಂದು

23. "ನನು ವೇದ ಏವ ತಾವನ್ನಾಸ್ತಿ. ಕುತಸ್ತರವಾಂತರ ವಿಶೇಷಃ ಋಗ್ವೇದಃ ? ತಥಾಹಿ-ಕೋಯಂ ವೇದೋ ನಾಮ ? ನ ಹಿ ತತ್ರ ಲಕ್ಷಣಂ ಪ್ರಮಾಣಂ ವಾ ಅಸ್ತಿ...ತಸ್ಮಾನ್ನಾಸ್ತಿ ಕಂಚಿದ್ವೇದಸ್ಯ ಲಕ್ಷಣಂ" ಎಂದು ಪೂರ್ವಪಕ್ಷೋಪನ್ಯಾಸವನ್ನು ಮಾಡಿ-ಮಂತ್ರ ಬ್ರಾಹ್ಮಣಾತ್ಮಕತ್ವಂ ತಾವದದುಷ್ಟಂ ಲಕ್ಷಣಂ | ಅತಏವ ಆಪಸ್ತಂಬೋ ಯಜ್ಞಪರಿಭಾಷಾಯಾಂ ಏವಮಾಹ-'ಮಂತ್ರ ಬ್ರಾಹ್ಮಣಯೋರ್ವೇದ ನಾಮಧೇಯ'ಮಿತಿ. ತಸ್ಮಾಲ್ಲಕ್ಷಣಪ್ರಮಾಣ ಸಿದ್ಧೋ ವೇದಃ" ಎಂದು ಸಿದ್ಧಾಂತ ಮಾಡಿದ್ದಾರೆ.

–(ಋಗ್ವೇದ ಭಾಷ್ಯಭೂಮಿಕಾ)

24. 'ಸತೋ ನೂನಂ ಕವಯಃ ಸಂಶಿಶೀತ
ವಾಶೀಭಿರ್ಯಾಭಿರಮೃತಾಯ ತಕ್ಷಥ |
ವಿದ್ವಾಂಸಃ ಪದಾ ಗುಹ್ಯಾನಿ ಕರ್ತನ
ಯೇನ ದೇವಾಸೋ ಅಮೃತತ್ವಮಾನಶುಃ || (ಋ.ಸಂ. 10-53-10)

25. 'ಯುಗಾಂತೇಂತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ |
ಲೇಭಿರೇ ತಪಸಾ ಪೂರ್ವಂ ಅನುಜ್ಞಾತಾ ಸ್ವಯಂಭುವಾ ||–(ಮಹಾಭಾರತ)

ಕರೆದಿದೆ. ಸಾಕ್ಷಾತ್ಕೃತ ಋಷಿಗಳಿಂದ ಶಿಷ್ಯೋಪಾಧ್ಯಾಯಿಕವಾದ ರೀತಿಯಲ್ಲಿ ಇತರರು ಇವುಗಳನ್ನು ಕೇಳಿ ಪಡೆದುಕೊಂಡು 'ಶ್ರುತರ್ಷಿ'ಗಳಾದರು.[26] ಮುಂದಿನ ಜನಾಂಗ ಅಷ್ಟು ಶಕ್ತಿ ಸಾಮರ್ಥ್ಯಗಳನ್ನು ಹೊಂದಿರದ ಕಾರಣ ಅವರ ಉಪಯೋಗಕ್ಕಾಗಿ ಇವುಗಳನ್ನು ಒಟ್ಟುಗೂಡಿಸಿ, ವಿಭಜಿಸಲಾಯಿತು. ವಾಗ್ವ್ಯವಹಾರದಿಂದಲೇ ಜನಾಂಗದಿಂದ ಜನಾಂಗಕ್ಕೆ ಇವು ಧಾರೆ ಎರೆಯಲಾದವು.

ಮೊದಲು ವೇದ ಒಂದೇ ಆಗಿತ್ತೆಂದೂ ಅನಂತರ ಯಾಗದಲ್ಲಿ ಹೋತೃ, ಅಧ್ವರ್ಯು, ಉದ್ಗಾತೃ ಮತ್ತು ಬ್ರಹ್ಮ ಎಂಬ ಋತ್ವಿಕ್ಕುಗಳು ಉಪಯೋಗಿಸುವ ಕ್ರಮಕ್ಕನುಗುಣವಾಗಿ ನಾಲ್ಕಾಗಿ ಕವಲೊಡೆಯಿತೆಂದೂ ಹೇಳಲಾಗಿದೆ.[27] ಒಂದಾಗಿದ್ದ ವೇದರಾಶಿಯನ್ನು ನಾಲ್ಕಾಗಿ ವಿಂಗಡಿಸಿದವರು ವೇದವ್ಯಾಸರೆಂದು ನಮ್ಮ ಸಂಪ್ರದಾಯಕ್ಕನುಸಾರವಾಗಿ ತಿಳಿಯುತ್ತೇವೆ.[28] ಋಗ್ಯಜುಸ್ಸಾಮಾಥರ್ವವೇದಗಳಲ್ಲಿ ಋಗ್ವೇದಸಂಹಿತೆ ಬಹಳ ಪ್ರಾಚೀನವಾದುದೆಂದು ಆಧುನಿಕ ವಿಮರ್ಶಕರ ಅಭಿಪ್ರಾಯ. ಋಕ್ಸಂಹಿತೆಗೆ ಹೆಚ್ಚಿನ ಪ್ರಾಧಾನ್ಯವನ್ನು ಬಹಳ ಹಿಂದಿನಿಂದಲೂ ನಮ್ಮವರೂ ಕೊಟ್ಟಿದ್ದಾರೆ. ವೇದಗಳನ್ನು ಹೇಳುವಾಗಲೆಲ್ಲಾ ಮೊದಲು ಋಗ್ವೇದದ ಉಲ್ಲೇಖ ಬಂದಿದೆ.[29] ಯಜುರ್ವೇದ ಸಾಮವೇದಗಳು 'ತತ್ಪರಿಚರಣಾವಿತರೌ ವೇದೌ' ಎಂದು ಹೇಳಿರುವಂತೆ ಕೇವಲ ಯಾಗಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಮಾತ್ರ ಒಳಗೊಂಡಿವೆ. ಆದರೆ ಋಗ್ವೇದ ಸಂಹಿತೆಯಲ್ಲಿ ಯಾಗೋಪಯುಕ್ತವಾದ ಮಂತ್ರರಾಶಿಯೊಡನೆ ಇತರ ವಿಷಯಗಳನ್ನು ಪ್ರತಿಪಾದಿಸುವ ಮಂತ್ರಗಳು ಹೇರಳವಾಗಿವೆ. ಆದುದರಿಂದ ಋಗ್ವೇದಸಂಹಿತೆಯನ್ನು ಮೂಲಾಧಾರವಾಗಿಟ್ಟುಕೊಂಡು ಯಾಗದಲ್ಲಿ ಅಧ್ವರ್ಯು ಬಳಸಬೇಕಾದ ಮಂತ್ರಗಳನ್ನೆಲ್ಲಾ ಕೂಡಿಸಿ ಯಜುರ್ವೇದವನ್ನೂ, ಉದ್ಗಾತೃ ಬಳಸಬೇಕಾದ ಮಂತ್ರಗಳನ್ನೆಲ್ಲಾ ಬೇರೆಯಾಗಿ ಕೂಡಿಸಿ ಸಾಮವೇದವನ್ನೂ ಸಂಗ್ರಹಿಸಲಾಯಿತೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಅಥರ್ವವೇದವು ಯಾಗಕ್ಕೆ ನೇರವಾಗಿ ಸಂಬಂಧಿಸಿಲ್ಲದ ಕಾರಣ ಅದು ಇತರ ವೇದಗಳಿಗಿಂತ ಈಚಿನದೆಂದು ಅಭಿಪ್ರಾಯಪಡಲಾಗಿದೆ. ನಮ್ಮ ಪ್ರಾಚೀನರ ಅಭಿಪ್ರಾಯದಲ್ಲಿ ಈ ನಾಲ್ಕು ವೇದಗಳಿಗೂ ಸಮಾನವಾದ ಸ್ಥಾನವಿದೆ. ಇವೆಲ್ಲವನ್ನೂ ಅವರು ಅಪೌರುಷೇಯ, ನಿತ್ಯ ಮತ್ತು ಸ್ವತಃಸಿದ್ಧವೆಂದು ಪ್ರತಿಪಾದಿಸಿದ್ದಾರೆ. ಋಗ್ವೇದ ಸಂಹಿತೆಯಲ್ಲಿ ಹೋತಾ, ಉದ್ಗಾತಾ, ಬ್ರಹ್ಮಾ ಮತ್ತು ಅಧ್ವರ್ಯು ಇವರುಗಳ ಕೆಲಸವನ್ನು ಸೂಚಿಸಲಾಗಿದೆ. ಇಲ್ಲಿಯೂ ಅಥರ್ವವೇದದ ಉಲ್ಲೇಖವಿಲ್ಲದಿರುವುದು ಗಮನಾರ್ಹ

---

26. ನಿರುಕ್ತ-1-20
27. 'ಸೋಯಮೇಕೋ ಯಥಾ ವೇದಸ್ತರುಸ್ತೇನ ಪೃಥ ಕೃತಃ |
ಚತುರ್ಧಾಥ ತತೋ ಜಾತಂ ವೇದಪಾದಪಕಾನನಮ್ || (ವಿ. ಪು. 3-4-15)
28. ವಿವ್ಯಾಸ ವೇದಾನ್ಯಸ್ಮಾತ್ಸಃ ವೇದವ್ಯಾಸ ಇತೀರಿತಃ
29. (೧) 'ತಸ್ಮಾದ್ಯಜ್ಞಾತ್ ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ |' (ಋ. ಸಂ. 10-90)
(೨) ಋಚಃ ಸಾಮಾನಿ ಛಂದಾಂಸಿ ಪುರಾಣಂಯಜುಷಾ ಸಹ |
ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿ ದೇವಾ ದಿವಿಶ್ರಿತಃ || (ಅ. ಸಂ. 1-7-24)

ವಾಗಿದೆ.[30] ಈ ಋತ್ವಿಕ್ಕುಗಳು[31] ಬಳಸುತ್ತಿದ್ದ ವೇದಗಳನ್ನು ಆಪಸ್ತಂಬರು–

'ಋಗ್ವೇದೇನ ಹೋತಾಕರೋತಿ | ಯಜುರ್ವೇದೇನಾಧ್ವರ್ಯುಃ |
ಸಾಮವೇದೇನೋದ್ಗಾತಾ | ಸರ್ವೈ ರ್ಬ್ರಹ್ಮಾ' || ಎಂದು ಹೇಳಿದ್ದಾರೆ.

ಐತರೇಯ ಬ್ರಾಹ್ಮಣದಲ್ಲಿ–'ಯದೃಚೈವ ಹೋತ್ರಂ ಕ್ರಿಯತೇ, ಯಜುಷಾಧ್ವರ್ಯವಂ, ಸಾಮ್ನೋದ್ಗೀಥಂ ವ್ಯಾರಬ್ಧಾ ತ್ರಯೀ ವಿದ್ಯಾ ಭವತೀ | ಅಥ ಕೇನ ಬ್ರಹ್ಮತ್ವಂ ಕ್ರಿಯತೇ ಇತಿ ತ್ರಯ್ಯಾ ವಿದ್ಯಯಾ ಇತಿ ಬ್ರೂಯಾತ್ |' ಎಂದೇ ಉಲ್ಲೇಖವಿದೆ. (ಐ.ಬ್ರಾ.5-33)

'ಸ ಚ ಬ್ರಹ್ಮಾ ವೇದತ್ರಯೋಕ್ತಸರ್ವಕರ್ಮಾಭಿಜ್ಞಃ' ಎಂದು ಸಾಯಣರು ತಮ್ಮ ಋಗ್ವೇದ ಭಾಷ್ಯಭೂಮಿಕೆಯಲ್ಲಿ ಹೇಳುತ್ತಾರೆ. ಇವುಗಳೆಲ್ಲದರಿಂದ ಅಥರ್ವವೇದವು ನೇರವಾಗಿ ಯಾಗಕ್ಕೆ ಸಂಬಂಧಿಸಿರಲಿಲ್ಲವೆಂಬುದು ಸಿದ್ಧವಾಗುತ್ತದೆ. ಆದುದರಿಂದಲೇ ಈ ವೇದ ಇತರ ವೇದಗಳಿಗಿಂತ ಈಚಿನ ಕಾಲಕ್ಕೆ ಸೇರಿದುದೆಂದು ಆಧುನಿಕ ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಅಪಾರವಾದ ಈ ವೇದವಾಙ್ಮಯವನ್ನು ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು ಎಂದು ನಾಲ್ಕು ಸ್ಕಂಧಗಳಾಗಿ ವಿಭಾಗಿಸಿದ್ದಾರೆ. ಒಂದೊಂದು ವೇದಕ್ಕೂ ತನ್ನದೇ ಆದ ಸಂಹಿತೆಗಳು, ಬ್ರಾಹ್ಮಣ ಹಾಗೂ ಆರಣ್ಯಕೋಪನಿಷತ್ತುಗಳಿವೆ. ಈಗ ಇವುಗಳನ್ನು ಕೆಳಗೆ ಸಂಗ್ರಹವಾಗಿ ನಿರೂಪಿಸಿದೆ.

### (ಅ) ಸಂಹಿತೆಗಳು

ಬೇರೆ ಬೇರೆ ಋಷಿಗಳಿಂದ ದೃಷ್ಟವಾದ ಮಂತ್ರಗಳನ್ನು ಒಂದೇ ಕಡೆ ಸೇರಿಸಿರುವುದು ಸಂಹಿತೆ ಎನ್ನಿಸಿಕೊಳ್ಳುವುದು.[32] ಋಗ್ವೇದ ಸಂಹಿತೆಯಲ್ಲಿ 1028 ಸೂಕ್ತಗಳಿವೆ ; 10552 ಮಂತ್ರಗಳಿವೆ. ಈ ಮಂತ್ರಗಳೆಲ್ಲಾ ಛಂದೋಬದ್ಧವಾಗಿ ತ್ರಿಷ್ಟುಪ್, ಜಗತೀ, ಅನುಷ್ಟುಪ್, ಗಾಯತ್ರೀ ಮೊದಲಾದ ಛಂದಸ್ಸುಗಳಲ್ಲಿವೆ. ಯಜುರ್ವೇದ ಸಂಹಿತೆ ನಿಯತವಾಗಿ ಛಂದೋಬದ್ಧವಾಗಿಲ್ಲ.[33] ಈ ವೇದ ಶುಕ್ಲಯಜುರ್ವೇದ ಮತ್ತು ಕೃಷ್ಣಯಜುರ್ವೇದ ಎಂದು ಎರಡು ಬಗೆಯಾಗಿದೆ. ಶುಕ್ಲಯಜುಸ್ಸಂಹಿತೆ ಕಾಣ್ವ ಮತ್ತು ಮಾಧ್ಯಂದಿನ ಎಂದು ಎರಡು ಪಾಠಗಳಲ್ಲಿ ಉಪಲಬ್ಧವಾಗಿದೆ. ಶುಕ್ಲಯಜುರ್ವೇದ ಸಂಹಿತೆ ಪೂರ್ಣವಾಗಿ ಛಂದೋಬದ್ಧವಾಗಿದೆ. ಇದರಲ್ಲಿ 40 ಅಧ್ಯಾಯಗಳೂ 303 ಅನುವಾಕಗಳೂ 1905 ಮಂತ್ರಗಳೂ ಇವೆ. ಕೃಷ್ಣಯಜುರ್ವೇದ ಸಂಹಿತೆ ಗದ್ಯಪದ್ಯಮಿಶ್ರಿತವಾಗಿದೆ. ಇದು ಕಠ, ಕಪಿಷ್ಠಲ, ಕಾಲಾಪ ಅಥವಾ ಮೈತ್ರಾಯಣೀಯ ಮತ್ತು ತೈತ್ತರೀಯ ಎಂಬ ಶಾಖೆಗಳಲ್ಲಿ

30. ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್
ಗಾಯತ್ರಂ ತ್ವೋಗಾಯತಿ ಶಕ್ವರೀಷು |
ಬ್ರಹ್ಮಾ ತ್ವೋವದತಿ ಜಾತವಿದ್ಯಾಂ
ಯಜ್ಞಸ್ಯ ಮಾತ್ರಾಂ ವಿಮಮೀತ ಉತ್ವಃ ||– (ಋ. ಸಂ. 10-71-11)
31. ಯಾಗದಲ್ಲಿ ಋತ್ವಿಜರು ನಾಲ್ಕು ಗುಂಪುಗಳಾಗಿರುವರು. ಅವರು ಯಾರೆಂದರೆ:–
೧. ಹೋತೃಗಣ–ಹೋತಾ (ಮುಖ್ಯ), ಮೈತ್ರಾವರುಣ, ಅಚ್ಛಾವಾಕ, ಗ್ರಾವಸ್ತುತ್.
೨. ಅಧ್ವರ್ಯುಗಣ–ಅಧ್ವರ್ಯು (ಮುಖ್ಯ), ಪ್ರತಿಪ್ರಸ್ಥಾತಾ, ನೇಷ್ಟಾ, ಉನ್ನೇತಾ.
೩. ಉದ್ಗಾತೃಗಣ–ಉದ್ಗಾತಾ (ಮುಖ್ಯ), : ಪ್ರಸ್ತೋತಾ, ಪ್ರತಿಹರ್ತಾ, ಸುಬ್ರಹ್ಮಣ್ಯ.
೪. ಬ್ರಹ್ಮಗಣ–ಬ್ರಹ್ಮಾ (ಮುಖ್ಯ) ಬ್ರಾಹ್ಮಣಾಚ್ಛಂಸೀ, ಆಗ್ನೀಧ್ರ, ಪೋತಾ.
32. ನಿರುಕ್ತ 7-12 ರಲ್ಲಿ ಇವುಗಳ ನಿರ್ವಚನವನ್ನು ನೋಡಬಹುದು.
33. 'ಅನಿಯತಾಕ್ಷರಾವಸಾನೋ ಯಜುಃ' 'ಗದ್ಯಾತ್ಮಕೋ ಯಜುಃ' ಎಂದು ಇದನ್ನು ಹೇಳಲಾಗಿದೆ.

ಉಪಲಬ್ಧವಾಗಿದೆ. ಮೈತ್ರಾಯಣೀಯ ಸಂಹಿತೆಯಲ್ಲಿ ನಾಲ್ಕು ಕಾಂಡಗಳೂ 54 ಪ್ರಪಾಠಕಗಳೂ ಇದ್ದು ಕಾಠಕ ಸಂಹಿತೆಗಿಂತ ಸ್ವಲ್ಪ ಭಿನ್ನವಾಗಿದೆ. ತೈತ್ತಿರೀಯ ಶಾಖೆಯ ಸಂಹಿತೆಯಲ್ಲಿ 7 ಅಷ್ಟಕಗಳೂ (ಅಥವಾ ಕಾಂಡ) 44 ಪ್ರಪಾಠಕಗಳು ಅಥವಾ ಅಧ್ಯಾಯಗಳೂ ಇವೆ. ಈ ಒಂದೊಂದು ಅಧ್ಯಾಯದಲ್ಲಿಯೂ ಅನೇಕಾನೇಕ ಅನುವಾಕಗಳಿವೆ. ಈ ಅನುವಾಕಗಳ ಕೊನೆಯಲ್ಲಿ ಆಯಾ ಅನುವಾಕಗಳ ಪದಸಂಖ್ಯೆಯನ್ನು ಕೊಟ್ಟಿರುವುದು ಇದರ ವೈಶಿಷ್ಟ್ಯ. ಗದ್ಯಗಾಥೆಗಳು ಇದರಲ್ಲಿ ಹೆಚ್ಚಾಗಿರುವುದರಿಂದ ಇದಕ್ಕೆ ಅನುಕ್ರಮಣಿಕೆಗಳನ್ನು ರಚಿಸಿಲ್ಲ. ಈ ಸಂಹಿತೆಯಲ್ಲಿ ಒಟ್ಟು 651 ಅನುವಾಕಗಳು 110296 ಪದಗಳೂ ಇವೆ, ಅಧ್ವರ್ಯುವಿಗೆ ಉಪಯುಕ್ತವಾದ ಮಂತ್ರಗಳನ್ನೆಲ್ಲಾ ಈ ಸಂಹಿತೆಯಲ್ಲಿ ಸೇರಿಸಲಾಗಿದೆ. ಕೃಷ್ಣ ಯಜುರ್ವೇದದಲ್ಲಿ ಮಂತ್ರಗಳನ್ನೂ ಅವುಗಳ ವಿನಿಯೋಗವನ್ನೂ ತಿಳಿಸುವ ಬ್ರಾಹ್ಮಣಗಳನ್ನೂ ಜೊತೆಜೊತೆಯಾಗಿ ಕೊಡಲಾಗಿದೆ.

ಸಾಮವೇದ ಉದ್ಗಾತೃವೇದ. ಸೋಮಯಾಗದಲ್ಲಿ ಸೋಮಾಭಿಷವ ಮಾಡುವಾಗ ಸಾಮಗಳನ್ನು ಹಾಡುತ್ತಿದ್ದರು. ಈ ಸಾಮಗಳನ್ನು ಉದ್ಗಾತೃ ಮಧುರವಾಗಿ ಹಾಡುತ್ತಿದ್ದನು. ಸಾಮವೇದ ಸಂಹಿತೆಯಲ್ಲಿ ಒಟ್ಟು 1549 ಮಂತ್ರಗಳಿವೆ. ಇವುಗಳನ್ನು ಆರ್ಚಿಕಾ ಮತ್ತು ಉತ್ತರಾರ್ಚಿಕಾ ಎಂದು ಎರಡು ಭಾಗ ಮಾಡಿದ್ದಾರೆ. ಆರ್ಚಿಕೆಯಲ್ಲಿ 585 ಮಂತ್ರಗಳೂ ಉತ್ತರಾರ್ಚಿಕೆಯಲ್ಲಿ 964 ಮಂತ್ರಗಳೂ ಇವೆ. ಇವುಗಳಲ್ಲಿ 75 ಮಂತ್ರಗಳನ್ನು ಬಿಟ್ಟರೆ ಉಳಿದ 1474 ಮಂತ್ರಗಳೂ ಋಗ್ವೇದದಿಂದಲೇ ಆರಿಸಿಕೊಂಡವಾಗಿವೆ. ಈ ಸಾಮಗಾನ ಸಂಗೀತಶಾಸ್ತ್ರದ ಮೂಲವೆಂದು ಹೇಳಬಹುದು.

ಅಥರ್ವಸಂಹಿತೆ ಇತರ ಸಂಹಿತೆಗಳಿಗಿಂತ ವಿಲಕ್ಷಣವಾಗಿದೆ. ಇಲ್ಲಿನ ಅನೇಕ ಮಂತ್ರಗಳು ಋಗ್ವೇದ ಮಂತ್ರಗಳೇ ಆಗಿವೆ. ಇನ್ನು ಕೆಲವು ಋಗ್ವೇದ ಮಂತ್ರಗಳಿಗಿಂತ ಪ್ರಾಚೀನವಾದವೂ ಇರಬಹುದು. ಈ ಸಂಹಿತೆಯಲ್ಲಿ ಅಭಿಚಾರಪ್ರಯುಕ್ತವಾದ ಮಂತ್ರಗಳೇ ಹೆಚ್ಚಾಗಿವೆ. ಯಾಜ್ಞಿಕವಾದ ಸೂಕ್ತಗಳೂ ಹಲವಾರಿವೆ. ಈ ಸಂಹಿತೆಗೆ ಅಥರ್ವಾಂಗಿರಸ, ಭೃಗ್ವಂಗಿರಸ ಎಂಬ ಹೆಸರುಗಳೂ ರೂಢಿಯಲ್ಲಿವೆ. ಈ ಸಂಹಿತೆಯ ಶೌನಕೀಯ ಶಾಖೆಯಲ್ಲಿ 20 ಕಾಂಡಗಳೂ 731 ಸೂಕ್ತಗಳೂ 5038 ಮಂತ್ರಗಳೂ ಇವೆ.

### (ಆ) ಬ್ರಾಹ್ಮಣಗಳು

ಸಂಹಿತೆಯ ಮಂತ್ರಗಳನ್ನು ಯಜ್ಞಗಳಲ್ಲಿ ಉಪಯೋಗಿಸುವ ವಿಧಾನವನ್ನು ಬ್ರಾಹ್ಮಣ ಗ್ರಂಥಗಳು ತಿಳಿಸುವುವು.[34] ಪ್ರತಿಯೊಂದು ವೇದದ ಶಾಖೆಗೂ ಸಂಬಂಧಿಸಿದಂತೆ ಬ್ರಾಹ್ಮಣ ಗ್ರಂಥಗಳಿವೆ. ಋಗ್ವೇದಕ್ಕೆ ಸಂಬಂಧಪಟ್ಟಂತೆ ಐತರೇಯ ಬ್ರಾಹ್ಮಣ, ಕೌಷೀತಕಿ ಬ್ರಾಹ್ಮಣ ಎಂದು ಎರಡು ಬ್ರಾಹ್ಮಣಗಳಿವೆ. ಐತರೇಯ ಬ್ರಾಹ್ಮಣದಲ್ಲಿ 40 ಅಧ್ಯಾಯಗಳಿವೆ. ಅಗ್ನಿಷ್ಟೋಮ, ಉಕ್ಥ್ಯ, ಷೋಡಶ, ಅತಿರಾತ್ರ, ದರ್ಶ–ಪೌರ್ಣಮಾಸ ಮೊದಲಾದ ಯಾಗಗಳ ವಿಚಾರ ಇಲ್ಲಿದೆ. ಕೌಷೀತಕಿ ಬ್ರಾಹ್ಮಣದಲ್ಲಿ 30 ಅಧ್ಯಾಯಗಳಿವೆ. ದರ್ಶಪೌರ್ಣಮಾಸಾದಿ ಯಾಗಗಳ ಮತ್ತು ಸೋಮಯಾಗದ ವಿಧಾನವನ್ನು ಇಲ್ಲಿ ಹೇಳಿದೆ.

ಸಾಮವೇದಕ್ಕೆ ತಾಂಡ್ಯಬ್ರಾಹ್ಮಣ, ಷಡ್ವಿಂಶಬ್ರಾಹ್ಮಣ, ಜೈಮಿನೀಯ ಅಥವಾ

34. 'ವಿಧಾಯಕಂ ವಾಕ್ಯಂ ಬ್ರಾಹ್ಮಣಂ'. ಮಂತ್ರವಲ್ಲದುದು ಬ್ರಾಹ್ಮಣ ಎಂದು ಜೈಮಿನಿಗಳು ಪೂರ್ವಮೀಮಾಂಸಾ ಸೂತ್ರದಲ್ಲಿ 'ಶೇಷೇ ಬ್ರಾಹ್ಮಣ ಶಬ್ದಃ' (ಜೈ. ಸೂ. 2-1-33) ಎಂದು ಹೇಳಿದ್ದಾರೆ. 'ಮಂತ್ರ ವ್ಯತಿರಿಕ್ತಭಾಗೇ ತು ಬ್ರಾಹ್ಮಣಶಬ್ದಸ್ಯೈರ್ವವಹೃತಃ'–ಸಾಯಣಭಾಷ್ಯ ಭೂಮಿಕೆ

ತಲವಕಾರಬ್ರಾಹ್ಮಣ, ಮಂತ್ರಬ್ರಾಹ್ಮಣ, ದೈವತಬ್ರಾಹ್ಮಣ, ಸಾಮವಿಧಾನಬ್ರಾಹ್ಮಣ, ಸಂಹಿತೋಪನಿಷದ್ಬ್ರಾಹ್ಮಣ, ಆರ್ಷಬ್ರಾಹ್ಮಣ ಮತ್ತು ವಂಶಬ್ರಾಹ್ಮಣ ಎಂಬ ಬ್ರಾಹ್ಮಣ ಗ್ರಂಥಗಳು ಸೇರಿವೆ. ತಾಂಡ್ಯಬ್ರಾಹ್ಮಣದಲ್ಲಿ 25 ಅಧ್ಯಾಯಗಳಿವೆ. ಷಡ್ವಿಂಶ ಬ್ರಾಹ್ಮಣ ಇದರ ಮುಂದಿನ ಭಾಗವಾಗಿದೆ.

ಯಜುರ್ವೇದಬ್ರಾಹ್ಮಣಗಳಲ್ಲಿ ಶುಕ್ಲಯಜುರ್ವೇದಕ್ಕೆ ಸೇರಿದ ಶತಪಥ ಬ್ರಾಹ್ಮಣ ವೈದಿಕಸಾಹಿತ್ಯದಲ್ಲಿ ಪ್ರಧಾನವಾದುದಾಗಿದೆ. ಇದರಲ್ಲಿ 14 ಕಾಂಡಗಳೂ 100 ಅಧ್ಯಾಯಗಳೂ ಇವೆ. ಕೃಷ್ಣಯಜುರ್ವೇದಕ್ಕೆ ತೈತ್ತಿರೀಯಬ್ರಾಹ್ಮಣ ಸೇರಿದೆ. ಕಠಶಾಖೆ ಮತ್ತು ಮೈತ್ರಾಯಣೀಯಶಾಖೆಗೆ ಬೇರೆ ಬ್ರಾಹ್ಮಣಭಾಗಗಳಿಲ್ಲ. ಸಂಹಿತೆಗೆ ಸೇರಿದ ಗದ್ಯಭಾಗಗಳೇ ಈ ಶಾಖೆಗಳ ಬ್ರಾಹ್ಮಣಗಳಾಗಿವೆ.

ಅಥರ್ವವೇದಕ್ಕೆ ಸೇರಿರುವ ಬ್ರಾಹ್ಮಣ ಗೋಪಥಬ್ರಾಹ್ಮಣ. ಈ ಬ್ರಾಹ್ಮಣ ಸಂಹಿತೆಯ ಮಂತ್ರಗಳ ವಿನಿಯೋಗವನ್ನು ಕ್ರಮವಾಗಿ ತಿಳಿಸುವ ಬದಲು ಕೌಶಿಕ ಸೂತ್ರಕ್ಕನುಗುಣ ವಾಗಿರುವುದು ಇದರ ವೈಶಿಷ್ಟ್ಯ.

ಹೀಗೆ ಈ ಬ್ರಾಹ್ಮಣ ಗ್ರಂಥಗಳು ಸಂಹಿತೆಗಳಿಗಿಂತ ವಿಲಕ್ಷಣವಾದ ಸ್ವರೂಪವನ್ನು ಪ್ರತಿಬಿಂಬಿಸುತ್ತವೆ. ಭಾರತದ ಅತ್ಯಂತ ಪ್ರಾಚೀನವಾದ ಗದ್ಯಶೈಲಿಯ ಪರಿಚಯ ಇದರಿಂದಾಗುತ್ತವೆ. ಸಂಹಿತೆಗಳಲ್ಲಿನ ಮಂತ್ರಗಳ ವಿನಿಯೋಗವನ್ನು ತಿಳಿಸುವ ಸಂದರ್ಭದಲ್ಲಿ ಇವು ಯಾಗಾದಿಗಳನ್ನು ವಿವರಿಸುವುದಲ್ಲದೆ ಪ್ರಾಸಂಗಿಕವಾಗಿ ಕೆಲವು ಶಬ್ದಗಳ ನಿರ್ವಚನವನ್ನೂ ಮಾಡಿವೆ. ಅವುಗಳ ಗೂಢಾರ್ಥವಿವರಣೆ ಮಾಡಿ ಯಜ್ಞಗಳಲ್ಲಿ ಅವುಗಳನ್ನು ಪ್ರಯೋಗಿಸಿದ ಆಖ್ಯಾನಗಳನ್ನು ಹೇಳುತ್ತವೆ. ನಿರುಕ್ತಕಾರ ಯಾಸ್ಕರು ಅನೇಕ ಕಡೆ ನಿರ್ವಚನ ಮಾಡುವಾಗ 'ಇತಿ ಹ ಬ್ರಾಹ್ಮಣಮ್' ಎಂದು ಬ್ರಾಹ್ಮಣ ವಾಕ್ಯಗಳನ್ನು ಉದ್ಧರಿಸಿದ್ದಾರೆ.

ಬ್ರಾಹ್ಮಣ ಸ್ಕಂಧವಾದ ಮೇಲೆ ಬರುವುದು ಆರಣ್ಯಕೋಪನಿಷತ್ತುಗಳ ಸ್ಕಂಧ. ಅರಣ್ಯದಲ್ಲಿ ಅಧ್ಯಯನ ಮಾಡಬೇಕಾದ ಅಂಶಗಳನ್ನು ಆರಣ್ಯಕಗಳು ವಿವೇಚಿಸುವುವು. ವಾನಪ್ರಸ್ಥರು ಅರಣ್ಯದಲ್ಲಿ ಅನುಸರಿಸಬೇಕಾದ ಗೂಢಾರ್ಥಚಿಂತನೆಗಳ ವಿಚಾರ ಇಲ್ಲಿದೆ. ಇವು ಕೇವಲ ಕರ್ಮವನ್ನು ವಿವೇಚಿಸುವ ಬ್ರಾಹ್ಮಣಗಳಿಗಿಂತ ಬೇರೆಯಾಗಿವೆ. ಈ ಆರಣ್ಯಕಗಳು ಒಂದೊಂದು ಬ್ರಾಹ್ಮಣಕ್ಕೂ ಸೇರಿದಂತೆ ಬೇರೆಬೇರೆಯಾಗಿವೆ.

ಈ ಆರಣ್ಯಕಗಳ ಕೊನೆಯ ಭಾಗಗಳೇ ಉಪನಿಷತ್ತುಗಳು. ವೇದಾಂತಗಳೆಂಬ ಹೆಸರು ಇವಕ್ಕಿದೆ. ಇಂದು ಇವೇ ಹೆಚ್ಚಾಗಿ ಪ್ರಚಾರದಲ್ಲಿರುತ್ತಿವೆ. ವೇದಧರ್ಮದ ಅತ್ಯುನ್ನತವಾದ ಆದರ್ಶ ಮತ್ತು ಸಿದ್ಧಿಗಳನ್ನು ಪ್ರತಿಪಾದಿಸಿ ಇವು ಮೋಕ್ಷಶಾಸ್ತ್ರಗಳೆನಿಸಿವೆ. ಪರಬ್ರಹ್ಮವಸ್ತುವಿನ ಸ್ವರೂಪಸ್ವಭಾವವನ್ನು ನಿರೂಪಿಸುವ ಈ ಭಾಗಗಳು ವೇದಗಳ ಸಾರಸರ್ವಸ್ವವಾಗಿವೆ. ಎಲ್ಲ ಶಾಸ್ತ್ರಗಳಿಗೂ ಮೂರ್ಧನ್ಯಪ್ರಾಯವಾಗಿವೆ. ಈ ಉಪನಿಷತ್ತುಗಳ ವಿಚಾರಧಾರೆ ಉಳಿದ ಭಾಗಗಳಿಗಿಂತ ಭಿನ್ನವಾಗಿ ಆತ್ಮಜ್ಞಾನ ಮತ್ತು ವಿಶ್ವಾತ್ಮಜ್ಞಾನವನ್ನು ಪ್ರತಿಪಾದಿಸಿ ಭಾರತದ ಸಂಸ್ಕೃತಿಯ ಅತ್ಯುನ್ನತ ಮಟ್ಟವನ್ನು ಪ್ರತಿಬಿಂಬಿಸುತ್ತದೆ. ಉಪನಿಷತ್ತುಗಳು ಬ್ರಾಹ್ಮಣ ಗ್ರಂಥಗಳ ಕೊನೆಯ ಭಾಗಗಳಾದರೂ ಕರ್ಮವಿಚಾರವನ್ನು ಬಿಟ್ಟು ಜ್ಞಾನಪ್ರತಿಪಾದಕಗಳಾಗಿವೆ. ಗುರುವಿನ ಸಮೀಪದಲ್ಲಿ ಕುಳಿತು ಭಕ್ತಿಯಿಂದ ಇವನ್ನು ಕಲಿಯಬೇಕಾದುದರಿಂದ ಇವು ಉಪನಿಷತ್ತುಗಳೆಂಬ ಹೆಸರನ್ನು ಪಡೆದವು. ಪ್ರತಿ ವೇದಶಾಖೆಗೂ ಬೇರೆಬೇರೆ ಉಪನಿಷತ್ತುಗಳಿವೆ. ಋಗ್ವೇದಕ್ಕೆ ಐತರೇಯ ಮತ್ತು ಕೌಷೀತಕಿ ಉಪನಿಷತ್ತುಗಳು ಸೇರಿವೆ. ಸಾಮವೇದಕ್ಕೆ

ಛಾಂದೋಗ್ಯ ಮತ್ತು ಕೇನೋಪನಿಷತ್ತುಗಳೂ ಕೃಷ್ಣಯಜುರ್ವೇದಕ್ಕೆ ಕಠ, ಶ್ವೇತಾಶ್ವತರ, ಮೈತ್ರಾಯಣೀಯ, ತೈತ್ತಿರೀಯ ಮತ್ತು ಮಹಾನಾರಾಯಣೀಯ ಉಪನಿಷತ್ತುಗಳೂ, ಶುಕ್ಲಯಜುರ್ವೇದಕ್ಕೆ ಬೃಹದಾರಣ್ಯಕ ಮತ್ತು ಈಶಾವಾಸ್ಯೋಪನಿಷತ್ತುಗಳೂ, ಅಥರ್ವವೇದಕ್ಕೆ ಮುಂಡಕ, ಪ್ರಶ್ನ ಮತ್ತು ಮಾಂಡೂಕ್ಯೋಪನಿಷತ್ತುಗಳೂ ಸೇರಿವೆ.

ಈ ಉಪನಿಷತ್ತುಗಳ ವಿಚಾರಧಾರೆ ಅನುಪಮವಾಗಿದೆ. ಈ ಪ್ರಪಂಚವೆಂಬುದೇನು ? ನಾವಾರು ? ಮರಣಾನಂತರ ನಮ್ಮ ಸ್ಥಿತಿ ಏನು ? ಇವೇ ಮೊದಲಾದ ಪ್ರಶ್ನೆಗಳಿಗೆ ನಿರ್ದಿಷ್ಟವಾದ ಉತ್ತರಗಳು ಇಲ್ಲಿವೆ. ಹಿಂದೂದರ್ಶನಗಳಲ್ಲಿ ಮುಖ್ಯವಾದ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ ಮತ್ತು ವೇದಾಂತ ದರ್ಶನಗಳು ಈ ಉಪನಿಷತ್ತಿನ ತತ್ತ್ವಜ್ಞಾನವನ್ನೇ ಆಧಾರವಾಗಿ ಹೊಂದಿವೆ ಎಂಬುದು ಗಮನಾರ್ಹವಾಗಿದೆ. ಇವುಗಳಲ್ಲಿ ನಾಸ್ತಿಕ ದರ್ಶನಗಳ ಅಂಕುರಗಳೂ ಅಲ್ಲಲ್ಲಿ ತೋರುವುವು.[35]

ಹೀಗೆ ವೇದಸಾಹಿತ್ಯ ಸಂಹಿತಾ, ಬ್ರಾಹ್ಮಣ ಮತ್ತು ಆರಣ್ಯಕೋಪನಿಷತ್ತುಗಳಲ್ಲಿ ಅಗಾಧವಾದ ಗ್ರಂಥ ಭಾಗಗಳನ್ನು ಒಳಗೊಂಡಿದೆ. ನಮಗೆ ಇಂದು ಉಪಲಬ್ಧವಾಗಿರುವ ಭಾಗಗಳು ಮೂಲವೇದದ ಸಹಸ್ರಾಂಶವೂ ಆಗಿಲ್ಲವೆಂಬುದನ್ನು ನಾವು ನೆನಪಿನಲ್ಲಿಡಬೇಕು. 'ಅನಂತಾ ವೈ ವೇದಾಃ' ಎಂಬ ನುಡಿ ಇದನ್ನು ಸೂಚಿಸುತ್ತದೆ. ಆಧುನಿಕ ವಿಮರ್ಶಕರ ಅಭಿಪ್ರಾಯವೂ ಇದೇ ಆಗಿದೆ.[36] ಈಗ ವೇದ ಭಾಗಗಳ ವಿಚಾರಗಳನ್ನು ಕೆಳಗಿನ ಪಟ್ಟಿಕೆಯಲ್ಲಿ ಸಂಗ್ರಹಿಸಿದೆ.

## ವೇದಪ್ರಾಮಾಣ್ಯ—ಪ್ರಾಚೀನ ಮತ

ವೇದಪ್ರಾಮಾಣ್ಯವನ್ನು ಅಂಗೀಕರಿಸುವ ದರ್ಶನಗಳು ಆಸ್ತಿಕ ದರ್ಶನಗಳೆಂದೂ ವೇದಪ್ರಾಮಾಣ್ಯವನ್ನು ಒಪ್ಪದ ದರ್ಶನಗಳು ನಾಸ್ತಿಕದರ್ಶನಗಳೆಂದೂ ಪ್ರಾಚೀನರು ದರ್ಶನಗಳನ್ನು ವಿಭಾಗಮಾಡಿದ್ದಾರೆ. ಚಾರ್ವಾಕ, ಜೈನ ಮತ್ತು ಬೌದ್ಧ ದರ್ಶನಗಳು ವೇದಪ್ರಾಮಾಣ್ಯವನ್ನಂಗೀಕರಿಸುವುದಿಲ್ಲ. ಉಳಿದ ದರ್ಶನಗಳು ಬಹಳ ಹಿಂದಿನಿಂದಲೂ ವೇದಗಳ ಪ್ರಾಮಾಣ್ಯವನ್ನು ಅಂಗೀಕರಿಸಿವೆ. ಷಡ್ದರ್ಶನಗಳೆಂದು ಪ್ರಸಿದ್ಧವಾಗಿರುವ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಾ ಮತ್ತು ಉತ್ತರಮೀಮಾಂಸಾ ದರ್ಶನಗಳಲ್ಲಿ ಕೊನೆಯ ಎರಡು ದರ್ಶನಗಳು ನೇರವಾಗಿ ವೇದಗಳ ಆಧಾರದಿಂದಲೇ ಮೂಡಿವೆ. ಪೂರ್ವಮೀಮಾಂಸಾದರ್ಶನಕ್ಕೆ ಬ್ರಾಹ್ಮಣ ಭಾಗಗಳು ಪರಮಾಧಾರವಾದರೆ ಉತ್ತರ

---

35. 'It is generally believed that the Upanishads teach a system of Pantheism ; but a close examination will show that they teach not one, but various systems of doctrines as regards the nature of God, man and the world and the relations between them. The Religio-Philosophical system of modern times which are mutually inconsistent, quote texts from the Upanishads as an authority for their special doctrines.'

–*Vaisnavism, Shaivism and Minor Religious Systems*
*Dr. R. G Bhandarkar.*

36. 'We have no right to suppose that we have even a hundredth part of the religious and popular poetry that existed during the Vedic Age'.

–*Six Systems of Indian Philosophy, Maxmuller,* p.41

ಮೀಮಾಂಸಾದರ್ಶನಕ್ಕೆ ಉಪನಿಷತ್ತುಗಳು ಪರಮಾಧಾರವಾಗಿವೆ. ಈ ದರ್ಶನಗಳೆಲ್ಲವೂ ತಮ್ಮದೇ ಆದ ರೀತಿಯಲ್ಲಿ ವೇದಪ್ರಾಮಾಣ್ಯವನ್ನು ಅಂಗೀಕರಿಸಿವೆ.

ಶ್ರೀಮತ್ಸಾಯಣಾಚಾರ್ಯರು ತಮ್ಮ ಋಗ್ವೇದ ಭಾಷ್ಯಭೂಮಿಕೆಯಲ್ಲಿ ವೇದ ಪ್ರಾಮಾಣ್ಯದ ವಿಚಾರವನ್ನು ಚರ್ಚಿಸಿದ್ದಾರೆ. ಪೂರ್ವಮೀಮಾಂಸಾ ದರ್ಶನಕಾರರಾದ ಜೈಮಿನಿಗಳು ತಮ್ಮ ಸೂತ್ರಗಳಲ್ಲಿ ವೇದಪ್ರಾಮಾಣ್ಯವನ್ನು ಕುರಿತು ವಿವೇಚಿಸಿದ್ದಾರೆ. ಇವರುಗಳ ಅಭಿಪ್ರಾಯದಂತೆ ಮಂತ್ರಬ್ರಾಹ್ಮಣಾತ್ಮಕವಾದ ಶಬ್ದರಾಶಿಯೇ ವೇದ. ಇದು ಸಮಗ್ರವಾಗಿ ಪರಮ ಪ್ರಮಾಣ. ವೇದಪ್ರಾಮಾಣ್ಯವನ್ನು ಒಪ್ಪದವರ ವಾದ ಕೆಳಗೆ ಕಂಡಂತೆ ಇದೆ :

(ಅ) ಯಾವ ಸಾಧನವು ನಮ್ಮ ಅನುಭವಕ್ಕೊಳಪಡುವುದೋ ಅದು ಪ್ರಮಾಣ.[37] ಮತ್ತೊಂದು ಸಾಧನದಿಂದ ತಿಳಿಯಲಾಗದ ಅರ್ಥಗಳನ್ನು ಯಾವ ಸಾಧನವು ಬೋಧಿಸುವುದೋ ಅದು ಪ್ರಮಾಣ.[38] ಮಂತ್ರಬ್ರಾಹ್ಮಣಾತ್ಮಕವಾದ ವೇದರಾಶಿಯಿಂದ ಇಂಥ ಯಾವ ವಿಧವಾದ ಪ್ರಯೋಜನವೂ ದೊರೆಯದ ಕಾರಣ ಅದು ಪ್ರಮಾಣವಲ್ಲ.

(ಆ) ಯಾವ ಅರ್ಥವನ್ನೂ ಬೋಧಿಸದ ಮಂತ್ರಗಳು ವೇದದಲ್ಲಿ ಅನೇಕವಿದೆ. 'ಸೃಣ್ಯೇವ ಜರ್ಭರೀ ತುರ್ಫರೀತೂ' ಮೊದಲಾದವು ಇಂಥವು. ಇವುಗಳಿಗೆ ಅರ್ಥವೇ ಇಲ್ಲವೆಂದ ಮೇಲೆ ಯಾವುದನ್ನು ತಾನೇ ಇವು ಅನುಭವಕ್ಕೊಳಪಡಿಸುವುವು?

(ಇ) ಕೆಲವು ಮಂತ್ರಗಳಿಗೆ ಸಮೀಚೀನವಾದ ಅರ್ಥವಿಲ್ಲ ; ಕೆಲವಕ್ಕೆ ವಿರುದ್ಧಾರ್ಥವೇ ಉಂಟಾಗುತ್ತದೆ; ಮತ್ತೆ ಕೆಲವು ಮಂತ್ರಗಳ ಅರ್ಥ ಅನುಪಪನ್ನವಾಗುತ್ತದೆ; ಕೆಲವು ಮಂತ್ರಗಳಂತೂ ಸರ್ವಜನವಿದಿತವಾದ ಸಾಮಾನ್ಯಾರ್ಥಗಳನ್ನೇ ಹೇಳುತ್ತವೆಯೇ ವಿನಾ ಅಪೂರ್ವವಾದ ಅರ್ಥವನ್ನು ಹೇಳುವುದೇ ಇಲ್ಲ. ಈ ಮೇಲಿನ ಕಾರಣಗಳಿಂದಾಗಿ ಮಂತ್ರಭಾಗಗಳು ಅಪ್ರಮಾಣ ; ಮಂತ್ರಗಳು ಹೇಗೋ ಹಾಗೆ ಬ್ರಾಹ್ಮಣಭಾಗಗಳೂ ಸಹ ಪ್ರಮಾಣವಲ್ಲ. ಬ್ರಾಹ್ಮಣಭಾಗಗಳು ಎರಡು ಬಗೆ ವಿಧಿ ಮತ್ತು ಅರ್ಥವಾದ ಎಂಬುದಾಗಿ[39] ಇವೆರಡೂ ಅಪ್ರಮಾಣವೇ. ವಿಧಿಗಳು ಅಪ್ರವೃತ್ತಪ್ರವರ್ತನ ಮತ್ತು ಅಜ್ಞಾತಾರ್ಥಜ್ಞಾಪನ ಎಂದು ಎರಡು ಬಗೆ. ಕಾಡಿನಲ್ಲಿ ಬೆಳೆದ ಎಳ್ಳಿನಿಂದಾಗಲೀ ಗೋಧಿಯ ಹಿಟ್ಟಿನಿಂದಾಗಲೀ ಹೋಮ ಮಾಡಬಹುದೆಂದು ವಿಧಿಸುವ ವಿಧಿ ಒಂದಿದೆ.[40] ಈ ವಿಧಿ ಸರಿಯಲ್ಲ. ಏಕೆಂದರೆ ಇದು ಪ್ರವೃತ್ತಿಗೆ ಯೋಗ್ಯವಲ್ಲದ ದ್ರವ್ಯವನ್ನು ವಿಧಿಸಿದೆ. 'ಅನಾಹುತಿರ್ವೈ ಜರ್ತಿಲಾಶ್ಚ ಗವೀಧುಕಾಶ್ಚ' ಎಂದು ಅದೇ ವೇದ ಅರಣ್ಯತಿಲಗಳ ಮತ್ತು ಅರಣ್ಯಗೋಧೂಮಗಳ ಹೋಮವನ್ನು ನಿಷೇಧಿಸುತ್ತದೆ. ಇದು ಮೊದಲು ಹೇಳಿದ ವಿಧಿಯನ್ನು ಬಾಧಿಸುತ್ತದೆ. ಇದರಂತೆಯೇ ಅಜ್ಞಾತಜ್ಞಾಪನರೂಪವಾದ ವಿಧಿಗಳೂ ಪ್ರಮಾಣವಲ್ಲ. ಒಂದು ಕಡೆ 'ಸದೇವೇದಮಗ್ರ ಆಸೀತ್' ಎಂದೂ ಮತ್ತೊಂದು ಕಡೆ 'ಅಸದ್ವಾ ಇದಮಗ್ರ ಆಸೀತ್' ಎಂದೂ ಬಂದಿದೆ. ಇವುಗಳೆರಡಕ್ಕೂ ವಿರೋಧ ಅಪರಿಹಾರ್ಯ, ವಿಧಿವಾಕ್ಯಗಳು ಹೇಗೆ ಅಪ್ರಮಾಣವೋ ಅರ್ಥವಾದ ಭಾಗಗಳೂ ಹಾಗೆಯೇ ಅಪ್ರಮಾಣ. ಅನೇಕ ಅರ್ಥವಾದದ ವಾಕ್ಯಗಳಿಗೆ ವಿವಕ್ಷಿತವಾದ ಅರ್ಥವೇ ಇಲ್ಲ. 'ಸೋಽರೋದೀತ್ ಯದರೋದೀತ್ ತದ್ರುದ್ರಸ್ಯ ರುದ್ರತ್ವಂ',

37. 'ಸಮ್ಯಗನುಭವಸಾಧನಂ ಪ್ರಮಾಣಂ'
38. 'ಅನಧಿಗತಾರ್ಥಗಂತೃ ಪ್ರಮಾಣಂ' (ಸಾಯಣ ಭಾಷ್ಯ ಭೂಮಿಕೆ)
39. 'ಕರ್ಮಚೋದನಾ ಬ್ರಾಹ್ಮಣಾನಿ. ಬ್ರಾಹ್ಮಣಶೇಷೋ ಅರ್ಥವಾದ'-(ಆಪ-ಪರಿಭಾಷಾ 34-35)
40. 'ಜರ್ತಿಲಯವಾಗ್ವಾ ಜುಹುಯಾತ್ ಗವೀಧುಕಯವಾಗ್ವಾ.'

| ವೇದಗಳು | ಸಂಹಿತೆ | ಬ್ರಾಹ್ಮಣ | ಆರಣ್ಯಕ | ಉಪನಿಷತ್ತು |
| --- | --- | --- | --- | --- |
| ಋಗ್ವೇದ | ಶಾಕಲ, ಬಾಷ್ಕಲ ಶಾಖೆಗಳು<br>1028 ಸೂಕ್ತಗಳು<br>10552 ಮಂತ್ರಗಳು | ಐತರೇಯ<br>ಕೌಷೀತಕಿ | ಐತರೇಯ<br>ಕೌಷೀತಕಿ | ಐತರೇಯ<br>ಕೌಷೀತಕಿ |
| ಸಾಮವೇದ | ಆರ್ಚಿಕಾ–585 ಮಂತ್ರ<br>ಉತ್ತರಾರ್ಚಿಕಾ 964 ಮಂತ್ರ | ತಾಂಡ್ಯ, ತಲವಕಾರ, ಷಡ್ವಿಂಶ,<br>ಛಾಂದೋಗ್ಯ, ಸಾಮವಿಧಾನ,<br>ದೇವತಾಧ್ಯಾಯ, ವಂಶ,<br>ಸಂಹಿತೋಪನಿಷತ್,<br>ಆರ್ಷೇಯ ಮತ್ತು ಮಂತ್ರ | ಛಾಂದೋಗ್ಯ | ಛಾಂದೋಗ್ಯ<br>ಕೇನ |
| ಕೃಷ್ಣಯಜುರ್ವೇದ | ಕಠಶಾಖೆ, ಮೈತ್ರೇಯಣೀಯ,<br>4 ಕಾಂಡ 54 ಪ್ರಪಾಠಕ ;<br>ತೈತ್ತರೀಯ-7 ಅಷ್ಟಕ<br>44 ಪ್ರಪಾಠಕ -651 ಅನುವಾಕ<br>110296 ಪದಗಳು | ತೈತ್ತರೀಯ | ತೈತ್ತರೀಯ | ಕಠ, ಶ್ವೇತಾಶ್ವತರ,<br>ಮೈತ್ರಾಯಣೀಯ<br>ಮಹಾನಾರಾಯಣೀಯ,<br>ತೈತ್ತರೀಯ |
| ಶುಕ್ಲಯಜುರ್ವೇದ | ವಾಜಸನೇಯೀ 40 ಅಧ್ಯಾಯ<br>1975 ಮಂತ್ರ 303 ಅನುವಾಕ | ಶತಪಥ ಬ್ರಾಹ್ಮಣ | ಬೃಹದಾರಣ್ಯಕ | ಬೃಹದಾರಣ್ಯಕ<br>ಈಶಾವಾಸ್ಯ |
| ಅಥರ್ವವೇದ | 20 ಕಾಂಡ 731 ಸೂಕ್ತ<br>5038 ಮಂತ್ರ | ಗೋಪಥ | - | ಮುಂಡಕ, ಪ್ರಶ್ನ,<br>ಮಾಂಡೂಕ್ಯ |

'ಸ ಆತ್ಮನೋ ವಪಾಮುದಖಿದತ್' ಮೊದಲಾದುವು ಇದಕ್ಕೆ ನಿದರ್ಶನ. ಮತ್ತೆ ಕೆಲವು ಅರ್ಥವಾದವಾಕ್ಯಗಳು ಶಾಸ್ತ್ರವಿರೋಧ ಮತ್ತು ದೃಷ್ಟವಿರೋಧಗಳಾಗಿವೆ. 'ನ ಚೈತದ್ವಿದ್ಮೋ ವಯಂ ಬ್ರಾಹ್ಮಣಾ ವಾಸ್ಮೋ ಬ್ರಾಹ್ಮಣಾ ವಾ' ಎಂಬ ವಾಕ್ಯ ಇಂಥದು. ಆದುದರಿಂದ ಅರ್ಥವಾದ ರೂಪವಾದ ಬ್ರಾಹ್ಮಣ ಭಾಗಗಳೂ ಅಪ್ರಮಾಣವೇ ಸರಿ.

ಈ ಆಕ್ಷೇಪಗಳಿಗೆ ಜೈಮಿನಿಗಳು ಸಮಾಧಾನವನ್ನು ಹೇಳಿದ್ದಾರೆ.[41] ಮಂತ್ರ ಭಾಗಗಳು ಅನರ್ಥಕ, ವಿರುದ್ಧಾರ್ಥಕ, ಅನುಪಪನ್ನಾರ್ಥಕ ಎಂದು ಹೇಳುವ ಆಕ್ಷೇಪ ಸಲ್ಲದು. 'ಜರ್ಭರೀ ತುರ್ಫರೀತೂ' ಮುಂತಾದವಕ್ಕೆ ಯಾಸ್ಕರು ಅರ್ಥನಿರೂಪಣೆ ಮಾಡಿದ್ದಾರೆ. ಆಚಾರ್ಯರುಗಳ ಮೂಲಕ ಜ್ಞಾನಸಾಕ್ಷಾತ್ಕಾರ ಪಡೆದ ಬಹುಶ್ರುತರು ಮಂತ್ರಾರ್ಥ ವಿಜ್ಞಾನಶಾಲಿಗಳಾಗಿ ಎಲ್ಲ ಅರ್ಥಗಳನ್ನೂ ತಿಳಿಯಬಲ್ಲರು. ಆದುದರಿಂದ ಮಂತ್ರಭಾಗದ ಪ್ರಾಮಾಣ್ಯವನ್ನು ಅಲ್ಲಗಳೆಯಲಾಗುವುದಿಲ್ಲ.[42]

ಮಂತ್ರಗಳಿಗೆ ಪ್ರಯೋಜನ ಕೇವಲ ಉಚ್ಚಾರಣೆಯೇ ಅಲ್ಲ. ಅವು ಅರ್ಥವನ್ನೂ ತಿಳಿಸಿಯೇ ತಿಳಿಸುತ್ತವೆ. ನಾವು ದಿನದಿನವೂ ಬಳಸುವ ವಾಕ್ಯಗಳಲ್ಲಿ ಕರ್ತೃ ಕರ್ಮ ಕ್ರಿಯಾಪದಗಳ ಪ್ರಯೋಗದಿಂದ ಅರ್ಥಜ್ಞಾನವುಂಟಾಗುವಂತೆ ವೇದವಾಕ್ಯಗಳಿಂದಲೂ ಅರ್ಥಜ್ಞಾನವುಂಟಾಗುತ್ತದೆ. ಮಂತ್ರಗಳಲ್ಲಿ ಹೇಳಿರುವ ಅನೇಕ ಅಂಶಗಳನ್ನು ಬ್ರಾಹ್ಮಣ ಗ್ರಂಥಗಳು ಹೇಳಿರುವುದರಿಂದ ಮಂತ್ರಗಳಿಗೆ ಅರ್ಥವಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಮಂತ್ರೋಕ್ತ ವಿಚಾರಗಳನ್ನು ಒತ್ತಿಹೇಳುವುದಕ್ಕಾಗಿ ಇವು ಬಂದಿವೆ. ಇಂಥ ಬ್ರಾಹ್ಮಣ ವಾಕ್ಯಗಳು ಮಂತ್ರಗಳ ಗೂಢಾರ್ಥವನ್ನು ವಿವರಿಸುವುದರಿಂದ ಮಂತ್ರಗಳ ಅರ್ಥವತ್ತ್ವಕ್ಕೆ ಕುಂದಿಲ್ಲ. ಮಂತ್ರಗಳ ಆನುಪೂರ್ವಿಯನ್ನು ಬದಲಾಯಿಸದೆ ಉಚ್ಚರಿಸಿದರೆ ಅದೃಷ್ಟವಾದ ಫಲ ಉಂಟು. ಹಾಗೆಯೇ ಮಂತ್ರೋಚ್ಚಾರಣೆಯ ಕಾಲದಲ್ಲಿ ಅರ್ಥಜ್ಞಾನವೂ ಸ್ಫುರಿಸುತ್ತದೆ. ಈ ಬಗೆಯಾದ ದೃಷ್ಟಪ್ರಯೋಜನವೂ ಮಂತ್ರಗಳಿಗಿದೆ. 'ಚತ್ವಾರಿ ಶೃಂಗಾಃ' ಮೊದಲಾದ ವಾಕ್ಯಗಳಲ್ಲಿ ಇಲ್ಲದಿರುವ ವಸ್ತುಗಳ ವರ್ಣನೆ ಕಂಡು ಬರುವುದಿಲ್ಲ. ಈ ವಾಕ್ಯಗಳಿಗೆ ವಿಶೇಷವಾದ ಗೂಢಾರ್ಥವಿದೆ ಎಂದು ಅರಿಯಬೇಕು. ಆದುದರಿಂದಲೇ ಅಂಥ ಮಂತ್ರಗಳು ವಿರುದ್ಧಾರ್ಥಕಗಳಲ್ಲ. ಮಂತ್ರಗಳನ್ನು ಕಲಿಯುವಾಗಲೇ ಅರ್ಥವನ್ನು ತಿಳಿಸದೇ ಇರುವುದು ದೋಷವಲ್ಲ. ಇದರಿಂದಲೇ ಮಂತ್ರಗಳಿಗೆ ಅರ್ಥವಿಲ್ಲವೆನ್ನಲಾಗುವುದಿಲ್ಲ. ಕೆಲವು ಮಂತ್ರಗಳ ಅರ್ಥ ನಮಗೆ ತಿಳಿಯುವುದಿಲ್ಲವೆಂದಮಾತ್ರಕ್ಕೆ ಮಂತ್ರಗಳಿಗೆ ಅರ್ಥವೇ ಇಲ್ಲವೆನ್ನುವುದಕ್ಕಾಗದು. ನಾವು ಆ ಅರ್ಥಗಳನ್ನು ತಿಳಿಯಲು ಪ್ರಯತ್ನಿಸದೆ ಇರುವುದು ನಮ್ಮ ತಪ್ಪು. ನಿರುಕ್ತ, ವ್ಯಾಕರಣ ಮೊದಲಾದವುಗಳ ಸಹಾಯದಿಂದ ಅರ್ಥಗ್ರಹಣವಾಗಿಯೇ ಆಗುತ್ತದೆ. ಬ್ರಾಹ್ಮಣ ಗ್ರಂಥದಲ್ಲಿ ಅನೇಕ ಸಂಜ್ಞೆಗಳನ್ನು ಬಳಸಿ ಮಂತ್ರಗಳನ್ನು ಸೂಚಿಸಿರುವುದು ಮಂತ್ರಗಳಿಗೆ ಅರ್ಥವಿರುವುದನ್ನು ಸಮರ್ಥಿಸುತ್ತದೆ. ಈ ಬ್ರಾಹ್ಮಣ ಗ್ರಂಥಗಳು ಮಂತ್ರಾರ್ಥಕ್ಕನುಸಾರವಾಗಿ ಯಾಗಾದಿಗಳಲ್ಲಿ ಮಂತ್ರಗಳ ವಿನಿಯೋಗವನ್ನು ತಿಳಿಸಿವೆ. ಇವೆಲ್ಲದರಿಂದ ಮಂತ್ರಗಳಿಗೆ ಅರ್ಥಸಂಪತ್ತಿ ಉಂಟೆಂಬುದು ಸಿದ್ಧವಾಗುತ್ತದೆ.

ಮಂತ್ರಭಾಗಗಳು ಹೇಗೆ ಪ್ರಮಾಣವೋ ಬ್ರಾಹ್ಮಣ ಭಾಗಗಳೂ ಹಾಗೆಯೇ ಪ್ರಮಾಣ.

---

41. ಜೈ. ಸೂ. 1-2-31 ರಿಂದ 1-2-53.
42. ಯಾಸ್ಕರೂ ಮಂತ್ರಗಳ ಅರ್ಥವತ್ತ್ವವನ್ನು ಸ್ಥಾಪಿಸಿದ್ದಾರೆ.
–(ನಿರುಕ್ತ 1-16-1ರಿಂದ 1-16-10)

ಅರಣ್ಯತಿಲಗಳ ಮತ್ತು ಗೋಧೂಮಕಗಳ ಹೋಮವನ್ನು ನಿಂದಿಸಿರುವುದರಿಂದ ಅಪ್ರವೃತ್ತಪ್ರವರ್ತನ ರೂಪವಾದ ಬ್ರಾಹ್ಮಣ ಭಾಗಗಳು ಅಪ್ರಮಾಣ ಎಂದು ಮಾಡಿದ ಆಕ್ಷೇಪ ಸಲ್ಲದು. ಏಕೆಂದರೆ ಅರಣ್ಯತಿಲಗಳ ಹಾಗೂ ಅರಣ್ಯಗೋಧೂಮಕಗಳ ಹೋಮವನ್ನು ನಿಂದಿಸಿರುವುದು 'ಅಜಾಕ್ಷೀರ' ಉತ್ತಮವಾದ ಹೋಮದ್ರವ್ಯವೆಂದು ಪ್ರಶಂಸೆ ಮಾಡುವುದಕ್ಕಾಗಿಯೇ. 'ಅಜಾಕ್ಷೀರೇಣ ಜುಹೋತಿ' ಎಂಬ ವಿಧಿವಾಕ್ಯ ಇದಕ್ಕೆ ನಿದರ್ಶನ. 'ನಹಿ ನಿಂದಾ ನ್ಯಾಯ'[43]ದಂತೆ ಇಲ್ಲಿ ಅಜಾಕ್ಷೀರದ ಪ್ರಶಂಸೆ ಬಂದಿದೆ. ಆದ್ದರಿಂದ ಅಪ್ರವೃತ್ತಪ್ರವರ್ತನ ರೂಪವಾದ ಬ್ರಾಹ್ಮಣವಾಕ್ಯಗಳ ಪ್ರಾಮಾಣ್ಯಕ್ಕೆ ಕುಂದಿಲ್ಲ. ಅಜ್ಞಾತಾರ್ಥಜ್ಞಾಪನ ರೂಪವಾದ ಬ್ರಾಹ್ಮಣಭಾಗಗಳೂ ಪ್ರಮಾಣವೇ ಸರಿ. 'ಸೃಷ್ಟಿಗೆ ಮೊದಲು ಆತ್ಮಾ ಒಂದೇ ಇತ್ತು' ಎಂಬ ವಾಕ್ಯಕ್ಕೂ 'ಸೃಷ್ಟಿಗೆ ಮೊದಲು ಅಸತ್ ಒಂದೇ ಇತ್ತು' ಎಂಬ ವಾಕ್ಯಕ್ಕೂ ಆಪಾತತಃ ವಿರೋಧವಿರುವಂತೆ ಕಂಡುಬಂದರೂ ಅವುಗಳಿಗೆ ಪರಸ್ಪರ ವಿರೋಧವಿಲ್ಲವೇಬುದನ್ನು 'ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ' (ಬ್ರ. ಸೂ. 1-4-14) ಮತ್ತು 'ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್' (ಬ್ರ. ಸೂ. 2-1-17) ಎಂಬ ಸೂತ್ರಗಳು ಸ್ಥಾಪಿಸಿವೆ. ಸೃಷ್ಟಿಕರ್ತನು ಒಬ್ಬನೇ ಎಂದೂ, ಅಸತ್ ಎಂಬ ಶಬ್ದ ಅವ್ಯಕ್ತ ವಾದ ಅವಸ್ಥೆಯನ್ನು ಸೂಚಿಸಲು ಪ್ರಯುಕ್ತವಾಗಿದೆಯೆಂದೂ ಬಾದರಾಯಣರ ಮತ. ಆದಕಾರಣ ಅಜ್ಞಾತಾರ್ಥಜ್ಞಾಪನರೂಪವಾದ ಬ್ರಾಹ್ಮಣ ವಾಕ್ಯಗಳು ಅಪ್ರಮಾಣವಲ್ಲ.

ಅರ್ಥವಾದ ಭಾಗಗಳು ವಿಧಿವಾಕ್ಯಗಳನ್ನು ಪ್ರಶಂಸೆ ಮಾಡಲು ಬಂದಿವೆ. ವಿಧಿ ಮತ್ತು ಅರ್ಥವಾದಗಳು ಒಂದೇ ವಾಕ್ಯದ ಭಾಗಗಳು. ಒಂದು ಉದಾಹರಣೆಯನ್ನಿಲ್ಲಿ ಕೊಡಬಹುದು. 'ವಾಯುರ್ವೈ ಕ್ಷೇಪಿಷ್ಠಾ ದೇವತಾ'–ವಾಯುದೇವತೆ ಅತ್ಯಂತ ವೇಗವುಳ್ಳವನು ಎಂಬ ಈ ವಾಕ್ಯ ಒಂದು ಅರ್ಥವಾದ. ಇದು 'ವಾಯವ್ಯಂ ಶ್ವೇತಮಾಲಭೇತ' ಎಂದರೆ 'ವಾಯುದೇವತೆಗೆ ಬಿಳಿ ಆಡನ್ನು ಹೋಮ ಮಾಡಬೇಕು' ಎಂಬ ವಿಧಿವಾಕ್ಯಕ್ಕೆ ಸೇರಿಕೊಂಡಿದೆ. ಇವೆರಡು ಭಾಗಗಳನ್ನೂ ಕೂಡಿಸಿ ಸಮನ್ವಯ ಮಾಡಿಕೊಂಡರೆ ಅರ್ಥವು ಪೂರ್ಣವಾಗುತ್ತದೆ. ಇತರರಾರೂ ವಾಯುವಿನಷ್ಟು ಶೀಘ್ರಫಲಪ್ರದರಲ್ಲದ ಕಾರಣ ವಾಯುವನ್ನು ಕುರಿತು ಶ್ವೇತವರ್ಣದ ಆಡದಿಂದ ಯಾಗಮಾಡಬೇಕೆಂದು ಇದರ ಅರ್ಥ, ಆದುದರಿಂದ ಇಂಥ ಅರ್ಥವಾದಗಳೂ ಸಹ ಪ್ರಮಾಣವೇ ಸರಿ. 'ಸೋಽರೋದೀತ್ ತದ್ರುದ್ರಸ್ಯ ರುದ್ರತ್ವಂ' ಎಂಬ ಅರ್ಥವಾದ ರುದ್ರನ ಕಣ್ಣೀರು ಬೆಳ್ಳಿಯಾದ ಕಾರಣ ಅಂಥ ಬೆಳ್ಳಿಯನ್ನು ಯಾಗದಲ್ಲಿ ದಾನ ಮಾಡಬಾರದೆಂದು ತಿಳಿಸಲು ಪ್ರವೃತ್ತವಾಗಿದೆ. ರಜತದಾನನಿಷೇಧ ಮಾಡುವ ವಿಧಿಯ ಸ್ತುತಿ ಈ ಅರ್ಥವಾದದಲ್ಲಿದೆ. ಅರ್ಥವಾದ ವಾಕ್ಯಗಳಿಗೆ ಗೂಢಾರ್ಥವೂ ಉಂಟು. 'ಸ್ತೇನಂ ಮನಃ' ಎಂಬುದಕ್ಕೆ ಮನಸ್ಸು ಶರೀರದಲ್ಲಿ ಕಣ್ಣಿಗೆ ಕಾಣಿಸದ ಕಳ್ಳನಂತೆ ಅವಿತುಕೊಂಡಿದೆ ಎಂಬುದು ಅಭಿಪ್ರಾಯ. 'ನ ಚೈತದ್ವಿದ್ಮಃ ವಯಂ ಬ್ರಾಹ್ಮಣಾಃ' ಮೊದಲಾದ ಅರ್ಥವಾದಗಳು ದೃಷ್ಟವಿರುದ್ಧವಲ್ಲ. ಇಲ್ಲಿ 'ನ ವಿದ್ಮಃ' ಎಂಬುದು ಅಜ್ಞಾನವನ್ನು ಹೇಳದು. ಆದರೆ ತಿಳಿಯುವುದಕ್ಕೆ ಅಸಾಧ್ಯವೆಂಬ ಭಾವವನ್ನು ಹೇಳುತ್ತದೆ. ಸ್ವರ್ಗಾದಿ ಲೋಕಗಳಿವೆಯೋ ಇಲ್ಲವೋ ಯಾರಿಗೆ ಗೊತ್ತು ಎಂಬ ಅರ್ಥದ 'ಕೋಹಿತದ್ವೇದ ಯದಮುಷ್ಮಿನ್ ಲೋಕೋ ಅಸ್ತಿ ವಾ ನ ವಾ' ಎಂಬುದು ಮತ್ತೊಂದು ಅರ್ಥವಾದ. 'ಸ್ವರ್ಗಕಾಮೋ ಯಜೇತ' ಎಂಬ ವಾಕ್ಯ ಸ್ವರ್ಗವಿದೆಯೆಂಬುದನ್ನು ಸಮರ್ಥಿಸುತ್ತದೆ. ಆದರೆ ಮೊದಲಿನ ವಾಕ್ಯದ ಅಭಿಪ್ರಾಯವೇನು ? ಭವಿಷ್ಯತ್ಕಾಲದಲ್ಲಿ

43. 'ನ ಹಿ ನಿಂದಾ ನಿಂದ್ಯಂ ನಿಂದಿತುಂ ಪ್ರವರ್ತತೇ, ಅಪಿ ತು ವಿಧೇಯಂ ಸ್ತೋತುಂ'

ಸ್ವರ್ಗಾದಿಫಲಗಳು ಸಿದ್ಧಿಸುವ ಕಾಲವನ್ನು ಯಾರು ತಾನೆ ತಿಳಿಯಬಲ್ಲರು ಎಂಬುದು ಅದರ ಅರ್ಥ. ಹೀಗೆ ಅರ್ಥವಾದಗಳಿಗೆ ಸಂಬಂಧಿಸಿದ ವಿಧಿವಾಕ್ಯಗಳ ವಿಚಾರವನ್ನು ಕೂಡಿಸಿಕೊಂಡಾಗ ಅರ್ಥವಾದಗಳಿಗೆ ಪ್ರಾಮಾಣ್ಯವಿಲ್ಲವೆಂಬ ಆಕ್ಷೇಪ ಪರಿಹಾರವಾಗುತ್ತದೆ.[44]

ಜೈಮಿನಿಗಳು ವೇದಪ್ರಾಮಾಣ್ಯವನ್ನು ಸ್ಥಾಪಿಸಿರುವಂತೆಯೇ ವೇದದ ಅಪೌರುಷೇಯತ್ವವನ್ನೂ ಸ್ಥಾಪಿಸಿದ್ದಾರೆ.[45] ವೇದ ಪೌರುಷೇಯವಾದ ಕಾರಣ ಪರಮ ಪ್ರಮಾಣವಲ್ಲವೆಂಬ ಆಕ್ಷೇಪಕ್ಕೆ ಜೈಮಿನಿಗಳು ಸಮಾಧಾನ ಹೇಳಿದ್ದಾರೆ. ವೇದದಲ್ಲಿ ಕಠ, ಕುಥುಮ, ತಿತ್ತಿರಿ, ಪಿಪ್ಪಲಾದ, ಮುದ್ಗಲ ಮುಂತಾದವರು ವೇದಶಾಖಾ ಕರ್ತೃಗಳೆಂದು ಪ್ರಸಿದ್ಧರಾಗಿದ್ದಾರೆಯಾದ ಕಾರಣ ವೇದ ಪೌರುಷೇಯವೆಂಬ ವಾದ ಬಂದಿದೆ. ಮೇಲೆ ಹೇಳಿದ ಋಷಿಗಳು ಶಾಖಾಪ್ರವರ್ತಕರಾದ ಉಪಾಧ್ಯಾಯರುಗಳೆಂದೂ ಇವರು ಪ್ರವರ್ತನ ಮಾಡಿದ ಪಾಠಕ್ರಮಕ್ಕೆ ಇವರ ಹೆಸರುಗಳು ರೂಢಿಯಲ್ಲಿ ಬಂದಿವೆಯೆಂದೂ ಸಮಾಧಾನ ಹೇಳಲಾಗಿದೆ. 'ವೇದಶಬ್ದಗಳು ನಿತ್ಯ; ಅನಾದಿ. ಇವು ಕಠಾದಿ ಪುರುಷರ ಕಾಲಕ್ಕಿಂತ ಹಿಂದೆಯೇ ಇದ್ದವು. ವೇದಶಬ್ದಗಳ ನಿತ್ಯತ್ವ ಶಬ್ದಾಧಿಕರಣ ಮತ್ತು ವಾಕ್ಯಾಧಿಕರಣದಲ್ಲಿ ಸ್ಥಾಪಿತವಾಗಿದೆ.[46] ಸಮಸ್ತಶಬ್ದಗಳಿಗೂ ಅವುಗಳ ಅರ್ಥಗಳಿಗೂ ಅವುಗಳ ಸಂಬಂಧಕ್ಕೂ ನಿತ್ಯತ್ವವುಂಟೆಂಬುದನ್ನು 'ಔತ್ಪತ್ತಿಕಸ್ತುಶಬ್ದಸ್ಯಾರ್ಥೇನ ಸಂಬಂಧಃ' ಎಂಬಲ್ಲಿ ಸ್ಥಾಪಿಸಿದೆ. ಆದಕಾರಣ 'ವೇದ ನಿತ್ಯ ಮತ್ತು ಅಪೌರುಷೇಯ' ಎಂಬುದು ಪೂರ್ವಮೀಮಾಂಸಾದರ್ಶನದ ನೆಲೆ.[47] ವೇದ ಅದೃಷ್ಟ ಫಲವನ್ನು ಹೇಳುವುದು. ಪರಿಮಿತಿವಾದ ಶಕ್ತಿಯುಳ್ಳ ಯಾವ ಪುರುಷನೂ ಇದನ್ನು ಹೇಳಲಾರದ ಕಾರಣ ವೇದ ಅಪೌರುಷೇಯವೇ. ಹೀಗೆ ವೇದ ಪರಮ ಪ್ರಮಾಣ, ನಿತ್ಯ ಮತ್ತು ಅಪೌರುಷೇಯ ಎಂದು ಪೂರ್ವಮೀಮಾಂಸಾದರ್ಶನ ಅಂಗೀಕಾರ ಮಾಡುತ್ತದೆ.

ಸಾಂಖ್ಯದರ್ಶನ ವೇದ ಪ್ರಾಮಾಣ್ಯವನ್ನು ಒಪ್ಪುತ್ತದೆ. ಸಾಂಖ್ಯಕಾರಿಕೆಯಲ್ಲಿ 'ಆಪ್ತಶ್ರುತಿ ರಾಪ್ತವಚನಂತು' (ಕಾ. 5) ಎಂದು ಇದನ್ನು ಈಶ್ವರಕೃಷ್ಣರು ಸ್ಥಾಪಿಸಿದ್ದಾರೆ. ಇದಕ್ಕೆ ವಿವರಣೆ ನೀಡುತ್ತಾ ವಾಚಸ್ಪತಿಮಿಶ್ರರು 'ಅಪೌರುಷೇಯ ವೇದವಾಕ್ಯಜನಿತತ್ವೇನ ಸಕಲದೋಷಾಶಂಕಾವಿನಿರ್ಮುಕ್ತೇರ್ಯುಕ್ತಂ ಭವತಿ' ಎಂದು ಅಪೌರುಷೇಯತ್ವವನ್ನು ಎತ್ತಿ ಹಿಡಿದಿದ್ದಾರೆ. ಸಾಂಖ್ಯಸೂತ್ರವೂ ಸಹ 'ನ ಪೌರುಷೇಯತ್ವಂ ತತ್ಕರ್ತುಃ ಪ್ರಮಾಣಾಭಾವಾತ್' (ಸಾಂ. 5-46) ಎಂದು ಸಾರಿ ಹೇಳಿ ವೇದಗಳ ಕರ್ತೃವನ್ನು ಸೂಚಿಸುವ ಪ್ರಮಾಣವಿಲ್ಲದ ಕಾರಣ ಅದು ಪೌರುಷೇಯವಲ್ಲವೆಂದು ನಿರೂಪಿಸಿದೆ. ಶುದ್ಧಸತ್ತ್ವಮಯನೂ, ವೀತರಾಗನೂ,

44. ವಾಯುರ್ವಾ ಇತ್ಯೇವಮಾದೇರರ್ಥವಾದಸ್ಯ ಮಾನತಾ |
ನ ವಿಧೇಯೇಽಸ್ತಿ ಧರ್ಮೇ ಕಿಂ ಕಿಂವಾಸೌ ತತ್ರ ವಿದ್ಯತೇ ||
ವಿಧ್ಯರ್ಥವಾದಶಬ್ದಾನಾಂ ಮಿಥೋಽಪೇಕ್ಷಾಪರೀಕ್ಷಯಾತ್ |
ನಾಸ್ತ್ಯೇಕ ವಾಕ್ಯತಾ ಧರ್ಮೇ ಪ್ರಾಮಾಣ್ಯಂ ಸಂಭವೇತ್ಕುತಃ ||
ವಿಧ್ಯರ್ಥವಾದೌ ಸಾಕಾಂಕ್ಷೌ ಪ್ರಾಶಸ್ತ್ಯ ಪುರುಷಾರ್ಥಯೋಃ |
ತೇನೈಕವಾಕ್ಯತಾ ತಸ್ಮಾತ್ ವಾದಾನಾಂ ಧರ್ಮಮಾನತಾ ||–(ಜೈ. ನ್ಯಾ. ಮಾ. 1-2-1)
45. ಜೈ. ಸೂ. 1-1-27 ರಿಂದ 1-1-32
46. ಜೈ. ಸೂ. 1-1-6 ರಿಂದ 1-1-23
47. ಪೌರುಷೇಯಂ ನ ವಾ ವೇದವಾಕ್ಯಂ ಸ್ಯಾತ್ಪೌರುಷೇಯತಾ |
ಕಾಠಕಾದಿಸಮಾಖ್ಯಾನಾತ್ ವಾಕ್ಯತ್ವಾಚ್ಚಾನ್ಯವಾಕ್ಯವತ್ |
ಸಮಾಖ್ಯಾನಂ ಪ್ರವಚನಾದ್ವಾಕ್ಯತ್ವಂತು ಪರಾಹತಂ |
ತತ್ಕರ್ತ್ರನುಪಲಂಭೇನ ಸ್ಯಾತ್ತತೋಽಪೌರುಷೇಯತಾ || (ಜೈ. ನ್ಯಾ. ಮಾ. 1-1-6)

ನಿರತಿಶಯ ಸರ್ವಜ್ಞನೂ ಆದ ಮುಕ್ತಾತ್ಮನಾಗಲೀ ಅಮುಕ್ತನಾದ ಪ್ರಕೃತಿ ಸಂಸೃಷ್ಟನಾದ ಪುರುಷನಾಗಲೀ ವೇದಗಳನ್ನು ರಚಿಸಲಿಲ್ಲವೆಂದು 'ನ ಮುಕ್ತಾಮುಕ್ತಯೋರ ಯೋಗ್ಯತ್ವಾತ್' ಎಂಬ ಸೂತ್ರ ಸಾಧಿಸುತ್ತದೆ. 'ನಿಜಶಕ್ತ್ಯಭಿವ್ಯಕ್ತೇಃ ಸ್ವತಃ ಪ್ರಾಮಾಣ್ಯಂ' ಎಂಬ ಸೂತ್ರ ವೇದದ ಅಪೌರುಷೇಯತ್ವ, ನಿತ್ಯತ್ವ ಮತ್ತು ಸ್ವತಃ ಪ್ರಾಮಾಣ್ಯವನ್ನು ಹೇಳುತ್ತದೆ. ವೇದಪ್ರಾಮಾಣ್ಯವನ್ನು ಅಂಗೀಕರಿಸಿರುವುದರಿಂದಲೇ ಸಾಂಖ್ಯದರ್ಶನ ಆಸ್ತಿಕದರ್ಶನವಾಗಿದೆ.

ಯೋಗ ದರ್ಶನಕ್ಕನುಸಾರವಾಗಿಯೂ ವೇದ ನಿತ್ಯ ಮತ್ತು ಸ್ವತಃ ಪ್ರಮಾಣ. ಕ್ಲೇಶಕರ್ಮವಿಪಾಕಾಶಯಗಳಿಂದ ಅಪರಾಮೃಷ್ಟನಾಗಿ ರಜಸ್ತಮೋಮಲಾವರಣದೂರನಾಗಿ ಸರ್ವತಃ ಪ್ರಕಾಶಿಸುವ ಬುದ್ಧಿಸತ್ತ್ವದಿಂದ ಕೂಡಿದ ಭಗವಂತನಿಂದ ಅಭ್ಯುದಯ ನಿಃಶ್ರೇಯಸ್ಸುಗಳನ್ನು ಸಾಧಿಸಿಕೊಡುವ ಉಪದೇಶರೂಪವಾದ ವೇದರಾಶಿ ಉಂಟಾಯಿತೆಂಬುದು ಈ ದರ್ಶನದ ನೆಲೆ. ಪರಮಾತ್ಮನ ವಾಣಿಯಾದ ವೇದ ನಿತ್ಯ ಮತ್ತು ಸ್ವತಃ ಪ್ರಮಾಣವೆಂಬುದು ಇವರ ಸಿದ್ಧಾಂತ.

ನ್ಯಾಯದರ್ಶನವೂ ವೇದಪ್ರಾಮಾಣ್ಯವನ್ನಂಗೀಕರಿಸಿದೆ. ಈ ದರ್ಶನಕ್ಕನುಸಾರವಾಗಿ ವೇದ ಅಪೌರುಷೇಯವಲ್ಲ ; ಪೌರುಷೇಯ. ಪದಗಳು ನಿತ್ಯವೆಂದು ಒಪ್ಪಿದರೂ ಕೂಡ ವಾಕ್ಯದಲ್ಲಿ ಕಂಡುಬರುವ ವಿಶಿಷ್ಟವಾದ ರಚನೆ ಕರ್ತೃತ್ವಪೂರ್ವಕವಾಗಿದೆ ಎಂಬುದನ್ನು ಮರೆಯಲಾಗದು. ಆದುದರಿಂದಲೇ ವೇದ ಅಪೌರುಷೇಯವಲ್ಲ. ಹೀಗೆ ಪದರಚನೆ ಮಾಡಿದ ಪುರುಷನು ಯಾರೆಂದರೆ ಸರ್ವಜ್ಞನೂ, ಸರ್ವಶಕ್ತನೂ ಸಕಲಲೋಕನಿರ್ಮಾಪಕನೂ ಆದ ಈಶ್ವರನೇ. ಅನೇಕಾನೇಕ ಶಾಖೆಗಳಲ್ಲಿರುವ ವೇದಸಮಾಮ್ನಾಯವನ್ನೆಲ್ಲಾ ಒಬ್ಬನೇ ಈಶ್ವರನು ರಚಿಸಿದನು. ಆದರಿಂದಲೇ ಇವುಗಳಲ್ಲಿ ಏಕಾಭಿಪ್ರಾಯವಿದೆ. ಹೀಗೆ ಜಯಂತ ಭಟ್ಟರು ನ್ಯಾಯಮಂಜರಿಯಲ್ಲಿ ಹೇಳಿದ್ದಾರೆ :

> ಪದನಿತ್ಯತ್ವಪಕ್ಷೇಽಪಿ ವಾಕ್ಯೇ ತದ್ರಚನಾತ್ಮಕೇ |
> ಕರ್ತೃತ್ವಸಂಭವಾತ್ಪುಂಸೋ ವೇದಃ ಕಥಮಕೃತಿಮಃ ||
> ಉಚ್ಯತೇ ತರ್ಹಿ ಸರ್ವಜ್ಞಃ ಸ್ರಷ್ಟುಂ ಪ್ರಭವತೀದೃಶಂ |
> ವಿಚಿತ್ರಂ ಪ್ರಾಣಿಭೃತ್ಕರ್ಮಫಲಭೋಗಾಶ್ರಯಂ ಜಗತ್ ||
> ತತ್ಕರ್ಮಫಲಸಂಬಂಧವಿದಾ ತದುಪದೇಶಿನಾ |
> ತೇನೈವ ವೇದಾ ರಚಿತಾ ಇತಿ ನಾನ್ಯಸ್ಯ ಕಲ್ಪನಾ ||
> ತಾಸಾಂ ಚ ವೃಕ್ಷಶಾಖಾನಾಮೇಕಸ್ಮಾಜ್ಜನ್ಮ ಬೀಜತಃ |
> ತಥೈವ ಸರ್ವಶಾಖಾನಾಮೇಕಸ್ಮಾತ್ಪುರುಷೋತ್ತಮಾತ್ ||
>
> (ನ್ಯಾಯಮಂಜರೀ-ಅಹ್ನೀಕ 4-1, 29, 30, 43)

ಗೌತಮರು ತಮ್ಮ ಸೂತ್ರಗಳಲ್ಲಿ ಈಶ್ವರಪ್ರಣೀತವಾದುದರಿಂದ ವೇದ ಪ್ರಮಾಣವೆಂದು ಸ್ಥಾಪಿಸಿದ್ದಾರೆ. 'ತದಪ್ರಾಮಾಣ್ಯಂ ಅನೃತವ್ಯಾಘಾತಪುನರುಕ್ತ ದೋಷೇಭ್ಯಃ' ( ಗೌ. ನ್ಯಾ. ಸೂ. 2-1-57) ಎಂಬ ಸೂತ್ರದಿಂದ ವೇದ ಪ್ರಮಾಣವಲ್ಲವೆಂಬ ಆಕ್ಷೇಪವನ್ನು ಹಾಕಿಕೊಂಡು 'ನ ಕರ್ಮಕರ್ತೃ ಸಾಧನ ವೈಗುಣ್ಯಾತ್' (ಗೌ. ನ್ಯಾ. ಸೂ. 2-1-58) ಎಂಬ ಸೂತ್ರದಿಂದ ಅದನ್ನು ನಿವಾರಣೆ ಮಾಡಿದ್ದಾರೆ. ವೇದೋಕ್ತವಾದ ಕರ್ಮಗಳ ಅನುಷ್ಠಾನದಿಂದ ಫಲ ಕಾಣದಿದ್ದರೆ ಅದು ಅದನ್ನನುಷ್ಠಿಸಿದವನ ದೋಷಾದಿಗಳಿಂದಲೇ ವಿನಾ ವೇದದ ಅಸಾಮರ್ಥ್ಯದಿಂದಲ್ಲ. 'ಚಿತ್ರಯಾ ಯಜೇತ ಪಶುಕಾಮಃ' ಎಂಬ ವಿಧಿಯೊಂದಿದೆ. ಚಿತ್ರಾ ಎಂಬ ಇಷ್ಟಿಯನ್ನು ಪಶುಗಳನ್ನಪೇಕ್ಷಿಸುವವನು ಮಾಡಬೇಕೆಂಬುದು ಇದರ ಅರ್ಥ. ಚಿತ್ರಾಇಷ್ಟಿ ಮಾಡಿದವನಿಗೆ

ಪಶುಲಾಭವೆಂಬುದನ್ನು ಇದು ಸೂಚಿಸುತ್ತದೆ. ಕೂಡಲೇ ಫಲಸಿದ್ಧಿಯೋ ಅಥವಾ ಅದು ಅನಿರ್ದಿಷ್ಟವಾದ ಕಾಲದಲ್ಲಿಯೋ ಎಂಬುದು ಬೇರೆಯ ವಿಚಾರ. ಆದುದರಿಂದ ವೇದ ವಚನಕ್ಕೆ ವ್ಯಾಘಾತವಾಗಲೀ ಅನೃತತ್ವವಾಗಲೀ ಇಲ್ಲ.

ಪರಮಾಪ್ತನಾದ ಪರಮಾತ್ಮನಿಂದ ಉಪದಿಷ್ಟವಾದುದರಿಂದ ವೇದ ಪ್ರಮಾಣವೆಂದು ಈ ದರ್ಶನದ ಮತ. ಪ್ರಾಣಿಮಾತ್ರಗಳ ಮೇಲಿನ ದಯೆಯಿಂದ ಪರಮಾತ್ಮನು ಸದ್ಧರ್ಮಗಳನ್ನಿಲ್ಲಿ ಉಪದೇಶಿಸಿದ್ದಾನೆ. ಔಷಧಿಗಳ ಪ್ರಯೋಗದಿಂದ ವಿಷ ಪರಿಹಾರ ಮಾಡುವ ವೈದ್ಯನಲ್ಲಿ ವಿಶ್ವಾಸ ಉಂಟಾಗುವಂತೆ ಆಪ್ತತಮನಾದ ಈಶ್ವರನ ನುಡಿ ವಿಶ್ವಾಸಯೋಗ್ಯವಾದುದು. ಅಜ್ಞಾನದಲ್ಲಿ ತೊಳಲುತ್ತಿರುವ ಪ್ರಾಣಿಗಳಿಗೆ ಆಪ್ತೋಪದೇಶಕ್ಕಿಂತ ಹೆಚ್ಚಿನ ಬೋಧಕಾರಣ ಮತ್ತೊಂದಿಲ್ಲ. ಪ್ರತ್ಯಕ್ಷಸಿದ್ಧವಾದ ಆಪ್ತೋಪದೇಶ ಮತ್ತು ಆಯುರ್ವೇದದಲ್ಲಿ ನಾವು ಪ್ರಮಾಣಬುದ್ಧಿಯನ್ನಿಟ್ಟಿರುವಂತೆ ಅದೃಷ್ಟಕರ್ತೃಕವಾದ ವೇದದಲ್ಲಿಯೂ ಪ್ರಮಾಣಬುದ್ಧಿಯನ್ನಿಡಬೇಕೆಂದು ಗೌತಮರು 'ಮಂತ್ರಾಯುರ್ವೇದ ಪ್ರಾಮಾಣ್ಯವಚ್ಚ ತತ್ಪ್ರಾಮಾಣ್ಯಂ ಆಪ್ತಪ್ರಾಮಾಣ್ಯಾತ್' (ಗೌ. ನ್ಯಾ. ಸೂ. 2-1-68) ಎಂದು ನಿರೂಪಿಸಿದ್ದಾರೆ. ಕಣಾದರೂ ಸಹ 'ತದ್ವಚನಾದಾಮ್ನಾಯಸ್ಯ ಪ್ರಾಮಾಣ್ಯಂ' ಎಂದು ವೇದಪ್ರಾಮಾಣ್ಯವನ್ನು ಎತ್ತಿ ಹಿಡಿದಿದ್ದಾರೆ.

ಉತ್ತರಮೀಮಾಂಸಾ ಅಥವಾ ವೇದಾಂತದರ್ಶನ ವೇದಗಳ ಅಪೌರುಷೇಯತ್ವವನ್ನೂ, ನಿತ್ಯತ್ವವನ್ನೂ, ಪ್ರಾಮಾಣ್ಯವನ್ನೂ ಮುಕ್ತಕಂಠದಿಂದ ಅಂಗೀಕರಿಸಿದೆ. ವೇದ 'ಯಸ್ಯ ನಿಃಶ್ವಸಿತಂ ವೇದಾಃ' ಎಂಬಂತೆ ಈಶ್ವರನ ಉಸಿರು. ಶತಪಥ ಬ್ರಾಹ್ಮಣದಲ್ಲಿ ವೇದವನ್ನು 'ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತತ್' ಎಂದು ಹೇಳಿದೆ. ಪುರುಷಸೂಕ್ತದಲ್ಲಿ ಯಜ್ಞನಾಮಕನಾದ ವಿರಾಟ್ಪುರುಷನಿಂದ ಋಗ್ಯಜುಸ್ಸಾಮಾದಿ ವೇದಗಳು ಉತ್ಪನ್ನವಾದುವೆಂದು ತಿಳಿಸಿದೆ. ಶ್ವೇತಾಶ್ವತರೋಪನಿಷತ್ತು 'ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ'[48] ಎಂದು ಹೇಳಿ ಚತುರ್ಮುಖ ಬ್ರಹ್ಮನನ್ನು ಸೃಜಿಸಿದ ಪರಮಾತ್ಮನು ಅಮರವಾದ ವೇದಗಳನ್ನೂ ಅವನಿಗೆ ದಯಪಾಲಿಸಿದನೆಂದೂ ತಿಳಿಸುತ್ತದೆ.

ವೇದಪ್ರಾಮಾಣ್ಯವನ್ನು ವೇದಾಂತಿಗಳೆಲ್ಲರೂ ಸ್ಥಾಪಿಸಿದ್ದಾರೆ.[49] ವೇದಾಂತ ಸೂತ್ರಗಳಲ್ಲಿ ಮೂರನೇ ಸೂತ್ರವಾದ 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರ ಪ್ರಮಾಣಾಂತರಗಳಿಗೆ ಅವಿಷಯನಾದ ಪರಮಾತ್ಮನು ಶ್ರುತ್ಯೈಕಸಮಧಿಗಮ್ಯನೆಂದು ಸಾರುತ್ತದೆ. ಪರಬ್ರಹ್ಮ ವಸ್ತುವನ್ನರಿಯಲು ವೇದಗಳೇ ಪ್ರಮಾಣವೆಂದು ಈ ಸೂತ್ರದ ಸಿದ್ಧಾಂತ.

ಸರ್ಗಾದ್ಯಕಾಲದಲ್ಲಿ ಪರಮೇಶ್ವರನು ಪೂರ್ವಸೃಷ್ಟಿಯಲ್ಲಿ ಸಿದ್ಧವಾಗಿದ್ದ ವೇದದ ಆನುಪೂರ್ವಿಗೆ ಸಮಾನವಾದ ಆನುಪೂರ್ವಿಯೊಡನೆಯೇ ವೇದವನ್ನು ಕರುಣಿಸುವನೆಂದು ಸ್ಥಾಪಿಸಲಾಗಿದೆ. ಹೀಗೆ ವೇದಾಂತದರ್ಶನ ವೇದಗಳ ನಿತ್ಯತ್ವ ಮತ್ತು ಸ್ವತಃ ಪ್ರಾಮಾಣ್ಯವನ್ನು ಅಂಗೀಕಾರ ಮಾಡಿದೆ.

ನಿರುಕ್ತಕಾರರಾದ ಯಾಸ್ಕರು ವೇದಮಂತ್ರಗಳಿಗೆ ಅರ್ಥಸಂಪತ್ತಿಯುಂಟೆಂಬುದನ್ನು 'ಶಬ್ದ ಸಾಮಾನ್ಯಾತ್' ಎಂಬ ಸೂತ್ರದಿಂದ ನಿರೂಪಿಸಿದ್ದಾರೆ–ಶಬ್ದ ನಿತ್ಯವೆಂದೂ ಋಷಿಗಳ ದ್ವಾರಾ ಅದು ಪ್ರಕಟವಾಗುವದೆಂದೂ, ಶಬ್ದ ವರ್ಣಾನುಪೂರ್ವೀ ವಿಶಿಷ್ಟವಾದುದೆಂದೂ

48. ಶ್ವೇ. ಉ. 6-18

49. ವೇದಾಂತಪರಿಭಾಷಾ. ಆಗಮಪರಿಚ್ಛೇದ ; ವೇದಾರ್ಥಸಂಗ್ರಹ ; ವಿಷ್ಣುತತ್ತ್ವನಿರ್ಣಯ

ಅಂಗೀಕರಿಸುವುದಲ್ಲದೆ ಅರ್ಥವೂ ಸಹ ನಿತ್ಯವೆಂದೇ ಅವರು ಒಪ್ಪುತ್ತಾರೆ.

ವೈಯ್ಯಾಕರಣರೂ ವೇದ ನಿತ್ಯತ್ವವನ್ನು ಒಪ್ಪುತ್ತಾರೆ. ವೇದ ನಿತ್ಯ, ಅಪೌರುಷೇಯ ಎಂದು ಹೇಳುವುದಲ್ಲದೆ ಇವರು ಅರ್ಥವೂ ನಿತ್ಯವೆಂದು ಒಪ್ಪುತ್ತಾರೆ. ಆದರೆ ವರ್ಣಾನುಪೂರ್ವಿಯು ಅನಿತ್ಯವೆಂಬುದು ಇವರ ಮತ. 'ಯದ್ಯಪ್ಯರ್ಥೋ ನಿತ್ಯಃ ಯಾತ್ವಸೌ ವರ್ಣಾನುಪೂರ್ವೀ ಸಾ ಅನಿತ್ಯಾ. ತದ್ಭೇದಾಚ್ಚೈತದ್ಭವತಿ ಕಾಠಕಂ ಕಾಲಾಪಕಂ ಮೌದಕಂ ಪೈಪ್ಪಲಾದಕಂ ಇತಿ' ಎಂದು ಪತಂಜಲಿಗಳು ಈ ಅಂಶವನ್ನು ಮಹಾಭಾಷ್ಯದಲ್ಲಿ ಪ್ರತಿಪಾದಿಸಿದ್ದಾರೆ. ವರ್ಣಾನುಪೂರ್ವಿಯು ಭಿನ್ನಭಿನ್ನವಾಗಿರುವುದರಿಂದಲೇ ಶಾಖಾಭೇದಗಳಿಗೆ ಅವಕಾಶವುಂಟಾಯಿತೆಂದು ಇವರ ಮತ.

ಹೀಗೆ ವೇದಪ್ರಾಮಾಣ್ಯದ ವಿಚಾರದಲ್ಲಿ ನಮ್ಮ ಪ್ರಾಚೀನರು ವಿವೇಚನೆ ನಡೆಸಿದ್ದಾರೆ. ಆಸ್ತಿಕದರ್ಶನಕಾರರೆಲ್ಲರೂ ವೇದದ ನಿತ್ಯತ್ವವನ್ನು ಒಪ್ಪಿದ್ದಾರೆ. ಆನುಪೂರ್ವಿ ನಿತ್ಯವೇ ಅರ್ಥ ನಿತ್ಯವೇ ಎಂಬ ಅಂಶದಲ್ಲಿ ಮಾತ್ರ ಭಿನ್ನಾಭಿಪ್ರಾಯವಿದೆ. ಬ್ರಾಹ್ಮಣೋಪನಿಷತ್ತುಗಳೂ, ವೇದಾಂತಗಳೂ ವೇದ ತತ್ತದಾನುಪೂರ್ವೀವಿಶಿಷ್ಟವಾಗಿ ನಿತ್ಯವೆಂಬ ಪಕ್ಷವನ್ನು ಅಂಗೀಕರಿಸಿವೆ. ಪೂರ್ವಮೀಮಾಂಸಾಕಾರರೂ, ವೈಯ್ಯಾಕರಣರೂ ಸಹ ವೇದ ನಿತ್ಯ, ಅಪೌರುಷೇಯ, ಆದರೆ ವರ್ಣಾನುಪೂರ್ವಿಯು ಅನಿತ್ಯವೆಂಬ ಪಕ್ಷದಲ್ಲಿದ್ದಾರೆ. ಹೀಗೆ ವೇದಪ್ರಾಮಣ್ಯ ಪ್ರಾಚೀನದರ್ಶನಕಾರರಿಗೆಲ್ಲ ಸಮ್ಮತವಾದುದಾಗಿದೆ.

## ವೇದಪ್ರಾಮಾಣ್ಯ–ನವೀನರ ಮತ

ವೇದವಾಙ್ಮಯದ ವಿಚಾರದಲ್ಲಿ ಆಧುನಿಕ ವಿಮರ್ಶಕರ ಅಭಿಪ್ರಾಯವನ್ನು ಈಗ ನಾವು ತಿಳಿಯೋಣ. ಇವರ ದೃಷ್ಟಿಯಲ್ಲಿ ವೇದ ಅಪೌರುಷೇಯವಲ್ಲ. ಆರ್ಯರು ಭಾರತಕ್ಕೆ ಬರುವ ಮೊದಲೇ ವೇದೋಕ್ತವಾದ ದೇವತೆಗಳನ್ನು ಸ್ತುತಿಸುತ್ತಿದ್ದರೆಂದೂ ಅವರು ರಚಿಸಿದ ಸ್ತೋತ್ರಸಂಗ್ರಹಗಳೇ ವೇದವೆಂದೂ ಇವರ ಅಭಿಪ್ರಾಯ. ಪ್ರತಿಯೊಂದು ಸೂಕ್ತಕ್ಕೂ ಒಬ್ಬ ಋಷಿ ಇದ್ದೇ ಇದ್ದಾರೆ. ಆತನೇ ಆ ಮಂತ್ರದ ರಚಯಿತಾ. ಪ್ರಾಚೀನಾರ್ಯರು ತಾವು ವ್ಯವಹರಿಸುತ್ತಿದ್ದ ಭಾಷೆಯಲ್ಲಿಯೇ ಈ ಸ್ತುತಿಗಳನ್ನು ವಿರಚಿಸಿದ್ದಾರೆ. ಅವರು ಪ್ರಕೃತಿಯ ನಾನಾ ಮುಖಗಳನ್ನು ದೇವತೆಗಳಂತೆ ರೂಪಣ ಮಾಡಿ ಸ್ತುತಿಸಿದ್ದಾರೆ. ಆದುದರಿಂದ ಇವು ಅಪೌರುಷೇಯವಲ್ಲವೆಂಬುದು ಇವರ ಮತ. ಋಷಿಗಳು ಮಂತ್ರಕರ್ತಾರರೆಂಬುದಕ್ಕೆ ಅಲ್ಲಿಯೇ ಬೇಕಾದಷ್ಟು ಸೂಚನೆಗಳಿವೆ.

ಕೆಳಗಿನ ಮಂತ್ರಭಾಗಗಳು ಈ ಅಂಶವನ್ನು ಸ್ಥಿರಗೊಳಿಸುತ್ತವೆ:

| | |
|---|---|
| 'ಇದಂ ಬ್ರಹ್ಮ ಕ್ರಿಯಮಾಣಂ ನವೀಯಃ' | (ಋ. ಸಂ. 8-35-14) |
| 'ಬ್ರಹ್ಮಕೃಣ್ವಂತೋ ಹರಿವೋ ವಸಿಷ್ಠಾಃ' | (ಋ. ಸಂ. 7-97-9) |
| 'ಇದಂ ಬ್ರಹ್ಮಾಣಿ ಜನಯಂತ ವಿಪ್ರಾಃ' | (ಋ. ಸಂ. 7-22-9) |
| 'ಅಗ್ನೇ ಸಸೃಜ್ಮಹೇ ಗಿರಂ' | (ಋ. ಸಂ. 6-16-37) |

ಋಷಿಗಳಲ್ಲಿ ಪುರಾತನರು, ಮಧ್ಯಮರು ನೂತನರು ಎಂಬ ಅಂಶವೂ ಋಗ್ವೇದದಲ್ಲಿಯೇ ಸ್ಪಷ್ಟವಾಗಿ ಕಂಡುಬರುತ್ತದೆ. ಈ ಮಂತ್ರಗಳು ಋಷಿಕವಿಗಳಿಂದ ರಚಿತವಾದವೆಂಬುದನ್ನೇ ಈ ಅಂಶ ಸಮರ್ಥಿಸುತ್ತದೆ.

| | |
|---|---|
| 'ಅಗ್ನಿಃ ಪೂರ್ವೇಭಿಃ ಋಷಿಭಿಃ ಈಡ್ಯೋ ನೂತನೈರುತ' | (ಋ.ಸಂ. 1-1-2) |
| 'ಸ್ತವಾಮುತ ಇಂದ್ರ ಪೂರ್ವ್ಯಾ ಮಹಾನ್ಯುತ ಸ್ತವಾಮ ನೂತನಾ ಕೃತಾನಿ' | (ಋ. ಸಂ. 12-11-6) |

'ಯೇಚ ಪೂರ್ವೇ ಋಷಯಃ ಯೇಚ ನೂತ್ನಾಃ' (ಋ. ಸಂ. 8-22-9)

'ಋತವಾನಃ ಕವಯಃ ಪೂರ್ವ್ಯಾಸಃ' (ಋ. ಸಂ. 8-76-4)

'ಸೂಕ್ತೇನ ವಚಸಾ ನವೇನ' (ಋ. ಸಂ. 12-18-3)

ಇಂಥ ಉಲ್ಲೇಖಗಳು ವೇದದಲ್ಲಿ ಅಸಂಖ್ಯವಾಗಿವೆ. ಇವುಗಳಿಂದ ಈ ಸೂಕ್ತಗಳನ್ನು ಋಷಿಗಳು ರಚಿಸಿದರೆಂಬ ನಿಶ್ಚಯಕ್ಕೆ ಬರಬಹುದು. ಈ ಸ್ತೋಮಕರ್ತೃಗಳನೇಕರೆಂದೂ ಅವರಲ್ಲಿ ಅವರವರ ಅನುಭವಕ್ಕನುಗುಣವಾದ ವ್ಯತ್ಯಾಸಗಳಿದ್ದವೆಂದೂ ಋಗ್ವೇದದಲ್ಲಿಯೇ ಗೊತ್ತಾಗುತ್ತದೆ.

'ಅಕ್ಷ್ಣವಂತಃ ಕರ್ಣವಂತಃ ಸಖಾಯಃ
ಮನೋಜವೇಷ್ವಸಮಾ ಬಭೂವುಃ |' (ಋ. ಸಂ. 10-71-7)

ಎಂಬ ಮಂತ್ರ ಇದನ್ನು ಸ್ಪಷ್ಟವಾಗಿ ಹೇಳುತ್ತದೆ.

ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ಋಷಿಗಳಿಂದ ರಚಿತವಾದ ಸೂಕ್ತಗಳ ಸಂಗ್ರಹವೇ ವೇದ. ಋಷಿಗಳು ಪ್ರಕೃತಿಯ ನಾನಾ ಮುಖಗಳನ್ನು ರೂಪಣ ಮಾಡಿ ದೇವತೆಗಳೆಂದು ಸ್ತುತಿಸಿದ್ದಾರೆ. ಪ್ರಕೃತಿಯಲ್ಲಿ ತಾವು ಕಂಡ ಚೆಡಗನ್ನು ಇಲ್ಲಿ ವರ್ಣಿಸಿದ್ದಾರೆ. ಅನೇಕ ವೇದಸೂಕ್ತಗಳು ಅತ್ಯುತ್ತಮವಾದ ಕವನಗಳಾಗಿವೆ. ಋಷಿಗಳು ಈ ಸೂಕ್ತಗಳಲ್ಲಿ ತಮ್ಮ ಕಾಲದ ಐತಿಹಾಸಿಕ ವಿಚಾರಗಳನ್ನೂ ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಇವುಗಳಿಂದ ಆ ಕಾಲದ ಜನ ಉನ್ನತ ಮಟ್ಟದ ಸಂಸ್ಕೃತಿಯನ್ನು ಮುಟ್ಟಿದ್ದರೆಂಬುದು ಸ್ಪಷ್ಟವಾಗುತ್ತದೆ. ಕೆಲವು ಸೂಕ್ತಗಳು ಅವರ ಖಗೋಳಶಾಸ್ತ್ರಜ್ಞಾನವನ್ನೂ ಹೊರಗೆಡಹುತ್ತವೆ. ನಕ್ಷತ್ರಗಳ ಸಂಚಾರ ಮೊದಲಾದುವನ್ನು ಅವರು ಬಹಳ ಸೂಕ್ಷ್ಮವಾಗಿ ನಿರೀಕ್ಷಿಸಿದ್ದರೆಂಬುದು ಇದರಿಂದ ಅರಿವಾಗುತ್ತದೆ. ಹೀಗೆ ಈ ಸೂಕ್ತಗಳು ಬಹುಮುಖವಾದ ಪ್ರಾಧಾನ್ಯ ಹೊಂದಿ ಆ ಕಾಲದ ಜನಜೀವನದ ಬಗ್ಗೆ ಬೆಳಕು ಚೆಲ್ಲುತ್ತವೆ.

ವೇದಸೂಕ್ತಗಳಲ್ಲಿ ಬರುವ ಮಂತ್ರಗಳು ಪ್ರಕೃತಿಯ ಶಕ್ತಿಗಳನ್ನೇ ದೇವತೆಗಳೆಂದು ಸ್ತುತಿಸುತ್ತವೆ. ಇಲ್ಲಿ ಸ್ತುತಿಸಲ್ಪಟ್ಟಿರುವ ಅಗ್ನಿ, ಸೂರ್ಯ, ವರುಣ, ವಾಯು, ವಾತ, ಉಷಸ್, ರಾತ್ರಿ, ಮಿತ್ರ, ದೌಃ, ಆಪಃ, ಪೃಥ್ವೀ, ಸೋಮ ಮುಂತಾದ ದೇವತೆಗಳು ಪ್ರಕೃತಿಯ ಹಲವಾರು ರೂಪಗಳನ್ನು ಪ್ರತಿನಿಧಿಸುತ್ತಾರೆ. ಇನ್ನು ಕೆಲವು ದೇವತೆಗಳು ಪ್ರಕೃತಿಯ ಯಾವ ಮುಖವನ್ನು ಪ್ರತಿನಿಧಿಸುವರೆಂಬುದನ್ನು ಹೇಳುವುದಕಾಗದಷ್ಟು ಬದಲಾಗಿದ್ದಾರೆ. ಅಂತೂ ಇಲ್ಲಿ ಪ್ರಕೃತಿಯ ಉಪಾಸನೆಯಿಂದಲೇ ದೇವತಾ ಕಲ್ಪನೆ ಆರಂಭವಾಗಿದೆ ಎಂದು ಹೇಳಬಹುದು. ಹೀಗೆ ವೇದಧರ್ಮ ಪ್ರಕೃತಿ ದೇವತಾಕವಾದುದು. ಇದನ್ನು Anthropomorphism ಎಂದು ಹೇಳುವರು.

ಕೆಲವರು ಆಧುನಿಕ ವಿಮರ್ಶಕರು, ಐತಿಹಾಸಿಕವಾದ ಅಂಶಗಳನೇಕ ವೇದದಲ್ಲಿರುವುದರಿಂದ, ವೇದಗಳಿಗೆ ಹೆಚ್ಚಿನ ಮಹತ್ವವುಂಟೆಂದು ಹೇಳುತ್ತಾರೆ. ಇವರ ದೃಷ್ಟಿಯಲ್ಲಿ ವೇದ ಪ್ರಧಾನವಾಗಿ ಅತ್ಯಂತ ಪ್ರಾಚೀನವಾದ ಇತಿಹಾಸವೇ. ಆರ್ಯ ಮತ್ತು ದಾಸರ ಯುದ್ಧಗಳ ಉಲ್ಲೇಖ ವೇದದಲ್ಲಿ ತುಂಬಿದೆ. ಈ ಆರ್ಯ ದಸ್ಯುಗಳ ಯುದ್ಧಗಳ ಹಿನ್ನೆಲೆಯಲ್ಲಿಯೇ ವೇದದ ವಿಕಾಸವಾಗಿದೆ. ಅನೇಕಾನೇಕ ರಾಜರುಗಳ ಉಲ್ಲೇಖ ಅಲ್ಲಿದೆ. ಸುದಾಸ ಇಂಥವನೊಬ್ಬ. ತೃತ್ಸು, ಯದು, ಪುರು ಮೊದಲಾದ ವಂಶಗಳವರ ನಿರೂಪಣೆಯು ಅಲ್ಲಿ ದೊರಕುವುದು. ಇಲ್ಲಿ ಬರುವ ವೃತ್ರವಧ ಆರ್ಯರ ನಾಯಕ ಇಂದ್ರನಿಗೂ ಅಸುರರ ನಾಯಕ ತ್ವಾಷ್ಟನಿಗೂ

ನಡೆದ ಯುದ್ಧದ ನಿರೂಪಣೆ ಒಂದು. ಇಲ್ಲಿ ಬರುವ ಅನೇಕ ದಾನ ಸ್ತುತಿಗಳು ಅಂದಿನ ರಾಜರುಗಳನ್ನು ಕೊಂಡಾಡುತ್ತವೆ. ಇಲ್ಲಿ ಅಂದಿನ ಐತಿಹಾಸಿಕ ಪರಿಸ್ಥಿತಿಗಳು, ಆಡಳಿತ ಕ್ರಮಗಳು, ಸಮಾಜ ವ್ಯವಸ್ಥೆಗಳು, ಆಚಾರ ವಿಚಾರಗಳು, ನಂಬಿಕೆಗಳು ಮೊದಲಾದವೆಲ್ಲ ಗೊತ್ತಾಗುವುವು. ಆದುದರಿಂದ ಭಾರತದ ಅಥವಾ ವಿಶ್ವದ ಇತಿಹಾಸವನ್ನರಿಯಬೇಕೆನ್ನುವವರಿಗೆ ವೇದ ಅತ್ಯಮೂಲ್ಯವಾದ ಐತಿಹಾಸಿಕ ಆಧಾರವಾಗಿದೆ. ವಿಶ್ವದಲ್ಲಿಯೇ ಅತ್ಯಂತ ಪ್ರಾಚೀನವಾದ ನಾಗರಿಕತೆಯನ್ನು ಹೊಂದಿದ್ದ ಆರ್ಯಜನಾಂಗದವರ ಅತ್ಯಂತ ಪ್ರಾಚೀನವಾದ ಇತಿಹಾಸ ಇಲ್ಲಿ ಅಡಗಿದೆಯೆಂದು ಅವರು ಪ್ರತಿಪಾದಿಸುತ್ತಾರೆ.

ವೇದದಲ್ಲಿ ಇತಿಹಾಸ ಅಡಗಿರುವಂತೆ, ಪ್ರಕೃತಿ ಪೂಜೆ ವ್ಯಕ್ತವಾಗಿರುವಂತೆ, ಅದರಲ್ಲಿ ಖಗೋಳಶಾಸ್ತ್ರ ಸಂಬಂಧವಾದ ಜ್ಞಾನವೂ ಗೊತ್ತಾಗುತ್ತದೆ. ಬಾಲಗಂಗಾಧರ ತಿಲಕರು, ಎಸ್. ಬಿ. ದೀಕ್ಷಿತರು, ಡಾ. ಯಾಕೋಬೀ ಮುಂತಾದವರು ಖಗೋಳಶಾಸ್ತ್ರದ ಆಧಾರಗಳಿಂದ ವೇದವಾಙ್ಮಯವನ್ನು ಅಧ್ಯಯನಮಾಡಿ ಮುಖ್ಯವಾದ ಅನೇಕ ಸಿದ್ಧಾಂತಗಳನ್ನು ರೂಪಿಸಿದ್ದಾರೆ. ಪ್ರಾಚೀನಾರ್ಯರು ಖಗೋಳಶಾಸ್ತ್ರದಲ್ಲಿ ಉನ್ನತವಾದ ಪಾಂಡಿತ್ಯವನ್ನು ಹೊಂದಿದ್ದರೆಂಬುದು ಇವರ ಅಭಿಪ್ರಾಯ. ದೇವತಾಸ್ತುತಿಯ ವ್ಯಾಜದಲ್ಲಿ ಈ ಜ್ಞಾನವನ್ನವರು ಉಪದೇಶಿಸಿದ್ದಾರೆಂದು ಇವರು ಹೇಳುತ್ತಾರೆ. ವೃಷಾಕಪಿ ಸೂಕ್ತ ಖಗೋಳಶಾಸ್ತ್ರದ ಆಧಾರ ಹೊಂದಿದೆ ಎಂಬುದು ತಿಲಕರ ಮತ. ಈ ರೀತಿಯಲ್ಲಿ ಸಂಶೋಧನೆ ನಡೆಸಿರುವ ಅನೇಕ ವಿದ್ವಾಂಸರು ಋಗ್ವೇದವೇ ಮೊದಲಾದ ವೇದಭಾಗಗಳಲ್ಲಿ ಬರುವ ಎಲ್ಲ ಹೆಸರುಗಳೂ ನಕ್ಷತ್ರಪರವಾದವೆಂದು ವಿವರಿಸುತ್ತಾರೆ. ಹೀಗಾಗಿ ಸುದಾಸ, ವಿಶ್ವಾಮಿತ್ರ, ವಸಿಷ್ಠ ಮೊದಲಾದ ಹೆಸರುಗಳೂ ಒಂದೊಂದು ನಕ್ಷತ್ರವನ್ನು ಪ್ರತಿನಿಧಿಸುವುದೆಂದು ಇವರ ಮತ. ಇವರ ದೃಷ್ಟಿಯಲ್ಲಿ ಅತ್ಯಪೂರ್ವವಾದ ಖಗೋಳಶಾಸ್ತ್ರಜ್ಞಾನದ ಭಂಡಾರವಾಗಿದೆ ವೇದ.[50]

ಆಧುನಿಕ ವಿದ್ವಾಂಸರೂ ಸಹ ವೇದಕ್ಕೆ ಆಧ್ಯಾತ್ಮಿಕ ಅರ್ಥವೃತ್ತಿಯೇ ಪ್ರಧಾನವಾದು ದೆಂದು ಒಪ್ಪುತ್ತಾರೆ. ಆ ವೇದದಲ್ಲಿಯೇ ಈ ಅಂಶ ಹೇಳಿದೆ. ಕೆಲವು ಋಷಿಗಳಿಗೆ ದಿವ್ಯದೃಷ್ಟಿ ಉಂಟಾಯಿತೆಂದು ವೇದ ಹೇಳುತ್ತದೆ.[51] ವೇದದಲ್ಲಿ ಇತರ ವಿಚಾರಗಳು ಇರಬಹುದು. ಆದರೆ ಅವುಗಳೆಲ್ಲದರ ಹಿನ್ನೆಲೆಯಲ್ಲಿ ಪ್ರಧಾನವಾಗಿರುವುದು ಆಧ್ಯಾತ್ಮಿಕ ಮನೋಭಾವ. ಋಷಿಗಳು ತಮ್ಮ ಅಂತಃಸತ್ವದ ಪ್ರಭಾವದಿಂದ ವೈವಿಧ್ಯಪೂರ್ಣವಾಗಿರುವ ಈ ಜಗತ್ತು ಆತ್ಮನಲ್ಲಿ ಏಕತಾನವಾಗಿದೆ ಎಂಬುದನ್ನು ಸಾಕ್ಷಾತ್ಕರಿಸಿಕೊಂಡಿದ್ದರು. ಅದನ್ನೇ ಮಂತ್ರಗಳಲ್ಲಿ ತೋರಿದ್ದಾರೆ. ಮಹಾಪ್ರಕೃತಿಯಲ್ಲಿ ನಿತ್ಯವಾಗಿರುವ ಶಬ್ದವನ್ನು ಈ ಮಹಾಸತ್ವರು ತಮ್ಮ ಧ್ಯಾನದಿಂದ ಪಡೆದರು. ಸಮಾಧಿಯಲ್ಲಿ ಆ ಸೂಕ್ಷ್ಮರೂಪವನ್ನು ಸಾಕ್ಷಾತ್ಕರಿಸಿಕೊಂಡು ಆ ದಿವ್ಯಜ್ಞಾನವನ್ನು ಗೂಢವಾಗಿ ಮಂತ್ರಗಳಲ್ಲಿ ಅಡಗಿಸಿದ್ದಾರೆ. ಆದುದರಿಂದಲೇ ಉಳಿದೆಲ್ಲ ಅರ್ಥವೃತ್ತಿಗಳಿಗಿಂತ ಆಧ್ಯಾತ್ಮಿಕವಾದ ಅರ್ಥವೃತ್ತಿ ಹೆಚ್ಚು ವ್ಯಾಪಕವಾಗಿದೆ. ಯೋಗಿವರ್ಯರಾದ ಅರವಿಂದ

50. ಈ ಗ್ರಂಥಗಳನ್ನು ನೋಡಿ :

(1) *Essays on Indo-Aryan Mythology* by Narayana Iyengar

(2) *Scripture of the Heavens* by G. V. Raghava Rao

(3) *Orion* by B. G. Tilak.

51. ಋ. ಸಂ. 7-33-7 ; 10-71-3 ; 7-87-4 ; 3-29-15 ; 3-53-9 ; 3-53-12

ಘೋಷರವರು ವೇದದ ಈ ಮಹತ್ವವನ್ನು ಮನಗಾಣ ಬೇಕೆಂದು ಎಚ್ಚರಿಸಿದ್ದಾರೆ.[52]

ಹೀಗೆ ಆಧುನಿಕ ವಿಮರ್ಶಕರು ವೇದವಾಙ್ಮಯದ ಅಧ್ಯಯನವನ್ನು ಬೇರೆಬೇರೆ ದೃಷ್ಟಿಗಳಿಂದ ಮಾಡಿದ್ದಾರೆ. ವೇದಮಂತ್ರಗಳಿಗೆ ಅಧಿಯಜ್ಞಾರ್ಥ, ಅಧಿದೈವಾರ್ಥ ಮತ್ತು ಅಧ್ಯಾತ್ಮಾರ್ಥಗಳೆಂಬ ಮೂರು ಬಗೆಯ ಅರ್ಥಗಳುಂಟೆಂದು ಯಾಸ್ಕರು ತಮ್ಮ ನಿರುಕ್ತದಲ್ಲಿ ಬಹಳ ಹಿಂದಿನ ಕಾಲದಲ್ಲಿಯೇ ಹೇಳಿದ್ದಾರೆ. ಪ್ರಾಚೀನರು ವೇದವಾಙ್ಮಯ ಸಮಗ್ರವಾಗಿ ಅನಾದಿ, ಅಪೌರುಷೇಯ ಮತ್ತು ಪರಮ ಪ್ರಮಾಣವೆಂದು ಪ್ರತಿಪಾದಿಸಿದರೆ ಆಧುನಿಕರು ವೇದಮಂತ್ರಗಳು ಬೇರೆಬೇರೆ ಪರಿಸ್ಥಿತಿಗಳಲ್ಲಿ ಬೇರೆಬೇರೆ ದೇಶಗಳಲ್ಲಿ ಬೇರೆಬೇರೆ ಋಷಿಗಳಿಂದ ರಚಿತವಾದ ಮಂತ್ರಸಮೂಹಗಳೆಂದೂ ಕೇವಲ ಯಾಗಗಳಲ್ಲಿ ಅವುಗಳನ್ನು ಬಳಸುತ್ತಿದ್ದರೆಂದೂ ಪ್ರತಿಪಾದಿಸುತ್ತಾರೆ. ವೇದಗಳಿಗೆ ಬಹುಮುಖವಾದ ಪ್ರಾಧಾನ್ಯವಿದೆ ಎಂಬುದನ್ನು ಇವರೂ ಒಪ್ಪುತ್ತಾರೆ. ಪ್ರಾಚೀನ ಕಾಲದ ಮತಧರ್ಮಗಳನ್ನರಿಯುವುದಕ್ಕಾಗಲಿ, ಅಂದಿನ ಇತಿಹಾಸವನ್ನರಿಯುವುದಕ್ಕಾಗಲಿ ಅಥವಾ ಆಧ್ಯಾತ್ಮಿಕತತ್ವವನ್ನರಿಯುವುದಕ್ಕಾಗಲಿ ವೇದಗಳ ಅಧ್ಯಯನ ಅನಿವಾರ್ಯವೆಂದು ಇವರು ಅಭಿಪ್ರಾಯಪಡುತ್ತಾರೆ. ವೇದದ ನಿತ್ಯತ್ವ ಅಥವಾ ಪೌರುಷೇಯತ್ವದಲ್ಲಿ ಭಿನ್ನಾಭಿಪ್ರಾಯವಿದೆಯೇ ವಿನಾ ಅದರಲ್ಲಿ ಅಡಗಿರುವ ವಿಚಾರದ ಮಹತ್ವದ ಬಗೆಗೆ ಯಾರಲ್ಲೂ ಭಿನ್ನಾಭಿಪ್ರಾಯವಿಲ್ಲ.

### ವೇದ ಪರಂಪರೆಯ ಇತಿಹಾಸ

ಸಂಹಿತೆಗಳಲ್ಲಿನ ಮಂತ್ರಗಳ ರಹಸ್ಯಾರ್ಥಗಳನ್ನು ಅರಿಯಲು ಜನ ಕಾಲಕ್ರಮದಲ್ಲಿ ಬಹಳ ಪ್ರಯತ್ನಪಟ್ಟರು. ಬ್ರಾಹ್ಮಣ ಗ್ರಂಥಗಳು ಗಮನಾರ್ಹವಾಗಿ ಈ ಪ್ರಯತ್ನವನ್ನು ನಡೆಸಿವೆ. ಯಜ್ಞವಿವರಣೆಯೊಡನೆ ಮಂತ್ರಗಳ ಅರ್ಥವಿವರಣೆಯನ್ನೂ ಬ್ರಾಹ್ಮಣ ಗ್ರಂಥಗಳು ಹೆಚ್ಚುಕಡಿಮೆ ಕೊಡುತ್ತವೆ. ಶಬ್ದಗಳ ವ್ಯುತ್ಪತ್ತಿಯನ್ನೂ ಇವು ಹೇಳುತ್ತವೆ. ನಿರುಕ್ತಕಾರರು ಬ್ರಾಹ್ಮಣಗ್ರಂಥಗಳಿಂದ ಅನೇಕಶಃ ಉದಾಹರಿಸುತ್ತಾರೆ. ಈ ದಿಶೆಯಲ್ಲಿ ಮುಂದುವರಿದು

52. "A veil of symbols was created behind the which these mysteries could shelter, formulas of speech also which could be understood by the initiated but were either not known by others or were taken by them in an outward sense which carefully covered their true meaning and secret."

"Even in the time of the Upanishads the spiritual seekers of the age had to resort to initiation and meditation to penetrate into their knowledge while the scholars afterwards were at sea and had to resort to conjecture and to concentrate on a mental interpretation or to explain the myths, by the legends of the Brahmanas themselves often symbolic and obscure. But still, to make this discovery will be the sole way of getting the true sense and the true value of the Veda. We must take seriously the hint of Yaska, accept the Rishi's description of the Veda's contents as Seer-Wisdom 'seer word's and look for whatever clue we can find to this ancient wisdom. Otherwise the Veda must remain forever a sealed book. Grammarians, etymologists, scholastic conjectures will not open to us the sealed chamber."

*'Hymns to the Mystic Fire'*
Sri Aurobindo

ಮಂತ್ರಗಳಿಗೆ ಋಷಿಗಳು ಮೊದಲು ಪದಪಾಠವನ್ನು ಒದಗಿಸಿದರು. ಒಂದೊಂದು ಮಂತ್ರದಲ್ಲಿನ ಪದಗಳನ್ನು ಬೇರೆಬೇರೆಯಾಗಿ ಬಿಡಿಸಿ ತಿಳಿಸಿದರು. ಇವುಗಳಿಂದ ಮಂತ್ರಗಳ ಅರ್ಥಪರಿಚಯ ಸುಲಭವಾಗಿ ಆಗಲು ಅನುಕೂಲವಾಯಿತು.

ಪದಪಾಠಕರಲ್ಲಿ ಶಾಕಲ್ಯರು ಪ್ರಸಿದ್ಧರು. ಇವರು ಋಗ್ವೇದ ಸಂಹಿತೆಗೆ ಪದಪಾಠವನ್ನು ರಚಿಸಿದ್ದಾರೆ. ಶಾಕಲ್ಯರ ಉಲ್ಲೇಖ ಬೃಹದಾರಣ್ಯಕೋಪನಿಷತ್ತು, ನಿರುಕ್ತ, ಋಕ್‌ಪ್ರಾತಿಶಾಖ್ಯ ಮುಂತಾದವುಗಳಲ್ಲಿ ಬರುತ್ತದೆ. ಇವರು ಉಪನಿಷತ್ಕಾಲೀನರಾಗಿರಬಹುದೆಂದು ಇದರಿಂದ ಊಹಿಸಬಹುದು. ಶಾಕಲ್ಯರ ಪದಪಾಠವನ್ನು ನಿರುಕ್ತಕಾರರು ಕೆಲವು ಕಡೆ ಅಂಗೀಕರಿಸದೆ ಇರುವುದೂ ಉಂಟು. ಉದಾಹರಣೆಗೆ ನಿರುಕ್ತದಲ್ಲಿ (5-21) 'ಅರುಣೋಮಾಸಕೃದ್‌ವೃಕಃ' ಎಂಬುದನ್ನು ಮಾಸಕೃತ್, ವೃಕಃ ಎಂದು ವಿಭಾಗಿಸಿದ್ದಾರೆ. ಶಾಕಲ್ಯರು ಇದನ್ನು ಮಾ, ಸಕೃತ್ ಎಂದು ಎರಡು ಪದಗಳನ್ನಾಗಿ ವಿಭಾಗಿಸಿದ್ದಾರೆ. ಋಗ್ವೇದಕ್ಕೆ ಶಾಕಲ್ಯರ ಪದಪಾಠವಲ್ಲದೆ ರಾವಣಕೃತ ಪದಪಾಠವೊಂದೂ ಇದೆ.

ಶುಕ್ಲಯಜುರ್ವೇದದ ಮಾಧ್ಯಂದಿನ ಸಂಹಿತೆ ಪದಪಾಠದೊಡನೆ ಬೊಂಬಾಯಿಯಲ್ಲಿ ಮುದ್ರಿತವಾಗಿದೆ. ಈ ಪದಪಾಠವನ್ನು ರಚಿಸಿದವರಾರೆಂಬುದು ಗೊತ್ತಿಲ್ಲ. ತೈತ್ತಿರೀಯ ಸಂಹಿತೆಗೆ ಪದಪಾಠವನ್ನು ರಚಿಸಿದವರು ಅತ್ರೇಯರು. 'ಉಖಿಶ್ಶಾತ್ರೇಯಾಯದದೌ ಯೇನ ಪದವಿಭಾಗಶ್ಚಕ್ರೇ' ಎಂದು ಭಟ್ಟಭಾಸ್ಕರತೈತ್ತಿರೀಯ ಸಂಹಿತಾ ಭಾಷ್ಯದಲ್ಲಿ ಉಲ್ಲೇಖವಿದೆ. ಕಾಂಡಾನುಕ್ರಮಣಿಕೆಯಲ್ಲಿ 'ಯಸ್ಯಾಃ ಪದಕೃದಾತ್ರೇಯಃ ವೃತ್ತಿಕಾರಸ್ತು ಕುಂಡಿನಃ' ಎಂಬುದಾಗಿ ಹೇಳಿದೆ. ಬೋಧಾಯನ ಗೃಹ್ಯದಲ್ಲಿ ಋಷಿತರ್ಪಣ ಪ್ರಕರಣದಲ್ಲಿ 'ಅತ್ರೇಯಾಯ ಪದಕಾರಾಯ' ಎಂದು ಹೇಳಿ ಆತ್ರೇಯರಿಗೂ ತರ್ಪಣ ಮಾಡಲು ತಿಳಿಸಿದೆ. ಇದೆಲ್ಲದರಿಂದ ಆತ್ರೇಯರೇ ತೈತ್ತಿರೀಯಸಂಹಿತೆಯ ಪದಕಾರರೆಂದು ಗೊತ್ತಾಗುತ್ತದೆ. ಇವರು ಪ್ರಾಯಃ ಶಾಕಲ್ಯರ ಸಮಕಾಲೀನರಾಗಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಗಾರ್ಗ್ಯರು ಸಾಮವೇದದ ಪದಕಾರರು. ಅನೇಕ ಪ್ರಾಚೀನ ಗ್ರಂಥಗಳಲ್ಲಿ ಇವರ ಉಲ್ಲೇಖವಿದೆ. ನಿರುಕ್ತದಲ್ಲಿ (4-3-4) 'ಮೇಹನ' ಶಬ್ದ ಪ್ರಸಂಗದಲ್ಲಿ ಯಾಸ್ಕರು ಶಾಕಲ್ಯ ಮತ್ತು ಗಾರ್ಗ್ಯರ ಅಭಿಪ್ರಾಯಗಳ ಸಮೀಕರಣ ಮಾಡಿದ್ದಾರೆ. ಋಗ್ವೇದಿಗಳಿಗನುಸಾರವಾಗಿ 'ಮೇಹನ'ವೆಂಬುದು ಒಂದೇ ಪದ. ಆದರೆ ಸಾಮವೇದಿಗಳಿಗನುಸಾರವಾಗಿ 'ಮ, ಇಹ, ನ' ಎಂದು ಮೂರು ಪದಗಳಾಗುತ್ತವೆ. ಈ ಪ್ರಸಂಗದಲ್ಲಿ ಸಾಮಪದಕಾರ ಗಾರ್ಗ್ಯರ ಸ್ಪಷ್ಟವಾದ ಉಲ್ಲೇಖವಿದೆ. ಗಾರ್ಗ್ಯರ ಪದಪಾಠದ ವೈಶಿಷ್ಟ್ಯವೆಂದರೆ ಅಧಿಕ ಮಾತ್ರೆಗಳಲ್ಲಿ ಪದಚ್ಛೇದ ಮಾಡಿರುವುದೇ ಆಗಿದೆ. ಮಿತ್ರಂ ಎಂಬುದನ್ನು 'ಮಿ | ತ್ರಮ್|' ಎಂದೂ 'ಅನ್ಯೇ'ಎಂಬುದನ್ನು 'ಅನ್ | ಯೇ| ಎಂದೂ ಸಮುದ್ರ ಎಂಬುದನ್ನು 'ಸಮ್| ಉದ್ರಮ್' ಎಂದೂ ವಿಭಾಗಿಸಿರುವುದನ್ನು ಇಲ್ಲಿ ಸೂಚಿಸಬಹುದು. ಯಾಸ್ಕರೂ ಈ ಕ್ರಮವನ್ನು ಅನೇಕ ಕಡೆ ಅನುಸರಿಸಿದ್ದಾರೆ.

ಈ ಬೇರೆಬೇರೆ ಪದಕಾರರುಗಳಲ್ಲಿ ನಾವು ಅನೇಕ ವೇಳೆ ಏಕಮತ್ಯವನ್ನು ಕಾಣಲಾರೆವು. ಒಂದು ಪದವನ್ನು ಕೆಲವರು ಒಂದೇ ಪದವೆಂದು ವಿಭಾಗಿಸಿದ್ದರೆ ಮತ್ತೆ ಕೆಲವರು ಆಚಾರ್ಯರುಗಳು ಅದನ್ನೇ ಎರಡು ಅಥವಾ ಮೂರು ಪದಗಳಾಗಿ ವಿಭಾಗಿಸಿರುವುದುಂಟು. ಇದರಿಂದ ಆ ಕಾಲದಲ್ಲಿಯೇ ವೇದವಿಶದೀಕರಣ ವಿಚಾರದಲ್ಲಿ ಕೆಲವು ಪರಂಪರೆಗಳು ಇದ್ದವೆಂದು ನಾವು ಅರಿಯಬಹುದು. ಸ್ಕಂದಸ್ವಾಮಿಗಳು ತಮ್ಮ ನಿರುಕ್ತಭಾಷ್ಯದಲ್ಲಿ ಪದಕಾರರ ವಿಚಾರವಾಗಿ ಹೇಳುವ ಮಾತುಗಳನ್ನು ಇಲ್ಲಿ ಉದಾಹರಿಸಬಹುದು.

'ಶಾಕಲ್ಯಾತ್ರೇಯಪ್ರಭೃತಿಭಿರ್ನಾವಗೃಹೀತಮ್ | ಪೂರ್ವನಿರ್ವಚನಾಭಿ
ಪ್ರಾಯೇಣ | ಗಾರ್ಗ್ಯಪ್ರಭೃತಿಭಿರವಗೃಹೀತಮ್ | ವಿಚಿತ್ರಾಃ ಪದಕಾರಾ
ಣಾಮಭಿಪ್ರಾಯಾಃ | ಕ್ವಚಿದುಪಸರ್ಗವಿಷಯೇಽಪಿ ನಾವಗೃಹ್ಣಂತಿ |
ಯಥಾ ಶಾಕಲ್ಯೇನ 'ಅಧಿವಾಸಮ್' ಇತಿ ನಾವಗೃಹೀತಮ್ |
ಆತ್ರೇಯೇಣ ತು ಅಧಿ ವಾಸಮಿತಿ ಅವಗೃಹೀತಮ್ |' (2-13)

ಬ್ರಾಹ್ಮಣ ಗ್ರಂಥಗಳಲ್ಲಿ ಕೊಡಲಾಗಿರುವ ನಿರುಕ್ತಿ ಮತ್ತು ವಿವರಣೆಗಳ ಆಧಾರದ ಮೇಲೆ ಮುಂದಿನ ಕಾಲದಲ್ಲಿ ನಿಘಂಟು ಮತ್ತು ನಿರುಕ್ತ ಗ್ರಂಥಗಳು ನಿರ್ಮಾಣವಾದವು. ಇವುಗಳೆಲ್ಲಾ ಮೇಲೆ ಹೇಳಿದಂತೆ ಮೊಟ್ಟಮೊದಲಾಗಿ ಬಂದ ಪದಪಾಠಗಳು ವೇದಾರ್ಥ ಪರಿಚಯಕ್ಕೆ ಪ್ರಥಮಸೋಪಾನಗಳಾಗಿವೆ. ಪದದ ರೂಪವನ್ನು ಅರಿಯುವುದು ಅರ್ಥಜ್ಞಾನಕ್ಕೆ ಅತ್ಯಂತ ಆವಶ್ಯಕ.

ವೇದಾರ್ಥವಿಶದೀಕರಣಕ್ಕಾಗಿ ವೇದಾಂಗಗಳು ಪ್ರವೃತ್ತವಾದವು. ಒಂದೊಂದು ವೇದಾಂಗದ ಮೂಲಕವೂ ವೇದದ ಅರ್ಥಜ್ಞಾನ ಹಾಗೂ ತದನುಗುಣವಾದ ಅನುಷ್ಠಾನ ಬೆಳೆಯಲು ಸಹಾಯವಾಯಿತು.

ಮಧ್ಯಕಾಲದಲ್ಲಿ ಅನೇಕ ವೇದವಿದ್ವಾಂಸರು ವೇದಸಂಹಿತೆಗಳಿಗೆ ಭಾಷ್ಯಗಳನ್ನು ವಿರಚಿಸಿದರು. ವೇದದ ರಹಸ್ಯಾರ್ಥಗಳು ಎಲ್ಲರಿಗೂ ತಿಳಿಯುವಂತೆ ಉಪಕಾರ ಮಾಡಿದರು. ವೇದಮಂತ್ರಗಳಿಗೆ ಅರ್ಥವಿವರಣೆ ಮಾಡುವಾಗ ಇವರು ನಿರುಕ್ತ, ವ್ಯಾಕರಣ, ಪುರಾಣೇತಿಹಾಸಾದಿಗಳನ್ನು ಪುಷ್ಕಳವಾಗಿ ಬಳಸಿಕೊಂಡರು. ಹೀಗೆ ಭಾಷ್ಯರಚನೆ ಮಾಡಿದವರಲ್ಲಿ ಮಾಧವಭಟ್ಟ, ಸ್ಕಂದಸ್ವಾಮೀ, ನಾರಾಯಣ, ಉದ್ಗೀಥ, ವೇಂಕಟಮಾಧವ, ಆನಂದತೀರ್ಥರು ಮುಂತಾದವರು ಋಗ್ವೇದಭಾಷ್ಯಕಾರರಲ್ಲಿಯೂ, ಭವಸ್ವಾಮೀ, ಗುಹದೇವ, ಕ್ಷುರ, ಭಟ್ಟಭಾಸ್ಕರಮಿಶ್ರರು ತೈತ್ತಿರೀಯಭಾಷ್ಯಕಾರರಲ್ಲಿಯೂ, ಉವಟ, ಮಹೀಧರರು ಮಾಧ್ಯಂದಿನ ಭಾಷ್ಯಕಾರರಲ್ಲಿಯೂ, ಮಾಧವ, ಭರತಸ್ವಾಮಿ ಹಾಗು ಗುಣವಿಷ್ಣುಗಳು ಸಾಮವೇದ ಭಾಷ್ಯಕಾರರಲ್ಲಿಯೂ ಮಾನ್ಯರಾಗಿದ್ದಾರೆ. ಆಚಾರ್ಯ ಸಾಯಣರು ಐದು ವೇದಸಂಹಿತೆಗಳಿಗೂ ಹನ್ನೊಂದು ಬ್ರಾಹ್ಮಣಗಳಿಗೂ, ಎರಡು ಆರಣ್ಯಕಗಳಿಗೂ ವಿದ್ವತ್ಪೂರ್ಣವಾದ ಭಾಷ್ಯಗಳನ್ನು ಬರೆದು ವಿಖ್ಯಾತರಾಗಿದ್ದಾರೆ. ಇಂದು ನಾವು ವೇದರಹಸ್ಯವನ್ನರಿಯಲು ಮುಖ್ಯವಾಗಿ ಆಚಾರ್ಯ ಸಾಯಣರು ಮಾರ್ಗದರ್ಶಕರಾಗಿದ್ದಾರೆಂಬುದರಲ್ಲಿ ಅತಿಶಯೋಕ್ತಿ ಇಲ್ಲ.

### ವೇದಭಾಷ್ಯಕಾರರು

**ಸ್ಕಂದಸ್ವಾಮೀ :** ನಮಗೆ ಉಪಲಬ್ಧವಾಗಿರುವ ಋಗ್ವೇದ ಭಾಷ್ಯಗಳಲ್ಲೆಲ್ಲಾ ಸ್ಕಂದಸ್ವಾಮಿಗಳ ಭಾಷ್ಯ ಪ್ರಾಚೀನವಾದುದು. ಈ ಭಾಷ್ಯಕಾರರ ಪ್ರಾಚೀನತೆಯಂತೆ ಈ ಭಾಷ್ಯದ ಗುಣವೂ ಇದರ ವಿಚಾರದಲ್ಲಿ ಹೆಚ್ಚಿನ ಆದರ ಹಾಗೂ ಗೌರವಗಳಿಗೆ ಕಾರಣವಾಗಿದೆ. ಸ್ಕಂದಸ್ವಾಮಿಗಳು, ಗುಜರಾತಿನ ವಲಭೀಯ ನಿವಾಸಿಗಳಾಗಿದ್ದರು. ಇವರ ತಂದೆ ಭರ್ತೃಧ್ರುವ. ಈ ಅಂಶ ನಮಗೆ ಇವರ ಭಾಷ್ಯದ ಪ್ರಥಮಾಷ್ಟಕಾಧ್ಯಾಯದ ಕೊನೆಯಲ್ಲಿ ಬರುವ–

ವಲಭೀವಿನಿವಾಸ್ಯೇತಾಂ ಋಗರ್ಥಾಗಮಸಂಹೃತಿಮ್ |
ಭರ್ತೃಧ್ರುವಸುತಶ್ಚಕ್ರೇ ಸ್ಕಂದಸ್ವಾಮೀ ಯಥಾಸ್ಮೃತಿ ||

ಎಂಬ ಶ್ಲೋಕದಿಂದ ಗೊತ್ತಾಗುತ್ತದೆ.

ಶತಪಥ ಬ್ರಾಹ್ಮಣದ ವಿಖ್ಯಾತ ಭಾಷ್ಯಕಾರರಾದ ಹರಿಸ್ವಾಮಿಗಳ ಗುರುಗಳಾಗಿದ್ದರು ಆಚಾರ್ಯ ಸ್ಕಂದಸ್ವಾಮಿಗಳು. ಸ್ಕಂದಸ್ವಾಮಿಗಳ ಕಾಲವನ್ನು ಈ ಅಂಶದಿಂದಲೂ ಊಹಿಸಬಹುದಾಗಿದೆ. ಹರಿಸ್ವಾಮಿಗಳು ತಮ್ಮ ಭಾಷ್ಯರಚನೆಯ ಕಾಲವನ್ನು ತಮ್ಮ ಗ್ರಂಥದಲ್ಲಿ ಸೂಚಿಸಿದ್ದಾರೆ. ಇದು ಕ್ರಿ. ಶ. 638ಕ್ಕೆ ಸರಿಹೋಗುವ ಕಾರಣ ಸ್ಕಂದಸ್ವಾಮಿಗಳ ಕಾಲವನ್ನು ಕ್ರಿ. ಶ. 625ರ ಸುಮಾರು ಎಂದು ವಿದ್ವಾಂಸರು ಊಹಿಸಿದ್ದಾರೆ. ಯಾಸ್ಕರ ನಿರುಕ್ತಕ್ಕೆ ಟೀಕೆಯನ್ನು ಬರೆದಿರುವ ಸ್ಕಂದಸ್ವಾಮಿಗಳೂ ಭಾಷ್ಯಕಾರ ಸ್ಕಂದಸ್ವಾಮಿಗಳೂ ಒಬ್ಬರೇ ಎಂಬುದನ್ನು ದೇವರಾಜಯಜ್ವರ ಗ್ರಂಥದಿಂದ ತಿಳಿಯಬಹುದು.

ಇವರ ಭಾಷ್ಯ ಅತ್ಯಂತ ವಿಶದವಾಗಿದೆ. ಸೂಕ್ತದ ಆರಂಭದಲ್ಲಿ ಆ ಸೂಕ್ತದ ಋಷಿ ದೇವತೆಗಳ ಉಲ್ಲೇಖಮಾಡಿ ಅವುಗಳನ್ನು ತಿಳಿಸುವ ಪ್ರಾಚೀನ ಅನುಕ್ರಮಣಿಗಳ ಶ್ಲೋಕಗಳನ್ನು ಉದಾಹರಿಸಿದ್ದಾರೆ. ವ್ಯಾಕರಣವಿಚಾರಗಳನ್ನು ಸಂಗ್ರಹವಾಗಿಯೂ ಸೂಕ್ಷ್ಮವಾಗಿಯೂ ಪರಿಶೀಲಿಸಲಾಗಿದೆ ಇಲ್ಲಿ. ಸ್ಕಂದಸ್ವಾಮಿಗಳ ಭಾಷ್ಯ ಸಮಗ್ರವಾಗಿ ಉಪಲಬ್ಧವಾಗಿಲ್ಲ. ಇದು ನಾಲ್ಕು ಅಷ್ಟಕಗಳವರೆಗೆ ದೊರಕಿದೆ.

ಸ್ಕಂದಸ್ವಾಮಿ, ನಾರಾಯಣ ಮತ್ತು ಉದ್ಗೀಥರೆಂಬುವರು ಕೂಡಿ ಋಗ್ಭಾಷ್ಯವನ್ನು ಕ್ರಮವಾಗಿ ಬರೆದರೆಂದು ವೆಂಕಟಮಾಧವರು ಹೇಳುತ್ತಾರೆ. ನಾರಾಯಣರು ಋಗ್ವೇದದ ಮಧ್ಯಭಾಗಕ್ಕೂ ಉದ್ಗೀಥರು ಅಂತಿಮಭಾಗಕ್ಕೂ ಭಾಷ್ಯ ಬರೆದಿದ್ದಾರೆ. ಉದ್ಗೀಥರ ಹೆಸರನ್ನು ಸಾಯಣರು ಉಲ್ಲೇಖಿಸಿದ್ದಾರೆ.

**ಮಾಧವಭಟ್ಟರು** : ಈ ಹೆಸರಿನವರು ನಾಲ್ವರಿದ್ದಾರೆ. ಒಬ್ಬರು ಸಾಮವೇದ ಭಾಷ್ಯಕಾರರು. ಉಳಿದ ಮೂವರು ಋಗ್ವೇದದೊಡನೆ ಸಂಬಂಧಿಸಿದ್ದಾರೆ. ಇವರಲ್ಲಿ ಸಾಯಣಮಾಧವರೂ ಒಬ್ಬರು. ಇನ್ನೊಬ್ಬರು ವೆಂಕಟಮಾಧವರೆಂಬುವರು. ಪ್ರಾಚೀನ ಭಾಷ್ಯಗಳಲ್ಲಿ ಇವರ ಉಲ್ಲೇಖ ಕಂಡುಬರುತ್ತದೆ. ಇವರಲ್ಲದೆ ಮತ್ತೊಬ್ಬ ಮಾಧವರೆಂಬುವರು ಬರೆದ ಪ್ರಥಮಾಷ್ಟಕಟೀಕೆ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿದೆ. ಈ ಮಾಧವಭಟ್ಟರು ವೆಂಕಟಮಾಧವರಿಗಿಂತ ಭಿನ್ನರಾಗಿ ಅವರಿಗಿಂತ ಪ್ರಾಚೀನರಾಗಿದ್ದಾರೆ. ಈ ಟೀಕೆಯನ್ನು ಬರೆಯುವ ಮೊದಲೇ ಇವರು ಹನ್ನೊಂದು ಅನುಕ್ರಮಣಿಕೆಗಳನ್ನು ಬರೆದಿದ್ದರೆಂದು ಗೊತ್ತಾಗುತ್ತದೆ. ನಾಮಾನುಕ್ರಮಣೀ, ಆಖ್ಯಾತಾನುಕ್ರಮಣೀ ಎಂಬವು ಇವುಗಳಲ್ಲಿ ಎರಡು. ಮಾಧವಭಟ್ಟರ ಟೀಕೆ ಸಮಗ್ರವಾಗಿ ದೊರಕಿಲ್ಲ. ಒಂದು ಅಷ್ಟಕಕ್ಕೆ ಮಾತ್ರ ಇದು ದೊರಕಿದೆ. ಈ ಮಾಧವಭಟ್ಟರು ಬಹಳ ಪ್ರಾಚೀನರಾದವರೆಂಬುದು ವಿದ್ವಾಂಸರ ಮತ.

**ವೇಂಕಟಮಾಧವ** : ಇವರು ಸಮಗ್ರವಾಗಿ ಋಕ್ಸಂಹಿತೆಗೆ ಭಾಷ್ಯ ಬರೆದಿದ್ದಾರೆ. ಅನಂತಶಯನ ಗ್ರಂಥಾವಳಿಯಲ್ಲಿ ಇದು ಪ್ರಕಟವಾಗಿದೆ. ಇವರು ಆಂಧ್ರ ದೇಶದವರು. ಇವರು ಎರಡು ಭಾಷ್ಯಗಳನ್ನು ಬರೆದಿದ್ದಾರೆಂದು ವಿದ್ವಾಂಸರ ಊಹೆ. ಮೊದಲ ಭಾಷ್ಯದಲ್ಲಿ ಮೊದಲ ಅಧ್ಯಾಯದ ಕೊನೆಯಲ್ಲಿ ತಮ್ಮ ವಿಚಾರವನ್ನು ಇವರು ಹೇಳಿಕೊಂಡಿದ್ದಾರೆ. ಇವರ ತಂದೆ ವೆಂಕಟಾರ್ಯ, ತಾಯಿ ಸುಂದರಿ, ಪಿತಾಮಹ ಮಾಧವ, ಮಾತಾಮಹ ಭವಗೋಲ. ಇವರು ಕೌಶಿಕ ಗೋತ್ರದವರು. ಇವರ ಕಾಲ ಕ್ರಿ. ಶ. ಹನ್ನೊಂದನೆಯ ಶತಮಾನದ ಆದಿಕಾಲವೆಂದು ವಿದ್ವಾಂಸರು ಊಹಿಸುತ್ತಾರೆ.

ವೇಂಕಟಮಾಧವರ ಭಾಷ್ಯ ಬಹಳ ಸಂಕ್ಷಿಪ್ತವಾಗಿದೆ. 'ವರ್ಜಯನ್ ಶಬ್ದ ವಿಸ್ತಾರಂ ಶಬ್ದೈಃಕತಿಪಯೈರಿತಿ' ಎಂದು ತಾವೇ ಹೇಳುತ್ತಾರೆ. ಸ್ಕಂದಸ್ವಾಮಿಗಳ ಭಾಷ್ಯಕ್ಕಿಂತ ಇದು

ಸಂಕ್ಷಿಪ್ತವಾಗಿದೆಯೆಂದಮೇಲೆ ಸಾಯಣ ಭಾಷ್ಯ ವಿಚಾರದಲ್ಲಿ ಮತ್ತೆ ಹೇಳಬೇಕೆ? ವ್ಯಾಕರಣ ವಿಚಾರಗಳಲ್ಲಿ ಇಲ್ಲವೇ ಇಲ್ಲ. ಬ್ರಾಹ್ಮಣ ಗ್ರಂಥಗಳ ಪ್ರಮಾಣಾನುಸಾರ ವೇದಗಳಿಗೆ ಗೂಢಾರ್ಥವನ್ನು ಇವರು ವಿಶದೀಕರಿಸುತ್ತಾರೆ. ಕೇವಲ ವ್ಯಾಕರಣನಿರುಕ್ತಾದಿಗಳ ಪರಿಶೀಲನ ಮಾಡಿದವರು ವೇದದ ಚತುರ್ಥಾಂಶವನ್ನು ಮಾತ್ರ ಅರಿಯುವರೆಂದೂ, ಬ್ರಾಹ್ಮಣ ಗ್ರಂಥಗಳ ಅರ್ಥವಿವೇಚನೆ ಮಾಡಿದವರು ವೇದದ ಸಮಸ್ತಾರ್ಥಗಳನ್ನೂ ಯಥಾರ್ಥವಾಗಿ ಅರಿಯುವರೆಂದೂ ಇವರ ಅಭಿಪ್ರಾಯ.

ಸಂಹಿತಾಯಾಸ್ತುರೀಯಾಂಶಂ ವಿಜಾನಂತ್ಯಧುನಾತನಾಃ|
ನಿರುಕ್ತವ್ಯಾಕರಣಯೋರಾಸೀತ್ ಏಷಾಂ ಪರಿಶ್ರಮಃ ||
ಅಥ ಯೇ ಬ್ರಾಹ್ಮಣಾರ್ಥಾನಾಂ ವಿವೇಕ್ತಾರಃ ಕೃತಶ್ರಮಾಃ |
ಶಬ್ದರೀತಿಂ ವಿಜಾನಂತಿ ತೇ ಸರ್ವಂ ಕಥಯಂತ್ಯಪಿ ||

ಹೀಗೆ ಬ್ರಾಹ್ಮಣಗ್ರಂಥಗಳಿಗನುಸಾರವಾಗಿ ವೇದಾರ್ಥದ ಪ್ರತಿಪಾದನೆಯನ್ನು ಮಾಡುವ ಗುಂಪಿಗೆ ಈ ಭಾಷ್ಯ ಸೇರಿದೆ.

ಧಾನುಷ್ಕಯಜ್ವಾ ಮತ್ತು ಆನಂದತೀರ್ಥರು ಹದಿಮೂರನೆಯ ಶತಮಾನದಲ್ಲಿ ವೇದಭಾಷ್ಯ ಬರೆದವರು. ಆನಂದತೀರ್ಥರು ಋಗ್ಭಾಷ್ಯವೊಂದನ್ನೂ ಬರೆದಿದ್ದಾರೆ. ಪ್ರಥಮಮಂಡಲದ 40 ಸೂಕ್ತಗಳಿಗೆ ಇವರು ಭಾಷ್ಯ ಬರೆದಿದ್ದಾರೆ.

'ಯಃ ಪೂರ್ಣತ್ವಾತ್ ಪುಮಾನ್ ನಾಮ ಪೌರುಷೇ ಸೂಕ್ತ ಈರಿತಃ |
ಸ ಏವಾಖಿಲವೇದಾರ್ಥಃ ಸರ್ವಶಾಸ್ತ್ರಾರ್ಥ ಏವ ಚ ||

ಎಂದು ಭಾಷ್ಯಾರಂಭದಲ್ಲಿ ಇವರು ಹೇಳುತ್ತಾರೆ. ವೇದವು ಸಮಗ್ರವಾಗಿ ಭಗವಂತನಾದ ನಾರಾಯಣನನ್ನು ಪ್ರತಿಪಾದಿಸುವುದೆಂಬ ದೃಷ್ಟಿಯಿಂದ ಈ ಭಾಷ್ಯ ರಚಿತವಾಗಿದೆ.

**ಸಾಯಣಾಚಾರ್ಯರು :** ಕರ್ಣಾಟಕದ ವಿಜಯನಗರ ಸಾಮ್ರಾಜ್ಯದಲ್ಲಿ ಮಹಾರಾಜ ಬುಕ್ಕ ಮತ್ತು ಮಹಾರಾಜ ಹರಿಹರನ ಅಮಾತ್ಯರೂ ಸೇನಾನಿಗಳೂ ಆದವರು ಸಾಯಣಾಚಾರ್ಯರು. ಬುಕ್ಕರಾಜನ ಪ್ರಧಾನಾಮಾತ್ಯರಾಗಿ 16 ವರ್ಷಗಳೂ ತದನಂತರ ಎರಡನೇ ಹರಿಹರನ ಮಂತ್ರಿಗಳಾಗಿ ಎಂಟು ವರ್ಷಗಳ ಕಾಲ ತಮ್ಮ ಜೀವಪರ್ಯಂತವಾಗಿಯೂ ಇವರು ಅಧಿಕಾರಾರೂಢರಾಗಿ ದ್ದರು. ಹದಿನಾಲ್ಕನೆಯ ಶತಮಾನದ ಉತ್ತರಾರ್ಧ ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಬಹಳ ಮುಖ್ಯವಾದ ಪ್ರಘಟ್ಟವಾಗಿದೆ. ವೇದ ಭಾಷ್ಯಗಳ ನಿರ್ಮಾಣವಾದ ಕಾಲವದು. ತಮ್ಮ ಅಣ್ಣಂದಿರಾದ ಮಾಧವಾಚಾರ್ಯರ ಮೂಲಕ ಈ ಕಾರ್ಯಕ್ಕೆ ಪ್ರೇರಣೆಯುಂಟಾದುದರಿಂದ ಈ ಭಾಷ್ಯ 'ಮಾಧವೀಯ'ವೆಂದು ಹೆಸರಾಗಿದೆ. ವೇದಭಾಷೆ ಹಾಗೂ ಧರ್ಮದ ಪರಿಚಯ ವನ್ನು ಪಡೆಯಲು ಸಾಯಣಭಾಷ್ಯ ಏಕೈಕಸಾಧನವಾಗಿದೆ. ಋಗ್ವೇದಸಂಹಿತೆಗೆ ಅಖಂಡವಾಗಿ ಸವಿಸ್ತಾರವಾದ ಭಾಷ್ಯವನ್ನು ಸಾಯಣರು ವಿರಚಿಸಿದ್ದಾರೆ.

**ಸಾಮವೇದ ಭಾಷ್ಯ**

ಸಾಮ ಸಂಹಿತೆಯ ಪ್ರಥಮ ಭಾಷ್ಯಕಾರರು ಮಾಧವರು. ಪೂರ್ವಾರ್ಚಿಕೆ ಮತ್ತು ಉತ್ತರಾರ್ಚಿಕೆಗಳೆರಡಕ್ಕೂ ಇವರ ಭಾಷ್ಯವಿದೆ. ಈ ಭಾಷ್ಯದ ಹೆಸರು 'ವಿವರಣೆ' ಎಂದಿದೆ. ಛಂದಆರ್ಚಿಕಾ (ಪೂರ್ವಾರ್ಚಿಕಾ) ಭಾಷ್ಯಕ್ಕೆ 'ಛಂದಸಿಕಾ ವಿವರಣ'ವೆಂದೂ ಉತ್ತರಾರ್ಚಿಕೆಗೆ 'ಉತ್ತರ ವಿವರಣ'ವೆಂದೂ ಹೆಸರನ್ನು ಕೊಟ್ಟಿದ್ದಾರೆ. ಸತ್ಯವ್ರತ ಸಾಮಶ್ರಮಿಗಳು ಅಪ್ರಕಾಶಿತವಾದ ಈ

ಗ್ರಂಥದಿಂದ ಟಿಪ್ಪಣಿಗಳನ್ನು ತಮ್ಮ ಸಾಯಣಭಾಷ್ಯ ಸಂಸ್ಕರಣ ಪೀಠಿಕೆಯಲ್ಲಿ ಕೊಟ್ಟಿದ್ದಾರೆ. ಇವರು ಕ್ರಿ. ಪೂ. 7ನೇ ಶತಮಾನದವರೆಂದು ಊಹಿಸಲಾಗಿದೆ.

ಭಾರತ ಸ್ವಾಮಿಗಳೆಂಬುವರು ಸಾಮಸಂಹಿತೆಗೆ ಬರೆದ ಭಾಷ್ಯವೂ ಅಪ್ರಕಾಶಿತವಾಗಿದೆ. ಸಾಮವೇದದ ಸಮಸ್ತ ಋಕ್ಕುಗಳಿಗೂ ಇವರು ಭಾಷ್ಯ ಬರೆದಿದ್ದಾರೆ. ಇವರು ಕ್ರಿ. ಶ. 13ನೇ ಶತಮಾನಕ್ಕೆ ಸೇರುತ್ತಾರೆ.

ಗುಣವಿಷ್ಣುವಿನ ಛಾಂದೋಗ್ಯಮಂತ್ರಭಾಷ್ಯ ಕಲ್ಕತ್ತೆಯ ಸಂಸ್ಕೃತ ಪರಿಷತ್ತಿನಿಂದ ಪ್ರಕಟವಾಗಿದೆ. ಸಾಮವೇದಿಗಳು ನಿತ್ಯನೈಮಿತ್ತಿಕ ವಿಧಿಗಳಲ್ಲಿ ಬಳಸುವ ಸಾಮಮಂತ್ರಗಳ ವ್ಯಾಖ್ಯಾನ ಇಲ್ಲಿದೆ. ಇದು ಸಾಮವೇದದ ಕೌಥುಮಶಾಖೆಗೆ ಸೇರಿದುದು. ಕ್ರಿ. ಶ. 13ನೇ ಶತಮಾನದ ಆದಿಭಾಗಕ್ಕೆ ಸೇರಿದುದು ಈ ಭಾಷ್ಯ.

## ಕೃಷ್ಣ ಯಜುರ್ವೇದ ಭಾಷ್ಯ

ಈ ವೇದಕ್ಕೆ ಸೇರಿದ ಪ್ರಧಾನಸಂಹಿತೆ ತೈತ್ತರೀಯಸಂಹಿತೆ. ಈ ಸಂಹಿತೆಗೆ ಸಾಯಣಾಚಾರ್ಯರಿಗಿಂತ ಹಿಂದೆಯೇ ಅನೇಕರು ಭಾಷ್ಯಗಳನ್ನು ಬರೆದಂತೆ ಗೊತ್ತಾಗುತ್ತದೆ. ಆದರೆ ಆ ಕೃತಿಗಳು ನಮಗೆ ದೊರಕಿಲ್ಲ. ಆ ಭಾಷ್ಯಕಾರರುಗಳ ವಿಚಾರವೂ ಹೆಚ್ಚಾಗಿ ತಿಳಿದಿಲ್ಲ. ಇತರರು ತಮ್ಮ ಕೃತಿಗಳಲ್ಲಿ ಮಾಡಿರುವ ಉಲ್ಲೇಖಗಳಿಂದ ಮಾತ್ರ ಅವರ ವಿಷಯ ನಮಗೆ ಗೊತ್ತಾಗುತ್ತದೆ. ಸಾಯಣರಿಗಿಂತ ಹಿಂದಿನವರಲ್ಲಿ ಭಟ್ಟಭಾಸ್ಕರರ ಭಾಷ್ಯವು ಮಾತ್ರ ಪೂರ್ಣವಾಗಿ ಉಪಲಬ್ಧವಾಗಿದೆ. ಕಾಂಡಾನುಕ್ರಮಣಿಯಲ್ಲಿ ಬರುವ—

'ಯಸ್ಯಾಃ ಪದಕೃದಾತ್ರೇಯಃ ವೃತ್ತಿಕಾರಸ್ತು ಕುಂಡಿನಃ' ಎಂಬ ಉಲ್ಲೇಖದಿಂದ ತೈತ್ತಿರೀಯ ಸಂಹಿತೆಗೆ ಕುಂಡಿನರು ವೃತ್ತಿ ಬರೆದಿದ್ದರೆಂದು ತಿಳಿಯುತ್ತೇವೆ. ಆತ್ರೇಯರೊಡನೆ ಇವರನ್ನೂ ಕೂಡಿಸಿ ಹೇಳಿರುವ ಕಾರಣ ಇವರು ಪ್ರಾಚೀನರಾದವರೆಂದೂ ಊಹಿಸಬಹುದು. ಭಟ್ಟಭಾಸ್ಕರರು ತಮ್ಮ ಭಾಷ್ಯಾರಂಭದಲ್ಲಿ ಭವಸ್ವಾಮಿಗಳ ಉಲ್ಲೇಖವನ್ನು ಮಾಡಿದ್ದಾರೆ. ದೇವರಾಜಯಜ್ವರು ತಮ್ಮ ನಿಘಂಟು ಭಾಷ್ಯದಲ್ಲಿ 'ಗುಹದೇವ'ರನ್ನು ಭಾಷ್ಯಕಾರರೆಂದು ಕರೆದಿದ್ದಾರೆ.

ಸಾಯಣರು ಭಟ್ಟಭಾಸ್ಕರರನ್ನು ಉಲ್ಲೇಖಿಸುವುದರಿಂದ ಭಟ್ಟಭಾಸ್ಕರರು ಸಾಯಣರಿಗಿಂತ ಪ್ರಾಚೀನರು. ಏಕಾಗ್ನಿಕಾಂಡದ ಭಾಷ್ಯ ಬರೆದ ಹರದತ್ತರು ಭಾಸ್ಕರರ ಭಾಷ್ಯದಿಂದ ಸಹಾಯ ಪಡೆದುಕೊಂಡಿರುವುದರಿಂದ ಭಾಸ್ಕರರ ಕಾಲ ಕ್ರಿ. ಶ. ಹನ್ನೊಂದನೇ ಶತಮಾನ ವಿರಬೇಕೆಂದು ಊಹಿಸುತ್ತಾರೆ. ಭಟ್ಟಭಾಸ್ಕರರ ತೈತ್ತಿರೀಯ ಸಂಹಿತಾ ಭಾಷ್ಯಕ್ಕೆ ಜ್ಞಾನಯಜ್ಞಭಾಷ್ಯವೆಂದು ಹೆಸರು. ಇದರಲ್ಲಿವರು ಅನೇಕ ಪ್ರಾಚೀನ ಗ್ರಂಥಗಳನ್ನು ಉದಾಹರಿಸಿದ್ದಾರೆ. ಮಂತ್ರಾರ್ಥದ ನಿರೂಪಣೆಯ ಸಮಯದಲ್ಲಿ ಬೇರೆಬೇರೆ ಆಚಾರ್ಯರ ಮತಗಳನ್ನೂ ನಿರೂಪಿಸಿರುತ್ತಾರೆ. ಅಧಿಯಜ್ಞಾರ್ಥದೊಡನೆ ಅಧಿದೈವ ಮತ್ತು ಆಧ್ಯಾತ್ಮಾರ್ಥಗಳನ್ನೂ ಇವರು ಬರೆಯುತ್ತಾರೆ. 'ಹಂಸಃ ಶುಚಿಷತ್' ಎಂಬಲ್ಲಿ ಹಂಸಶಬ್ದಕ್ಕೆ ಅಧಿಯಜ್ಞಾರ್ಥಕ್ಕನುಗುಣವಾಗಿ 'ರಥ'ವೆಂದೂ, ಅಧಿದೈವ ಪಕ್ಷದಲ್ಲಿ 'ಆದಿತ್ಯ'ನೆಂದೂ ಅಧ್ಯಾತ್ಮಕ್ಕನುಗುಣವಾಗಿ 'ಆತ್ಮಾ' ಎಂದೂ ಅರ್ಥವನ್ನಿವರು ಬರೆಯುತ್ತಾರೆ. ವೈದಿಕಸಾಹಿತ್ಯದಲ್ಲಿ ಈ ಭಾಷ್ಯಕ್ಕೆ ಬಹಳ ಮಹತ್ವವಿದೆ.

## ಶುಕ್ಲಯಜುರ್ವೇದ ಭಾಷ್ಯ

ಈ ವೇದಕ್ಕೆ ಸೇರಿದ ಮಾಧ್ಯಂದಿನ ಶಾಖೆಯ ಸಂಹಿತೆಗೆ ಎರಡು ಮುಖ್ಯವಾದ ಭಾಷ್ಯಗಳಿವೆ. ಉವಟಾಚಾರ್ಯರ ಭಾಷ್ಯ ಇವುಗಳಲ್ಲಿ ಒಂದು.

'ಆನಂದಪುರವಾಸ್ತವ್ಯವಜ್ರಟಾಖ್ಯಸ್ಯ ಸೂನುನಾ |
ಉವಟೇನ ಕೃತಂ ಭಾಷ್ಯಂ ಪದವಾಕ್ಯೈ: ಸುನಿಶ್ಚಿತೈ: ||

ಎಂಬ ಭಾಷ್ಯಾಂತ ಶ್ಲೋಕದಿಂದ ಇವರು ಆನಂದಪುರವಾಸಿಗಳೆಂದೂ ಇವರ ತಂದೆ ವಜ್ರಟರೆಂದೂ ಗೊತ್ತಾಗುತ್ತದೆ. ಅವಂತಿಯಲ್ಲಿ ಭೋಜನು ರಾಜನಾಗಿದ್ದಾಗ ಇವರು ಭಾಷ್ಯಬರೆದರೆಂದು ಹೇಳಿಕೊಂಡಿದ್ದಾರೆ. ಭೋಜನು ಕ್ರಿ. ಶ. ಹನ್ನೊಂದನೇ ಶತಮಾನದ ಆದಿಕಾಲದವನೆಂದು ಗೊತ್ತಾಗುವುದರಿಂದ ಇವರು ಆ ಕಾಲಕ್ಕೆ ಸೇರಿದವರಾಗಿರಬೇಕು. ಈ ಭಾಷ್ಯ ಬಹಳ ಚಿಕ್ಕದಾಗಿದ್ದರೂ ಉಜ್ವಲವಾಗಿದೆ. ಅನೇಕ ಮಂತ್ರಗಳ ಆಧ್ಯಾತ್ಮಿಕಾರ್ಥಗಳನ್ನು ಇವರು ವಿವರಿಸುತ್ತಾರೆ. ಇವರು ಇದಲ್ಲದೆ ಋಕ್‌ಪ್ರಾತಿಶಾಖ್ಯ, ಯಜುಃಪ್ರಾತಿಶಾಖ್ಯ, ಋಕ್‌ಸರ್ವಾನುಕ್ರಮಣೀ ಮತ್ತು ಈಶೋಪನಿಷತ್ತು—ಇವುಗಳಿಗೆ ಭಾಷ್ಯಗಳನ್ನು ಬರೆದಿದ್ದಾರೆ.

ಮಾಧ್ಯಂದಿನ ಸಂಹಿತೆಗೆ ಮಹೀಧರಾಚಾರ್ಯರ ಭಾಷ್ಯವೂ ಒಂದಿದೆ. ಇದಕ್ಕೆ 'ವೇದದೀಪ' ಎಂಬ ಹೆಸರಿದೆ. ಅರ್ಥವಿಶದೀಕರಣದಲ್ಲಿ ಇದು ಬಹಳ ಸಫಲವಾಗಿದೆ. ಉವಟಭಾಷ್ಯದ ಪ್ರಭಾವ ಇದರ ಮೇಲೆ ಗಮನೀಯವಾಗಿ ಆಗಿದೆ. ಮಹೀಧರರು ನಿರುಕ್ತ, ಶ್ರೌತಸೂತ್ರಾದಿಗಳನ್ನು ಉದಾಹರಿಸಿ ಯಜ್ಞಪ್ರಕ್ರಿಯೆಯ ವಿಧಾನವನ್ನು ಬಹಳ ಸುಲಭವಾಗಿ ತಿಳಿಯುವಂತೆ ವಿಚಾರಿಸಿದ್ದಾರೆ. ಇವರು 'ಮಂತ್ರ ಮಹೋದಧಿ' ಎಂಬ ತಂತ್ರಗ್ರಂಥವನ್ನೂ ಬರೆದಿದ್ದಾರೆ. ಕ್ರಿ. ಶ. 16ನೇ ಶತಮಾನದ ಉತ್ತರಾರ್ಧಕ್ಕೆ ಇವರು ಸೇರಿದವರು.

ಕಾಣ್ವಸಂಹಿತೆಗೆ ಸಾಯಣರಿಗಿಂತ ಹಿಂದಿನವರನೇಕರು ಭಾಷ್ಯಗಳನ್ನು ಬರೆದಿದ್ದಾರೆ. ಇವರಲ್ಲಿ 'ಹಲಾಯುಧ'ನ 'ಬ್ರಾಹ್ಮಣಸರ್ವಸ್ವ'ವೆಂಬ ಹೆಸರಿನ ಭಾಷ್ಯ ಪ್ರಸಿದ್ಧವಾದುದು. ಹಲಾಯುಧ ತನ್ನ ವಿಚಾರವನ್ನು ತನ್ನ ಭಾಷ್ಯದ ಮೊದಲಲ್ಲಿ ತಿಳಿಸಿಕೊಂಡಿದ್ದಾನೆ. ಇವನು ಬಂಗಾಳದ ಲಕ್ಷ್ಮಣಸೇನನ ಆಸ್ಥಾನದಲ್ಲಿ ಧರ್ಮಾಧಿಕಾರಿಯಾಗಿದ್ದನಂತೆ. ಇದನ್ನು ಅವನೇ

ಬಾಲ್ಯೇ ಖ್ಯಾಪಿತರಾಜಪಂಡಿತಪದಂ ಶ್ವೇತಾರ್ಚಬಿಂಬೋಜ್ವಲ-
ಚ್ಛತ್ರೋತ್ಸಿಕ್ತಮಹಾಮಹಸ್ತಮುಪದಂ ದತ್ವಾ ನವೇ ಯೌವ್ವನೇ |
ಯಸ್ಮೈ ಯೌವ್ವನಶೇಷಯೋಗ್ಯಮಖಿಲ ಕ್ಷ್ಮಾಪಾಲನಾರಾಯಣ:
ಶ್ರೀಮಾನ್ ಲಕ್ಷ್ಮಣಸೇನದೇವನೃಪತಿರ್ಧರ್ಮಾಧಿಕಾರಂ ದದೌ ||

ಎಂದು ಹೇಳಿಕೊಂಡಿದ್ದಾನೆ.

ಇವನು ಕ್ರಿ. ಶ. ಹನ್ನೆರಡನೇ ಶತಮಾನದ ಉತ್ತರಾರ್ಧದಲ್ಲಿದ್ದನೆಂದು ಇದರಿಂದ ತಿಳಿಯಬಹುದು. ವಿಖ್ಯಾತ ವೈದಿಕವಿದ್ವಾಂಸನಾದ ಹಲಾಯುಧ ಈ ಭಾಷ್ಯವಲ್ಲದೆ ಇನ್ನೂ ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಮೀಮಾಂಸಾಸರ್ವಸ್ವ, ವೈಷ್ಣವ ಸರ್ವಸ್ವ, ಶೈವಸರ್ವಸ್ವ, ಪಂಡಿತಸರ್ವಸ್ವ ಮುಂತಾದವು ಅವನ ಕೃತಿಗಳು.

ಸಾಯಣರು ಕಾಣ್ವಸಂಹಿತೆಗೆ ಭಾಷ್ಯ ಬರೆದಿದ್ದಾರೆ. ಪೂರ್ವಾರ್ಧಕ್ಕೆ ಮಾತ್ರ ಇವರ ಭಾಷ್ಯವಿರುವುದರಿಂದ ಉತ್ತರಾರ್ಧಕ್ಕೆ ಕ್ರಿ. ಶ. ಹದಿನಾರನೆಯ ಶತಮಾನದವರಾದ ಕಾಶಿಯ ಅನಂತಾಚಾರ್ಯರೆಂಬುವರು ಭಾಷ್ಯ ಬರೆದಿದ್ದಾರೆ.

ಅಥರ್ವವೇದ ಸಂಹಿತೆಗೆ ಸಾಯಣರೇ ಪ್ರಪ್ರಥಮವಾಗಿ ಭಾಷ್ಯ ಬರೆದಂತೆ ಕಾಣುತ್ತದೆ. ಸಾಯಣರು ಸಮಗ್ರವಾಗಿ ಅಥರ್ವಸಂಹಿತೆಗೆ ಭಾಷ್ಯ ರಚಿಸಿದ್ದಾರೆಂದು ಗೊತ್ತಾಗುತ್ತದೆ. ಆದರೆ ಈಗ ಕೇವಲ 12 ಕಾಂಡಗಳ ಭಾಷ್ಯ ಮಾತ್ರ ಉಪಲಬ್ಧವಾಗಿದೆ. 5, 9, 10, 12, 13, 14, 15, 16ನೆಯ ಕಾಂಡಗಳ ಭಾಷ್ಯ ಉಪಲಬ್ಧವಾಗಿಲ್ಲ.

ಸಂಹಿತೆಗಳಿಗೆ ಭಾಷ್ಯಗಳನ್ನು ರಚಿಸಿದಂತೆ ಅನೇಕ ವಿದ್ವಾಂಸರು ಬ್ರಾಹ್ಮಣ ಗ್ರಂಥಗಳಿಗೂ ಭಾಷ್ಯ ಬರೆದಿದ್ದಾರೆ. ಇವುಗಳಲ್ಲಿ ಕೆಲವು ಭಾಷ್ಯಗಳು ಕೇವಲ ಶ್ರುತವಾಗಿವೆಯೇ ವಿನಾ ಉಪಲಬ್ಧವಾಗಿಲ್ಲ. ಮತ್ತೆ ಕೆಲವು ದೊರಕಿವೆ. ಇವರಲ್ಲಿ ಐತರೇಯ ಬ್ರಾಹ್ಮಣ, ಐತರೇಯ ಆರಣ್ಯಕ, ಆಶ್ವಲಾಯನ ಶ್ರೌತ ಮತ್ತು ಗೃಹ್ಯ ಹಾಗೂ ಸರ್ವಾನುಕ್ರಮಣೀ ಗ್ರಂಥಗಳಿಗೆ ಟೀಕೆಗಳನ್ನು ಬರೆದ ಷಡ್ಗುರುಶಿಷ್ಯರೂ, ಆಚಾರ್ಯಸಾಯಣರೂ ಸುಪ್ರಸಿದ್ಧರಾಗಿದ್ದಾರೆ.

ವೈದಿಕ ಸಾಹಿತ್ಯ ಚರಿತ್ರೆಯಲ್ಲಿ ಆಚಾರ್ಯ ಸಾಯಣರ ಸ್ಥಾನ ಬಹಳ ಮಹತ್ವಪೂರ್ಣ ವಾದುದು. ಇವರ ವೇದಭಾಷ್ಯಗಳಿಂದ ಇವರ ಕೀರ್ತಿ ಶಾಶ್ವತವಾಗಿದೆ. ಇವರ ಅಸಾಧಾರಣ ವಾದ ವಿದ್ವತ್ತು ಹಾಗೂ ವ್ಯಾಪಕವಾದ ಪಾಂಡಿತ್ಯಗಳ ಪರಿಚಯ ಈ ಭಾಷ್ಯಗಳಿಂದ ಆಗುತ್ತದೆ. ವೇದವಾಙ್ಮಯದ ಅಧ್ಯಯನಕ್ಕೆ ಇವರ ಭಾಷ್ಯಗಳು ಪಥಪ್ರದರ್ಶಕವಾಗಿವೆ.

ವಿಜಯನಗರ ಸಾಮ್ರಾಜ್ಯದ ಏಳಿಗೆಯ ಕಾಲದಲ್ಲಿ ಮಹಾರಾಜ ಬುಕ್ಕರಾಯನ ಪ್ರಧಾನ ಅಮಾತ್ಯರಾಗಿದ್ದವರು ಸಾಯಣಾಚಾರ್ಯರು. ಹಿಂದೂ ಧರ್ಮಸಂಸ್ಥಾಪನೆಗೆ ವೇದಪ್ರಚಾರ ಅತ್ಯಾವಶ್ಯಕವೆಂದು ಮನಗಂಡ ಬುಕ್ಕರಾಯನ ಸದಾಶಯಕ್ಕನುಸಾರವಾಗಿ ಈ ಭಾಷ್ಯಗಳ ರಚನೆ ಆಯಿತು. ತೈತ್ತಿರೀಯಸಂಹಿತಾಭಾಷ್ಯದ ಉಪಕ್ರಮಣಿಕೆಯಲ್ಲಿ ಈ ಅಂಶದ ವಿವರಣೆಯನ್ನು ಕಾಣಬಹುದು. ಸಾಯಣರ ಅಣ್ಣಂದಿರಾದ ಮಾಧವಾಚಾರ್ಯರು ಮೀಮಾಂಸಾಶಾಸ್ತ್ರದಲ್ಲಿ ಅದ್ವಿತೀಯಪಂಡಿತರಾಗಿದ್ದರು. 'ಜೈಮಿನಿಯ ನ್ಯಾಯಮಾಲಾ' ಎಂಬ ಅವರ ಕೃತಿ ಇದಕ್ಕೆ ಸಾಕ್ಷಿ. ಮಾಧವಾಚಾರ್ಯರ ಉದಾರ ದೃಷ್ಟಿ, ಪ್ರೇರಣೆ ಮತ್ತು ಸಾತ್ವಿಕ ಪ್ರಭಾವಗಳು ಈ ವೇದಭಾಷ್ಯರಚನೆಗೆ ಹಿನ್ನೆಲೆಯಲ್ಲಿ ಕಾರಣಗಳಾಗಿದ್ದವು. ವೇದಗಳಲ್ಲಿ ಗೌರವವುಳ್ಳವರು ಆ ಕಾರಣ ಮಾಧವಾಚಾರ್ಯರಿಗೂ, ಸಾಯಣಾಚಾರ್ಯರಿಗೂ ಹಾಗೆಯೇ ಬುಕ್ಕಮಹಾರಾಜನಿಗೂ ಅತ್ಯಂತ ಕೃತಜ್ಞರಾಗಿರಬೇಕು. ಸಾಯಣಾಚಾರ್ಯರು ಕೆಳಗೆ ಕಂಡ ವೇದಭಾಗಗಳಿಗೆ ಭಾಷ್ಯಗಳನ್ನು ಬರೆದಿದ್ದಾರೆ :

1. ತೈತ್ತರೀಯ ಸಂಹಿತೆ
2. ಋಗ್ವೇದ ಸಂಹಿತೆ
3. ಸಾಮವೇದ ಸಂಹಿತೆ
4. ಕಾಣ್ವ ಸಂಹಿತೆ
5. ಅಥರ್ವವೇದ ಸಂಹಿತೆ.

ಸಾಯಣಾಚಾರ್ಯರ ದ್ವಾರಾ ವ್ಯಾಖ್ಯಾತವಾದ ಬ್ರಾಹ್ಮಣಾರಣ್ಯಕಗಳು ಕೆಳಗೆ ತೋರಿಸಿರು ವಂತೆ ಇವೆ :

1. ತೈತ್ತಿರೀಯ ಬ್ರಾಹ್ಮಣ
2. ತೈತ್ತಿರೀಯ ಆರಣ್ಯಕ
3. ಐತರೇಯ ಬ್ರಾಹ್ಮಣ
4. ಐತರೇಯ ಆರಣ್ಯಕ
5. ತಾಂಡ್ಯ ಬ್ರಾಹ್ಮಣ
6. ಷಡ್ವಿಂಶ ಬ್ರಾಹ್ಮಣ
7. ಸಾಮವಿಧಾನ ಬ್ರಾಹ್ಮಣ

8. ಆರ್ಷೇಯ ಬ್ರಾಹ್ಮಣ
9. ದೇವತಾಧ್ಯಾಯ ಬ್ರಾಹ್ಮಣ
10. ಉಪನಿಷದ್ ಬ್ರಾಹ್ಮಣ
11. ಸಂಹಿತೋಪನಿಷದ್ಬ್ರಾಹ್ಮಣ
12. ವಂಶ ಬ್ರಾಹ್ಮಣ
13. ಶತಪಥ ಬ್ರಾಹ್ಮಣ

ಹೀಗೆ 5 ಸಂಹಿತೆಗಳಿಗೂ 13 ಬ್ರಾಹ್ಮಣಾರಣ್ಯಕಗಳಿಗೂ ಭಾಷ್ಯಗಳನ್ನು ರಚಿಸಿದ ಅಮರಕೀರ್ತಿ ಸಾಯಣಾಚಾರ್ಯರದು. ಈ ಗ್ರಂಥಭಾಗಗಳಲ್ಲಿ ಒಂದೊಂದನ್ನೂ ಪೂರ್ಣವಾಗಿ ಅಧ್ಯಯನ ಮಾಡುವುದಕ್ಕೇ ಇಂದು ಅನೇಕಾನೇಕ ಸಂವತ್ಸರಗಳು ಬೇಕಾಗುವುದೆಂಬುದನ್ನು ನಾವು ಮನಗಂಡಾಗ ಇಷ್ಟು ಬೃಹತ್ಪ್ರಮಾಣದ ಭಾಷ್ಯಗಳನ್ನು ರಚಿಸಿದ ಸಾಯಣಾಚಾರ್ಯರ ಅಪಾರವಾದ ಪಾಂಡಿತ್ಯ, ಶಕ್ತಿ, ಸಾಮರ್ಥ್ಯಗಳಿಗೆ ಬೆರಗಾಗಿ ಅವರ ಪದತಲದಲ್ಲಿ ನಮ್ಮ ಪ್ರಣಾಮಗಳನ್ನರ್ಪಿಸುತ್ತೇವೆ. ವೈದಿಕ ಗ್ರಂಥಗಳಿಗೆ ಭಾಷ್ಯ ಬರೆದವರಾರೂ ಇಷ್ಟು ಬೃಹತ್ಪ್ರಮಾಣದಲ್ಲಿ ಇಷ್ಟು ವ್ಯಾಪಕವಾಗಿ ಎಲ್ಲ ವೇದಗಳ ಸಂಹಿತಾಬ್ರಾಹ್ಮಣಾದಿಗಳಿಗೆ ಭಾಷ್ಯಗಳನ್ನು ಬರೆದಿಲ್ಲ. ಇದು ಆಚಾರ್ಯ ಸಾಯಣರ ಮಹತ್ವ.

ಆಚಾರ್ಯ ಸಾಯಣರು ತೈತ್ತಿರೀಯ ಶಾಖಾಧ್ಯಾಯಿಗಳಾಗಿದ್ದರು. ಯಾಗ ವಿಧಾನದಲ್ಲಿ ಯಜುರ್ವೇದ ಅಧಿಕವಾಗಿ ಉಪಯುಕ್ತವಾದುದರಿಂದಲೂ, ಅದು ಅವರಿಗೆ ಸ್ವಶಾಖೆಯಾದುದರಿಂದಲೂ ಮೊದಲು ಅವರು ತೈತ್ತಿರೀಯ ಸಂಹಿತಾ ಬ್ರಾಹ್ಮಣಗಳಿಗೆ ಭಾಷ್ಯಗಳನ್ನು ಬರೆದರು.

'ವ್ಯಾಖ್ಯಾತಾ ಸುಖಬೋಧಾಯ ತೈತ್ತಿರೀಯಕಸಂಹಿತಾ |
ತದ್ಬ್ರಾಹ್ಮಣಂ ವ್ಯಾಕರಿಷ್ಯೇ ಸುಖೇನಾರ್ಥವಿಬುದ್ಧಯೇ ||'

'ವ್ಯಾಖ್ಯಾತಾ ಸುಖಬೋಧಾರ್ಥಂ ತೈತ್ತಿರೀಯಕ ಸಂಹಿತಾ |
ತದ್ಬ್ರಾಹ್ಮಣಂ ಚ ವ್ಯಾಖ್ಯಾತಂ ಶಿಷ್ಟಮಾರಣ್ಯಕಂ ತತಃ ||'

ಎಂದು ಅವರೇ ತಮ್ಮ ಭಾಷ್ಯರಚನಾಕ್ರಮವನ್ನು ಕ್ರಮವಾಗಿ ತಿಳಿಸಿದ್ದಾರೆ. ಅನಂತರ ಋಗ್ವೇದ ಭಾಷ್ಯ ನಿರ್ಮಾಣವಾಯಿತು.

'ಆಧ್ವರ್ಯವಸ್ಯ ಯಜ್ಞೇಷು ಪ್ರಾಧಾನ್ಯಾತ್ ವ್ಯಾಕೃತಃ ಪುರಾ |
ಯಜುರ್ವೇದೋಽಥ ಹೌತ್ರಾರ್ಥಂ ಋಗ್ವೇದೋ ವ್ಯಾಕರಿಷ್ಯತೇ ||'

ಎಂದು ಋಗ್ವೇದ ಭಾಷ್ಯಭೂಮಿಕೆಯಲ್ಲಿ ಇದನ್ನು ಸೂಚಿಸಿದ್ದಾರೆ.

ಸಾಯಣರು ಋಗ್ವೇದಸಂಹಿತಾಭಾಷ್ಯವನ್ನು ಬರೆಯುವ ಮೊದಲು ಐತರೇಯ ಬ್ರಾಹ್ಮಣ ಮತ್ತು ಆರಣ್ಯಕಗಳ ಭಾಷ್ಯವನ್ನು ಬರೆದರು. ಇದನ್ನು ಋಗ್ವೇದದ ಭಾಷ್ಯಾರಂಭದಲ್ಲಿ :

'ಮಂತ್ರಬ್ರಾಹ್ಮಣಾತ್ಮಕೇ ವೇದೇ ಬ್ರಾಹ್ಮಣಸ್ಯ ಮಂತ್ರವ್ಯಾಖ್ಯಾನೋಪಯೋಗಿತ್ವಾತ್ ಆದೌ ಬ್ರಾಹ್ಮಣಮಾರಣ್ಯಕಸಹಿತಂ ವ್ಯಾಖ್ಯಾತಮ್. ಅಥತತ್ರತತ್ರ ಬ್ರಾಹ್ಮಣೋ ದಾಹರಣೇನ ಮಂತ್ರಾತ್ಮಕಃ ಸಂಹಿತಾ ಗ್ರಂಥಃ ವ್ಯಾಖ್ಯಾತವ್ಯಃ |' ಎಂದು ಸೂಚಿಸಿದ್ದಾರೆ.

ಸಾಯಣಾಚಾರ್ಯರು ತಮ್ಮ ಭಾಷ್ಯಕ್ಕೆ 'ವೇದಾರ್ಥಪ್ರಕಾಶ'ವೆಂಬ ಹೆಸರನ್ನು ಕೊಟ್ಟಿದ್ದಾರೆ. ತಮ್ಮ ಗುರುಗಳಾದ ವಿದ್ಯಾತೀರ್ಥರಿಗೆ ಸಮರ್ಪಿಸಿದ್ದಾರೆ.

ಸಾಯಣಾಚಾರ್ಯರ ಭಾಷ್ಯವನ್ನು ಮೊಟ್ಟಮೊದಲಾಗಿ ಪ್ರಕಟಿಸಿದ ಯಶಸ್ಸು ವಿಖ್ಯಾತ ಜರ್ಮನ್ ವಿದ್ವಾಂಸರಾದ ಡಾ|| ಮ್ಯಾಕ್ಸ್ ಮುಲರ್ ಮಹಾಶಯರಿಗೆ ಸಲ್ಲುತ್ತದೆ.

ಋಗ್ಭಾಷ್ಯದ ಅನಂತರ ಉದ್ಗಾತೃವೇದವಾದ ಸಾಮವೇದಕ್ಕೆ ಭಾಷ್ಯ ಬರೆದಿದ್ದಾರೆ ಸಾಯಣರು. ಅನಂತರ ಆ ವೇದದ ಬ್ರಾಹ್ಮಣಗ್ರಂಥಗಳ ವ್ಯಾಖ್ಯಾನಗಳನ್ನು ವಿರಚಿಸಿದರು. ಸಾಮವೇದಬ್ರಾಹ್ಮಣಗಳಿಗೆ ಕ್ರಮವಾಗಿ ವ್ಯಾಖ್ಯಾನ ಮಾಡಿ ಕೊನೆಗೆ ವಂಶಬ್ರಾಹ್ಮಣಕ್ಕೆ ಭಾಷ್ಯ ನಿರ್ಮಾಣ ಮಾಡಿದರು.

ಸಾಮವೇದದ ಭಾಷ್ಯಗಳನ್ನು ಬರೆದಮೇಲೆ ಸಾಯಣರು ಕಾಣ್ವಸಂಹಿತೆಯ ಭಾಷ್ಯವನ್ನಾರಂಭಿಸಿದರು. ಈ ಭಾಷ್ಯ ಈ ಸಂಹಿತೆಯ ಮೊದಲ 20 ಅಧ್ಯಾಯಗಳಿಗೆ ಮಾತ್ರ ವಿರಚಿತವಾಗಿದೆ. ಉತ್ತರಾರ್ಧಕ್ಕೆ ಸಾಯಣರು ವ್ಯಾಖ್ಯಾನ ಮಾಡಿಲ್ಲವೆಂದು ಗೊತ್ತಾಗು ತ್ತದೆ. ಅನಂತಾಚಾರ್ಯರು ತಮ್ಮ ಕಾಣ್ವಸಂಹಿತಾ ಭಾಷ್ಯದ ಆರಂಭದಲ್ಲಿ–

'ವ್ಯಾಖ್ಯಾತಾ ಕಾಣ್ವಶಾಖೀಯಸಂಹಿತಾ ಪೂರ್ವವಿಂಶತಿಃ|
ಮಾಧವಾಚಾರ್ಯವರ್ಯೇಣ ಸ್ಪಷ್ಟೀಕೃತ್ಯ ನ ಚೋತ್ತರಾ ||

ಎಂದು ಈ ಅಂಶವನ್ನು ತಿಳಿಸುತ್ತಾರೆ. ಸಂಹಿತಾ ಭಾಷ್ಯಗಳೆಲ್ಲಾ ಕೊನೆಯಲ್ಲಿ ಆದುದು ಅಥರ್ವವೇದಭಾಷ್ಯ. ಕೊನೆಯಲ್ಲಿ ಇದಕ್ಕೆ ವ್ಯಾಖ್ಯಾನ ಮಾಡಿದುದರ ಕಾರಣವನ್ನು ಅವರೇ ತಮ್ಮ ಅಥರ್ವವೇದಭಾಷ್ಯಭೂಮಿಕೆಯಲ್ಲಿ–

ವ್ಯಾಖ್ಯಾಯ ವೇದತ್ರಿತಯಮಾಮುಷ್ಮಿಕಫಲಪ್ರದಮ್ |
ಐಹಿಕಾಮುಷ್ಮಿಕಫಲಂ ಚತುರ್ಥಂ ವ್ಯಾಚಿಕೀರ್ಷತಿ ||

ಎಂದು ತಿಳಿಸಿದ್ದಾರೆ. ಇವೆಲ್ಲ ಆದಮೇಲೆ ಕೊನೆಯದಾಗಿ ಶತಪಥ ಬ್ರಾಹ್ಮಣದ ಭಾಷ್ಯವನ್ನು ಬರೆದಿದ್ದಾರೆ.

ವೇದ ಭಾಷ್ಯಗಳ ರಚನೆಯ ಕಾಲವನ್ನು ಅಂತರಂಗ ಬಹಿರಂಗ ಪ್ರಮಾಣಗಳಿಂದ ಗೊತ್ತುಮಾಡಬಹುದು. ಸಾಯಣರು ಸ್ಪಷ್ಟವಾಗಿ ಎಲ್ಲಿಯೂ ಗ್ರಂಥರಚನೆಯ ಕಾಲವನ್ನು ತಿಳಿಸಿಲ್ಲ. ಬುಕ್ಕ ಮಹಾರಾಜನ ಆಳ್ವಿಕೆಯ ಕಾಲದಲ್ಲಿ ಋಗ್ಭಾಷ್ಯವನ್ನು ಬರೆದರೆಂಬುದಕ್ಕೆ ಭಾಷ್ಯದ ಪುಷ್ಪಿಕೆಯಲ್ಲಿ ಬರುವ 'ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕ ಮಾರ್ಗ ಪ್ರವರ್ತಕ ಶ್ರೀವೀರ ಬುಕ್ಕಸಾಮ್ರಾಜ್ಯ ಧುರಂಧರೇ ಸಾಯಣಾಚಾರ್ಯೇಣ ವಿರಚಿತೇ' ಎಂಬ ಮಾತುಗಳು ಸಾಕ್ಷಿಯಾಗಿವೆ. ಆದರೆ ಅಥರ್ವ ಸಂಹಿತೆಯ ಭಾಷ್ಯಾವತರಣಿಕೆಯಲ್ಲಿ–

ತತ್ ಕಟಾಕ್ಷೇಣ ತದ್ರೂಪಂ ದಧತೋ ಬುಕ್ಕ ಭೂಪತೇಃ |
ಅಭೂತ್ ಹರಿಹರೋ ರಾಜಾ ಕ್ಷೀರಾಬ್ಧೇರಿವ ಚಂದ್ರಮಾಃ |

ಎಂಬುದಾಗಿಯೂ ಶತಪಥಬ್ರಾಹ್ಮಣ ಭಾಷ್ಯಾರಂಭದಲ್ಲಿ–

'ವಿಜಿತಾರಾತಿವ್ರಾತಃ ವೀರಃ ಶ್ರೀಹರಿಹರಃ ಕ್ಷಮಾಧೀಶಃ |
ಧರ್ಮಬ್ರಹ್ಮಾಧ್ವನ್ಯಃ ಸಮಾದಿಶತ್ ಸಾಯಣಾಚಾರ್ಯಮ್ ||'

ಎಂಬುದಾಗಿಯೂ ಬುಕ್ಕಮಹಾರಾಜನ ಪುತ್ರನಾದ ಎರಡನೆಯ ಹರಿಹರನ ಉಲ್ಲೇಖವಿದೆ.

ಋಗ್ವೇದ ಭಾಷ್ಯದ ಹಸ್ತಪ್ರತಿಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾಗಿ ವಿಕ್ರಮ ಸಂವತ್ 1452ರಲ್ಲಿ ಎಂದರೆ (ಕ್ರಿ.ಶ. 1395 ) ಪ್ರತಿ ಮಾಡಿದುದು ಬರೋಡದ ಸೆಂಟ್ರಲ್ ಲೈಬ್ರರಿಯಲ್ಲಿದೆ. ಇದಕ್ಕಿಂತ ಪ್ರಾಚೀನವಾದ ಪ್ರತಿ ಯಾವುದೂ ದೊರಕಿಲ್ಲ. ಸಾಯಣಾ

ಚಾರ್ಯರು ವಿಕ್ರಮ ಸಂವತ್ (ಕ್ರಿ.ಶ. 1387) 1444ರಲ್ಲಿ ದಿವಂಗತರಾದರೆಂದೂ ಗೊತ್ತಾಗುತ್ತದೆ. ಇವರು ಕ್ರಿ. ಶ. 1364ರಿಂದ 1378ರ ವರೆಗೆ ಬುಕ್ಕ ರಾಜನ ಆಸ್ಥಾನದಲ್ಲಿ ಪ್ರಧಾನಾಮಾತ್ಯರಾಗಿಯೂ ಕ್ರಿ. ಶ. 1379ರಿಂದ ಕ್ರಿ. ಶ. 1444ರವರೆಗೆ ಇಮ್ಮಡಿ ಹರಿಹರನ ಪ್ರಧಾನಾಮಾತ್ಯರಾಗಿಯೂ ಇದ್ದರೆಂದು ಗೊತ್ತಾಗುತ್ತದೆ. ಆದ್ದರಿಂದ ಅವರು ಈ ಅವಧಿಯಲ್ಲಿ (ಕ್ರಿ.ಶ. 1364 ರಿಂದ 1387) ಈ ಉದ್ಗ್ರಂಥವನ್ನು ಬರೆದರೆಂದು ನಿರ್ಧರಿಸಬಹುದು.

ಸಾಯಣಾಚಾರ್ಯರ ಭಾಷ್ಯಗಳು ಬಹಳ ಮಹತ್ವಪೂರ್ಣವಾದವು. ಆಚಾರ್ಯರ ಗಂಭೀರವಾದ ಶಾಸ್ತ್ರಪಾಂಡಿತ್ಯದ ಪರಿಚಯ ಇಲ್ಲಿ ಆಗುತ್ತದೆ. ಆಚಾರ್ಯರು ತಮ್ಮ ಜೀವನವನ್ನೇ ವೇದಾರ್ಥವಿಶದೀಕರಣಕ್ಕಾಗಿ ಮುಡಿಪಾಗಿಟ್ಟು ಅದನ್ನೇ ಸಾಹಸದಿಂದ ಸಾಧಿಸಿರುವ ಈ ಅಭೂತಪೂರ್ವವಾದ ಸಾಧನೆ ರೋಮಾಂಚಕಾರಿಯಾದುದು.

ಸಾಯಣರು ತಮ್ಮ ಭಾಷ್ಯದಲ್ಲಿ 'ಮಾಧವೀಯ' ಎಂಬ ಶಬ್ದ ಪ್ರಯೋಗ ಮಾಡಿದ್ದಾರೆ. ಇದರಿಂದಲೇ ಇವುಗಳನ್ನು ಮಾಧವಾಚಾರ್ಯರೇ ರಚಿಸಿದ್ದಾರೆಂಬ ಸಂಶಯಕ್ಕೆ ಅವಕಾಶವಿಲ್ಲ. ಮಾಧವಾಚಾರ್ಯರ ದ್ವಾರಾ ಸಾಯಣರ ಸಾಹಿತ್ಯ ನಿರ್ಮಾಣಕ್ಕೆ ಅವಕಾಶ ವಾಯಿತೆಂಬುದಕ್ಕೆ ಇದು ನಿದರ್ಶಕವಾಗಿದೆ. ಸಾಯಣರ ವಿನಯಸಂಪತ್ತಿಯನ್ನು ಇದು ತೋರಿಸುತ್ತದೆ.

ಈ ಎಲ್ಲ ವೇದಭಾಷ್ಯಗಳ ಬೃಹತ್ಪ್ರಮಾಣವನ್ನು ಕಂಡ ವಿಮರ್ಶಕ ಇವುಗಳನ್ನೆಲ್ಲಾ ಒಬ್ಬರೇ ಬರೆಯಲು ಸಾಧ್ಯವೇ ಎಂದು ಯೋಚಿಸಬಹುದು. ಕ್ರಿ. ಶ. 1386ರ ಶಿಲಾಲೇಖನ ವೊಂದರಲ್ಲಿ ಇಮ್ಮಡಿ ಹರಿಹರ ಮಹಾರಾಜನು ವಿದ್ಯಾರಣ್ಯಸ್ವಾಮಿಗಳ ಸಮಕ್ಷಮದಲ್ಲಿ ಚತುರ್ವೇದಭಾಷ್ಯಪ್ರವರ್ತಕ ನಾರಾಯಣವಾಜಪೇಯಯಾಜೀ, ನರಹರಿಸೋಮಯಾಜೀ ಮತ್ತು ಪಂಡರಿದೀಕ್ಷಿತರಿಗೆ ಅಗ್ರಹಾರಗಳನ್ನು ಕೊಟ್ಟು ಸನ್ಮಾನಿಸಿದರೆಂದು ಉಲ್ಲೇಖಿಸಿದೆ. ಇವರು ಮೂವರು ಪಂಡಿತರೂ ಸಾಯಣಾಚಾರ್ಯರಿಗೆ ಸಹಾಯ ಮಾಡಿದವರಾಗಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ಈ ಸಂದೇಹಗಳು ಪೂರ್ಣವಾಗಿ ನಿರಾಧಾರವೆಂದು ಹೇಳುವುದಕ್ಕಾಗುವುದಿಲ್ಲ. ವಿಜಯನಗರದ ಅಮಾತ್ಯವರ್ಯರಾದ ಸಾಯಣಾಚಾರ್ಯರು ಅನೇಕಾನೇಕ ವಿದ್ವಾಂಸರ ಸಂಪರ್ಕವನ್ನು ಪಡೆದಿದ್ದುದು ಅಸಂಭವವಲ್ಲ. ಆದಾಗ್ಯೂ ವೇದಭಾಷ್ಯಗಳ ಕರ್ತೃತ್ವ ಒಬ್ಬರದೇ ಆಗಿರುವುದರಲ್ಲಿ ಯಾವ ಅಸಂಭವವೂ ಇರುವುದಿಲ್ಲ. ಈ ವೇದಭಾಷ್ಯಗಳನ್ನೆಲ್ಲಾ ಪರಿಶೀಲಿಸಿದರೆ ಕೇವಲ ಒಂದೇ ಬಗೆಯ ವ್ಯಾಖ್ಯಾನಪದ್ಧತಿ ಕಂಡು ಬರಲಾರದು. ವೈವಿಧ್ಯವನ್ನು ನಾವು ಅಲ್ಲಿ ಕಾಣುತ್ತೇವೆ. ಮಂತ್ರಾರ್ಥವಿವರಣೆಯಲ್ಲಿ ಸಾಮಂಜಸ್ಯವಿಲ್ಲದಿಲ್ಲ. ಒಂದು ಭಾಷ್ಯಕ್ಕೂ ಮತ್ತೊಂದು ಭಾಷ್ಯಕ್ಕೂ ವೈಲಕ್ಷಣ್ಯಗಳಿರುವಂತೆ ಕಂಡುಬರುತ್ತದೆ. ಇದರಿಂದ ಕೆಲವರು ವಿದ್ವಾಂಸರು ಈ ಭಾಷ್ಯಗಳು ಅನೇಕಕರ್ತೃಕಗಳೆಂದೂ, ಸಾಯಣಾಚಾರ್ಯರ ನೇತೃತ್ವದಲ್ಲಿ ಇವುಗಳ ರಚನೆ ಆಯಿತೆಂದೂ ಅಭಿಪ್ರಾಯಪಡುತ್ತಾರೆ. ಆದರೆ ಮತ್ತೆ ಕೆಲವರು ಬಾಹ್ಯವಾಗಿ ತೋರುವ ಈ ವಿರೋಧಗಳಿಗೆ ಹೆಚ್ಚು ಮಹತ್ವವನ್ನು ಕೊಡದೆ ಇವೆಲ್ಲ ಭಾಷ್ಯಗಳನ್ನೂ ಸಾಯಣಾಚಾರ್ಯರೇ ಬರೆದರೆಂದು ನಿರ್ಧರಿಸುತ್ತಾರೆ. ಶ್ರೀಮತ್ಸಾಯಣಾಚಾರ್ಯರು ಮೇಲೆ ಹೇಳಿದ ವಿದ್ವಾಂಸರಿಂದ ಪೂರ್ಣವಾದ ಸಹಾಯವನ್ನು ಪಡೆದಿರಬೇಕು. ಸಾಯಣರೊಡನೆ ಸಹಕರಿಸಲು ಒಂದು ವಿದ್ವನ್ಮಂಡಲಿಯೇ ಸಿದ್ಧವಾಗಿ ತ್ತೆಂದು ನಾವು ಊಹಿಸಬಹುದು. ಇವರೆಲ್ಲರ ಸಹಕಾರ ಸೌಹಾರ್ದಗಳನ್ನು ಸಂಪಾದಿಸಿ ಅಖಂಡವಾದ ವೇದ ವಾಙ್ಮಯಕ್ಕೆ ವಿದ್ವತ್ಪೂರ್ಣವಾದ ಭಾಷ್ಯಗಳನ್ನು ಜಗತ್ತಿಗೆ ಒದಗಿಸಿ ಕೊಟ್ಟ ಅಪೂರ್ವ ಯಶಸ್ಸು ಸಾಯಣಾಚಾರ್ಯರಿಗೇ ಸಲ್ಲುತ್ತದೆ. ಹೀಗೆ ಬಹಳ ಹಿಂದಿನ ಕಾಲದಿಂದಲೂ

ವೇದಪರಂಪರೆಯ ಸಂರಕ್ಷಣೆಯನ್ನು ನಮ್ಮ ಪೂರ್ವಜರು ಹೆಚ್ಚಿನ ಶ್ರದ್ಧೆ ಮತ್ತು ಭಕ್ತಿಯಿಂದ ಮಾಡಿಕೊಂಡುಬಂದಿದ್ದಾರೆ.

**ವೇದರಕ್ಷಣೆ**

ಭಾರತೀಯ ಸಂಸ್ಕೃತಿಯ ಇತಿಹಾಸದಲ್ಲಿ ವೇದಗಳ ಸ್ಥಾನ ಅತ್ಯಂತ ಗೌರವಯುತ ವಾದುದು. ಭಾರತೀಯಧರ್ಮ ಶ್ರುತಿಗಳ ಪರಮಾಧಾರದಿಂದ ಮೂಡಿಬಂದಿದೆ. ಭಾರತೀಯರ ಆಚಾರವಿಚಾರಗಳ, ಧರ್ಮಕರ್ಮಗಳ, ಬಾಳುಬದುಕುಗಳ ರಹಸ್ಯವನ್ನರಿಯ ಬೇಕಾದರೆ ವೇದಗಳ ತಿಳಿವಳಿಕೆ ಬಹಳ ಆವಶ್ಯಕವಾದುದು.

ಪ್ರತ್ಯಕ್ಷ, ಅನುಮಾನವೇ ಮೊದಲಾದ ಇತರ ಪ್ರಮಾಣಗಳಿಗೆ ಅಗೋಚರವಾದ ಅಲೌಕಿಕವಾದ ಉಪಾಯವನ್ನು ಅರುಹುವ ವೇದಗಳನ್ನು ನಮ್ಮ ಜನ ಬಹಳ ಹಿಂದಿನ ಕಾಲದಿಂದಲೂ ಬಹಳ ಎಚ್ಚರಿಕೆಯಿಂದ ರಕ್ಷಿಸಿಕೊಂಡು ಬಂದಿದ್ದಾರೆ. ಆ ದೀಪಶಿಖೆ ಪ್ರಜ್ವಲಿಸುವಹಾಗೆ ಉಳಿಸಿಕೊಂಡುಬಂದಿದ್ದಾರೆ.

> ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ |
> ಏತಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ||

ಎಂದು ಹೇಳಿ ವೇದದ ಮಹತ್ವವನ್ನು ತಿಳಿಸಿಕೊಟ್ಟಿದ್ದಾರೆ.

ವೇದದ ಈ ಉನ್ನತವಾದ ಗೌರವವನ್ನು ಎಂದಿನಿಂದ ಕಾಯ್ದುಕೊಂಡು ಬಂದಿದ್ದಾರೆ ನಮ್ಮ ಜನ. ಈ ವೇದದ ರಕ್ಷಣೆ ಅದರ ಅಧ್ಯಯನದಿಂದಲೇ ಸಾಧ್ಯವೆಂಬುದನ್ನು ಅರಿತ ನಮ್ಮ ಋಷಿಗಳು ಅದರ ಸತತವಾದ ಅಧ್ಯಯನವನ್ನು ನಡೆಸಬೇಕೆಂದು ಆಣತಿಯಿಟ್ಟಿದ್ದಾರೆ. **ಶತಪಥ ಬ್ರಾಹ್ಮಣದಲ್ಲಿ–**

> 'ಯಾವಂತಂ ಹ ವೈ ಇಮಾಂ ಪೃಥಿವೀಂ ವಿತ್ತೇನ ಪೂರ್ಣಾಂ
> ದದತ್ ಲೋಕಂ ಜಯತಿ, ತ್ರಿಭಿಸ್ತಾವಂತಂಜಯತಿ, ಭೂಯಾಂಸಂ
> ಚ ಅಕ್ಷಯ್ಯಂ ಚ ಯ ಏವಂ ವಿದ್ವಾನ್ ಅಹರಹಃ ಸ್ವಾಧ್ಯಾಯ
> ಮಧೀತೇ ತಸ್ಮಾತ್ ಸ್ವಾಧ್ಯಾಯೋ ಅಧ್ಯೇತವ್ಯಃ'

ಎಂದು (ಶತ. 11-5-6-1) ಸಾರಿ ಹೇಳಿದೆ.

ವೇದಜ್ಞನನ್ನು ಪ್ರಶಂಸೆಮಾಡುತ್ತಾ 'ವೇದಶಾಸ್ತ್ರಾರ್ಥತತ್ತ್ವವನ್ನರಿತವನು ಯಾವ ಆಶ್ರಮದಲ್ಲಿಯಾದರೂ ವಾಸಿಸುತ್ತಾ ತನ್ನ ಕರ್ತವ್ಯಗಳನ್ನು ಮಾಡುತ್ತಿದ್ದರೆ ಸಾಕು. ಅವನು ಈ ಲೋಕದಲ್ಲಿರುವಹಾಗೆಯೇ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ'–ಎಂದು ಮನು

> ವೇದಶಾಸ್ತ್ರತತ್ತ್ವಜ್ಞೋ ಯತ್ರ ಕುತ್ರಾಶ್ರಮೇ ವಸನ್ |
> ಇಹೈವ ಲೋಕೇ ತಿಷ್ಠನ್ ಸಃ ಬ್ರಹ್ಮಭೂಯಾಯ ಕಲ್ಪತೇ ||–(12-102)

ಎಂಬಲ್ಲಿ ತಿಳಿಸಿದ್ದಾನೆ.

'ಬ್ರಾಹ್ಮಣೇನ ನಿಷ್ಕಾರಣೋ ಧರ್ಮೋ ಷಡಂಗೋ ವೇದೋ ಅಧ್ಯೇಯೋಜ್ಞೇಯಶ್ಚ' ಎಂದು ಮಹಾಭಾಷ್ಯಕಾರರಾದ ಪತಂಜಲಿಗಳು ಹೇಳಿ ವೇದಾಧ್ಯಯನ ಬ್ರಾಹ್ಮಣರ ಸಹಜಕರ್ಮವೆಂದು ತಿಳಿಸುತ್ತಾರೆ. ಹೀಗೆ ಬಹಳ ಹಿಂದಿನ ಕಾಲದಿಂದಲೂ ನಮ್ಮ ದೇಶದ ರಸಋಷಿಗಳು ಭಾರತೀಯ ಸಂಸ್ಕೃತಿ, ಧರ್ಮ, ದರ್ಶನಗಳ ರಸಘಟ್ಟಿಯಾದ ವೇದ ವಾಙ್ಮಯವನ್ನು ಅಧ್ಯಯನ ಮಾಡಿ ಅದರ ಅರ್ಥಾನುಸಂಧಾನವನ್ನು ಮಾಡಿ ನಡವಳಿಕೆಯಲ್ಲಿ

ಅವುಗಳನ್ನು ತರಬೇಕೆಂದೂ ಆತ್ಮೋದ್ಧಾರ ಮಾಡಿಕೊಳ್ಳಬೇಕೆಂದೂ ಆದೇಶ ನೀಡಿದ್ದಾರೆ. ಇವರ ಸತತಪ್ರಯತ್ನಗಳ ಕಾರಣವೂ ಆ ವಾಙ್ಮಯದ ವೀರ್ಯವತ್ತಮವಾದ ಮಹತ್ವದಿಂದಲೂ ಮಾನವಕೋಟಿಯ ಭಾಗ್ಯವಿಶೇಷದಿಂದಲೂ ಈ ಅದ್ವಿತೀಯವಾದ ವಾಙ್ಮಯ ಇಂದಿಗೂ ಸುರಕ್ಷಿತವಾಗಿದೆ.

ಈ ಅಪಾರವಾದ ವಾಙ್ಮಯವನ್ನು ಸ್ವರವರ್ಣವಿಶಿಷ್ಟವಾಗಿ ಕಾಪಾಡಿಡಲು ನಮ್ಮ ಪ್ರಾಚೀನ ಋಷಿಗಳು ಬಹಳವಾಗಿ ಶ್ರಮಿಸಿದ್ದಾರೆ. ಅವರ ಪರಿಶ್ರಮದ ಕಾರಣವೇ ಇಷ್ಟು ದೀರ್ಘಕಾಲದ ನಂತರವೂ ವೇದದ ಒಂದು ಅಕ್ಷರವೂ ಸ್ಖಲಿತವಾಗದೆ, ಚ್ಯುತವಾಗದೆ ಶುದ್ಧವಾದ ಪಾಠದಲ್ಲಿ ಇಂದೂ ಉಪಲಬ್ಧವಾಗಿದೆ. ಇಂದೂ ಸಂಪ್ರದಾಯಾನುಸಾರ ಅಧ್ಯಯನ ಮಾಡಿರುವ ಘನಪಾಠಿಗಳಿಂದ ನಾವು ಆಯಾ ವೇದದ ಪೂರ್ಣಪಾಠವನ್ನು ಪುಸ್ತಕಗಳ ಸಹಾಯವೇ ಇಲ್ಲದೆ ಪಡೆದುಕೊಳ್ಳಬಹುದು! ಇಂಥ ಸಿದ್ಧಿಗೆ ಪ್ರಾಚೀನರು ಯೋಜಿಸಿದ ಎಂಟು ವಿಕೃತಿಗಳು ಬಹುಮಟ್ಟಿಗೆ ಕಾರಣವಾಗಿವೆ. ಈ ವಿಕೃತಿಗಳ ಕಾರಣ ವೇದಗಳ ಪದಗಳು ಕ್ರಮ ಮತ್ತು ವಿಲೋಮ ಉಚ್ಚಾರಣೆಯಲ್ಲಿ ಅನೇಕ ಬಾರಿ ಆವೃತ್ತವಾಗಿ ಅವುಗಳ ರೂಪಜ್ಞಾನದಲ್ಲಿ ಯಾವ ಬಗೆಯ ತ್ರುಟಿಯೂ ಉಂಟಾಗದೆ ಶುದ್ಧವಾಗಿ ಉಳಿದಿದೆ. ಇವುಗಳನ್ನು

'ಜಟಾ ಮಾಲಾ ಶಿಖಾ ರೇಖಾ ಧ್ವಜೋ ದಂಡೋ ರಥೋ ಘನಃ |
ಅಷ್ಟೌ ವಿಕೃತಯಃ ಪ್ರೋಕ್ತಾಃ ಕ್ರಮಪೂರ್ವಾ ಮಹರ್ಷಿಭಿಃ ||

ಎಂದು ಹೇಳಿದ್ದಾರೆ.

ಜಟಾ, ಮಾಲಾ, ಶಿಖಾ, ರೇಖಾ, ಧ್ವಜ, ದಂಡ, ರಥ ಮತ್ತು ಘನ ಎಂಬುವು ಈ ಎಂಟು ವಿಕೃತಿಗಳು.

ಮಂತ್ರಗಳು ಪ್ರಕೃತದಲ್ಲಿ ಉಪಲಬ್ಧವಾಗಿರುವ ಮೂಲಪಾಠಕ್ಕೆ ಸಂಹಿತಾಪಾಠ ಎಂದು ಹೆಸರು. ಈ ಪಾಠವನ್ನು ಪದವಿಭಾಗ ಮಾಡಿ ಒಂದೊಂದು ಪದವನ್ನೂ ಬಿಡಿಸಿ ಬಿಡಿಸಿ ಹೇಳುವ ಪಾಠಕ್ಕೆ 'ಪದಪಾಠ'ವೆಂದು ಹೆಸರು. ಪದಪಾಠದಲ್ಲಿ ಪದಗಳೇನೋ ಅವುಗಳೇ ಆಗಿವೆ. ಆದರೆ ಸ್ವರದಲ್ಲಿ ಮಾತ್ರ ವ್ಯತ್ಯಾಸಗಳಾಗುತ್ತವೆ. ಕ್ರಮವಾಗಿ ಎರಡೆರಡು ಪದಗಳನ್ನು ಕೂಡಿಸಿ ಕೂಡಿಸಿ ಹೇಳುವುದಕ್ಕೆ 'ಕ್ರಮಪಾಠ'ವೆನ್ನುತ್ತಾರೆ. ಅನುಲೋಮ ವಿಲೋಮ ಕ್ರಮದಲ್ಲಿ ಎರಡು ಕ್ರಮಗಳನ್ನು ಮೂರು ಬಾರಿ ಹೇಳುವುದಕ್ಕೆ ಜಟಾಪಾಠವೆಂದು ಹೆಸರು. ಜಟಾಪಾಠಕ್ಕೆ ಮತ್ತೊಂದು ಪದವನ್ನು ಜೋಡಿಸಿದರೆ 'ಶಿಖಾ' ಪಾಠವಾಗುತ್ತದೆ. 'ಪದೋತ್ತರಂ ಜಟಾಮೇವ ಶಿಖಾಮಾರ್ಯಾಃ ಪ್ರಚಕ್ಷತೇ' ಎಂದು ಇದನ್ನು ಹೇಳುತ್ತಾರೆ.

ಈ ವಿಕೃತಿಗಳಲ್ಲಿ ಬಹಳ ವಿಲಕ್ಷಣವಾದುದು ಘನಪಾಠ. ಅನುಲೋಮ ವಿಲೋಮ ಕ್ರಮದಲ್ಲಿ ಪದಗಳ ಆವೃತ್ತಿ ಅನೇಕಬಾರಿ ಇದರಲ್ಲಿ ಆಗುತ್ತದೆ. ಒಂದು ಮಂತ್ರಕ್ಕೆ ಈ ಎಲ್ಲ ಪಾಠಗಳನ್ನು ಕೆಳಗೆ ತೋರಿಸಿದೆ:

**ಸಂಹಿತಾಪಾಠ**—'ಓಷಧಯಃ ಸಂವದಂತೇ ಸೋಮೇನ ಸಹರಾಜ್ಞಾ'

1 2 3

**ಪದಪಾಠ**—ಓಷಧಯಃ | ಸಂ | ವದಂತೇ |

4 5 6

ಸೋಮೇನ | ಸಹ | ರಾಜ್ಞಾ |

**ಕ್ರಮಪಾಠ**—ಓಷಧಯಃ ಸಂ | ಸಂವದಂತೇ | ವದಂತೇ
ಸೋಮೇನ | ಸೋಮೇನಸಹ | ಸಹರಾಜ್ಞಾ |
ರಾಜ್ಞೇತಿ ರಾಜ್ಞಾ |

**ಜಟಾಪಾಠ**—ಓಷಧಯಃ ಸಂ ಸಮೋಷಧಯ ಓಷಧಯಃ ಸಂ
ಸಂ ವದಂತೇ ವದಂತೇ ಸಂ ಸಂವದಂತೇ |

**ಶಿಖಾಪಾಠ**—ಓಷಧಯಃ ಸಂ ಸಮೋಷಧಯ ಓಷಧಯಃ ಸಂ
ವದಂತೇ | ಸಂವದಂತೇ | ವದಂತೇ ಸಂ ಸಂವದಂತೇ
-ಸೋಮೇನ ||

**ಘನಪಾಠ**—ಓಷಧಯಃ ಸಂ ಸಮೋಷಧಯ ಓಷಧಯಃ ಸಂ
ವದಂತೇ, ವದಂತೇ ಸಮೋಷಧಯ ಓಷಧಯಃ ಸಂವದಂತೇ |
ಸಂವದಂತೇ ವದಂತೇ ಸಂಸಂವದಂತೇ ಸೋಮೇನ
ಸೋಮೇನವದಂತೇಸಂ ಸಂವದಂತೇ ಸೋಮೇನ ||

ಹೀಗೆ ಪದಗಳ ಆವೃತ್ತಿ ಈ ಪಾಠಗಳಲ್ಲಿ ಅನೇಕ ಬಾರಿ ಆಗುವ ಕಾರಣ ಪದಗಳ ರೂಪಸ್ವರಗಳು ಅಸ್ಖಲಿತವಾಗಿ ಪರಿಶುದ್ಧವಾಗಿ ಉಳಿಯುತ್ತವೆ. ಅಖಂಡವಾದ ವೇದರಾಶಿಯ ರಕ್ಷಣೆ ಸರ್ವತೋಭದ್ರವಾಗಿ ಈ ಪಾಠಗಳಿಂದ ಆಯಿತು. ಇದಲ್ಲದೆ 'ಸಲಕ್ಷಣ'ವೆಂಬ ಪದ್ಧತಿಯೂ ಬೆಳೆದುಬಂದಿದೆ. ಒಂದೆರಡು ಮಂತ್ರದ ಪ್ರತಿಯೊಂದು ಪದದ ಒಂದೊಂದು ವರ್ಣದ ನಿಷ್ಕೃಷ್ಟವಾದ ರೂಪವನ್ನೂ ಹೇಳಿ ಘನಪಾಠವನ್ನು ಹೇಳುವ ಸಂಪ್ರದಾಯವಿದೆ. ಈ ಕ್ರಮದಿಂದ ವರ್ಣಗಳ ರೂಪ ಸ್ವರಗಳ ವಿಚಾರದಲ್ಲಿ ಎಂಥ ನಿಷ್ಕೃಷ್ಟವಾದ ತಿಳಿವಳಿಕೆ ಉಂಟಾಗುವುದೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಇವುಗಳಿಂದ ಅವರ ಮೇಧಾಶಕ್ತಿಯ ಪರಾಕಾಷ್ಠೆಯ ಅರಿವಾಗುತ್ತದೆ. ನಮ್ಮ ವೇದಪಾಠಿಗಳು ಅನಾಯಾಸವಾಗಿ ಈ ವಿಷಮಪಾಠಗಳನ್ನು ಶುದ್ಧಸ್ವರದಲ್ಲಿ ಹೇಳಬಲ್ಲವರಾಗಿದ್ದಾರೆ!

ವೇದಗಳಲ್ಲಿ ಸಾಮವೇದದ ಸ್ವರಗಳು ಮಾತ್ರ ವಿಲಕ್ಷಣವಾಗಿವೆ. ಈ ವೇದದ ಸ್ವರಗಳಲ್ಲಿಯೂ ಎಳ್ಳಷ್ಟೂ ಸ್ಖಾಲಿತ್ಯ ಉಂಟಾಗದಂತೆ ಎಚ್ಚರಿಕೆ ವಹಿಸಲಾಗಿದೆ. ಈ ಸ್ವರಗಣನೆ ಅತ್ಯಂತ ಸಮೀಚೀನವಾಗಿದೆ. ಉದಾತ್ತಾನುದಾತ್ತ ಸ್ವರಿತಗಳನ್ನು ತೋರಿಸಲು ಆಯಾ ವರ್ಣಗಳ ಮೇಲೆ 1, 3 ಮತ್ತು 2 ಎಂಬ ಅಂಕಿಗಳನ್ನು ಕ್ರಮವಾಗಿ ಗುರುತಿಸುತ್ತಾರೆ.

ಹೀಗೆ ವೇದಪಾಠದ ರಕ್ಷಣೆಗಾಗಿ ಅಭೇದ್ಯವಾದ ಒಂದು ದುರ್ಗವೇ ರಚಿತವಾಗಿದೆ. ಇದರಿಂದಲೇ ಇಂದೂ ನಮ್ಮ ವೇದಗಳು ಅಂದಿನ ಶುದ್ಧವೂ, ಪ್ರಾಮಾಣಿಕವೂ ಆದ ಪಾಠದಲ್ಲಿಯೇ ಉಪಲಬ್ಧವಾಗಿವೆ. ಪ್ರಪಂಚದ ಇತಿಹಾಸದಲ್ಲಿಯೇ ಇದು ಬಹಳ ಆಶ್ಚರ್ಯಕರವಾದ ವಿಷಯವಾಗಿದೆ.

## ವೇದಗಳ ಅಧ್ಯಯನ–ಪ್ರಯೋಜನ

ಸಂಸ್ಕೃತ ವಾಙ್ಮಯದಲ್ಲಿಯೇ ವೇದಗಳು ಅತ್ಯಂತ ಪ್ರಧಾನವಾದ ಭಾಗಗಳೆಂದು ಒಪ್ಪುವವರೂ ಸಹ ವೇದಾಭ್ಯಾಸ ಮತ್ತು ವೇದಾರ್ಥವಿಜ್ಞಾನದಿಂದ ಫಲವೇನೆಂದು ಸಂಶಯಪಡುತ್ತಾರೆ. ನಮ್ಮ ಜನ ಎಂದಿನಿಂದಲೂ ವೇದಾಧ್ಯಯನವನ್ನು ತಪಸ್ಸಿನಂತೆ ಮಾಡಿಕೊಂಡು

ಬಂದಿದ್ದಾರೆ. ವೇದಾಧ್ಯಯನಕ್ಕೆ ಜೀವನವನ್ನೇ ಮುಡಿಪಾಗಿಟ್ಟು ನುಡಿದ ವೇದಾಕ್ಷರ ಭಗವನ್ನಾಮಸದೃಶವೆಂದು ಭಾವಿಸುತ್ತಿದ್ದ ನಮ್ಮ ಹಿರಿಯರು ವೇದಾರ್ಥಪರಿಜ್ಞಾನಕ್ಕೆ ಮಾತ್ರ ಹೆಚ್ಚಿನ ಗಮನ ಕೊಡಲಿಲ್ಲ. ಈ ವಿಧವಾದ ಉದಾಸೀನಭಾವ ಅಯುಕ್ತವೆಂದು ವೇದದಲ್ಲಿಯೇ ಹೇಳಿದೆ.[52] ಉಪನಿಷತ್ತುಗಳಲ್ಲಿಯೂ ಸಹ ಕೇವಲ ವೇದಶಬ್ದಕ್ಕಿಂತಲೂ ಅದು ಪ್ರತಿಪಾದಿಸುವ ತತ್ತ್ವಾರ್ಥವನ್ನು ತಿಳಿಯುವುದು ಆವಶ್ಯಕವೆಂದು ಹೇಳಿದೆ.

ಬಹಳ ಹಿಂದಿನ ಕಾಲದಲ್ಲಿಯೇ ವೇದವನ್ನು ಪೂರ್ವಭಾಗ ಮತ್ತು ಉತ್ತರಭಾಗ ಎಂದು ಎರಡು ಭಾಗ ಮಾಡಲಾಯಿತು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವ ವೇದಗಳನ್ನೂ ಅವುಗಳ ಬ್ರಾಹ್ಮಣಭಾಗಗಳನ್ನೂ ಪೂರ್ವಭಾಗಗಳೆಂದೂ, ಉಪನಿಷತ್ತುಗಳನ್ನು ಉತ್ತರಭಾಗಗಳೆಂದೂ ವಿಭಜಿಸಿ ಸರ್ವಭೂತಾಂತರಾತ್ಮನೂ ಸರ್ವಭೂತಕಾರಣನೂ ಆದ ಪರಮಾತ್ಮನನ್ನು ಬೋಧಿಸುವ ಉಪನಿಷದ್ಭಾಗಗಳು ಶ್ರೇಷ್ಠತರವಾದುದೆಂದು ಪ್ರತಿಪಾದಿಸಲಾಗಿದೆ. 'ಅಥ ಪರಾ ಯಯಾ ತದಕ್ಷರಮಧಿ ಗಮ್ಯತೇ' ಎಂದು ಮುಂಡಕೋಪನಿಷತ್ತು ಇದನ್ನು ವಿವರಿಸಿದೆ. ಕರ್ಮಕಾಂಡಗಳಲ್ಲಿ ಪ್ರತಿಪಾದಿಸಲಾದ ಅನೇಕಾನೇಕ ಯಾಗಾದಿಗಳನ್ನು ಆಚರಿಸುತ್ತಿದ್ದ ಕಾಲಕ್ಕೆ ಚತುರ್ವೇದಗಳಿಗೆ ಹೆಚ್ಚಿನ ಪ್ರಾಧಾನ್ಯವಿತ್ತು. ಈ ಯಾಗಾದಿಗಳ ಅನುಷ್ಠಾನದಿಂದ ಲಭಿಸುವ ಫಲ ಅಲ್ಪವೂ ಅಸ್ಥಿರವೂ ಆದುದೆಂದೂ ಇದಕ್ಕೆ ಪ್ರತಿಯಾಗಿ ಅನಂತ ಸ್ಥಿರಫಲಕವಾದ ಬ್ರಹ್ಮಜ್ಞಾನವನ್ನು ಪಡೆಯುವುದು ಶ್ರೇಯಸ್ಕರವೆಂಬ ಭಾವನೆ[53] ಬಲಿತಾಗ ಬ್ರಹ್ಮಜ್ಞಾನವು ಖನೀಭೂತವಾಗಿರುವ ಉತ್ತರಭಾಗ ಸಾರತರವಾದುದೆಂದು ತಿಳಿಯಲಾಯಿತು. ಇದೇ ವಿಧವಾದ ವಿಚಾರಮಾರ್ಗ ಮುಂದಿನ ಇತಿಹಾಸಗಳ ಕಾಲದಲ್ಲಿಯೂ ಬೆಳೆದುಬಂದಿತು.[54]

ವೈದಿಕಧರ್ಮದಲ್ಲಿ ಎಂಥ ಮಹತ್ತರವಾದ ಪರಿವರ್ತನೆ ಇದರಿಂದ ಆಯಿತೆಂಬುದನ್ನು ಊಹಿಸಬಹುದು. ಸಮಗ್ರವಾದ ವೇದ ಭಗವಂತನ ಉಸಿರೆಂದು ನಂಬಿದವರೂ ಸಹ ವೇದಾಂತಗಳೆನ್ನಲಾದ ಉಪನಿಷತ್ತುಗಳ ಅರ್ಥಜ್ಞಾನವನ್ನು ಪಡೆಯಲು ಪ್ರಯತ್ನಿಸಿದರೇ ವಿನಾ ಪೂರ್ವಭಾಗಗಳೆನ್ನಲಾದ ಸಂಹಿತಾಬ್ರಾಹ್ಮಣಗಳ ಅರ್ಥವಿಚಾರಕ್ಕೆ ಹಾಗೂ ಅಧ್ಯಯನಕ್ಕೆ ಗಮನ ಕೊಡಲಿಲ್ಲ. ಹೀಗಾಗಿ ವೇದಾಭ್ಯಾಸ ಸಮಗ್ರವಾಗಿ ನಡೆದರೂ ಉಪನಿಷದರ್ಥಗಳನ್ನೇ ವಿಶೇಷವಾಗಿ ಅಭ್ಯಾಸ ಮಾಡುವ ಪದ್ಧತಿ ಬಹಳ ಹಿಂದಿನಿಂದಲೂ ಬೆಳೆದುಬಂದಿತು.

ವೇದವಾಙ್ಮಯದ ವಿಚಾರದಲ್ಲಿ ಅಂಕುರಿಸಿದ ಈ ಉದಾಸೀನಭಾವ ಇಂದು ಅಪಾರವಾಗಿ ಬೆಳೆದುಬಂದಿದೆ. ಬೇರೆಬೇರೆ ಶಾಸ್ತ್ರಗಳಲ್ಲಿ ಪರಿಶ್ರಮಹೊಂದಲು ಜೀವಮಾನ ವನ್ನೇ ಮುಡುಪಾಗಿಡುವ ವಿದ್ವಾಂಸರೂ ಸಹ ವೇದವಾಙ್ಮಯದ ಕಡೆ ಇಣುಕಿ ನೋಡರು. ಇದು ಜಟಿಲ, ದುರೂಹ, ದುರಧಿಗಮವೆಂದು ಭಾವಿಸುವುದಲ್ಲದೆ ಇದರ ಅಧ್ಯಯನದಿಂದ ಯಾವ ಪ್ರಯೋಜನವೂ ಇಲ್ಲವೆಂಬ ಮನೋಭಾವ ಜನರಲ್ಲಿ ಬೆಳೆದುಬಂದಿದೆ.

---

52. ಋ. ಸಂ. 1-164-39 ; ಸ್ಥಾಣುರಯಂ ಭಾರಹಾರಃ ಕಿಲಾಸೀತ್ ಅಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ | ಯೋಽರ್ಥಜ್ಞ ಇತ್ಸಕಲಂ ಭದ್ರ ಮಶ್ನುತೇ ನಾಕಮೇತಿ ಜ್ಞಾನವಿಧೂತ ಪಾಪ್ಮಾ ||
–(ನಿ. 1-18)

53. ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾಃ ಅಷ್ಟಾದಶೋಕ್ತಮವರಂ ಯೇಷು ಕರ್ಮ |
ಏತಚ್ಛ್ರೇಯೋ ನಾಭಿನಂದಂತಿ ಮೂಢಾಃ ಜರಾಮೃತ್ಯುಂ ತೇ ಪುನರೇವಾಪಿ ಯಂತಿ ||

54. 'ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ |–ಭ. ಗೀ. (ಮುಂ. ಉ.)

ವೇದವಾಙ್ಮಯ ನಮಗೆ ಕಠಿಣವಾಗಿ ತೋರುವುದಕ್ಕೆ ಕಾರಣಗಳಿಲ್ಲದಿಲ್ಲ. ಅದರ ಭಾಷೆ ಅತ್ಯಂತ ಪ್ರಾಚೀನವಾದುದು. ಅದಕ್ಕೂ ನಮಗೂ ಅನೇಕ ಸಹಸ್ರಮಾನಗಳ ಅಂತರವೇ ಉಂಟಾಗಿದೆ. ಹೀಗೆಂದ ಮಾತ್ರಕ್ಕೇ ಅವುಗಳ ಅಧ್ಯಯನದಿಂದ ಆಗುವ ಪ್ರಯೋಜನವನ್ನೂ ಮತ್ತು ಸಾರ್ಥಕ್ಯವನ್ನೂ ಅಲ್ಲಗಳೆಯಲಾಗುವುದಿಲ್ಲ. ಅವುಗಳಲ್ಲಿ ಅನಿರ್ವಚನೀಯವಾದ ಶಕ್ತಿ ಇದೆ. ಆ ಶಕ್ತಿ ನಮ್ಮಲ್ಲಿ ಸತ್ಪ್ರೋನ್ಮೇಷವನ್ನು ಅಭೂತಪೂರ್ವವಾಗಿ ಮಾಡಬಲ್ಲದು. ವೇದಗಳ ಅಧ್ಯಯನದಿಂದ ನಮ್ಮಲ್ಲಿ ಆಗುವ ಮಹತ್ಪರಿಣಾಮಗಳಿಂದ ನಾವು ವಂಚಿತರಾಗ ಬಾರದು. ಅದೃಷ್ಟವಾದ ಪ್ರಯೋಜನದ ಈ ದೃಷ್ಟಿಯಿಂದ ಇದರ ಮಹತ್ವ ಅಪಾರವಾದುದು.

ವೇದಗಳ ಅಧ್ಯಯನ ಅನೇಕ ದೃಷ್ಟಿಗಳಿಂದ ಲಾಭಪ್ರದವಾದುದು. ಅನುಪಮವೂ ನವಂನವವೂ ಆದ ಭಾವನೆಗಳಿಂದಲೂ ಉಪಮಾನಗಳಿಂದಲೂ ಕೂಡಿರುವ ಸೂಕ್ತಗಳು ಉತ್ತಮಕಾವ್ಯಗಳಾಗಿವೆ. ಗಿರಿನಿರ್ಝರಗಳ ಸ್ವಚ್ಛಜಲಪ್ರವಾಹದಂತೆ ವೇದಋಷಿಗಳ ಕಲ್ಪನೆ ಪಲ್ಲವಿಸಿದೆ. ಕಾವ್ಯಾನಂದದ ಲಾಭ ಇವುಗಳ ಅಧ್ಯಯನದಿಂದ ಆಗುತ್ತದೆ. ಹೀಗೆ ಕಾವ್ಯದೃಷ್ಟಿ ಯಿಂದ ವೇದಗಳ ಅಧ್ಯಯನ ಅತ್ಯಂತ ಪ್ರಯೋಜನಕಾರಿಯಾದುದು. ಐತಿಹಾಸಿಕದೃಷ್ಟಿ ಯಿಂದಲೂ ವೇದಗಳ ಅಧ್ಯಯನ ಅನಿವಾರ್ಯ. ಪ್ರಾಚೀನರಾದ ಆರ್ಯರ ನಾಗರಿಕತೆ, ಸಂಸ್ಕೃತಿ, ಮನೋಭಾವಗಳು, ನಂಬಿಕೆಗಳು ಹಾಗೂ ಆದರ್ಶಗಳ ಪರಿಚಯ ನಮಗೆ ಮತ್ತೆಲ್ಲಿಯೂ ಆಗುವುದಿಲ್ಲ. ಇಂದೂ ಭಾರತೀಯರ ಮೇಲೆ ಇದರ ಪ್ರಭಾವ ಇದ್ದೇ ಇದೆ. ಮೂಲಭೂತವಾದ ಈ ಮನೋಭಾವದ ಅರಿವಿಗೆ ವೇದಗಳ ಅಧ್ಯಯನ ಅತ್ಯಂತ ಆವಶ್ಯಕ. ಭಾರತದ ಇತಿಹಾಸವನ್ನಾಗಲೀ, ವಿಶ್ವದ ಇತಿಹಾಸವನ್ನಾಗಲೀ ಅರಿಯಲು ಮೊತ್ತಮೊದಲಾಗಿ ವೇದಗಳ ಅಧ್ಯಯನವನ್ನು ಮಾಡಬೇಕು. ತುಲನಾತ್ಮಕ ಭಾಷಾಶಾಸ್ತ್ರದ ಅಧ್ಯಯನಕ್ಕೆ ವೇದಗಳ ಅಧ್ಯಯನ ಅನಿವಾರ್ಯ. ಇವೆಲ್ಲಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದಾಗ ವೇದಗಳ ಅಧ್ಯಯನ ಆದ್ಯಕರ್ತವ್ಯವಾಗುತ್ತದೆ. ಶುಷ್ಕತರ್ಕ ಮತ್ತು ಸಂಶಯಗಳ ಸುಳಿಯಲ್ಲಿ ಸಿಕ್ಕಿಹೋಗಿ ಜೀವನದ ಗೊತ್ತುಗುರಿಗಳನ್ನು ಗುರುತಿಸಿಕೊಳ್ಳಲು ಅಸಮರ್ಥರಾಗಿ, ವ್ಯರ್ಥವಾಗಿ ತೊಳಲಿ ಐಹಿಕವನ್ನೂ ಕಳೆದುಕೊಂಡು ಪಾರಲೌಕಿಕವನ್ನೂ ನೆನೆಯದ ನಮಗೆ ವೇದಗಳ ಅಧ್ಯಯನದಿಂದ ಬಹಳ ಉಪಕಾರವಾಗುತ್ತದೆ. ಜೀವನದ ಆದರ್ಶವನ್ನು ನಮಗೆ ರೂಪಿಸಿಕೊಡುವುದಿದು. ಅನೇಕ ಜನ್ಮಗಳ ಪುಣ್ಯಫಲದಂತಿರುವ ಐಹಿಕವನ್ನು ತೆಗಳದೆ ಅದನ್ನು ನಮಗೂ ನಮ್ಮ ಸುತ್ತಮುತ್ತಲಿನವರಿಗೂ ಒಪ್ಪುವಂತೆ ಹಸನಾಗಿಸಿ, ಹದಗೊಳಿಸಿ, ಇದರ ಅಡಿಮಣೆಯ ಮೇಲೆ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿ ಕೊಳ್ಳುವ ಮಾರ್ಗವನ್ನು ಇದರ ಅಧ್ಯಯನದಿಂದ ನಾವು ಅರಿಯಬಹುದು. ಭಾರತೀಯರ ಆಧ್ಯಾತ್ಮಿಕ ದೃಷ್ಟಿಯ ಮೂಲ ಈ ವೇದಗಳಲ್ಲಿದೆ. ಇದರ ಅಧ್ಯಯನವಾಗದೆ ಆ ದೃಷ್ಟಿಯ ಪರಿಚಯ ನಮಗಾಗದು.

ಇಂದು ವಿಶ್ವದ ಎಲ್ಲ ವಿಶ್ವವಿದ್ಯಾನಿಲಯಗಳೂ ವೇದಗಳ ಅಧ್ಯಯನಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿವೆ. ಇತರರು ವೇದಾಧ್ಯಯನದ ವಿಚಾರದಲ್ಲಿಯೂ, ವೇದಸಂಶೋಧನೆಯಲ್ಲಿಯೂ ಹೆಚ್ಚಾದ ಆಸಕ್ತಿಯನ್ನು ತೋರುತ್ತಿರುವಾಗ ಆ ಪರಂಪರೆಯಲ್ಲಿಯೇ ಬಂದ ನಾವು ಉದಾಸೀನತೆಯನ್ನು ತೋರುವುದು ಯಾವ ಲಕ್ಷಣ ? ನಮ್ಮ ಸಂಪ್ರದಾಯಗಳನ್ನೂ ಐತಿಹ್ಯ ಗಳನ್ನೂ ಅರಿಯಲು ನಮಗಿಂತಲೂ ಅರ್ಹರಾದವರು ಯಾರೂ ಇಲ್ಲ. ಪುಣ್ಯಪುರುಷರಾದ ನಾವು ಪ್ರಾಚೀನ ಋಷಿಗಳ ದರ್ಶನಭಾಗ್ಯವನ್ನು ಈ ವೇದಗಳಲ್ಲಿಯಾದರೂ ನಾವು ಪಡೆದು ಧನ್ಯರಾಗಬೇಕು. ನಮ್ಮ ಪ್ರಾಚೀನ ಸಂಪ್ರದಾಯಗಳ ಗೂಢಾರ್ಥವನ್ನು ಸಮಂಜಸವಾಗಿ

ತಿಳಿದು ಆಧುನಿಕ ವಿಮರ್ಶನಪದ್ಧತಿಯನ್ನೂ ಅಳವಡಿಸಿಕೊಂಡರೆ ಈ ಪವಿತ್ರಗ್ರಂಥಗಳಿಗೆ ನಿಖರವೂ, ನಿರ್ದುಷ್ಟವೂ, ಸರ್ವಸಮ್ಮತವೂ ಆದ ಅರ್ಥವೃತ್ತಿಯನ್ನು ನಾವು ಯೋಜಿಸಲು ಸಮರ್ಥರಾಗಬಹುದು. ಹೀಗೆ ಅನೇಕ ದೃಷ್ಟಿಗಳಿಂದ ವೇದಗಳ ಅಧ್ಯಯನ ನಮಗೆ ಬಹಳ ಹೆಚ್ಚಿನ ಪ್ರಯೋಜನವನ್ನುಂಟುಮಾಡುವುದಾಗಿದೆ.

# ಒಂದನೆಯ ಪ್ರಕರಣ

## ಸಂಹಿತೆಗಳು

### ಋಗ್ವೇದ ಸಂಹಿತೆ

ಬೇರೆಬೇರೆ ಋಷಿಗಳಿಂದ ಬೇರೆಬೇರೆ ಕಾಲದಲ್ಲಿ ದೃಷ್ಟವಾದ ಅನೇಕಾನೇಕ ಸೂಕ್ತಗಳ ಸಮೂಹವೇ ಋಗ್ವೇದಸಂಹಿತೆಯಾಗಿದೆ. ಏಕಕರ್ತೃಕವಾದ ಕೃತಿಯಂತೆ ಇದು ಇಲ್ಲ. ಆದ್ದರಿಂದಲೇ ಕಾಲ ಮತ್ತು ದೇಶಗಳ ಐಕ್ಯವನ್ನಿಲ್ಲಿ ನಾವು ಕಾಣುವುದಕ್ಕಾಗುವುದಿಲ್ಲ. ಇಲ್ಲಿರುವ ಸಹಸ್ರಾರು ಸೂಕ್ತಗಳು ಋಷಿಗಳಿಂದ ದೃಷ್ಟವಾಗಿ ವಾಗ್ವ್ಯವಹಾರದಲ್ಲಿ ಪ್ರಚಾರದಲ್ಲಿದ್ದವು. ಅನೇಕ ಕಾಲದ ನಂತರ ಆ ಸೂಕ್ತಗಳನ್ನೆಲ್ಲಾ ಒಂದುಗೂಡಿಸಿದಾಗ ಸಂಹಿತೆಯು ರೂಪುಗೊಂಡಿತು. ಹೀಗೆ ಇವು ಬೇರೆಬೇರೆ ಕಾಲಕ್ಕೆ ಸೇರಿರುವ ಕಾರಣದಿಂದಲೇ ಇವುಗಳ ಭಾಷೆ, ಶಬ್ದಸಂಪತ್ತು, ಶೈಲಿ, ವ್ಯಾಕರಣ, ಭಾವನೆಗಳಲ್ಲಿ ವ್ಯತ್ಯಾಸಗಳಿವೆ. ಯಾಗಾದಿಗಳಿಗೇ ಮೀಸಲಾದ ಇತರ ವೇದಗಳಂತೆ ಅಲ್ಲದೆ ಇದು ವಿಷಯವೈವಿಧ್ಯದ ಕಾರಣ ಬಹುಮುಖವಾದ ಪ್ರಾಧಾನ್ಯವನ್ನು ಹೊಂದಿದೆ.

### ವಿಭಜನೆಯ ಕ್ರಮ

ಋಗ್ವೇದ ಸಂಹಿತೆ 21 ಶಾಖೆಗಳಲ್ಲಿದ್ದಿತೆಂದು ಪತಂಜಲಿಗಳು ಹೇಳುತ್ತಾರೆ. ಇವುಗಳೆಲ್ಲವೂ ಈಗ ಉಪಲಬ್ಧವಾಗಿಲ್ಲ. ಇವುಗಳಲ್ಲಿ ಶಾಕಲ, ಬಾಷ್ಕಲ, ಆಶ್ವಲಾಯನ, ಶಾಂಖಾಯನ ಮತ್ತು ಮಾಂಡೂಕೇಯ ಶಾಖೆಗಳು ಪ್ರಸಿದ್ಧವಾಗಿವೆ. ಈ ಸಂಹಿತೆಯನ್ನು ಎರಡು ಬಗೆಯಾಗಿ ವಿಭಾಗ ಮಾಡುವ ಕ್ರಮ ಬಹಳ ಹಿಂದಿನಿಂದಲೂ ರೂಢಿಯಲ್ಲಿದೆ. ಇದನ್ನು ಅಷ್ಟಕ, ಅಧ್ಯಾಯ ಮತ್ತು ವರ್ಗಗಳನ್ನಾಗಿ ವಿಭಜಿಸುವುದು ಒಂದು ಕ್ರಮ. ಇಡೀ ಸಂಹಿತೆಯನ್ನು ಎಂಟು ಅಷ್ಟಕಗಳನ್ನಾಗಿಯೂ, ಒಂದೊಂದು ಅಷ್ಟಕವನ್ನೂ ಎಂಟೆಂಟು ಅಧ್ಯಾಯಗಳನ್ನಾಗಿಯೂ, ಒಂದೊಂದು ಅಧ್ಯಾಯವನ್ನೂ ಅನೇಕಾನೇಕ ವರ್ಗಗಳನ್ನಾಗಿಯೂ ವಿಭಾಗ ಮಾಡಿದ್ದಾರೆ. ವರ್ಗವೊಂದೊಂದರಲ್ಲಿಯೂ ಹಲವಾರು ಮಂತ್ರಗಳಿವೆ. ಸುಮಾರು ಐದು ಮಂತ್ರಗಳು ಒಂದೊಂದು ವರ್ಗದಲ್ಲಿಯೂ ಇರುವುವು. ಕೆಲವು ವೇಳೆ ಐದಕ್ಕೆ.

---

1. 'ಏಕ ವಿಂಶತಿಧಾ ಬಾಹ್ವೃಚ್ಯಂ' ಮಹಾಭಾಷ್ಯ-ಪಸ್ಪಶಾಹ್ನೀಕ ; ಆದರೆ ಮಹಾಭಾರತದ ಶಾಂತಿಪರ್ವದ ನಾರಾಯಣೀಯ ಆಖ್ಯಾನದಲ್ಲಿ 'ಏಕ ವಿಂಶತಿ ಸಾಹಸ್ರಂ ಋಗ್ವೇದಂ ಮಾಂ ಪ್ರಚಕ್ಷತೇ' ಎಂದಿದೆ.

ಮೀರಿಯಾಗಲೀ ಅಥವಾ ಕಡಿಮೆಯಾಗಲೀ ಇರುವುದೂ ಉಂಟು.[2] ಈ ಬಗೆಯ ವಿಭಾಗವನ್ನು ಕೆಳಗೆ ಗುರುತಿಸಿದೆ.

| ಅಷ್ಟಕ | ಅಧ್ಯಾಯ | ವರ್ಗ | ಮಂತ್ರ | |
|---|---|---|---|---|
| 1 | 8 | 265 | 1370 | |
| 2 | 8 | 221 | 1147 | |
| 3 | 8 | 225 | 1209 | |
| 4 | 8 | 250 | 1289 | |
| 5 | 8 | 238 | 1263 | |
| 6 | 8 | 331 | 1730 | |
| 7 | 8 | 248 | 1263 | |
| 8 | 8 | 246 | 1281 | |
| ಒಟ್ಟು 8 | 64 | 2024 | 10552 | |

ಈ ಬಗೆಯ ವಿಭಾಗದಿಂದ ಒಂದು ಅನುಕೂಲವುಂಟು. ಋಕ್ಸಂಹಿತೆಯ ಈ 64 ಅಧ್ಯಾಯಗಳು ಸ್ವಲ್ಪ ಹೆಚ್ಚು ಕಡಮೆ ಸಮನಾಗಿವೆಯಾದಕಾರಣ ಅಧ್ಯಯನಾದಿಗಳಿಗೆ ಅನುಕೂಲವಾಗಿವೆ. ವೈದಿಕರಲ್ಲಿ ಇಂದೂ ಹೆಚ್ಚಾಗಿ ಈ ಕ್ರಮ ಪ್ರಚಾರದಲ್ಲಿದೆ.

ಬಹಳ ಹಿಂದಿನಿಂದಲೂ ಋಕ್ಸಂಹಿತೆಯನ್ನು ಮತ್ತೊಂದು ರೀತಿಯಲ್ಲಿಯೂ ವಿಭಜಿಸಿ ಕೊಂಡಿದ್ದಾರೆ. ಇಡೀ ಸಂಹಿತೆಯನ್ನು ಹತ್ತು ಮಂಡಲಗಳನ್ನಾಗಿಯೂ, ಮಂಡಲಗಳನ್ನು ಅನುವಾಕಗಳನ್ನಾಗಿಯೂ ಅನುವಾಕಗಳನ್ನು ಸೂಕ್ತಗಳನ್ನಾಗಿಯೂ ಸೂಕ್ತಗಳನ್ನು ಮಂತ್ರ ಗಳನ್ನಾಗಿಯೂ ವಿಭಜಿಸಲಾಗಿದೆ. ಈ ಬಗೆಯ ಮಂಡಲ-ಅನುವಾಕ-ಸೂಕ್ತಗಳ ವಿಭಾಗವೇ ಹೆಚ್ಚು ಶಾಸ್ತ್ರೀಯವಾದ ಕ್ರಮವಾಗಿದೆ. ಈ ಬಗೆಯ ವಿಭಜನಾಕ್ರಮವನ್ನು ಮುಂದೆ ತೋರಿಸಿದೆ.

---

2\. 

| | | | |
|---|---|---|---|
| 1207 | ವರ್ಗಗಳು | 5 | ಮಂತ್ರಗಳುಳ್ಳವು |
| 346 | " | 6 | " |
| 119 | " | 8 | " |
| 59 | " | 8 | " |
| 1 | " | 1 | " |
| 2 | " | 2 | " |
| 97 | " | 3 | " |
| 174 | " | 4 | " |

| ಮಂಡಲ | ಅನುವಾಕ | ಸೂಕ್ತ | ಮಂತ್ರ |
|---|---|---|---|
| 1 | 24 | 191 | 2006 |
| 2 | 4 | 43 | 429 |
| 3 | 5 | 62 | 617 |
| 4 | 5 | 58 | 589 |
| 5 | 6 | 87 | 727 |
| 6 | 6 | 75 | 765 |
| 7 | 6 | 104 | 841 |
| 8 | 10 | 103 | 1716 |
| | | (92+11 ವಾಲಖಿಲ್ಯ) | |
| 9 | 7 | 114 | 1108 |
| 10 | 12 | 191 | 1754 |
| ಒಟ್ಟು 10 | 85 | 1028 | 10552 ಮಂತ್ರಗಳು |

ಈ ವಿಭಾಗಕ್ರಮವೇ ಪ್ರಾಯಃ ಎಲ್ಲ ಸಂಶೋಧಕರಿಂದಲೂ ಅನುಸರಿಸಲ್ಪಡುತ್ತಿದೆ.

**ಸಂಹಿತೆಯ ಸಂಕಲನ**

ಋಗ್ವೇದ ಸಂಹಿತೆಯ ಸಂಕಲನ ಯಾರಿಂದ ಯಾವಾಗ ಆಯಿತೆಂಬುದು ಚರ್ಚಾಸ್ಪದವಾದ ವಿಚಾರವಾಗಿದೆ. ಪರಾಶರಪುತ್ರರಾದ ಕೃಷ್ಣದ್ವೈಪಾಯನರು ವೇದಗಳನ್ನು ವಿಭಾಗಮಾಡಿ ಬೇರೆ ಬೇರೆ ಸಂಹಿತೆಗಳನ್ನಾಗಿ, ಬ್ರಾಹ್ಮಣಗಳನ್ನಾಗಿ, ಆರಣ್ಯಕೋಪನಿಷತ್ತುಗಳನ್ನಾಗಿ ವಿಭಜಿಸಿದ ರೆಂದು ಸಂಪ್ರದಾಯಕ್ಕನುಗುಣವಾದ ಪ್ರಸಿದ್ಧಿ ಇದೆ. 'ವೇದಾನ್ ವಿವ್ಯಾಸ ಯಸ್ಮಾತ್ಸಃ ವೇದವ್ಯಾಸ ಇತೀರಿತಃ' ಎಂಬ ಮಹಾಭಾರತದ ನುಡಿ ಅವರಿಗೆ ವೇದವ್ಯಾಸರೆಂಬ ಹೆಸರು ಬರಲು ಕಾರಣವನ್ನು ಹೀಗೆ ಸೂಚಿಸುತ್ತದೆ. ಈ ಕೃಷ್ಣದ್ವೈಪಾಯನವ್ಯಾಸರೂ, ವೇದಾಂತ ಸೂತ್ರಕಾರರಾದ ಬಾದರಾಯಣವ್ಯಾಸರೂ, ಒಬ್ಬರೇ ಅಥವಾ ಭಿನ್ನಭಿನ್ನ ವ್ಯಕ್ತಿಗಳೇ ಎಂಬ ವಿಚಾರದಲ್ಲಿ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಇವರಿಬ್ಬರೂ ಒಬ್ಬರೇ ಎಂಬುವುದು ಪ್ರಾಚೀನರ ಮತ.[3] ವೇದಸೂಕ್ತಗಳನ್ನೆಲ್ಲಾ ಕ್ರೋಢೀಕರಿಸಿ, ವಿಭಾಗವಮಾಡಿ ಸಂಹಿತೆಗಳನ್ನಾಗಿ

3. 'ಸಹೋವಾಚ ವ್ಯಾಸಃ ಪಾರಾಶರ್ಯಃ' ಇತಿಶ್ರುತಿಪ್ರಸಿದ್ಧೇಃ ತಸ್ಯೈವ ಬಾದರಾಯಣಸಂಜ್ಞತ್ವಂ ವಿವಕ್ಷಿತಂ. ಯಥೋಕ್ತಂ ಮಹರ್ಷಿಣೈವ—

'ದ್ವೀಪೇ ಬದರಿಕಾಮಿಶ್ರೇ ಬಾದರಾಯಣಮಚ್ಯುತಮ್ ।
ಪರಾಶರಾತ್ಸತ್ಯವತೀ ಪುತ್ರಂ ಲೇಭೇ ಪರಂತಪಂ ॥' ಇತಿ ; ಯದ್ಯಪಿ

ಋಷ್ಯಂತರೇಽಪಿ ಬಾದರಾಯಣಶಬ್ದಪ್ರಯೋಗಃ ತಥಾಪಿ ಸೂತ್ರಕೃದ್ವಿಷಯೇ ಬಾದರಾಯಣಶಬ್ದಃ ಪಾರಾಶರ್ಯಗೋಚರ ಏವ, ತಥಾ ಚ ಸ್ಕಾಂದೇ ವ್ಯಕ್ತಮುಕ್ತಂ ।"—ಶ್ರುತ ಪ್ರಕಾಶಿಕಾ.

ರೂಪುಗೊಳಿಸಿದವರು ಕೃಷ್ಣದ್ವೈಪಾಯನ ವ್ಯಾಸರು ಎಂದು ಹೇಳುವುದರಲ್ಲಿ ಯಾವ ಬಾಧಕವೂ ಇಲ್ಲ. ಚತುರ್ವೇದ ಸಂಹಿತೆಗಳನ್ನೂ ಏಕಕಾಲದಲ್ಲಿ ಕೂಡಿಸಿದರೇ ಅಥವಾ ಬೇರೆಬೇರೆ ಕಾಲಗಳಲ್ಲಿ ಕೂಡಿಸಿದರೇ ಎಂಬುದೂ ಜಟಿಲವಾದ ಪ್ರಶ್ನೆಯೇ ಆಗಿದೆ. ಬ್ರಾಹ್ಮಣಗ್ರಂಥಗಳನ್ನೂ ಆರಣ್ಯ ಕೋಪನಿಷತ್ತುಗಳನ್ನೂ ಸಂಹಿತೆಗಳೊಡನೆಯೇ ಪೃಥಕ್ಕರಿಸಲಾಯಿತೇ ಅಥವಾ ಇವು ಮುಂದಿನ ಕಾಲದಲ್ಲಿ ಕೂಡಿಸಲಾದವೇ ಎಂಬುದು ಇನ್ನೊಂದು ಸಮಸ್ಯೆಯಾಗಿದೆ. ಬ್ರಾಹ್ಮಣಗ್ರಂಥಗಳು ಸಂಹಿತೆಗಳನ್ನು ಪವಿತ್ರವೆಂದೂ, ದೃಷ್ಟವಾದವೆಂದೂ ಹೇಳುವ ಕಾರಣ ಇವು ಸಂಹಿತೆಗಳಿಗಿಂತ ಉತ್ತರಕಾಲೀನವಾಗಿರಲೇಬೇಕು. ಅರ್ಥಾತ್ ಬ್ರಾಹ್ಮಣಗ್ರಂಥಗಳಿಗಿಂತ ಬಹಳ ಹಿಂದೆಯೇ ಸಂಹಿತೆಗಳ ಸಂಕಲನವಾಗಿರಬೇಕೆಂದು ಒಪ್ಪಬೇಕಾಗುತ್ತದೆ. ಬ್ರಾಹ್ಮಣ ಗ್ರಂಥಗಳಲ್ಲಿ ನಾಲ್ಕು ವೇದಗಳ ಸಂಹಿತೆಗಳನ್ನೂ ಉಲ್ಲೇಖಿಸಿದೆ. ಆದುದರಿಂದ ಇವು ಸಂಹಿತೆಗಳ ಜೊತೆಗೇ ಕೂಡಿಸಲ್ಪಟ್ಟವೆಂದು ಹೇಳುವುದಕ್ಕಾಗುವುದಿಲ್ಲ. ಬ್ರಾಹ್ಮಣಗ್ರಂಥಗಳು ಸಂಹಿತೆಗಳ ಸಂಕಲನವಾದಮೇಲೆ ಅನೇಕ ಕಾಲದ ನಂತರ ರೂಪುಗೊಂಡಿರಬೇಕು. ಒಂದೊಂದು ವೇದ ದಲ್ಲಿಯೂ ಉದ್ಭವಿಸಿರುವ ಅನೇಕಾನೇಕ ಶಾಖೆಗಳನ್ನು ಗಮನಿಸಿದರೆ ಈ ಸಂಹಿತೆಗಳೆಲ್ಲಾ ಆಯಾ ರೂಪಗಳನ್ನು ಎಷ್ಟು ಸಹಸ್ರವರ್ಷಗಳ ಹಿಂದೆಯೇ ಪಡೆದಿರಬಹುದೆಂಬ ಅಂಶ ಗೊತ್ತಾಗುತ್ತದೆ. ಋಕ್ಸಂಹಿತೆಯ ಕಾಲಕ್ಕೂ ಹಿಂದೆಯೇ ಆರ್ಯರು ಯಾಗಾದಿಗಳನ್ನು ಆಚರಿಸುತ್ತಿದ್ದರೆಂದೂ ಅದಕ್ಕನುಗುಣವಾಗಿ ಮಂತ್ರಗಳನ್ನು ಬಳಸುತ್ತಿದ್ದರೆಂದೂ ವಿದ್ವಾಂಸರು ಹೇಳುತ್ತಾರೆ. ಹೋತೃ, ಅಧ್ವರ್ಯು, ಉದ್ಗಾತೃ ಮುಂತಾದವರು ಬಳಸುತ್ತಿದ್ದ ಮಂತ್ರಗಳು ಆಯಾ ಪರಂಪರೆಯಿಂದ ಹಾಗೆಯೇ ಮುಖಸ್ಥವಾಗಿಯೇ ಬೆಳೆದುಬಂದು ಅನೇಕ ಕಾಲದ ನಂತರ ಆಯಾ ಸಂಹಿತೆಗಳಾಗಿ ರೂಪುಗೊಂಡವು. ವಿಷ್ಣು ಪುರಾಣದಲ್ಲಿ ವ್ಯಾಸರು ನಾಲ್ಕು ವೇದಗಳನ್ನು ಪೈಲ, ವೈಶಂಪಾಯನ, ಜೈಮಿನಿ ಸುಮಂತುಗಳೆಂಬ ನಾಲ್ವರು ಶಿಷ್ಯರುಗಳಿಗೆ ಉಪದೇಶಿಸಿದರೆಂದು ಹೇಳಿದೆ.[4] ಹೀಗೆ ನಮ್ಮ ಪ್ರಾಚೀನರ ಅಭಿಪ್ರಾಯದಲ್ಲಿ ವೇದಸಂಹಿತೆ ಗಳನ್ನು ಕೂಡಿಸಿದವರು ಕೃಷ್ಣದ್ವೈಪಾಯನವ್ಯಾಸರು. ಇವರಿಗೇ ಬಾದರಾಯಣವ್ಯಾಸರೆಂಬ ಹೆಸರಿದ್ದಿತು. ಆದರೆ ಆಧುನಿಕ ವಿಮರ್ಶಕರಲ್ಲಿ ಈ ಬಗೆಗೆ ಒಮ್ಮತವಿಲ್ಲ. ವೇದವ್ಯಾಸರು ಸಂಹಿತೆಗಳನ್ನು ಕೂಡಿಸಿದರೆಂಬುದನ್ನೂ ಅನೇಕರು ಒಪ್ಪುವುದಿಲ್ಲ. ವೇದವ್ಯಾಸರು ಸಂಹಿತೆಗಳನ್ನು ಕೂಡಿಸಿದರೆಂದು ಕೆಲವರು ಅಂಗೀಕರಿಸಿದರೂ ಇವರೂ ವೇದಾಂತ ಸೂತ್ರಕಾರರಾದ ಬಾದಾರಾಯಣವ್ಯಾಸರೂ ಬೇರೆಬೇರೆಯವರೆಂದು ಅಭಿಪ್ರಾಯಪಡುತ್ತಾರೆ.[5] ಋಗ್ಯಜುಸ್ಸಾಮ ವೇದಗಳನ್ನು ಕೃಷ್ಣದ್ವೈಪಾಯನರು ಕೂಡಿಸಿದರೆಂದೂ ಅಥರ್ವವೇದ ಸಂಹಿತೆ ಮುಂದಿನ ಕಾಲದಲ್ಲಿ ಮತ್ತೆ ಯಾರಿಂದಲೋ ಸಂಗ್ರಹ ಮಾಡಲ್ಪಟ್ಟಿತೆಂದೂ ಶ್ರೀ ಸಿ. ವಿ. ವೈದ್ಯರು ಅಭಿಪ್ರಾಯಪಡುತ್ತಾರೆ.[6] " ವೇದವ್ಯಾಸರು ಭಾರತ ಯುದ್ಧದ ಕಾಲದವರು. ಈ ಮಹಾಭಾರತ ಯುದ್ಧ ಕ್ರಿ. ಪೂ. 3102 ರಲ್ಲಿ ನಡೆಯಿತು. ಶತಪಥ ಬ್ರಾಹ್ಮಣದಲ್ಲಿ ಋಗ್ವೇದದ ವರ್ಣನೆ ಇರುವುದರಿಂದಲೂ, ಸಹದೇವಪುತ್ರ ಸೋಮಕ ಮತ್ತು ದೇವಾಪಿಗಳ ವರ್ಣನೆ ಋಗ್ವೇದ ದಲ್ಲಿರುವುದರಿಂದಲೂ ಶತಪಥಬ್ರಾಹ್ಮಣ ಕ್ರಿ. ಪೂ. 3000ಕ್ಕೂ ಹಿಂದಿನದೆಂದು

4. ವಿ. ಪು. 3-4-8, 9

5. *History of Vedic Literature*– *C. V. Vaidya*, p. 46

6. *Ibid*, p. 52

ಶ್ರೀ ಎಸ್. ಬಿ. ದೀಕ್ಷಿತ್‌ರವರು ಸಿದ್ಧಾಂತಿಸಿರುವುದರಿಂದಲೂ ಭಾರತ ಯುದ್ಧದ ಸಮಕಾಲೀನರಾದ ಕೃಷ್ಣದ್ವೈಪಾಯನವ್ಯಾಸರು ಸಂಹಿತೆಗಳನ್ನು ಕೂಡಿಸಿದರೆಂದೂ, ಈ ಕಾಲ ಸುಮಾರು ಕ್ರಿ. ಪೂ. 3100 ಇರಬೇಕೆಂದೂ" ಶ್ರೀ ಸಿ. ವಿ. ವೈದ್ಯರು ಅಭಿಪ್ರಾಯಪಡುತ್ತಾರೆ.[7]

## ಪಾಶ್ಚಾತ್ಯರ ಮತ

ಪಾಶ್ಚಾತ್ಯ ವಿಮರ್ಶಕರು ಋಗ್ವೇದ ಸಂಹಿತೆಯನ್ನು ಅನೇಕ ಘಟ್ಟಗಳಲ್ಲಿ ಕೂಡಿಸಲಾಗಿದೆ ಯೆಂದು ಹೇಳುತ್ತಾರೆ. ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ಭಾಗಗಳು ಕೂಡಿಸಲ್ಪಟ್ಟು ಒಟ್ಟು ಸಂಹಿತೆಯು ಇಂದಿನ ರೂಪವನ್ನು ಹೊಂದಿತೆಂಬುದು ಇವರ ಅಭಿಪ್ರಾಯ. ಎರಡನೆಯ ಮಂಡಲದಿಂದ ಏಳನೆಯ ಮಂಡಲ ಪೂರ್ತಿಯಾಗಿ ಮೊಟ್ಟಮೊದಲು ಸಂಗ್ರಹಿಸಲ್ಪಟ್ಟಿತೆಂದೂ ಈ ಮಂಡಲಗಳು ಅತಿ ಪ್ರಾಚೀನವಾದವೆಂದೂ ಇವರ ಮತ. ಇದಾದನಂತರ ಎಂಟು ಮತ್ತು ಒಂಭತ್ತನೆಯ ಮಂಡಲಗಳನ್ನು ಕೂಡಿಸಿದರೆಂದೂ, ತದನಂತರ ಒಂದನೆಯ ಮಂಡಲವನ್ನು ಸಂಗ್ರಹಿಸಿ ಕಟ್ಟಕಡೆಗೆ ಹತ್ತನೆಯ ಮಂಡಲವನ್ನು ಕೂಡಿಸಿ ಸೇರಿಸಿದರೆಂಬುದೂ ಇವರ ಅಭಿಪ್ರಾಯ. ಈ ವಿಧವಾದ ನಿರ್ಣಯವನ್ನು ಮುಟ್ಟಲು ಆಯಾ ಮಂಡಲಗಳ ವೈಶಿಷ್ಟ್ಯ, ವಿಷಯ, ಭಾಷೆ, ಪದಪ್ರಯೋಗ ಮೊದಲಾದವುಗಳು ಆಧಾರವಾಗಿವೆ. ಎರಡನೆಯ ಮಂಡಲದಿಂದ ಏಳನೆಯ ಮಂಡಲ ಪೂರ್ತಿಯಾಗಿ ವಂಶೀಯ ಮಂಡಲಗಳೆಂದು ಪ್ರಸಿದ್ಧ ವಾಗಿವೆ. ಈ ಒಂದೊಂದು ಮಂಡಲವೂ ಒಬ್ಬೊಬ್ಬ ಋಷಿಗೆ ಸೇರಿದೆ. ಇದರ ಭಾಷೆ ಉಳಿದ ಭಾಗಗಳ ಭಾಷೆಗಿಂತ ಪ್ರಾಚೀನತರವಾಗಿ ವಿವಿಧಪ್ರಯೋಗಗಳನ್ನು ಹೊಂದಿದೆ. ಎಂಟನೆಯ ಮಂಡಲ ಭಿನ್ನಭಿನ್ನ ಋಷಿಗಳಿಂದ ದೃಷ್ಟವಾದ ಸೂಕ್ತಗಳನ್ನು ಹೆಚ್ಚಾಗಿ ಹೊಂದಿದೆ. ಈ ಮಂಡಲ ಉಳಿದ ವಂಶೀಯ ಮಂಡಲಗಳಿಗಿಂತ ಭಿನ್ನವಾಗಿ ಬೇರೆ ಕಾಲದಲ್ಲಿ ಸೇರಿಸಲ್ಪಟ್ಟಿರ ಬೇಕು. ಒಂಭತ್ತನೆಯ ಮಂಡಲದ ಸೂಕ್ತಗಳೆಲ್ಲ ಸೋಮಪವಮಾನದೇವತಾಕವಾದವು. ಆದ್ದರಿಂದ ಉಳಿದ ಮಂಡಲಗಳೆಲ್ಲದರಿಂದ ಸೋಮದೇವತಾಕವಾದ ಸೂಕ್ತಗಳನ್ನು ಪೃಥಕ್ಕರಿಸಿ ಇಲ್ಲಿ ಸಂಗ್ರಹಿಸಿರಬೇಕೆಂಬ ಊಹೆಗೆ ಅವಕಾಶವಿದೆ. ಆ ಕಾರಣದಿಂದ ಈ ಮಂಡಲವು ಪಶ್ಚಾತ್ಕಾಲ ಸಂಯೋಜಿತವಾದುದೆಂದು ಹೇಳಲಾಗಿದೆ.

ಇದೇ ರೀತಿಯಲ್ಲಿ ಪರೀಕ್ಷಿಸಿದರೆ ಮೊದಲ ಮಂಡಲವನ್ನು ಒಂಬತ್ತನೆಯ ಮಂಡಲದ ಸಂಗ್ರಹವಾದಮೇಲೆ ಕೂಡಿಸಿರುವುದು ಗೊತ್ತಾಗುತ್ತದೆ. ಹತ್ತನೆಯ ಮಂಡಲದಲ್ಲಿ ಬರುವ ವಿಚಾರಗಳು ಉಳಿದ ವಿಚಾರಗಳಿಗಿಂತ ಭಿನ್ನವಾಗಿ ವಿಲಕ್ಷಣವಾಗಿವೆ. ಇದರ ಭಾಷೆಯೂ ಬೇರೆಬೇರೆಯಾಗಿ ಅರ್ವಾಚೀನವಾಗಿದೆ. ಇದು ಇತರ ಮಂಡಲಗಳ ನಂತರ ಕೊನೆಯಲ್ಲಿ ಸಂಯೋಜಿಸಲ್ಪಟ್ಟಿರಬೇಕು. ಹೀಗೆ ಪಾಶ್ಚಾತ್ಯ ವಿಮರ್ಶಕರ ವಿಚಾರ ವಿವೇಚನೆ ಮುಂದುವರಿ ದಿದೆ. ಈ ವಿಧವಾದ ಊಹೆಗೆ ಋಗ್ವೇದದ ಅಂತರಂಗಪ್ರಮಾಣವೇ ಆಧಾರವಾಗಿದೆ. ಪ್ರಾಯಃ ಎಲ್ಲ ಆಧುನಿಕ ವಿಮರ್ಶಕರೂ ಈ ರೀತಿಯಾಗಿ ಋಗ್ವೇದಸಂಹಿತೆ ಹಲವಾರು ಹಂತಗಳಲ್ಲಿ ಭಿನ್ನಭಿನ್ನ ಕಾಲಗಳಲ್ಲಿ ಸಂಯೋಜಿಸಲ್ಪಟ್ಟಿತೆಂಬ ನಿರ್ಧಾರಕ್ಕೆ ಬಂದಿದ್ದಾರೆ.[8]

---

7. *Ibid*, p. 46, 47

8. ಶ್ರೀ ಸಿ. ವಿ. ವೈದ್ಯರು ಈ ವಾದವನ್ನು ಖಂಡಿಸಿ ಋಗ್ವೇದಸಂಹಿತೆ ಸಮಗ್ರವಾಗಿ ಒಮ್ಮೆಯೇ ಸಂಯೋಜಿಸಲ್ಪಟ್ಟಿತೆಂಬ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ.

*History of Sanskrit Literature–C. V. Vaidya*, p. 47

**ಸಂಹಿತಾರೂಪ ವೈಯ್ಯಾಕರಣರ ಕೈವಾಡವಲ್ಲ**

ಕೆಲವು ಪಾಶ್ಚಾತ್ಯ ವಿದ್ವಾಂಸರು ಋಕ್ಸಂಹಿತೆ ಈಗಿರುವ ರೂಪಕ್ಕಿಂತಲೂ ಬೇರೆಯಾದ ಮೂಲರೂಪದಲ್ಲಿದ್ದಿತೆಂದೂ ಸಂಹಿತಾಕಾರರು ವ್ಯಾಕರಣ ನಿಯಮಕ್ಕನುಸಾರವಾಗಿ ಸಂಹಿತೆಯನ್ನು ಕೂಡಿಸಿದರೆಂದೂ ಅಭಿಪ್ರಾಯಪಡುತ್ತಾರೆ.[9] ವೈಯ್ಯಾಕರಣರ ಪರಿಶ್ರಮದ ಫಲವೇ ಸಂಹಿತಾಪಾಠವೆಂದು ಇವರ ಅಭಿಪ್ರಾಯ. ಈ ವಿದ್ವಾಂಸರು 'ಸಂಹಿತೆ' ಎಂಬ ಪದದ ಅರ್ಥಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟು ಈ ವಿಧವಾದ ಊಹೆ ಮಾಡಿದ್ದಾರೆಂದು ತೋರುತ್ತದೆ. ಅಂತೂ ಈ ವಾದ ಸಾಧುವಾದುದಲ್ಲವೆಂದು ಹೇಳಬೇಕಾಗಿದೆ. ವೇದಋಷಿಗಳಿಗೆ ಸಂಧಿನಿಯಮಗಳು ಗೊತ್ತಿಲ್ಲವೆಂದು ಹೇಳುವುದಕ್ಕಾಗದು, 'ಹಿ ಅಗ್ನೇ' ಎಂದು ಋಷಿ ಹೇಳಿದುದನ್ನೇ ಸಂಹಿತಾಕಾರರು 'ಹ್ಯಗ್ನೇ' ಎಂದು ಜೋಡಿಸಿದರೆಂದು ಹೇಳುವುದು ಯುಕ್ತವಾಗದು. ಏಕೆಂದರೆ ಛಂದಸ್ಸಿಗೆ ಹೊಂದಿಕೊಳ್ಳುವ ಕಡೆ ಋಷಿಗಳು ಅನೇಕ ಮಂತ್ರಗಳಲ್ಲಿ ಸಂಧಿಕಾರ್ಯಗಳನ್ನು ಮಾಡಿಯೇ ಇದ್ದಾರೆ. 'ಪುರುಷ ಏವೇದಂ ಸರ್ವಂ', 'ಪಶೂನ್ ತಾಂಶ್ಚಕ್ರೇ', 'ಚಕ್ಷೋಸ್ಸೂರ್ಯೋ ಅಜಾಯತ' ಮೊದಲಾದ ಸಂದರ್ಭಗಳಲ್ಲಿ ಈ ಅಂಶವನ್ನು ಕಾಣಬಹುದು. ಆದ್ದರಿಂದ ಸಂಹಿತಾಪಾಠ ಋಷಿಗಳು ಹೇಳಿದಂತೆ ಇದೆಯೇ ವಿನಾ ವೈಯ್ಯಾಕರಣರ ಕೈವಾಡವಲ್ಲ. ಹೀಗಿಲ್ಲದಿದ್ದರೆ ಅನೇಕ ಕಡೆ ಈಗಲೂ ಸಂಧಿಕಾರ್ಯವನ್ನೇಕೆ ನೆರವೇರಿಸಲಿಲ್ಲವೆಂಬ ಪ್ರಶ್ನೆಗೆ ಉತ್ತರ ದೊರೆಯದು. 'ಋಷೀಂಸ್ತಪಸ್ವತೋ' ಎನ್ನುವ ಬದಲು 'ಋಷೀನ್ ತಪಸ್ವತೋ' ಎಂದೇ ಏಕೆ ಪಾಠವನ್ನು ಉಳಿಸಿಕೊಂಡಿದ್ದಾರೆ ? ಕೆಲವು ಕಡೆ ಸಂಧಿಕಾರ್ಯ ನಡೆಸಿ ಮತ್ತೆ ಕೆಲವು ಕಡೆ ಬಿಟ್ಟರೆಂದು ಹೇಳುವುದೂ ಸಾಧ್ಯವಿಲ್ಲ. 'ಹ್ಯಗ್ನೇ' ಎಂಬಲ್ಲಿ ಛಂದಸ್ಸಿನ ಮಾತ್ರೆಯೊಂದು ಕಡಮೆಯಾಗುವುದರಿಂದ ಉಚ್ಚರಿಸುವಾಗ 'ಹಿಯಗ್ನೇ' ಎಂದು ಹೇಳುತ್ತಿದ್ದರು. ಕಾತ್ಯಾಯನರು ಸರ್ವಾನುಕ್ರಮಣಿಯಲ್ಲಿ, 'ಪಾದಪೂರಣಾರ್ಥಂ ತು ಕ್ಷೈಪ್ರಸಂಯೋಗೈಕಾಕ್ಷರೀಭಾವಂ ವ್ಯೂಹೇತ್', ಎಂದು ಈ ಅಂಶವನ್ನು ವಿವೇಚಿಸಿದ್ದಾರೆ. ಸುಕರವಾಗಿ ಉಚ್ಚರಿಸುವುದಕ್ಕಾಗಿ ಸಂಧಿ ವೈಕಲ್ಪಿಕವಾಗಿದ್ದಿತೆಂದು ಇದರಿಂದ ಗೊತ್ತಾಗುತ್ತದೆ. ಆದಕಾರಣ ಋಕ್‌ಸಂಹಿತೆ ಇಂದು ಇರುವಂತೆಯೇ ಮೊದಲು ಇದ್ದಿತೆಂದೂ ವೈಯ್ಯಾಕರಣರ ಕೈವಾಡದ ಪರಿಣಾಮ ಸಂಹಿತೆಯ ರೂಪವಾಗಿಲ್ಲವೆಂದೂ ಹೇಳಬಹುದು.

**ಸಂಹಿತೆಯ ಸಂಯೋಜನಾ ಕ್ರಮ**

ಋಗ್ವೇದ ಸಂಹಿತೆಯ ಹತ್ತು ಮಂಡಲಗಳನ್ನು ಬೃಹದ್ದೇವತೆಯಲ್ಲಿ ಮೂರು ಬಗೆಯಾಗಿ ವಿಂಗಡಿಸಿದ್ದಾರೆ.

ಪ್ರಥಮೇ ಮಂಡಲೇ ಜ್ಞೇಯಾಃ ಋಷಯಸ್ತು ಶತರ್ಚಿನಃ |
ಕ್ಷುದ್ರಸೂಕ್ತಮಹಾಸೂಕ್ತಾ ಅನ್ಯೇ ಮಧ್ಯೇಷು ಮಧ್ಯಮಾಃ || (ಬೃ. 3-116)

ಇದನ್ನೇ ಆಶ್ವಲಾಯನ ಗೃಹ್ಯಸೂತ್ರದಲ್ಲಿ 'ಅಥ ಋಷಯಃ ಶತರ್ಚಿನೋ ಮಧ್ಯಮಾಗೃತ್ಸಮದೋ ವಿಶ್ವಾಮಿತ್ರೋ ವಾಮದೇವೋऽತ್ರಿರ್ಭರದ್ವಾಜಾ ವಸಿಷ್ಠಃ ಪ್ರಗಾಥಾಃ ಪಾವಮಾನ್ಯಾಃ ಕ್ಷುದ್ರಸೂಕ್ತಾ ಮಹಾಸೂಕ್ತಾ ಇತಿ' (3-4) ಎಂದು ನಿರೂಪಿಸಿದ್ದಾರೆ.

ಈ ಹತ್ತುಮಂಡಲಗಳಲ್ಲಿ ಎರಡನೆಯ ಮಂಡಲದಿಂದ ಏಳನೆಯ ಮಂಡಲ

9. *History of Sanskrit Literature, Macdonell*, p. 47

ಪೂರ್ತಿಯಾಗಿ ವಂಶೀಯ ಮಂಡಲಗಳು. ಒಂದೇ ವಂಶದ ಋಷಿಗಳಿಂದ ದೃಷ್ಟವಾದ ಮಂತ್ರಗಳು ಈ ಮಂಡಲಗಳಲ್ಲಿ ಸಂಯೋಜಿಸಲ್ಪಟ್ಟಿವೆ. ಈ ಮಂಡಲಗಳ ಋಷಿಗಳು ಹೀಗಿದ್ದಾರೆ :

| | | |
|---|---|---|
| ಎರಡನೆಯ ಮಂಡಲ | ಗೃತ್ಸಮದ ಋಷಿಯ ವಂಶದವರದು | |
| ಮೂರನೆಯ " | ವಿಶ್ವಾಮಿತ್ರ | " |
| ನಾಲ್ಕನೆಯ " | ವಾಮದೇವ | " |
| ಐದನೆಯ " | ಅತ್ರಿ | " |
| ಆರನೆಯ " | ಭರದ್ವಾಜ | " |
| ಏಳನೆಯ " | ವಸಿಷ್ಠ | " |

ಈ ಆರು ಋಷಿಗಳಿಗೂ ಮಧ್ಯಮಾಃ ಎಂಬ ಅಭಿಧಾನವಿದೆ. ಆಯಾ ಮಂಡಲವನ್ನು ಋಷಿಯ ಹೆಸರಿನಿಂದಲೇ ವಿಶ್ವಾಮಿತ್ರಮಂಡಲ, ವಸಿಷ್ಠಮಂಡಲ, ಅತ್ರಿಮಂಡಲ ಎಂಬುದಾಗಿ ಕರೆಯುವುದುಂಟು. ಈ ಮಂಡಲಗಳಿಗೆ ಆನುವಂಶೀಯ ಮಂಡಲಗಳೆಂದು ಹೆಸರು. ಬ್ರಾಹ್ಮಣ ಗ್ರಂಥಗಳೂ ಅನುಕ್ರಮಣಿಕೆಗಳೂ ಇವುಗಳ ವೈಶಿಷ್ಟ್ಯವನ್ನು ಅಂಗೀಕರಿಸಿವೆ. ಈ ಮಂಡಲಗಳಲ್ಲಿ ಪ್ರಾಯಃ ಮೊದಲು ಅಗ್ನಿಸೂಕ್ತಗಳೂ ಅನಂತರ ಇಂದ್ರಸೂಕ್ತಗಳೂ ಇವೆ.

ಮೊದಲನೆಯ ಮಂಡಲದ ಋಷಿಗಳನ್ನು 'ಶತರ್ಚಿನಃ' ಎಂದು ಕರೆದಿರುವುದಕ್ಕೆ ಪ್ರಾಯಃ ಈ ಮಂಡಲದ ಮೊದಲನೆಯ ಋಷಿ 'ಮಧುಚ್ಛಂದಸ್ಸಿ'ಗೆ 102 ಋಕ್ಕುಗಳಿರುವುದೂ ಮಧುಚ್ಛಂದಸ್ಸಿನ ಸಹಯೋಗ ಇತರರಿಗೆ ಇರುವುದೂ ಕಾರಣವಿರಬೇಕೆಂದು ಷಡ್ಗುರುಶಿಷ್ಯರು ಹೇಳುತ್ತಾರೆ. ವಂಶೀಯಮಂಡಲಗಳಲ್ಲಿರುವ ಕ್ರಮ ಪ್ರಥಮ ಮಂಡಲದಲ್ಲಿಲ್ಲ. ಈ ಮಂಡಲದಲ್ಲಿನ ಸೂಕ್ತಗಳು 14 ಗುಂಪುಗಳಲ್ಲಿವೆ. ಒಂದೊಂದು ಗುಂಪೂ ಒಬ್ಬೊಬ್ಬರು ಋಷಿಗಳಿಗೆ ಸೇರಿದೆ. ದೇವತೆಗಳಿಗನುಸಾರವಾಗಿಯೂ ಈ ಮಂಡಲದಲ್ಲಿ ಸೂಕ್ತಗಳನ್ನು ಜೋಡಿಸಲಾಗಿದೆ. ಇವುಗಳಲ್ಲಿ 11 ಸೂಕ್ತಗಳಿರುವ ಮೊದಲನೆಯ ಗಣ ವೈಶ್ವಾಮಿತ್ರ ಮಧುಚ್ಛಂದಸ್ಸಿಗೆ ಸೇರಿದೆ. ಇದರಲ್ಲಿ ಮೊದಲ ಸೂಕ್ತ ಅಗ್ನಿಗೂ ಎರಡನೆಯ ಸೂಕ್ತ ವಾಯುವಿಗೂ ಮೂರನೆಯದು ಅಶ್ವಿನ್ ಮತ್ತು ಇಂದ್ರನಿಗೂ ಉಳಿದವು ಇಂದ್ರನಿಗೂ ಸಂಬಂಧಿಸಿವೆ.

ಎಂಟನೆಯ ಮಂಡಲದ ಋಷಿಗಳನ್ನು 'ಪ್ರಗಾಥ'ರೆಂದು ಆಶ್ವಲಾಯನರು ಕರೆದಿರುವುದಕ್ಕೆ ಈ ಮಂಡಲದ ಪ್ರಥಮಸೂಕ್ತ ಪ್ರಗಾಥನಿಗೆ ಸೇರಿರುವುದೇ ಕಾರಣವಾಗಿರಬೇಕು. ಈ ಮಂಡಲದ 103 ಸೂಕ್ತಗಳಲ್ಲಿ ವಾಲಖಿಲ್ಯಸೂಕ್ತಗಳೂ ಸೇರಿ 61 ಸೂಕ್ತಗಳು ಕಾಣ್ವರಿಂದಲೇ ದೃಷ್ಟವಾದವು. ಮೊದಲ ಸೂಕ್ತದ ಪ್ರಗಾಥನೂ ಕಾಣ್ವನೇ ಇರಬೇಕೆಂದು ತಿಳಿಯುತ್ತದೆ. ಬಹುಸಂಖ್ಯೆಯ ಸೂಕ್ತಗಳು ಕಾಣ್ವವಂಶದವರಾದ ಕಾರಣ ಈ ಮಂಡಲವನ್ನು ಕಾಣ್ವವಂಶೀಯ ಮಂಡಲವೆಂದೂ ಕರೆಯಬಹುದು. ಈ ಮಂಡಲದ ಉಳಿದ ಸೂಕ್ತಗಳಲ್ಲಿ ಅಂಗಿರಸ್ ವಂಶದವರು ಹೆಚ್ಚು ಸೂಕ್ತಗಳನ್ನು ಹೊಂದಿದ್ದಾರೆ.

ಒಂಭತ್ತನೇ ಮಂಡಲದ ಋಷಿಗಳನ್ನು 'ಪಾವಮಾನ್ಯಾಃ' ಎಂದಿದ್ದಾರೆ. ಇತರ ಮಂಡಲಗಳಲ್ಲಿ ಅನೇಕಾನೇಕ ದೇವತೆಗಳ ಸ್ತುತಿ ಇದ್ದರೆ ಈ ಮಂಡಲದ ಸೂಕ್ತಗಳೆಲ್ಲಕ್ಕೂ ಸೋಮಪವಮಾನನೇ ದೇವತೆ. ವಂಶೀಯಮಂಡಲಗಳ ಋಷಿಗಳನೇಕರು ಈ ಮಂಡಲದ ಸೂಕ್ತಕಾರರಾಗಿದ್ದಾರೆ. ವಂಶೀಯ ಮಂಡಲಗಳಲ್ಲಿ ಸೋಮದೇವತಾಕವಾದ ಸೂಕ್ತಗಳಿಲ್ಲ

ದಿರುವುದರಿಂದಲೂ, ಉಳಿದ ಮಂಡಲಗಳಲ್ಲಿ ಮೂರೇ ಮೂರು ಸೋಮಸೂಕ್ತಗಳಿರು ವುದರಿಂದಲೂ ಎಲ್ಲಾ ಸೋಮಪವಮಾನ ಸೂಕ್ತಗಳನ್ನು ಪ್ರತ್ಯೇಕವಾಗಿ ಆರಿಸಿ ಈ ಮಂಡಲದಲ್ಲಿ ಒಟ್ಟಿಗೆ ಸೇರಿಸಲಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಮಂಡಲದಲ್ಲಿ ಸೂಕ್ತಗಳನ್ನು ಸಂಯೋಜಿಸಿರುವುದರಲ್ಲಿಯೂ ನಿರ್ದಿಷ್ಟವಾದ ಕ್ರಮವಿದೆ. ಛಂದಸ್ಸಿಗನುಗುಣವಾಗಿ ಈ ಸಂಯೋಜನೆ ಆಗಿದೆ. ಈ ಮಂಡಲದಲ್ಲಿ 1 ರಿಂದ 67 ಸೂಕ್ತಗಳು ಗಾಯತ್ರೀ ಛಂದಸ್ಸಿನಲ್ಲಿಯೂ, 68 ರಿಂದ 86 ಸೂಕ್ತಗಳು ಜಗತೀ ಛಂದಸ್ಸಿನಲ್ಲಿಯೂ, 87 ರಿಂದ 97 ಸೂಕ್ತಗಳು ತ್ರಿಷ್ಟುಪ್ ಛಂದಸ್ಸಿನಲ್ಲಿಯೂ, 98 ರಿಂದ 144 ಸೂಕ್ತಗಳು ಅನೇಕ ಛಂದಸ್ಸುಗಳಲ್ಲಿಯೂ ಇವೆ.

ಹತ್ತನೆಯ ಮಂಡಲದ ಋಷಿಗಳನ್ನು 'ಕ್ಷುದ್ರಸೂಕ್ತಾ: ಮಹಾಸೂಕ್ತಾ:' ಎಂದು ಕರೆದಿದ್ದಾರೆ. ಈ ಮಂಡಲದಲ್ಲಿ ಸಂಕೀರ್ಣವಾದ ವಿಚಾರವನ್ನು ವಿವೇಚಿಸುವ ಅನೇಕಾನೇಕ ಸೂಕ್ತಗಳಿವೆ. ಈ ಮಂಡಲದ ಆದಿಯಿಂದ ಹಿಡಿದು ಪ್ರಖ್ಯಾತವಾದ ನಾಸದೀಯಸೂಕ್ತ ಪೂರ್ತಿಯಾಗಿ ಮಹಾಸೂಕ್ತಗಳೆಂದೂ ಉಳಿದ ಸೂಕ್ತಗಳು ಎಂದರೆ 130 ರಿಂದ 191 ಸೂಕ್ತಗಳು ಕ್ಷುದ್ರಸೂಕ್ತಗಳೆಂದೂ ಷಡ್ಗುರು ಶಿಷ್ಯರು ಹೇಳುತ್ತಾರೆ. ಋಗ್ವೇದ ಋಷಿಗಳ ವಿಚಾರಧಾರೆಯ ಪರಮೌನ್ನತ್ಯವನ್ನು ಸೂಚಿಸುವ ನಾಸದೀಯ ಸೂಕ್ತವೂ ಅದಕ್ಕೂ ಹಿಂದೆ ಇರುವ ಅನೇಕಾನೇಕ ದೊಡ್ಡ ಸೂಕ್ತಗಳೂ ಮಹಾಸೂಕ್ತಗಳೆಂದು ಕರೆಯಲ್ಪಟ್ಟಿರುವುದು ಯುಕ್ತವೇ ಸರಿ.

ಋಕ್ಸಂಹಿತೆಯ ಈ ದಶಮಮಂಡಲ ಅರ್ವಾಚೀನವಾದುದೆಂದು ಮೆಕ್ಡಾನಲ್ಲರ ಅಭಿಪ್ರಾಯ. ಮೊದಲ ಒಂಭತ್ತು ಮಂಡಲಗಳ ನಿಷ್ಪತ್ತಿಯಾದ ನಂತರ ದಶಮಮಂಡಲದ ಸೂಕ್ತಗಳು ಸಂಯೋಜಿತವಾದವೆಂದು ಇವರ ವಾದ. ಇದಕ್ಕೆ ಅವರು ಹೇಳುವ ಕಾರಣಗಳು ಕೆಳಗೆ ಕಂಡಂತೆ ಇವೆ :

(ಅ) ಈ ಮಂಡಲದ ಸೂಕ್ತಕಾರರು ಉಳಿದ ಮಂಡಲಗಳನ್ನು ಪರಿಶೀಲಿಸಿ ಪರಿಚಯ ಪಡೆದವರಂತೆ ತೋರುತ್ತಾರೆ. ಏಕೆಂದರೆ 20ನೇ ಸೂಕ್ತದಿಂದ ಆರಂಭಿಸಿ 26 ಸೂಕ್ತದವರೆಗಿನ ಆರು ಸೂಕ್ತಗಳ ಭಾಗ 'ಅಗ್ನಿಮೀಳೇ' ಎಂದು ಪ್ರಥಮ ಮಂಡಲದ ಪ್ರಥಮ ಮಂತ್ರದಿಂದಲೇ ಆರಂಭವಾಗಿದೆ.

(ಆ) ಸೋಮಮಂಡಲವಾದ ಮೇಲೆ ಸಂಘಟಿತವಾದ ಈ ಮಂಡಲದ ಸೂಕ್ತ ಸಂಖ್ಯೆಯನ್ನು ಪ್ರಥಮ ಮಂಡಲದ ಸಂಖ್ಯೆಯಷ್ಟೇ ಇಟ್ಟಿರುವುದೂ ಈ ಮಂಡಲ ಪರಿಶಿಷ್ಟ ಸೂಕ್ತಗಳ ಸಂಗ್ರಹವೆಂಬುದನ್ನು ಸೂಚಿಸುತ್ತದೆ.

(ಇ) ದಶಮ ಮಂಡಲದ ವಿಷಯ ಮತ್ತು ಸ್ವರೂಪವನ್ನು ನಿಪುಣವಾಗಿ ಪರೀಕ್ಷಿಸಿದಲ್ಲಿ ಇದರ ಅರ್ವಾಚೀನತೆ ಕಂಡುಬರುತ್ತದೆ. ಅರ್ವಾಚೀನರಾದ ಮಂತ್ರಕಾರರ ಕಲ್ಪನಾಕೋಲಾಹಲ ದಲ್ಲಿ ಉಷಸ್ ಮೊದಲಾದ ಪ್ರಾಚೀನ ದೇವತೆಗಳು ಮಾಯವಾಗಿಬಿಟ್ಟಿದ್ದಾರೆ. ಕೆಲವು ದೇವತೆಗಳು ತಮ್ಮ ಮೊದಲಿನ ಸ್ಥಾನವನ್ನು ಕಳೆದುಕೊಂಡುಬಿಟ್ಟಿದ್ದಾರೆ. ಪ್ರಧಾನತಮರಾದ ಇಂದ್ರಾಗ್ನಿಗಳೇ ಮೊದಲಾದವರಿಗೆ ಮಾತ್ರ ಅವರ ಸ್ಥಾನಗಳು ಉಳಿದಿವೆ. ವಿಶ್ವೇದೇವತೆಗಳು ಉತ್ಕೃಷ್ಟವಾದ ಪದವಿಯನ್ನು ಪಡೆದಿದ್ದಾರೆ. ಕೇವಲ ಗುಣಾತ್ಮಕರಾದ ಭಕ್ತಿಕ್ರೋಧಾದಿಗಳೂ, ದೇವತೆಗಳಾಗಿ ಕಲ್ಪಿತರಾಗಿದ್ದಾರೆ. ಇಲ್ಲಿ ವರ್ಣಿಸುವ ತತ್ತ್ವವಿದ್ಯೆ, ಜಗತ್ಸೃಷ್ಟಿ, ವಿವಾಹ, ಪ್ರೇತಸಂಸ್ಕಾರ, ಸಂಮೋಹನ, ಆಕರ್ಷಣ ಮೊದಲಾದ ವಿಷಯಗಳು ಈ ಮಂಡಲ ವಿಲಕ್ಷಣವೂ ಅರ್ವಾಚೀನವೂ ಆಗಿದೆಯೆಂಬುದನ್ನು ಸಮರ್ಥಿಸುತ್ತವೆ.

(ಈ) ಭಾಷಾಸ್ವರೂಪ ವಿಚಾರದಲ್ಲಿಯೂ ಇದರ ಅರ್ವಾಚೀನತೆ ಕಂಡುಬರುತ್ತದೆ. ಇಲ್ಲಿಯ ಭಾಷಾಸರಣಿ ಹಿಂದಿನ ಮಂಡಲಗಳಿಗಿಂತ ಬೇರೆಯಾಗಿ ವಿಕಾಸೋನ್ಮುಖವಾಗಿದೆ. ಎರಡು ಸ್ವರಗಳು ಪರವಾದಾಗ ಸಂಧಿಯಾಗದಿರುವುದು ಪ್ರಕ್ಷೀಣಪ್ರಾಯವಾಗುತ್ತಾ ಬಂದಿದೆ. ಸರ್ವತ್ರ ಸ್ವರಸಂಧಿಗಳು ನಡೆಸಲ್ಪಟ್ಟಿವೆ. ರಳಯೋರಭೇದವು ಇಲ್ಲಿ ಆರಂಭವಾಗಿದೆ. 'ಆಸಸ್' ಎಂಬ ಪ್ರಥಮಾ ಬಹುವಚನ ಪ್ರತ್ಯಯ ಈ ಮಂಡಲದಲ್ಲಿ ಎಲ್ಲಿಯೂ ಬಳಸಿಲ್ಲ.

(ಉ) ಹೀಗೆಯೇ ಶಬ್ದಕೋಶದಲ್ಲಿಯೂ ಭೇದವಿದೆ. ಪ್ರಾಕ್ತನವಾದ ಅನೇಕ ಶಬ್ದಗಳು ಲುಪ್ತವಾಗಿವೆ. ನೂತನ ಶಬ್ದಗಳು ಕಾಣಿಸುತ್ತಿವೆ. 'ಸೀಮ್' ನಿಪಾತ ಇತರ ಮಂಡಲಗಳಲ್ಲಿ 50 ಬಾರಿ ಬಂದಿದ್ದರೆ ಇಲ್ಲಿ ಒಮ್ಮೆ ಮಾತ್ರ ಬಂದಿದೆ. ಲೌಕಿಕ ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ ಅನೇಕಾನೇಕ ಶಬ್ದಗಳು—ಲಭ್, ಕಾಲ, ಏವಂ, ಲಕ್ಷ್ಮೀ ಮೊದಲಾದವು ಈ ಮಂಡಲದಲ್ಲಿಯೇ ಉಪಲಬ್ಧವಾಗಿವೆ.

ದಶಮಮಂಡಲ ಪಶ್ಚಾತ್ಕಾಲ ಸಂಯೋಜಿತವೆಂಬ ಈ ವಾದವನ್ನು ಸಿ. ವಿ. ವೈದ್ಯರು ನಿರಾಕರಣಮಾಡಿ ಎಲ್ಲ ಮಂಡಲಗಳೂ ಏಕಕಾಲದಲ್ಲಿ ಸಂಯೋಜಿತವಾದವೆಂದು ನಿರೂಪಿಸಿರುತ್ತಾರೆ.[10]

ವಂಶೀಯ ಮಂಡಲಗಳಲ್ಲಿಯೂ ಇತರರಿಂದ ದೃಷ್ಟವಾದ ಒಂದೊಂದು ಸೂಕ್ತ ಕಂಡುಬರುತ್ತದೆಯಾದ ಕಾರಣ ಇವುಗಳಲ್ಲಿ ಇತರ ಋಷಿಗಳ ಸೂಕ್ತವಿರಬಾರದೆಂಬ ನಿಯಮ ವಿರಲಿಲ್ಲವೆಂದು ತಿಳಿಯಬಹುದು. ವಂಶೀಯಮಂಡಲಗಳ ಋಷಿಗಳು ಕಂಡ ಸೂಕ್ತಗಳು ಬೇರೆ ಮಂಡಲಗಳಲ್ಲಿಯೂ ಇರಬಹುದು. ಏಳನೆಯ ಮಂಡಲದಲ್ಲಿ ವಸಿಷ್ಠರ ಸೂಕ್ತಗಳಿವೆ ಎಂದಮಾತ್ರಕ್ಕೆ ಮತ್ತೆಲ್ಲಿಯೂ ಅವು ಇರಬಾರದೆಂಬ ನಿಯಮವಿಲ್ಲ. ಮೊದಲನೆಯ ಮಂಡಲದಲ್ಲಿ ಶಕ್ತಿಪುತ್ರರಾದ ಪರಾಶರರ ಹತ್ತು ಸೂಕ್ತಗಳಿರುವುದು ಇದಕ್ಕೆ ನಿದರ್ಶನ. ಇವೆಲ್ಲವನ್ನೂ ಗಮನಿಸಿದರೆ ಸಂಹಿತೆಯನ್ನು ಸಂಯೋಜಿಸಿದವರು ಮೊದಲು ಸುಲಭವಾದ ಸೂಕ್ತಗಳೊಡನೆ ಆರಂಭಿಸಿ ತಮ್ಮ ಸಂಯೋಜನೆಯನ್ನು ಪೂರ್ಣಮಾಡಿದ್ದಾರೆಂದು ಹೇಳಬಹುದು.

## ಋಷಿ—ದೇವತೆ—ಛಂದಸ್ಸು

ಪ್ರತಿಯೊಂದು ಸೂಕ್ತಕ್ಕೂ ಸಂಬಂಧಿಸಿದ ಋಷಿ, ದೇವತೆ ಮತ್ತು ಛಂದಸ್ಸುಗಳನ್ನು ತಿಳಿದುಕೊಂಡೇ ಸೂಕ್ತವನ್ನು ಪ್ರಯೋಗಿಸಬೇಕೆಂಬ ವಿಧಿಯಿದೆ. ಇದಕ್ಕೆ ತಪ್ಪಿದರೆ ಬಹಳ ಪ್ರತ್ಯವಾಯುವುಂಟೆಂದು ಹೇಳಿದ್ದಾರೆ.

ಅವಿದಿತ್ವಾ ಋಷಿಂ ಛಂದಃ ದೈವತಂ ಯೋಗಮೇವ ಚ |
ಯೋಽಧ್ಯಾಪಯೇಜ್ಜಪೇದ್ವಾಪಿ ಪಾಪೀಯಾನ್ ಜಾಯತೇ ತು ಸಃ ||

ಎಂದು ಈ ಅಂಶವನ್ನು ವಿಧಿಸಿದ್ದಾರೆ. ಸೂಕ್ತವನ್ನು ಯಾರು ಹೇಳಿದ್ದಾರೆಯೋ ಅವರೇ ಆ ಸೂಕ್ತದ ಋಷಿ. ವಸಿಷ್ಠರು ಹೇಳಿದುದಾದರೆ ವಸಿಷ್ಠರೇ ಋಷಿ; ಮಧುಚ್ಛಂದಸ್ಸಿನ ವಾಕ್ಯವಾದರೆ ಅವರೇ ಋಷಿ. ಹೀಗೆ ಋಷಿ ಯಾರೆಂಬುದನ್ನು ತಿಳಿಯಬೇಕು. ಕೆಲವು ಸೂಕ್ತಗಳಲ್ಲಿ ಸಂವಾದವಿದೆ. ಒಂದೇ ಸೂಕ್ತ ಇಬ್ಬರ ಸಂವಾದವಾಗಿರುವುದೂ ಉಂಟು. ಇಂಥ ಕಡೆ ಋಷಿನಿರ್ಣಯವನ್ನು ಹೇಗೆ ಮಾಡುವುದು ? ಉದಾಹರಣೆಗೆ ಉರ್ವಶೀ ಪುರೂರವಸ್ಸಿನ ಸಂವಾದಸೂಕ್ತದಲ್ಲಿ ಮೊದಲ ಮಂತ್ರವು ಪುರೂರವನದು ; ಎರಡನೆಯದು ಉರ್ವಶಿಯ

10. *History of Vedic Literature*, P. 47

ಉತ್ತರ. ಇಲ್ಲಿ ಮೊದಲ ಮಂತ್ರಕ್ಕೆ ಪುರೂರವನೇ ಋಷಿ. ಎರಡನೆಯದಕ್ಕೆ ಉರ್ವಶಿಯೇ ಋಷಿ. ಹೀಗೆ ಋಷಿನಿರ್ಣಯವೆಂದು ಬೃಹದ್ದೇವತೆಯಲ್ಲಿ ತಿಳಿಸಿದ್ದಾರೆ.[11]

ಸಂವಾದೇಷ್ವಾಹ ವಾಕ್ಯಂ ಯಃ ಸ ತು ತಸ್ಮಿನ್ ಭವೇತ್ ಋಷಿಃ |
ಯಸ್ತೇನೋಚ್ಯೇತ ವಾಕ್ಯೇನ ದೇವತಾ ತತ್ರ ಸಾ ಭವೇತ್ ||-(ಬೃ. 2. 88)

ಯಾರನ್ನು ಸಂಬೋಧಿಸಿ ಸೂಕ್ತವನ್ನು ಹೇಳಿದೆಯೋ ಅವರೇ ಆ ಸೂಕ್ತಕ್ಕೆ ದೇವತೆ. ಹೀಗೆ ಅಗ್ನಿ, ಇಂದ್ರ, ವರುಣ, ಯಮ ಮೊದಲಾದ ದೇವತೆಗಳನ್ನು ಉದ್ದೇಶಿಸಿ ಬಂದಿರುವ ಸೂಕ್ತಗಳಲ್ಲಿ ಆಯಾಯಾ ದೇವತೆಗಳೆಂದು ತಿಳಿಯಬೇಕು. ಕೆಲವು ಮಂತ್ರಗಳಿಗೆ ದೇವತೆಗಳನ್ನು ಸ್ಪಷ್ಟವಾಗಿ ತಿಳಿಯುವುದಕ್ಕಾಗುವುದಿಲ್ಲ. ಆಗ ಅಂಥ ಮಂತ್ರಗಳು ಯಾವ ಯಾವ ಯಜ್ಞಕ್ರಿಯೆಗಳಲ್ಲಿ ವಿನಿಯೋಗಿಸಲ್ಪಟ್ಟಿವೆ ಎಂಬುದನ್ನು ತಿಳಿದು ಆಯಾ ದೇವತೆಗಳಿಗೆ ಸಂಬಂಧಿಸಿದುವೆಂದು ತಿಳಿಯಬೇಕು. ಮತ್ತೆ ಕೆಲವು ಮಂತ್ರಗಳು ಉತ್ಪನ್ನಪ್ರಯೋಗವುಳ್ಳವುಗಳಾಗಿರುವುದುಂಟು. ಅಂಥ ಮಂತ್ರಗಳು ಯಾವ ಪ್ರಕರಣದಲ್ಲಿವೆಯೆಂಬುದಕ್ಕನುಗುಣವಾಗಿ ಅವುಗಳ ದೇವತಾನಿರ್ಣಯ ಮಾಡಬೇಕು. ಮಂತ್ರದೇವತಾನಿರ್ಣಯವಂತೂ ಖಂಡಿತವಾಗಿಯೂ ಆಗಲೇಬೇಕೆಂಬುದು ವಿಧಿ. ಈ ಅಂಶವನ್ನು ಯಾಸ್ಕರು ತಮ್ಮ ನಿರುಕ್ತದ ದೈವತಕಾಂಡದ ಪೀಠಿಕೆಯಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾರೆ.[12] ಋಷಿದೇವತೆಗಳನ್ನು ತಿಳಿದಂತೆಯೇ ಆಯಾ ಮಂತ್ರಗಳ ಛಂದಸ್ಸನ್ನೂ ತಿಳಿಯಬೇಕು. ವೇದಗಳ ಛಂದಸ್ಸು ಅಕ್ಷರ ಸಂಖ್ಯೆಗನುಗುಣವಾಗಿದೆ. ಇವುಗಳಲ್ಲಿ ಗಾಯತ್ರಿ, ಉಷ್ಣಿ, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ, ಅತಿಜಗತೀ, ಶಕ್ವರೀ, ಅತಿಶಕ್ವರೀ, ಅಷ್ಟೀ, ಅತ್ಯಷ್ಟೀ, ಧೃತಿ ಮತ್ತು ಅತಿಧೃತಿಗಳೆಂಬ ಹದಿನಾಲ್ಕು ಛಂದಸ್ಸುಗಳು ಬಹಳ ಮುಖ್ಯವಾದವು. ಪ್ರತಿಯೊಂದು ಸೂಕ್ತದ ಋಷಿ, ದೇವತೆ ಮತ್ತು ಛಂದಸ್ಸನ್ನು ಭಾಷ್ಯಕಾರರಾದ ಸಾಯಣರು ನಿರ್ದಿಷ್ಟವಾಗಿ ತಿಳಿಸಿದ್ದಾರೆ. ಈ ಅಂಶಗಳನ್ನು ಕಾತ್ಯಾಯನರು ತಮ್ಮ ಅನುಕ್ರಮಣಿಯಲ್ಲಿ 'ಯಸ್ಯವಾಕ್ಯಂ ಸ ಋಷಿಃ | ಯಾ ತೇನೋಚ್ಯತೇ ಸಾ ದೇವತಾ | ಯದಕ್ಷರಪರಿಮಾಣಂ ತಚ್ಛಂದಃ | ಅರ್ಥೇಪ್ಸವಃ ಋಷಯಃ ದೇವತಾಃ ಛಂದೋಭಿಃ ಉಪಾಧಾವನ್ |' ಎಂದು ಹೇಳಿದ್ದಾರೆ.

## ವಾಲಖಿಲ್ಯಸೂಕ್ತಗಳು

ಋಕ್ಸಂಹಿತೆಯ ಎಂಟನೆಯ ಮಂಡಲದ 103 ಸೂಕ್ತಗಳಲ್ಲಿ ಹನ್ನೊಂದು ಸೂಕ್ತಗಳು ಖಿಲಸೂಕ್ತಗಳೆಂದು ಗಣಿಸಲ್ಪಟ್ಟಿವೆ. ಇವುಗಳಿಗೆ ವಾಲಖಿಲ್ಯ[13] ಸೂಕ್ತಗಳೆಂದು ಹೆಸರು. ಎಂಟನೆಯ ಮಂಡಲದ 49ನೇ ಸೂಕ್ತದಿಂದ 59 ಸೂಕ್ತಗಳು ಪೂರ್ತಾ ವಾಲಖಿಲ್ಯ ಸೂಕ್ತಗಳಾಗಿವೆ. ಕಾತ್ಯಾಯನರ ಸರ್ವಾನುಕ್ರಮಣಿಯಲ್ಲಿ ಇವುಗಳ ಉಲ್ಲೇಖ ಮಾತ್ರ ಇದೆ. ಪ್ರಾಚೀನರು ಈ ವಾಲಖಿಲ್ಯ ಸೂಕ್ತಗಳನ್ನು ಮಂಡಲ ಅಥವಾ ಅನುವಾಕಗಳ ವಿಭಜನೆಯಲ್ಲಿ

---

11. ಸಾಯಣರು 'ಅತೀಂದ್ರಿಯಸ್ಯ ವೇದಸ್ಯ ಪರಮೇಶ್ವರಾನುಗ್ರಹೇಣ ಪ್ರಥಮತೋ ದರ್ಶನಾತ್ ಋಷಿತ್ವಂ' ಎಂದು ಹೇಳಿದ್ದಾರೆ.

12. ನಿರುಕ್ತ 7-4

13. ವಾಲಖಿಲ್ಯವೆನ್ನುವುದಕ್ಕೆ ತೈತ್ತಿರೀಯ ಆರಣ್ಯಕದಲ್ಲಿ (1-23) ಹೀಗೆ ವಿವರಣೆ ಇದೆ: 'ಸತಪೋಽತಪ್ಯತ| ಸತಪಸ್ತಪ್ತ್ವಾ ಶರೀರಮಧೂನತ | ತಸ್ಯ ಯನ್ಮಾಂಸಮಾಸೀತ್ತತೋಽರುಣಾಃ ಕೇತವೋ ವಾತರಶನಾ ಋಷಯಃ ಉದತಿಷ್ಠನ್ | ಯೇ ನಖಾಸ್ತೇ ವೈಖಾನಸಾಃ | ಯೇ ವಾಲಾಸ್ತೇ ವಾಲಖಿಲ್ಯಾಃ |'

ಸೇರಿಸಿಲ್ಲ. ಸಾಯಣಾಚಾರ್ಯರೂ ಸಹ ಈ ಸೂಕ್ತಗಳಿಗೆ ಭಾಷ್ಯವನ್ನು ರಚಿಸಿಲ್ಲ. ಈ ಸೂಕ್ತಗಳು ಮಂಡಲ ಅಥವಾ ಅಷ್ಟಕಗಳ ವಿಭಜನೆಗೊಳಪಡದ ಕಾರಣ ಪಶ್ಚಾತ್ಕಾಲಸಂಯೋಜಿತವಾಗಿರಬೇಕೆಂದು ಹೇಳಲಾಗಿದೆ.

### ಆಪ್ರೀಸೂಕ್ತಗಳು

ಸಾಮವೇದ ಮತ್ತು ಯಜುರ್ವೇದದ ಸೂಕ್ತಗಳಂತೆ ಋಗ್ವೇದದಲ್ಲಿಯೂ ಕೇವಲ ಯಾಗಾದಿಗಳಿಗೇ ಉದ್ದಿಷ್ಟವಾದ ಕೆಲವು ಸೂಕ್ತಗಳಿವೆ. ಇವು ಆಪ್ರೀಸೂಕ್ತಗಳೆಂದು ಪ್ರಸಿದ್ಧವಾಗಿವೆ.[14] ಹತ್ತು ಮಂಡಲಗಳಿಂದ ಇಂಥ ಹತ್ತು ಸೂಕ್ತಗಳು ದೊರಕುತ್ತವೆ. ಇವುಗಳು ಯಾವುವೆಂದರೆ:

| ಮಂಡಲ | ಸೂಕ್ತ | ಋಷಿ |
|---|---|---|
| 1 | 13 | ಮೇಧಾತಿಥಿ (ಕಣ್ವವಂಶ) |
| 1 | 142 | ದೀರ್ಘತಮಸ್ |
| 1 | 188 | ಅಗಸ್ತ್ಯರು |
| 2 | 3 | ಗೃತ್ಸಮದರು |
| 3 | 4 | ವಿಶ್ವಾಮಿತ್ರ-ಗಾಥಿನ್‌ಕುಮಾರ |
| 5 | 5 | ವಸುಶ್ರುತರು |
| 7 | 2 | ವಸಿಷ್ಠರು |
| 9 | 5 | ಅಸಿತ ಅಥವಾ ದೇವಲರು |
| 10 | 70 | ಸುಮಿತ್ರರು |
| 10 | 110 | ರಾಮ-ಜಮದಗ್ನಿವಂಶ |

ಈ ಹತ್ತು ಸೂಕ್ತಗಳಲ್ಲಿ ಮೊದಲನೆಯದು ಹನ್ನೆರಡು ಮಂತ್ರಗಳನ್ನೂ ಎರಡನೆಯದು ಹದಿಮೂರು ಮಂತ್ರಗಳನ್ನೂ ಹೊಂದಿದೆ. ಉಳಿದ ಸೂಕ್ತಗಳಲ್ಲಿ ಹನ್ನೊಂದು ಮಂತ್ರಗಳಿವೆ. ಈ ಆಪ್ರೀಸೂಕ್ತಗಳಲ್ಲಿ ಎರಡನೆಯ ಮಂತ್ರದೇವತೆ ಮಾತ್ರ ವೈಕಲ್ಪಿಕವಾಗಿ ಉಳಿದ ಮಂತ್ರಗಳ ದೇವತೆಗಳು ಎಲ್ಲ ಸೂಕ್ತಗಳಿಗೂ ಸಮಾನವಾಗಿದ್ದಾರೆ. ಈ ಸೂಕ್ತಗಳಲ್ಲಿ ಮೊದಲನೆಯ ಮಂತ್ರದಲ್ಲಿ ಅಗ್ನಿಯನ್ನೂ, ಎರಡನೆಯದರಲ್ಲಿ ತನೂನಪಾತ್ ಅಥವಾ ನಾರಾಶಂಸನನ್ನೂ, ಮೂರನೆಯದರಲ್ಲಿ ಇಳಾವನ್ನೂ, ನಾಲ್ಕನೆಯದರಲ್ಲಿ ಬರ್ಹಿಯನ್ನೂ, ಐದನೆಯದರಲ್ಲಿ ದೇವೀದ್ವಾರಃ ಅನ್ನೂ, ಆರನೆಯದರಲ್ಲಿ ಉಷಸಾನಕ್ತಾ ಅನ್ನೂ, ಏಳನೆಯದರಲ್ಲಿ ದೇವ್ಯಾ ಹೋತಾರಾವನ್ನೂ, ಎಂಟನೆಯದರಲ್ಲಿ ಸರಸ್ವತೀ, ಇಳಾ ಮತ್ತು ಭಾರತೀಗಳನ್ನೂ, ಒಂಭತ್ತರಲ್ಲಿ ತ್ವಷ್ಟೃವನ್ನೂ, ಹತ್ತನೆಯದರಲ್ಲಿ ವನಸ್ಪತಿಯನ್ನೂ, ಹನ್ನೊಂದರಲ್ಲಿ ಸ್ವಾಹಾಕೃತಿ

---

14. ನಿರುಕ್ತದ ದೈವತಕಾಂಡದಲ್ಲಿ 'ಅಥಾತ ಆಪ್ರಿಯಃ' ಎಂದು ಮೊದಲಾಗಿ ಇವುಗಳ ವಿಚಾರವನ್ನು ಯಾಸ್ಕರು ನಿರೂಪಿಸಿದ್ದಾರೆ—ನಿರುಕ್ತ 8-4ರಿಂದ 8-21. 'ಆಪ್ರಿಯಃ ಕಸ್ಮಾದ ಪ್ನೋತೇಃ ಪ್ರೀಣಾತೇಃ ವಾ| ಆಪ್ರೀಭಿರಾಪ್ರೀಣಾತೀತಿ ಚ ಬ್ರಾಹ್ಮಣಂ |' —ನಿರುಕ್ತ 8-4-2.

ಯನ್ನೂ ಸ್ತುತಿಸಿದ್ದಾರೆ.[15] ಬೃಹದ್ದೇವತೆಯಲ್ಲಿ ಈ ಅಂಶವನ್ನು ಕೆಳಗೆ ಕಂಡಂತೆ ಹೇಳಿದೆ:

> ಸೂಕ್ತೇಽಸ್ಮಿನ್ ಪ್ರತ್ಯೃಚಂ ಯಾಸ್ತು ದೇವತಾಃ ಪರಿಕೀರ್ತಿತಾಃ ।
> ತಾ ಏವ ಸರ್ವಾಸ್ವಾಪ್ರೀಷು ದ್ವಿತೀಯಾ ತು ವಿಕಲ್ಪತೇ ॥
> ಪ್ರೇಷೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ ।
> ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ॥ (ಬೃ. ಹ. 2-151, 152)

ಮೇಲೆ ಹೇಳಿದಂತೆ ಋಗ್ವೇದದ ಹತ್ತು ಆಪ್ರೀಸೂಕ್ತಗಳೊಡನೆ ಯಜುರ್ವೇದದ ವಾಜಸನೇಯೀ ಸಂಹಿತೆಯ ಪ್ರೈಷಸೂಕ್ತವೂ[16] ಸೇರಿ ಒಟ್ಟು ಆಪ್ರೀಸೂಕ್ತಗಳು ಹನ್ನೊಂದು ಎಂದು ಎಣಿಸಲಾಗಿದೆ.[17]

ಈ ಆಪ್ರೀಸೂಕ್ತಗಳು ಯಜ್ಞದ ಉದ್ದೇಶಕ್ಕಾಗಿಯೇ ಆಗಿದ್ದ ಕಾರಣ ಸಂಹಿತೆಯನ್ನು ಸಂಯೋಜಿಸಿದಾಗ ಇವುಗಳನ್ನು ಈ ಕ್ರಮದಲ್ಲಿಯೇ ಜೋಡಿಸಿರಬೇಕು. ಈ ಆಪ್ರೀಸೂಕ್ತಗಳನ್ನು ಹೋತೃ ಹೇಳಬೇಕಾಗಿತ್ತು. ಯಾಗದಲ್ಲಿ ವಿನಿಯುಕ್ತವಾದ ಇತರ ಸೂಕ್ತಗಳನ್ನೂ ಹಾಗೆಯೇ ಹೇಳಬೇಕಾಗಿತ್ತು. ಆದರೆ ಪ್ರತಿವಂಶದವರೂ ತಮ್ಮದೇ ಆದ ಆಪ್ರೀ ಸೂಕ್ತಗಳನ್ನು ಹೊಂದಿರಲು ಬಯಸುತ್ತಿದ್ದರಾದ ಕಾರಣ ಈ ಆಪ್ರೀಸೂಕ್ತಗಳ ವಿಚಾರದಲ್ಲಿ ಮಾತ್ರ ಸ್ವಾತಂತ್ರ್ಯ ಕೊಡಲಾಗಿದ್ದಿತು. 'ತತ್ರ ಭಗವತಾ ಶೌನಕೇನ ಯಥರ್ಷಿಪಕ್ಷ ಆಪ್ರೀವಿವೇಕಾರ್ಥಮೇವ ಶ್ಲೋಕ ಉಕ್ತಃ'-

> ಕಣ್ವೋಽಂಗಿರೋಽಗಸ್ತ್ಯಃ ಶುನಕೋ ವಿಶ್ವಾಮಿತ್ರೋಽತ್ರಿರೇವ ಚ ।
> ವಸಿಷ್ಠಃ ಕಶ್ಯಪೋ ಬಧ್ರ್ಯಶ್ವೋ ಜಮದಗ್ನಿರಥೋತ್ತಮಃ ॥ ಇತಿ

ಒಂದೊಂದು ಆಪ್ರೀಸೂಕ್ತವೂ ಒಂದೊಂದು ಋಷಿವಂಶಕ್ಕೆ ಸೇರಿದವರ ಉಪಯೋಗಕ್ಕೆಂದು ನಿರ್ದಿಷ್ಟವಾಗಿದ್ದಿತು. ಆದರೂ ಈ ಆಪ್ರೀಸೂಕ್ತಗಳನ್ನು ಎಲ್ಲರೂ ವಿಕಲ್ಪೇನ ಉಪಯೋಗಿಸಬಹುದೆಂಬುದು ಗಾಣಗಿರಿಗಳ ಮತವಾಗಿತ್ತು.

> "ಸರ್ವೇ ಸಮಾನಗೋತ್ರಾಸ್ಸ್ಯುರಿತಿ ಗಾಣಗಿರಿಃ । ಕಥಂ
> ಹ್ಯಾಪ್ರೀಸೂಕ್ತೇನ ಭವೇಯುಃ । ಹೇಶಾಕಲಾಃ । ಕೇ ತೇ
> ಸರ್ವೇಷಾಂ ಶಾಕಲತ್ವಂ ಆಪ್ರೀದ್ವಾರೇಣ ॥"

ಹೀಗೆ ಈ ಆಪ್ರೀಸೂಕ್ತಗಳು ಪ್ರೀತಿವರ್ಧಕಗಳಾಗಿ ಋಷಿವಂಶಗಳವರಲ್ಲಿ ಪರಸ್ಪರ ಸಂತೋಷ ಮತ್ತು ಸ್ನೇಹವನ್ನು ಬೆಳೆಸುವ ಉದ್ದೇಶವನ್ನು ಹೊಂದಿದ್ದವು. ಸಂಹಿತೆಯ ಸಂಯೋಜನೆಯ ಕಾಲಕ್ಕೂ ಬಹಳ ಹಿಂದೆಯೇ ಭಾರತದ ಅನೇಕ ಋಷಿ ವಂಶಗಳವರಲ್ಲಿ ಪರಸ್ಪರ ಸಂಪರ್ಕವಿದ್ದಿತೆಂಬುದನ್ನು ಈ ಆಪ್ರೀಸೂಕ್ತಗಳು ದೃಢಪಡಿಸುತ್ತಿವೆ.

---

15. ಈ ಕ್ರಮ ಋ. ಸಂ. 2-3ರಲ್ಲಿ ಕಾಣಬಹುದು. ಆದರೆ 1-13, 1-142 ಈ ಎರಡು ಸೂಕ್ತಗಳನ್ನು ಬಿಟ್ಟರೆ ಉಳಿದೆಲ್ಲ ಸೂಕ್ತಗಳಲ್ಲಿಯೂ ಹತ್ತನೆಯ ಮಂತ್ರದಲ್ಲಿ ವನಸ್ಪತಿಯನ್ನೂ ಹನ್ನೊಂದನೆಯ ಮಂತ್ರದಲ್ಲಿ ಸ್ವಾಹಾಕೃತಿಯನ್ನೂ ಸ್ತುತಿಸಿದ್ದಾರೆ.

16. ವಾಜಸನೇಯೀ ಸಂಹಿತೆ-21-29-40

17. 'ಇತೀಮಾನ್ಯೇಕಾದಶಾಪ್ರೀಸೂಕ್ತಾನಿ । ತೇಷಾಂ ವಾಸಿಷ್ಠಮಾತ್ರೇಯಂ ಬಾಧ್ರ್ಯಶ್ವಂ ಗಾರ್ತ್ಸಮದಮಿತಿ ನಾರಾಶಂಸವಂತಿ । ಮೈಧಾತಿಥಂ ದೈರ್ಘತಮಸಂ ಪ್ರೈಷಿಕ ಮಿತ್ಯುಭಯವಂತಿ । ಅತೋಽನ್ಯಾನಿ ತನೂನಪಾತ್ವಂತಿ ತನೂನಪಾತ್ವಂತಿ ।'—(ನಿರುಕ್ತ 8-22-12).

## ಪದಪಾಠವಿಲ್ಲದ ಮಂತ್ರಗಳು

ಋಗ್ವೇದ ಸಂಹಿತೆಗೆ ಪದಗಳನ್ನು ಬಿಡಿಸಿ ಪದಪಾಠವನ್ನು ಶಾಕಲ್ಯರು ರಚಿಸಿದ್ದಾರೆ. ಐತರೇಯ ಆರಣ್ಯಕದಲ್ಲಿ ಶಾಕಲ್ಯರ ಪದಪಾಠದ ಉಲ್ಲೇಖವಿರುವ ಕಾರಣ ಪದಪಾಠ ಐತರೇಯ ಆರಣ್ಯಕಕ್ಕಿಂತ ಪ್ರಾಚೀನವಾದುದೆಂದು ತಿಳಿಯಬಹುದು.[18] ಮಹಾಭಾರತದಲ್ಲಿ ಬಾಭ್ರವ್ಯ ಗೋತ್ರದ ಗಾಲವನು ಕ್ರಮಪಾಠವನ್ನು ರಚಿಸಿದನೆಂದು ಹೇಳಿದೆ.[19] ಸಂಧಿನಿಯಮಗಳಿಗನುಗುಣವಾಗಿ ಸೇರಿರುವ ಪಾಠ ಸಂಹಿತೆಯಾದರೆ ಒಂದೊಂದು ಪದವನ್ನೂ ಬಿಡಿಸಿ ಬಿಡಿಸಿ ಹೇಳುವುದು ಪದಪಾಠ. ಈ ಪದಪಾಠದಲ್ಲಿ ಋಕ್ಸಂಹಿತೆಯ ಆರು ಮಂತ್ರಗಳಿಗೆ ಪದವಿಭಾಗ ಮಾಡಿಲ್ಲ. ಇವು ಈ ಕೆಳಗೆ ತೋರಿಸಿರುವ ಮಂತ್ರಗಳಾಗಿವೆ :

ಋ. ಸಂ. 7-59-12, 10-20-1, 10-121-10,
10-190-10, 10-190-2, 10-190-3.

ಈ ಕಾರಣದಿಂದ ಈ ಮಂತ್ರಗಳನ್ನು ಪದಪಾಠಕಾರರು ಖಿಲವೆಂದು ಗಣಿಸಿರಬೇಕೆಂದು ಊಹಿಸಬಹುದು. ಇವು ಪಶ್ಚಾತ್ಕಾಲಸಂಯೋಜಿತವೆಂದು ಆಧುನಿಕ ವಿದ್ವಾಂಸರ ಮತ.

## ಪ್ರಾಚೀನ ಮತ್ತು ನವೀನ ಸೂಕ್ತಗಳು

ಋಗ್ವೇದಸಂಹಿತೆಯ ಮಂತ್ರಗಳು ಬೇರೆಬೇರೆ ಕಾಲದಲ್ಲಿ ಬೇರೆಬೇರೆ ಋಷಿಗಳಿಂದ ದೃಷ್ಟವಾದವೆಂದು ಮೇಲೆ ಸೂಚಿಸಲಾಯಿತು. ಈ ಸೂಕ್ತಗಳು ಕಾಲತಃ ಅನೇಕ ಶತಮಾನಗಳಿಗೆ ಸಂಬಂಧಿಸಿವೆಯೆಂದೂ ಕೆಲವು ಸೂಕ್ತಗಳಲ್ಲಿ ಒಂದಕ್ಕೂ ಮತ್ತೊಂದಕ್ಕೂ ಅನೇಕ ಶತಮಾನಗಳ ಅಂತರವಿದ್ದಿರಬೇಕೆಂದೂ ಗೊತ್ತಾಗುತ್ತದೆ. ಋಗ್ವೇದದಲ್ಲಿಯೇ ಅನೇಕ ಕಡೆ ಇಂದಿನ ಮತ್ತು ಹಿಂದಿನ ಸೂಕ್ತಗಳೆಂದು ಸ್ಪಷ್ಟವಾಗಿಯೇ ಹೇಳಿದೆ.[20] ಈ ಸಹಸ್ರಾರು ಸೂಕ್ತಗಳಲ್ಲಿ ಪ್ರಾಚೀನತಮವಾದವು ಯಾವುವು ? ಅರ್ವಾಚೀನವಾದವು ಯಾವುವು ? ಇವನ್ನರಿಯಲು ಕುತೂಹಲವುಂಟಾಗುವುದು ಸಹಜ. ಇದನ್ನು ನಿರ್ಧರಿಸಲು ವಿದ್ವಾಂಸರು ಬೇರೆಬೇರೆ ರೀತಿಯಲ್ಲಿ ಪ್ರಯತ್ನಿಸಿದ್ದಾರೆ. ಹೆಚ್ಚಾಗಿ ಅಂತರಂಗಪ್ರಮಾಣದ ಆಧಾರದಿಂದಲೇ ಸೂಕ್ತಗಳ ಪ್ರಾಚೀನತೆ ಅಥವಾ ನವೀನತೆಯನ್ನು ನಿಶ್ಚಯಪಡಿಸಲು ಪ್ರಯತ್ನಿಸಲಾಗಿದೆ. ಸೂಕ್ತಗಳ ಪ್ರಾಚೀನತೆಯನ್ನು ವಿಮರ್ಶಿಸುವ ಸಂದರ್ಭದಲ್ಲಿ ವ್ಯಾಕರಣ ಮತ್ತು ಭಾಷೆಯನ್ನು ಆಧಾರವಾಗಿ ಇಟ್ಟುಕೊಳ್ಳಲಾಗಿದೆ. ಕೆಲವು ಪ್ರಯೋಗಗಳು ಕೆಲವು ಕಡೆ ಅತಿಶಯವಾಗಿಯೂ ಮತ್ತೆ ಕೆಲವೆಡೆಗಳಲ್ಲಿ ವಿರಳವಾಗಿಯೂ ಕಂಡುಬರುತ್ತವೆ. ವಿಮರ್ಶಕರು ಈ ಅಂಶಗಳನ್ನೆಲ್ಲಾ ಕೂಲಂಕಷವಾಗಿ ವಿವೇಚಿಸಿದ್ದಾರೆ. ವೇದಭಾಷೆಯ ಕೆಲವು ವೈಲಕ್ಷಣ್ಯಗಳು ಕೆಳಗೆ ಕಂಡಂತಿವೆ:

(ಅ) ಯಜ್ಞಾ (1-168-1), ಹಿಮಾ (10-37-10). ಉಕ್ಥಾ-ಉಕ್ಥೈಃ (4-33-10) ಎಂಬಲ್ಲಿ ಅಕಾರಾಂತವಾದ ನಾಮಪದಗಳು ಆಕಾರಾಂತವಾಗಿ ತೃತೀಯಾವಿಭಕ್ತಿಯ ರೂಪವಾಗುತ್ತವೆ.

(ಆ) ತೃತೀಯಾವಿಭಕ್ತಿ ಏಕವಚನರೂಪದಲ್ಲಿ ಈಕಾರಾಂತವಾಗಿ ಕೊನೆಯಾಗುತ್ತವೆ ಕೆಲವು ಪದಗಳು. ಇದಕ್ಕೆ ಅಚಿತ್ತೀ, ಅಪ್ರಭೂತೀ, ಊತೀ, ಪ್ರಭೂತೀ, ಶಮೀ, ಹಸ್ತಚ್ಯುತೀ

---

18. ಕ್ರಮಪಾಠ ಕ್ರಿ. ಪೂ. 300ಕ್ಕಿಂತ ಹಿಂದೆಯೇ ಇದ್ದಿತೆಂದೂ, ಪದಪಾಠಕರಾದ ಶಾಕಲ್ಯರು ಐತರೇಯ ಆರಣ್ಯಕಕ್ಕಿಂತ ಹಿಂದೆಯೇ ಎಂದರೆ ಕಿ. ಪೂ. 600ರ ಸುಮಾರಿನವರೆಂದೂ ಕೀತರ ಅಭಿಪ್ರಾಯ. ಸಿ. ವಿ. ವೈದ್ಯರ ಅಭಿಪ್ರಾಯದಂತೆ ಇವರ ಕಾಲ ಸುಮಾರು ಕ್ರಿ. ಪೂ. 2000 ವರ್ಷಗಳು.

19. ಮ. ಭಾ. 13ನೇ ಪರ್ವ-341 ಅಧ್ಯಾಯ

20. ಋ. ಸಂ. 7-18-1 ; 7-22-9 ; 7-29-4 ; 1-1-2 ; 2-11-6 ; 2-18-3 ; 7-76-4 ; 2-241.

ಮುಂತಾದವು ಉದಾಹರಣೆಗಳು.

(ಇ) ನಪುಂಸಕಲಿಂಗದ ಬಹುವಚನ ಊಕಾರಾಂತವಾಗಿರುತ್ತದೆ. ಉದಾಹರಣೆಗೆ ಉರೂ, ತ್ರಿಧಾತೂ, ವಸೂ, ವೀಳೂ, ಸುಹಂತೂ ಮೊದಲಾದವು ಇವೆ.

(ಈ) ಆಕಾರಾಂತ ಧಾತುಗಳಿಂದ ಧಿಯಂಧೇ, ಶುಚಿಪೇ, ಕೃಷ್ಟಿಪ್ರೂ, ಜಾಸ್ಪತ್ಯಾ ಮೊದಲಾದ ರೂಪಗಳು ನಿಷ್ಪನ್ನವಾಗುತ್ತವೆ.

(ಉ) 'ವಂತ್', 'ಮಂತ್' ಮೊದಲಾದವುಗಳಲ್ಲಿ ಕೊನೆಯಾಗುವ ಶಬ್ದಗಳ ಸಂಬೋಧನಪ್ರಥಮಾವಿಭಕ್ತಿಯ ರೂಪ 'ವಃ', 'ಮಃ' ಎಂದು ಕೊನೆಯಾಗುವುದು.

(ಊ) 'ತುಭ್ಯ', 'ಮಹ್ಯ', 'ಅಸ್ಮಭ್ಯ' ಎಂಬ ಪದಗಳು ಛಂದಸ್ಸಿಗನುಗುಣವಾಗಿ ಸಂಧಿಕಾರ್ಯಗಳನ್ನು ಹೊಂದಿರುವುವು. ಇವುಗಳನ್ನು ಆಯಾ ರೂಪಗಳಿಗೆ ನಾವು ಪರಿವರ್ತಿಸಿಕೊಳ್ಳಬೇಕು. 7-29-1, 7-32-21, 7-90-2, 7-74-5, 7-81-6 ಮುಂತಾದವುಗಳಲ್ಲಿ ಇದನ್ನು ಕಾಣಬಹುದು.

(ಋ) ತಕ್ಷತ್, ದುದ್ರವತ್, ಪ್ರಥಿಷ್ಠ, ಭರತ್, ಭುವತ್ ಮೊದಲಾದ ವೃದ್ಧಿಯಾಗದ ಭೂತಕಾಲರೂಪಗಳಿರುವುವು.

(ೠ) ಚಿಕಿತಃ, ಜುಜೋಷ, ತತನಃ, ದೀದಯಃ, ದಧರ್ಷತ್, ಮಾಮಹಃ, ಮುಮುಚಃ ಮೊದಲಾದ ವಿಧ್ಯರ್ಥರೂಪಗಳಿರುವುವು.

(ಎ) ಖಿದ್ವಾಂಸ್, ದಾಶ್ವಾಂಸ್, ಮೀಳ್ಹ್ವಾಂಸ್, ಸಾಹ್ವಾಂಸ್ ಮೊದಲಾದ ಕೃದಂತ ರೂಪಗಳು ಹೇರಳವಾಗಿವೆ.

(ಏ) ಕರ್ತಮ್, ಕರ್ತನ, ಕರ್ತ, ಗಂತಂ, ಧಾತ, ಧಾತನ ಮೊದಲಾದ ಮಧ್ಯಮ ಪುರುಷ ದ್ವಿವಚನ ಮತ್ತು ಬಹುವಚನದ ಲುಂಗ್ ರೂಪಗಳಿರುವುವು.

(ಐ) ಕರ್ಷಿ, ಜೇಷಿ, ದರ್ಶಿ, ಪ್ರಕ್ಷಿ, ನೇಷಿ,ಭಕ್ಷಿ, ವಕ್ಷಿ, ಯಕ್ಷಿ ಮೊದಲಾದ ವಿಧಿಲಿಂಗ್ ರೂಪಗಳಿವೆ.

(ಒ) ಆಚಸಾನ, ಋಂಜಸಾನ, ಮಂದಸಾನ, ಸಹಸಾನ ಮೊದಲಾದ ಕೃದಂತ ರೂಪಗಳಿವೆ.

(ಓ) 'ತಯೇ' ಎಂದು ಕೊನೆಯಾಗುವ-ವೀತಯೇ, ಹವ್ಯದಾತಯೇ, ಹವ್ಯಪೀತಯೇ, ಹವ್ಯಸಾತಯೇ, ಇಷ್ಟಯೇ ಮೊದಲಾದ ರೂಪಗಳಿವೆ.

(ಔ) ಸ್ಯ, ತ್ಯ ಎಂಬ ಸರ್ವನಾಮಗಳ ಪ್ರಯೋಗವಿರುವುದು.

(ಅಂ) 'ವನೇ', 'ಸೇ' ಮತ್ತು 'ಅಸೇ'ಗಳಲ್ಲಿ ಕೊನೆಯಾಗುವ ದಾವನೇ, ಅರ್ಚಸೇ, ಋಚಸೇ, ಋಂಜಸೇ ಮೊದಲಾದ ರೂಪಗಳೂ ಇವೆ.

ಋಗ್ವೇದದ ಪ್ರಾಚೀನತಮವಾದ ಸೂಕ್ತಗಳ ವೈಶಿಷ್ಟ್ಯ ಕೆಳಗೆ ಸೂಚಿಸಿರುವ ಪದ ಪ್ರಯೋಗಗಳೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ :

(೧) ಅಕ್ತು, ಅತ್ಯ (ವೇಗವಾದ), ಅಭಿಷ್ಟಿ (ಸಹಾಯ) ಅವಸ್, ಅವಸ್ಯು (ರಕ್ಷಣೆ ಬೇಡಿ) ಋಜೀಷಿನ್ (ಋಜು), ಕ್ಷಿತಿ (ವಾಸ), ಚನಃ (ಸಂತೋಷ) ಚನಸ್ಯ, ಚನಿಷ್ಠ, ಚರ್ಷಣಿ (ಮಾನವರು) ಮುಂತಾದ ಪದಗಳು.

(೨) ಅಶ್ವಚಂದ್ರ, ಪುರುಚಂದ್ರ ಮೊದಲಾದ ಚಂದ್ರಾಂತವಾದ ಶಬ್ದಗಳು.

(೩) 'ತುಜ್' ಎಂಬ ಕ್ರಿಯಾಪದ ಮತ್ತು ವಿಶೇಷಣದ ಪ್ರಯೋಗ.

(೪) ಜಯಿಸು ಎಂಬ ಅರ್ಥದಲ್ಲಿ ಬರುವ 'ವೃತ್ರತುರ್', 'ಸುಪ್ರತುರ್' ಮೊದಲಾದ

'ತುರ್' ಅಂತವಾದ ಸಮಸ್ತ ಪದಗಳು.

(೫) 'ತುವಿ' ಎಂಬುವುದರಿಂದ ಮೊದಲಾಗುವ ತುವಿಜಾತ, ತುವಿದೇಷ್ಣ ಮೊದಲಾದ ಸಮಾಸ ಪದಗಳು.

(೬) ಅತಿಶಯಿಸು ಎಂಬ ಅರ್ಥದ 'ದಂಸ್' ಎಂಬುದರಿಂದ ಸಾಧಿತವಾದ 'ದಂಸನ, 'ದಂಸ', 'ದಂಸಿಷ್ಠ' 'ಪುರುದಂಸಸ್', 'ಸುದಂಸಸ್' 'ದಸ್ಮ', 'ದಮ್ರ'–ಮೊದಲಾದ ರೂಪಗಳು.

(೭) ಧ್ಯಾನ ಎಂಬ ಅರ್ಥದಲ್ಲಿ 'ಮನ್ಮನ್', ಕವಿ ಎಂಬ ಅರ್ಥದಲ್ಲಿ 'ವಿಪ್ರ', ಯಶಸ್ಸು ಎಂಬ ಅರ್ಥದಲ್ಲಿ 'ಶ್ರವ',ವರ ಎಂಬ ಅರ್ಥದಲ್ಲಿ 'ವಾಜ' ಮೊದಲಾದ ಶಬ್ದಗಳ ಪ್ರಯೋಗಗಳು.

ರೋಗಗಳಿಗೆ ಸಂಬಂಧಪಟ್ಟ ಹೆಸರುಗಳು, ಮಂತ್ರ, ತಂತ್ರಾದಿಗಳ ಹೆಸರುಗಳು, ಯಜ್ಞಕ್ಕೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳು, ತತ್ತ್ವಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಗಳು ಇವು ಬರುವ ಭಾಗಗಳು ಉಳಿದ ಭಾಗಗಳಿಗಿಂತ ಈಚಿನ ಕಾಲದವು. ಋಕ್ಸಂಹಿತೆಯ ಪ್ರಾಚೀನತರವಾದ ಭಾಗಗಳಲ್ಲಿ ಬರುವ ಸಂಧಿನಿಯಮಗಳೂ ವಿಶಿಷ್ಟವಾಗಿವೆ. ಪದಾಂತ್ಯವಾದ ಅ, ಆ ಕಾರಗಳು ಪರವಾದ ಸ್ವರದೊಡನೆಯಾಗಲೀ, ವೃದ್ಧ್ಯಕ್ಷರದೊಡನೆಯಾಗಲೀ ನಿಯಮೇನ ಸಂಧಿಕಾರ್ಯ ಹೊಂದುತ್ತವೆ. ಪದಾಂತ್ಯವಾದ ಇ, ಈ, ಉ, ಊ ಕಾರಗಳು ಸವರ್ಣಸ್ವರಗಳೊಡನೆ ಸಂಧಿ ಕಾರ್ಯ ಹೊಂದುತ್ತವೆ, ಅಸವರ್ಣ ಸ್ವರಗಳು ಪರವಾದಾಗ ಭೇದದೊಡನೆ ಹೇಳಲ್ಪಡುತ್ತವೆ. 'ಅಸ್', 'ಏ', 'ಓ' ಕಾರಾಂತವಾದ ಪದಗಳು ಸ್ವರಪರವಾದಾಗ ಅಂತ್ಯವರ್ಣದ ಲೋಪವನ್ನು ಹೊಂದುತ್ತವೆ. ಆದ್ದರಿಂದ ಇವೆಲ್ಲಾ ಒಂದೇ ರೀತಿ 'ಅ'ಕಾರಾಂತವಾದ ಹಾಗೆ ಭೇದದೊಡನೆ ಹೇಳಲ್ಪಡುತ್ತವೆ. 'ಏ' ಮತ್ತು 'ಔ'ನಲ್ಲಿ ಕೊನೆಯಾಗುವ ಪದಗಳು ಸ್ವರ ಪರವಾದಾಗ 'ಅ'ಕಾರದಲ್ಲಿ ನಿಲ್ಲುತ್ತವೆ. ಆದರೆ ಏಕಾರಾಂತವಾದ ನಾಮಪದಗಳೂ, ಕ್ರಿಯಾಪದಗಳೂ ಹಾಗೆಯೇ ಉಳಿಯುವುವು.

ಕಾವ್ಯ ಸಂಸ್ಕೃತದಲ್ಲಿ ಪೂರ್ವರೂಪ ಸಂಧಿ ಆಗುತ್ತದೆ. ಆದರೆ ಋಗ್ವೇದದ ಪ್ರಾಚೀನತಮ ಭಾಗಗಳಲ್ಲಿ ಇದು ವಿರಳವಾಗಿದೆ. ಇದು ಭೂಯಿಷ್ಠವಾಗಿರುವ ಭಾಗಗಳು ಅರ್ವಾಚೀನವಾದವುಗಳೆಂದು ತಿಳಿಯಬೇಕು. ಹೀಗೆ ವ್ಯಾಕರಣ ಮತ್ತು ಭಾಷೆಯ ಆಧಾರದಿಂದ ಋಗ್ವೇದ ಸೂಕ್ತಗಳಲ್ಲಿ ಪ್ರಾಚೀನವಾದವನ್ನು ಗುರುತಿಸಬಹುದು.

ಹೀಗೆಯೇ ಛಂದಸ್ಸಿನ ಆಧಾರದಿಂದಲೂ ಹಳೆಯ ಸೂಕ್ತಗಳು ಮತ್ತು ಹೊಸ ಸೂಕ್ತಗಳು ಎಂಬುವುದನ್ನು ನಿರ್ಣಯಿಸಬಹುದು. ಒಂದೊಂದು ಪಾದದಲ್ಲಿಯೂ ಎಂಟು, ಹನ್ನೊಂದು ಅಥವಾ ಹನ್ನೆರಡು ಅಕ್ಷರಗಳನ್ನು ಹೊಂದಿರುವ ಉಷ್ಣಿಹ್, ಕಕುಭ್, ಬೃಹತೀ, ಸತೋಬೃಹತೀ, ಅತ್ಯಷ್ಟೀ ಮೊದಲಾದ ಛಂದಸ್ಸುಗಳಲ್ಲಿರುವ ಮಂತ್ರಗಳು ಪ್ರಾಚೀನತರವಾದವೆಂದು ಹೇಳಲಾಗಿದೆ. ಈ ಛಂದಸ್ಸುಗಳನ್ನು ಮುಂದಿನ ಕಾಲದಲ್ಲಿ ವಿರಳ ವಿರಳವಾಗಿ ಬಳಸಲಾಗಿದೆ.

ಋಗ್ವೇದ ಸೂಕ್ತಗಳು ಅಥರ್ವವೇದದಲ್ಲಿ ಅನೇಕವಾಗಿ ಬಂದಿವೆ. ಹೀಗೆ ಯಾವಯಾವ ಸೂಕ್ತಗಳು ಪೂರ್ಣವಾಗಿಯಾಗಲೀ ಭಾಗಗಳಲ್ಲಾಗಲೀ ಅಥರ್ವವೇದದಲ್ಲಿ ಬಂದಿವೆಯೋ ಅಂಥ ಸೂಕ್ತಗಳು ಇತರ ಸೂಕ್ತಗಳಿಗಿಂತ ಈಚಿನವು ಎಂದು ಊಹಿಸಲಾಗಿದೆ.

ಕೊನೆಯದಾಗಿ ವಿಷಯಕ್ಕನುಸಾರವಾಗಿಯೂ ಈ ಬಗೆಯ ವಿವೇಚನೆ ಮಾಡಬಹುದು. ಸತ್ಯಧರ್ಮಾಣರಾದ ದೇವತೆಗಳನ್ನು ಕುರಿತ ಹಾರ್ದವಾದ ಪ್ರಾರ್ಥನೆಗಳ ಸಮೂಹ ಪ್ರಾಚೀನತಮವಾದವು. ಉಷಃಕಾಲಕ್ಕಿಂತ ಮುಂಚೆಯೇ ಅಗ್ನಿಚರ್ಯ ಮಾಡಿ ದೇವತಾಸ್ತುತಿ ಯನ್ನು ಮಾಡುವುದು, ಸೋಮಪಾನಕ್ಕೆ ಅಗ್ನೀಂದ್ರಾದಿ ದೇವತೆಗಳನ್ನಾವಾಹಿಸುವುದು ಮುಂತಾದ

ವಿಷಯಗಳನ್ನು ಹೊಂದಿರುವ ಸೂಕ್ತಗಳು ಅತ್ಯಂತ ಪ್ರಾಚೀನತಮವಾದವು. ವಿಶ್ವೇದೇವತೆಗಳ ಸೂಕ್ತ ಸ್ವಲ್ಪ ಈಚಿನದು. ಯಾಗದಲ್ಲಿನ ಪುರೋಹಿತರುಗಳು, ಅವರ ಕರ್ತವ್ಯಗಳು ಮೊದಲಾದವನ್ನು ಸೂಚಿಸುವ ಸೂಕ್ತಗಳು ಈಚಿನವು. ದಾನಸ್ತುತಿಗಳು, ತತ್ತ್ವವಿಚಾರವಾದ ಸೂಕ್ತಗಳು, ಪ್ರಹೇಳಿಕೆಗಳು, ಅಭಿಚಾರಕ ಸೂಕ್ತಗಳು ಮೊದಲಾದವು ಅರ್ವಾಚೀನವಾದ ಭಾವನೆಗಳನ್ನು ಸೂಚಿಸುವ ಕಾರಣ ಈಚಿನವೆಂದು ತಿಳಿಯಬಹುದು.

ಋಗ್ವೇದದ ಅತ್ಯಂತ ಪ್ರಾಚೀನವಾದ ಸೂಕ್ತಗಳಲ್ಲಿ ಅನೇಕಾನೇಕ ಉಪಾಖ್ಯಾನಗಳ ಉಲ್ಲೇಖವಿದೆ. ಮುಂದಿನ ಭಾಗಗಳಲ್ಲಿ ಇವು ನಾಟಕೀಯವಾಗಿ ಬೆಳೆದಿವೆ. ಇದಕ್ಕೆ ಪುರೂರವಸ್ ಊರ್ವಶೀ ಸಂವಾದ (10-95), ಅಗಸ್ತ್ಯಲೋಪಾಮುದ್ರಾ ಸಂವಾದ (1-179), ಯಮ— ಯಮಿ ಸಂವಾದ (10-10) ಮೊದಲಾದುವನ್ನು ಉದಾಹರಿಸಬಹುದು. ಇಂಥ ವಿಶಿಷ್ಟ ವಿಚಾರಗಳನ್ನೊಳಗೊಂಡಿರುವ ಸೂಕ್ತಗಳು ಅರ್ವಾಚೀನವಾದವು. ಈ ರೀತಿಯಲ್ಲಿ ಭಾಷೆ, ವ್ಯಾಕರಣ, ಛಂದಸ್ಸು, ಪ್ರತಿಪಾದ್ಯವಿಷಯ ಇವುಗಳಿಗನುಸಾರವಾಗಿ ಸೂಕ್ತಗಳಲ್ಲಿ ಪ್ರಾಚೀನವಾದವು ಮತ್ತು ನವೀನವಾದವುಗಳನ್ನು ಬೇರ್ಪಡಿಸಬಹುದು. ಒಂದೊಂದು ಸೂಕ್ತವನ್ನೂ ಈ ರೀತಿ ನಿಪುಣವಾಗಿ ಪರೀಕ್ಷಿಸಿ ಅದರ ಕಾಲ ವಿಚಾರವನ್ನು ಊಹಿಸಬಹುದು.

ದಶಮಮಂಡಲ ಪಶ್ಚಾತ್ಕಾಲಸಂಯೋಜಿತವಾದುದೆಂದು ಆಧುನಿಕ ವಿಮರ್ಶಕರ ಮತ. ಪೂರ್ವಮಂಡಲಗಳಲ್ಲಿರುವ ಸೂಕ್ತಗಳ ಅವಾಂತರಕಾಲವನ್ನು ನಿರ್ಣಯ ಮಾಡಲು ಸಾಧ್ಯವಾಗುವ ಉಪಕರಣಗಳಿಲ್ಲವೆಂದು ಅವರೂ ಅಭಿಪ್ರಾಯಪಡುತ್ತಾರೆ. ಸಮಗ್ರವಾದ ಋಗ್ವೇದಸೂಕ್ತಗಳ ಉತ್ಪತ್ತಿಗೆ ಅನೇಕ ಸಹಸ್ರವರ್ಷಗಳು ಹಿಡಿದವೆಂದು ಇವರು ಅಭಿಪ್ರಾಯಪಡುತ್ತಾರೆ. ಭಾರತೀಯರೂ, ಇರಾನಿಯನ್ನರೂ ಬೇರೆಬೇರೆಯಾಗುವುದಕ್ಕೂ ಮುಂಚೆಯೇ ಇದೇ ರೀತಿಯ ಅನೇಕ ಮಂತ್ರಗಳು ಅವರಲ್ಲಿ ರೂಢಿಯಲ್ಲಿದ್ದಿರಬೇಕೆಂದು ಅವರ ಅಭಿಪ್ರಾಯ. ಹಿಂದಿನ ಕಲ್ಪಗಳ ಮಂತ್ರಗಳನ್ನು ಉದಾಹರಿಸಿ ವ್ಯವಹರಿಸುವುದೂ, ಪೂರ್ವಪುರುಷರ ನಾಮ ನಿರ್ದೇಶ ಮಾಡುವುದೂ ಈ ಅಂಶವನ್ನು ಸಮರ್ಥಿಸುತ್ತವೆ. ಹತ್ತನೆಯ ಮಂಡಲವನ್ನು ಬಿಟ್ಟರೆ ಉಳಿದ ಮಂಡಲದಲ್ಲಿರುವ ಭಾಷಾಪ್ರಯೋಗಗಳು ಪ್ರಾಯಃ ಒಂದೇ ರೀತಿಯಾಗಿವೆ. ಶೈಲಿ, ಕಲ್ಪನಾಸರಣಿ ಮತ್ತು ಕವಿತಾಸಾಮರ್ಥ್ಯಗಳಲ್ಲಿ ಸೂಕ್ತಕ್ಕೂ ಸೂಕ್ತಕ್ಕೂ ಭೇದವನ್ನು ನಾವು ಕಂಡರೂ ಭಾಷೆಯ ರೀತಿಯಲ್ಲಿ ಈ ಬಗೆಯ ಭೇದ ತೋರುವುದಿಲ್ಲ. ಸೂಕ್ತ ಘಟನೆ, ಛಂದೋಬಂಧ, ವಿಷಯ ವರ್ಣನೆಯ ರೀತಿ ಇವುಗಳಿಂದ ಕೂಡಿದ ಭಾಷೆಯ ಸ್ವರೂಪವನ್ನು ಸೂಕ್ಷ್ಮದೃಷ್ಟಿಯಿಂದ ವೀಕ್ಷಿಸಿದರೆ ಕಾಲಭೇದಪ್ರಕಾಶಕವಾದ ಹಲಕೆಲವು ಚಿಹ್ನೆಗಳು ಕಂಡುಬರಬಹುದೆಂದು ಇವರು ಅಭಿಪ್ರಾಯಪಡುತ್ತಾರೆ.

ಋಗ್ವೇದದಿಂದ ಉದ್ಧೃತವಾದ ಸೂಕ್ತಗಳಿಂದಲೂ, ಮಂತ್ರಗಳಿಂದಲೂ, ಮಂತ್ರಪಾದ ಗಳಿಂದಲೂ ಇತರ ವೇದಗಳು ಮಿಶ್ರಿತವಾಗಿವೆ. ಇತರ ವೇದಗಳಿಂದ ಋಗ್ವೇದ ವಿಮರ್ಶೆಗೆ ಬಹಳ ಸಹಾಯಕವಾಗಿದೆ. ಪರಂಪರೆಯಿಂದ ಬಂದ ಋಗ್ವೇದ ಪಾಠ ಈ ಇತರ ವೇದಗಳಿಂದಲೂ, ನಿರುಕ್ತ, ಪ್ರಾತಿಶಾಖ್ಯ ಮೊದಲಾದವುಗಳಿಂದಲೂ ಸರಿಯಾಗಿ ಉಪಸ್ಥಾಪಿತವಾಗುವುದು. ಇತರ ವೇದಗಳೊಡನೆ ಹೋಲಿಸಿದಾಗ ಪಾಠಭೇದಗಳು ಬಹಳ ವಿರಳವಾಗಿ ತೋರಿದರೂ ಇತರ ಮೂರು ವೇದಗಳ ಉತ್ಪತ್ತಿ ಕಾಲದಲ್ಲಿಯೂ ಋಗ್ವೇದ ಹೀಗೆಯೇ ಇದ್ದಿತೇ ವಿನಾ ಪಾಠಾಂತರಗಳನ್ನು ಹೊಂದಿರಲಿಲ್ಲವೆಂದು ಗೊತ್ತಾಗುತ್ತದೆ. ಇದರಿಂದ ವೇದಸಾಹಿತ್ಯದ ಶಿಖರದಂತಿರುವ ಋಗ್ವೇದವನ್ನು ಮೊದಲಿನಿಂದಲೂ ಬಹಳ ಎಚ್ಚರಿಕೆಯಿಂದ

ರಕ್ಷಿಸಿಕೊಂಡು ಬಂದರೆಂಬುದು ಸ್ಪಷ್ಟವಾಗುತ್ತದೆ. ಇತರ ವೇದಗಳ ದ್ರಷ್ಟಾರರೂ ಸಹ ಪರಂಪರಾಧಿಗತವಾದ ಋಗ್ವೇದವನ್ನು ಬಹಳ ಆದರದಿಂದ ಪಾಲಿಸಿಕೊಂಡು ಬಂದರು.

## ಋಗ್ವೇದ ಸಂಹಿತೆಯಲ್ಲಿ ಪ್ರತಿಪಾದಿಸಿರುವ ವಿಷಯ

ಋಗ್ವೇದಸಂಹಿತೆ ಧಾರ್ಮಿಕವಾದ ಸೂಕ್ತಗಳಿಂದ ಹೆಚ್ಚಾಗಿ ಸಂಘಟಿತವಾಗಿದೆ. ಸಂಪ್ರದಾಯಕ್ಕನುಸಾರವಾಗಿ ಇಲ್ಲಿರುವುದೆಲ್ಲಾ ಧಾರ್ಮಿಕವೂ, ಪವಿತ್ರವೂ, ಪರಮಪ್ರಮಾಣವೂ ಆದುದಾಗಿದೆ. ಆಧುನಿಕ ವಿಮರ್ಶಕರ ಅಭಿಪ್ರಾಯದಂತೆ, ಅತ್ಯುನ್ನತಸ್ಥಿತಿಯಲ್ಲಿದ್ದ ಆರ್ಯರ ನಾಗರಿಕತೆಯನ್ನು ಇದು ಪ್ರತಿಬಿಂಬಿಸುವುದು. ಇವರ ದೃಷ್ಟಿಯಲ್ಲಿ ಋಗ್ವೇದಸೂಕ್ತಗಳು ಧಾರ್ಮಿಕ ಮತ್ತು ಲೌಕಿಕ ಎಂದು ಎರಡು ಬಗೆಯಾಗಿವೆ.

ಋಗ್ವೇದದಲ್ಲಿ ಅಗ್ನೀಂದ್ರಾದಿ ದೇವತೆಗಳನ್ನು ಕುರಿತ ಅನೇಕಾನೇಕ ಸೂಕ್ತಗಳೇ ಪ್ರಧಾನವಾದ ಭಾಗವಾಗಿವೆ. ದೇವತೆಗಳ ಅಪಾರವಾದ ಮಹಿಮೆಯನ್ನೂ, ಮಹತ್ತರವಾದ ಕರ್ಮಗಳನ್ನೂ ಸ್ತುತಿಸಿ, ಅವರು ಮಾನವರಿಗೆ ಹಿತವನ್ನೇ ಮಾಡುವರೆಂದು ಇಲ್ಲಿ ವರ್ಣಿಸಿದೆ. ಇಂಥ ದೇವತೆಗಳಿಂದ ಪಶುಪುತ್ರರನ್ನೂ ಆಯುರಾರೋಗ್ಯೈಶ್ವರ್ಯಾದಿಗಳನ್ನೂ ಬೇಡಿದ್ದಾರೆ. ಸ್ತುತಿಗಳ ಘಟನಾರೀತಿಯೂ ಸರಳವಾಗಿ, ಸುಂದರವಾಗಿ, ಸಮಾಸದೂರವಾಗಿ ಸುಂದರವಾದ ಆಶಯಗಳನ್ನೊಳಗೊಂಡು ರಂಜಿಸುತ್ತಿದೆ. ಸಹೃದಯಹೃದಯಾಹ್ಲಾದಿಯಾದ ಕವಿತಾವಿಲಾಸವೂ ಅನೇಕ ಸೂಕ್ತಗಳ ಚಾರುತೆಯನ್ನು ಅಧಿಕಗೊಳಿಸಿದೆ. ದೇವತಾಸ್ತುತಿಯಲ್ಲಿ ಅವರು ತೋರಿರುವ ಮಹತ್ತರವಾದ ಶ್ರದ್ಧೆ ಅವುಗಳನ್ನು ಪವಿತ್ರಗೊಳಿಸಿದೆ. ವೈದಿಕ ಸೂಕ್ತಗಳಲ್ಲಿ ಒಂದು ಬಗೆಯಾದ ವರ್ಣನೆಯ ವಿಸ್ತಾರವಿದೆಯೆಂದು ಕೆಲವರ ಮತ.[21] ಇದು ದೋಷವೆಂದು ಹೇಳಲಾಗದು. ಏಕೆಂದರೆ ಒಂದೇ ಅಂಶವನ್ನು ನಲವತ್ತು ಐವತ್ತು ಸೂಕ್ತಗಳಲ್ಲಿ ವಿವಿಧವಾದ ವಚನಭಂಗಿಗಳಿಂದ ವರ್ಣಿಸುವ ಅಸಾಮಾನ್ಯ ರೀತಿ ಆಶ್ಚರ್ಯಕರವಾದುದಾಗಿದೆ.

ಋಗ್ವೇದದಲ್ಲಿ ಧಾರ್ಮಿಕ ವಿಚಾರ ಪ್ರಧಾನವಾಗಿದೆಯೆಂಬುದು ಸ್ಪಷ್ಟವೇ ಆಗಿದೆ. ಋಗ್ವೇದದಲ್ಲಿ ಕೆಲವು ತತ್ತ್ವಪ್ರತಿಪಾದಕವಾದ ಸೂಕ್ತಗಳೂ ಇವೆ. ಈ ವಿಶ್ವದ ಸೃಷ್ಟಿಗೆ ಕಾರಣವಾವುದು, ನಾವು ಯಾರು, ಎಲ್ಲಿಂದ ಬಂದೆವು ಮೊದಲಾದ ವಿಚಾರಗಳನ್ನು ಇವು ಪ್ರತಿಪಾದಿಸುತ್ತವೆ. ಉಪನಿಷತ್ತುಗಳು ಆತ್ಮವಿಚಾರವನ್ನು ಪ್ರತಿಪಾದಿಸುವ ರೀತಿಯಲ್ಲಿ ಇವು ವಿವರಿಸದಿದ್ದರೂ, ಉಪನಿಷದ್ದರ್ಶನದ ಅಂಕುರಗಳು ಋಗ್ವೇದದಲ್ಲಿ ಹರಡಿಕೊಂಡಿರುವುದನ್ನು ಕಾಣಬಹುದು. ಒಂದನೇ ಮಂಡಲದ 164ನೇ ಸೂಕ್ತ ವಿಶ್ವರಹಸ್ಯವಿಚಾರವನ್ನು ಒಗಟಿನ ರೂಪದಲ್ಲಿ ವಿವೇಚಿಸುತ್ತದೆ. ಹಾಗೆಯೇ ಹತ್ತನೆಯ ಮಂಡಲದ 121ನೇ ಸೂಕ್ತ, 90ನೇ ಸೂಕ್ತ, 82ನೇ ಸೂಕ್ತ, 125ನೇ ಸೂಕ್ತ ಹಾಗೂ 129ನೇ ನಾಸದೀಯಸೂಕ್ತ ಇವುಗಳು ಅತ್ಯುನ್ನತವಾದ ತತ್ತ್ವವಿಚಾರವನ್ನು ಪ್ರತಿಪಾದಿಸುತ್ತವೆ.

ಲೌಕಿಕ ವಿಚಾರವನ್ನು ಪ್ರತಿಪಾದಿಸುವ ಸೂಕ್ತಗಳನ್ನು ಬೇರ್ಪಡಿಸಿ ಹೇಳುವುದು ಸುಲಭವಾದುದಲ್ಲ. ಆದರೂ ನಿರ್ದಿಷ್ಟವಾಗಿ ದೇವತೆಗಳನ್ನು ಉದ್ದೇಶಿಸದ ಸೂಕ್ತಗಳನ್ನು ಲೌಕಿಕ ವಿಷಯ ಪ್ರತಿಪಾದಕವಾದ ಸೂಕ್ತಗಳೆಂದು ಭಾವಿಸಬಹುದು. ಸೋಮ ಮತ್ತು ಸೂರ್ಯೆಯರ ವಿವಾಹವನ್ನು ವರ್ಣಿಸುವ ವಿವಾಹಸೂಕ್ತ (10-85), ಆರ್ಯರ ಸಾಮಾಜಿಕ ಪದ್ಧತಿಯನ್ನು ತಿಳಿಸುವ ಔರ್ಧ್ವದೈಹಿಕಸೂಕ್ತ (10-18), ಅಂದಿನ ರಾಜಕುಲಗಳ

21. *History of Sanskrit Literature.*— A. A. Macdonell.

ಜಯಾಪಜಯಗಳನ್ನು ವರ್ಣಿಸುತ್ತಾ ಚರಿತ್ರೆಯ ಅಂಶಗಳನ್ನು ಹೊರಗೆಡಹುವ ಐತಿಹಾಸಿಕ ಸೂಕ್ತಗಳು (7-18, 7-33, 7-83), ಪರಮೋದಾರಿಗಳಾದ ದಾನಿಗಳನ್ನು ಮುಕ್ತಕಂಠದಿಂದ ಸ್ತುತಿಸುವ ದಾನಸ್ತುತಿಗಳೂ (5-42-22ರಿಂದ 25), ಮಂಡೂಕ ಸೂಕ್ತ (7-103), ಅಭಿಚಾರ ಸೂಕ್ತಗಳು (10-145), ಸಂವಾದ ಸೂಕ್ತಗಳು (10-10), (10-95), ಅಕ್ಷಸೂಕ್ತವೂ (10-34), ಅನೇಕ ಬ್ರಹ್ಮೋದ್ಯಗಳೂ ಲೌಕಿಕ ವಿಷಯಪರವಾದವೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

## ಋಗ್ವೇದ ದೇವತೆಗಳು

ಋಗ್ವೇದದಲ್ಲಿ ಅಗ್ನೀಂದ್ರಾದಿ ದೇವತೆಗಳನ್ನು ಕುರಿತ ಸ್ತೋತ್ರಗುಚ್ಛಗಳಿವೆ. 'ಯುವಾಂ ದೇವಾಸ್ತ್ರಯ ಏಕಾದಶಾಸಃ' (8-57-2) ಎಂದು ಹೇಳಿರುವಂತೆ ಈ ದೇವತೆಗಳು ಮೂವತ್ತಮೂರು ಮಂದಿಗಳು. ಈ ದೇವತೆಗಳನ್ನೇ ಅಲ್ಲದೆ ಅನೇಕ ಪ್ರಾಕೃತಪದಾರ್ಥಗಳನ್ನೂ ದೇವತೆಗಳೆಂದು ರೂಪಣ ಮಾಡಿ ಸ್ತುತಿಸಿದ್ದಾರೆ. ಬೃಹದ್ದೇವತೆಯಲ್ಲಿ ಈ ಅಂಶವನ್ನು ಕೆಳಗೆ ಕಂಡಂತೆ ಸೂಚಿಸಿದೆ :

"ಸತ್ತ್ವಾನ್ಯಮೂರ್ತಾನ್ಯಪಿ ಚ ದೇವತಾವನ್ಮಹರ್ಷಯಃ |
ತುಷ್ಟುವುಃ ಋಷಯಃ ಶಶ್ವತ್ ತಾಸು ತಾಸು ಸ್ತುತಿಷ್ವಿಹ ||
ಯ್ಯಸ್ತ್ವಗ್ನಿರಿಂದ್ರಸ್ಸೋಮಶ್ಚ ವಾಯುಸ್ಸೂರ್ಯೋ ಬೃಹಸ್ಪತಿಃ |
ಚಂದ್ರೋಽಥ ವಿಷ್ಣುಃ ಪರ್ಜನ್ಯಃ ಪೂಷಾ ಚಾಪಿ ಋಭವೋಽಶ್ವಿನೌ ||
ರೋದಸೀ ಮರುತೋ ದೇವಾಃ ಪೃಥಿವ್ಯಾಪಃ ಪ್ರಜಾಪತಿಃ |
ದೇವೌ ಚ ಮಿತ್ರಾವರುಣೌ ಪೃಥಕ್ ಸಹ ಚ ತಾವುಭೌ ||
ವಿಶ್ವೇ ಚ ದೇವಾಃ ಸವಿತಾ ತ್ವಷ್ಟಾ ವೈರೂಪಕೃನ್ಮತಃ |
ಅಶ್ವೋಽನ್ನಂ ಋತ್ವಿಜೋ ವಜ್ರೋ ಗ್ರಾವಾಣೋ ರಥಸಂಯುತಾಃ ||
ಸ್ತುತಾಃ ಪೃಥಕ್ ಪೃಥಕ್ ಸ್ವೈಃ ಸ್ವೈಃ ಸೂಕ್ತೈಃ ಋಗ್ಭಿಶ್ಚ ನಾಮಭಿಃ |" (ಬೃ. 1-81ರಿಂದ 85)

ಯಾಸ್ಕಾಚಾರ್ಯರು ತಮ್ಮ ನಿರುಕ್ತದಲ್ಲಿ ಮಂತ್ರದೇವತಾ ನಿರ್ಣಯವನ್ನು ಮಾಡುವ ಬಗೆಯನ್ನು ತಿಳಿಸಿದ್ದಾರೆ. ಯಾವ ದೇವತೆಯನ್ನು ಸ್ತುತಿಸಿ ತಾನು ಅಪೇಕ್ಷಿತಾರ್ಥ ಪಡೆಯಲು ಋಷಿ ಬಯಸುವನೋ ಆ ದೇವತೆಯೇ ಆ ಮಂತ್ರಕ್ಕೆ ದೇವತೆ. "ಯತ್ಕಾಮ ಋಷಿ ಯಸ್ಯಾಂ ದೇವತಾಯಾಂ ಆರ್ಥಪತ್ಯಮಿಚ್ಛನ್ ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ' (ನಿ. 7-1-4) ಎಂದು ಯಾಸ್ಕರು ನಿರೂಪಿಸಿದ್ದಾರೆ. ಅಶ್ವ, ಅಕ್ಷ, ರಥ ಮೊದಲಾದವುಗಳ ಸ್ತುತಿಗಳಲ್ಲಿ ಅವುಗಳಿಗೆ ದೇವತಾತ್ವ ಉಪಪನ್ನವಾಗುವುದೆಂದೇ ಯಾಸ್ಕರ ಮತ. ಒಬ್ಬನೆ ಆದ ಆತ್ಮನಿಗೆ ಇವೆಲ್ಲ ಸಂಬಂಧಿಸುವುದರಿಂದ ಇವುಗಳೆಲ್ಲದರ ಸ್ತುತಿ ಆ ಆತ್ಮನನ್ನೇ ಸ್ತುತಿಸುವುದೆಂದು ಅವರ ಅಭಿಪ್ರಾಯ. 'ಮಹಾಭಾಗ್ಯಾತ್ ದೇವತಾಯಾಃ ಏಕ ಆತ್ಮಾ ಬಹುಧಾ ಸ್ತೂಯತೇ' (ನಿ. 7-4-8) ಎಂದು ಈ ಅಂಶವನ್ನು ಅವರು ಹೇಳಿದ್ದಾರೆ.

ಮಂತ್ರಕಾರರು ಭೂಮಿ, ಅಂತರಿಕ್ಷ, ದ್ಯೌಃ ಎಂದು ಈ ಪ್ರಪಂಚವನ್ನು ಮೂರು ಬಗೆಯಾಗಿ ವಿಭಾಗಿಸಿರುವುದು ಕಂಡುಬರುತ್ತದೆ. ಭೂಮಿಗೆ ಅಗ್ನಿಯೂ, ಅಂತರಿಕ್ಷ ಸ್ಥಾನಕ್ಕೆ ವಾಯುವೃಷ್ಟಿ ವಿದ್ಯುತ್ತುಗಳೂ, ದ್ಯುಲೋಕಕ್ಕೆ ಸೂರ್ಯನೂ ಸಂಬಂಧಿಸಿದ್ದಾರೆ. ದ್ಯುಲೋಕದಲ್ಲಿನ ಕೆಲವರು ದೇವತೆಗಳು ಸ್ವಚ್ಛಂದವಾಗಿ ಮೂರು ಲೋಕಗಳಲ್ಲಿಯೂ ಸಂಚರಿಸಿ ಕರ್ಮಯುತರಾಗಿದ್ದರೆಂದು ವರ್ಣಿಸಲಾಗಿದೆ. ಅಂತರಿಕ್ಷವನ್ನು ಸಮುದ್ರವೆಂದು ನಿರ್ದೇಶಮಾಡಿ, ಅಲ್ಲಿ ಚಲಿಸುವ ಮೋಡಗಳನ್ನು ಅದ್ರಿಗಳೆಂದೂ, ಶಿಲೆಗಳೆಂದೂ ರೂಪಣಮಾಡಿದ್ದಾರೆ. ಯಾಜ್ಞಿಕ ದೃಷ್ಟಿಯಿಂದ

ಪ್ರಧಾನವಾಗಿ ಪೃಥಿವಿಗೆ ಸಂಬಂಧಿಸಿರುವ ಅಗ್ನಿಯು ವಿದ್ಯುದ್ರೂಪದಿಂದ ಅಂತರಿಕ್ಷದಲ್ಲಿಯೂ ದಿವ್ಯಾಗ್ನಿರೂಪದಿಂದ ದ್ಯುಲೋಕದ ಸೂರ್ಯನಾಗಿಯೂ ಶೋಭಿಸುವನೆಂದು ಸ್ತುತಿಸಿದ್ದಾರೆ–(4-1-11). ಈ ನಿರೂಪಣೆಗನುಗುಣವಾಗಿ ಯಾಸ್ಕರು 'ತಿಸ್ರ ಏವ ದೇವತಾ ಇತಿ ನೈರುಕ್ತಾ:' 'ಅಗ್ನಿಃ ಪೃಥಿವೀಸ್ಥಾನೋ ವಾಯುರ್ವೇಂದ್ರೋ ವಾಂತರಿಕ್ಷಸ್ಥಾನಃ ಸೂರ್ಯೋದ್ಯುಸ್ಥಾನಃ' (ನಿ. 7-5-1, 2) ಎಂದು ವಿವರಿಸಿದ್ದಾರೆ. ಈ ದೇವತಾತ್ರಿತಯಕ್ಕೆ ಇರುವ ಐಶ್ವರ್ಯಯೋಗದ ದೆಸೆಯಿಂದ ಅನೇಕಾನೇಕ ಹೆಸರುಗಳಿವೆ. ಈ ಅಂಶವನ್ನು ಬೃಹದ್ದೇವತೆಯಲ್ಲಿಯೂ ಹೀಗೆ ಹೇಳಿದೆ :

> 'ಅಗ್ನಿರಸ್ಮಿನ್ನಥೇಂದ್ರಸ್ತು ಮಧ್ಯತೋ ವಾಯುರೇವ ಚ |
> ಸೂರ್ಯೋ ದಿವೀತಿ ವಿಜ್ಞೇಯಾಃ ತಿಸ್ರ ಏವೇಹ ದೇವತಾಃ ||
> ಏತಾಸಾಮೇವ ಮಾಹಾತ್ಮ್ಯಾತ್ ಸಾಮಾನ್ಯತ್ವಂ ವಿಧೀಯತೇ |
> ತತ್ತತ್‌ಸ್ಥಾನ ವಿಭಾಗೇನ ತತ್ರ ತತ್ರೇಹ ದೃಶ್ಯತೇ ||' (ಬೃ. 1-69, 70)

ಒಬ್ಬನೇ ಮನುಷ್ಯನಿಗೆ ಅವನ ಕೆಲಸಗಳಿಗನುಗುಣವಾಗಿ ಬೇರೆಬೇರೆ ಹೆಸರು ಉಪಪನ್ನವಾಗುವಂತೆ ಒಂದೇ ದೇವತೆಯ ಆಯಾ ಕರ್ಮಗಳಿಗನುಸಾರವಾಗಿ ಬೇರೆಬೇರೆ ಹೆಸರುಗಳು ಸಂಭವಿಸುವುವೆಂದು ಯಾಸ್ಕರ ಮತ.[22] ಋಗ್ವೇದದಲ್ಲಿ ಸ್ತುತಿಸಿರುವ ದೇವತೆಗಳ ಸ್ವರೂಪವನ್ನು ವಿವರಿಸುತ್ತಾ ದೇವತೆಗಳು ಮೂವರೇ ಎಂಬ ನಿರ್ಣಯಕ್ಕೆ ನಿರುಕ್ತಕಾರರು ಬಂದಿದ್ದಾರೆ.[23] ಈ ಕ್ರಮಕ್ಕನುಸಾರವಾಗಿ ಆಯಾಸ್ಥಾನವನ್ನನುಸರಿಸಿ ದೇವತೆಗಳನ್ನು ಕೆಳಗೆ ತೋರಿಸಿರುವಂತೆ ವಿಭಾಗ ಮಾಡಲಾಗಿದೆ.

(ಅ) *ಪೃಥ್ವೀಸ್ಥಾನ ದೇವತೆಗಳು* :- ಅಗ್ನಿ, ಪೃಥ್ವೀ, ಸೋಮ, ನದೀ, ಬೃಹಸ್ಪತಿ.

(ಆ) *ಅಂತರಿಕ್ಷಸ್ಥಾನ ದೇವತೆಗಳು* :- ಇಂದ್ರ, ವಾಯು, ಅಪಾಂನಪಾತ್, ರುದ್ರ, ಮರುತ್, ವಾತ, ಪರ್ಜನ್ಯ, ಆಪಃ.

(ಇ) *ದ್ಯುಸ್ಥಾನ ದೇವತೆಗಳು*:- ದ್ಯೌಃ, ವರುಣ, ಮಿತ್ರ, ಸೂರ್ಯ, ಸವಿತೃ, ಪೂಷನ್, ಅಶ್ವಿನ್, ಉಷಸ್, ರಾತ್ರಿ, ಆದಿತ್ಯಾಃ, ವಿಷ್ಣು.

ಋಗ್ವೇದದಲ್ಲಿ ಉಪವರ್ಣಿತವಾಗಿರುವ ಅಗ್ನೀಂದ್ರಾದಿ ದೇವತೆಗಳು ಪ್ರಕೃತಿಯ ಬೇರೆ ಬೇರೆ ಮುಖಗಳೆಂದೂ ಅವುಗಳಿಗೆ ಚೇತನಧರ್ಮವನ್ನು ಆರೋಪಣೆ ಮಾಡಿ ವರ್ಣಿಸಲಾಗಿದೆಯೆಂದೂ ಕೆಲವರು ಆಧುನಿಕ ವಿಮರ್ಶಕರು ವಿವೇಚಿಸಿದ್ದಾರೆ. ಹೀಗಾಗಿ ಅನೇಕ ದೇವತೆಗಳಿಗೆ ಸಮಾನಧರ್ಮಗಳನ್ನು ಹೇಳಿದ್ದಾರೆಂದೂ, ಸ್ವರೂಪತಃ ಮತ್ತು ಸ್ವಭಾವತಃ ಭಿನ್ನಭಿನ್ನವಾದ ರೂಪಗಳಿಂದ ಅವರನ್ನು ವರ್ಣಿಸಿಲ್ಲವೆಂದೂ, ಇವರ ಅಭಿಪ್ರಾಯ.[24] ಒಂದೊಂದು ದೇವತೆಗೂ ಬೇರೆಬೇರೆ ಧರ್ಮಗಳನ್ನು ವಿಶಿಷ್ಟವಾದ ರೀತಿಯಲ್ಲಿ ಹೇಳಿಲ್ಲ ಎಂಬುದು ಇವರ ಭಾವ. ಉಷಸ್, ಸೂರ್ಯ, ಅಗ್ನಿ ಮೊದಲಾದ ದೇವತೆಗಳು ಮೂವರೂ ಪ್ರಕಾಶಮಾನರಾದ ತಮೋನಿವಾರಕರೆಂದೂ ಪ್ರಾತಃಕಾಲದಲ್ಲಿ ಬರುವರೆಂದೂ ವರ್ಣಿಸಿರುವುದನ್ನು ಇದಕ್ಕೆ ಉದಾಹರಿಸಲಾಗಿದೆ. ಪ್ರಕೃತಿಯ ಒಂದು ಅಂಶವನ್ನೇ ಪ್ರತಿಬಿಂಬಿಸುವ ದೇವತೆಯೊಂದರ ಅನೇಕಾನೇಕ ಗುಣಗಳನ್ನು ಅನೇಕ ದೇವತೆಗಳ ರೂಪದಲ್ಲಿ ಸ್ತುತಿಸಲಾಗಿದೆ. ಈ ಸೂಕ್ತಗಳಲ್ಲಿ ದೇವತೆಗಳನ್ನು ವರ್ಣಿಸುವಾಗ ಒಬ್ಬೊಬ್ಬ ದೇವತೆಯೂ ಸರ್ವೋತ್ಕೃಷ್ಟ ವೆಂದೂ, ಸರ್ವತಂತ್ರಸ್ವತಂತ್ರವೆಂದೂ ಸ್ತುತಿಸಿರುವುದನ್ನು ಕಾಣಬಹುದು. ದ್ಯಾವಾಪೃಥಿವಿಗಳನ್ನು ಸೃಜಿಸಿ

22. ನಿರುಕ್ತ 7-5-3.
23. ಋ. ಸಂ. 10-158-1 ನೋಡಿ.
24. Macdonell, Vedic Mythology, P. 15.

ಧರಿಸಿರುವರೆಂದು ಇಂದ್ರ, ಅಗ್ನಿ, ವರುಣ ಮೊದಲಾದ ಅನೇಕಾನೇಕ ದೇವತೆಗಳನ್ನು ಸ್ತುತಿಸಿದ್ದಾರೆ. ಅಥರ್ವವೇದದಲ್ಲಿ ಮಂತ್ರಿತವಾದ ದರ್ಭಮುಷ್ಟಿಯಿಂದ ದ್ಯಾವಾಪೃಥಿವಿಗಳು ನಿಂತಿದ್ದಾರೆಂದೂ ಹೇಳಿದೆ.[25] ಸ್ಥಾವರಜಂಗಮಗಳಿಗೆಲ್ಲಾ ಪ್ರಭುಗಳೆಂದು ಸೂರ್ಯ, ಸವಿತೃ, ಇಂದ್ರ, ಪೂಷನ್, ಪರ್ಜನ್ಯ ಮೊದಲಾದ ಅನೇಕ ದೇವತೆಗಳನ್ನು ಹೇಳಿದ್ದಾರೆ. ಹೀಗೆ ಋಗ್ವೇದ ದೇವತೆಗಳಿಗೆ ಸಮಾನವಾದ ಧರ್ಮಗಳೇ ಇರುವುವೆಂದೂ ಅವರಲ್ಲಿ ವೈಶಿಷ್ಟ್ಯ ಅಥವಾ ಸ್ವಾಪ್ಸ್ಯವಿಲ್ಲವೆಂದೂ ನಿರೂಪಿಸಲಾಗಿದೆ.

ಋಗ್ವೇದ ದೇವತೆಗಳಲ್ಲಿ ಕೆಲವರು ಪ್ರಾಕೃತ ಪದಾರ್ಥಗಳನ್ನು ಪ್ರತಿಬಿಂಬಿಸುವರೆಂದು ಹೇಳಿದರೂ ಮತ್ತೆ ಕೆಲವರು ಪ್ರಕೃತಿಯ ಸಂಬಂಧದಿಂದ ದೂರವಾಗಿಬಿಟ್ಟಿದ್ದಾರೆ. ಅಂಥ ದೇವತೆಗಳು ಮೊದಲು ಪ್ರಕೃತಿಯ ಯಾವ ಅಂಶವನ್ನು ಪ್ರತಿನಿಧಿಸುತ್ತಿದ್ದರೆಂದು ಹೇಳುವುದು ಬಹಳ ಕಷ್ಟ. ಅಶ್ವಿನೀದೇವತೆಗಳು ಇಂಥವರು. ಇವರು ಯಾರು ಎಂಬ ವಿಚಾರದಲ್ಲಿ ಐಕಕಂಠ್ಯವಿಲ್ಲದಿರುವುದು ಯಾಸ್ಕರ ನಿರುಕ್ತದಿಂದ ಕಂಡುಬರುತ್ತದೆ.[26] ಪೂಷನ್ ದೇವತೆಯ ಸ್ವರೂಪವನ್ನು ಸರಿಯಾಗಿ ವಿವರಿಸುವುದಕ್ಕಾಗುವುದಿಲ್ಲ. ಈ ವಿಧವಾದ ಸಂದಿಗ್ಧತೆಗೆ ಕಾರಣ ಸಂಹಿತೆಗಳಿಗೂ ಬ್ರಾಹ್ಮಣ ಗ್ರಂಥಗಳಿಗೂ ಇರುವ ಮಹತ್ತರವಾದ ಕಾಲದ ಅಂತರ. ಯಾಸ್ಕರು ದೇವತೆಗಳನ್ನು ಕುರಿತ ಭಿನ್ನಾಭಿಪ್ರಾಯಗಳನ್ನು ಸೂಚಿಸಿದ್ದಾರೆ. ವೃತ್ರವಧದ ನಿರೂಪಣೆ ಇಂಥ ಒಂದು ಮುಖ್ಯವಾದ ವಿವಾದಾಸ್ಪದವಾದ ವಿಚಾರ. ಮೇಘೋದರಾಂತರ್ಗತವಾದ ಜಲವೂ ವೈದ್ಯುತ ಜ್ಯೋತಿಯೂ ಇಂದ್ರಾಖ್ಯವಾದ ವಾಯುವಿನಿಂದ ವೇಷ್ಟಿತವಾಗಿ ಜಲವರ್ಷವಾಗುವುದೆಂದೂ, ಉದಕತೇಜಸ್ಸುಗಳು ಇತರೇತರ ಪ್ರತಿದ್ವಂದ್ವಿಗಳಾದುದರಿಂದ ಯುದ್ಧವರ್ಣನೆ ಮಾಡಿದೆಯೆಂದೂ ಯಾಸ್ಕರು ವೃತ್ರವಧದ ಅರ್ಥವನ್ನು ವಿವರಿಸುತ್ತಾ ಪ್ರಕೃತಿಸಂಬಂಧವಾದ ಅರ್ಥವನ್ನು ಹೇಳುತ್ತಾರೆ'–ಅಪಾಂ ಚ ಜ್ಯೋತಿಷಶ್ಚ ಮಿಶ್ರೀಭಾವಕರ್ಮಣಃ ವರ್ಷಕರ್ಮ ಜಾಯತೇ | ತತ್ರೋಪಮಾರ್ಥೇನ ಯುದ್ಧವರ್ಣಾ ಭವಂತಿ |'[27] ಎಂದು. ನೈರುಕ್ತರು ವೃತ್ರವಧವನ್ನು ವರ್ಷಕರ್ಮವೆಂದರೆ ಐತಿಹಾಸಿಕರು ತ್ವಷ್ಟೃಪುತ್ರನಾದ ವೃತ್ರಾಸುರನ ವಧೆಯೆಂದು ವರ್ಣಿಸುವರು. ಆಧುನಿಕರಾದರೋ ಅನೇಕ ಬಗೆಯಾದ ಪ್ರಾಕೃತಿಕವಾದ ಅರ್ಥವನ್ನೇ ಹೇಳುವರು.[28] ಸೂರ್ಯ, ಸೋಮ, ಅಗ್ನಿ, ದ್ಯೌಃ, ಮರುತ್, ವಾಯು, ಆಪಃ, ಉಷಸ್, ಪೃಥ್ವೀ ಮೊದಲಾದ ದೇವತೆಗಳು ಪ್ರಕೃತಿಯ ನಾನಾ ರೂಪಗಳೆಂದು ಕಾಣಬಹುದು. ಹಾಗೆಯೇ ಇಂದ್ರ, ವರುಣ, ವಿಷ್ಣು, ಪೂಷನ್, ಅಶ್ವಿನ್, ರುದ್ರ, ಪರ್ಜನ್ಯ ಮೊದಲಾದವರೂ ಪ್ರಕೃತಿಗೇ ಸಂಬಂಧಿಸಿದ್ದಾರೆಂದು ತಿಳಿಯಬಹುದು. ಈ ದೇವತೆಗಳಲ್ಲಿ ಕೆಲವರು ಪ್ರಕೃತಿ ಸಂಬಂಧವನ್ನು ಹೊಂದಿರುವುದು ಸ್ಪಷ್ಟವಾಗಿದೆ. ಮತ್ತೆ ಕೆಲವರು ಪ್ರಕೃತಿಯ ಯಾವ ಅಂಶವನ್ನು ಪ್ರತಿನಿಧಿಸುವರೆಂಬುದು ಅಸ್ಪಷ್ಟವಾಗಿದೆ.[29]

25. ಅ. ವೇದ-19-32.
26. ನಿರುಕ್ತ-12-1.
27. ನಿರುಕ್ತ 2-16-22.
28. ನಿರುಕ್ತ–ಎಸ್. ಎಸ್. ಅನಂತರಂಗಾಚಾರ್ಯ, ಪುಟ 38.

*29.* On the whole, the classification of the vedic deities least open to objection is that founded on the natural bases which they represent. For, though in some cases there may be a doubt as to what the physical substrate really is, and a risk is therefore involved of describing a particular deity in the wrong place, this method offers the advantage of bringing together deities of cognate character thus facilitating comparision. (Vedic Mythology-Macdonell, pp.18—21)

ಋಗ್ವೇದದಲ್ಲಿ ಅನೇಕ ಗುಣಗಳನ್ನು ದೇವತೆಗಳಂತೆ ಸ್ತುತಿಸಿದ್ದಾರೆ. ಧಾತೃ, ತ್ವಷ್ಟೃ, ವಿಶ್ವಕರ್ಮನ್, ಪ್ರಜಾಪತಿ, ಮನ್ಯು, ಶ್ರದ್ಧೆ, ಅದಿತಿ, ದಿತಿ ಮೊದಲಾದವರನ್ನು ವರ್ಣಿಸುವ ಸೂಕ್ತಗಳಲ್ಲಿ ಈ ಅಂಶವನ್ನು ಕಾಣಬಹುದು. ಧಾತೃ ಎಂಬ ಶಬ್ದ ಸೃಷ್ಟಿ ಮಾಡುವವನು ಎಂಬ ಧರ್ಮವನ್ನವಲಂಬಿಸಿ ಬಂದಿದೆ. ಇಂದ್ರನ ಕೋಪ ಮನ್ಯುವಾಗಿ ಮನ್ಯುಸೂಕ್ತದಲ್ಲಿ ವರ್ಣಿಸಲ್ಪಟ್ಟಿದೆ. ಶ್ರದ್ಧೆಯಿಂದ ಸರ್ವಸುಖವೂ ಪ್ರಾಪ್ತವಾಗುವುದೆಂದು ಹೇಳುವ ಶ್ರದ್ಧಾ ಸೂಕ್ತ ಗುಣರೂಪಣ ಮಾಡುತ್ತದೆ. ಅರಂತಿ ಅಥವಾ ಪಾರಿಶುದ್ಧ್ಯವೂ ಹೀಗೆಯೇ ಸ್ತುತಿಸಲ್ಪಟ್ಟಿದೆ. ಸೂನೃತ, ಅಸುನೀತಿ ಮತ್ತು ನಿರ್ಋತಿ ಇವೂ ಹೀಗೆಯೇ ದೇವತೆಯ ರೀತಿ ಸ್ತುತಿಸಲ್ಪಟ್ಟಿವೆ.[30]

ಅನೇಕ ಸ್ತ್ರೀದೇವತೆಗಳ ಸ್ತುತಿಯೂ ಋಕ್ಸಂಹಿತೆಯಲ್ಲಿದೆ. ಇವರು ಇತರ ದೇವತೆಗಳಷ್ಟು ಪ್ರಧಾನರಾಗಿಲ್ಲ. ಉಷಸ್ಸು ಮಾತ್ರ ಎಲ್ಲ ಸ್ತ್ರೀದೇವತೆಗಳಿಗಿಂತ ಪ್ರಧಾನಳಾಗಿದ್ದಾಳೆ. ಸರಸ್ವತೀ, ಪೃಥ್ವೀ, ರಾತ್ರೀ, ವಾಕ್, ಸಮೃದ್ಧಿಯನ್ನನುಗ್ರಹಿಸುವ ಪುರಂಧಿ ಮತ್ತು ದಿಷಣಾ, ಇಳಾ, ರಾಕಾ, ಸಿನೀವಾಲೀ, ಪೃಶ್ನಿ (ಮರುತ್ತುಗಳ ತಾಯಿ) ಮೊದಲಾದ ಸ್ತ್ರೀದೇವತೆಗಳ ಸ್ತುತಿಗಳು ಇಲ್ಲಿವೆ. ದೇವತಾಪತ್ನಿಗಳ ಹೆಸರನ್ನೂ ಅಲ್ಲಲ್ಲಿ ಉಲ್ಲೇಖಿಸಿ ಸ್ತುತಿಸಲಾಗಿದೆ. ಇಂದ್ರಾಣೀ, ವರುಣಾನೀ, ಅಗ್ನಾಯೀ, ದೇವಾನಾಂಪತ್ನೀ ಮೊದಲಾದವು ಇಂಥವು.

ದೇವತಾ ದ್ವಂದ್ವಗಳನ್ನು ಅಥವಾ ದ್ವಿತ್ವಗಳನ್ನು ಒಟ್ಟಿಗೆ ಸ್ತುತಿಸಿರುವುದು ಋಗ್ವೇದದ ವೈಶಿಷ್ಟ್ಯ. ದೇವತೆಗಳಿಬ್ಬರ ಹೆಸರನ್ನು ಒಟ್ಟಿಗೆ ಸೇರಿಸಿ ಅವರಿಬ್ಬರನ್ನೂ ಒಟ್ಟಿಗೆ ಇಂಥ ಸೂಕ್ತಗಳಲ್ಲಿ ಸ್ತುತಿಸಲಾಗಿದೆ. ಇಂಥ ಸೂಕ್ತಗಳು ಸುಮಾರು ಅರವತ್ತು ಇವೆ. ಮಿತ್ರಾವರುಣೌ, ಇಂದ್ರಾಗ್ನೀ, ಇಂದ್ರಾವರುಣೌ, ಇಂದ್ರಾವಾಯೂ, ದ್ಯಾವಾಪೃಥಿವೀ, ಇಂದ್ರಾಸೋಮೌ, ಇಂದ್ರಾಬೃಹಸ್ಪತೀ, ಇಂದ್ರಾವಿಷ್ಣೂ, ಇಂದ್ರಾಪೂಷಾಣೌ, ಸೋಮಾಪೂಷಾಣೌ, ಸೋಮಾರುದ್ರೌ, ಅಗ್ನೀಸೋಮೌ, ಅಗ್ನಾವಿಷ್ಣೌ, ಇಂದ್ರಾನಾಸತ್ಯೌ, ಇಂದ್ರಾಪರ್ವತಾ, ಅಗ್ನೀಪರ್ಜನ್ಯೌ, ಪರ್ಜನ್ಯಾವಾತೌ, ಉಷಸಾನಕ್ತೌ, ಸೂರ್ಯಾಮಾಸಾ, ಸೂರ್ಯಾಚಂದ್ರಮಸೌ ಎಂಬವು ಇಂಥ ಪ್ರಸಿದ್ಧವಾದ ದೇವತಾ ದ್ವಂದ್ವಗಳು.

ದೇವತಾ ದ್ವಂದ್ವಗಳನ್ನು ಹೇಗೆಯೋ ಹಾಗೆಯೇ ದೇವತಾ ಸಮೂಹಗಳನ್ನೂ ಒಟ್ಟಿಗೆ ಸ್ತುತಿಸಿರುವ ಸೂಕ್ತಗಳೂ ಋಕ್ಸಂಹಿತೆಯಲ್ಲಿವೆ. ಇಂಥ ದೇವತಾಸ್ತೋಮಗಳಲ್ಲಿ ಪ್ರಧಾನವಾದುದು ಮರುದ್ಗಣ. ಈ ಮರುತ್ತುಗಳ ಸಂಖ್ಯೆ 21 ರಿಂದ 180ರವರೆಗೆ ಹೇಳಿದ್ದಾರೆ. ಇಂದ್ರನ ಸಾಹಸಗಳಲ್ಲಿ ಇವರು ನೆರವಾಗುವವರು. ಈ ಮರುದ್ಗಣವನ್ನು 'ರುದ್ರಾಃ' ಎಂದು ಹೇಳಿ ಪ್ರಾಸಂಗಿಕವಾಗಿ ಅವರ ತಂದೆಯಾದ ರುದ್ರನೊಡನೆಯೂ ಸೇರಿಸಿ ಹೇಳಿದ್ದಾರೆ.[31] ಮರುದ್ಗಣಗಳಿಗಿಂತ ಆದಿತ್ಯಗಣ ಸಂಖ್ಯೆಯಲ್ಲಿ ಸಣ್ಣದು. ಏಳು ಅಥವಾ ಎಂಟು ದೇವತೆಗಳಿರುವ ಗಣ ಇದು.

> 'ಶೃಣೋತು ಮಿತ್ರೋ ಅರ್ಯಮಾ ಭಗೋ
> ನಸ್ತುವಿಜಾತೋ ವರುಣೋ ದಕ್ಷೋ ಅಂಶಃ |' (2-27-1)

ಎಂದು ಈ ದೇವತೆಗಳನ್ನು ಉಲ್ಲೇಖಿಸಿದೆ. ಅಂಗಿರಸಃ, ವಸವಃ, ಋಭವಃ ಮೊದಲಾದವರು ಇನ್ನು ಕೆಲವು ದೇವತಾಗಣಗಳು. ಆದಿತ್ಯಗಣ, ರುದ್ರಗಣ, ವಸುಗಣಗಳನ್ನು ಒಟ್ಟಿಗೆ ಅನೇಕ

30. ಋ. ಸಂ. ಮನ್ಯುಸೂಕ್ತ 10-83, 84; ಶ್ರದ್ಧಾ 10-151 ; ಸೂನೃತ 1-40-3, 10-141-2; ಅಸುನೀತಿ 10-59-5; 6.

31. ಋ. ಸಂ. 7-10-4.

ಕಡೆ ಉಲ್ಲೇಖಿಸಿದ್ದಾರೆ.[32] ಬ್ರಾಹ್ಮಣ ಗ್ರಂಥಗಳು ಪೃಥ್ವಿಯ ವಸುಗಳು, ಅಂತರಿಕ್ಷದ ರುದ್ರರು ಮತ್ತು ದ್ಯುಲೋಕದ ಆದಿತ್ಯರೆಂದು ದೇವತೆಗಳನ್ನು ಮೂರು ಗುಂಪುಗಳಲ್ಲಿ ಹೇಳುತ್ತವೆ.[33] ಆದರೆ ಛಾಂದೋಗ್ಯೋಪನಿಷತ್ತಿನಲ್ಲಿ ದೇವತೆಗಳನ್ನು ವಸುಗಳು, ರುದ್ರರು, ಆದಿತ್ಯರು, ಮರುತ್ತುಗಳು ಮತ್ತು ಸಾಧ್ಯರೆಂದು ಐದು ಗುಂಪುಗಳನ್ನಾಗಿ ವಿಂಗಡಿಸಿದೆ.[34] ಅಂಗಿರಸರ ಗಣ ಬೃಹಸ್ಪತಿಯೊಡನೆ ಸಂಬಂಧಿಸಿದೆ. ಋಭುಗಳು ಮೂವರು. ಇವರಲ್ಲಿ ಕನಿಷ್ಠನನ್ನು ಇಂದ್ರನೊಡನೆ ಸೇರಿಸಿ ಹೇಳಿದೆ. ಕೊನೆಯದಾಗಿ ಸರ್ವದೇವತೆಗಳನ್ನೊಳಗೊಂಡ ವಿಶ್ವೇದೇವಾಃ ಎಂಬ ದೇವತಾಗಣ ಬಹಳ ಮುಖ್ಯವಾಗಿ ಯಾಗಾದಿಗಳಲ್ಲಿ ಪ್ರಧಾನವಾದ ಸ್ಥಾನವನ್ನು ಹೊಂದಿತು. ಈ ಗಣವನ್ನು ಸುಮಾರು ನಲವತ್ತು ಸೂಕ್ತಗಳಲ್ಲಿ ಸ್ತೋತ್ರ ಮಾಡಿದೆ. ವಿಶ್ವೇದೇವತೆಗಳ ಸ್ತುತಿಯಿಂದ ಯಾವ ದೇವತೆಯನ್ನೂ ಬಿಡದೆ ಸ್ತುತಿಸಿದಂತಾಗುತ್ತದೆ.

## ದೇವತೆಗಳ ಜನ್ಮವಿಚಾರ

ಋಗ್ವೇದ ದೃಷ್ಟಿಯಿಂದ ದೇವತೆಗಳಿಗೆ ಜನ್ಮವುಂಟು. ಕೆಲವು ದೇವತೆಗಳು ದ್ಯಾವಾಪೃಥಿವಿಗಳಿಂದಲೂ, ಮತ್ತೆ ಕೆಲವರು ಇತರ ದೇವತೆಗಳಿಂದಲೂ ಹುಟ್ಟುವರೆಂದು ವರ್ಣಿಸಲಾಗಿದೆ. ಇದರಿಂದ ಪಾಶ್ಚಾತ್ಯ ವಿಮರ್ಶಕರು ದೇವತೆಗಳು ಭಿನ್ನಭಿನ್ನ ವಂಶಾಶ್ರಿತ ರೆಂದೂ, ಮೊದಲು ಅವರೂ ಅಮರರಾಗಿರಲಿಲ್ಲವೆಂದೂ, ಅವರಿಗೆ ಅಮರತ್ವ ಅಗ್ನಿ, ಸಾವಿತ್ರೀ ಮೊದಲಾದ ದೇವತೆಗಳಿಂದಲೂ ಸೋಮಪಾನದಿಂದಲೂ ಪ್ರಾಪ್ತವಾಯಿತೆಂದೂ, ಅಗ್ನೀಂದ್ರಾದಿ ದೇವತೆಗಳು ಮಾತ್ರ ನಿರ್ಜರರೆಂದು ಹೇಳಲ್ಪಟ್ಟಿರುವರೆಂದೂ ಅಭಿಪ್ರಾಯ ಪಡುತ್ತಾರೆ. ನಿರ್ಜರತ್ವ ನಿತ್ಯವೇ ಅನಿತ್ಯವೇ ಎಂಬುದು ಋಗ್ವೇದದಲ್ಲಿ ಸ್ಪಷ್ಟವಾಗಿಲ್ಲವೆಂದೂ, ಲೌಕಿಕ ಸಂಸ್ಕೃತ ಗ್ರಂಥಗಳಲ್ಲಿ ಪ್ರಳಯ ಕಾಲದವರೆಗೆ ದೇವತೆಗಳಿರುವರೆಂದು ಹೇಳಿರುವ ಕಾರಣ ನಿರ್ಜರತ್ವ ನಿತ್ಯವಿರಲಾರದೆಂದೂ ಇವರು ಊಹಿಸುತ್ತಾರೆ. ಈ ಅಂಶವನ್ನು ನಿರುಕ್ತದಲ್ಲಿ ಯಾಸ್ಕರು ಚರ್ಚಿಸಿದ್ದಾರೆ. ಮನುಷ್ಯಧರ್ಮ ದೇವತಾಧರ್ಮಕ್ಕಿಂತ ಬೇರೆಯಾದುದು. ದೇವತೆಗಳಿಗೆ ಮಹಾಭಾಗ್ಯದ ಯೋಗವಿದೆ. ಅವರು ಪರಸ್ಪರ ಜನ್ಮಕೊಡಬಲ್ಲರು. 'ಇತರೇತರ ಜನ್ಮಾನೋ ಭವಂತಿ ಇತರೇತರ ಪ್ರಕೃತಯಃ' (ನಿ. 7-4-12). ಮನುಷ್ಯರಲ್ಲಿ ತಂದೆ ಮಗನಿಗೆ ಜನ್ಮ ಕೊಡಬಲ್ಲ. ಆದರೆ ಮಗ ಹೇಗಾದರೂ ತಂದೆಗೆ ಜನ್ಮ ಕೊಡಲಾರ. ದೇವತೆಗಳ ವಿಚಾರ ಹೀಗಲ್ಲ. 'ಏಷ ಪ್ರಾತಃ ಪ್ರಸುವತಿ' ಇತಿಹ ವಿಜ್ಞಾಯತೇ, ಎಂದು ಹೇಳಿದಂತೆ ಅಗ್ನಿಯಿಂದ ಸೂರ್ಯ ಹುಟ್ಟಿದ. ಸೂರ್ಯನಿಗೆ ಅಗ್ನಿ ಪ್ರಕೃತಿ. ಆದರೆ ಸಂಜೆ ಸೂರ್ಯನಿಂದ ಅಗ್ನಿ ಹುಟ್ಟಿದನೆಂದು ಹೇಳಿದೆ. ಆದುದರಿಂದ ಸೂರ್ಯ ಅಗ್ನಿಗೆ ಪ್ರಕೃತಿ. ಹೀಗೆಯೇ ಅದಿತಿಯಿಂದ ದಕ್ಷನೂ, ದಕ್ಷನಿಂದ ಅದಿತಿಯೂ ಹುಟ್ಟಿದರೆಂದು ಹೇಳಿದೆ. ದೇವತೆಗಳ ಆನಂತ್ಯದಿಂದಲೂ ಸಾಮರ್ಥ್ಯದಿಂದಲೂ ಇಂಥ ಅಚಿಂತ್ಯವಾದ ಜನ್ಮಗಳು ಸಂಭವಿಸುವುವು. ಹಾಗಾದರೆ ಈಶ್ವರರೂ, ಅಚಿಂತ್ಯಶಕ್ತಿ ಸ್ವರೂಪರೂ ಆದ ದೇವತೆಗಳೇಕೆ ಜನಿಸಬೇಕು ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಯಾಸ್ಕರು 'ಕರ್ಮಜನ್ಮಾನಃ' ಎಂದು ಉತ್ತರಿಸುತ್ತಾರೆ. ದೇವತೆಗಳಿಗೆ

32. ಋ. ಸಂ. 2-31-1 ; 10-66-12.

33. ಶತಪಥ ಬ್ರಾಹ್ಮಣ 1-3-4-12 ; 4-3-5-1.

34. ಛಾಂ. ಉ. 3, 6-10

35. 'ಯದೇಷಾಂ ಇಚ್ಛಾಕೃತಾಂ ಸಂಕಲ್ಪಾನುವಿಧಾಯಿಕರ್ಮಾನುರೂಪಂ ಯಥಾಕಾಲವಾತ್ಮನಃ ಕಾರ್ಯಕಾರಣಮುತ್ಪದ್ಯತೇತರದೇತೇಷಾಂ ಜನ್ಮ' (ದುರ್ಗಭಾಷ್ಯ ನಿ. 7-5-14)

ಐಶ್ವರ್ಯಯೋಗವಿದ್ದಾಗ್ಯೂ ಈಶಿತವ್ಯರಿಲ್ಲದಿದ್ದರೆ ಪ್ರಖ್ಯಾತಿಯನ್ನು ಪಡೆಯರು. ದಾನಿಯ ದಾತೃತ್ವ ಪ್ರಕಾಶಕ್ಕೆ ಬರಬೇಕಾದರೆ ದಾನ ತೆಗೆದುಕೊಳ್ಳುವವರು ಇದ್ದೇ ಇರಬೇಕು. ಹಾಗೆಯೇ ಈ ದೇವತೆಗಳೂ ಸಹ ಲೋಕದ ಕರ್ಮಫಲಸಿದ್ಧಿಗಾಗಿ ಅಗ್ನಿವಾಯುಸೂರ್ಯರಾಗಿ ಜನಿಸುತ್ತಾರೆ. ಇವರು ಜನಿಸದಿದ್ದರೆ ಕರ್ಮಫಲ ಸಿದ್ಧಿಯಾಗದು. ಅದರಿಂದ ದೇವತೆಗಳು ಹೀಗೆ ಜನ್ಮ ತಾಳುತ್ತಾರೆ. ಲೋಕವನ್ನು ಅನುಗ್ರಹಿಸಲಿಚ್ಛಿಸುವ ದೇವತೆಗಳು ಮತ್ತೆಮತ್ತೆ ಏಕೆ ಹುಟ್ಟುತ್ತಾರೆನ್ನುವುದಕ್ಕೆ 'ಆತ್ಮಜನ್ಮಾನಃ' (ನಿ. 7-5-14) ಎಂದು ಯಾಸ್ಕರು ಹೇಳುತ್ತಾರೆ. ಇಲ್ಲಿ ಸ್ತುತಿಸುವುದು ಒಬ್ಬನೇ ಆತ್ಮನನ್ನು ಎಂದೂ ಇತರ ದೇವತೆಗಳು ಅವನ ಅಂಗಪ್ರತ್ಯಂಗಗಳೆಂದೂ ಹೇಳಿರುವಂತೆ ಎಲ್ಲ ದೇವತೆಗಳೂ ಆ ಆತ್ಮನಿಂದ ಹುಟ್ಟುತ್ತಾರೆ. ಸ್ಥಿತಿ ಕಾಲದಲ್ಲಿ ಅವನು ಸರ್ವಮೂರ್ತಿ. ಪ್ರಳಯ ಕಾಲದಲ್ಲಿ ಉಪರತ ಸರ್ವಮೂರ್ತಿಯಾಗಿ ಸಚ್ಛಬ್ದಾಭಿಧೇಯನಾಗುವವನು. ಎಲ್ಲರೂ ಅವನಿಂದಲೇ ಹುಟ್ಟುತ್ತಾರೆ. ಆದರೆ ಅನೀಶ್ವರರಾದವರು ಸ್ವೇಚ್ಛೆಯಿಂದ ಜನಿಸಲಾರರು. ಆದರೆ ಐಶ್ವರ್ಯಯೋಗವುಳ್ಳ ದೇವತೆಗಳು ಆ ಸರ್ವಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾ, ನೋಡುತ್ತಾ ಯೋಗಶಕ್ತಿಯಿಂದ ಸ್ವಸಂಕಲ್ಪದಿಂದಲೇ ಜನ್ಮತಾಳುತ್ತಾರೆ. ದೇವತೆಗಳು ಜನ್ಮ ತಾಳುವರೆಂದರೇನು ? ಇವರ ಸಂಕಲ್ಪಕ್ಕೆ ಅನುಗುಣವಾಗಿ ಆಯಾಕಾಲದಲ್ಲಿ ಅವರವರ ಕಾರ್ಯಗಳು ಕಾರಣಗಳು ತಲೆದೋರುವುದೇ ಇವರ ಜನ್ಮವೆಂದು ಹೇಳಬಹುದು.[35] ಈ ರೀತಿಯಲ್ಲಿ ಯಾಸ್ಕಾಚಾರ್ಯರ ದೃಷ್ಟಿಯಲ್ಲಿ ದೇವತೆಗಳಿಗೆ ಇತರೇತರ ಜನ್ಮತ್ವ ಅವರ ಮಹಾಭಾಗ್ಯದ ಕುರುಹಾಗಿ ಅವರ ಸರ್ವಶಕ್ತಿತ್ವವನ್ನು ಪ್ರಕಟಪಡಿಸುತ್ತದೆ.

## ದೇವತೆಗಳ ಆಕಾರ ವಿಚಾರ

ದೇವತೆಗಳಿಗೆ ರೂಪವಿದೆಯೇ ಇಲ್ಲವೇ ಎಂಬ ಪ್ರಶ್ನೆಯನ್ನು ಯಾಸ್ಕರು ನಿರುಕ್ತದಲ್ಲಿ ಚರ್ಚಿಸಿದ್ದಾರೆ.[36] ಪುರುಷವಿಧವಾದ ಆಕಾರವುಂಟೆಂದು ಕೆಲವರು ಹೇಳಿದರೆ ಪುರುಷವಿಧವಾದ ಆಕಾರವಿಲ್ಲವೆಂದು ಮತ್ತೆ ಕೆಲವರು ಹೇಳುವರು. ಇವೆರಡು ಪಕ್ಷಗಳನ್ನೂ ಅನುವಾದ ಮಾಡಿ ಯಾಸ್ಕರು ದೇವತೆಗಳು ಉಭಯವಿಧರಾಗಿದ್ದಾರೆಂದು ನಿರ್ಣಯಿಸುತ್ತಾರೆ. ಪೃಥಿವೀ, ಜಲ, ವಾಯು ಮೊದಲಾದ ರೂಪದಲ್ಲಿ ಪುರುಷಾಕಾರ ರಹಿತರಾಗಿಯೂ ಆಯಾ ಅಭಿಮಾನಿದೇವತೆಗಳ ರೂಪದಲ್ಲಿ ಪುರುಷವಿಧವಾದ ರೂಪವನ್ನು ಹೊಂದಿಯೂ ಇರುವರೆಂದೂ ಇವರ ಮತ.'ಏಷ ಚ ಆಖ್ಯಾನ ಸಮಯಃ'[37] ಎಂದು ಆಖ್ಯಾನಗಳನ್ನು ಉದಹರಿಸಿ ಈ ಅಭಿಪ್ರಾಯವನ್ನು ಇವರು ಸಮರ್ಥಿಸಿದ್ದಾರೆ. ಪೃಥ್ವೀ ಸ್ತ್ರೀರೂಪದಿಂದ ಹೋಗಿ ಭಗವಂತನಲ್ಲಿ ಮೊರೆಯಿಟ್ಟುದೂ, ಅಗ್ನಿ ವಿಪ್ರವೇಷದಿಂದ ಖಾಂಡವವನವನ್ನು ದಹಿಸಲಿಚ್ಛಿಸಿದುದೂ ಇಲ್ಲಿ ವಿವರಣೆಯನ್ನು ನೀಡುತ್ತವೆ.

ಮನುಷ್ಯೋಚಿತವಾದ ಶಿರಸ್ಸು, ಮುಖ, ಕಣ್ಣು, ಭುಜಗಳು, ಪಾಣಿಪಾದಗಳು, ಬಾಹು, ಮುಷ್ಟಿ ಮೊದಲಾದ ಅವಯವಗಳಿಂದ ದೇವತೆಗಳು ಸಂಯುಕ್ತರಾಗಿದ್ದಾರೆಂದು ವರ್ಣಿಸಿರುವುದರಿಂದಲೇ ದೇವತೆಗಳು ಪುರುಷವಿಧವಾದ ಆಕಾರವನ್ನು ಹೊಂದಿದ್ದಾರೆಂದು ತಿಳಿಯುವುದು. ಇವರ ಶರೀರ ಛಾಯಾರೂಪವಾಗಿ ಅದೃಶ್ಯವಾದುದೆಂದು ವರ್ಣಿಸಿದ್ದಾರೆ. ದೇವತೆಗಳ ಈ ಪುರುಷಾಕಾರ ವರ್ಣನೆ ಅವರು ಕರ್ಮಕೌಶಲಸಮರ್ಥವೆಂದು ತಿಳಿಸಲು

36. ನಿರುಕ್ತ (7-6).
37. ನಿರುಕ್ತ (7-7-9)

ಆರೋಪಿಸಲ್ಪಟ್ಟಿದೆಯೆಂದು ಕೆಲವು ವಿಮರ್ಶಕರ ಮತ.[38] ಹೀಗೆ ಅಗ್ನಿಯ ನಾಲಗೆ ಎಂಬುದು ಜ್ವಾಲೆ. ಸೂರ್ಯನ ಹಸ್ತಗಳು ಕಿರಣಗಳು. ಅವನ ಚಕ್ಷುವೆಂಬುವುದು ಮಂಡಲವೇ. ಹೀಗೆ ಪ್ರಾಕೃತವಾದ ಪದಾರ್ಥಗಳ ಧರ್ಮವನ್ನೇ ಮುಂದಿಟ್ಟುಕೊಂಡು ದೇವತೆಗಳನ್ನು ವರ್ಣಿಸಿರುವುದರಿಂದ ಮಂತ್ರಕಾರರ ಹೃದಯದಲ್ಲಿ ದೇವತೆಗಳಿಗೆ ಪುರುಷವಿಧತ್ವದ ಕಲ್ಪನೆ ಇರಲಿಲ್ಲವೆಂದು ಪಾಶ್ಚಾತ್ಯ ವಿಮರ್ಶಕರು ಹೇಳುತ್ತಾರೆ.[39]

ಕೆಲವು ದೇವತೆಗಳು ಯೋಧರಂತೆ ಕವಚಧಾರಿಗಳಾಗಿ ಶಿರಸ್ತ್ರಾಣಾದಿಗಳನ್ನು ಧರಿಸಿ ಕುಂತಕುಠಾರ ಧನುರ್ಬಾಣಾದಿಗಳನ್ನು ಕೈಗಳಲ್ಲಿ ಹೊಂದಿರುವರು. ತೇಜೋಮಯವಾದ ವಿಮಾನಗಳಲ್ಲಿ ಇವರು ಅಂತರಿಕ್ಷಮಾರ್ಗದಲ್ಲಿ ಸಂಚರಿಸುವರು. ಇವರ ರಥಗಳನ್ನು ಅಶ್ವಗಳು, ಹರಿಣಗಳು ಅಥವಾ ಆಡುಗಳು ಎಳೆಯುವುವು. ತಮ್ಮ ತಮ್ಮ ವಿಮಾನಗಳಲ್ಲಿ ಇವರು ಯಾಗ ಭೂಮಿಗೆ ಬಂದು ತಮ್ಮ ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸುವರು. ದೇವತೆಗಳೆಲ್ಲರೂ ಮಹೋಪಕಾರಿಗಳು. ಆರೋಗ್ಯ, ಅಭ್ಯುದಯ ಮೊದಲಾದವುಗಳನ್ನು ಇವರು ಕರುಣಿಸುವರು. ವೃತ್ರನೇ ಮೊದಲಾದ ರಾಕ್ಷಸರಿಂದಾಗುವ ಅತಿವೃಷ್ಟಿ, ಅನಾವೃಷ್ಟಿ, ರೋಗಗಳು ಮೊದಲಾದುವನ್ನು ಇವರು ನಿವಾರಣ ಮಾಡಿ ಸಲಹುತ್ತಾರೆ.

**ದೇವತೆಗಳ ಸ್ವರೂಪ—ನಾನಾತ್ವ—ಏಕತ್ವಗಳ ಸಾಮರಸ್ಯ**

ಋಗ್ವೇದದಲ್ಲಿ ಅನೇಕ ದೇವತೆಗಳನ್ನು ಸ್ತುತಿಸಿರುವುದನ್ನು ಕಾಣುತ್ತೇವೆ. ಆದ್ದರಿಂದ ಋಗ್ವೇದದಲ್ಲಿ ದೇವತಾನಾನಾತ್ವ ಪ್ರತಿಪಾದಿತವಾಗಿದೆಯೆಂದು ಕಾಣುತ್ತದೆ. ಆದರೆ ಅದೇ ಋಗ್ವೇದದ ಇನ್ನು ಕೆಲವು ಭಾಗಗಳು ಈ ಅನೇಕ ದೇವತೆಗಳ ಅಡಿಮಣೆಯ ಮೇಲೆ ದೇವತೈಕ್ಯ ವನ್ನೂ ಪ್ರತಿಪಾದಿಸುತ್ತವೆ. ಆದ್ದರಿಂದ ಇಲ್ಲಿ ಏಕಾದೇವತಾತತ್ವವೇ ಇರುವಂತಿದೆ. ಉಭಯ ವಿಧವಾದ ಪ್ರತಿಪಾದನೆಯೂ ಇಲ್ಲಿರುವುದರಿಂದ ಋಗ್ವೇದಧರ್ಮ ದೇವತಾನಾನಾತ್ವವನ್ನು ಪುರಸ್ಕರಿಸುವುದೋ ಅಥವಾ ಏಕದೇವತಾತ್ವವನ್ನು ಅನುಸಂಧಾನ ಮಾಡುವುದೋ ಎಂಬ ಸಂದೇಹ ಉದಿಸುತ್ತದೆ.

ಗ್ರೀಸ್ ಮೊದಲಾದ ದೇಶಗಳಲ್ಲಿ ದೇವತಾನಾನಾತ್ವ ಪ್ರಚಾರದಲ್ಲಿದ್ದಿತು. ಹಾಗೆಯೇ ಕ್ರೈಸ್ತಮತ ಏಕದೇವತಾತತ್ವವನ್ನು ಸಾರುವುದು. ಆದರೆ ಇವೆರಡೂ ಅಸಾಧಾರಣವಾದ ಕೆಲವು ಧರ್ಮಗಳನ್ನು ಹೊಂದಿವೆ. ಏಕದೇವತಾತತ್ವ ದೇವರು ಒಬ್ಬನೇ ಎಂದೂ ಆತನು ಜಗತ್ಪಿತನೂ, ಕುಲಪತಿಯೂ ಆಗಿ ಸ್ವರ್ಗವೆಂಬ ದಿವ್ಯಸ್ಥಾನದಲ್ಲಿಯೇ ಇರುತ್ತಾ ಅಸಂಖ್ಯರಾದ ದೇವತೆಗಳಿಂದಲೂ ದೇವದೂತರಿಂದಲೂ ಓಲೈಸಲ್ಪಟ್ಟು ಜಗತ್ಪಾಸಕನಾಗಿ ಎಲ್ಲರ ಭಕ್ತಿನಿಷ್ಠೆಯನ್ನು ನಿರೀಕ್ಷಿಸುವನೆಂದೂ ಸಾರುತ್ತದೆ. ಇವನು ತನ್ನ ಪ್ರಜೆಗಳಲ್ಲಿ ಉತ್ತಮರನ್ನು ತನ್ನ ಸ್ಥಾನಕ್ಕೆ ಕರೆದುಕೊಳ್ಳುವನು. ಪಾಪಿಗಳನ್ನು ನರಕಕ್ಕೆ ದೂಡುವನು. ಇವನಿಗೆ ನಿತ್ಯವೈರಿಯೊಬ್ಬನುಂಟು. ಅವನು ಸೈತಾನನೆನಿಸುವನು. ಈ ಸೈತಾನನು ಲೋಕದ ಜನರಿಗೆ ಪ್ರಲೋಭನೆಯನ್ನೊಡ್ಡಿ ಭಗವದ್ವಿರೋಧಿಗಳಾಗಿ ವರ್ತಿಸುವಂತೆ ಯತ್ನಿಸುವನು. ಭೂಮಿಯಲ್ಲಿನ ಜನ ತಮ್ಮ ಪ್ರಭುವೂ ತಂದೆಯೂ ಆದ ದೇವರ ಇಷ್ಟವನ್ನು ತಿಳಿದು ಅವನ ಇಷ್ಟಕ್ಕನುಗುಣವಾಗಿ ನಡೆದರೆ ಧಾರ್ಮಿಕರಾಗುವರು. ಸೈತಾನನ ಪ್ರಲೋಭನೆಗೊಳಗಾದರೆ ಪಾಪಿಗಳಾಗುವರು. ಆದ್ದರಿಂದ

38. *History of Sanskrit Literature, Macdonell (Chap. IV).*
39. *Ibid, Chap. IV.*

ಭಗವತ್ಸಂಕಲ್ಪಕ್ಕನುಸಾರವಾಗಿ ಪ್ರವೃತ್ತಿಯನ್ನು ರೂಪಿಸಿಕೊಂಡು ನಡೆಯುವುದು ಧರ್ಮವಾಗುವುದು. ಇದು ಏಕದೇವತಾತತ್ತ್ವದ ತಿರುಳು.

ಋಗ್ವೇದದಲ್ಲಿ ಮೇಲೆ ವಿವರಿಸಿದ ತತ್ತ್ವದ ಅನೇಕ ಅಂಶಗಳು ಇವೆ. ಆದರೂ ಆ ತತ್ತ್ವಕ್ಕಿಂತಲೂ ಇದು ಬೇರೆಯಾಗಿರುವುದೆಂದು ಕಾಣುತ್ತದೆ. ವೇದಗಳಿಗನುಗುಣವಾಗಿ ದೇವರು ಸ್ವರ್ಗವೆಂಬ ಒಂದೇ ಕಡೆ ಕುಳಿತು ಶಾಸನ ನಡೆಸುವವನಲ್ಲ. ಅವನು ಜಗತ್ತನ್ನೆಲ್ಲಾ ವ್ಯಾಪಿಸಿದ್ದಾನೆ. ದೇವರಿಗೆ ನಿತ್ಯವೈರಿಯೂ ಇಲ್ಲಿಲ್ಲ. ಏಕದೇವತೆಗೆ ಪ್ರತಿಯಾಗಿ ಋಗ್ವೇದ ಋಷಿಗಳು ಅನೇಕ ದೇವತೆಗಳಲ್ಲಿ ಸರಿಸಮವಾದ ಭಕ್ತಿಯನ್ನು ತೋರಿಸಿದ್ದಾರೆ.

ಇದರಿಂದಲೇ ಋಗ್ವೇದದಲ್ಲಿ ಅನೇಕ ದೇವತಾತತ್ತ್ವ ಇದೆಯೆಂದು ಹೇಳಲಾಗುವುದಿಲ್ಲ. ಏಕೆಂದರೆ ಅನೇಕ ದೇವತಾತತ್ತ್ವ ನಿರ್ದಿಷ್ಟಲಕ್ಷಣಗಳುಳ್ಳ ವಿಲಕ್ಷಣ ಸ್ವಭಾವಯುತರಾದ ಭಿನ್ನ ಭಿನ್ನರಾದ ಅನೇಕ ದೇವತೆಗಳಲ್ಲಿ ನಂಬಿಕೆ ಇಟ್ಟಿದೆ. ಬೇರೆಬೇರೆ ಶಕ್ತಿ ಗುಣ ಮೊದಲಾದವುಗಳನ್ನು ಹೊಂದಿರುವ ಅನೇಕ ದೇವತೆಗಳನ್ನಿವರು ಒಪ್ಪುವುದರಿಂದ ತಮ್ಮ ಅಪೇಕ್ಷೆಗಳಿಗನುಗುಣವಾಗಿ ತಮಗೆ ಬೇಕಾದ ದೇವತೆಗಳನ್ನು ಭಜಿಸುತ್ತಾರೆ. ಒಬ್ಬ ದೇವತೆಯಿಂದ ತಮ್ಮ ಅಪೇಕ್ಷೆ ಕೈಗೂಡದಿದ್ದರೆ ಇನ್ನೂ ಸಮರ್ಥನಾದ ಮತ್ತೊಬ್ಬ ದೇವತೆಯನ್ನೇ ಇವರು ಆಶ್ರಯಿಸಬಹುದು. ಇಲ್ಲಿ ಮುಖ್ಯವಾದ ಅಂಶವೆಂದರೆ ದೇವತೆಗಳಲ್ಲಿರುವ ತರತಮ ಭಾವ.

ವೇದಧರ್ಮ ಅನೇಕ ದೇವತೆಗಳನ್ನು ಪೂಜಿಸಿದರೂ ಅವರಲ್ಲಿ ಅಸಮತೆಯನ್ನು ಒಪ್ಪದು. ಆದ್ದರಿಂದಲೂ ಈ ಧರ್ಮ ಅನೇಕ ದೇವತಾತತ್ತ್ವಕ್ಕನುಗುಣವಾಗಿಲ್ಲ. ಋಗ್ವೇದ ಧರ್ಮದ ವೈಶಿಷ್ಟ್ಯಗಳನ್ನು ಹೀಗೆ ಹೇಳಬಹುದು.

೧. ಏಕದೇವತಾತತ್ತ್ವದಂತೆ ಋಗ್ವೇದ ದೇವರನ್ನು ಕೇವಲ ತಂದೆಯೆಂದು ಮಾತ್ರ ಹೇಳದು. ದೇವರು ಋಗ್ವೇದ ಧರ್ಮಕ್ಕನುಗುಣವಾಗಿ ನೋಡಿದರೆ ಸರ್ವವಿಧ ಬಂಧುವಾಗಿದ್ದಾನೆ.

"ಅಗ್ನಿಂ ಮನ್ಯೇ ಪಿತರಮಗ್ನಿ ಮಾಪಿಂ
ಅಗ್ನಿಂ ಭ್ರಾತರಂ ಸದಮಿತ್ಸಖಾಯಂ |" (10-7-3)
"ತ್ವಂ ಹಿ ನಃ ಪಿತಾವಸೋ
ತ್ವಂ ಮಾತಾ ಶತಕ್ರತೋ ಬಭೂವಿಥ |
ಅಧಾ ತೇ ಸುಮ್ನಮೀಮಹೇ ||" (8-98-11)
"ಸಖಾ ಪಿತಾ ಪಿತೃತಮಃ ಪಿತೃಣಾಂ
ಕರ್ತೇಮು ಲೋಕಂ ಉಶತೇ ವಯೋಧಾಃ ||" (6-17-17)

ಹೀಗೆ ದೇವರು ಮಾನವರ ಸರ್ವವಿಧಬಂಧುವಾಗಿದ್ದಾನೆಂದು ಋಗ್ವೇದ ಸಾರುತ್ತದೆ.[40]

೨. ಋಗ್ವೇದ ಅನೇಕ ದೇವತೆಗಳನ್ನು ಸ್ತುತಿಸಿದರೂ ಆ ದೇವತೆಗಳು ಅಸಮರಾಗಿಲ್ಲ. ಎಲ್ಲ ದೇವತೆಗಳೂ ಪರಿಪೂರ್ಣಸ್ವರೂಪವಾಗಿ ಸಕಲಕಲ್ಯಾಣಗುಣಯುತರಾಗಿ ದೋಷರಹಿತರಾಗಿದ್ದಾರೆ. ಗುಣಗಳ ನಿಧಿಯಾಗಿರುವ ದೇವತೆಗಳು ದೋಷಪ್ರತಿಭಟರಾಗಿದ್ದಾರೆಂಬುದು ಮುಖ್ಯವಾಗಿ ಗಮನಿಸಬೇಕಾದ ಅಂಶ. ಹೀಗೆ ದೇವತೆಗಳು ಎಲ್ಲರೂ ಋತಾವಾನರೂ, ಸತ್ಯಸ್ವರೂಪರೂ, ಪರಿಪೂರ್ಣರೂ, ಕಲ್ಯಾಣೈಕತಾನರೂ, ಹೇಯಪ್ರತ್ಯನೀಕರೂ ಆಗಿದ್ದಾರೆ. ಹೀಗೆ ಈ ದೇವತೆಗಳೆಲ್ಲರೂ ಸಮರಾಗಿದ್ದಾರೆ.

40. ಗೀತೆಯಲ್ಲಿ ಬರುವ 'ತ್ವಮೇವ ಮಾತಾಚ ಪಿತಾ ತ್ವಮೇವ' ಇದರಿಂದ ಬಂದಿದೆ.

'ಯುವಾಂ ದೇವಾಃ ತ್ರಯ ಏಕಾದಶಾಸಃ
ಸತ್ಯಾಃ ಸತ್ಯಸ್ಯ ದದೃಶೇ ಪುರಸ್ತಾತ್'|| (8-57-2)
'ಅಜ್ಯೇಷ್ಠಾಸೋ ಅಕನಿಷ್ಠಾಸ ಏತೇ' (5-60-5)

ಮೇಲಿನ ಕಾರಣಗಳಿಂದ ಋಗ್ವೇದದಲ್ಲಿ ದೇವತಾನಾನಾತ್ವವಾಗಲೀ, ಏಕದೇವತಾ ತತ್ವವಾಗಲೀ ಪ್ರತಿಪಾದಿತವಾಗಿಲ್ಲವೆಂಬುದು ಸ್ಪಷ್ಟವಾಗಿ ತೋರುವುದರಿಂದಲೇ ಮ್ಯಾಕ್ಸ್‌ಮುಲ್ಲರ್ ಮಹಾಶಯ ಇಲ್ಲಿ ಪ್ರತಿಪಾದಿತವಾಗಿರುವುದು 'Heno-theism, ಎಂದು ಹೊಸಪದವೊಂದನ್ನು ಸೃಷ್ಟಿಮಾಡಿ, ವಿವರಿಸಿದನು.

ಋಗ್ವೇದದಲ್ಲಿರುವ ದೇವತಾಸ್ವರೂಪವನ್ನು ವಿಮರ್ಶಿಸುತ್ತಾ ಪಾಶ್ಚಾತ್ಯವಿದ್ವಾಂಸರು ಅನೇಕ ದೇವತಾ ತತ್ವದಿಂದ ಆರಂಭವಾಗಿ ಈ ಧರ್ಮ ಏಕದೇವತಾತತ್ವದಲ್ಲಿ ನಿಂತಿತೆಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ದೇವತೆಗಳೊಬ್ಬೊಬ್ಬರಿಗೂ ವೈಶಿಷ್ಟ್ಯವನ್ನು ವಿವರಿಸಿಲ್ಲವೆಂದೂ, ಸಮಾನಧರ್ಮಗಳಿಂದ ದೇವತೆಗಳನ್ನು ವರ್ಣಿಸಲಾಗಿದೆಯೆಂದೂ ಇವರ ಭಾವ. ಅನೇಕ ದೇವತೆಗಳಲ್ಲಿದ್ದ ನಂಬಿಕೆ ಕಾಲಕಳೆದಂತೆ ಬದಲಾಗಿ ಒಂದೇ ದೇವತೆಯಲ್ಲಿ ಪರಿನಿಷ್ಠವಾದ ಕ್ರಮವೂ ವಿಚಿತ್ರವಾಗಿದೆಯೆಂದು ಇವರು ಹೇಳುತ್ತಾರೆ. ಇರುವ ದೇವತಾವ್ಯೂಹದಲ್ಲಿ ಪ್ರಬಲನಾದ ದೇವತೆ ಪ್ರಾಧಾನ್ಯ ಪಡೆಯಬೇಕಾಗಿತ್ತು. ಹಾಗೆ ಆಗಿದ್ದರೆ ವರುಣನಿಗೆ ಪ್ರಾಧಾನ್ಯ ಬರಬೇಕಾಗಿದ್ದಿತು. ಆದರೆ ಹಾಗೆ ಆಗದೆ ಹೊಸಹೊಸ ದೇವತೆಗಳ ಕಲ್ಪನೆ ತೋರಿರುವ ಕಾರಣ ಈ ಬಗೆಯ ಸಮನ್ವಯ ಸಮರ್ಪಕವಾಗಿ ಆಗಲಿಲ್ಲವೆಂದು ಆಧುನಿಕ ವಿಮರ್ಶಕರ ಭಾವ.[41] ಕಾಲಕಳೆದಂತೆ ಈ ದೇವತೆಗಳು ಹಿನ್ನಲೆಗೆ ಬಂದು ಹೊಸಹೊಸ ದೇವತೆಗಳು ಇವರ ಸ್ಥಾನವನ್ನಾಕ್ರಮಿಸಿದರೆಂದು ಇವರ ಊಹೆ. ಹೀಗಾಗಿ ವಿಶ್ವೇದೇವಾಃ, ವಿಶ್ವಕರ್ಮ, ಪ್ರಜಾಪತಿ, ಹಿರಣ್ಯಗರ್ಭ ಮೊದಲಾದ ದೇವತೆಗಳು ಪ್ರಾಧಾನ್ಯ ಪಡೆದರೆಂದು ಹೇಳಲಾಗಿದೆ. ಆದಕಾರಣ ಆಧುನಿಕ ವಿಮರ್ಶಕರ ಅಭಿಪ್ರಾಯದಂತೆ ಋಗ್ವೇದ ನಾನಾ ದೇವತೆಗಳ ಪೂಜೆಯಿಂದ ಆರಂಭವಾಯಿತೆಂದೂ ಕಾಲಕಳೆದಂತೆ ಏಕದೇವತಾನಿಷ್ಠೆಯಲ್ಲಿ ಪರಿಣಮಿಸಿತೆಂದೂ ತಿಳಿಯುತ್ತೇವೆ.

ಇಲ್ಲಿ ವರ್ಣಿಸಿರುವ ಅನೇಕ ದೇವತೆಗಳ ಸಮನ್ವಯವನ್ನು ಋಗ್ವೇದದೃಷ್ಟಿಯಿಂದ ನಾವು ಗಮನಿಸಿದರೆ ಇವೆಲ್ಲಾ ದೇವತೆಗಳೂ ಒಬ್ಬನೇ ಆತ್ಮನ ನಾನಾ ರೂಪಗಳೆಂದು ತಿಳಿಯುತ್ತೇವೆ. ಈ ಕೆಳಗಿನ ಮಂತ್ರಗಳನ್ನು ಗಮನಿಸಿ :

"ಇಂದ್ರಂ ಮಿತ್ರಂ ವರುಣಮಗ್ನಿಮಾಹು
ರಥೋ ದಿವ್ಯಃ ಸಸುಪರ್ಣೋ ಗರುತ್ಮಾನ್ |
ಏಕಂ ಸದ್ವಿಪ್ರಾ ಬಹುಧಾ ವದಂತಿ
ಅಗ್ನಿಂ ಯಮಂ ಮಾತರಿಶ್ವಾನಮಾಹುಃ ||" (1-164-46)

"ಏಕ ಏವಾಗ್ನಿರ್ಬಹುಧಾ ಸಮಿದ್ಧಃ
ಏಕಸ್ಸೂರ್ಯೋ ವಿಶ್ವಮನುಪ್ರಭೂತಃ |
ಏಕೈವೋಷಾಃ ಸರ್ವಮಿದಂ ವಿಭಾ
ತ್ಯೇಕಂ ವಾ ಇದಂ ವಿಬಭೂವ ಸರ್ವಂ ||" (7-58-2)

41. *'Some may say that monotheism in the ordinary sense of the term proved abortive in the vedic period'. Outlines of Indian Philosophy*. Prof. M. Hiriyanna, page 39

"ಸುಪರ್ಣಂ ವಿಪ್ರಾಃ ಕವಯೋ ವಚೋಭಿಃ
ಏಕಂ ಸಂತಂ ಬಹುಧಾ ಕಲ್ಪಯಂತಿ |" (10-114-5)
"ತ್ವಮಗ್ನೇ ಅದಿತಿರ್ದೇವ ದಾಶುಷೇ
ತ್ವಂ ಹೋತ್ರಾ ಭಾರತೀ ವರ್ಧಸೇ ಗಿರಾ !
ತ್ವಮಿಳಾ ಶತಹಿಮಾಸಿ ದಕ್ಷಸೇ
ತ್ವಂ ವೃತ್ರಹಾ ವಸುಪತೇ ಸರಸ್ವತೀ" (2-1-11)
"ಇಂದ್ರ ಇತ್ಸೋಮಪಾ ಏಕ ಇಂದ್ರಃ ಸುತಪಾಃ ವಿಶ್ವಾಯುಃ" (8-2-4)
"ಯ ಏಕೋ ಅಸ್ತಿ ದಂಸನಾ
ಮಹಾನ್ ಉಗ್ರೋ ಅಭಿವ್ರತೈಃ |" (8-1-27)
"ಅಯಮೇಕ ಇತ್ಥಾ ಪುರೂರು ಚಷ್ಟೇ ವಿವಿಶ್ಪತಿಃ |
ತಸ್ಯವ್ರತಾನ್ಯನು ವಶ್ಚರಾಮಸಿ ||" (8-25-16)
"ವಿಶ್ವಸ್ಯೈಕ ಈಶಿಷೇ ಸಾಸ್ಯುಕ್ತಃ" | (2-13-6)

ಇವು ಮತ್ತು ಇನ್ನೂ ಅನೇಕ ಮಂತ್ರಗಳೂ ದೇವರು ಒಬ್ಬನೆಂದು ಸಾರುವುವು. ಇವುಗಳಲ್ಲಿ ಮೊದಲನೆಯ ಮಂತ್ರದಲ್ಲಿ (1-164-46) ಅನೇಕಾನೇಕ ದೇವತೆಗಳು ಸತ್ಯಸ್ವರೂಪವಾಗಿರುವುದು ತಥ್ಯವಾದರೂ ಅವರೆಲ್ಲರನ್ನೂ ಸಚ್ಛಬ್ದಾಭಿಧೇಯವಾದ ಬ್ರಹ್ಮನೊಡನೆ ಸಮನ್ವಯಗೊಳಿಸಿ ಏಕತ್ವವನ್ನು ಸ್ಥಾಪಿಸಿರುವುದು ಅದ್ಭುತವಾಗಿದೆ. ಮುಂದಿನ ಉಪನಿಷತ್ತುಗಳಲ್ಲಿಯೂ 'ಸದೇವ ಸೋಮ್ಯೇದಮಗ್ರ ಆಸೀತ್' ಎಂದು ಈ ಸಚ್ಛಬ್ದಾಭಿಧೇಯವಾದ ಬ್ರಹ್ಮೈಕತ್ವವನ್ನೇ ಸಮರ್ಥಿಸಿದ್ದಾರೆ. ಈ 'ಸತ್' ಆದ ಪರಬ್ರಹ್ಮ ಇಂದ್ರ, ಅಗ್ನಿ, ವರುಣ, ಮಿತ್ರ ಮೊದಲಾದ ರೂಪದಲ್ಲಿ ಸ್ತುತಿಸಲ್ಪಟ್ಟಿದ್ದಾನೆ. ಹೀಗೆ ನಾನಾತ್ವ ಮತ್ತು ಏಕತ್ವಗಳಿಗೆ ವಿಶಿಷ್ಟವಾದ ರೀತಿಯಲ್ಲಿ ಸಮನ್ವಯವನ್ನು ಇಲ್ಲಿ ಕಾಣುತ್ತೇವೆ.[42] ಯಾಸ್ಕಾಚಾರ್ಯರು ನಿರುಕ್ತದಲ್ಲಿ ದೇವತೆಗಳ ಸಮನ್ವಯಮಾಡುತ್ತಾ 'ಏಕ ಆತ್ಮಾ ಬಹುಧಾ ಸ್ತೂಯತೇ[43]' ಎಂದು ಹೇಳಿ ನಾನಾ ದೇವತೆಗಳು ಈ ಒಬ್ಬನೇ ಆದ ಆತ್ಮನ ಅಂಗಪ್ರತ್ಯಂಗಗಳು ಎಂದು–'ಏಕಸ್ಯ ಆತ್ಮನಃ ಅನ್ಯೇ ದೇವಾಃ ಪ್ರತ್ಯಂಗಾನಿ ಭವಂತಿ[44]' ಎಂಬಲ್ಲಿ ಸಾಧಿಸಿದ್ದಾರೆ. ಅಗ್ನೀಂದ್ರ ಸೂರ್ಯಾದಿದೇವತೆಗಳು ಒಬ್ಬನೇ ಆದ 'ಆತ್ಮನ' ಅಂಗಪ್ರತ್ಯಂಗಗಳು. ಹೀಗೆ ನಾನಾತ್ಮ ಮತ್ತು ಏಕತ್ವಗಳ ಸಮನ್ವಯ ಆಗಿದೆ. ಶ್ರೀಮತ್ಸಾಯಣಾಚಾರ್ಯರು ಋಗ್ವೇದಭಾಷ್ಯ ಭೂಮಿಕೆಯಲ್ಲಿ ಎಲ್ಲ ದೇವತೆಗಳ ಸ್ತುತಿಯೂ ಒಬ್ಬನೇ ಆದ ಪರಮೇಶ್ವರನಿಗೆ ಅನ್ವಯಿಸುವುದೆಂಬ ಅಂಶವನ್ನು 'ತಸ್ಮಾತ್ ಸರ್ವೈರಪಿ ಪರಮೇಶ್ವರ ಏವ ಹೂಯತೇ' ಎಂದು ಹೇಳಿದ್ದಾರೆ.

ಋಗ್ವೇದದೇವತೆಗಳ ವಿಚಾರ ವಿವೇಚಿಸುವಾಗ ಪ್ರಾಚೀನರಾದ ಉಪನಿಷತ್ಪ್ರತಿಪಾದ್ಯರಾದ ಋಷಿಗಳ ಅಭಿಪ್ರಾಯವನ್ನೂ ಗಮನಿಸುವುದು ಆವಶ್ಯಕ. ಕಾತ್ಯಾಯನರು ಪೃಥ್ವೀಸ್ಥಾನದಲ್ಲಿ ಅಗ್ನಿಯೆಂದೂ, ಅಂತರಿಕ್ಷಸ್ಥಾನದಲ್ಲಿ ವಾಯುವೆಂದೂ, ದ್ಯುಸ್ಥಾನದಲ್ಲಿ ಸೂರ್ಯನೆಂದೂ ದೇವತಾತ್ರಿತಯವನ್ನೇ ಹೇಳುತ್ತಾರೆ. ಭೂಃ,ಭುವಃ, ಸ್ವಃ ಎಂಬ ಮೂರು ವ್ಯಾಹೃತಿಗಳು ಇದಕ್ಕೆ ಅನ್ವಯಿಸುತ್ತವೆ. ಈ ದೇವತಾತ್ರಿತಯದ ಒಟ್ಟು ರೂಪವೇ ಪ್ರಜಾಪತಿದೇವತೆ ಎಂದು ಹೇಳುತ್ತಾರೆ. ಇತರ ದೇವತೆಗಳು ಈ ದೇವತೆಗಳ ಬೇರೆಬೇರೆ ರೂಪಮಾತ್ರ. ಓಂಕಾರವು

42. 'ಏಕತ್ವೇ ಸತಿ ನಾನಾತ್ವಂ ನಾನಾತ್ವೇ ಸತಿ ಚೈಕತಾ' ಎಂಬ ಅಂಶ ಇಲ್ಲಿ ಸಮರ್ಥಿತವಾಗಿದೆ.
43. ನಿರುಕ್ತ (7-4-8)
44. ನಿರುಕ್ತ (7-4-9)

ಎಲ್ಲ ದೇವತೆಗಳನ್ನೂ ಸಮಷ್ಟಿಯಾಗಿ ಹೇಳುತ್ತದೆ. ಸರ್ವಚೇತನಾಚೇತನ ವಸ್ತುಗಳಿಗೆ ಆತ್ಮನಾಗಿರುವ ಈ ಏಕೈಕರೂಪಿಯಾದ ದೇವತೆಯನ್ನು ತಿಳಿಯಬೇಕೆಂಬುದು ಅವರ ಆಶಯ.

ತರ್ಪಣಪ್ರಕರಣದಲ್ಲಿ ಆಶ್ವಲಾಯನರು ದೇವತೆಗಳ ವಿವರಣೆಯನ್ನು ಹೀಗೆ ಕೊಡುತ್ತಾರೆ– "ದೇವತಾಃ ತರ್ಪಯತಿ| ಪ್ರಜಾಪತಿಬ್ರಹ್ಮಾ ವೇದಾ ದೇವಾಸ್ಸರ್ವಾಣಿ ಛಂದಾಂಸಿ ಓಂಕಾರೋ ವಷಟ್ಕಾರೋ ವ್ಯಾಹೃತಯಃ ಸಾವಿತ್ರೀ ಯಜ್ಞಾ ದ್ಯಾವಾ ಪೃಥಿವೀ ಅಂತರಿಕ್ಷಂ ಅಹೋರಾತ್ರಾಣಿ ಸಾಂಖ್ಯಾಃ ಸಿದ್ಧಾಃ ಸಮುದ್ರಾ ನದ್ಯೋ ಗಿರಯಃ ಕ್ಷೇತ್ರೌಷಧಿವನಸ್ಪತಯಃ ಗಂಧರ್ವಾಪ್ಸರಸಃ ನಾಗಾ ವಯಾಂಸಿ ಗಾವಃ ಸಾಧ್ಯಾಃ ಯಕ್ಷಾಂಸಿ ಭೂತಾನ್ಯೇವಮಂತಾನಿ."

ಬೃಹದಾರಣ್ಯಕೋಪನಿಷತ್ತಿನಲ್ಲಿ (3-9) ವಿದಗ್ಧಶಾಕಲ್ಯ ಮತ್ತು ಯಾಜ್ಞವಲ್ಕ್ಯರ ಸಂವಾದ ಪ್ರಕರಣದಲ್ಲಿ ದೇವತೆಗಳ ವಿಚಾರ ಬರುತ್ತದೆ. ಯಾಜ್ಞವಲ್ಕ್ಯರು ಪ್ರಥಮತಃ 'ತ್ರಯಶ್ಚ ತ್ರೀಚಶತಾತ್ರಯಶ್ಚ ತ್ರೀಚಸಹಸ್ರಾ' (ಋಗ್ವೇದ 3-9-9ರಲ್ಲಿ ಇದೇ ಸಂಖ್ಯೆಯನ್ನೇ ಹೇಳಿದೆ) ಎಂದು ಹೇಳಿ ನಂತರ 'ತ್ರಯಸ್ತ್ರಿಂಶತ್' ಎಂದೂ, (ಅಷ್ಟೌವಸವಃ ಏಕಾದಶರುದ್ರಾಃ ದ್ವಾದಶಾದಿತ್ಯಾ ಏಕಸ್ತ್ರಿಂಶದಿಂದುಶ್ಚೈವ ಪ್ರಜಾಪತಿಶ್ಚತ್ರಯಸ್ತ್ರಿಂಶತ್) 'ಷಟ್' ಎಂದೂ (ಅಗ್ನಿಶ್ಚಪೃಥಿವೀಚ ವಾಯುಶ್ಚಾಂತರಿಕ್ಷಂಚ ಆದಿತ್ಯಶ್ಚದ್ಯೌಶ್ಚ), 'ತ್ರಯಃ' ಎಂದೂ (ತ್ರಯೋ ಲೋಕಾಃ ಏಷು ಹೀಮೆ ಸರ್ವೇದೇವಾಃ), ಅನಂತರ 'ದ್ವೌ' ಎಂದೂ (ಅನ್ನಂ ಚೈವ ಪ್ರಾಣಂಚ), ಅನಂತರ "ಅಧ್ಯರ್ಧಃ' ಎಂದೂ (ಯದಸ್ಮಿನ್ನಿದಂ ಸರ್ವ ಅಧ್ಯಾರ್ಧ್ನೋತ್ತೇನಾಧ್ಯರ್ಧಃ) ಕೊನೆಗೆ 'ಏಕಃ' ಎಂದು (ಪ್ರಾಣ ಇತಿ ಸಬ್ರಹ್ಮತ್ಯದಿತ್ಯಾಚಕ್ಷತೇ) ಉಪಸಂಹಾರಮಾಡಿ ಸರ್ವಲೋಕ ಗಳನ್ನೂ ವ್ಯಾಪಿಸಿ ಧರಿಸಿರುವ ದೇವತೆ ಒಬ್ಬನೇ ಎಂದೂ ವಿವರಿಸಿದ್ದಾರೆ. ಋಗ್ವೇದದೇವತಾ ಸ್ವರೂಪವನ್ನು ಯಥಾವತ್ತಾಗಿ ಅರಿತ ಈ ಋಷಿಗಳ ವಾಣಿ ಋಗ್ವೇದದಲ್ಲಿ ಪ್ರತಿಪಾದಿತವಾಗಿ ರುವ ದೈವತ್ಯೈಕ್ಯವನ್ನೇ ಬಹಳ ನಿಖರವಾಗಿ ಸಮರ್ಥಿಸುತ್ತದೆ. ಯಾಸ್ಕರೂ ಉಪನಿಷತ್ಕಾರರ ಹೆಜ್ಜೆಯಲ್ಲಿಯೇ ಮುಂದೆ ನಡೆದು 'ಏಕ ಏವ ಆತ್ಮಾ ಬಹುಧಾ ಸ್ತೂಯತೇ' ಎಂದು ನಿರ್ಣಯಿಸಿ ರುವುದು ಗಮನಾರ್ಹವಾಗಿದೆ.

ಬ್ರಹ್ಮಸೂತ್ರಗಳಲ್ಲಿ ಮೊದಲನೆಯದಾದ ಸಮನ್ವಯಾಧ್ಯಾಯದಲ್ಲಿ ಇಂಥ ಸಮನ್ವಯ ವನ್ನು ಕಾಣಬಹುದು. ಸತ್, ಬ್ರಹ್ಮ, ಆಕಾಶ, ಪ್ರಾಣ ಮೊದಲಾದ ಅನೇಕಾನೇಕ ಶಬ್ದ ಗಳು ಸಮಾನ ಪ್ರಕರಣದಲ್ಲಿ ಪಠಿತವಾಗಿರುವುದರಿಂದ ಪರಬ್ರಹ್ಮಪರವಾದುವೆಂದು ಸಾಧಿಸಲಾಗಿದೆ.[45] ಹೀಗೆಯೇ ಇಂದ್ರ, ಅಗ್ನಿ, ಮಿತ್ರ, ವರುಣ ಮೊದಲಾದವರೆಲ್ಲರ ಸ್ತುತಿಯೂ ಒಬ್ಬನೇ ಆದ ಪರಮಾತ್ಮನಿಗೆ ಅನ್ವಯಿಸುವುದರಿಂದ ಏಕತ್ವವೇ ಏಕತಾನವಾಗಿ ಪ್ರತಿಪಾದಿತವಾಗಿದೆಯೆಂದು ಹೇಳಿದ್ದಾರೆ. ನಮ್ಮ ಸಂಪ್ರದಾಯ ಹೀಗೆ ಋಗ್ವೇದದಲ್ಲಿ ಸ್ತುತಿಸಲ್ಪಟ್ಟಿರುವ ಅನೇಕ ದೇವತೆಗಳ ದ್ವಾರಾ ಒಬ್ಬನೇ ಆದ ಮಹಾಭಾಗ್ಯಯುತನಾದ ಪರಮಾತ್ಮನು ಸ್ತುತಿಸಲ್ಪಟ್ಟಿದ್ದಾನೆಂಬುದನ್ನು ಸಾಧಿಸುತ್ತದೆ.[46]

---

45. "ನಿಸ್ಸಾಧಾರಣ್ಯನಾರಾಯಣಪದವಿಷಯೇ ನಿಶ್ಚಯಂ ಯಾಂತ್ಯಬಾಧೇ, ಸದ್ಬ್ರಹ್ಮಾದ್ಯಾಸ್ಸಮಾನ ಪ್ರಕರಣಪಠಿತಾಶ್ಶಂಕಿತಾನ್ಯಾರ್ಥ ಶಬ್ದಾಃ |" *ತತ್ತ್ವಮುಕ್ತಾಕಲಾಪ* ; ನಾಯಕ ಸರ-5

46. ದೇವತೆಗಳು ಪರಸ್ಪರ ವಿಲಕ್ಷಣವಾದ ಸ್ವಭಾವಯುತರಾಗಿಯೂ ಇದ್ದಾರೆ ಪರಮಾತ್ಮ ವಾಚಕರಾಗಿಯೂ ಇದ್ದಾರೆ ಎಂಬ ಅಂಶದ ಸಮನ್ವಯ ಆಗಬೇಕಾಗಿದೆ. ಋಗ್ವೇದದಲ್ಲಿ ಎಲ್ಲ ದೇವತೆಗಳೂ ಪರಮಾತ್ಮವಾಚಕರೇ ಎಂದು ಮಾತ್ರ ಹೇಳಬಹುದು.

ಋಗ್ವೇದ ದೇವತಾಸ್ವರೂಪವನ್ನೂ, ದೇವತಾ ವಿಭಾಗವನ್ನೂ, ನಾನಾತ್ವ-ಏಕತ್ವಗಳ ಸಾಮರಸ್ಯವನ್ನೂ ಇದುವರೆಗೆ ನಿರೂಪಿಸಲಾಯಿತು. ಇನ್ನು ಆಯಾ ಸ್ಥಾನಗಳಲ್ಲಿ ಉಪವರ್ಣಿತವಾಗಿರುವ ದೇವತಾಸ್ವರೂಪವನ್ನು ವಿವರಿಸಲಾಗುವುದು. ಪೃಥ್ವೀಸ್ಥಾನ ದೇವತೆಗಳ ವಿಚಾರವನ್ನು ಮೊದಲು ತಿಳಿಯೋಣ.

## ಅಗ್ನಿ—ಪೃಥ್ವೀಸ್ಥಾನ ದೇವತೆಗಳು

ಪೃಥ್ವೀಸ್ಥಾನ ದೇವತೆಗಳಲ್ಲಿ ಅಗ್ನಿ ಪ್ರಧಾನ. ದೇವತಾತ್ರಿತಯದಲ್ಲಿ ಅಗ್ನಿ ಪ್ರಧಾನನಾದವನು, ಸುಮಾರು 200 ಸೂಕ್ತಗಳು ಅಗ್ನಿದೇವತಾಕವಾಗಿವೆ. ಈ ದೇವತೆಯನ್ನೇ ಸ್ತುತಿಸುವ ಸೂಕ್ತಗಳಲ್ಲಿ ಅಲ್ಲದೆ ಇತರ ದೇವತೆಗಳೊಡನೆಯೂ ಇವನು ಸ್ತುತಿಸಲ್ಪಟ್ಟಿದ್ದಾನೆ. ಅಗ್ನಿಯ ವಿಶ್ವರೂಪವನ್ನು ಸಾಕ್ಷಾತ್ಕರಿಸಿಕೊಂಡ ಋಷಿ ಈ ದೇವತೆಯನ್ನು ಅನುಪಮವಾಗಿ ಸ್ತುತಿಸಿದ್ದಾನೆ. ವಿಶ್ವವೆಲ್ಲವೂ ಅಗ್ನಿಯಿಂದ ಧೃತವಾಗಿ ರಕ್ಷಿತವಾಗಿದೆ. ಉದಕ, ದಾರು, ಪ್ರಾಣಿ, ಪಕ್ಷಿ, ಜನ ಮೊದಲಾದ ಸ್ಥಾವರ ಜಂಗಮಾತ್ಮಕವಾದ ಸಕಲ ಪದಾರ್ಥಗಳಲ್ಲಿಯೂ ಅಗ್ನಿ ಅಂತರ್ಯಾಮಿಯಾಗಿದ್ದಾನೆ. ಅದ್ರಿಯಲ್ಲಿ ಅವನಿದ್ದಾನೆ, ದಾರುವಿನಲ್ಲಿ ಅವನಿದ್ದಾನೆ, ಜನ ಶರೀರಧಾರಣೆಯನ್ನು ಮಾಡಲು ಸಾಧ್ಯವಾಗಿರುವುದು ಅವನಿಂದಲೇ. 'ಅಹಂ ವೈಶ್ವಾನರೋ ಭೂತ್ವಾ ಪಚಾಮ್ಯನ್ನಂ ಚತುರ್ವಿಧಂ' ಎಂದು ಗೀತೆಯಲ್ಲಿ ಸಾರಿದಂತೆ ಜಠರಾಗ್ನಿಯಾಗಿ ಅವನು ಸರ್ವತ್ರ ಇದ್ದಾನೆ. ಅಗ್ನಿಯ ಪ್ರಭಾವದಿಂದಲೇ ಜಗತ್ತು ಇದೆ ಎಂಬುದು ಅಕ್ಷರಶಃ ಸತ್ಯ. ಅಗ್ನಿಯ ಈ ಸರ್ವಾಂತರ್ಯಾಮಿತ್ವವನ್ನು ಕೆಳಗಿನ ಮಂತ್ರ ಅದ್ಭುತವಾಗಿ ಸಾರುತ್ತದೆ.

ಗರ್ಭೋ ಯೋ ಅಪಾಂ ಗರ್ಭೋ ವನಾನಾಂ
ಗರ್ಭಶ್ಚ ಸ್ಥಾತಾಂ ಗರ್ಭಶ್ಚರಥಾಮ್।
ಅದ್ರೌಚಿದಸ್ಮಾ ಅಂತರ್ದುರೋಣೇ
ವಿಶಾಂ ನ ವಿಶ್ವೋ ಅಮೃತಃ ಸ್ವಾಧೀಃ ॥ (1-70-4)

"ಅಗ್ನಿಯು ಜಲದಲ್ಲಿದ್ದಾನೆ ಅಪಾಂನಪಾತ್ ಸಂಜ್ಞಕನಾಗಿ ; ಅರಣ್ಯದ ವೃಕ್ಷಗಳೊಳಗೆ ಇದ್ದಾನೆ (ದಾವಾಗ್ನಿರೂಪದಿಂದ), ಸ್ಥಾವರಗಳಾದ ಕಾಷ್ಠಾದಿಗಳೊಳಗೆ ಇದ್ದಾನೆ ; ಸಂಚಾರಶೀಲರಾದ ಪ್ರಾಣಿ, ಜನ ಮೊದಲಾದವರೊಳಗೆ ಇದ್ದಾನೆ ಜಾಠರಾಗ್ನಿರೂಪದಿಂದ ; ಅದ್ರಿಯೊಳಗೆ ಇರುವ ಈ ಅಗ್ನಿಗೆ ಹವಿಃಪ್ರದಾನಮಾಡುವರು. ಇವನು ಅಮರ. ಶೋಭನಕರ್ಮಯುಕ್ತ. ಸಜ್ಜನನಾದ ರಾಜನು ಪ್ರಜೆಗಳ ರಕ್ಷಕನಾಗಿರುವಂತೆ ಇವನು ನಮಗೆ ರಕ್ಷಕ." ಇಲ್ಲಿ ಅಗ್ನಿದೇವನು ಸರ್ವತ್ರ ಇದ್ದಾನೆಂಬುದನ್ನು ಋಷಿ ಸಾಕ್ಷಾತ್ಕರಿಸಿಕೊಂಡಿದ್ದಾರೆ. ಅಗ್ನಿದೇವನ ಪ್ರಭೆ ದ್ಯುಲೋಕದಲ್ಲಿಯೂ, ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ, ಸಮುದ್ರದಲ್ಲಿಯೂ, ವೃಕ್ಷಗಳಲ್ಲಿಯೂ ಪ್ರಕಾಶಿಸುತ್ತದೆ. (3-22-2) ; ಅಗ್ನಿಮಥನ ಮಾಡುವಾಗ ಅರಣಿಗಳಿಂದ ಅಗ್ನಿ ಉತ್ಪನ್ನನಾಗುತ್ತಾನೆ. ಶಿಲೆಯಿಂದ ಅಗ್ನಿ ಉತ್ಪನ್ನನಾಗುತ್ತಾನೆ. (ಅಶ್ಮನಃ) 'ಯೋ ಆತ್ಮನೋರಂತರಗ್ನಿಂ ಜಜಾನ' (2-2-3) ಎಂದು ಈ ಅಂಶವನ್ನು ಹೇಳಿದ್ದಾರೆ. ಅಗ್ನಿಯು ಮನುಷ್ಯರ ಹೃದಯದಲ್ಲಿದ್ದಾನೆಂದೂ ಹೇಳಿದ್ದಾರೆ. ಹೀಗೆ ವಿಶ್ವದ ಅಸ್ತಿತ್ವವೇ ಅಗ್ನಿಯಿಂದ ಎಂಬುದು ಅಗ್ನಿಯ ಮಾಹಾತ್ಮ್ಯವನ್ನೂ ಪ್ರಭಾವವನ್ನೂ ತಿಳಿಸುವುದು.

ಅಗ್ನಿ ತ್ರಿಸ್ಥಾನಗಳಲ್ಲಿಯೂ ಶೋಭಿಸುತ್ತಾನೆ. ಭಾರತದೇಶದಲ್ಲಿ ತ್ರಿಮೂರ್ತಿಗಳನ್ನು ಹೇಳುವುದುಂಟು. ಈ ತ್ರಿಮೂರ್ತಿಗಳ ರೂಪವೂ ಅಗ್ನಿದೇವನದೇ ಆಗಿರಬೇಕು. ಅಗ್ನಿಗೆ ಕೆಳಗಿನ ಮಂತ್ರದಲ್ಲಿ ಮೂರು ಜನ್ಮಸ್ಥಾನಗಳನ್ನು ಹೇಳಿದೆ.

"ತ್ರೀಣಿ ಜಾನಾ ಪರಿಭೂಷಂತ್ಯಸ್ಯ
ಸಮುದ್ರ ಏಕಂ ದಿವ್ಯೇಕಮಪ್ಸು |" (1-95-3)

'ಈ ಅಗ್ನಿದೇವನನ್ನು ಮೂರು ಜನನಗಳು ಅಲಂಕರಿಸುತ್ತವೆ. (ಮೂರು ಜನ್ಮಗಳು ಸಂಭವಿಸುತ್ತವೆ) ಒಂದು ಜನ್ಮ ಸಮುದ್ರದಲ್ಲಿ ಬಡಬಾನಲರೂಪವಾಗಿ, ದ್ಯುಲೋಕದಲ್ಲಿ ಆದಿತ್ಯಾತ್ಮನಾಗಿ ಒಂದು, ಅಂತರಿಕ್ಷದಲ್ಲಿ ವೈದ್ಯುತಾಗ್ನಿರೂಪನಾಗಿ ಮತ್ತೊಂದು.'

ಈ ಮಂತ್ರದಲ್ಲಿ ಅಗ್ನಿ ಮೂರು ರೂಪದಲ್ಲಿ ಮೂರು ಸ್ಥಾನಗಳಲ್ಲಿಯೂ ವ್ಯಾಪಕನಾಗಿ ಇದ್ದಾನೆಂದು ಹೇಳಿದೆ.

ಯಾಜಕಾಗ್ನಿಯಾಗಿ ವೇದಿಯ ಮೇಲೆಯೂ ಇವನೇ ಜ್ವಲಿಸುವನು. ಇವನು ಅನೇಕ ಕಡೆ ವಿವಿಧವಾಗಿ ಜನಿಸುವನೆಂದು ಹೇಳಿರುವುದಲ್ಲ ಯುಕ್ತವಾಗಿಯೇ ಇದೆ. ಇವನ ಅನೇಕ ಜನ್ಮಸ್ಥಾನಗಳನ್ನು ಇವು ವರ್ಣಸುತ್ತವೆ. ಪೃಥಿವಿಯಲ್ಲಿ ಇವನು ಅರಣಿಗಳೆರಡರಿಂದ ಉತ್ಪನ್ನನಾಗುವನು. 'ಅರಣ್ಯೋರ್ನಿಹಿತೋ ಜಾತವೇದಾः'. 'ಸರ್ವವಿಷಯಜ್ಞಾನವಾನ್ ಆದ ಈ ಅಗ್ನಿ ಎರಡು ಅರಣಿಗಳಲ್ಲಿ ಗೂಢವಾಗಿಡಲ್ಪಟ್ಟಿದ್ದಾನೆ.' (3-29-2) ಎಂದು ಈ ಅಂಶ ಹೇಳಿದೆ. ಈ ಅರಣಿಗಳನ್ನು ಇವನ ತಾಯಿಯರೆಂದಿದ್ದಾರೆ–'ಅಯೋ ಮಾತ್ರೋರುಶೇನ್ಯೋ ಜನಿಷ್ಟ' (37-3-9) ಎಂದು ಶುಷ್ಕವಾದ ದಾರುಗಳಿಂದ ಈ ದೇವ ಜನಿಸಿದನೆಂದಿದ್ದಾರೆ– 'ಶುಷ್ಕಾದ್ಯದ್ದೇವ ಜೀವೋ ಜನಿಷ್ಠಾः' (1-68-2) ಎಂದು ವರ್ಣಿಸಿ. ಹತ್ತು ಮಂದಿ ಯುವತಿಯರು ಇವನನ್ನು ಅರಣಿಗಳಿಂದ ಉತ್ಪನ್ನಗೊಳಿಸಿದರೆಂದು ಹೇಳಿರುವುದು ಹತ್ತು ಬೆರಳುಗಳ ಹಿಡಿತಕ್ಕೆ ಅನ್ವಯಿಸುತ್ತದೆ. 'ದಶೇಮಂ ತ್ವಷ್ಟುರ್ಜನಯಂತ ಗರ್ಭಂ ಅತಂದ್ರಾಸೋ ಯುವತಯೋ ವಿಭೃತ್ರಮ್' (1-95-2) ; ಹೀಗೆ ಅರಣಿಗಳಿಂದ ಉತ್ಪನ್ನವಾದ ಇವನು ಶಕ್ತಿಯ ಪುತ್ರ ಅಥವಾ ಊರ್ಜೋನಪಾತ್, ಸಹಸಸ್ಸೂನು ; ಅರಣಿಗಳಲ್ಲಿ ಅಡಗಿರುವ ಶಕ್ತಿ ಆವಿರ್ಭವಿಸುವುದರಿಂದ ಇವನು ಶಕ್ತಿಪುತ್ರ. ಪ್ರತಿದಿನ ಉತ್ಪನ್ನನಾಗುವನು ಇವನು ಪ್ರತಿಯೊಂದು ಮನೆಯಲ್ಲಿಯೂ. ಹೀಗಾಗಿ ಇವನು ಜ್ಯೇಷ್ಠನೂ ಹೌದು, ಯವಿಷ್ಠನೂ ಹೌದು. ಹಿಂದಿನ ದಿನವೂ ಹುಟ್ಟಿದುದರಿಂದ ಜ್ಯೇಷ್ಠ. ಮುಂದಿನ ದಿನ ಹುಟ್ಟುವವನಾದುದರಿಂದ ಯವಿಷ್ಠ. (ಉಷ ಉಷೋ ಹಿವಸೋ ಅಗ್ರಮೇಷಿ) ಹೀಗೆ ಇವನು ಪುರಾತನ ಮತ್ತು ನೂತನ. ಆದುದರಿಂದಲೇ ಇವನು ಅಮರ ಮತ್ತು ನಿತ್ಯಯುವಾ. ಅಗ್ನಿಯು ಮೊಟ್ಟಮೊದಲಿನ ಯಜ್ಞ ನಡೆಸಿದುದರಿಂದ (3-15-4) ಅವನಿಗಿಂತ ಹಿರಿಯ ಯಾಜಕರಿಲ್ಲ (5-3-5). ಪ್ರತಿದಿನವೂ ತಮಸ್ಸಿನಿಂದ ಇವನು ತೂರಿ ಬರುತ್ತಾನೆ ಜ್ಯೋತಿಯೊಡನೆ. 'ತಮಸೋ ಜ್ಯೋತಿಷಾಗಾತ್.' ಇವನು ಘೃತಪೃಷ್ಠ, ತಪುರ್ಮೂರ್ಧಾ, ವಿಶ್ಪತಿ, ಶುಚಿದನ್, ಗೃಹಪತಿ, ಶುಭ್ರಜ್ವಾಲಾಯುತ (ಶುಕ್ರಶೋಚಿः)ನಾದವನು.

ಅಗ್ನಿ ತ್ರಿಸ್ಥಾನಗಳಲ್ಲಿರುವನೆಂದು ಹೇಳಿದ್ದಾರೆ. ಇವನನ್ನು ತ್ರಿಧಾ ದೇವತೆಗಳು ಮಾಡಿದರು. ಇವನ ಪ್ರಕಾಶ ಮೂರು ವಿಧವಾಗಿದೆ (3-26-7) ; ಇವನು ಮೂರು ಶಿರಸ್ಸು ಹೊಂದಿದ್ದಾನೆ (1-146-1) ; ಇವನ ಜಿಹ್ವೆಗಳು ಮೂರು, ದೇಹಗಳು ಮೂರು, ಸ್ಥಾನಗಳು ಮೂರು (3-20-2) ; ತ್ರಿಷಧಸ್ಥಾ (6-8-7) ಎಂಬ ವಿಶೇಷಣ ಮುಖ್ಯವಾಗಿ ಅಗ್ನಿಗೆ ಅನ್ವಯಿಸುತ್ತದೆ. ತ್ರಿಪಸ್ತ್ಯ ಎಂದು ಅಗ್ನಿಗೆ ವಿಶೇಷಣ ಕೊಡಲಾಗಿದೆ. (8-39-8). ಹೀಗೆ ಅಗ್ನಿ ತ್ರಿಮೂರ್ತಿಗಳ ರೂಪವನ್ನು ಹೊಂದಿರುವುದು ಕಂಡುಬರುತ್ತದೆ.

ಅಗ್ನಿಯ ಮೂರನೆಯ ರೂಪ ಅತ್ಯಂತ ಮುಖ್ಯವಾದುದೆಂದು ವರ್ಣಿಸಿದ್ದಾರೆ ಕೆಳಗಿನ ಮಂತ್ರವನ್ನು ನೋಡಿ:

"ವಿಷ್ಣುರಿತ್ಥಾ ಪರಮಮಸ್ಯ ವಿದ್ವಾನ್
ಜಾತೋ ಬೃಹನ್ನಭಿ ಪಾತಿ ತೃತೀಯಂ !" (10-1-3)

'ವ್ಯಾಪನಶೀಲನೂ, ಜ್ಞಾನಾದಿ ಗುಣಯುಕ್ತನೂ, ಮಹತ್ತಮನೂ ಆದ ಅಗ್ನಿದೇವನು ತನ್ನ ಮೂರನೆಯ ಸ್ಥಾನವನ್ನು ರಕ್ಷಿಸುತ್ತಾನೆ.' ನಿರುಕ್ತದಲ್ಲಿ ಯಾಸ್ಕಾಚಾರ್ಯರು ಅಗ್ನಿಯ ಮೂರು ಸ್ಥಾನಗಳ ವಿಚಾರ ವಿವೇಚಿಸುತ್ತಾರೆ. 'ತಮೂ ಅಕೃಣ್ವನ್ ತ್ರೇಧಾ ಭುವೇಕಂ' ಎಂಬುದನ್ನು ವ್ಯಾಖ್ಯಾನ ಮಾಡುತ್ತಾ "ತಮಕುರ್ವನ್ ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ" ಎಂದು ಶಾಕಪೂಣಿಗಳ ಅಭಿಪ್ರಾಯ ತಿಳಿಸಿ 'ಯದಸ್ಯ ದಿವಿ ತೃತೀಯಂ ತದಸಾವಾದಿತ್ಯ ಇತಿ ಬ್ರಾಹ್ಮಣಮ್' ಎಂದು ಬ್ರಾಹ್ಮಣವೊಂದರ ಆಧಾರವನ್ನು ಉದಹರಿಸಿ ಅದರಂತೆ ಅಗ್ನಿಯ ಮೂರನೆಯ ಸ್ಥಾನ ದ್ಯುಲೋಕದಲ್ಲಿದೆಯೆಂದೂ ಅದು ಆದಿತ್ಯನ ರೂಪವೆಂದೂ ಹೇಳುತ್ತಾರೆ. (ನಿ. 7-28). ಹೀಗೆ ಅಗ್ನಿ ತ್ರಿಸ್ಥಾನಗಳಲ್ಲಿರುವುದರಿಂದ ತ್ರಿಸ್ಥಾನಗಳ ರಕ್ಷಕನಾಗಿದ್ದಾನೆ. ದ್ಯುಲೋಕಕ್ಕೆ ಪ್ರಧಾನಭೂತನಾಗಿದ್ದಾನೆ. ಭೂಲೋಕದ ಸನ್ನಾಹಕನಾಗಿದ್ದಾನೆ. ದ್ಯಾವಾಪೃಥಿವಿಗಳಿಗೆ ಅಧಿಪತಿಯಾಗಿದ್ದಾನೆ.

"ಮೂರ್ಧಾದಿವೋ ನಾಭಿರಗ್ನಿಃ ಪೃಥಿವ್ಯಾ
ಅಥಾ ಭವದರತೀ ರೋದಸ್ಯೋಃ !" (1-59-2)

ಅಗ್ನಿಯ ವಿದ್ಯುದ್ರೂಪವನ್ನು ಸ್ತುತಿಸಿದ್ದಾರೆ ಋಷಿಗಳು. ಧನುಸ್ಸಿನಿಂದ ವೇಗವಾಗಿ ಧಾವಿಸುವ ಬಾಣದಂತೆ ಬರುವನೆಂದು ವರ್ಣಿಸಿ-'ಧನೋರಧಿ ಪ್ರವತ ಆಸ ಋಣ್ವತಿ' ಎಂದು. ಇವನು ಪರಮವ್ಯೋಮದಲ್ಲಿ ಜನಿಸುವನೆಂಬುವ ಅಂಶವನ್ನು 'ಸಜಾಯಮಾನಃ ಪರಮೇ ವ್ಯೋಮನ್ನಾವಿರಗ್ನಿರಭವನ್ಮಾತರಿಶ್ವನೇ' (1-143-2) ಎಂಬಲ್ಲಿ ಹೇಳಿದೆ. ಮಾತರಿಶ್ವ ಅಗ್ನಿಯನ್ನು ಅಂತರಿಕ್ಷದಿಂದ ಕೆಳಕ್ಕೆ ತಂದನಂತೆ. ವಿದ್ಯುದ್ರೂಪದಲ್ಲಿ ಅಗ್ನಿಯನ್ನು ಕಂಡಾಗ ಹೀಗೆ ಹೇಳಿದ್ದಾರೆಂದು ಹೇಳಬಹುದು. ಅಂತರಿಕ್ಷದಿಂದ ಭೂಮಿಗೆ ಅಗ್ನಿಯ ಆಗಮನ ವಿದ್ಯುದ್ರೂಪದಲ್ಲಿ ಎಂದು ತಿಳಿಯಬಹುದು.

ಇನ್ನೂ ಅನೇಕ ಮಂತ್ರಗಳಲ್ಲಿ ಅಗ್ನಿಯನ್ನು ಸೂರ್ಯನೊಡನೆ ತಾದಾತ್ಮ್ಯದಿಂದ ಹೇಳಿದ್ದಾರೆ. ಬೆಳಿಗ್ಗೆ ಸೂರ್ಯನಾಗಿ ಅಗ್ನಿ ಉದಯಿಸುವನೆಂದು-"ಮೂರ್ಧಾ ಭುವೋ ಭವತಿ ನಕ್ತಮಗ್ನಿಃ ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್" (10-88-6) ಎಂಬಲ್ಲಿ ಹೇಳಿದ್ದಾರೆ. ಅಗ್ನಿಯು ಸೂರ್ಯನ ಪ್ರಕಾಶದೊಡನೆ ಸೇರಿಕೊಳ್ಳುವನು ಎಂದು ಹೇಳಿರುವುದೂ (5-38-1) ಇದನ್ನೇ ಸೂಚಿಸುವುದು. ಅಗ್ನಿಯು ದ್ಯುಲೋಕದಲ್ಲಿ ಪ್ರಕಾಶಿಸುವನೆಂದು

"ಊರ್ಜೋನಪಾತಮಧ್ವರೇ ದೀದಿವಾಂಸಮುಪದ್ಯವಿ |
ಅಗ್ನಿಮೀಳೇ ಕವಿಕ್ರತುಂ ||" (3-27-12)

ಎಂಬಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಹೀಗೆ ಅಗ್ನಿದೇವ ತ್ರಿಸ್ಥಾನಗಳಲ್ಲಿಯೂ ಇರುವವನಾಗಿ ಸರ್ವವ್ಯಾಪಕನಾಗಿದ್ದಾನೆಂದು ಹೇಳಿದೆ.

ಇಂಥ ಅಗ್ನಿ ಶಕ್ತಿಯ ಪ್ರತೀಕ. ಇವನು ಅತ್ಯಂತ ಬಲಿಷ್ಠ. ಸರ್ವಭುವನಗಳಿಗೂ ಈಶ್ವರ. ಇಂದ್ರನನ್ನು ಸ್ತುತಿಸುವಂತೆ ಇವನನ್ನೂ ಜನರು ಸ್ತುತಿಸುವರು.

"ಪ್ರ ಸಮ್ರಾಜೋ ಅಸುರಸ್ಯ ಪ್ರಶಸ್ತಿಂ
ಪುಂಸಃ ಕೃಷ್ಟೀನಾಮನುಮಾದ್ಯಸ್ಯ !
ಇಂದ್ರಸ್ಯೇವ ಪ್ರ ತವಸಸ್ಕೃತಾನಿ
ವಂದೇ ದಾರುಂ ವಂದಮಾನೋ ವಿವಕ್ಮಿ || (7-6-1)

'ಎಲೈ ಜಾತವೇದನಾದ ವೈಶ್ವಾನರನೇ, ನಿನ್ನ ಮಹಾತ್ಮ್ಯವು ಮಹತ್ತಾದ ದ್ಯುಲೋಕಕ್ಕಿಂತಲೂ ಹೆಚ್ಚಾಗಿ ವರ್ಧಿಸಿದೆ. ನೀನು ಸರ್ವಮಾನವರ ರಾಜ' ಎಂದು ಇವನನ್ನು ಕೆಳಗಿನ ಮಂತ್ರದಲ್ಲಿ ಹೇಳಿ ಸ್ತುತಿಸಿದ್ದಾರೆ.

"ದಿವಶ್ಚಿತ್ತೇ ಬೃಹತೋ ಜಾತವೇದೋ
ವೈಶ್ವಾನರ ಪ್ರರಿರಿಚೇ ಮಹಿತ್ವಮ್ !
ರಾಜಾ ಕೃಷ್ಟೀನಾಮಸಿ ಮಾನುಷೀಣಾಂ
ಯುದಾ ದೇವೇಭ್ಯೋ ವರಿವಶ್ಚಕರ್ಥ ||" (1-59-5)

ದ್ಯಾವಾ ಪೃಥಿವೀಗಳಿಗಿಂತಲೂ ಇವನು ಮಹತ್ತಮನಾಗಿದ್ದಾನೆ. 'ಆ ರೋದಸೀ ಅಪೃಣಾ ಜಾಯಮಾನಃ' (6-6-2)

ಜನಿಸುತ್ತಲೇ ಇವನು ದ್ಯಾವಾಪೃಥಿವೀಗಳನ್ನೂ, ಸರ್ವಭುವನಗಳನ್ನೂ, ಭೂತಜಾತಗಳನ್ನೂ ವ್ಯಾಪಿಸಿದನು. ಹಾಗೆಯೇ ಎಲ್ಲ ಭೂತಜಾತಗಳನ್ನೂ ಅಂತಃ ಪ್ರವೇಶಿಸಿ ಪರಿಗ್ರಹಿಸಿದನು.

"ಜಾತ ಆಪೃಣೋ ಭುವನಾನಿ ರೋದಸೀ
ಅಗ್ನೇ ತಾ ವಿಶ್ವಾ ಪರಿಭೂರಸಿತ್ಮನಾ !" (3-3-10)

ಎಲ್ಲ ದೇವತೆಗಳನ್ನೂ ಹಿರಿಮೆಯಲ್ಲಿ ಇವನು ಮೀರಿಸಿದ್ದಾನೆ (1-68-2), ಎಲ್ಲ ದೇವತೆಗಳೂ ಇವನಿಗೆ ಹೆದರಿ ಇವನನ್ನು ಪೂಜಿಸುತ್ತಾರೆ.

"ವಿಶ್ವೇದೇವಾ ಅನಮಸ್ಯನ್ ಭಿಯಾನಾಃ
ತ್ವಾಮಗ್ನೇ ತಮಸಿ ತಸ್ಥಿವಾಂಸಂ !" (6-9-7)

ಇವನನ್ನು ಮಿತ್ರ, ವರುಣ, ಮರುತ್ತುಗಳು ಮತ್ತು ಎಲ್ಲ ದೇವತೆಗಳೂ ಅರ್ಚಿಸುತ್ತಾರೆ.

"ಮಿತ್ರಶ್ಚ ತುಭ್ಯಂ ವರುಣಃ ಸಹಸ್ಯೋಽ–
-ಗ್ನೇ ವಿಶ್ವೇಮರುತಃ ಸುಮ್ನಮರ್ಚನ್ !
ಯಚ್ಛೋಚಿಷಾ ಸಹಸಸ್ಪುತ್ರ ತಿಷ್ಠಾ
ಅಭಿಕ್ಷಿತೀಃ ಪ್ರಥಯನ್ ಸೂರ್ಯೋನ್ನನ್ ||" (3-14-4)

"ಸರ್ವಾಂತರ್ಯಾಮಿ(ಸೂರ್ಯ)ಯಾದ ಈ ಅಗ್ನಿದೇವ ಮನುಷ್ಯರನ್ನು ಅಭಿಲಕ್ಷಿಸಿ ಮಾರ್ಗಪ್ರದರ್ಶನಮಾಡಿ ಮುಂದೆ ಒಯ್ಯುವ ರಶ್ಮಿಗಳನ್ನು (ನ್ನನ್) ಸರ್ವತಃ ವಿಸ್ತಾರಗೊಳಿಸಿ ದೀಪ್ತಿಯಿಂದ ಬೆಳಬೆಳಗುತ್ತಾನೆ. ಅದರಿಂದಲೇ, ಬಲವಾನ್ ಆದ ಅಗ್ನಿದೇವನೇ, ಮಿತ್ರ, ವರುಣ, ಎಲ್ಲ ಮರುದ್ದೇವತೆಗಳು–ಇವರೆಲ್ಲರೂ ನಿನ್ನನ್ನು ಅರ್ಚಿಸಿ ಪೂಜಿಸುತ್ತಾರೆ."

ಇವನ ಮಹತ್ವದೆದುರು ಮಾನವರೂ ದೇವತೆಗಳೂ ಸಹ ತಲೆಬಾಗುತ್ತಾರೆ. ಇವನು ಸಹಸ್ರಜಿತ್, ದಸ್ಯುಧ್ವಂಸಮಾಡಿ ಕರ್ಮನಿಷ್ಠರಾದ ಆರ್ಯರ ತೇಜೋವೃದ್ಧಿಯನ್ನು ಮಾಡುವವನಿವನು (8-5-6) ; ಕರ್ಮಭ್ರಷ್ಟರಾದ ಅನಾರ್ಯರಾದ ಪಣಿಗಳನ್ನು ಇವನು ಧ್ವಂಸಮಾಡುವವನು. (7-6-3). ಇವನನ್ನೂ ವೃತ್ರಧ್ವಂಸಕನೆಂದು ಕೆಲವು ಕಡೆ ಹೇಳಿದ್ದಾರೆ.

ಸರ್ವದೇವತೆಗಳೂ ಇವನನ್ನು ಪೂಜಿಸುವರೆಂಬ ಭಾವ ಕೆಳಗಿನ ಮಂತ್ರದಲ್ಲಿಯೂ ಇದೆ.

ತ್ರೀಣಿಶತಾ ತ್ರೀಸಹಸ್ರಾಣ್ಯಗ್ನಿಂ
ತ್ರಿಂಶಚ್ಚದೇವಾ ನವಚಾಸಪರ್ಯನ್ |
ಔಕ್ಷನ್ ಘೃತೈರಸ್ತೃಣನ್ ಬರ್ಹಿರಸ್ಮಾ
ಆದಿದ್ಧೋತಾರಂ ನ್ಯಸಾದಯಂತ || (3-9-9)

ಸರ್ವಶಕ್ತನಾದ ಈ ಅಗ್ನಿದೇವ ಸರ್ವವನ್ನೂ ಸೃಜಿಸಿದ. ಇವನೇ ಸೃಷ್ಟಿಕರ್ತ. ಎಲ್ಲರನ್ನೂ ರಕ್ಷಿಸುವ ಈ ಅಗ್ನಿದೇವ ದ್ಯಾವಾಪೃಥಿವೀಗಳನ್ನು ಸೃಜಿಸಿದ 'ಜನಿತಾರೋದೋಸ್ಯೋಃ' (1-96-4). ಇವನ ಕಟ್ಟಳೆಯನ್ನು ದ್ಯಾವಾಪೃಥಿವೀಗಳು ಪಾಲಿಸುವುವು (7-5-4). ಇವುಗಳೆರಡನ್ನೂ ಎರಡು ಚರ್ಮಗಳನ್ನು ಹಾಸುವಂತೆ ಇವನು ಹರಡಿದ–'ವಿ ಚರ್ಮಣೀವ ಧಿಷಣೇ ಅವರ್ತಯದ್ವೈಶ್ವಾನರೋ ವಿಶ್ವಮಧತ್ತವೃಷ್ಣಮ್' (6-8-3). 'ಎರಡು ಲೋಕಗಳೂ ಬೇರೆಬೇರೆಯಾಗಿ ನಿಲ್ಲುವಂತೆ ಮಾಡಿದವನಿವನು. ಅಂತರಿಕ್ಷವನ್ನು ಅಳೆದು ನಿಲ್ಲಿಸಿದವನಿವನು.'

'ವ್ಯಂತರಿಕ್ಷಂ ಅಮಿಮೀತ ಸುಕ್ರತುಃ
ವೈಶ್ವಾನರೋ ಮಹಿನಾ ನಾಕಮಸ್ಪೃಶತ್ !' (6-8-2)

'ಲೋಕಗಳನ್ನು ಅಗ್ನಿ ನಿರ್ಮಿಸಿದ. ಎಲ್ಲರಿಗೂ ಹಿತತಮನಾದ ಅವನು ಸುಕರ್ಮ. ದ್ಯುಲೋಕಸಂಬಂಧಿಯಾದ ರೋಚಮಾನನಾದ ನಕ್ಷತ್ರಗಳನ್ನು ಇವನು ಸೃಜಿಸಿದ. ಎಲ್ಲ ಭೂತ ಜಾತಗಳನ್ನೂ ಇವನೇ ನಿರ್ಮಿಸಿದ. ಇವನು ಅದಬ್ಧ(ಅಹಿಂಸಿತ)ನಾಗಿ ಸರ್ವರಕ್ಷಕನಾಗಿದ್ದಾನೆ' ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ–

'ವಿಯೋ ರಜಾಂಸಿ ಅಮಿಮೀತ ಸುಕ್ರತುಃ
ವೈಶ್ವಾನರೋ ವಿದಿವೋ ರೋಚನಾ ಕವಿಃ !
ಪರಿಯೋ ವಿಶ್ವಾ ಭುವನಾನಿ ಪಪ್ರಥೇ
ಅದಬ್ಧೋ ಗೋಪಾ ಅಮೃತಸ್ಯ ರಕ್ಷಿತಾ ||' (6-7-7)

ಜಾತಪ್ರಜ್ಞನಾದ ಈ ಮಹಾನುಭಾವನಾದ ಅಗ್ನಿದೇವ ಹಾರಾಡುವ ಪಕ್ಷಿಗಳನ್ನೂ, ಹರಿದಾಡುವ ಸರೀಸೃಪಾದಿಗಳನ್ನೂ, ಸ್ಥಾವರಗಳಾದ ವೃಕ್ಷಾದಿಗಳನ್ನೂ ಮತ್ತು ಜಂಗಮ ರೂಪಿಗಳನ್ನೂ ಸೃಜಿಸಿದನು. ಈ ಭಾವ ಕೆಳಗಿನ ಮಂತ್ರದಲ್ಲಿದೆ :

'ಸ ಪತತ್ರೀತ್ವರಂ ಸ್ಥಾ ಜಗದ್ಯತ್
ಶ್ವಾತ್ರಂ ಅಗ್ನಿ ರಕೃಣೋಜ್ಜಾತವೇದಾಃ |' (10-88-4)

ಹೀಗೆ ಸ್ಥಾವರ ಜಂಗಮಾತ್ಮಕವಾದ ಜಗತ್ತನ್ನು ಸೃಜಿಸಿದವನು ಈ ಅಗ್ನಿದೇವನೇ ಸರ್ವರನ್ನೂ ಸೃಜಿಸಿದ ಈ ಮಹಾನುಭಾವ ಸರ್ವರ ರಕ್ಷಕನೂ ಆಗಿದ್ದಾನೆ. ಇತರ ಎಲ್ಲ ದೇವತೆಗಳಿಗಿಂತಲೂ ಹೆಚ್ಚಾಗಿ ಅಗ್ನಿ ಮಾನವರಿಗೆ ಸಂಬಂಧಿಸಿದ್ದಾನೆ. ಇವನು ಮಾನವರ ಸಖಾ, ಬಂಧು. ಅಮರ್ತ್ಯನಾದ ಇವನು ಮರ್ತ್ಯರ ನಡುವೆ ಅಧಿವಾಸ ಮಾಡುವನು. 'ಗೃಹಪತಿ' ಎಂಬ ವಿಶೇಷಣ ಹೆಚ್ಚಾಗಿ ಕೊಡಲಾಗಿರುವುದು ಇವನಿಗೇ–'ತ್ವಮಗ್ನೇ ಗೃಹಪತಿಸ್ತ್ವಂಹೋತಾ ನೋ ಅಧ್ವರೇ' (7-16-5). ಇವನು ಪ್ರತಿಯೊಬ್ಬರ ಗೃಹದಲ್ಲಿಯೂ ವಾಸಿಸುವನು. ಆದರೆ ತನ್ನ ಸ್ಥಾನದಲ್ಲಿಯೂ ಇದ್ದುಕೊಂಡು ಎಲ್ಲರೊಡನೆಯೂ ಇರಬಲ್ಲವನು. ಯಜಮಾನರ ಗೃಹಗಳಲ್ಲಿಯೂ ಇರುತ್ತಾ ದ್ಯುಲೋಕದಲ್ಲಿಯೂ ಇದ್ದು ರಕ್ಷಣೆಯನ್ನೊದಗಿಸುವ ಮಹಾತ್ಮನಿವನು. 'ಅಪ್ರೋಷಿವಾನ್ ಗೃಹಪತಿರ್ಮಹಾನ್ ಅಸಿ' (8-60-19) 'ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ' ಎಂಬ ಉಕ್ತಿಯ ಮೂಲವಿಲ್ಲಿದೆ ಎಂದು ಕಾಣಬಹುದು. ಅನೂನ್ಯವಾಗಿ ಸರ್ವಸ್ಥಾನಗಳಲ್ಲಿಯೂ ಸರ್ವದಾ ಇರಬಲ್ಲ ಮಹಾತ್ಮನಿವನು. ಇವನು ಮಾನವರ ಅತಿಥಿ. ಇವನು ಪ್ರತಿಗೃಹದಲ್ಲಿಯೂ ಅತಿಥಿಯಾಗಿದ್ದಾನೆ (10-91-2). ದೀಪ್ತಜ್ವಾಲೆಯುಳ್ಳ ಸರ್ವಜ್ಞನಾದ ಈ ಅಗ್ನಿದೇವನನ್ನು ಗಾರ್ಹಪತ್ಯಾಗ್ನಿಯ ರೂಪದಲ್ಲಿ ಯಾಜಕರು ಅತಿಥಿಯನ್ನು ಪೂಜಿಸುವಂತೆ ಪೂಜಿಸುವರು (5-8-2). ಇವನು, ಮಾನವರ

ಸಮೀಪ ಬಂಧು (6-15-1). ಇವನು ಕುಟುಂಬದಲ್ಲಿ ಎಂದಿನಿಂದಲೂ ನೆಲಸಿರುವುದರಿಂದ ಪುರಾತನವಾದ ಸಖ್ಯ ಇವನೊಡನೆ ಬೆಳೆದಿದೆ. ಪೂರ್ವೀಕರು ಪೂಜಿಸಿದಂಥ ಮಹಾತ್ಮನಿವನು. ಇವನು ಹವಿಸ್ಸನ್ನು ಸ್ವೀಕರಿಸುವುದಷ್ಟೇ ಅಲ್ಲದೆ ಇತರ ದೇವತೆಗಳಿಗೂ ಹವಿಸ್ಸನ್ನು ಒಯ್ಯುತ್ತಾನೆ. ಅಗ್ನಿಯು ಹವಿಸ್ಸನ್ನು ತಂದುಕೊಟ್ಟರೇ ಇತರ ದೇವತೆಗಳಿಗೂ ಪ್ರೀತಿ. ಇಲ್ಲದಿದ್ದರೆ ಅವರು ಸಂತೋಷಪಡರು–'ನ ಋತೇ ತ್ವದಮೃತಾ ಮಾದಯಂತಿ' (7-11-6). ಇವನು ದೇವತೆಗಳನ್ನು ಯಜ್ಞಮಂಟಪಕ್ಕೆ ಕರೆತರುವನು (3-14-2). ದೇವತೆಗಳು ಪೃಥ್ವಿಗೆ ಬಂದು ಹವಿರ್ಭಾಗಗಳನ್ನು ಸ್ವೀಕರಿಸಲು ಮಾರ್ಗದರ್ಶನ ಮಾಡುವವನಿವನು. ಆದ್ದರಿಂದ ಇವನು ಹವ್ಯವಾಹ. ಇವನು ದೇವತೆಗಳ ದೂತ.

ಯಾಗ ಪ್ರಧಾನವಾದ ಕಾರಣದಿಂದಲೂ ಅಗ್ನಿದೇವ ಯಾಗಗಳ ನಿರ್ವಾಹಕನಾದುದರಿಂದಲೂ ಇವನು ಋತ್ವಿಕ್, ಪುರೋಹಿತ, ಹೋತಾ.

ಅಗ್ನಿಮೀಳೇ ಪುರೋಹಿತಂ
ಯಜ್ಞಸ್ಯ ದೇವಂ ಋತ್ವಿಜಂ।
ಹೋತಾರಂ ರತ್ನಧಾತಮಂ ॥ (1-1-1)

ಇವನು ದೇವತೆಗಳ ಮತ್ತು ಮಾನವರ ಪುರೋಹಿತ, ಕವಿ, ಅಧ್ವರ್ಯು, ಬ್ರಹ್ಮನ್, ಹೋತೃ, ಅಧ್ವರ್ಯು ಮೊದಲಾದ ಋತ್ವಿಕ್ಕುಗಳೆಲ್ಲರ ಕೆಲಸವನ್ನೂ ಈ ದೇವನೇ ನಿರ್ವಹಿಸುವನಾದುದರಿಂದ ಇವನನ್ನು ಇವೆಲ್ಲ ಹೆಸರುಗಳಿಂದ ಕರೆದಿದ್ದಾರೆ. ತನ್ನ ದೈವಶಕ್ತಿಯಿಂದ ಯಜ್ಞವನ್ನು ನಿರ್ವಹಿಸಲು ಸಹಾಯ ಮಾಡುವವನಿವನು. ಅಗ್ನಿದೇವ ಪುರೋಹಿತನ ಹಾಗೆಯೇ ಋಷಿಯೂ ಹೌದು (9-66-20). 'ತ್ವಮಗ್ನೇ ಪ್ರಥಮೋ ಅಂಗಿರಾ ಋಷಿಃ' (1-31-1) ಮತ್ತು 'ಋಷಿಃ ಶ್ರೇಷ್ಠ: ಸಮಿಧ್ಯಸೇ' (3-21-3) ಎಂದು ಇವನನ್ನು ಸ್ತುತಿಸಿದ್ದಾರೆ. ತನ್ನ ಪ್ರಜ್ಞೆಯ ಬಲದಿಂದಲೇ ಸರ್ವವನ್ನೂ ತಿಳಿಯಬಲ್ಲವನಿವನು–'ಕವಿಃ ಕಾವ್ಯೇನಾಸಿ ವಿಶ್ವವಿತ್ (10-91-3) ಕವಿಕ್ರತುಃ, ವಿಶ್ವವೇದಃ ಎಂಬ ವಿಶೇಷಣಗಳು ಅವನ ಸರ್ವಜ್ಞತ್ವವನ್ನು ಸೂಚಿಸುತ್ತವೆ

ಅಗ್ನಿದೇವ ಅಸುರಧ್ವಂಸಮಾಡಿ ಮಾನವರನ್ನು ಸಲಹುವನು. ಆದುದರಿಂದ ಇವನು 'ರಕ್ಷೋಹನ್'. ತನ್ನ ವಿಸ್ತೀರ್ಣವಾದ ತೇಜಸ್ಸಿನಿಂದ ಅತ್ಯರ್ಥವಾಗಿ ದೀಪ್ಯಮಾನನಾದ ಅಗ್ನಿದೇವ ಕರ್ಮಾನುಷ್ಠಾನಗಳಿಗೆ ವಿಘ್ನಮಾಡುವ ಶತ್ರುಗಳನ್ನೂ, ರಾಕ್ಷಸರನ್ನೂ ನಾಶಮಾಡುವನೆಂದು ಕೆಳಗಿನ ಮಂತ್ರದಲ್ಲಿ ಹೇಳಿದೆ–

'ವಿಪಾಜಸಾ ಪೃಥುನಾ ಶೋಶುಚಾನೋ
ಬಾಧಸ್ವ ದ್ವಿಷೋ ರಕ್ಷಸೋ ಅಮೀವಾಃ |' (3-15-1)

ಅದೇ ಭಾವ ಇನ್ನೂ ಅನೇಕ ಮಂತ್ರಗಳಲ್ಲಿ ಬಂದಿದೆ.

'ಯೋ ಅಪಾಚೀನೇ ತಮಸಿ ಮದಂತೀಃ
ಪ್ರಾಚೀಶ್ಚಕಾರ ನೃತಮಃ ಶಚೀಭಿಃ |' (3-6-4)

'ನೇತೃತಮನಾದ ಅಗ್ನಿ ಪ್ರಕಾಶರಹಿತವಾದ ಅಂಧಕಾರದಲ್ಲಿದ್ದ ಪ್ರಜೆಗಳನ್ನು ಉಷೆಯ ಪ್ರಕಾಶದಿಂದ ಋಜುಗಾಮಿಗಳಾಗುವಂತೆ ಮಾಡಿದ.' ಹೀಗೆ ಅಗ್ನಿದೇವ ಅಂಧಕಾರ ನಾಶಕ ಮತ್ತು ಜ್ಯೋತಿಪ್ರದ.

ಎಲ್ಲ ದೇವತೆಗಳೂ ಅಗ್ನಿಯ ರೂಪವೇ ಎಂದು ಋಷಿ ಹೇಳಿದ್ದಾರೆ. ಅಗ್ನಿಯೇ ವರುಣ,

ಅಗ್ನಿಯೇ ಮಿತ್ರ ಎಂದು ಹೇಳಲಾಗಿದೆ (2-1-4). ಅವನು ಯಾಗಕ್ಕೆ ಬರುವಾಗ ವರುಣ ರೂಪಿಯೆಂದೂ (10-8-5) ಆರಣಿಗಳಿಂದ ಉತ್ಪನ್ನನಾದಾಗ ಮಿತ್ರನೆಂದೂ (5-3-1) ಹೇಳಿದ್ದಾರೆ.

ಕೆಳಗಿನ ಮಂತ್ರಗಳಲ್ಲಿ ಅನೇಕ ದೇವತೆಗಳೊಡನೆ ಅಗ್ನಿಗೆ ತಾದಾತ್ಮ್ಯ ಹೇಳಿದ್ದಾರೆ–

ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ
ತ್ವಂ ವಿಷ್ಣುರುರುಗಾಯೋ ನಮಸ್ಯಃ।
ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ
ತ್ವಂ ವಿಧರ್ತಃ ಸಚಸೇ ಪುರಂ ಧ್ಯಾ ॥

ತ್ವಮಗ್ನೇ ರಾಜಾ ವರುಣೋ ಧೃತವ್ರತಃ
ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ
ತ್ವಮರ್ಯಮಾ ಸತ್ಪತಿರ್ಯಸ್ಯ ಸಂಭುಜಂ
ತ್ವಮಂಶೋ ವಿದಥೇ ದೇವಭಾಜಯುಃ ॥

ತ್ವಮಗ್ನೇ ತ್ವಷ್ಟಾ ವಿಧತೇ ಸುವೀರ್ಯಂ
ತವಗ್ನಾವೋ ಮಿತ್ರಮಹಃ ಸಜಾತ್ಯಮ್ ।
ತ್ವಮಾಶುಹೇಮಾ ರರಿಷೇಸ್ವಶ್ವ್ಯಂ
ತ್ವಂ ನರಾಂ ಶರ್ಧೋ ಅಸಿಪುರೂವಸುಃ ॥

ತ್ವಮಗ್ನೇ ರುದ್ರೋ ಅಸುರೋ ಮಹೋದಿವಃ
ತ್ವಂಶರ್ಧೋ ಮಾರುತಂ ಪೃಕ್ಷ ಈಶಿಷೇ ।
ತ್ವಂ ವಾತೈರರುಣೈರ್ಯಾಸಿ ಶಂಗಯಃ
ತ್ವಂಪೂಷಾ ವಿಧತಃ ಪಾಸಿನುತ್ಮನಾ ॥

ತ್ವಮಗ್ನೇ ದ್ರವಿಣೋದಾ ಅರಂಕೃತೇ
ತ್ವಂ ದೇವಃ ಸವಿತಾ ರತ್ನಧಾ ಅಸಿ ।
ತ್ವಂ ಭಗೋ ನೃಪತೇ ವಸ್ವ ಈಶಿಷೇ
ತ್ವಂ ಪಾಯುರ್ದಮೇ ಯಸ್ತೇಽವಿಧತ್ ॥ (2-1-3 ರಿಂದ 7)

ಈ ಮಂತ್ರಗಳಿಂದ 'ಅಗ್ನಿಸ್ಸರ್ವಾದೇವತಾಃ' ಎಂಬಂತೆ ಎಲ್ಲ ದೇವತೆಗಳೂ ಅಗ್ನಿಯ ರೂಪ ಎಂದು ತಿಳಿದುಬರುತ್ತದೆ. ಅನೇಕ ದಿವ್ಯರೂಪಗಳನ್ನು ಅಗ್ನಿ ಧರಿಸಿದ್ದಾನೆ (3-38-7). ಅವನಿಗೆ ಅನೇಕ ನಾಮಗಳುಂಟು (3-20-3). ಎಲ್ಲ ದೇವತೆಗಳನ್ನೂ ಅಗ್ನಿ ಸುತ್ತುವರಿದಿದ್ದಾನೆ, ನೇಮಿ ಅರೆಕಾಲುಗಳನ್ನು ಸುತ್ತುವರಿದಂತೆ–

ಅಗ್ನೇ ನೇಮಿ ರರಾಜ್ ಇವ
ದೇವಾಂಸ್ತ್ವಂ ಪರಿಭೂರಸಿ ।
ಆ ರಾಧಶ್ಚಿತ್ರಮೃಂಜಸೇ ॥ (5-13-6)

ಈ ಲೋಕದಲ್ಲಿರುವ ಸಮಸ್ತವೂ ಅಗ್ನಿಯ ರೂಪವೇ-

ಅಸಚ್ಚ ಸಚ್ಚ ಪರಮೇ ವ್ಯೋಮನ್
ದಕ್ಷಸ್ಯ ಜನ್ಮನ್ನದಿತೇರುಪಸ್ಥೇ ।
ಅಗ್ನಿರ್ಹ ನಃ ಪ್ರಥಮಜಾ ಋತಸ್ಯ
ಪೂರ್ವ ಆಯುನಿ ವೃಷಭಶ್ಚ ಧೇನುಃ ॥ (10-5-7)

ಇಂಥ ಮಹಾಮಹಿಮನಾದ ಅಗ್ನಿದೇವ ಭಕ್ತರಿಗೆ ಅನುಗ್ರಾಹಕನಾಗಿದ್ದಾನೆ. ನೂರಾರು ಕಬ್ಬಿಣದ ಕೋಟೆಗಳಿಂದಾಗುವ ರಕ್ಷಣೆಯನ್ನು ಇವನು ನೀಡುತ್ತಾನೆ ಭಕ್ತರಿಗೆ (7-3-7). ನಾವೆಯಿಂದ ಸಮುದ್ರತರಣಮಾಡಿಸುವಂತೆ ಇವನು ಭಕ್ತರನ್ನು ಕಷ್ಟಗಳಿಂದ ದಾಟಿಸುತ್ತಾನೆ–'ವಿಶ್ವಾನಿ ನೋ ದುರ್ಗಹಾ ಜಾತವೇದಃ ಸಿಂಧುಂ ನ ನಾವಾ ದುರಿತಾತಿಪರ್ಷಿ' (2-4-9). ಅಗ್ನಿಯನ್ನು ಸೇವಿಸುವವನನ್ನು ಸರ್ವದಾ ಎಲ್ಲ ದುಃಖಗಳಿಂದ ಇವನು ಪಾರುಮಾಡುತ್ತಾನೆ. 'ಯಾವ ಯಜಮಾನನು ಅಗ್ನಿಗಾಗಿ ಕ್ಷಿಪ್ರವಾಗಿ ಅನ್ನ, ಆಜ್ಯಾಹುತಿ, ಸಮಿತ್ತು-ಇವುಗಳನ್ನು ತಂದು ಅಗ್ನಿಯಲ್ಲಿ ಹೋಮಮಾಡಿ ಪೋಷಿಸುವನೋ ಅಂಥವನನ್ನು ಸಹಸ್ರನೇತ್ರಗಳಿಂದ ಅಗ್ನಿದೇವ ನೋಡುವನು. ಎಲೈ ಅಗ್ನಿಯೇ, ನೀನು ಸರ್ವತಃ ನಮಗೆ ಅನುಕೂಲನಾಗಿ ಇರುವೆ' ಎಂದು ಕೆಳಗಿನ ಮಂತ್ರದಲ್ಲಿ ಹೇಳಿದ್ದಾರೆ–

> ಯೋ ಅಸ್ಮಾ ಅನ್ನಂ ಜುಹ್ವಾ ದದಾತ್ಯಾಜ್ಯೈಃ
> ಘೃತೈರ್ಜುಹೋತಿ ಪುಷ್ಯತಿ ।
> ತಸ್ಮೈ ಸಹಸ್ರ ಮಕ್ಷಭಿರ್ವಿಚಕ್ಷೇಽಗ್ನೇ
> ವಿಶ್ವತಃ ಪ್ರತ್ಯಙ್ ಅಸಿತ್ವಮ್ ॥ (10-79-5)

ಸಹಸ್ರ ನೇತ್ರಗಳಿಂದ ಅಗ್ನಿದೇವ ತನ್ನ ಸೇವೆ ಮಾಡುವವರನ್ನು ನೋಡಿ ಅವರಿಗೆ ಸಕಲವಾದ ರಕ್ಷಣೆಯನ್ನು ನೀಡುವನು. ಎಲ್ಲ ವಿಧವಾದ ಶ್ರೇಯಸ್ಸೂ ಅಗ್ನಿದೇವನಿಂದಲೇ ಬರುವುದು. ವೃಕ್ಷದಿಂದ ಶಾಖೋಪಶಾಖೆಗಳು ಹೊರಡುವಂತೆ, ಸರ್ವನಿಧಿಗೂ ಒಡೆಯನಾದ ಇವನು ಅಮಿತವಾದ ಸಂಪತ್ತಿಯನ್ನು ಕರುಣಿಸುವನು. ಭೂಮ್ಯಂತರಿಕ್ಷಗಳೇ ಮೊದಲಾಗಿ ಸರ್ವಸ್ಥಾನಗಳಲ್ಲಿಯೂ ಇವನು ಸಂಪದಧಿದ್ಯನಾಗಿದ್ದಾನೆ. ತನ್ನ ಕರುಣಾಕಟಾಕ್ಷದಿಂದ ನಿರ್ಧನತ್ವವನ್ನು ವಾರಣ ಮಾಡಬಲ್ಲ ಮಹಾಮಹಿಮನಿವನು. ಇಂಥ ಪರಮ ಕರುಣಾಳುವೂ ಕೃತಜ್ಞನೂ ಆದವನಿವನು. ಆದುದರಿಂದಲೇ ಅಗ್ನಿಭಕ್ತನೂ ಸಹ ಅವರ ಸಂಶ್ಲೇಷ ಎಂದಾಗುವುದೆಂದು ಹಂಬಲಿಸುತ್ತಾನೆ.

> 'ಕದಾ ತ ಉಕ್ಥಾ ಸಧಮಾದ್ಯಾನಿ
> ಕದಾ ಭವಂತಿ ಸಖ್ಯಾ ಗೃಹೇ ತೇ ।' (3-3-4)

'ನಿನಗಾಗಿ ಉತ್ತರವೇದಿಯನ್ನು ಸಿದ್ಧಗೊಳಿಸಿದ್ದೇನೆ. ದಯಮಾಡಬೇಕು. ಪತಿಯನ್ನು ಕಾಮಿಸುವ ಶೋಭನ ವಸ್ತ್ರೋಪೇತಳಾದ ಪತ್ನಿ ಪಕ್ಕದಲ್ಲಿ ಪತಿಗೆ ಎಡೆ ಮಾಡುವಂತೆ ಉತ್ತರವೇದಿಯನ್ನು ಸಿದ್ಧಗೊಳಿಸಿದೆ' ಎಂದು ಭಕ್ತ ಬೇಡಿದ್ದಾನೆ ಕೆಳಗಿನ ಮಂತ್ರದಲ್ಲಿ.

> 'ಅಯಂ ಯೋನಿಶ್ಚಕೃಮಾ ಯಂ ವಯಂತೇ
> ಜಾಯೇವ ಪತ್ಯ ಉಶತೀ ಸುವಾಸಾಃ ।' (3-3-2)

ಈ ಭಕ್ತರನ್ನನುಗ್ರಹಿಸುವ ದೇವ ಮರುಭೂಮಿಯಲ್ಲಿ ಬಂದ ಊಟೆಯಂತೆ–'ಧನ್ವನ್ನಿವ ಪ್ರಪಾ ಅಸಿ' (10-4-1). ಹಾಗೆ ಸಕಲಾಭೀಷ್ಟಗಳನ್ನೂ ಪೂರೈಸಿಕೊಡುವವನಿವನು. ಭಕ್ತರಲ್ಲಿ ಇವನ ವಾತ್ಸಲ್ಯ ಅಪಾರ. ಅವರೆಡೆಗೆ ಇವನು ಬರುವನು ಬೆಚ್ಚಗಿರುವ ಕೊಟ್ಟಿಗೆಗೆ ಪಶುಗಳು ಬರುವ ರೀತಿ–'ಯಂ ತ್ವಾ ಜನಾಸೋ ಅಭಿಸಂಚರಂತಿ ಗಾವ ಉಷ್ಣಮಿವ ವ್ರಜಂ ಯವಿಷ್ಠ' (10-4-2). ಇಂಥ ಅಪಾರ ಮಹಿಮನಾದ ದೇವನನ್ನು ಪರಿಮಿತವಾದ ಶಕ್ತಿಯುಳ್ಳ ಮಾನವರು ಅರಿಯುವುದೆಂತು ಸಾಧ್ಯ ? 'ಮೂಢರಾದ ನಾವು ಜ್ಞಾನಿಯಾದ ನಿನ್ನನ್ನೂ, ನಿನ್ನ ಮಹತ್ವವನ್ನೂ ತಿಳಿಯಲಾರೆವು. ನಿನ್ನ ಮಹಿಮೆ ನಿನಗೇ ಗೊತ್ತು.'

'ಮೂರಾ ಅಮೂರ ನ ವಯಂ ಚಿಕಿತ್ವ: ಮಹಿತ್ವಮಗ್ನೇ ತ್ವಮಂಗವಿತ್ಸೇ' (10-4-4) ಎಂದು ಅದಕ್ಕೇ ಹೇಳಿದರು.

ಅಗ್ನಿದೇವ ನಮಗೆ ಸರ್ವವಿಧವಾದ ಬಂಧು. 'ಅವನೇ ತಂದೆ ; ಅವನೇ ಬಂಧು ; ಅವನೇ ತಾಯಿ ; ಅವನೇ ಸೋದರ ; ಅವನೇ ಸಖಾ–'ಅಗ್ನಿಂ ಮನ್ಯೇಪಿತರ ಮಗ್ನಿಮಾಪಿಂ ಅಗ್ನಿಂ ಭ್ರಾತರಂ ಸದಮಿತ್ ಸಖಾಯಂ' (10-7-3).

ಅಗ್ನಿಯಲ್ಲಿ ಋಷಿ ಬೇಡುವುದಿದು–'ಹಿಂದಿನ ಮೈತ್ರಿಯನ್ನು ಮರೆಯಬೇಡ. ಮಂಜು ಪದಾರ್ಥವನ್ನು ಮುಚ್ಚುವಂತೆ, ಮುಪ್ಪು ನಮ್ಮನ್ನು ಮುಚ್ಚಿಬಿಡುವುದು, ಅದರಿಂದ ವಯಸ್ಸು ನಮ್ಮನ್ನು ಮುಪ್ಪುರಿಮಾಡುವ ಮೊದಲು ನಮಗಭಿಮುಖನಾಗಿ ಬಂದು ರಕ್ಷಿಸು' ಎಂದು–

ಮಾನೋ ಅಗ್ನೇ ಸಖ್ಯಾ ಪಿತ್ರ್ಯಾಣಿ
ಪ್ರಮರ್ಷಿಷ್ಠಾ ಅಭಿವಿದುಷ್ಕವಿಃ ಸನ್ ।
ನಭೋ ನ ರೂಪಂ ಜರಿಮಾ ಮಿನಾತಿ
ಪುರಾ ತಸ್ಯಾ ಅಭಿಶಸ್ತೇರಧೀಹಿ ॥ (1-71-10)

ನಿನ್ನನ್ನು ಧ್ಯಾನಿಸುವಂಥ ಒಳ್ಳೆಯ ಭಾವವನ್ನು ನಮ್ಮಲ್ಲಿ ಮೂಡಿಸು–'ಸಾ ತೇ ಸುಮತಿ ರ್ಭೂತ್ವಸ್ಮೇ' ಎಂದೂ ಕೇಳಿಕೊಂಡಿದ್ದಾರೆ ಈ ಭಕ್ತವರ್ಯರು.

ವೇದಋಷಿಗಳು ಅಗ್ನಿಗೆ ಸಲ್ಲಿಸಿರುವ ಅಮರ ಪ್ರಾರ್ಥನೆಯಿದು—

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್
ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜು ಹುರಾಣಮೇನೋ
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥

'ಎಲೈ ಅಗ್ನಿದೇವನೇ ನಮ್ಮನ್ನು ಸಂಪದ್ಯುಕ್ತವಾದ ಸನ್ಮಾರ್ಗದಲ್ಲಿ ನಡೆಸು. ನೀನು ಸಕಲ ಜ್ಞಾನಗಳನ್ನೂ ಹೊಂದಿರುವ ಮಹಾನುಭಾವನಾಗಿದ್ದೀಯೆ. ನಮ್ಮ ವಿರೋಧಿಯಾದ ಪಾಪವನ್ನು ಧ್ವಂಸಗೊಳಿಸು. ಮತ್ತೆಮತ್ತೆ ನಿನ್ನಲ್ಲಿ ನಾವು ನಮಿಸುತ್ತೇವೆ.' ಯಾಸ್ಕಾಚಾರ್ಯರು ಅಗ್ನಿಶಬ್ದಕ್ಕೆ ನಿರ್ವಚನ ಹೇಳುವಾಗ 'ಅಗ್ರಣೀರ್ಭವತಿ' (ನಿ. 7-14-4) ಎಂಬುವುದರಿಂದ ಸರ್ವಾರ್ಥಗಳಲ್ಲಿಯೂ ಅಗ್ರನಯನಮಾಡುವವನಿವನೆಂದು ಹೇಳುತ್ತಾರೆ. 'ಅಗ್ರಂ ಯಜ್ಞೇಷು ಪ್ರಣೀಯತೇ' ಎಂಬುವುದರಿಂದ ಯಾಗದಲ್ಲಿ ಎಲ್ಲರಿಗಿಂತ ಮೊದಲಾಗಿ ಇವನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಲಾಗುವುದೆಂದು ಸೂಚಿಸುವರು. ಇವನು ಪ್ರಸನ್ನನಾಗದಿದ್ದರೆ ಮತ್ತೆ ಯಾವ ಕರ್ಮವನ್ನೂ ಮಾಡಲಾಗುವುದೇ ಇಲ್ಲವಾದುದರಿಂದ ಇವನನ್ನು ಬಿಟ್ಟು ಆತ್ಮಧಾರಣ ಅಸಾಧ್ಯವಾಗಿದೆಯೆಂಬುದು ಸಿದ್ಧವಾಗುತ್ತದೆ. 'ಅಂಗಂ ನಯತಿ ಸನ್ನಮಮಾನಃ' ಎಂದು ಹೇಳಿ ಸರ್ವವನ್ನೂ ತನ್ನಲ್ಲಿ ಸೇರಿಸಿಕೊಳ್ಳುವನೆಂದೂ ಹೇಳುತ್ತಾರೆ(ಆತ್ಮಸಾತ್ ಕರೋತಿ).

ಹೀಗೆ ಸರ್ವರನ್ನೂ ಸೃಜಿಸಿ, ರಕ್ಷಿಸಿ ಸಲಹುತ್ತಿರುವ ಈ ದೇವ ಎಷ್ಟು ಶಕ್ತನೋ ಅಷ್ಟೇ ಕರುಣಾಳುವೆಂಬ ಅಂಶವನ್ನು ಬಹಳ ಸುಂದರವಾಗಿ ಹೇಳಿದ್ದಾರೆ. ಸರ್ವಧಾರಕ, ಸರ್ವಪೋಷಕನಿವನು. ಇವನಿಂದಲೇ ನಾವೂ ಅಸ್ತಿತ್ವವನ್ನು ಪಡೆಯುವುದು. ವಿಶ್ವವೇ ಅಗ್ನಿಯ ರೂಪ. ಇವನಿಲ್ಲದ ಎಡೆಯಿಲ್ಲ. ಮರದೊಳಗೂ, ನೀರಿನೊಳಗೂ, ಕಲ್ಲಿನೊಳಗೂ, ಸಮಸ್ತ ಜೀವಿಗಳೊಳಗೂ ಇವನು ಗೂಢನಾಗಿ ಪ್ರಕಾಶಿಸುತ್ತಾನೆ. ಇಂಥ ಪರಮಾತ್ಮ ಸರ್ವದರಲ್ಲಿಯೂ ಇದ್ದು ಸರ್ವರಕ್ಷಕನಾಗಿದ್ದಾನೆ. ಉಪನಿಷತ್ತಾದರೂ ಈ ಸರ್ವವ್ಯಾಪ್ತಿಯನ್ನೂ, ಸರ್ವತ್ರ ಅನುಪ್ರವೇಶವನ್ನೂ ಬಹಳ ಸುಂದರವಾಗಿ ಸಾರಿತು–'ಅನೇನ ಜೀವೇನಾತ್ಮನಾ ಅನುಪ್ರವಿಶ್ಯ

ನಾಮರೂಪೇ ವ್ಯಾಕರವಾಣಿ' ಎಂದು. ಇಂಥ ಅನುಪಮವಾದ ಅಗ್ನಿದೇವನ ಸ್ತುತಿಯನ್ನು ಅನುಪಮವಾಗಿ ಋಗ್ವೇದದಲ್ಲಿ ಕಾಣುತ್ತೇವೆ.

**ಪೃಥ್ವೀ**

ಪೃಥ್ವೀ ದೇವತೆಯನ್ನು ಪ್ರತ್ಯೇಕವಾಗಿ ಸ್ತುತಿಸಿರುವ ಸೂಕ್ತ ಋಗ್ವೇದದಲ್ಲಿ ಒಂದೇ ಒಂದು. ಈ ದೇವತೆಯನ್ನು ದ್ಯೌಃ ಎಂಬ ದೇವತೆಯೊಡನೆ ಸೇರಿಸಿ ಆರು ಸೂಕ್ತಗಳಲ್ಲಿ ಸ್ತುತಿಸಿದ್ದಾರೆ. ದ್ಯೌಃ ಮತ್ತು ಪೃಥಿವೀಗಳಿಬ್ಬರೂ ಒಬ್ಬರನ್ನೊಬ್ಬರು ಬಿಟ್ಟು ಇರಲಾರರು. ಈ ದೇವತಾದ್ವಂದ್ವ ಸಮವಾದ ಪ್ರಾಧಾನ್ಯವನ್ನು ಹೊಂದಿದೆ.

ಸಕಲಭೂತಜಾತಗಳಿಗೂ ಆಧಾರವಾಗಿದೆ ಪೃಥ್ವಿ. ಇದರ ಮಹತ್ವದಿಂದಲೇ ಎಲ್ಲರೂ ಜೀವಿಸಿ ಬಾಳುತ್ತಿರುವುದು. ಜನಜಂಗುಳಿಗೆ ಅನ್ನಪಾನಾದಿಗಳನ್ನು ಕರುಣಿಸಿ ರಕ್ಷಿಸುವುದು ಪೃಥಿವೀ. ಇದರ ಮಹತ್ವವನ್ನು ಮನಗಂಡ ಋಷಿಗಳು ಅದ್ಭುತವಾಗಿ ಈ ದೇವತೆಯನ್ನು ಸ್ತುತಿಸಿದ್ದಾರೆ. 'ಪೃಥು ದರ್ಶನಾತ್' ಎಂದು ಯಾಸ್ಕರು ಹೇಳಿದಂತೆ ಇದರ ವಿಸ್ತಾರವೂ, ಮಹತ್ವವೂ ಅಗಾಧವಾದ ಪ್ರಭಾವವನ್ನು ಬೀರಿವೆ. ಪರ್ವತ, ವನ, ಕಾನನ, ಫಲಪುಷ್ಪ, ಸಸ್ಯಸಮೃದ್ಧಿ, ನದ ನದಿಗಳಿಗೆ ಆಶ್ರಯ–ಇವೆಲ್ಲಾ ಪೃಥ್ವೀದೇವತೆಯ ಕರುಣೆಯಿಂದಲೇ ಆಗಿವೆ. 'ಸರ್ವಂಸಹಾ', 'ವಸುಂಧರಾ' ಎಂದು ಹೇಳಿದಂತೆ ನಮ್ಮ ಸಕಲಾಪರಾಧಗಳನ್ನೂ ಕ್ಷಮಿಸಿ ನಮ್ಮನ್ನೂ ರಕ್ಷಿಸುವುದು ಪೃಥ್ವೀ ದೇವತೆಯೇ. ಲೋಕದ ನಡೆನುಡಿ, ಜೀವನಗಳು ದ್ಯಾವಾಪೃಥಿವೀಗಳ ಕರುಣೆಯಿಂದಲೇ ಸಾಗುವುದರಿಂದ ಇವರನ್ನು ಋಷಿಗಳು 'ಪಿತರಾ', 'ಮಾತರಾ', 'ಜನಿತ್ರೀ' ಎಂದು ಅಭಿಮಾನಪೂರ್ವಕವಾಗಿ ಕರೆದಿದ್ದಾರೆ. ಜೀವನು ಲೋಕದಲ್ಲಿ ಜನಿಸುವ ಬಗೆಯನ್ನು ಉಪನಿಷತ್ತುಗಳು ವಿವೇಚಿಸಿವೆ. ಜೀವರಾಶಿಯನ್ನು ದ್ಯುಲೋಕದಲ್ಲಿ ದೇವತೆಗಳು ಮೊದಲು ಮೋಡದ ರೂಪಿನಲ್ಲಿ ಬಿಡುವರಂತೆ. ಅನಂತರ ಪರ್ಜನ್ಯ ರೂಪದಲ್ಲಿ ಬಂದು ಪೃಥಿವಿಯನ್ನು ಸೇರಿ ಸಸ್ಯಾದಿಗಳ ರೂಪವನ್ನು ಹೊಂದಿ ಪುರುಷನನ್ನು ಸೇರಿದ ನಂತರ (ಯೋಷಿತ್) ಸ್ತ್ರೀ ಗರ್ಭವನ್ನು ಸೇರಿ ಜನಿಸುವರು ಜೀವಕೋಟಿಗಳು. ಇದಕ್ಕೆ ಪಂಚಾಗ್ನಿ ವಿದ್ಯೆಯೆಂದು ಹೇಳುವರು. ಈ ವಿಧವಾದ ಜೀವಾವತರಣ ದ್ಯುಲೋಕದಿಂದ ಆರಂಭವಾಗಿ ಪೃಥಿವೀ ಲೋಕದಲ್ಲಿ ಆಗುವುದು. ಆದುದರಿಂದಲೇ ದ್ಯಾವಾಪೃಥಿವೀಗಳಿಗೆ ಪ್ರಾಧಾನ್ಯ. ಇವರದು ನಿತ್ಯ ಸಂಬಂಧ.

ಇವರು ನಿತ್ಯತರುಣರು. ಇವರಿಗೆ ಮುಪ್ಪಂಬುವುದಿಲ್ಲವೇ ಇಲ್ಲ. ಇವರ ಪ್ರಭಾವ ವಿಸ್ತಾರವಾದುದು. ಮಾನವರ ಸಕಲ ಪ್ರವೃತ್ತಿಗಳನ್ನೂ ಇವರು ಪ್ರೇರಿಸುವರು. 'ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ' (ಗೀತೆ 3.14) ಎಂದು ಹೇಳಿರುವಂತೆ ಜನರ ಆಹಾರವನ್ನು ಕರುಣಿಸುವವರು ಇವರಿಬ್ಬರೇ. 'ದ್ಯೌಷ್ಪಿತಃ ಪೃಥಿವೀಮಾತಃ' (4-51-5) ಎಂದು ವರ್ಣಿಸಿರುವಂತೆ ಈ ಮಾತಾಪಿತೃಗಳು ಸರ್ವರನ್ನೂ ರಕ್ಷಿಸಿ ಸದ್ಧರ್ಮದ ಅಭ್ಯುದಯವನ್ನು ಮಾಡಿಸುವರು. ಯಜ್ಞಯಾಗಗಳು ನಡೆಯುವಂತೆ ಉಪಕರಿಸುವವರೂ ಇವರೇ. ಯಜ್ಞದಿಂದ ಪರ್ಜನ್ಯ ವರ್ಷಿಸುವನು. ಅವನಾದರೂ ದ್ಯುಲೋಕದಿಂದ ಪೃಥಿವೀಲೋಕಕ್ಕೇ ವರ್ಷಿಸುವನು. ಹೀಗೆ ಈ ಉಭಯ ದೇವತೆಗಳೂ ಸರ್ವರಕ್ಷಕರಾಗಿದ್ದಾರೆ–'ಪಿತಾ ಮಾತಾ ಚ ಭುವನಾನಿ ರಕ್ಷತಃ' (1-160-2).

ದೀಪ್ತಿಮಂತರೂ, ಸರ್ವಲೋಕಸೇವಿತರೂ, ಪರಮಕರುಣಾಳುಗಳೂ ಆದ ಇವರನ್ನುಳಿದು ಬಾಳಲೂ ಸಾಧ್ಯವಿಲ್ಲ ಜೀವಿಗಳಿಗೆ. ಇವರಿಬ್ಬರೂ ಕ್ಲೃಪ್ತವಾದ ಅಂತರದಲ್ಲಿ ಹೀಗೆ

ನಿಂತಿರುವುದಾದರೂ ಎಂಥ ಆಶ್ಚರ್ಯ ! ಹೀಗೆ ಇವರನ್ನು ಪೃಥಕ್ಕರಿಸಿ ನಿಲ್ಲಿಸಿದವನು ಸರ್ವಪ್ರೇರಕನೂ, ಧಾರಕನೂ ಆದ ವರುಣದೇವ. ಇವರನ್ನು ಇಂತು ನಿಲ್ಲಿಸಿದ ಆ ಮಹಾಮಹಿಮನನ್ನು ಕೊಂಡಾಡುತ್ತಾರೆ ಋಷಿಗಳು-

"ದ್ಯಾವಾಪೃಥಿವೀ ವರುಣಸ್ಯ ಧರ್ಮಣಾ
ವಿಷ್ಕಭಿತೇ ಅಜರೇ ಭೂರಿರೇತಸಾ |" (6-70-1)

ವರುಣಭಗವಂತನ ಸಂಕಲ್ಪದಿಂದ ಈ ದ್ಯಾವಾಪೃಥಿವೀಗಳು ಕ್ಲೃಪ್ತವಾದ ಅಂತರದಲ್ಲಿ ನಿಲ್ಲಿಸಲ್ಪಟ್ಟಿದ್ದಾರೆ. ಇವರಿಬ್ಬರೂ ಬಹುಧಾರಕರು. ದ್ಯುಲೋಕದಿಂದ ಅಖಂಡವಾದ ವೃಷ್ಟಿಧಾರೆಯಾಗುವುದು. (ಆಹುತ್ಯುದ್ಭೂತರಸಧಾರಾಃ ಪೃಥಿವ್ಯಾಃ) ಪೃಥಿವೀ ಲೋಕದಿಂದ ರಸಧಾರೆಗಳು ಸ್ರವಿಸುವುವು. ಸಸ್ಯಸಮೃದ್ಧಿಹೇತುವಾದ ಉದಕ ಇವರಿಬ್ಬರ ಕರುಣೆಯಿಂದಲೇ ಲಭಿಸುವುದು. ಆದುದರಿಂದಲೇ ಇವರನ್ನು ಸಕಲಭೂತ ಜಾತಗಳ ಪ್ರಭುವೆಂದು ಕರೆದಿದ್ದಾರೆ.

ಇವರಿಬ್ಬರೂ 'ಋತಾವರೀ' ಎಂದರೆ ಋತವನ್ನು ಪಾಲಿಸುವವರಾಗಿದ್ದಾರೆ. ಪ್ರಭಾಯುತನಾದ ಸೂರ್ಯನೂ ಋತವನ್ನು ಪಾಲಿಸುತ್ತ ಇವರಿಬ್ಬರ ನಡುವೆ ಸಂಚರಿಸುವನು ಎಂಬ ಭಾವನೆ ಕೆಳಗಿನ ಮಂತ್ರದಲ್ಲಿದೆ—

'ಸುಜನ್ಮನೀ ಧಿಷಣೇ ಅಂತರೀಯತೇ
ದೇವೋ ದೇವೀ ಧರ್ಮಣಾ ಸೂರ್ಯಃ ಶುಚಿಃ' || (1-160-1)

ಇಂಥ ಸರ್ವೋಪಕಾರಕರಾದ ದೇವತೆಗಳಿಬ್ಬರನ್ನೂ ಧ್ಯಾನಿಸುವಾಗ ಇವರನ್ನು ಸೃಜಿಸಿದ ಆ ಪರಮಾತ್ಮನೆಷ್ಟು ದಯಾಮಯನೆಂದೂ, ಶಕ್ತನೆಂದೂ ಋಷಿ ಆ ಪರಮಾತ್ಮನನ್ನು ಕೊಂಡಾಡುತ್ತಾರೆ. ಆ ಸರ್ವಕಾರಣನಾದ ಪರಮನ ಮಹಿಮೆ ಮತ್ತು ಕೃಪೆ ಚಿರಂತನವಾಗಿ ನಿಲ್ಲುವುದು ಋಷಿಯ ಭಕ್ತಿನಮ್ರವಾದ ಹೃದಯದಲ್ಲಿ.

"ಅಯಂ ದೇವಾನಾಂ ಅಪಸಾಮಪಸ್ತಮೋ
ಯೋ ಜಜಾನ ರೋದಸೀ ವಿಶ್ವಶಂಭುವಾ |
ವಿ ಯೋ ಮಮೇ ರಜಸೀ ಸುಕ್ರತೂಯಯಾ
ಅಜರೇಭಿಃ ಸ್ಕಂಭನೇಭಿಃ ಸಮಾನೃಚೇ ||" (1-160-4)

'ದೇವತೆಗಳಲ್ಲೆಲ್ಲಾ ಶ್ರೇಷ್ಠಕರ್ಮಯುಕ್ತನಾದ ದೇವನು ಸರ್ವಪ್ರಕಾರದಿಂದಲೂ ಭೂತಹಿತೈಷಿಗಳಾದ ಮಹಾನುಭಾವರಾದ ದ್ಯಾವಾಪೃಥಿವೀಗಳನ್ನು ಸೃಜಿಸಿದನು. ಅಷ್ಟೇ ಅಲ್ಲ. ಆ ಮಹಾನುಭಾವ ಇವುಗಳನ್ನು ಭೂತಹಿತಾರ್ಥವಾಗಿ ಪರಿಚ್ಛಿನ್ನಗೊಳಿಸಿದನು. (ವಿಮಮೇ-ವಿಶೇಷೇಣ ಪರಿಚ್ಛಿನತ್ತಿ). ಪ್ರಾಣಿಗಳಿಗೆ ಸುಖವಾಗಲೆಂದು ಅಜರವಾದ ಸ್ತಂಭಗಳಿಂದ ಸರ್ವತಃ ದೃಢವಾಗಿ ಸ್ಥಾಪಿಸಿದ್ದಾನೆ. ಅಂಥ ಮಹಾತ್ಮ ಆ ಪರಮ."

ಮಳೆಗರೆದು ಜನರ ಧಾರಕರಾದ ಈ ದೇವತಾದ್ವಂದ್ವದಿಂದ ಋಷಿಗಳು ಯಜ್ಞವೃದ್ಧಿಯನ್ನೂ, ಧನವನ್ನೂ, ಅಮಿತವಾದ ಯಶಸ್ಸನ್ನೂ, ಅನ್ನವನ್ನೂ, ವೀರತ್ವವನ್ನೂ ಬೇಡುತ್ತಾರೆ.

'ಮಧು ನೋ ದ್ಯಾವಾಪೃಥಿವೀ ಮಿಮಿಕ್ಷತಾಂ
ಮಧುಶ್ಚುತಾ ಮಧುದುಘೇ ಮಧುವ್ರತೇ |
ದಧಾನೇ ಯಜ್ಞಂ ದ್ರವಿಣಂ ಚ ದೇವತಾ
ಮಹಿಶ್ರವೋ ವಾಜಮಸ್ಮೇ ಸುವೀರ್ಯಂ ||' (6-70-5)

ಪೃಥಿವೀ ದೇವತೆ ಎರಡು ರೂಪದಲ್ಲಿದ್ದಾಳೆಂದು ಯಾಸ್ಕಾದಿಗಳ ಮತ. ಕ್ಷಿತಿಜಲ ಮೊದಲಾದ

ಅಧಿಷ್ಠಾನದ್ರವ್ಯಕ್ಕೆ ಪುರುಷಾಕಾರಸಂಪತ್ತಿಲ್ಲದಿದ್ದರೂ ಆಯಾ ಅಭಿಮಾನಿ ದೇವತೆಗಳಿಗೆ ಪುರುಷಾಕಾರ ಸಂಪತ್ತುಂಟೆಂದು ಯಾಸ್ಕರು ನಿರ್ಣಯಿಸಿದ್ದಾರೆ. (ನಿರುಕ್ತ 7-7-8).

ಸಾಯಣಾಚಾರ್ಯರೂ

'ದ್ವಿರೂಪಾ ಪೃಥಿವೀ ಚೈಷಾ ಪ್ರತ್ಯಕ್ಷಾ ದೇವತಾಪಿ ಚ |
ಮಧ್ಯಸ್ಥಾನಾ ದೇವತೋಽತ್ರ ಸಾತ್ರ ಸಂಬೋಧ್ಯ ವರ್ಣ್ಯತೇ ||'

ಎಂದು ಈ ಅಂಶವನ್ನೇ ವಿವರಿಸಿದ್ದಾರೆ. ಪ್ರತ್ಯಕ್ಷಗೋಚರವಾಗಿದ್ದಾಗ್ಗೂ ಅಪರಿಚ್ಛೇದ್ಯವಾದ ಈ ಪೃಥಿವಿಯ ಮಹತ್ತ್ವವನ್ನೂ ಧಾರಣಾ ಸಾಮರ್ಥ್ಯವನ್ನೂ, ನೆನೆದು ನೆನೆದು ಋಷಿಗಳು ಭಕ್ತಿನಮ್ರರಾಗಿ ನಿರರ್ಗಳವಾಗಿ ಪೃಥಿವಿಯನ್ನು ಸ್ತುತಿಸಿದ್ದಾರೆ. ಕೇವಲ ನಾಲ್ಕಾರು ಮಾತುಗಳಲ್ಲಿ ಉಜ್ವಲವಾದ ಆ ಚಿತ್ರವನ್ನು ಮನಸ್ಸಿಗೆ ಕಾಣಿಸಿದ್ದಾರೆ. ಕೆಳಗಿನ ಮಂತ್ರವನ್ನು ನೋಡಿ–

'ಬಳಿತ್ಥಾ ಪರ್ವತಾನಾಂ ಖಿದ್ರಂ ಬಿಭರ್ಷಿ ಪೃಥಿವಿ |
ಪ್ರಯಾ ಭೂಮಿಂ ಪ್ರವತ್ವತಿ ಮಹ್ನಾ ಜಿನೋಷಿ ಮಹಿನಿ ||' (5-84-1)

'ಪೃಥಿವೀ ದೇವತೆ ಪೃಥ್ವಿಯಲ್ಲಿಯೂ ಅಂತರಿಕ್ಷದಲ್ಲಿಯೂ ಪರ್ವತಗಳ ಮತ್ತು ಮೇಘಗಳ ಭಾರವನ್ನು ಲೀಲೆಯಿಂದ ಧರಿಸಿದ್ದಾಳೆ. ಅಂತರಿಕ್ಷದಲ್ಲಿ ಸಾರುವ ಮೇಘಗಳ ಘರ್ಷಣೆಯನ್ನು ಧರಿಸುವವಳೂ ಇವಳೇ. ಎಲೈ ಮಹಾಮಹಿಮಳೇ, ಪುಷ್ಕಲವಾದ ಪ್ರವಾಹಗಳಿಂದ ಕೂಡಿದ ನದನದಿಗಳನ್ನು ಹೊಂದಿರುವ ನೀನು ಪ್ರತ್ಯಕ್ಷವಾದ ಈ ಭೂಮಿಯನ್ನೂ ನಿನ್ನ ಮಹಾತ್ಮ್ಯದಿಂದ ಸುಖಪಡಿಸುವೆ.'

'ಸ್ತೋಮಾಸಸ್ತ್ವಾ ವಿಚಾರಿಣಿ ಪ್ರತಿಷ್ಟೋಭಂತ್ಯಕ್ತುಭಿಃ ||
ಪ್ರ ಯಾ ವಾಜಂ ನ ಹೇಷಂತಂ ಪೇರುಮಸ್ಯಸ್ಯರ್ಜುನಿ ||' (5-84-2)

ಎಲೈ ಶುಭ್ರವರ್ಣೆಯಾದ ಪೃಥ್ವೀದೇವತೆಯೇ, ವಿವಿಧವಾಗಿ ಚರಿಸುವವಳೇ, ಎಲ್ಲ ಸ್ತೋತೃಗಳೂ ಪುಷ್ಕಲವಾದ ಸ್ತುತಿಗಳಿಂದ ನಿನ್ನನ್ನು ಕೊಂಡಾಡುತ್ತಾರೆ. ದರ್ಪದಿಂದ ಕೂಡಿ ಹೇಷಿಸುವ ದುಷ್ಟಾಶ್ವವನ್ನು ಸತ್ವಶಾಲಿಗಳು ದಮನ ಮಾಡುವಂತೆ ನೀನೂ ಸಹ ಘರ್ಜಿಸುತ್ತಾ ಉದ್ವೃತ್ತವಾಗಿ ವಿಜೃಂಭಿಸುವ ಮೇಘಗಳನ್ನು ದಮನಗೊಳಿಸುವಿ.'

'ದೃಳ್ಹಾ ಚಿದ್ಯಾ ವನಸ್ಪತೀನ್ ಕ್ಷ್ಮಯಾ ದರ್ಧರ್ಷ್ಯೋಜಸಾ |
ಯತ್ತೇ ಅಭ್ರಸ್ಯ ವಿದ್ಯುತೋ ದಿವೋ ವರ್ಷಂತಿ ವೃಷ್ಟಯಃ ||' (5-84-3)

'ಎಲೈ ಪೃಥ್ವೀದೇವತೆಯೇ, ನಿನಗೆ ಅಧಿಷ್ಠಾನವಾಗಿರುವ ಭೂಮಿಯಲ್ಲಿ ವೃಕ್ಷಗಳನ್ನು ನಿನ್ನ ಬಲದ ಸಹಾಯದಿಂದ ಧರಿಸಿದ್ದೀಯೆ. ನೀನು ಧರಿಸಿರುವ ಮೇಘಗಳು ವಿದ್ಯೋತಮಾನವಾಗಿ ಅಂತರಿಕ್ಷದಿಂದ ಸುವೃಷ್ಟಿಯನ್ನು ಸುರಿಸುವುವು.'

ಈ ಮಂತ್ರಗಳಲ್ಲಿ ಪೃಥ್ವೀದೇವತೆ ಸಸ್ಯವರ್ಗದ ಪ್ರರೋಹಕ್ಕೂ, ಪೋಷಣೆಗೂ ಹೇಗೆ ಕಾರಣವೋ ಹಾಗೆಯೇ ಉದಕಪ್ರದಾನಕ್ಕೂ ಕಾರಣಳೆಂದು ತಿಳಿಯುವುದು. ಪೃಥಿವಿಯಿಂದ ಜಲ ಆವಿಯ ರೂಪದಲ್ಲಿ ಹೋಗಿ ಮೇಘವಾಗಿ ವರ್ಷಿಸಬೇಕಾಗಿರುವುದರಿಂದ ಉದಕಪ್ರದಾನಕ್ಕೂ ಪೃಥಿವಿ ಕಾರಣವೆಂದು ಹೇಳಿರಬಹುದು. ಅಥವಾ ಯಜ್ಞಯಾಗಾದಿಗಳಲ್ಲಿ ಅಗ್ನಿದೇವನಿಗೆ ಸಮರ್ಪಿಸಿದ ಆಹುತಿಗಳಿಂದ ಎದ್ದ ಧೂಮರಾಜಿ ಗಗನದಲ್ಲಿ ಮೇಘವಾಗಿ ವರ್ಷಿಸುವುದರಿಂದಲೂ ಪೃಥಿವೀದೇವತೆಗೆ ಮೇಘಗಳು ಸಂಬಂಧಿಸಿವೆಯೆಂದು ಹೇಳಿರಬಹುದು. ಸರ್ವಚೇತನಾಚೇತನರನ್ನೂ ಧರಿಸಿ ಪೋಷಿಸುವ ಪೃಥ್ವೀದೇವತೆಯನ್ನು ಋಗ್ವೇದಋಷಿ ಸ್ತುತಿಸಿ

ಈ ದೇವತೆಯ ಗುಣಾನುಭವದಲ್ಲಿ ತಮ್ಮನ್ನೇ ಮರೆತಿದ್ದಾರೆ.

## ಸೋಮಪವಮಾನ

ವೇದಗಳಲ್ಲಿ ಪ್ರತಿಪಾದಿತವಾಗಿರುವ ಯಾಗಗಳಲ್ಲೆಲ್ಲಾ ಸೋಮಯಾಗವೇ ಅತ್ಯಂತ ಪ್ರಧಾನವಾದ ಕಾರಣ ಸೋಮಪವಮಾನ ದೇವತೆ ಮುಖ್ಯವಾದ ದೇವತೆಯಾಗಿರುವುದು ಸಹಜವಾಗಿಯೇ ಇದೆ. ಋಗ್ವೇದ ದೇವತೆಗಳಲ್ಲಿ ಇಂದ್ರ, ಅಗ್ನಿಗಳಾದಮೇಲೆ ಬರುವ ದೇವತೆ ಸೋಮ. ಸಮಗ್ರವಾಗಿ ನವಮಮಂಡಲದ 114 ಸೂಕ್ತಗಳೂ ಈ ದೇವತೆಯನ್ನು ಸ್ತುತಿಸುವುವು. ಇತರ ಕಡೆ ನಾಲ್ಕೈದು ಸೂಕ್ತಗಳ ಕೆಲವು ಮಂತ್ರಗಳೂ ಈ ದೇವತೆಯನ್ನು ಸ್ತುತಿಸುವುವು. ಇಂದ್ರ, ಅಗ್ನಿ, ಪೂಷನ್, ರುದ್ರ ಮೊದಲಾದ ದೇವತೆಗಳೊಡನೆಯೂ ಈ ದೇವತೆಯನ್ನು ಸ್ತುತಿಸಲಾಗಿದೆ. ಇಂದು ಅಥವಾ ಸೋಮ ಎಂಬ ಅಭಿಧಾನವನ್ನು ಕೊಟ್ಟು ಈ ದೇವತೆಯನ್ನು ಯಾಗದಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸಲು ಆಹ್ವಾನ ಮಾಡಲಾಗಿದೆ. ಸೋಮಾಭಿಷವ ಮಾಡುವಾಗ ಹೇಳುವ ಮಂತ್ರಗಳ ಸಂಗ್ರಹ ನವಮಮಂಡಲದ ತುಂಬಾ ಇದೆ. ಹೀಗೆ ಸೋಮಲತೆಯನ್ನು ಗ್ರಾವಾಣಗಳಿಂದ ಮರ್ದಿಸುವುದು, ದಶಾಪವಿತ್ರದಿಂದ ಶೋಧಿಸುವುದು, ಕುಂಡದಲ್ಲಿ ಪೂರಣಮಾಡುವುದು ಮತ್ತು ದೇವತೆಗಳಿಗೆ ಸಮರ್ಪಿಸುವುದು ಇವು ಇಲ್ಲಿ ವರ್ಣಿತವಾಗಿವೆ. ಸೋಮಲತೆ ಸೋಮಪವಮಾನ ದೇವತೆಯ ಅಧಿಷ್ಠಾನ. ಅಧಿಷ್ಠಾನವಾದ ಈ ಲತೆಯೊಡನೆ ತದಭಿಮಾನಿ ದೇವತೆಯನ್ನು ಸಹ ಅನುಪಮವಾಗಿ ಸ್ತುತಿಸಿದ್ದಾರೆ.

ಅಭಿಷವಮಾಡುವ ಆ ಬಳ್ಳಿಗೆ ಅಂಶು ಎಂಬ ಹೆಸರುಂಟು. ಈ ಅಂಶುಗಳು ಪಶು ಕ್ಷೀರವನ್ನು ಕರೆಯುವಂತೆ ರಸವನ್ನೀಯುವುವು (8-9-19). ಸೋಮ ವೃಕ್ಷಕ್ಕೆ ಅಂಧಸ್ ಎಂಬ ಹೆಸರು. ಇದರ ಜನ್ಮ ದ್ಯುಲೋಕದಲ್ಲಿ ಆಯಿತು–'ಉಚ್ಚಾ ತೇ ಜಾತಮಂಧಸೋ ದಿವಿ' (9-61-10). ಶ್ಯೇನಪಕ್ಷಿ ಭೂಲೋಕಕ್ಕೆ ಇದನ್ನು ತಂದಿತು.

'ಮಂದ್ರಸ್ಯ ರೂಪಂ ವಿವಿದುರ್ಮನೀಷಿಣಃ
ಶ್ಯೇನೋ ಯದಂಧೋ ಅಭರತ್ಪರಾವತಃ |
ತಂ ಮರ್ಜಯಂತ ಸುವೃಧಂ ನದೀಷ್ವಾಂ
ಉಶಂತಮಂಶುಂ ಪರಿಯಂತಂ ಋಗ್ಮಿಯಂ ||' (9-68-6)

"ಪ್ರಾಜ್ಞರಾದ ಯಾಜಕರು ಮದಕರವಾದ ಆ ಸೋಮದ ರೂಪವನ್ನು ಬಲ್ಲರು. ಈ ಸೋಮಲಕ್ಷಣವಾದ ಅನ್ನವನ್ನು (ಗಾಯತ್ರೀ ರೂಪದ) ಪಕ್ಷಿಯು ದೂರದ ದ್ಯುಲೋಕದಿಂದ ತಂದನು. ಇಂಥ ಸರ್ವವರ್ಧಕವಾದ ಅಂಶುವನ್ನು ಜಲದೊಡನೆ ಋತ್ವಿಕ್ಕುಗಳು ಶೋಧಿಸುತ್ತಾರೆ. ದೇವತೆಗಳನ್ನು ಪ್ರೀತಿಸುವ ಸರ್ವತ್ರ ಪ್ರಭಾವ ಬೀರುವ ಋಕ್ಕುಗಳಿಂದ ಸ್ತುತ್ಯನಾದ ಸೋಮನನ್ನು ಹೀಗೆ ಅಭಿಷವಮಾಡುವರು."

ಸೋಮರಸವನ್ನು ಹಿಂಡಿ ದಶಾಪವಿತ್ರದಿಂದ ಕಲಶಕ್ಕೆ ಶೋಧಿಸುವರು. ಇದನ್ನು ಶುದ್ಧ, ಶುಕ್ರ, ಶುಚಿ ಎಂದು ಕರೆದಿದ್ದಾರೆ–'ಅಭಿದ್ರೋಣಾನಿಬಭ್ರವಃ ಶುಕ್ರಾ ಋತಸ್ಯ ಧಾರಯಾ |' (9-33-2). ಈ ಸೋಮರಸವನ್ನು ಕ್ಷೀರದೊಡನೆ, ದಧಿಯೊಡನೆ ಮತ್ತು ಯವದೊಡನೆ ಬೆರೆಸುತ್ತಿದ್ದರು. ಇದನ್ನೆ 'ಗವಾಶೀಃ', 'ದಧ್ಯಾಶೀಃ' ಮತ್ತು 'ಯವಾಶೀಃ' ಎಂದು ಹೇಳಿದ್ದಾರೆ.

ದಿನದಲ್ಲಿ ಮೂರು ಸಲ ಸೋಮಾಭಿಷವ ಮಾಡುತ್ತಿದ್ದರು. ಪ್ರಾತಃಕಾಲದ ಅಭಿಷವಕ್ಕೂ, ಮಧ್ಯಾಹ್ನದ ಅಭಿಷವಕ್ಕೂ ಇಂದ್ರನನ್ನು ಕರೆಯುತ್ತಾರೆ—

'ಇಂದ್ರ ಪಿಬ ಪ್ರತಿಕಾಮಂ ಸುತಸ್ಯ
ಪ್ರಾತಃ ಸಾವಸ್ತವ ಹಿ ಪೂರ್ವಪೀತಿಃ |' (10-112-1)

'ಎಲೈ ಇಂದ್ರನೇ, ನಿನಗೆ ಕೊಡಬೇಕಾದ ಈ ಅಭಿಷುತವಾದ ಸೋಮವನ್ನು ಪಾನಮಾಡು. ಪ್ರಾತಃಸವನದಲ್ಲಿ ಅಭಿಷುತವಾದ ಸೋಮ ನಿನ್ನದೇ.'

'ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್
ಅನೇದ್ಯ ಪಿಬಾ ಸೋಮಸ್ಯ ವಜ್ರಿವಃ |' (8-37-1)

'ಎಲೈ ಅನಿಂದ್ಯನೇ, ವೃತ್ರನಾಶಕನೇ, ವಜ್ರಿಯೇ, ಮಾಧ್ಯಂದಿನ ಸವನಕ್ಕೆ ಸಂಬಂಧಿಸಿದ ಸೋಮಪಾನಮಾಡು.'

ಸಂಜೆಯ ಅಭಿಷವದಲ್ಲಿ ಸೋಮಪಾನ ಮಾಡಲು ಋಭುಗಳನ್ನು ಆಹ್ವಾನಿಸುತ್ತಾರೆ–

'ತೇ ನೂನಮಸ್ಮೇ ಋಭವೋ ವಸೂನಿ
ತೃತೀಯೇ ಅಸ್ಮಿನ್ ಸವನೇ ದಧಾತ |' (4-33-11)

ಸೋಮರಸವನ್ನು ಜಲದೊಡನೆ ಬೆರೆಸುವ ಕಾರಣ ನಾನಾ ವಿಧವಾಗಿ ಇದನ್ನು ಸ್ತುತಿಸಿದ್ದಾರೆ. ನದಿಗಳು ಇವನ ಕಟ್ಟಳೆಯನ್ನು ನಡೆಸುವರು. ಇವನು ನದಿಗಳ ರಾಜ. ಜಲಗಳು ಇವನ ಸೋದರಿಯರು. ಇವನು ಮಳೆಯ ರಾಜ. ಪವಮಾನ ಬಿಂದುಗಳು ಮಳೆಯು ಪ್ರವಹಿಸುವಂತೆ ಹರಿಯುತ್ತವು ಎಂದು ಹೇಳಿದೆ. ಸೋಮರಸವನ್ನು ಶೋಧಿಸಿದಾಗ ಕಲಶಗಳಿಗೆ ಆ ಬಿಂದುಗಳು ಪ್ರವಹಿಸುವುದನ್ನು ಮಳೆಗೆ ಹೋಲಿಸಿದ್ದಾರೆ. ಸೋಮರಸ ಸೂರ್ಯನಂತೆ ಪ್ರಕಾಶಿಸುತ್ತದೆ. ಸೂರ್ಯಕಿರಣಗಳೊಡನೆ ಇದೂ ಶೋಭಿಸುವುದು ಕಾಂತಿಯುತವಾಗಿ.

ಸ ಪವಸ್ವ ವಿಚರ್ಷಣ
ಆ ಮಹೀ ರೋದಸೀ ಪೃಣ |
ಉಷಾಃ ಸೂರ್ಯೋ ನ ರಶ್ಮಿಭಿಃ || (9-41-5)

'ಎಲೈ ಸೋಮನೇ, ನೀನು ರಸವನ್ನು ಪ್ರವಹಿಸು. ಹಾಗೆಯೇ ಆ ರಸದಿಂದ ಮಹತ್ತರವಾದ ದ್ಯಾವಾ ಪೃಥಿವೀಗಳನ್ನು ತುಂಬಿಬಿಡು, ಸೂರ್ಯನ ರಶ್ಮಿಗಳಿಂದ ಹಗಲು ಪ್ರಕಾಶಿಸುವಂತೆ.'

ಸೋಮಪವಮಾನ ಮರ್ತ್ಯರನ್ನು ಅಮರ್ತ್ಯರನ್ನಾಗಿ ಮಾಡುವನು ಮತ್ತು ಆನಂದಮಯ ವಾದ ಲೋಕಗಳಿಗೊಯ್ಯುವನು. ವ್ಯಾಧಿಪರಿಪೀಡಿತರಾದವರಿಗೆ ಇವನ ಭೇಷಜ ಅಮೃತಾಯ ಮಾನವಾದುದು. ಕುರುಡನಿಗೆ ನೋಟವನ್ನೂ, ಕುಂಟನಿಗೆ ನಡೆಯನ್ನೂ ಇವನು ಅನುಗ್ರಹಿಸಬಲ್ಲ (8-68-2). ನಾವಿಕ ನಾವೆಯನ್ನು ಪ್ರೇರಿಸುವಂತೆ ಇವನು ಗಾನ ಮಾಡಲು ಪ್ರೇರಣೆಕೊಡುವನು. ಸೋಮಪಾನ ಮಾಡಿದವರು ಅಮರರಾಗಿ, ಜ್ಯೋತಿರ್ಮಯರಾಗಿ ದೇವತೆಗಳನ್ನು ತಿಳಿಯುವರು. ಭಕ್ತರು ಇಂಥ ಮಹಿಮೆಯುಳ್ಳ ಸೋಮರಸವನ್ನು ತಮಗೆ ಉಪಾಸ್ಯಭೂತರಾದ ದೇವತೆಗಳಿಗೆ ಭಕ್ತಿಯಿಂದ ಅರ್ಪಿಸುವರು.

ವನಸ್ಪತಿಗಳಲ್ಲಿ ಸರ್ವಶ್ರೇಷ್ಠನಾದ ಸೋಮ ಓಷಧಿಗಳ ರಾಜ. ಸೋಮ ಪ್ರಭಾವಶಾಲಿ ಯಾದ ವಾಕ್ಕನ್ನು ಪ್ರೇರಿಸುತ್ತಾನೆ. 'ಹಿನ್ವಾನೋ ವಾಚಮಿಷ್ಯಸಿ–ರಾಮುಷರ್ಬುಧಮ್' (9-84-4). ಆದ್ದರಿಂದಲೇ ಇವನನ್ನು 'ವಾಚಸ್ಪತಿ' 'ವಾಚೋ ಅಗ್ರಿಯಾ' ಎಂದು ಕರೆದಿದ್ದಾರೆ. ಬುದ್ಧಿಯನ್ನು ಪ್ರಚೋದನೆಗೊಳಿಸುವವನು ಸೋಮ.

ಅಯಂ ಮೇ ಪೀತ ಉದಿಯರ್ತಿ ವಾಚಂ
ಅಯಂ ಮನೀಷಾಮುಶತೀಮಜೀಗಃ |

ಅಯಂ ಷಳುರ್ವೀರಮಿಮೀತ ಧೀರೋ
ನ ಯಾಭ್ಯಃ ಭುವನಂ ಕಚ್ಚನಾರೇ || (6-47-3)

'ಪಾನಮಾಡಿದ ಈ ಸೋಮ ನನ್ನ ವಾಕ್ಕನ್ನು ಸ್ಫೂರ್ತಿಯುತವಾಗುವಂತೆ ಉದ್ದೀಪನಗೊಳಿಸುವನು. ಇವನು ಕಾಂತಿಯುತವಾದ ಬುದ್ಧಿಯನ್ನು ಪ್ರಕಾಶಗೊಳಿಸುತ್ತಾನೆ. ಇವನೇ 'ದ್ಯೌಶ್ಚಪೃಥಿವೀಚ ಅಹಶ್ಚ ರಾತ್ರಿಶ್ಚ ಆಪಶ್ಚ ಓಷಧಯಶ್ಚ' ಎಂದು ಹೇಳಿದ ಈ ದ್ಯುಪೃಥಿವ್ಯಾದಿಗಳನ್ನು ನಿರ್ಮಿಸಿದನು. ಈ ಲೋಕಗಳನ್ನು ಆಶ್ರಯಿಸದೆ ದೂರದಲ್ಲಿ ಯಾರೂ ಇರಲಾರರಷ್ಟೆ?'

ಆದ್ದರಿಂದಲೇ ಸೋಮಪಾನ ಮಾಡಿದವರು ಹೀಗೆ ಉದ್ಗಾರ ಹೊರಡಿಸುವರು–

'ಅಪಾಮ ಸೋಮಮಮೃತಾ ಅಭೂಮ
ಅಗನ್ಮ ಜ್ಯೋತಿರವಿದಾಮ ದೇವಾನ್ |' (8-48-3)

'ನಾವು ಸೋಮಪಾನ ಮಾಡಿದೆವು. ಅಮರರಾದೆವು. ಜ್ಯೋತಿಃ ಪ್ರವೇಶ ಮಾಡಿದೆವು. ದೇವತೆಗಳನ್ನು ಸಾಕ್ಷಾತ್ಕರಿಸಿಕೊಂಡೆವು.'

ಸೋಮ ಬುದ್ಧಿಗೆ ಅಧಿದೇವತೆ. ಇವನನ್ನು ತಂದೆ, ನೇತಾ, ಮಂತ್ರಪ್ರೇರಕ ಎಂದು ಬಗೆಬಗೆಯಾಗಿ ಸ್ತುತಿಸಿದ್ದಾರೆ–

ಬ್ರಹ್ಮಾ ದೇವಾನಾಂ ಪದವೀಃ ಕವೀನಾಂ
ಋಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಂ |
ಶ್ಯೇನೋ ಗೃಧ್ರಾಣಾಂ ಸ್ವಧಿತಿರ್ವನಾನಾಂ
ಸೋಮಃ ಪವಿತ್ರಮತ್ಯೇತಿ ರೇಭನ್ || (11-96-6)

'ಸೋಮ ದ್ಯೋತಮಾನರಾದ ದೇವತೆಗಳಲ್ಲಿ ರಾಜ. ಕ್ರಾಂತಪ್ರಜ್ಞರಾದ ಕವಿಗಳಲ್ಲಿ ಶ್ರೇಷ್ಠತಮ. ಮೇಧಾವಿಗಳಲ್ಲಿ ಋಷಿಪ್ರಾಯ. ಮೃಗಗಳಲ್ಲೆಲ್ಲಾ ಬಲಿಷ್ಠವಾದ ಮಹಿಷ. ಪಕ್ಷಿಗಳಲ್ಲಿ ಶಂಸನೀಯವಾದ ಶ್ಯೇನ. ಹಿಂಸಕರಲ್ಲಿ ಸ್ವಧಿತಿ. ಇಂಥ ಪ್ರಭಾವಶಾಲಿಯಾದ ಸೋಮನು ಶಬ್ದಮಾಡುತ್ತಾ ದಶಾಪವಿತ್ರದಿಂದ ಹೊರಗೆ ಬರುವನು.'

ಇವನ ಅನುಗ್ರಹದಿಂದ ಜನ ಋಷಿತ್ವ ಪಡೆದು ಮಾನ್ಯರಾಗುವರು. ಭಕ್ತರನ್ನು ಇವನು ಋಷಿಗಳಾಗುವಂತೆ ಅನುಗ್ರಹಿಸುವನು. ಇವನಿಗೆ ಋಷಿಯ ಮನಸ್ಸಿದೆ–'ಋಷಿಮನಾಃ ಯಃ ಋಷಿಕೃತ್' (9-96-18). ದೇವತೆಗಳೆಲ್ಲರ ವಿಚಾರವನ್ನೂ ತಿಳಿದವನಿವನು. ಇವನು ಲೋಕದ ಜನರನ್ನೆಲ್ಲಾ ನಿಪುಣವಾಗಿ ಈಕ್ಷಿಸಬಲ್ಲ. ಅದರಿಂದಲೇ ಇವನು ಅನೇಕನೇತ್ರ. ಸಹಸ್ರನೇತ್ರನಿವನು–'ಇಂದುಂ ಸಹಸ್ರಚಕ್ಷಸಂ' (9-60-1).

ಪಿತೃಗಳು ಕಾರ್ಯೋನ್ಮುಖರಾದುದು ಇವನಿಂದಲೇ. ಪಿತೃಗಳು ಸೋಮನಿಂದ ಕೂಡಿದ್ದಾರೆ. ಆದ್ದರಿಂದಲೇ ಅವರು 'ಸೋಮ್ಯ' ಶಬ್ದವಾಚ್ಯರಾಗಿದ್ದಾರೆ. ಇಂದ್ರ ವೃತ್ರನನ್ನು ವಧಿಸಲು ಶಕ್ತಿಪ್ರದಾನ ಮಾಡುತ್ತಾನೆ ಸೋಮ. ಸೋಮನಿಂದುಂಟಾದ ಮದದಿಂದಲೇ ಇಂದ್ರನು ಸರ್ವಶತ್ರುಗಳನ್ನೂ ವಧಿಸುವನು–

ಅಸ್ಯೇದಿಂದ್ರೋ ಮದೇಷ್ವಾ
ವಿಶ್ವಾ ವೃತ್ರಾಣಿ ಜಿಘ್ನತೇ | (9-1-10)

'ವೀರನಾದ ಇಂದ್ರ ಈ ಸೋಮದ ಮದದಿಂದಲೇ ಎಲ್ಲಾ ಶತ್ರುಗಳನ್ನೂ ಕೊಲ್ಲುತ್ತಾನೆ.'

ಇಂದ್ರ ಉದಕಪ್ರದಾನ ಮಾಡಿದುದೂ, ಅಹಿಯನ್ನು ಕೊಂದುದೂ ಈ ಸೋಮನ ಸಹಾಯದಿಂದಲೇ. ಹೀಗೆ ಇಂದ್ರನಂತೆ ಸೋಮನೂ ವೃತ್ರಘ್ನನೇ.

'ಇಂದ್ರೋ ನ ಯೋ ಮಹಾಕರ್ಮಾಣಿ ಚಕ್ರಿಃ
ಹಂತಾ ವೃತ್ರಾಣಾಮಸಿ ಸೋಮ ಪೂರ್ಭಿತ್ |'

'ಎಲೈ ಸೋಮನೇ, ಇಂದ್ರನಂತೆಯೇ ನೀನೂ ಸಹ ಮಹತ್ತರವಾದ ಕರ್ಮಗಳನ್ನು ಮಾಡುವಿ. ಪಟ್ಟಣಗಳನ್ನು ಭೇದಿಸುವವನೂ, ವೃತ್ರರನ್ನು ಕೊಲ್ಲುವವನೂ ನೀನೇ.'

ಇಂದ್ರ ಸೋಮಪಾನ ಮಾಡಿದಾಗ ಅಂತರಿಕ್ಷದಲ್ಲಿ ಸೂರ್ಯನ ಉದಯವಾಗುವಂತೆ ಸೋಮ ಮಾಡಿದ (9-86-22). ಸೋಮನೇ ಸೂರ್ಯನು ಉದಯಿಸುವಂತೆ ಮಾಡಿದನೆಂದು ಲಾಕ್ಷಣಿಕವಾಗಿ ಹೇಳಿದ್ದಾರೆ–'ಏಷ ಸೂರ್ಯಮರೋ ಚಯತ್ಪವಮಾನೋ ವಿಚರ್ಷಣಿಃ | ವಿಶ್ವಾಧಾಮಾನಿ ವಿಶ್ವವಿತ್ ||' (9-28-5). 'ಸೂರ್ಯ ಪ್ರಕಾಶಮಾನನಾಗುವಂತೆ ಸೋಮ ಮಾಡಿದ. ಸರ್ವದ್ರಷ್ಟನೂ ಸರ್ವಜ್ಞನೂ ಆದ ಸೋಮ ಎಲ್ಲಾ ತೇಜಸ್ಥಾನಗಳನ್ನೂ ಹೀಗೆಯೇ ಪ್ರಕಾಶಗೊಳಿಸುವನು.' ಪೃಥಿವ್ಯಂತರಿಕ್ಷಗಳನ್ನೂ ಸೋಮನೇ ಧರಿಸಿದ್ದಾನೆ–'ಸೋಮೋ ದಾಧಾರೋರ್ವಂತರಿಕ್ಷಂ.' ದ್ಯುಲೋಕವನ್ನು ಮೇಲೆ ನಿಲ್ಲಿಸಿದವನೂ ಇವನೇ. ವೃಷ್ಟಿಜನಕನೂ ಇವನೇ. ಹೀಗೆ ಸೋಮಪವಮಾನ ಸರ್ವಶಕ್ತನಾಗಿದ್ದಾನೆ–

'ಅಯಂ ವಿದಚ್ಚಿತ್ರದೃಶೀಕಂ ಅರ್ಣಃ
ಶುಕ್ರಸದ್ಮನಾಂ ಉಷಸಾಂ ಅನೀಕೇ |
ಅಯಂ ಮಹಾನ್ ಮಹತಾ ಸ್ಕಂಭನೇನೋ-
ದ್ಯಾಮಸ್ತಭ್ನಾತ್ ವೃಷಭೋ ಮರುತ್ವಾನ್ ||' (6-45-7)

"ಆಶ್ಚರ್ಯಮಯವಾದ ದರ್ಶನವುಳ್ಳ ಈ ಸೋಮ ಸರ್ವಪ್ರೇರಕನಾದ ಸೂರ್ಯನನ್ನೂ ಅಂತರಿಕ್ಷ ನಿರ್ಮಲವಾಗಿರುವ ಉಷಃಕಾಲ (ಸಮೀಪಿಸಿದಂತೆ)ದಲ್ಲಿ ಹೊರಹೊರಡಿಸುತ್ತಾನೆ. ಪ್ರವೃದ್ಧನೂ, ವೃಷ್ಟಿಜನಕನೂ ಆದ ಸೋಮ ಮರುತ್ತುಗಳೊಡನೆ ಕೂಡಿ ಮಧ್ಯವರ್ತಿಯಾಗಿರುವ ಮಹತ್ತರವಾದ ಅಂತರಿಕ್ಷವೆಂಬ ಸ್ತಂಭದಿಂದ ದ್ಯುಲೋಕವನ್ನು ಮೇಲೆ ನಿಲ್ಲಿಸಿದ್ದಾನೆ."

ಸೋಮ ಪವಮಾನ ಲೋಕಗಳನ್ನು ಸೃಜಿಸುತ್ತಾ ಬಂದಂತೆ ಪೂಷನ್ ತನ್ನ ಕೃಪಾದೃಷ್ಟಿಯಿಂದ ಅವುಗಳನ್ನು ಪೋಷಿಸಲು ಅನುಗ್ರಹಿಸುತ್ತಾ ಬರುವನು–

'ವಿಶ್ವಾನ್ಯನ್ಯೋ ಭುವನಾ ಜಜಾನ
ವಿಶ್ವಮನ್ಯೋ ಅಭಿಚಕ್ಷಾಣ ಏತಿ' (2-40-5)

ವೃತ್ರವಧ ಮಾಡಲು ಸೋಮ ಇಂದ್ರನಿಗೆ ಸಹಾಯಕನಾದ. ಇವನೂ ಯೋಧನೇ. ಇವನೂ ಶೋಭನಾಯುಧೋಪೇತನಾಗಿದ್ದಾನೆ-'ಸ್ವಾ ಯು ಧಃ' (9-96-1) ತನ್ನ ಎರಡು ಹಸ್ತಗಳಿಂದಲೂ ಶೂರನಂತೆ ಸೋಮದೇವ ಆಯುಧಗಳನ್ನು ಧರಿಸಿದ್ದಾನೆ–'ಶೂರೋ ನ ಧತ್ತ ಆಯುಧಾ ಗಭಸ್ತ್ಯೋಃ' (9-76-2), ಸಹಸ್ರ ಸಂಖ್ಯೆಯಲ್ಲಿ ಸೋಮ ಆಯುಧಗಳನ್ನು ಧರಿಸಿ ಸಂಗ್ರಾಮಾಭಿಮುಖನಾಗುವನು–'ರಾಜಾ ಪವಿತ್ರ ರಥೋ ವಾಜಂ ಆರುಹಃ ಸಹಸ್ರಭೃಷ್ಟಿಃ' (9-83-5). ಇಂದ್ರನ ರಥದಲ್ಲಿಯೇ ಇವನೂ ಸಹ ಹೊರಡುವನು. ಅವನೊಡನೆ–'ಇಂದ್ರೇಣ ಸೋಮ ಸರಥಂ ಪುನಾನಃ' (9-87-9). ಇವನು ದಿವ್ಯವಾದ ರಥದಲ್ಲಿಯೂ ಕುಳಿತು ಯಾಗಶಾಲೆಗೆ ಆಗಮಿಸುವನು.

ಸೋಮ ಕೆಲವು ವೇಳೆ ಮರುತ್ತುಗಳಿಂದ ಸೇವಿಸಲ್ಪಡುವನು (6-47-5). ಈ ಮರುತ್ತುಗಳು ಸೋಮನನ್ನು ಓಲೈಸಿ ಸಂತೋಷಗೊಳಿಸುವರು. ವಾಯು ಸೋಮನ ರಕ್ಷಕ. 'ವಾಯುಃ ಸೋಮಸ್ಯ ರಕ್ಷಿತಾ' (10-85-5). ಇತರ ಪದಾರ್ಥಗಳನ್ನು ಶೋಷಿಸುವ ವಾಯು ಸೋಮನನ್ನು ಶೋಷಿಸನು. ಸೋಮಪವಮಾನ ಹೀಗೆ ಮಹಾ ಪ್ರಭಾವಶಾಲಿಯಾಗಿದ್ದಾನೆ.

ಯಾಗಗಳಲ್ಲಿ ದಂಪತಿಗಳು ಕೂಡಿ ಸೋಮಾಭಿಷವ ಮಾಡುತ್ತಿದ್ದರು. ಕೆಳಗಿನ ಮಂತ್ರ ನೋಡಿ–

'ಯಾ ದಂಪತೀ ಸಮನಸಾ
ಸುನುತ ಆಚ ಧಾವತಃ |
ದೇವಾಸೋ ನಿತ್ಯಯಾಶಿರಾ ||' (8-31-5)

'ಎಲೈ ದೇವತೆಗಳಿರಾ, ಸಮಾನ (ಮನ) ವಯಸ್ಕರಾದ ಯಾವ ದಂಪತಿಗಳು ಸೋಮಾಭಿಷವ ಮಾಡಿ, ದಶಾಪವಿತ್ರದಿಂದ ಶೋಧಿಸಿ, ನಿತ್ಯ ಸಂಬಂಧವುಳ್ಳ ಗೋಕ್ಷೀರದೊಡನೆ ಮಿಶ್ರಮಾಡಿ ಅದನ್ನು ಅರ್ಪಿಸುವರೋ ಅಂಥವರು ಅನ್ನಾದಿಗಳನ್ನು ಪಡೆಯಲಿ.'

ಇಂಥ ಸೋಮಪವಮಾನದೇವತೆಯನ್ನು ಅದ್ಭುತವಾಗಿ ಸ್ತುತಿಸಿರುವ ವೇದ ಋಷಿ ಸಕಲ ಸುಖಗಳನ್ನು ಕೊಟ್ಟು ಅಮೃತತ್ವಕ್ಕೊಯ್ಯಬೇಕೆಂದು ಅವನನ್ನು ಪ್ರಾರ್ಥಿಸಿದ್ದಾರೆ.

ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।
ಕಾಮಸ್ಯ ಯತ್ರಾಪ್ತಾಃ ಕಾಮಾಃ ತತ್ರ ಮಾಮಮೃತಂ ಕೃಧೀಂ-
ದ್ರಾಯೇಂದೋ ಪರಿಸ್ರವ || (9-113-7)

ಎಂದು. 'ಯಾವ ಲೋಕದಲ್ಲಿ ಅಮಿತವಾದ ಆನಂದವೂ, ಮೋದವೂ, ಪ್ರಮೋದವೂ ಇರುವುದೋ, ಯಾವ ಲೋಕದಲ್ಲಿ ದೇವತೆಗಳು ಅವಾಪ್ತಸಮಸ್ತಕಾಮರಾಗಿದ್ದಾರೋ ಅಂಥ ಲೋಕದಲ್ಲಿ ನನ್ನನ್ನು ಅಮರನನ್ನಾಗಿ ಮಾಡು. ಆದ್ದರಿಂದ ಎಲೈ ಸೋಮಪವಮಾನನೇ, ಇಂದ್ರನಿಗಾಗಿ ಸಮೃದ್ಧಿಯಾಗಿ ಪ್ರವಿಸು.'

ಋಗ್ವೇದದಲ್ಲಿ ಸೋಮದೇವತಾಕವಾದ ಸೂಕ್ತಗಳು ಸೋಮಲತೆಯನ್ನೂ, ಸೋಮರಸವನ್ನೂ, ತದಭಿಮಾನಿ ದೇವತೆಯನ್ನು ಸ್ತುತಿಸುತ್ತವೆ. ವೇದಗಳ ಕಾಲ ಕಳೆದನಂತರ ಸೋಮನೆಂದರೆ ಚಂದ್ರನೆಂಬ ಅಭಿಪ್ರಾಯ ಬೆಳೆದು ದೃಢವಾಯಿತು. ಛಾಂದೋಗ್ಯ ಉಪನಿಷತ್ತಿನಲ್ಲಿ 'ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾಕಾಶಂ ಆಕಾಶಾಚ್ಚಂದ್ರಮಸಂ ಏಷಸೋಮೋ ರಾಜಾತದ್ದೇವಾನಾಮನ್ನಂ ತಂ ದೇವಾ ಭಕ್ಷಯಂತಿ' (5-10-4) ಎಂದು ಹೇಳಿ ಚಂದ್ರನೇ ಸೋಮರಾಜನೆಂದೂ ಇವನು ದೇವತೆಗಳ ಆಹಾರವೆಂದೂ ಹೇಳಿದೆ. ಇದರಿಂದಲೇ ಇವನು ಕ್ಷಯ ಹೊಂದುವನೆಂದೂ ಮತ್ತೆ ಸೂರ್ಯನಿಂದ ವೃದ್ಧಿಯಾಗುವನೆಂದೂ ಹೇಳುತ್ತಾರೆ. ಐತರೇಯ ಬ್ರಾಹ್ಮಣದಲ್ಲಿ (7-11) ಚಂದ್ರ ದೇವತೆಗಳ ಸೋಮ ಎಂದು ಹೇಳಿದೆ. ಶತಪಥ ಬ್ರಾಹ್ಮಣದಲ್ಲಿಯೂ (1-6-4-5) ದೇವತೆಗಳ ಆಹಾರವಾದ ಸೋಮ ಚಂದ್ರನೆಂದೇ ಹೇಳಲಾಗಿದೆ. ಕೌಷೀತಕಿ ಬ್ರಾಹ್ಮಣದಲ್ಲಿ (7-10) ಯಾಗದಲ್ಲಿ ಬಳಸುವ ಸೋಮಲತೆ ಅಥವಾ ಸೋಮರಸ ಇವುಗಳು ಚಂದ್ರನನ್ನು ಸೂಚಿಸುವುವು ಎಂದು ಹೇಳಿದೆ. ಅಥರ್ವಣವೇದ (7-81-3-4) ಸೋಮ ಚಂದ್ರರ ಐಕ್ಯವನ್ನೇ ಹೇಳುತ್ತದೆ. ಋಗ್ವೇದದ ಹತ್ತನೆಯ ಮಂಡಲದಲ್ಲಿರುವ ಸೋಮಸೂಕ್ತಗಳು ಚಂದ್ರದೇವನನ್ನು ಕುರಿತು ಆದವು ಎಂದೂ ಕೆಲ ವಿಮರ್ಶಕರು ಹೇಳುವರು. ಇವುಗಳಲ್ಲಿ ಪ್ರಖ್ಯಾತವಾದ ಸೂರ್ಯಾಸೂಕ್ತ(10-85)ದಲ್ಲಿ 'ಅಥೋ ನಕ್ಷತ್ರಾಣಾಂ ಏಷಾಮುಪಸ್ಥೇ ಸೋಮ ಆಹಿತಃ' (10-85-2) ಎಂಬಲ್ಲಿ ಚಂದ್ರಪರವಾದ ಅರ್ಥವನ್ನೂ ಸಾಯಣಾಚಾರ್ಯರು ಹೇಳುವರು. ಇದೇ ಸೂಕ್ತದ ಐದನೆಯ ಮಂತ್ರದಲ್ಲಿಯೂ ಸಹ 'ಸಪ್ತಸೋಮಪಾಲರಿಂದ ರಕ್ಷಿತನಾದ ಸೋಮನನ್ನು ಪಾರ್ಥಿವರು ಭಕ್ಷಿಸುವುದಿಲ್ಲ'–'ನ ತೇ ಅಶ್ನಾತಿ ಪಾರ್ಥಿವಃ' (5-85-4) ಎಂದು ಹೇಳಿದೆ. 'ನ ಹಿ ದ್ಯುಃ

ಸ್ಥಶ್ಚಂದ್ರರೂಪ ಸೋಮೋಽತ್ರತ್ಯೈಃ ಗಾನಯೋಗ್ಯೋಭವತಿ' ಎಂದು ಸಾಯಣಾಚಾರ್ಯರ ಭಾಷ್ಯ 'ಚಂದ್ರಮಾ ವೈ ಸೋಮಾ ದೇವಾನಾಮನ್ನಂ ತಂ ಪೌರ್ಣಮಾಸ್ಯಾಮಭಿಷುಣ್ವಂತಿ (ಶ. ಬ್ರಾ. 11-1-5-3) ಎಂಬುವಂತೆ ಇಲ್ಲಿ ಚಂದ್ರಪರವಾಗಿದೆಯೆಂಬುದು ತಾತ್ಪರ್ಯ.

ಚಂದ್ರನೂ ಸೋಮವಾಚ್ಯನೆಂಬುವ ರಹಸ್ಯ ಬ್ರಾಹ್ಮಣಗಳಿಗೆ ಚೆನ್ನಾಗಿ ತಿಳಿದಿದ್ದಿತು. ಸೋಮದೇವತೆಯು ದಿವ್ಯಪ್ರಕಾಶಯುತನಾಗಿ ಕತ್ತಲೆಯನ್ನು ಕಳೆಯುವವನೆಂದೂ ಜಲದಲ್ಲಿ ವೃದ್ಧಿಯಾಗುವವನೆಂದೂ ಹೇಳಿದೆ. ಋಗ್ವೇದದಲ್ಲಿಯೇ (6-44-21) ಸೋಮನನ್ನು 'ಇಂದು' ಎಂದಿದ್ದಾರೆ. ಕಲಶದಲ್ಲಿರುವ ಸೋಮರಸವನ್ನು ಜಲದಲ್ಲಿನ ಚಂದ್ರನೆಂದು 'ಯೋ ಅಪ್ಸು ಚಂದ್ರಮಾ ಇವ ಸೋಮಶ್ಚಮೂಷು ದದೃಶೇ |' (8-82-8) ಎಂಬ ಮಂತ್ರದಲ್ಲಿ ಹೇಳಿದೆ. ಹೀಗೆ ಅನೇಕ ಕಡೆ ಸೋಮಲತೆ, ಸೋಮರಸಗಳ ಸ್ತುತಿ ಚಂದ್ರಪರವಾಗಿಯವುದು ಕಂಡುಬರುತ್ತದೆ.

ಹಿಲ್‌ಬ್ರಾಂಡ್ ಎಂಬುವರು ನವಮಮಂಡಲ ಪೂರ್ಣವಾಗಿ ಚಂದ್ರನನ್ನೇ ಸ್ತುತಿಸುವುದೆನ್ನುವರು. ಸೋಮಲತೆಯ ಗಂಧವೂ ಇಲ್ಲಿಲ್ಲವೆಂದು ಇವರ ಆಶಯ. ಸೋಮನೆಂದರೆ ಸಮಗ್ರವಾದ ಋಗ್ವೇದದಲ್ಲಿ ಸೋಮಲತೆ, ಸೋಮರಸವೆಂದೂ ಹಾಗೆಯೇ ದೇವತಾಪರವಾದರೆ ಚಂದ್ರನೆಂದೂ ಅರ್ಥವಾಗುವುದೆಂದು ಇವರ ಭಾವ. ಇಷ್ಟೇ ಅಲ್ಲ. ವೇದಧರ್ಮಕ್ಕನುಸಾರವಾಗಿ ಚಂದ್ರನೇ ಲೋಕದ ಸೃಷ್ಟಿಕರ್ತನೂ ಧಾರಕನೂ ಆಗಿರುವನೆಂದೂ ಇಂದ್ರನೂ ಸಹ ಚಂದ್ರನಾದಮೇಲೆ ಬರುವನೆಂದೂ ಇವರು ಅಭಿಪ್ರಾಯಪಡುತ್ತಾರೆ. (Vedic Mythology, p. 113)

ಸೋಮದೇವತೆಯನ್ನು ಇಂಡೋ ಇರಾನಿಯನ್ ಕಾಲದಿಂದಲೂ ಪೂಜಿಸುತ್ತಿದ್ದರೆಂದು ನಿರ್ಣಯಿಸಿದ್ದಾರೆ. ಋಗ್ವೇದದಲ್ಲಿ ಸೋಮವು ಪರ್ವತದಲ್ಲಿ ಬೆಳೆಯುವುದೆಂದೂ ಹೇಳಿದೆ. ಜೆಂಡವಸ್ತಾದಲ್ಲಿ 'ಹಯೋಮ' ಎಂದು ಈ ದೇವತೆಯನ್ನು ಕರೆಯುತ್ತಿದ್ದರು. ಅವೆಸ್ತಾದಲ್ಲಿಯೂ ಇದರ ಪರ್ವತಪ್ರರೋಹತ್ವ ಉಕ್ತವಾಗಿದೆ. ಋಗ್ವೇದದಲ್ಲಿ ಇದನ್ನು ವರುಣ ಪರ್ವತ ದಲ್ಲಿಟ್ಟನೆಂದು ಹೇಳಿದೆ. ಅವೆಸ್ತಾದಲ್ಲಿಯೂ ಇದನ್ನು 'ಹರ್ಮತಿ' ಎಂಬ ಪರ್ವತದ ಮೇಲೆ ಕುಶಲನಾದ ದೇವತೆ ಇಟ್ಟನೆಂದು ಹೇಳಿದೆ. ಶ್ಯೇನವೊಂದು ಇದನ್ನು ತಂದಿತೆಂದು ಹೇಳಿರುವಂತೆಯೇ ಅವೆಸ್ತಾದಲ್ಲಿಯೂ ಕೆಲವು ಪುಣ್ಯಶಾಲಿಗಳಾದ ಪಕ್ಷಿಗಳಿಂದ ಇದು ಹಂಚಲಾಯಿತೆಂದು ಹೇಳಿದೆ. ಎರಡರಲ್ಲಿಯೂ ಇದರ ಓಷಧಿರಾಜತ್ವ, ದೀರ್ಘಾಯುಪ್ರದತ್ವ, ಅಮರ್ತ್ಯತಾಕಾರಿತ್ವ, ರೋಗ ಹಾರಿತ್ವ, ಜಲಪ್ರರೋಹತ್ವ ಮೊದಲಾದುವು ಹೇಳಲಾಗಿವೆ. ಎರಡರಲ್ಲಿಯೂ ಸೋಮರಸದ ಅಭಿಷವ, ಕ್ಷೀರಮಿಶ್ರಣ, ದಶಾಪವಿತ್ರಶೋಧನೆ, ದೇವಸಮರ್ಪಣೆಗಳೂ ಸಮಾನವಾಗಿವೆ. ಸೋಮ 'ವೃತ್ರಹನ್' ಆದರೆ, ಹಯೋಮ-'ವೀರತ್ರಘನ್'. ಸೋಮದೇವ ಎರಡರಲ್ಲಿಯೂ ಸಮಾನವಾಗಿ ದುಷ್ಟದಮನ, ಶತ್ರುವಿಜಯ, ಅಮೃತಲೋಕ ಪ್ರದಾನ, ಸಂತಾನಪ್ರದಾನ, ಐಶ್ವರ್ಯಪ್ರದಾನಗಳನ್ನು ಮಾಡುತ್ತಾನೆ. ಸೋಮಾಭಿಷವ ಮಾಡಿದ ಪುರಾತನರ ಹೆಸರುಗಳೂ ಎರಡಕ್ಕೂ ಸಮಾನವಾಗಿದೆ–ಋಗ್ವೇದದ ವಿವಸ್ವತ್, ತ್ರಿತಆಪ್ತ್ಯರು ಅವೆಸ್ತಾದಲ್ಲಿ ವೀವನ್ಹವಂತ್–ಆಥ್ವ್ಯ ಮತ್ತು ಥ್ರಿತ ಆಗಿದ್ದಾರೆ. ಈ ರೀತಿಯಲ್ಲಿ ಈ ದೇವತೆಯ ಪೂಜನ ಬಹಳ ಪ್ರಾಚೀನವಾದುದೆಂದು ತಿಳಿಯ ಬಹುದು.

### ನದೀ ಸೂಕ್ತಗಳು

ಅಬ್ದೇವತಾಕವಾದ ಸೂಕ್ತಗಳಲ್ಲದೆ ನದೀಸೂಕ್ತಗಳೂ ಪ್ರಧಾನವಾದ ಸ್ಥಾನವನ್ನು

ಹೊಂದಿವೆ ಋಗ್ವೇದದಲ್ಲಿ. ದಶಮಮಂಡಲದ ಎಪ್ಪತ್ತೈದನೆಯ ಸೂಕ್ತ ಸಮಗ್ರವಾಗಿ ನದೀಸೂಕ್ತವಾಗಿದೆ. ಈ ಸೂಕ್ತದ ಐದನೆಯ ಮಂತ್ರ ಮತ್ತು ಆರನೆಯ ಮಂತ್ರಗಳು ಸಿಂಧೂನದಿಯ ಉಪನದಿಗಳನ್ನೂ, ಇತರ ಅನೇಕ ನದಿಗಳನ್ನೂ ಕ್ರಮವಾಗಿ ಹೇಳುತ್ತವೆ. ಹಾಗೆಯೇ ತೃತೀಯ ಮಂಡಲದ ಮೂವತ್ತಮೂರನೆಯ ಸೂಕ್ತವೂ ವಿಪಾಟ್ ಮತ್ತು ಶುತದ್ರಿ ನದಿಗಳನ್ನು ಸ್ತುತಿಸುತ್ತದೆ.

ಭಾರತೀಯರ ಜೀವನದಲ್ಲಿ ನದಿಗಳ ಪಾತ್ರ ಮುಖ್ಯವಾದದ್ದು. ಈ ನದಿಗಳ ಬಯಲಿನಲ್ಲಿ ನೆಲಸಿದ್ದ ಋಷಿಗಳು ನಾನಾ ವಿಧದಲ್ಲಿ ತಮಗೆ ಉಪಕಾರವಾಗಿದ್ದ ಆ ನದಿಗಳನ್ನು ಸ್ತುತಿಸಿರುವುದು ಯುಕ್ತವೇ ಆಗಿದೆ. ನದಿಗಳ ಬಯಲಿನಲ್ಲಿ ಯಜ್ಞಯಾಗಾದಿಗಳನ್ನಾಚರಿಸುತ್ತಿದ್ದ ಋಷಿಗಳು ಜಲಸಮೃದ್ಧಿಯನ್ನೊದಗಿಸಿ ಸಹಾಯವೆಸಗಿದ ನದಿಗಳ ವಿಚಾರದಲ್ಲಿ ಬಹಳ ಗೌರವ ಬಾವನೆ ಹೊಂದಿದ್ದಾರೆ. ವಾಲ್ಮೀಕಿಗಳು ಸರಯೂ ನದಿಯನ್ನು ವರ್ಣಿಸುವಾಗ 'ಸರಯೂಂ ಯೂಪಮಾಲಿನೀಂ' ಎಂದಿದ್ದಾರೆ. ಕಾಳಿದಾಸನಾದರೂ ರಘುವಂಶ ಹದಿಮೂರನೆಯ ಸರ್ಗದಲ್ಲಿ ಸರಯೂನದಿಯನ್ನು ಹೇಳುವಾಗ

"ಜಲಾನಿ ಯಾ ತೀರ ನಿಖಾತಯೂಪಾ
ವಹತ್ಯಯೋಧ್ಯಾಮನುರಾಜಧಾನೀಂ
ತುರಂಗಮೇಧಾವಭೃಥಾವತೀರ್ಯ್ಯೈಃ
ಇಕ್ಷ್ವಾ ಕುಭಿಃ ಪುಣ್ಯತರೀಕೃತಾನಿ ||" (ರಘು-13-61)

ಎಂದು ಆ ಸರಯೂನದಿಯ ದಡದಲ್ಲಿ ನಡೆದ ಅನೇಕಾನೇಕ ಯಾಗಗಳ ಕುರುಹನ್ನು ತೋರುವ ಯೂಪಸ್ತಂಭಗಳ ಗುರುತನ್ನು ಹೇಳುತ್ತಾನೆ. ಭಾರತದ ಜನ ನದಿಯ ಪ್ರಯೋಜನವನ್ನು ಚೆನ್ನಾಗಿ ಹೊಂದುತ್ತಿದ್ದರು. ಸ್ನಾನಪಾನಾದಿಗಳು, ಆಹ್ನಿಕಗಳು, ಯಜ್ಞಯಾಗಾದಿಗಳು ಇವುಗಳನ್ನೆಲ್ಲಾ ಕ್ರಮವಾಗಿ ನಡೆಸಲು ಅವರು ನದೀತೀರಗಳಲ್ಲೇ ನೆಲಸುತ್ತಿದ್ದರು. ಆ ನದಿಗಳನ್ನು ದೈವಿಕಭಾವನೆಯಿಂದ ಗೌರವಿಸುತ್ತಿದ್ದರು. 'ಯತ್ರದೇಶೇ ನದೀ ನಾಸ್ತಿ ತಂ ದೇಶಂ ಪರಿವರ್ಜಯೇತ್' ಎಂದೂ ನಮ್ಮಲ್ಲಿ ನಾಣ್ನುಡಿ ಬಂದಿತು. ಒಂದು ದೇಶದ ಪ್ರಾಕೃತಿಕ ಸಂಪತ್ತು ಅಲ್ಲಿನ ಜೀವನದಿಗಳು. ಇಂಥ ನದಿಗಳನ್ನು ಅನುಪಮವಾಗಿ ಋಗ್ವೇದ ಋಷಿಗಳು ಕೊಂಡಾಡಿದ್ದಾರೆ. ಆದುದರಿಂದಲೇ

"ಪ್ರಸುವ ಆಪೋಮಹಿಮಾನಮುತ್ತಮಂ
ಕಾರುರ್ವೋಚಾತಿ ಸದನೇ ವಿವಸ್ವತಃ |" (10-75-1)

'ಎಲೈ ನದಿಗಳೇ, ನಿಮ್ಮ ಉತ್ಕೃಷ್ಟತರವಾದ ಸ್ತೋತ್ರವನ್ನು ಸ್ತೋತಾ ಯಜಮಾನನ ಯಜ್ಞಗೃಹದಲ್ಲಿ ಹೇಳುವನು' ಎಂದಿದ್ದಾರೆ.

ನದಿಗಳಲ್ಲಿ ಸರಸ್ವತಿ, ಸರಯು ಮತ್ತು ಸಿಂಧು ನದಿಗಳು ಮಹಾನದಿಗಳೆಂದು ಹೇಳಿದ್ದಾರೆ ಕೆಳಗಿನ ಮಂತ್ರದಲ್ಲಿ–

'ಸರಸ್ವತೀ ಸರಯುಃ ಸಿಂಧುರೂರ್ಮಿಭಿಃ
ಮಹೋಮಹೀರವಸಾ ಯಂತು ವಕ್ಷಣೀಃ |
ದೇವೀರಾಪೋ ಮಾತರಃ ಸೂದಯಿತ್ನ್ವೋ
ಘೃತವತ್ಪಯೋ ಮಧುಮನ್ನೋ ಅರ್ಚತ ||' (10-64-9)

'ಮಹತ್ತಿಗಿಂತಲೂ ಮಹತ್ತರವಾದ ಸರಸ್ವತೀ, ಸರಯೂ, ಸಿಂಧು ಮೊದಲಾದ ನದಿಗಳು

ತಮ್ಮ ಊರ್ಮಿಗಳಿಂದ ಕೂಡಿ ನಮ್ಮನ್ನು ರಕ್ಷಿಸಲು ನಮ್ಮ ಯಜ್ಞಕ್ಕೆ ಆಗಮಿಸಲಿ. ಪ್ರಕಾಶಯುತರೂ ಮಾತೃಭೂತರೂ, ಪ್ರೇರಕರೂ ಆದ ಆ ಮಹಾನದಿಗಳು ಘೃತಯುತವೂ, ಮಧುಯುತವೂ ಆದ ತಮ್ಮ ಜಲಗಳನ್ನು ನಮಗೆ ಕರುಣಿಸಲಿ.'

ಪ್ರಧಾನಭೂತರಾದ ಸಪ್ತನದಿಗಳನ್ನೂ ತದವಯವಭೂತರಾದ ಮೂರು ನದಿಗಳನ್ನೂ ಕೆಳಗಿನ ಮಂತ್ರದಲ್ಲಿ ಸ್ತುತಿಸಿದ್ದಾರೆ:

'ಇಮಂ ಮೇ ಗಂಗೇ ಯಮುನೇ ಸರಸ್ವತಿ
ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ |
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾ-
ಆರ್ಜೀಕೀಯೇ ಶೃಣುಹ್ಯಾ ಸುಷೋಮಯಾ ||' (10-75-5)

'ಎಲೈ ಗಂಗೇ, ಹೇ ಯಮುನೇ, ಹೇ ಸರಸ್ವತಿ, ಹೇ ಶುತ್ರುದಿ, ಹೇ ಪರಷ್ಣಿ, ಹೇ ಅಸಿಕ್ನಿಯಿಂದೊಡಗೂಡಿದ ಮರುದ್ವೃಧೇ, ವಿತಸ್ತಾ ಮತ್ತು ಸುಷೋಮಾಗಳಿಂದ ಕೂಡಿದ ಆರ್ಜೀಕೀಯೇ, ನೀವು ಸಪ್ತನದಿಗಳೂ ನಮ್ಮ ಸ್ತೋತ್ರವನ್ನು ರಮಿಸಿ, ಸಾವಧಾನದಿಂದ ಲಾಲಿಸಿ.'

ಈ ನದಿಗಳಲ್ಲಿ ಸರಸ್ವತೀ ನದಿಯನ್ನು ಹೆಚ್ಚಾಗಿ ಕೊಂಡಾಡಿದ್ದಾರೆ. 'ಈ ನದಿಯ ಎರಡು ದಡದಲ್ಲಿಯೂ ಮನುಷ್ಯರು ನೆಲಸಿದ್ದಾರೆ. ಎಲ್ಲರನ್ನೂ ರಕ್ಷಿಸುವ ನೀನು ನಮ್ಮನ್ನು ಸಲಹು (7-96-2) ಎಂದು ಕೊಂಡಾಡುತ್ತಾ ಈ ನದಿಯ ದಡಗಳಲ್ಲಿ ವಾಸಮಾಡುತ್ತಿದ್ದ ರಾಜರುಗಳ ಮತ್ತು ಜನರ ವಿಚಾರ ಹೇಳಿದ್ದಾರೆ (8-21-18). ಸರಸ್ವತೀ ಕಲ್ಯಾಣತಮಳು. ಅನ್ನವತೀ. ಈ ಭದ್ರೆ ಎಲ್ಲರ ಮಂಗಳಕ್ಕೆ ಆಗುವಳು. ಉತ್ತರ ಸಮುದ್ರದಿಂದ ಪರ್ವತಗಳ ಮೂಲಕ ಪ್ರವಹಿಸುವ ಸರಸ್ವತಿ ನಿರ್ಮಲತಮಳು. ಇಂಥ ದಿವ್ಯವಾದ, ರಮ್ಯವಾದ ನದಿಯದಡದಲ್ಲಿ ವಾಸಿಸಿದ ಋಷಿ ಅಂಥ ಪ್ರದೇಶದಿಂದ ದೂರಹೋಗಲು ಬಯಸನು. ಪರ್ವತಾಗ್ರಗಳನ್ನು ಅಲೆಗಳಿಂದ ಸವರಿ ಮಹೋನ್ನತವಾದ ಪೂರದಿಂದ ತುಂಬಿ ಹರಿಯುವ ಸರಸ್ವತಿ ಋಷಿಯ ಆರಾಧ್ಯ ದೇವತೆಯಾಗಿದ್ದಾಳೆ.

ಇಯಂ ಶುಷ್ಮೇಭಿಃ ಬಿಸಖಾ ಇವಾರುಜತ್
ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ |
ಪಾರಾವತಘ್ನೀಮವಸೇ ಸುವೃಕ್ತಿಭಿಃ
ಸರಸ್ವತೀಮಾ ವಿವಾಸೇಮ ಧೀತಿಭಿಃ || (6-61-2)

'ಪರ್ವತಾಸಾನುಗಳನ್ನು ಸರಸ್ವತೀ ಮಹತ್ತರವೂ ಬಲಿಷ್ಠವೂ ಆದ ತರಂಗಗಳಿಂದ ಭಂಗಗೊಳಿಸಿದಳು ತಾವರೆ ದಂಟಿಗಾಗಿ ಕೆಸರನ್ನು ಭಂಗಗೊಳಿಸುವಂತೆ. ದೂರದ ವೃಕ್ಷಗಳನ್ನೂ ತನ್ನ ಮಹತ್ಪೂರದಿಂದ ಭಂಜಿಸುವ ಈ ಸರಸ್ವತಿಯನ್ನು ನಾವು ರಕ್ಷಣೆ ಬೇಡಿ ಸ್ತುತಿಸುವ.'

ಇಂಥ ವರಪ್ರದಳಾದ, ಜೀವನಪ್ರದಾತೆಯ ಸಾನ್ನಿಧ್ಯದಿಂದ ದೂರವಾಗಲು ಯಾರುತಾನೇ ಇಚ್ಛಿಸಿಯಾರು?

ಸರಸ್ವತೀ ಪಾವನತರಳು. ಎಲ್ಲರನ್ನೂ ಪುನೀತಗೊಳಿಸುವಳು. ಪ್ರವಾಹದಿಂದ ತುಂಬಿ ಬಂದು ಧನಧಾನ್ಯಾದಿ ಸಮೃದ್ಧಿಯನ್ನು ಕರುಣಿಸಬೇಕೆಂದು ಬೇಡುತ್ತಾರೆ ಋಷಿಗಳು. (10-30-12).

ಋಗ್ವೇದದಲ್ಲಿ ಸರಸ್ವತಿಯ ಸ್ತುತಿ ನದೀಪರವಾಗಿರುವಂತೆ ಸರಸ್ವತಿದೇವತಾಪರವಾಗಿಯೂ ಇದೆ. ಸರಸ್ವತೀದೇವಿ ಭಾರತದ ವಿದ್ಯಾದೇವತೆ. ಭಾರತೀಯರು ಇಂದಿಗೂ ಈ ದೇವತೆಯ ಕೃಪೆಯಿಂದ

ವಿದ್ಯಾಪ್ರಾಪ್ತಿಯೆಂದು ನಂಬಿದ್ದಾರೆ. ಆದ್ದರಿಂದಲೇ ಇಂದೂ ಋಗ್ವೇದದಲ್ಲಿ ಮೂರು ಸೂಕ್ತಗಳು ಸಮಗ್ರವಾಗಿ ಸರಸ್ವತೀ ಸೂಕ್ತವಾಗಿವೆ. ಅಲ್ಲದೆ ಇತರ ಅನೇಕ ಮಂತ್ರಗಳೂ ಈ ದೇವತೆಯ ಸ್ತುತಿಯಲ್ಲಿ ಪ್ರವೃತ್ತವಾಗಿವೆ. ಸರಸ್ವತಿಯ ಸೂಕ್ತದ ಪಠಣದಿಂದ ವಾಗ್ಮಿಯಾಗುವನೆಂದು ಋಗ್ವಿಧಾನ ತಿಳಿಸುವುದು.[47]

ಸರಸ್ವತೀದೇವಿ ಸಕಲಾಭೀಷ್ಟಪ್ರದಳು. ಸರಸ್ವತೀದೇವಿ ನಮ್ಮ ಯಜ್ಞದ ನಿರ್ವಾಹಮಾಡಲಿ ಎಂದು ಋಷಿ ಬೇಡಿದ್ದಾರೆ ಕೆಳಗಿನ ಮಂತ್ರದಲ್ಲಿ–

ಪಾವಕಾ ನಃ ಸರಸ್ವತೀ
ವಾಜೇಭಿರ್ವಾಜಿನೀವತೀ |
ಯಜ್ಞಂ ವಷ್ಟು ಧಿಯಾವಸುಃ || (1-3-10)

'ಸರಸ್ವತಿದೇವಿ ಹವಿರ್ಲಕ್ಷಣವಾದ ಅನ್ನದಿಂದ ನಮ್ಮ ಯಜ್ಞವನ್ನು ನಿರ್ವಹಿಸಲಿ. ಪಾವನೆಯೂ ಅನ್ನವತಿಯೂ ಕ್ರಿಯಾವತಿಯೂ ಆಗಿ ಕರ್ಮಪ್ರಾಪ್ಯಧನನಿಮಿತ್ತ ಭೂತಳಾದವಳು ಈ ಸರಸ್ವತಿ.

ವಾಗ್ದೇವತೆಯಾದ ಸರಸ್ವತಿಗೆ ಧನನಿಮಿತ್ತತ್ವವುಂಟೆಂಬುದನ್ನು 'ಯಜ್ಞಂ ವಷ್ಟುಧಿಯಾ ವಸುರಿತಿ ವಾಗ್ವೈಧಿಯಾವಸುಃ' (ಐ.ಆ.1-1-4) ಎಂದು ಶ್ರುತಿಯೇ ಸಾರುತ್ತದೆ.[48]

ಹೀಗೆ ಆರಣ್ಯಕಗಳ ಕಾಲದಲ್ಲಿಯೇ ಸರಸ್ವತಿಯ ದ್ವಿರೂಪವನ್ನು ಹೇಳಿರುವುದನ್ನು ಗಮನಿಸಿದಲ್ಲಿ ಪಾಶ್ಚಾತ್ಯರು ಸರಸ್ವತಿಗೆ ನದೀದೇವತಾತ್ವ ಹೊರತು ಮತ್ತೇನೂ ಇಲ್ಲವೆಂದು ಹೇಳಿರುವುದನ್ನು[49] ಒಪ್ಪಲಾಗುವುದಿಲ್ಲ. ಶತಪಥ ಬ್ರಾಹ್ಮಣ (3-9-1-7) ಹಾಗೂ ಐತರೇಯ ಬ್ರಾಹ್ಮಣ (3-1-10)ದಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದು ಹೇಳಿರುವುದು ಗಮನಾರ್ಹವಾಗಿದೆ. ವಾಜಸನೇಯೀ ಸಂಹಿತೆಯಲ್ಲಿ (19-12) ಸರಸ್ವತಿ ವಾಕ್ಕಿನಿಂದ ಇಂದ್ರನಿಗೆ ಶಕ್ತಿಯನ್ನುಂಟುಮಾಡಿದಳೆಂದು ಹೇಳಿದೆ. ಅದೇ ಸಂಹಿತೆ (19-94) ಸರಸ್ವತಿ ಅಶ್ವಿನಿಗಳ ಪತ್ನಿಯೆಂದು ಹೇಳುತ್ತದೆ. ಹೀಗೆ ಯಜುರ್ವೇದ ಸಂಹಿತೆಯ ಕಾಲದಲ್ಲಿ ಸರಸ್ವತಿಯ ದ್ವಿರೂಪವನ್ನು ಹೇಳಿರುವುದರಿಂದ ಋಗ್ವೇದದಲ್ಲಿಯೂ ಸರಸ್ವತಿಯನ್ನು ಎರಡು ರೂಪದಲ್ಲಿ ಸ್ತುತಿಸಿದ್ದಾರೆಂದು ತಿಳಿಯಬಹುದು.

'ಸರಸ್ವತೀ ದೇವತೆ ಪ್ರಿಯವಾದ ಸತ್ಯವಾಕ್ಯಗಳ ಪ್ರೇರಕಳು. ಶೋಭನವಾದ ಬುದ್ಧಿಯುಕ್ತರಾದವರ ಅನುಷ್ಠಾನಗಳನ್ನು ಪ್ರಚೋದಿಸುವವಳು. ಇಂಥವಳು ಯಜ್ಞವನ್ನು ನಡೆಸುವಳು, ನಿರ್ವಾಹಗೊಳಿಸುವಳು' ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ–

ಚೋದಯಿತ್ರೀ ಸೂನೃತಾನಾಂ
ಚೇತಂತೀ ಸುಮತೀನಾಂ |
ಯಜ್ಞಂ ದಧೇ ಸರಸ್ವತೀ || (1-3-11)

ವಿದ್ಯಾಧಿದೇವತೆಯಾಗಿರುವಂತೆ ಇವಳು ಯಾಜಕರ ಸಕಲಾಭೀಷ್ಟಗಳನ್ನೂ ನಡೆಸಿಕೊಡುವವಳಾಗಿದ್ದಾಳೆ. 'ಹವಿಸ್ಸನ್ನು ಪ್ರದಾನಮಾಡಿದ ವಧ್ರ್ಯಶ್ವನಿಗೆ ದಿವೋದಾಸನೆಂಬ ಪುತ್ರನನ್ನು

47. ಇಯಮಿತ್ಯೇತದಾದ್ಯಂ ತು ಸೂಕ್ತಂ ಸಾರಸ್ವತಂ ಜಪೇತ್ |
ದ್ವಿಜಃ ಪ್ರಾತಃ ಶುಚಿರ್ಭೂತ್ವಾ ವಾಗ್ಮೀ ಭವತಿ ಬುದ್ಧಿಮಾನ್ || (ಋಗ್ವಿಧಾನ)
ಸರಸ್ವತಿಗೆ ದ್ವಿರೂಪವಿದೆಯೆಂಬುದನ್ನು ಯಾಸ್ಕಾಚಾರ್ಯರು ಹೇಳಿದ್ದಾರೆ. ತತ್ರ ಸರಸ್ವತೀ ತ್ಯೇತಸ್ಯ ನದೀವದ್ದೇವತಾವಚ್ಚ ನಿಗಮಾ ಭವಂತಿ' (ನಿರುಕ್ತ 2-23)

48. ನಿರುಕ್ತ ನೋಡಿ (11-26)

49. Vedic Mythology, A. A. Macdonell, p. 87

ಕರುಣಿಸಿದವಳು ಇವಳೇ. ಭಜಕರಿಗೆ ಇಷ್ಟ ಸಂಪತ್ತಿಯನ್ನೊದಗಿಸಿದಂತೆ ಭಜಿಸದೆ ಇರುವವರಿಗೆ ಪಣಿಗಳ ತೊಂದರೆಯನ್ನೊದಗಿಸುವಳಿವಳು.'

ಇಯಮದದಾದ್ರಭಸಂ ಋಣಚ್ಯುತಂ
ದಿವೋದಾಸಂ ವಧ್ರ್ಯಶ್ವಾಯ ದಾಶುಷೇ |
ಯಾ ಶಶ್ವಂತಮಾಚಖಾದಾವಸಂ ಪಣಿಂ
ತಾತೇ ದಾತ್ರಾಣಿ ತವಿಷಾ ಸರಸ್ವತಿ || (6-61-1)

ಸಂಪತ್ತು, ಪುಷ್ಟಿ ಮೊದಲಾದವುಗಳನ್ನು ಇವಳು ಕರುಣಿಸುವಳು (7-95-2). 'ಅಂಬಾ' ಶಬ್ದವಾಚ್ಯಳಾದ ಈ ಮಾತೆ ಭಕ್ತರಿಗೆ ಯಶಸ್ಸನ್ನು ಕೊಡುವಳು (2-41-16). ದಾನಾದಿಗುಣಯುಕ್ತಳಾದ ಇವಳು ದೇವೀ ಶಬ್ದವಾಚ್ಯಳೇ ಸರಿ. ಬುದ್ಧಿಯನ್ನು, ಭಕ್ತಿಯನ್ನು ಉಜ್ವಲಗೊಳಿಸಿ ರಕ್ಷಿಸುವವಳಿವಳು–'ಧೀನಾಂ ಅವಿತ್ರೀ ಅವತು' (6-61-2). 'ಪೂಷಣ್‌ದೇವ ನಮ್ಮನ್ನು ಸಲಹಿ ಪೋಷಿಸುವಂತೆ, ಎಲೌ ಸರಸ್ವತೀದೇವಿಯೇ, ನೀನೂ ನಮಗೆ ಧನಧಾನ್ಯಾದಿಗಳನ್ನಿತ್ತು ರಕ್ಷಿಸು' ಎಂದು ಬೇಡಿದ್ದಾರೆ–

ತ್ವಂ ದೇವಿ ಸರಸ್ವತ್ಯವಾ ವಾಜೇಷು ವಾಜಿನಿ |
ರದಾ ಪೂಷೇವ ನಃ ಸನಿಮ್ ||' (6-61-6)

ಇವಳು 'ಹಿರಣ್ಯವರ್ತನಿಃ'–ಎಂದರೆ ಹಿರಣ್ಮಯವಾದ ರಥದಲ್ಲಿ ಚರಿಸುವವಳು. ಶತ್ರುಗಳಿಗೆ ಭಯಕಾರಿಯಾದುದರಿಂದ 'ಘೋರಾ'. ಶತ್ರುಧ್ವಂಸಕಿಯೂ ಆದುದರಿಂದ 'ವೃತ್ರಘ್ನೀ'.

ಅಪರಿಮಿತವೂ, ಅಪ್ರತಿಹತವೂ ಆದುದು ಇವಳ ಬಲ. ಅಮಿತವಾದ ತೇಜಸ್ಸಿನಿಂದ ಬೆಳಬೆಳಗುವ ಇವಳು ನಿಂದಕರಿಂದ ನಮ್ಮನ್ನು ರಕ್ಷಿಸಲೆಂದು ಋಷಿ ಬೇಡಿದ್ದಾರೆ: (6-61-11). 'ಮೂರುಲೋಕಗಳಲ್ಲಿಯೂ ಇವಳು ವ್ಯಾಪಿಸಿದ್ದಾಳೆ. ಗಾಯತ್ರೀ ಮೊದಲಾದ ಸಪ್ತ ಅವಯವಯುತಳಿವಳು. ನಿಷಾದಪಂಚಮವಾದ ಚಾತುರ್ವರ್ಣ್ಯಗಳನ್ನು ಅಭಿವೃದ್ಧಿಗೊಳಿಸುವ ಇವಳು ರಣಾಂಗಣದಲ್ಲಿ ನಮ್ಮ ಬೆಂಗಾವಲಾಗಿರಲಿ ಎಂದು ಕೆಳಗಿನ ಮಂತ್ರದಲ್ಲಿ ಋಷಿ ಬೇಡಿದ್ದಾರೆ–

"ತ್ರಿಷಧಸ್ಥಾ ಸಪ್ತಧಾತುಃ ಪಂಚಜಾತಾ ವರ್ಧಯಂತೀ |
ವಾಜೇ ವಾಜೇ ಹವ್ಯಾಭೂತ್ || (6-6-13)

ಇಂಥ ವಿದ್ಯಾದೇವತೆಯಲ್ಲಿ ಋಷಿಗಳ ಪ್ರಾರ್ಥನೆ ಇದು–

ಸರಸ್ವತ್ಯಭಿ ನೋ ನೇಷಿ ವಸ್ಯೋ
ಮಾಪ ಸ್ಫರೀಃ ಪಯಸಾ ಮಾನ ಆಧುಕ್ |
ಜುಷಸ್ವ ನಃ ಸಖ್ಯಾ ವೇಶ್ಯಾ ಚ
ಮಾತ್ವತ್ಕ್ಷೇತ್ರಾಣ್ಯರಣಾನಿ ಗನ್ಮ || (6-61-14)

'ಎಲೌ, ದೇವಿ ಸರಸ್ವತಿ, ನಮಗೆ ಪ್ರಶಸ್ತವಾದ ಧನವನ್ನು ಕೊಡು, ನಮ್ಮನ್ನು ಅಭಿವೃದ್ಧಿಗೊಳಿಸು. ಅತ್ಯಧಿಕವಾದ ಪ್ರವಾಹದಿಂದ ನಮ್ಮನ್ನು ಪೀಡಿಸಬೇಡ. ನಮ್ಮ ಸೇವೆಯನ್ನೂ ಸಹವಾಸವನ್ನೂ ಪಡೆಯುವವಳಾಗು. ನಿನ್ನಿಂದ ದೂರವಾಗಿ ರಮಣೀಯವಲ್ಲದ ಕ್ಷೇತ್ರಗಳಿಗೆ ಹೋಗದಂತಾಗಲಿ.'

### ಬೃಹಸ್ಪತಿ

ಋಗ್ವೇದದಲ್ಲಿ ಹನ್ನೊಂದು ಸೂಕ್ತಗಳು ಸಮಗ್ರವಾಗಿ ಬೃಹಸ್ಪತಿದೇವತಾಕವಾಗಿರುವುವಲ್ಲದೆ

ಇಂದ್ರನೊಡನೆ ಎರಡು ಸೂಕ್ತಗಳಲ್ಲಿ ಬೃಹಸ್ಪತಿಯನ್ನು ಸ್ತುತಿಸಿದ್ದಾರೆ. ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳಿಬ್ಬರೂ ಒಬ್ಬರೇ ಎಂದು ಆಧುನಿಕ ವಿಮರ್ಶಕರ ಮತ. ಸಾಯಣರು ಇವರಿಗೆ ಸ್ವಲ್ಪ ಭೇದವನ್ನು ಹೇಳುತ್ತಾರೆ–'ಯಾಸು ಬೃಹಸ್ಪತಿ ಶಬ್ದ: ಶ್ರೂಯತೇ ತಾ ಬಾರ್ಹಸ್ಪತ್ಯಾ: ಶಿಷ್ಟಾ:ಬ್ರಹ್ಮಣಸ್ಪತ್ಯಾ:' ಎಂದು. ಯಾಸ್ಕರು ಮಧ್ಯಮಸ್ಥಾನದೇವತೆಗಳಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳ ನಿರ್ವಚನಮಾಡಿದ್ದಾರೆ. 'ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ'–ಮಹತ್ತರವಾದ ಈ ಜಗತ್ತಿನ ಅಥವಾ ಉದಕದ ರಕ್ಷಕ'ಎಂದು ಬೃಹಸ್ಪತಿ ಶಬ್ದನಿರ್ವಚನ ಮಾಡಿ (ನಿ. 10-11-11) 'ಬ್ರಹ್ಮಣಸ್ಪತಿಃ ಬ್ರಹ್ಮಣಃ ಪಾತಾ ವಾ ಪಾಲಯಿತಾ ವಾ' ಅನ್ನ ಅಥವಾ ಋಕ್ಕುಗಳ ರಕ್ಷಕ ಇವನು' (ವರ್ಷದಿಂದ ಓಷಧಿಗಳ ಅಭಿನಿಷ್ಪಾದಕನಾದುದರಿಂದ) ಎಂದು ಬ್ರಹ್ಮಣಸ್ಪತಿ ಶಬ್ದದ ನಿರ್ವಚನ ಮಾಡಿದ್ದಾರೆ. ಈ ನಿರ್ವಚನವನ್ನು ಸಮರ್ಥಿಸಲು ಕೊಟ್ಟಿರುವ ಮಂತ್ರಗಳೂ ಬೃಹಸ್ಪತಿ ಹೇಗೆ ಮಹತ್ತರವಾದ ಶಬ್ದದಿಂದ ಮೇಘವನ್ನು ಕ್ಷೋಭೆಗೊಳಗಾಗಿಸಿ ಮಧುಯುತವಾದ ಉದಕವನ್ನು ಪ್ರವಿಸಿದನೋ ಹಾಗೆಯೇ ಬ್ರಹ್ಮಣಸ್ಪತಿಯೂ ಲೋಕಾನುಗ್ರಹಕ್ಕಾಗಿ ಮೇಘ ಪ್ರತಿವರ್ಷದಲ್ಲಿಯೂ ವರ್ಷಿಸುವಂತೆ ಮಾಡುವನೆಂದು ಹೇಳುತ್ತವೆ. ಯಾಸ್ಕರ ಅಭಿಪ್ರಾಯದಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳು ಉದಕದಾನ ಮಾಡುವವರಾಗಿದ್ದಾರೆ. ಆಧುನಿಕ ವಿಮರ್ಶಕರು ವಿಶಾಂಪತಿ, ಗೃಹಪತಿ, ಸದಸಸ್ಪತಿ ಮೊದಲಾದ ಶಬ್ದಗಳು ಹೇಗೋ ಹಾಗೆ ಬೃಹಸ್ಪತಿ ಶಬ್ದ ಪ್ರಥಮಪುರೋಹಿತನೆಂದು ಗಣಿಸಲಾದ ಅಗ್ನಿಯ ಸ್ವರೂಪವೆಂದು ಊಹಿಸುತ್ತಾರೆ. ವಿಲ್ಸನ್, ಮ್ಯಾಕ್ಸ್‌ಮುಲ್ಲರ್ ಮೊದಲಾದವರು ಬೃಹಸ್ಪತಿ ಅಗ್ನಿಯ ಅನೇಕ ರೂಪಗಳಲ್ಲಿ ಒಂದು ಎನ್ನುವರು. ಭಕ್ತಿಯ ರೂಪಣ ಮಾಡಲ್ಪಟ್ಟ ರೂಪವೇ ಬೃಹಸ್ಪತಿಯೆಂದು ರಾತಮಹಾಶಯನ ಮತ. ಇಂದ್ರನ ಪುರೋಹಿತತ್ವವನ್ನು ಬೃಹಸ್ಪತಿ ಪ್ರತಿನಿಧಿಸುವನೆಂದು ವೆಬರ್ ಹಿಲ್ ಬ್ರಾಂಡ್ ಬೃಹಸ್ಪತಿ ಓಷಧೀಶನೆಂದೂ ಚಂದ್ರನ ರೂಪಣ ವೆಂದೂ ಹೇಳುತ್ತಾನೆ. ಉದಕದಾನಕ್ಕೆ ಸಂಬಂಧಿಸಿದಂತೆ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳ ನಾಮನಿರ್ವಚನವನ್ನು ಯಾಸ್ಕರು ಮಾಡಿರುವುದರಿಂದ ಸಮಾನಧರ್ಮವುಳ್ಳ ಈ ಎರಡು ಹೆಸರುಗಳೂ ಒಬ್ಬನೇ ದೇವತೆಗೆ ಅನ್ವಯಿಸಿರಬಹುದು.

"ಬೃಹಸ್ಪತಿ ದೇವ ಮಹತ್ತಮವಾದ ಜ್ಯೋತಿಯುಳ್ಳ ಆದಿತ್ಯನ ನಿರತಿಶಯವಾದ ಸ್ಥಾನದಲ್ಲಿ ಮೊದಲು ಪ್ರಾದುರ್ಭವಿಸಿದ. ಇವನು ಮಂತ್ರಾಭಿಮಾನಿಯಾದ ದೇವ. ಇವನು ಸಪ್ತಮುಖ (ಸಪ್ತಛಂದೋಮಯ). ಬಹು ಪ್ರಕಾರವಾಗಿ ಹರಡುವ ಸಪ್ತರಶ್ಮಿಗಳಿಂದ ಬೃಹಸ್ಪತಿ ಘೋರ್ಗರೆಯುತ್ತಾ ಕತ್ತಲೆಯನ್ನು ನಾಶಮಾಡಿದನು" ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ–

ಬೃಹಸ್ಪತಿಃ ಪ್ರಥಮಂ ಜಾಯಮಾನೋ
ಮಹೋ ಜ್ಯೋತಿಷಃ ಪರಮೇ ವ್ಯೋಮನ್ |
ಸಪ್ತಾಸ್ಯಸ್ತುವಿಜಾತೋ ರವೇಣ
ವಿಸಪ್ತರಶ್ಮಿರಧಮತ್ತಮಾಂಸಿ || (4-50-4)

ಇವನು ದ್ಯಾವಾಪೃಥಿವೀಗಳ ಪುತ್ರ (7-97-8). ತ್ವಷ್ಟೃಪುತ್ರನೆಂದೂ ಹೇಳಿದೆ (2-23-17).

ಸ್ವರ್ಣಮಯವಾದ ರೂಪವಿವನದು. ಸ್ವರ್ಣಪರಶುವನ್ನೂ, ಧನುರ್ಬಾಣಗಳನ್ನೂ ಇವನು ಧರಿಸಿದ್ದಾನೆ. ಇವನು ಮಂದ್ರಜಿಹ್ವ–ಮಾತಿನಿಂದ ಸಂತಸಗೊಳಿಸುವವನು ಪ್ರಕಾಶಶೀಲ.

ಅತ್ಯಂತ ಪಾವನತಮ.

'ಇವನು ಮಂತ್ರಗಳಿಂದ ಸರ್ವವನ್ನೂ ಸಾಧಿಸುವನು. ಸಂಕಲ್ಪಿಸಿದುದನ್ನು ಲೀಲೆಯಿಂದ ಪಡೆಯುವನು. ಇವನ ಬಿಲ್ಲಿನ ಹೆದೆ 'ಋತ'. ಸರ್ವರನ್ನೂ ಧರಿಸುವ ಬಲ್ಮೆ ಇವನ ಬಿಲ್ಲಿನದು. ಇವನು ಬಿಟ್ಟ ಬಾಣ ಶತ್ರುಧ್ವಂಸಕ. ಸರ್ವಜ್ಞನಾದ ಇವನು ಸುತ್ತಲೂ ನಿರೂಪಿಸಿ ಬಾಣಪ್ರಯೋಗ ಮಾಡುವನು. ಇವನ ಬಾಣಗಳು ಕರ್ಣಯೋನಿಗಳು. ಕಿವಿಯವರೆಗೆ ಆಕರ್ಷಿತವಾಗುವುವು (ಕಿವಿಯಲ್ಲಿ ರಹಸ್ಯವಾಗಿ ಹೇಳಬೇಕಾದ ಮಂತ್ರಗಳು ಆ ಬಾಣಗಳು).

'ಋತಜ್ಯೇನ ಕ್ಷಿಪ್ರೇಣ ಬ್ರಹ್ಮಣ ಸ್ಪತಿಃ
ಯತ್ರವಷ್ಟಿ ಪ್ರತದಶ್ನೋತಿ ಧನ್ವನಾ |
ತಸ್ಯ ಸಾಧ್ವೀರಿಷವೋ ಯಾಭಿರಸ್ಯತಿ
ನೃಚಕ್ಷಸೋ ದೃಶಯೇ ಕರ್ಣಯೋನಯಃ || (2-24-8)

ಅಗ್ನಿಯಂತೆ ಇವನೂ ಪುರೋಹಿತ. ಇವನು ಪ್ರಾಚೀನರಾದ ಋಷಿಗಳಿಂದ ಸಕಲ ಕಾರ್ಯಗಳಲ್ಲಿಯೂ ಮುಂದೆ ನಾಯಕನಾಗಿ ಒಪ್ಪಲ್ಪಟ್ಟಿದ್ದಾನೆ. ಅದರಿಂದ ಇವನು 'ಪುರೋಧಾ' (4-50-1). ಯಾಗದಲ್ಲಿ ಬ್ರಹ್ಮನ್ ಎಂಬ ಋತ್ವಿಕ್ಕು ಇವನೇ. ಭಕ್ತಿಯನ್ನು ಅಭಿವೃದ್ಧಿಗೊಳಿಸುವವನು ಇವನು. ಇವನಿಲ್ಲದಿದ್ದರೆ ಯಾಗಾದಿಗಳು ನಡೆಯವು.

ಲೋಕದ ಸಕಲ ಕಾರ್ಯಗಳೂ ಇವನ ಪ್ರೇರಣೆಯಿಂದಲೇ ನಡೆಯುವುವು. ಇವನ ದಯಾಯುತವಾದ ಪ್ರೇರಣೆ ಇಲ್ಲದಿದ್ದರೆ ಇವನನ್ನು ಸ್ತುತಿಸುವುದೂ ಹೇಗೆ ಸಾಧ್ಯವಾದೀತು? ಆದ್ದರಿಂದ ನಮಗೆ ಬುದ್ಧಿಪ್ರದಾನಮಾಡಿ ಸ್ತೋತ್ರಗಳನ್ನು ಕರುಣಿಸುವವನೂ ಇವನೇ. ಸ್ತುತನಾಗುವವನೂ ಇವನೇ. ಮಂತ್ರಕರ್ತನೂ ಮಂತ್ರಗಳನ್ನು ಕೂಡಿಸುವವನೂ ಇವನೇ.

ಮಂತ್ರಾಭಿಮಾನಿಯಾದ ಈ ದೇವ ಇಂದ್ರ, ಮಿತ್ರ, ವರುಣ ಮೊದಲಾದವರು ಆನಂದಿಸುವಂತೆ ಸೂಕ್ತಗಳನ್ನು ಹೇಳುವನು (1-40-5). ಈ ಬೃಹಸ್ಪತಿ ಸ್ತೋತ್ರವನ್ನು ಪಠಿಸುವ, ಗಾನಮಾಡುವ ಗಣಗಳಿಂದ ಕೂಡಿದ್ದಾನೆ–'ಸಸುಷ್ಟುಭಾಸ ಋಕ್ವತಾ ಗಣೇನ'. ಆದ್ದರಿಂದಲೇ ಇವನು ಗಣಪತಿ ವಾಚ್ಯನಾಗಿದ್ದಾನೆ–'ಗಣಾನಾಂ ತ್ವಾ ಗಣಪತಿಂ ಹವಾಮಹೇ' (2-23-1). ಹೀಗೆ ಇವನು ದೇವಾದಿ ಗಣಗಳ ಪತಿ. ಕವೀನಾಂ ಕವಿ.

'ಅಗ್ನಿಯಂತೆ ಬೃಹಸ್ಪತಿಯೂ ಸಹ ತ್ರಿಸ್ಥಾನಗಳಲ್ಲಿರುವವನು. ಲೋಕದ ದಶದಿಕ್ಕುಗಳನ್ನೂ ಈ ಯಜ್ಞಪಾಲಕನಾದ ಬೃಹಸ್ಪತಿ ನಿರ್ಧರಗೊಳಿಸಿದನು.'

"ಯಸ್ತಸ್ತಂಭ ಸಹಸಾ ವಿಜ್ಮೋ ಅಂತಾನ್
ಬೃಹಸ್ಪತಿ ಸ್ತ್ರಿಷಧಸ್ಥೋ ರವೇಣ |" (4-50-1)

ಬೃಹಸ್ಪತಿಯು ಮೇಘವಿದಾರಣ ಮಾಡುವನು. ಅದರಿಂದ ಇವನನ್ನು 'ಅದ್ರಿಭಿತ್' ಎಂದು ಕರೆದಿದ್ದಾರೆ. ತನ್ನ ಶಕ್ತಿಯಿಂದ ಅದ್ರಿಯನ್ನು ಭೇದಿಸಿದನಿವನು. ಪಶುಗಳಿದ್ದ ಗೋಷ್ಠವನ್ನು ಕಂಡುಹಿಡಿದು ಅವುಗಳನ್ನು ಪಡೆದುದಲ್ಲದೆ ಅಂಧಕಾರದಿಂದ ಆವೃತವಾದ ಜಲರಾಶಿಯನ್ನು ನಿರ್ಗಮಗೊಳಿಸಿದವನು ಬೃಹಸ್ಪತಿ (2-23-18).

ಯೋ ಅದ್ರಿಭಿತ್ಪ್ರಥಮಜಾ ಋತಾವಾ
ಬೃಹಸ್ಪತಿರಾಂಗಿರ ಸೋ ಹವಿಷ್ಮಾನ್ | (6-73-1)

'ಪಣಿಗಳು ಗೋಸಮೂಹವನ್ನೆಲ್ಲಾ ಅಪಹರಿಸಿಬಿಟ್ಟರು. ದೇವಶುನಿಯಾದ ಸರಮೆ ಆ ಪಣಿಗಳ ವಾಸಸ್ಥಾನವನ್ನು ಬ್ರಹ್ಮಣಸ್ಪತಿಯಿಂದ ಸ್ಪಷ್ಟರಾದ ಅಂಗಿರಸರಿಗೆ ತೋರಿಸಿತು. ಆಗ ಅಂಗಿರಸರು

ಆ ಸ್ಥಾನಕ್ಕೆ ಹೋಗಿ ಗೋಸಮೂಹವನ್ನೂ, ಪಣಿಗಳ ಮಾಯೆಗಳನ್ನೂ ಕಂಡರು. ತಮ್ಮ ಕರದಿಂದ ಬೆಂಕಿಯನ್ನು ಸೃಜಿಸಿ ಆ ಅಸುರರ ವಸತಿ ಸ್ಥಾನವನ್ನು ಧ್ವಂಸಗೊಳಿಸಿ ಗೋವುಗಳೊಡನೆ ಹಿಂತಿರುಗಿದರು.'

ಅಭಿನಕ್ಷಂತೋ ಅಭಿಯೇ ತಮಾನಶುः
ನಿಧಿಂ ಪಣೀನಾಂ ಪರಮಂ ಗುಹಾಹಿತಂ |
ತೇ ವಿದ್ವಾಂಸಃ ಪ್ರತಿಚಕ್ಷ್ಯಾನೃತಾ ಪುನಃ
ಯತ ಉ ಆಯನ್ ತದುದೀಯುರಾವಿಶಮ್ || (2-24-6)

ಋತಾವಾನಃ ಪ್ರತಿಚಕ್ಷ್ಯಾನೃತಾ ಪುನಃ
ಆತ ಆತಸ್ಥುಃ ಕವಯೋ ಮಹಸ್ಪಥः |
ತೇ ಬಾಹುಭ್ಯಾಂಧಮಿತಮಗ್ನಿಮಶ್ಮನಿ
ನಕಿः ಷೋ ಅಸ್ತ್ಯರಣೋ ಜಹುರ್ಹಿತಮ್ || (2-24-7)

ಪಣಿಗಳನ್ನು ಯುದ್ಧದಲ್ಲಿ ಸೋಲಿಸಿ ಅವರ ಮಹತ್ತರವಾದ ಪಶುಸಮೂಹವನ್ನು ಗೆದ್ದು ಬೃಹಸ್ಪತಿ ಶೋಭಿಸುತ್ತಾನೆ. (6-7-37). ವಲಾಸುರನನ್ನು ಸೋಲಿಸಿ ಅವನ ಪಶುಸಮೃದ್ಧಿಯನ್ನು ಗೆದ್ದು ತಂದವನಿವನು. (5-68-9).

ಬೃಹಸ್ಪತಿ ಇಂದ್ರನೊತನೆ ಬರುವನು. ಸೋಮಪಾನ ಮಾಡುವನು. ಅವನಂತೆಯೇ ಇವನು 'ಮಘವನ್'–ದಾನಶೀಲ. ಇವನೂ ವಜ್ರಿನ್ ಆಗಿದ್ದಾನೆ. ಇವನು ಅಸುರ್ಯ-ದಿವ್ಯರೂಪಿ. ಸರ್ವದೇವತಾತ್ಮಕ. ದೇವತೆಗಳಲ್ಲಿ ಇವನು ದೇವ–'ತದ್ದೇವಾನಾಂ ದೇವತಮಾಯ' (2-24-3). ಇತರರಿಂದ ಅನುಕರಿಸಲಾಗದಂಥ ಮಹತ್ಕರ್ಮ ಇವನದು. ಅದಾದರೂ ಸೂರ್ಯಚಂದ್ರರು ಹಗಲು ರಾತ್ರಿಗಳಲ್ಲಿ ಕ್ರಮವಾಗಿ ಉದಯಿಸುವಂತೆ ಮಾಡುವುದು–'ಯತ್ಸೂರ್ಯಾಮಾಸಾ ಮಿಥ ಉಚ್ಚರಾತಃ' ಇವನು ಸತ್ಯಸಂಕಲ್ಪನು. ನಿಗ್ರಹವೋ, ಅನುಗ್ರಹವೋ–ಎರಡನ್ನೂ ಸಂಕಲ್ಪ ಮಾತ್ರದಿಂದ ನೆರವೇರಿಸಬಲ್ಲ–

'ಬ್ರಹ್ಮಣಸ್ಪತೇರಭವದ್ಯಥಾ ವಶಂ
ಸತ್ಯೋಮನ್ಯುರ್ಮಹಿ ಕರ್ಮಾ ಕರಿಷ್ಯತಃ |' (2-24-24)

ಮಹನೀಯನಾದ ಸೂರ್ಯ ಸರ್ವತಃ ಹೇಗೆ ಕಿರಣಗಳನ್ನು ಪ್ರಸರಿಸುವನೋ ಹಾಗೆ ಬೃಹಸ್ಪತಿ ಸರ್ವತः ಮಂತ್ರಗಳನ್ನು ಸ್ಫುರಣಗೊಳಿಸುವನು–

"ಉಸ್ರಾ ಇವ ಸೂರ್ಯೋ ಜ್ಯೋತಿಷಾಮಹೋ
ವಿಶ್ವೇಷಾಮಿಜ್ಜನಿತಾ ಬ್ರಹ್ಮಣಾಮಸಿ |" (2-23-2)

ಇಂಥ ಸರ್ವಶಕ್ತನೂ ಸೂಕ್ತಪ್ರೇರಕನೂ (ಸೂಕ್ತಸ್ಯಯಂತಾ) ಸತ್ಯಸಂಕಲ್ಪನೂ ಸತ್ಯಪರಾಕ್ರಮವುಳ್ಳವನೂ ಆದ ಬೃಹಸ್ಪತಿ ಅಷ್ಟೇ ಭಕ್ತಾನುಗ್ರಾಹಕನಾಗಿದ್ದಾನೆ. ಇಂಥ ದೇವನ ರಕ್ಷಣೆ ದೊರಕುವಾಗ ಅದನ್ನು ಪಡೆಯಬೇಕಾದುದು ನಮ್ಮ ಧರ್ಮ. ಇವನಿರುವಾಗ ಲೋಕಕ್ಕೆ ಮಂಗಳವೇ ಆಗುವುದರಲ್ಲಿ ಸಂದೇಹಲ್ಲ. ಅದರಿಂದ ನಮ್ಮ ಸ್ತುತಿಯನ್ನು ಪ್ರೌಢವಾಗಿ ಹೇಳುವಂತಾಗಬೇಕು–

'ವಿಶ್ವಂ ತದ್ಭದ್ರಂ ಯದವಂತಿ ದೇವಾः
ಬೃಹದ್ವದೇಮ ವಿದಥೇ ಸುವೀರಾः |' (2-23-19)

"ಸರ್ವಜಗತ್ತಿಗೂ ಈಶ್ವರನಾದ ಈ ದಯಾಮಯ ಎಲ್ಲರನ್ನೂ ಸಲಹಲು ಸನ್ಮಾರ್ಗ ತೋರುತ್ತಿದ್ದಾನೆ. ಇವನನ್ನು ಸೇವಿಸುವ ಭಕ್ತರಿಗೆ ಪಾಪಲೇಪವೂ ಹೊದ್ದದು. ಇವನು ಭಕ್ತರನ್ನು

ಅಪಾರವಾಗಿ ಪ್ರೀತಿಸುತ್ತಾನೆ.' ಶ್ರೀಕೃಷ್ಣ 'ಜ್ಞಾನೀತ್ವಾತ್ಮೈವ ಮೇಮತಂ' ಎಂದಂತೆ ಭಕ್ತರ ವಿರೋಧಿಗಳನ್ನು ನಿರಸನ ಮಾಡಿಬಿಡುವನು. ಈ ಕಾರಣದಿಂದಲೇ."

ಸುನೀತಿಭಿರ್ನಯಸಿ ತ್ರಾಯಸೇ ಜನಂ
ಯಸ್ತುಭ್ಯಂ ದಾಶಾನ್ನತಂ ಅಂಹೋ ಅಶ್ನವತ್ |
ಬ್ರಹ್ಮದ್ವಿಷಸ್ತಪನೋ ಮನ್ಯುಮೀರಸಿ
ಬೃಹಸ್ಪತೇ ಮಹಿತತ್ತೇ ಮಹಿತ್ವನಮ್ || (2-23-4)

ನಿನ್ನ ಮಹತ್ವವನ್ನು ಎಷ್ಟೆಂದು ಕೊಂಡಾಡಲಿ ಎಂದು ಋಷಿ ಇವನ ಸ್ತುತಿಯಲ್ಲಿ ಮೈಮರೆತಿದ್ದಾರೆ.

ಆದರೆ ಇಂಥ ಮಹಾಮಹಿಮನಿದ್ದರೂ ಅವನನ್ನು ನಾವು ಭಜಿಸದಿದ್ದರೆ ನಮ್ಮ ಉದ್ಧಾರವಾಗದು. 'ಅವಜಾನಂತಿ ಮಾಂ ಮೂಢಾಃ' ಎಂದಂತೆ ಅವನನ್ನು ನಾವು ಮರೆಯದೆ ಅವನ ಸ್ತುತಿಯಲ್ಲಿ ಮಗ್ನರಾಗಬೇಕು. ಇದೂ ಅವನ ಕೃಪೆಯಿಂದಲೇ ಆಗಬೇಕು. ಆದ್ದರಿಂದ ಋಷಿ ಹೀಗೆ ಬೇಡುತ್ತಾರೆ–

'ತ್ವಂನೋ ಗೋಪಾಃ ಪಥಿಕೃತ್ ವಿಚಕ್ಷಣಃ
ತವ ವ್ರತಾಯ ಮತಿಭಿಃ ಜರಾಮಹೇ |' (2-23-6)

'ಎಲೌ ದೇವಾ, ನೀನೇ ನಮ್ಮ ರಕ್ಷಕ. ಸನ್ಮಾರ್ಗದರ್ಶಕ. ಸರ್ವಜ್ಞನಾದ ನಿನ್ನನ್ನು ನಾವು ಅನವರತ ಸ್ತುತಿಸುವಂತಾಗಲಿ. ಈ ಅನುಗ್ರಹವನ್ನು ನೀನು ಮಾಡಬೇಕು.' ಭಗವಂತನ ಕರುಣೆಬಾರದೆ ಅವನ ಕಡೆಗೂ ಬುದ್ಧಿ ಹೋಗದು. ಆದ್ದರಿಂದ ಇಂಥ ದೃಢವಾದ ಭಕ್ತಿಯನ್ನೂ ನೀನೇ ಕೊಡಬೇಕೆಂದು ಬೇಡಿದ್ದಾರೆ.

ಭಗವಂತನಲ್ಲಿ ತನ್ನ ಭಕ್ತಿಯ ಅಂಜಲಿಯನ್ನರ್ಪಿಸಿದ ಭಕ್ತ ತನ್ನ ವ್ರತ ಸುಗಮವಾಗ ಬೇಕೆಂದು ಬೇಡುತ್ತಾನೆ. ಈ ಲೋಕದಲ್ಲಿ ಅನೇಕಾನೇಕ ತೊಂದರೆಗಳೂ, ಚೋರರೇ ಮೊದಲಾದವರ ಪೀಡೆಯೂ ಪ್ರತ್ಯಕ್ಷದೃಷ್ಟವಾಗಿವೆ. ಇಂಥ ಸರ್ವ ವಿಧವಾದ ಆಪತ್ತಿನಿಂದಲೂ ಪಾರುಮಾಡಿ ಭಗವತ್ಪರವಾದ ಯಜ್ಞಯಾಗಾದಿಗಳನ್ನು ನಿಷ್ಠೆಯಿಂದ ನಡೆಸುವ ಬುದ್ಧಿಯೋಗ ವನ್ನು ಅನುಗ್ರಹಿಸಬೇಕೆಂದು ಕೆಳಗಿನ ಮಂತ್ರದಲ್ಲಿ ಬೇಡಿದ್ದಾರೆ-

ಉತವಾ ಯೋ ನೋ ಮರ್ಚಯಾದನಾಗಸಃ
ಅರಾತೀವಾ ಮರ್ತಃ ಸಾನುಕೋ ವೃಕಃ |
ಬೃಹಸ್ಪತೇ ಅಪತಂ ವರ್ತಯಾ ಪಥಃ
ಸುಗಂ ನೋ ಅಸ್ಯೈ ದೇವವೀತಯೇ ಕೃಧಿ ||' (2-23-7)

ಹೀಗೆ ಸರ್ವವೂ ಭಗವಂತನಿಂದ ಎಂಬ ಭಾವನೆ ಬಲಿದಾಗ ಸಾಧಕ ಸರ್ವವೂ ಅವನಿಂದಲೇ ಆಗುತ್ತದೆಂಬ ವಿಶ್ವಾಸವನ್ನು ಹೊಂದುತ್ತಾನೆ. ಈ ಸರ್ವಸಾಧಕತ್ವವನ್ನು ಬೃಹಸ್ಪತಿಗೆ ಕೆಳಗಿನ ಮಂತ್ರದಲ್ಲಿ ಹೇಳುತ್ತಾರೆ–

ಮಾನಃ ಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ
ನಿರಾಮಿಣೋ ರಿಪವೋऽನ್ನೇಷು ಜಾಗೃಧುಃ |
ಆ ದೇವಾನಾಮೋಹತೇ ವಿವ್ರಯೋ
ಹೃದಿ ಬೃಹಸ್ಪತೇ ನಪರಃ ಸಾಮ್ನೋವಿದುಃ || (2-23-16)

'ಚೋರರು, ಪ್ರಾಣಘಾತಕರು, ಕೊಲೆಪಾತಕರು, ಪರಸ್ವಾಪಹಾರಮಾಡಲು ಕಾಂಕ್ಷಿಸಿ ದೇವಪೂಜಾದಿಗಳನ್ನು ಅಡ್ಡಿಪಡಿಸಲು ತೊಡಗುವರು. ಅಂಥವರಿಂದ ನಮ್ಮನ್ನು ಸಲಹು.

ನಿನ್ನನ್ನೇ ನಾವು ಸರ್ವಸಾಧಕನೆಂದು ಹೃದಯದಲ್ಲಿ ಭಾವಿಸಿದ್ದೇವೆ.'

ಅದ್ಭುತನೂ ವಿಸ್ತೀರ್ಣೋಪಕಾರನೂ ಆದ ಈ ಸ್ತೋತ್ರಪ್ರಸಾದಕನಾದ ಬ್ರಹ್ಮಣಸ್ಪತಿಯನ್ನು* ಸ್ತುತಿಸುವವನು ಪರಾಭವಕ್ಕೊಳಗಾಗನು. ಆದ್ದರಿಂದ ಈ ದೇವತೆಯನ್ನು ಸ್ತುತಿಸಿ ಬಾಳಿರೆಂದು ಉಪದೇಶ ಮಾಡಿದ್ದಾರೆ–

ಯಜಸ್ವ ವೀರ ಪ್ರವಿಹಿಮನಾಯತೋ
ಭದ್ರಂಮನಃ ಕೃಣುಷ್ವ ವೃತ್ರತೂರ್ಯೇ |
ಹವಿಷ್ಕೃಣುಷ್ವ ಸುಭಗೋ ಯಥಾಸಸಿ
ಬ್ರಹ್ಮಣಸ್ಪತೇರವ ಆ ವೃಣೀಮಹೇ || (2-26-2)

"ಎಲೈ ಸಖನೇ, ಬ್ರಹ್ಮಣಸ್ಪತಿಯನ್ನು ಸ್ತುತಿಗಳಿಂದ ಪೂಜಿಸು. ಅನಂತರ ಹಿಂಸಕರಾದ ಶತ್ರುಗಳ ಮೇಲೆ ಕಾದಲು ಹೋಗು. ಶತ್ರು ಸಂಗ್ರಾಮದಲ್ಲಿ ಭದ್ರವಾದ ಮನೋಯೋಗವನ್ನು ಹೊಂದು (ಬ್ರಹ್ಮಣಸ್ಪತಿಯ ಅನುಗ್ರಹದಿಂದ ನಿನಗೇ ಜಯವಾಗುತ್ತದೆ). ಬ್ರಹ್ಮಣಸ್ಪತಿಗೆ ಹವಿಸ್ಸನ್ನು ಅರ್ಪಿಸು. ನಿನಗೆ ಸಕಲಸೌಭಾಗ್ಯವೂ ಬರುವುದು. ನಾವೆಲ್ಲಾ ಬ್ರಹ್ಮಣಸ್ಪತಿಯಿಂದ ರಕ್ಷಣೆಯನ್ನು ಅಭಿಮುಖ್ಯದಿಂದ ಬೇಡುತ್ತೇವೆ."

---

* ಬೃಹಸ್ಪತಿ ಹೀಗೆ ಬುದ್ಧಿಯನ್ನು ಪ್ರಚೋದಿಸುವ ದೇವ. ದೇವತೆಗಳ ಗುರುವಾದ ಬೃಹಸ್ಪತಿಯು ಬುದ್ಧಿಗೂ ವಾಕ್ಕಿಗೂ ಪ್ರಖ್ಯಾತನಾಗಿದ್ದಾನೆ. ಇವನನ್ನು ವಾಚಸ್ಪತಿಯೆಂದು ಕರೆಯುವುದೂ ಉಂಟು. ಯಜ್ಞದಲ್ಲಿ ಬ್ರಹ್ಮನೆಂಬ ಋತ್ವಿಕ್ಕಿನ ಪ್ರತೀಕ ಬ್ರಹ್ಮಣಸ್ಪತಿ ಎಂದು ಕೆಲವರು ವಿಮರ್ಶಕರ ಭಾವ. ತ್ರಿಮೂರ್ತಿಗಳಲ್ಲಿ ಒಬ್ಬನಾದ ಬ್ರಹ್ಮ ಇಲ್ಲಿ ಬ್ರಹ್ಮಣಸ್ಪತಿಯಾಗಿದ್ದಾನೆಂದೂ ಮತ್ತೆ ಕೆಲವರ ಮತ.

# ಅಂತರಿಕ್ಷಸ್ಥಾನ ದೇವತೆಗಳು

## ಇಂದ್ರ

ಇಂದ್ರ ಋಗ್ವೇದದಲ್ಲಿ ಪ್ರಧಾನನಾದ ದೇವತೆ. ಋಗ್ವೇದದಲ್ಲಿ ಇಂದ್ರನನ್ನು ಸ್ತುತಿಸುವ ಸೂಕ್ತಗಳೇ ಅತ್ಯಧಿಕವಾಗಿವೆ. ಋಗ್ವೇದದ ಸುಮಾರು ನಾಲ್ಕನೆಯ ಒಂದು ಭಾಗ ಎಂದರೆ 250 ಸೂಕ್ತಗಳು ಇಂದ್ರದೇವತಾಕವಾಗಿವೆ. ಅಂತರಿಕ್ಷಸ್ಥಾನ ದೇವತೆಗಳಲ್ಲಿ ಇವನು ಪ್ರಧಾನ. ಇವನು ವೀರತಮ, ಅನುಪಮಶಕ್ತ, ಆರ್ಯರಕ್ಷಕ, ಅಸುರಧ್ವಂಸಕ. ಇವನ ವೀರ್ಯವರ್ಣನೆ ಸಮಗ್ರವಾಗಿ ಮಾಡಲಾಗಿದೆ. ವೃತ್ರಹನ್ ಎಂಬುದು ಇವನ ಮುಖ್ಯವಾದ ವಿಶೇಷಣ. ಪುರುಷಾಕಾರಸಂಪನ್ನನಾದ ಇವನು ಅತಿ ಮನೋಹರವಾದ ರೂಪವನ್ನು ಹೊಂದಿದ್ದಾನೆ. ಹಿರಣ್ಯವರ್ಣನೂ, ಹಿರಣ್ಯಬಾಹುವೂ, ಹಿರಣ್ಯಶ್ಮಶ್ರುವೂ ಆದವನಿವನು. ಇವನು ವಜ್ರಬಾಹು, ಹಿರಣ್ಯಪಾಣಿ. ತನ್ನ ಸಂಕಲ್ಪಕ್ಕನುಗುಣವಾಗಿ ನಾನಾರೂಪಗಳನ್ನು ಧರಿಸುವವನು.

'ಈ ಇಂದ್ರ ಶತ್ರುಭಯಂಕರ. ಅರಿಗಳನ್ನು ಪರಾಭವಗೊಳಿಸುವನಿವನು. ಇಂಥ ಪರಾಕ್ರಮೋಪೇತನಾದ ಇವನು ತನ್ನ ಇಷ್ಟಕ್ಕನುರೂಪವಾಗಿ ನಾನಾವಿಧ ರೂಪಗಳನ್ನು ಹೊಂದುತ್ತಾನೆ.'[50]

ಇವನು ಧರಿಸಿರುವುದು ವಜ್ರಾಯುಧ. ತ್ವಷ್ಟ್ರ ಈ ಆಯುಧವನ್ನು ಮಾಡಿದನು. (1-32-2). ಕಾವ್ಯ ಉಶನಸ್ ಕೂಡ ಇದನ್ನು ಇವನಿಗೆ ಮಾಡಿಕೊಟ್ಟನೆಂದು ಹೇಳಿದೆ (5-34-2). ಈ ವಜ್ರ ಸಮುದ್ರದಲ್ಲಿ ಉದಕದಿಂದಾವೃತವಾಗಿತ್ತು (8-89-9). ಅನೇಕ ಧಾರೆಗಳಿಂದ ಕೂಡಿದುದು ಇದು. 'ಚತುರಶ್ರಿ'– ಚತುರ್ಧಾರೆಗಳುಳ್ಳದು (4-22-2). ಕಬ್ಬಿಣದಿಂದಾದುದೂ ಸಹಸ್ರಧಾರೆಯಿಂದ ಕೂಡಿದುದೂ ಆಗಿದೆ ಆ ವಜ್ರಾಯುಧ–'ಅಭ್ಯೇನಂ ವಜ್ರ ಅಯಸಃ ಸಹಸ್ರಭೃಷ್ಟಿಃ' (1-80-12). ಇಂಥ ನಿಶಿತವಾದ ವಜ್ರವನ್ನು ಇಂದ್ರ ಧರಿಸಿರುವುದರಿಂದಲೇ ಅವನು 'ವಜ್ರಭೃತ್', 'ವಜ್ರಿವತ್', 'ವಜ್ರದಕ್ಷಿಣ', ವಜ್ರಬಾಹು' ಎಂಬ ಅಭಿಧಾನ ಪಡೆದನು. ಶತಧಾರೆಗಳುಳ್ಳ ಸ್ವರ್ಣಮಯವಾದ ಧನುರ್ಬಾಣಗಳನ್ನು ಇವನು ಧರಿಸುವವನು. ಅಂಕುಶವೂ ಸಹ ಇವನ ಆಯುಧಗಳಲ್ಲಿ ಒಂದು.

ಇವನ ರಥ ಸ್ವರ್ಣಮಯವಾಗಿದೆ. ಮನೋವೇಗವನ್ನೂ ಮೀರಿಸಿದೆ ಅದರ ವೇಗ (10-112-2). ಹರಿತಾಶ್ವಗಳು ಇವನ ರಥವನ್ನು ವಹಿಸುವುವು. ಅನೇಕ ಅಶ್ವಗಳು ಇವನ ರಥಕ್ಕೆ ಹೂಡಲ್ಪಟ್ಟಿವೆ. ಶ್ಯೇನವನ್ನು ಹೇಗೆ ಅದರ ಪಕ್ಷಗಳು ಬಹುದೂರ ಒಯ್ಯುವುವೋ ಹಾಗೆ ಇಂದ್ರನನ್ನು ಈ ಅಶ್ವಗಳು ಬಹಳ ದೂರ ಪ್ರದೇಶಗಳಿಗೆ ಬೇಗ ಒಯ್ಯುವುವು.

'ಎಲೈ ಇಂದ್ರನೇ, ಶತ್ರುಗಳ ಮದವನ್ನಿಳಿಸುವ ನಿನ್ನ ಅಶ್ವಗಳು ನಿನ್ನನ್ನು ಬಲು ದೂರ

---

50. "ಉಗ್ರಸ್ತುರಾಷಾಳಭಿಭೂತ್ಯೋಜಾ. ಯಥಾವಂಶಂ ತನ್ವಂ ಚಕ್ರ ಏಷಃ |" (3-48-4) "ರೂಪಂ ರೂಪಂ ಮಘವಾ ಬೋಭವೀತಿ, ಮಾಯಾಃ ಕೃಣ್ವಾನಸ್ತನ್ವಂ ಪರಿಸ್ವಾಮ್ |" (3-53-8) ಇಂದ್ರ ಶಬ್ದದ ನಿರ್ವಚನಕ್ಕೆ ನಿರುಕ್ತದಲ್ಲಿ (10-8) ನೋಡಿ

ಒಯ್ಯುವುವು. ಶತ್ರು ವಿಜಯಾರ್ಥವಾಗಿ ಶ್ಯೇನಪಕ್ಷಿಯನ್ನು ಅದರ ಪಕ್ಷಗಳು ದೂರ ಒಯ್ಯುವಂತೆ.'[51]

ಇಂದ್ರನ ರಥವನ್ನೂ ಕುದುರೆಗಳನ್ನೂ ನಿರ್ಮಿಸಿದವರು ಋಭುಗಳು.[52] ದೇವತೆಗಳೆಲ್ಲರೂ ಸೋಮಪ್ರಿಯರಾದರೂ ಇಂದ್ರ ವಿಶೇಷತಃ ಸೋಮಪ್ರಿಯ. ಸೋಮ ಇವನಿಗೆ ಬಹಳ ಪ್ರಿಯವಾದುದು. 'ಸೋಮಪಾ' 'ಸೋಮಪಾವನ್' ಎಂಬುದು ಇವನಿಗೆ ಅನ್ವರ್ಥವಾಗಿದೆ. ಹುಟ್ಟಿದ ಕೂಡಲೇ ಸೋಮಪಾನ ಮಾಡಿದವನಿವನು.[53] ಒಂದೇ ಬಾರಿ ಮೂವತ್ತು ಉಕ್ಥಪಾತ್ರೆಗಳು ಸೋಮವನ್ನು ಇವನು ಪಾನಮಾಡಿದ.[54] ಸೋಮಪಾನದಿಂದ ಜಾತಮದನಾದ ಇವನು ಅನೇಕ ಮಹತ್ಕಾರ್ಯಗಳನ್ನು ಮಾಡಿದ.

'ಆಕಾಶದಲ್ಲಿ ದ್ಯೋತಮಾನವಾದ ದ್ಯುಲೋಕವನ್ನು ಸ್ಥಾಪಿಸಿದ. ಮಹತ್ತ್ವವಾದ ಅಂತರಿಕ್ಷವನ್ನೂ, ದ್ಯಾವಾಪೃಥಿವೀಗಳನ್ನೂ ಸ್ವತೇಜಸ್ಸಿನಿಂದ ತುಂಬಿದ. ವಿಸ್ತೀರ್ಣವಾದ ಭೂಮಿಯನ್ನು ಪೋಷಿಸಿದ ಮತ್ತು ಪ್ರಥನಗೊಳಿಸಿದ. ಸೋಮದಿಂದುಂಟಾದ ಹರ್ಷದಿಂದ ಇಂದ್ರ ಇವೆಲ್ಲವನ್ನೂ ಮಾಡಿದ.'

'ಅವಂಶೇದ್ಯಾಮಸ್ತಭಾಯದ್ಬೃಹಂತಂ
ಆರೋದಸೀ ಅಪೃಣದಂತರಿಕ್ಷಮ್ ।
ಸ ಧಾರಯನ್ಪೃಥಿವೀಂ ಪಪ್ರಥಚ್ಚ
ಸೋಮಸ್ಯ ತಾ ಮದ ಇಂದ್ರಶ್ಚಕಾರ ॥ (2-15-2)

ಸೋಮಪಾನದಿಂದಾದ ಹರ್ಷದಿಂದ ಇಂದ್ರ ಎಲ್ಲ ಸಾಹಸ ಕಾರ್ಯಗಳನ್ನೂ ಮಾಡಿದ. ವೃತ್ರವಧೆಯೂ, ಶತ್ರುಮರ್ದನವೂ ಸೋಮಪಾನದ ಪರಿಣಾಮವಾಗಿ ಆದವು.

'ಎಲೈ ಹರಿತಾಶ್ವನೇ, ಪ್ರಭೂತಧನನೇ, ಇಂದ್ರನೇ ಯಾವ ಸೋಮವನ್ನು ಪಾನಮಾಡಿ ವೃತ್ರಾದಿಗಳನ್ನು ವಧಿಸುವೆಯೋ ಅಂಥ ಮದಕರವೂ, ಸಮೀಚೀನವೂ, ನಿನಗನುಗುಣವೂ ಆದ ಸೋಮ ಇಲ್ಲಿದೆ. ಆ ಸೋಮ ನಿನಗೆ ಹರ್ಷವುಂಟುಮಾಡಲಿ.'

ಯಸ್ತೇಮದೋ ಯುಜ್ಯಶ್ಚಾರುಸ್ತಿ
ಯೇ ನ ವೃತ್ರಾಣಿ ಹರ್ಯಶ್ವ ಹಂಸಿ ।
ಸ ತ್ವಾಮಿಂದ್ರ ಪ್ರಭೂವಸೋ ಮಮತ್ತು ॥ (7-22-2)

ಸೋಮಪಾನ ಮಾಡಿದ ಮೇಲೆ ತನ್ನ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಇಂದ್ರ ತಾನೇ ಸ್ವತಃ ಹೇಳಿದ್ದಾನೆ ಒಂದು ಸೂಕ್ತದಲ್ಲಿ (10-119).

ಇಂದ್ರನ ಜನನ ವಿಚಾರ ಅನೇಕ ಸಲ ಹೇಳಿದ್ದಾರೆ. ಹುಟ್ಟಿದಾಗಲೇ ಇವನು ಅಂತರಿಕ್ಷವನ್ನು ಬೆಳಗಿದ (3-44-4) ; ಸೂರ್ಯಮಂಡಲ ಚಲಿಸುವಂತೆ ಮಾಡಿದ (1-130-9) ; ಯುದ್ಧಶೀಲನಾದ ; ಅನಭಿಭವನೀಯನಾದ ; 'ಅಶತ್ರುರಿಂದ್ರ ಜನುಷಾ ಸನಾದಸಿ' (1-102-8) :

51. 'ಅತ್ಯಾ ವಯರಚ್ಚ್ಯುತಾ ಹರೀ ಶ್ಯೇನಂ ಪಕ್ಷೇವ ವಕ್ಷತಃ ।' (8-34-9).
52. 'ತಕ್ಷನ್ರಥಂ ಸುವೃತಂವಿದ್ಮನಾ ಪಸಸ್ತಕ್ಷನ್ಹರೀ ಇಂದ್ರವಾಹಾ ವೃಷಣ್ವಸೂ ।
ತಕ್ಷನ್ಪಿತೃಭ್ಯಾಂ ಋಭವೋಯುವದ್ವಯಸ್ತಕ್ಷನ್ವತ್ಸಾಯಮಾತರಂ ಸಚಾಭುವಮ್ ॥
(1-111-1).
53. 'ಜಜ್ಞಾನಃ ಸೋಮಂ ಸಹಸೇ ಪಪಾಥ' (7-98-3).
54. 'ಏಕಯಾಪ್ರತಿಧಾಪಿಬತ್ಸಾಕಂ ಸರಾಂಸಿ ತ್ರಿಂಶತಂ ।
ಇಂದ್ರಃ ಸೋಮಸ್ಯಕಾಣುಕಾ ॥' (8-77-4).

ಇವನು ಜನಿಸಿದಾಗಲೇ ಎಲ್ಲ ದೇವತೆಗಳೂ ಭಯಗೊಂಡರು (5-30-5) ; ದ್ಯಾವಾಪೃಥಿವೀಗಳು ಇವನ ಕೋಪಕ್ಕೆ ನಡುಗಿದರು. ದೃಢವಾದ ಪರ್ವತಗಳೂ, ಭೂಮ್ಯಂತರಿಕ್ಷಗಳೂ ಕ್ಷೋಭೆಗೊಳಗಾದವು (1-61-14). ಕೆಲವು ಕಡೆ ಅದಿತಿ ಇವನ ತಾಯಿಯೆಂದಿದೆ.

"ಎಲೈ ಇಂದ್ರನೇ, ನೀನು ಹುಟ್ಟಿದ ದಿನವೇ ಬೆಟ್ಟದ ಮೇಲೆ ಬೆಳೆದ (ಅಂಶುವಿನ) ಸೋಮಲತೆಯ ಹೊಸ ರಸವನ್ನು ಪಾನಮಾಡಿದೆ. ನಿನ್ನ ತಾಯಿಯಾದ ಅದಿತಿ ಸೂತಿಕಾಗೃಹದಲ್ಲಿಯೇ ಸ್ತನ್ಯಪಾನ ಮಾಡಿಸುವುದಕ್ಕೂ ಮೊದಲು ಅಂಥ ಸೋಮರಸವನ್ನು ನಿನ್ನ ಬಾಯಿಯಲ್ಲಿ ಚೀಪಿಸಿದಳು."

'ಯಜ್ಜಾಯಥಾಸ್ತದಹರಸ್ಯ ಕಾಮೇಂಶೋಃ
ಪೀಯೂಷಮಪಿಬೋ ಗಿರಿಷ್ಠಾಮ್ ।
ತಂ ತೇಮಾತಾ ಪರಿಯೋಷಾ ಜನಿತ್ರೀ
ಮಹಃ ಪಿತುರ್ದಮ ಆಸಿಂಚದಗ್ರೇ ॥' (3-48-2).

ಇವನು ದ್ಯಾವಾಪೃಥಿವೀಗಳ ಪುತ್ರನೆಂದೂ ಹೇಳಿದೆ (6-59-2). ಅಗ್ನಿ, ಪೂಷನ್ ಇವರು ಇಂದ್ರನ ಸೋದರರು. ಇಂದ್ರನ ಪತ್ನಿ ಇಂದ್ರಾಣಿ. ಮರುತ್ತುಗಳು ಇವನ ಆಪ್ತಮಿತ್ರರು. ಇವರು ಇವನ ಸಾಹಸ ಕಾರ್ಯಗಳಲ್ಲಿ ಸಹಾಯ ಮಾಡುತ್ತಾರೆ. ಆದರಿಂದಲೇ ಇವನು 'ಮರುತ್ವತ್' ಎಂದು ಪ್ರಸಿದ್ಧನಾಗಿದ್ದಾನೆ. ಅಗ್ನಿ, ವರುಣ, ವಾಯು, ಸೋಮ, ಬೃಹಸ್ಪತಿ, ಪೂಷನ್, ವಿಷ್ಣು ಮೊದಲಾದವರೊಡನೆ ಇವನು ಸ್ತೋತ್ರಭಾಜನನಾಗಿದ್ದಾನೆ.

ಇಂದ್ರನನ್ನು ಸೂರ್ಯನೆಂದು ಕೆಲವೆಡೆ ಹೇಳಿದೆ. ಇಂದ್ರ ತಾನೇ ಮನು ಮತ್ತು ಸೂರ್ಯನೆಂದು ಹೇಳುತ್ತಾನೆ.

'ನಾನು ಪ್ರಜಾಪತಿ. ನಾನೇ ಸರ್ವಪ್ರೇರಕನಾದ ಸೂರ್ಯ. ನಾನೇ ಮೇಧಾವಿಯಾದ ಕಕ್ಷೀವಾನ್ ಎಂಬ ಋಷಿ. ಅರ್ಜುನಿಯ ಪುತ್ರನಾದ ಕುತ್ಸನೂ ನಾನೇ. ಕ್ರಾಂತದರ್ಶಿಯಾದ ಉಶನಾಃ ಎಂಬ ಋಷಿಯೂ ನಾನೇ. ನಾನು ಸರ್ವಾತ್ಮಕನೆಂದು ತಿಳಿಯಿರಿ.'

ಅಹಂ ಮನುರಭವಂ ಸೂರ್ಯಶ್ಚಾಹಂ
ಕಕ್ಷೀವಾನ್ ಋಷಿರಸ್ಮಿ ವಿಪ್ರಃ ।
ಅಹಂ ಕುತ್ಸಮಾರ್ಜುನೇಯಂ ನ್ಯಂಜೇ
ಹಂ ಕವಿರುಶನಾ ಪಶ್ಯತಾಮಾ ॥ (4-26-1)

ಇವನನ್ನು ಒಮ್ಮೆ ಋಷಿ ಸೂರ್ಯನೆಂದಿದ್ದಾರೆ ॥ (10-89-2).

ಇಂದ್ರನ ಬಲವೀರ್ಯಾದಿಗಳು ಅಮಿತವಾದುವು. ಭೂಮ್ಯಂತರಿಕ್ಷ ಅವಕಾಶಗಳನ್ನು ಇವನು ಮಹತ್ವದಲ್ಲಿ ಅತಿಕ್ರಮಿಸಿದ್ದಾನೆ (3-46-3). ಅಪಾರವಾದ ಲೋಕಗಳೆರಡೂ ಇವನ ಮುಷ್ಟಿಯಲ್ಲಿ ಅಡಗಿದವು. ಇನ್ನೂ ಭೂಮಿ ಹತ್ತುಪಾಲು ಹಿರಿದಾದರೂ ಇಂದ್ರ ಅದಕ್ಕೆ ಸರಿತೂಗುವನು (1-52-1).

"ಎಲೈ ಇಂದ್ರನೇ, ನಿನಗೆ ಸಮನಾಗಬೇಕೆಂದು ಧ್ಯುಲೋಕ ನೂರು ಅಡಿಯಾದರೂ ನಿನಗೆ ಸಮನಾಗದು. ಭೂಮಿ ನೂರರಷ್ಟು ದೊಡ್ಡದಾದರೂ ನಿನಗೆ ಸಮನಾಗದು. ಹೇ ವಜ್ರಿನ್, ಸಹಸ್ರಸೂರ್ಯರೂ ನಿನ್ನನ್ನು ಪ್ರಕಾಶಗೊಳಿಸರು. ಹುಟ್ಟಿದುದೊಂದೂ ನಿನಗೆ ಸಮನಾಗದು. ದ್ಯಾವಾಪೃಥಿವೀಗಳು ಸಮನಾಗರು. ನೀನು ಎಲ್ಲವನ್ನೂ ಹಿರಿಮೆಯಲ್ಲಿ ಮೀರಿದ್ದೀಯೆ."

ಯದ್ಯಾವ ಇಂದ್ರ ತೇ ಶತಂ ಶತಂ ಭೂಮೀರುತಸ್ಯುಃ |
ನ ತ್ವಾ ವಜ್ರಿನ್ಸಹಸ್ರಂ ಸೂರ್ಯಾ ಅನುನ ಜಾತಮಷ್ಟರೋದಸೀ || (8-70-5)

ಇಂದ್ರನಿಗೆ ಸಮರೇ ಇಲ್ಲ. ಇನ್ನು ಅಧಿಕರಾಗಿರುವರ ಮಾತೇಕೆ? 'ನ ತ್ವಾವಾಂ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ' (7-32-23) ಬಲದಲ್ಲಿ ಎಲ್ಲ ದೇವತೆಗಳೂ ಇವನಿಗೆ ಸಮನಾಗಲಾರರು. ಸಮಸ್ತ ಜಗತ್ತಿಗೂ ಇಂದ್ರನೇ ರಾಜ (3-46-2). ಸ್ಥಾವರಜಂಗಮಾತ್ಮಕವಾದ ಸಮಸ್ತಕ್ಕೂ ಇವನೇ ಒಡೆಯನಾಗಿದ್ದಾನೆ-'ಈಶಾನಮಸ್ಯ ಜಗತಃ ಸ್ವರ್ದೃಶಂ ಈಶಾನಮಿಂದ್ರ ತಸ್ಥುಷಃ' (7-32-22). ಇವನು ಬಹಳ ಪರಾಕ್ರಮಿ. ಆದರಿಂದಲೇ 'ಶಕ್ರ'. ಶಕ್ತಿ ಹೊಂದಿರುವುದರಿಂದಲೇ 'ಶಚೀವತ್' ಎಂಬುದೂ ಇವನ ವಿಶೇಷಣ. ಇವನು ಜಯಶಾಲಿ. ಆದುದರಿಂದ 'ತುರ' ಶಬ್ದವಾಚ್ಯ. ಶೂರಾಗ್ರಣಿ ಇವನು. ಆದ್ದರಿಂದಲೇ ಇವನು- 'ಇಂದ್ರೋ ರಾಜಾ ಜಗತಶ್ಚರ್ಷಣೀನಾಂ'.

ಸೋಮಪಾನದಿಂದ ಪ್ರಹರ್ಷಿತನಾಗಿ ವೃತ್ರವಧೆ ಮಾಡಿದವನಿವನು. ವೃತ್ರನನ್ನು ಅಹಿಯೆಂದೂ ಅನೇಕ ಕಡೆ ಹೇಳಿದ್ದಾರೆ. ಇಂದ್ರನಿಗೂ ವೃತ್ರಾಸುರನಿಗೂ ಆದ ಯುದ್ಧ ಭಯಂಕರವಾದುದು. ವಜ್ರದಿಂದ ಇಂದ್ರ ವೃತ್ರನನ್ನು ಹೊಡೆದಾಗ ದ್ಯಾವಾ ಪೃಥಿವೀಗಳು ನಡುಗಿದವು.

"ಎಲೈ ವಜ್ರಿನ್, ಇಂದ್ರನೇ, ಮಹತ್ತರವಾದ ಈ ದ್ಯಾವಾಪೃಥಿವೀಗಳೂ ನೀನು ಕೋಪ ಗೊಂಡಾಗ, ಮರುತ್ತುಗಳೊಡನೆ ಕೂಡಿದ ನೀನು ಬಲವಾಗಿ ವೃತ್ರನನ್ನು ವಧಿಸಿದಾಗ ಭಯ ಗೊಂಡು ನಡುಗುತ್ತವೆ."

"ಇಮೇ ಚಿತ್ತವ ಮನ್ಯವೇ ವೇಪೇತೇ ಭಿಯಸಾ ಮಹೀ |
ಯದಿಂದ್ರ ವಜ್ರಿನ್ನೋಜಸಾ ವೃತ್ರಂ
ಮರುತ್ವಾಂ ಅವಧೀರರ್ಚನ್ನನುಸ್ವರಾಜ್ಯಂ ||" (1-80-11)

ವಜ್ರಾಯುಧವನ್ನು ನಿರ್ಮಿಸಿಕೊಟ್ಟ ತ್ವಷ್ಟೃವೂ ಸಹ ವೃತ್ರನೊಡನೆ ಇಂದ್ರ ಕನಲಿ ಕದನವಾಡಿದಾಗ ನಡುಗಿದನು-'ತ್ವಷ್ಟಾಚಿತ್ತವ ಮನ್ಯವೇ ಇಂದ್ರವೇವಿಜ್ಯತೇ ಭಿಯಾ' (1-80-14). ಮರದ ರೆಂಬೆಗಳನ್ನು ಕತ್ತರಿಸುವಂತೆ ಇಂದ್ರ ವೃತ್ರನನ್ನು ತನ್ನ ವಜ್ರಾಯುಧದಿಂದ ವಧಿಸಿದನು. ಜಲವನ್ನು ಆವರಿಸಿಕೊಂಡಿದ್ದ ವೃತ್ರ. ಆಕಾಶವನ್ನೂ ಜಲವನ್ನೂ ಮರೆಮಾಡಿ ಗೂಢವಾಗಿ ಮರೆಯಾಗಿದ್ದನವನು. ನೀರನ್ನೆಲ್ಲಾ ಆವರಿಸಿಬಿಟ್ಟಿದ್ದ ಇವನನ್ನು ಇಂದ್ರ ವಧಿಸಿದುದರಿಂದ 'ಅಪ್ಸುಜಿತ್' ಎಂದು ಕರೆಯಲ್ಪಟ್ಟನು. ಇಂದ್ರನು ವೃತ್ರನನ್ನು ಇಂದೂ, ಮುಂದೂ ವಧಿಸುವನೆಂದು ಅನೇಕಸಲ ಹೇಳಿರುವುದರಿಂದ ವೃತ್ರವಧೆ ಪ್ರಕೃತಿಯ ವ್ಯಾಪಾರವಿರಬಹುದೆಂದು ಊಹಿಸಿದ್ದಾರೆ. ವೃತ್ರನನ್ನು ವಧಿಸಿ ಅನೇಕ ಉಷಃಕಾಲಗಳಲ್ಲಿಯೂ, ಶರತ್ಕಾಲಗಳಲ್ಲಿಯೂ ನದಿಗಳನ್ನು ಹರಿಸಿದನೆಂದು ಹೇಳಿದ್ದಾರೆ.

ವೃತ್ರನನ್ನು ವಧಿಸಿದ ಇಂದ್ರ ಅಂಧಕಾರದಿಂದ ಮರೆಯಾಗಿದ್ದ ಅನೇಕ ಶರತ್ಕಾಲಗಳನ್ನೂ, ಉಷಃಕಾಲಗಳನ್ನೂ ತೋರಿದ. ವೃತ್ರನಿಂದಾವೃತವಾದ ಉದಕಗಳನ್ನು ಬಿಡಿಸಿದ. ಮೇಘಗಳಲ್ಲಿ ಸುತ್ತಲೂ ಸೆರೆಹಿಡಿಯಲ್ಪಟ್ಟ ಅನೇಕ ನದಿಗಳನ್ನು ಭೂಮಿಯಮೇಲೆ ಹರಿಯುವಂತೆ ಮಾಡಿದ.'

'ಪೂರ್ವೀರುಷಸಃ ಶರದಶ್ಚ ಗೂರ್ತಾ
ವೃತ್ರಂ ಜಘನ್ವಾಂ ಅಸೃಜದ್ವಿ ಸಿಂಧೂನ್ |
ಪರಿಷ್ಠಿತಾ ಅತೃಣದ್ಬದ್ಬಧಾನಾಃ
ಸೀರಾ ಇಂದ್ರಃ ಸ್ರವಿತವೇ ಪೃಥಿವ್ಯಾ ||' (4-19-8)

ಹೀಗೆ ದಾನವನನ್ನು ಕೊಂದು ಪರ್ವತವನ್ನು ಪುಡಿಮಾಡಿ, ತಡೆಯಲ್ಪಟ್ಟ ಜಲವನ್ನು ಪ್ರವಹಿಸುವಂತೆ ಮಾಡಿದ. ವೃತ್ರನೊಡನೆ ಆದ ಇಂದ್ರನ ಈ ಯುದ್ಧವನ್ನು ಅನೇಕ ಮಂತ್ರಗಳಲ್ಲಿ ವಿಸ್ತಾರವಾಗಿ ಹೇಳಿದ್ದಾರೆ.

ವೃತ್ರನನ್ನು ವಧಿಸಿದನಂತರ ಸೂರ್ಯನನ್ನು ದ್ಯುಲೋಕದಲ್ಲಿ ನಿಲ್ಲಿಸಿದನೆಂದೂ, ಹಸುಗಳನ್ನು ತೋರಿಕೊಟ್ಟನೆಂದೂ ಹೇಳಿದ್ದಾರೆ.

ವೃತ್ರವಧವೆಂದರೆ ವರ್ಷಕರ್ಮವೆಂದು ನೈರುಕ್ತರ ಮತ. ಗೋವುಗಳೆಂದರೆ ಕಿರಣಗಳಿಗೂ ಅನ್ವಯಿಸುವುದರಿಂದ ವೃತ್ರವಧವೆಂದರೆ ಸೂರ್ಯೋದಯವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ರಾತ್ರಿಯ ಕತ್ತಲೆಯನ್ನು ಕೊಟ್ಟಿಗೆಯಿಂದ ಬರುವ ಮಂದೆಗೆ ಹೋಲಿಸಿರುವುದು ಇದನ್ನು ಸಮರ್ಥಿಸುತ್ತದೆಯೆಂದು ಇವರ ಭಾವ. ಉತ್ತರ ಧ್ರುವದಲ್ಲಿ ದೀರ್ಘರಾತ್ರಿಯಾದ ಮೇಲೆ ಬರುವ ಸೂರ್ಯೋದಯ, ಜಲಸಂಚಾರ, ಕತ್ತಲೆ ಬೆಳಕುಗಳ ಹೋರಾಟವನ್ನು ವೃತ್ರವಧ ಹೇಳುವುದೆಂದು ಬಿ. ಜಿ. ತಿಲಕರ ಮತ.

ವೃತ್ರನನ್ನು ಮಾತ್ರವಲ್ಲದೆ ಇನ್ನೂ ಅನೇಕ ಅಸುರರನ್ನು ಇವನು ಧ್ವಂಸ ಮಾಡಿದ. ತೊಂಭತ್ತೊಂಬತ್ತು ಬಾಹುಗಳುಳ್ಳ ಉರಣನನ್ನೂ, ಆರು ಕಣ್ಣುಗಳನ್ನೂ ಮೂರು ತಲೆಗಳನ್ನೂ ಹೊಂದಿದ್ದ ತ್ವಷ್ಟ್ರರೂಪನಾದ ವಿಶ್ವರೂಪನನ್ನೂ, ಸ್ವಶ್ನ, ಶುಷ್ಣ, ವ್ಯಂಸ, ಪಿಪ್ರು, ನಮುಚಿ, ರುಧ್ರಿಕ, ಚುಮುರಿ, ಧುನಿ, ಶಂಬರ, ಅಶ್ನ, ನಾರ್ಮರ, ದಭೀಕ ಮೊದಲಾದ ಅಸುರರನ್ನೂ ಧ್ವಂಸ ಮಾಡಿದ. (2-14-5) (2-15-9), (2-19-6), (2-20-5), (2-20-8). ಅಸುರರನ್ನು ಕೊಂದು ಅವರ ಕಬ್ಬಿಣದ ಪುರಗಳನ್ನು ನಾಶಮಾಡಿದನು. ಆದುದರಿಂದಲೇ ಇಂದ್ರನಿಗಿಂತ ವೀರರೂ ದೊಡ್ಡವರೂ ಇಲ್ಲ–'ಯಸ್ಮಾದಿಂದ್ರಾದ್ಬೃಹತಃ ಕಿಂಚನೇಮೃತೇ ವಿಶ್ವಾನ್ಯಸ್ಮಿನ್ ಸಂಭೃತಾಧಿ ವೀರ್ಯಾ' (2-16-2).

ಯೋಧರು ಇಂದ್ರನನ್ನು ಭಜಿಸಿ ರಣರಂಗಕ್ಕೆ ಹೋಗುವರು. 'ಇಂದ್ರಂ ನರೋನೇಮಧಿತಾ ಹವಂತೇ'. ಇವನು ಯೋಧರ ದೈವ. ಆದ್ದರಿಂದಲೇ ಶತ್ರುಗಳ ಮೇಲೆ ಯುದ್ಧಕ್ಕೆ ಹೋಗುವಾಗ ಇವನ ರಕ್ಷಣೆ ಬೇಡಿದ್ದಾರೆ. ಬಾಧಕರಾದ ಅಸುರರನ್ನು ಕೊಂದು ಉತ್ತಮರಾದ ಆರ್ಯರನ್ನು ಇವನು ರಕ್ಷಿಸುವನು–'ಹತ್ವೀದಸ್ಯೂನ್ ಪ್ರಾರ್ಯಂ ವರ್ಣಮಾವತ್' (3-34-9). "ಪಿಪ್ರು, ಮೃಗಯ ಮೊದಲಾದವರನ್ನು ನೀನು ಕೊಂದೆ, ವಿದಥಿಪುತ್ರನಾದ ಋಜಿಶ್ವನಿಗೆ ವಶನಾದೆ. 15,000 ಕೃಷ್ಣವರ್ಣದ ರಕ್ಕಸರನ್ನು ನೀನು ಸೀಳಿ ಹಾಕಿದೆ."

"ತ್ವಂ ಪಿಪ್ರುಂ ಮೃಗಯಂ ಶೂಶುವಾಂಸಂ
ಋಜಿಶ್ವನೇ ವೈದಥಿನಾಯ ರಂಧೀಃ |
ಪಂಚಾಶತ್ಕೃಷ್ಣಾ ನಿವಪಃ ಸಹಸ್ರಾ
ಅತ್ಕಂ ನ ಪುರೋ ಜರಿಮಾ ವಿದರ್ದಃ" (6-16-13)

ಓಜಿಷ್ಠನೂ, ಬಲಿಷ್ಠನೂ, ಸಜ್ಜನರಲ್ಲಿ ಜ್ಯೇಷ್ಠತಮನೂ ಆದ ಈ ಇಂದ್ರ ಅಪಾರ ಕರುಣಾಮಯನೂ ಹೌದು–' ನ ತ್ವದನ್ಯೋಮಘವನ್ನಸ್ತಿಮರ್ಡಿತಾ' (1-84-19) ಭಕ್ತರಲ್ಲಿ ಇವನು ಅತ್ಯಂತ ಅನುಗ್ರಹವನ್ನು ತೋರಿಸುವನು. ಇವನು ಭಕ್ತರ ಸಖಾ. ಭಕ್ತ ಇವನನ್ನು 'ಭ್ರಾತಃ' ಎಂದು ಕರೆಯುವ ಸಲಿಗೆ ಹೊಂದಿದ್ದಾನೆ. 'ಯಾಹೀಂದ್ರ ಭ್ರಾತಃ' (3-53-5). ಸರ್ವವಿಧವಾದ ಬಂಧು ಇವನು. ತಾಯಿಯೂ ಇವನೇ, ತಂದೆಯೂ ಇವನೇ.

'ತ್ವಂ ಹಿ ನಃ ಪಿತಾ ವಸೋ ತ್ವಂ ಮಾತಾ ಶತಕ್ರತೋ ಬಭೂವಿಥ (8-98-2)

ಕುಶಿಕವಂಶದವರ ಮೇಲೆ ಇವನ ಕೃಪಾವರ್ಷ ಹೆಚ್ಚಾಗಿ ಆದಕಾರಣ ಇವನನ್ನು 'ಕೌಶಿಕ' ಎಂದು ಕರೆದಿದ್ದಾರೆ. (1-10-11). ಇಂದ್ರನು ಭಕ್ತರಲ್ಲಿ ಅನುಗ್ರಹ ತೋರುವಂತೆ ಇವನನ್ನು ಸೇವಿಸದೆ ಇರುವವರಿಂದ ದೂರನಾಗುವನು. ಸಕಲ ಸಮೃದ್ಧಿಯೂ ಇವನಿಂದ ಆಗುವುದು. ಇಂದ್ರಭಕ್ತನಿಗೆ ಯಾರಿಂದಲೂ ಅಭಿಭವವುಂಟಾಗದು ; ಅಪಜಯವಾಗಲೀ, ಮೃತ್ಯುವಾಗಲೀ ಅವನ ಹತ್ತಿರ ಸುಳಿಯದು. 'ಕಸ್ತಂ ಇಂದ್ರ ತ್ವಾವಸುಮಾ ಮರ್ತ್ಯೋ೯ದಧರ್ಷತಿ?" (5-152-1). ಎರಡು ಕೈಗಳಲ್ಲೂ ಐಶ್ವರ್ಯ ಮೊದಲಾದುವನ್ನು ಹಿಡಿದುಕೊಂಡು ಇವನು ಕೊಡುಗೈಯಿಂದ ಭಕ್ತರನ್ನು ಅನುಗ್ರಹಿಸುವನು–'ಉಭಾ ತೇ ಪೂರ್ಣಾ ವಸುನಾ ಗಭಸ್ತೀ' (7-37-3).

'ಎಲೈ ಇಂದ್ರನೇ ಶತ್ರುಬಾಧಕವಾದ ಧನವನ್ನು ನಮಗೆ ಕೊಡು–ವ್ಯವಹಾರ ತಿಳಿದ ಮಗನಿಗೆ ತಂದೆ ಪಾಲು ಕೊಡುವಂತೆ. ಅಂಕುಶವನ್ನು ಹಿಡಿದವನು ಪಕ್ವವಾದ ಫಲಗಳನ್ನು ಕೆಡಹುವಂತೆ ನಮ್ಮ ಇಚ್ಛೆಯನ್ನು ಪೂರ್ತಿಗೊಳಿಸುವ ಧನವನ್ನು ವರ್ಷಿಸು.'

'ಆ ನಸ್ತುಜಂ ರಯಿಂ ಭರಾಂಶಂ ನ ಪ್ರತಿಜಾನತೇ |
ವೃಕ್ಷಂ ಪಕ್ವಂ ಫಲಮಂಕೀವ ಧೂನುಹೀಂದ್ರ ಸಂಪಾರಣಂ ವಸು || (3-45-4)

ಇಂದ್ರನೀಗ ಸಕಲ ಸಂಪತ್ತುಗಳಿಗೂ ಆಕರ. ಇಂದ್ರನು ಕರುಣಿಸುವ ಸಿರಿಯ ವಿಚಾರವನ್ನು (5-47) ಒಂದು ಸೂಕ್ತ ಪೂರ್ಣವಾಗಿ ಹೇಳುತ್ತದೆ. ಉದಾರಿಯಾದ ಅವನೀಗ 'ಮಘವನ್', 'ಮರುಪತಿ'.

ಹಸು ಕರುವಿನ ಹಸಿವನ್ನಿಂಗಿಸುವಂತೆ ನಮ್ಮನ್ನು ರಕ್ಷಿಸೆಂದು ಋಷಿ ಬೇಡುತ್ತಾರೆ–

'ವರ್ತ್ಯತ್ನನೋ ದೇನುರ್ನವತ್ಸಂ ಯವಸಸ್ಯ ಪಿಪ್ಯುಷೀ'

ಆಪತ್ತಿನಿಂದ ನಮ್ಮನ್ನು ರಕ್ಷಿಸಲು ಸಮರ್ಥನೆಂದರೆ ಇಂದ್ರನೊಬ್ಬನೇ (2-1-76). 'ಪ್ರತೇ ನಾವಂ ನ ಸಮನೇ ವಚಸ್ಯುವಂ' ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಿಸುವ ನಾವೆಯಂತೆ ಇವನು ನಮ್ಮನ್ನು ಈ ಕಷ್ಟ ಸಮುದ್ರದಿಂದ ದಾಟಿಸುವನು. ಹೀಗೆ ರಕ್ಷಕನಾದ ಇಂದ್ರ ನಮ್ಮ ತಂದೆಯಂತೆ. 'ಮಕ್ಕಳು ತಂದೆಯನ್ನು ಹೇಗೋ ಹಾಗೆ ನಾವು ನಿಮ್ಮನ್ನು ಸ್ತುತಿಸುವೆವು.'

'ಯದೀಂ ಸ ಬಾಧಃ ಪಿತರಂ ನ ಪುತ್ರಾಃ
ಸಮಾನದಕ್ಷಾಃ ಅವಸೇ ಹವಂತೇ |' (7-27-2).

ಇಂಥ ಮಹನೀಯನನ್ನು ಯಥಾವತ್ತಾಗಿ ಸ್ತುತಿಸುವುದೂ ಅಸಾಧ್ಯವೇ. ಅಂಥ ಶಕ್ತಿ ನಮಗೆಲ್ಲಿದೆ?

'ಇಂದ್ರನೇ ನಮ್ಮ ಸೂಕ್ತಗಳು ಹೇಗೆ ತಾನೇ ಪೂರ್ಣವಾಗಿ ನಿನ್ನನ್ನು ಅಲಂಕರಿಸಿಯಾವು? ಎಲೈ ಮಘವನ್, ಯಾವಾಗ ನಿನ್ನ ಪ್ರೀತಿಯನ್ನು ನಾವು ಪಡೆದೇವು? ನಿನ್ನನ್ನು ಬಯಸಿಯೇ ಎಲ್ಲಾ ಸ್ತುತಿಗಳನ್ನೂ ಮಾಡಿದ್ದೇನೆ. ಆದ್ದರಿಂದ, ಇಂದ್ರನೇ, ಈ ನನ್ನ ಸ್ತುತಿಗಳನ್ನು ಕೇಳುವ ಕೃಪೆ ಮಾಡಬೇಕು.'

'ಕಾ ತೇ ಅಸ್ತ್ಯರಂಕೃತಿಃ ಸೂಕ್ತೈಃ
ಕದಾ ನೂನಂ ತೇ ಮಘವನ್ ದಾಶೇಮ |
ವಿಶ್ವಾ ಮತೀರಾ ತತನೇ ತ್ವಾಯಾಧಾ-
ಮ ಇಂದ್ರಶೃಣವೋ ಹವೇಮಾ ||' (7-29-3)

ನಾವು ರಚಿಸಿ ಅರ್ಪಿಸಿದ ಈ ಸೂಕ್ತವನ್ನು ತಂದೆಯ ವಾತ್ಸಲ್ಯವನ್ನುಳ್ಳ ನೀನು ಒಪ್ಪಿಕೊಳ್ಳ ಬೇಕೆಂದು ಬೇಡಿಕೊಂಡಿದ್ದಾರೆ.

ಇಂದ್ರನನ್ನು ಬಿಟ್ಟು ಬೇರೆ ಪ್ರಾಪ್ಯರಿಲ್ಲವೆಂದು ಋಷಿ ಇಂದ್ರನನ್ನು ಸ್ತುತಿಸಿದ್ದಾರೆ–"ಎಲೈ ಇಂದ್ರನೇ, ನಿನ್ನನ್ನು ಬಿಟ್ಟು ಬೇರೆ ಪ್ರಾಪ್ಯರು ನಮಗಿಲ್ಲ. ಪ್ರಶಸ್ಯನಾದ ನಿನ್ನನ್ನುಳಿದು ನಮ್ಮನ್ನು ರಕ್ಷಿಸುವವರಿನ್ನಿಲ್ಲ"–

ಯೇ ಚಪೂರ್ವಋಷಯೋ ಯೇಚನೂತ್ನಾ
 ಇಂದ್ರಬ್ರಹ್ಮಾಣಿ ಜನಯಂತ ವಿಪ್ರಾಃ |
ಅಸ್ಮೇ ತೋ ಸಂತು ಸಖ್ಯಾ ಶಿವಾನಿ
 ಯೂಯಂಪಾತಸ್ವಸ್ತಿಭಿಃ ಸದಾನಃ || (7-22-9)
'ನಹಿತ್ವದನ್ಯನ್ಮಘವನ್ನು ಆಪ್ಯಂ
 ವಸ್ಯೋ ಅಸ್ತಿ ಪಿತಾಚನ |' (7-32-19)

ಸರ್ವರ ಬಂಧುವಾದ ಈ ದೇವಸದೃಶವಾದ ಭಕ್ತಿಗೆ ಒಲಿಯುವನು (7-70-3). ಸದ್ಭಕ್ತರ ಹೃದಯದಲ್ಲಿ ಇವನು ನೆಲೆಸುವನು (7-21-14). ಋಷಿ ಇಂದ್ರನನ್ನು ಸ್ತುತಿಸುವಾಗ–'ನೀನು ನಮ್ಮನ್ನು ಸಲಹಬೇಕಾದುದು ನಿನ್ನ ಕರ್ತವ್ಯ'ವೆಂಬುದನ್ನು ಅನ್ಯಾಪದೇಶವಾಗಿ ಆಡಿ ತೋರಿಸಿದ್ದಾರೆ.

'ನಿನ್ನಷ್ಟು ಐಶ್ವರ್ಯ ನನಗಿದ್ದರೆ ನನ್ನ ಭಕ್ತನನ್ನು ಪಾಪಕ್ಕೆ ಬಿಡುತ್ತಿರಲಿಲ್ಲ. ಸಲಹುತ್ತಲೇ ಇದ್ದೆ.'

'ಯದಿಂದ್ರ ಯಾವತ ಸ್ತ್ವಮೇತಾವದಹ ಮೀಶೀಯ |
ಸ್ತೋತಾರ ಮಿದ್ದಿಧಿಷೇಯ ರದಾವಸೋ ನ ಪಾಪತ್ವಾಯ ರಾಸೀಯ ||'

(6-32-18)

ಇವನು ಭಕ್ತರಲ್ಲಿ ಅಪಾರವಾದ ಅನುಗ್ರಹ ತೋರುವನೆಂಬುದಕ್ಕೆ ಅನೇಕ ನಿದರ್ಶನಗಳಿವೆ. ತುರ್ವಶ, ಯದು ಮೊದಲಾದವರು ಸುರಕ್ಷಿತವಾಗಿ ನದಿಯನ್ನು ದಾಟುವಂತೆ ಇಂದ್ರ ಸಹಾಯ ಮಾಡಿದನು. ಇಪ್ಪತ್ತು ಮಂದಿ ನಾಯಕರನ್ನೂ ಅವರ 60099 ಯೋಧರನ್ನೂ ಇಂದ್ರ ಸುಶ್ರವನ ಜೊತೆಗೆ ಧ್ವಂಸಮಾಡಿದ. ದಾಶರಾಜ್ಞ ಯುದ್ಧದಲ್ಲಿ ರಾಜ ಸುದಾಸನು ವಿಜಯವನ್ನು ಹೊಂದುವಂತೆ ಸಹಾಯ ಮಾಡಿದವನಿವನೇ (7-33-3). ತೃತ್ಸುಗಳ ಸ್ತುತಿಯಿಂದ ಪ್ರೀತನಾಗಿ ಇವನು ಸುದಾಸನ ಶತ್ರುಗಳನ್ನು ಪರುಶ್ನಿ ನದಿಯಲ್ಲಿ ಮುಳುಗಿಸಿದ (8-18-9,13). ಸ್ನಾನಕ್ಕಾಗಿ ನದಿಗೆ ಬಂದ ಅಪಾಲಾ ಎಂಬ ಕನ್ಯೆ ಸೋಮಲತೆಯನ್ನೊಂದನ್ನು ಕಂಡು ಅದನ್ನು ಹಲ್ಲಿನಿಂದ ಸಿಗಿದು, ಆ ಸೋಮರಸವನ್ನು ಇಂದ್ರನಿಗೆ ಅರ್ಪಣೆ ಮಾಡಿದಳು ಮತ್ತು ಅವನಿಂದ ಅನೇಕ ವರಗಳನ್ನು ಪಡೆದಳು (8-80).

ಹೀಗೆ ಇಂದ್ರನು ಪೃಥಿವೀ, ಪರ್ವತಗಳು ಮೊದಲಾದುವನ್ನು ದೃಢಪಡಿಸುವ, ಅಂತರಿಕ್ಷವನ್ನು ನಿರ್ಮಿಸುವ, ದ್ಯುಲೋಕವನ್ನು ನಿಲ್ಲಿಸುವ–ಅದ್ಭುತವಾದ ಸಾಮರ್ಥ್ಯವನ್ನು ಹೊಂದಿರುವಂತೆ ಭಕ್ತರಲ್ಲಿ ಅಪಾರವಾದ ವಾತ್ಸಲ್ಯವನ್ನೂ ಹೊಂದಿದ್ದಾನೆ. ಅದರಿಂದಲೇ ಇಂದ್ರನಿಗಿಂತ ದೊಡ್ಡವರಿಲ್ಲವೆಂದು ಋಷಿ ಉದ್ಗಾರ ಹೊರಡಿಸಿದ್ದಾರೆ–

'ಯಸ್ಮಾದಿಂದ್ರಾದ್ಬೃಹತಃ ಕಿಂಚನೇಮೃತೇ
ವಿಶ್ವಾನ್ಯಸ್ಮಿನ್ ಸಂಭೃತಾಧಿ ವೀರ್ಯಾ |' (2-16-2)

ಪ್ರಾಙ್ಮುಖವಾಗಿದ್ದ ಸಿಂಧೂವನ್ನು ಇವನು ಉದಙ್ಮುಖವಾಗಿ ಮಾಡಿದ. ಉಷೆಯ ಶಕಟವನ್ನಿವನು ಚೂರ್ಣಮಾಡಿದನು–

'ಸೋದಂಚಂ ಸಿಂಧುಂ ಅರಿಣಾನ್ಮಹಿತ್ವಾ
ವಜ್ರೇಣಾನ ಉಷಸಃ ಸಂಪಿಪೇಷ' (2-15-6)

ಸೂರ್ಯನ ಉದಯವನ್ನು ತಡಮಾಡಿಸಿದ ಉಷೆಯನ್ನು ಓಡಿಸಿ ಇಂದ್ರ ಸೂರ್ಯನನ್ನು ಬೇಗ ಬರಮಾಡಿದನೆಂದು ಇದರಿಂದ ಗೊತ್ತಾಗುತ್ತದೆ. ಸೋಮ ಸಂಪಾದನ ಮಾಡಿದವನೂ ಇಂದ್ರನೇ ಎಂದು ಹೇಳಿದೆ. ಸುಪರ್ಣನು ಅಮೃತವನ್ನು ತಂದುಕೊಟ್ಟುದೂ ಇವನಿಗೇ. ಪಣಿಗಳು ಹಸುಗಳನ್ನು ಅಪಹರಿಸಿದಾಗ ಸುರಮೆಯೆಂಬ ದೇವಶುನಿಯ ಸಹಾಯದಿಂದ ಅವುಗಳನ್ನು ಗೆದ್ದು ತಂದವನೂ ಇಂದ್ರನೇ. ಹೀಗೆ ದೇವತೆಗಳೆಲ್ಲೆಲ್ಲಾ ಓಜಿಷ್ಠನೂ ಬಲಿಷ್ಠನೂ ಆದವನು ಇಂದ್ರ.

ಆದುದರಿಂದ "ಎಲೈ ಇಂದ್ರನೇ, ಪ್ರಾಕ್ತನರಾದ ಋಷಿಗಳೂ ನೂತನರಾದ ಋಷಿಗಳೂ ನಿನ್ನನ್ನು ಸ್ತುತಿಗಳಿಂದ ಅರ್ಚಿಸಿದರು. ಅವರಲ್ಲಿ ಹೇಗೋ ಹಾಗೆ ನಮ್ಮಲ್ಲಿಯೂ ನಿನ್ನ ಸಖ್ಯ ಮಂಗಳಕರವಾಗಿ ಬೆಳೆಯಲಿ. ಎಲ್ಲ ಮಂಗಳಗಳಿಂದ ನಮ್ಮನ್ನು ಅನವರತ ರಕ್ಷಿಸಬೇಕು" ಎಂದು ಬೇಡಿದ್ದಾರೆ ಋಷಿಗಳು ಇವನನ್ನು.

**ವಾಯು–ವಾತ**

ಋಗ್ವೇದದಲ್ಲಿ ವಾಯುದೇವತಾಕವಾದ ಸೂಕ್ತಗಳು ಎರಡು ಮೂರು ಇವೆ. ಅಲ್ಲದೆ ಇತರ ದೇವತೆಗಳೊಡನೆ ಐದಾರು ಸೂಕ್ತಗಳಲ್ಲಿ ವಾಯುದೇವತೆಯನ್ನು ಸ್ತುತಿಸಲಾಗಿದೆ. ಕೆಲವು ಕಡೆ ವಾಯು, ವಾತ ಎಂದು ಈ ದೇವತೆಯ ಹೆಸರನ್ನು ಪ್ರತ್ಯೇಕವಾಗಿ ಹೇಳಲಾಗಿದೆ.[55] ಇವೆರಡು ಹೆಸರುಗಳೂ ಒಂದೇ ದೇವತೆಗೆ ಅನ್ವಯಿಸುವುವೆಂದು ಕಾಣುತ್ತದೆ. ಸಾಯಣಾಚಾರ್ಯರು ಭಾಷ್ಯದಲ್ಲಿ 'ವಾತಸ್ಯಮಹಿಮಾನಾಂ' ಎಂದರೆ 'ವಾಯುವಿನ ಮಹಿಮೆಯನ್ನು' ಎಂದೇ ಅರ್ಥಮಾಡುತ್ತಾರೆ.

ವಾಯುದೇವತೆ ಋಗ್ವೇದದೇವತಾತ್ರಿತಯದಲ್ಲಿ ಒಬ್ಬನಾಗಿದ್ದಾನೆ. ಯಾಸ್ಕರು (ನಿ. 7-5) ನಿರುಕ್ತದಲ್ಲಿ ದೇವತಾ ವಿಭಾಗ ಮಾಡುವಾಗ ಅಂತರಿಕ್ಷಸ್ಥಾನಕ್ಕೆ 'ವಾಯುರ್ವಾ ಇಂದ್ರೋವಾ ಅಂತರಿಕ್ಷಸ್ಥಾನಃ' ಎಂದು ಹೇಳುತ್ತಾರೆ. ಅನಿತ್ಯದರ್ಶನನು ವಿದ್ಯುದಾತ್ಮನಾದ ಇಂದ್ರ. ಆದರೆ ವಾಯು ನಿತ್ಯದರ್ಶನ. ಅಂತರಿಕ್ಷಸ್ಥಾನದ ಪ್ರಧಾನ ದೇವತೆಯಾಗಿ ವಾಯು ದೇವತಾವ್ಯೂಹದಲ್ಲಿ ಮುಖ್ಯನಾಗಿದ್ದಾನೆ. ಎಲ್ಲ ಜೀವಿಗಳೂ ಜೀವಿಸಿ ಬಾಳಬೇಕಾದರೆ ವಾಯುದೇವನ ಕೃಪೆಯಿಲ್ಲದೆ ಸಾಧ್ಯವಿಲ್ಲ. ದೇಹದಲ್ಲಿ ಪಂಚಧಾ ವಿಭಕ್ತನಾಗಿ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ರೂಪನಾಗಿ ಎಲ್ಲ ಜೀವಿಗಳ ಜೀವನಯಾತ್ರೆಯನ್ನು ನಡೆಸಿಕೊಡುವವನು ಇವನೇ. ಜೀವಿಗಳು ಆತ್ಮೋದ್ಧಾರ ಮಾಡಿಕೊಳ್ಳಲು ಸಾಧ್ಯವಾಗುವ

---

55. (6-50-12), (10-92-13).

ಮಧ್ಯಮಸ್ಥಾನ ದೇವತೆಗಳಲ್ಲಿ ವರ್ಷಕರ್ಮದಲ್ಲಿ ಪ್ರಥಮಾಧಿಕಾರವುಳ್ಳ ವಾಯುವಿಗೆ ಮೊದಲು ಸ್ಥಾನವೆಂದು ಯಾಸ್ಕರು 'ತಾಸಾಂ ವಾಯುಃ ಪ್ರಥಮಗಾಮೀ ಭವತಿ' (ನಿ. 10-1) ಎಂದು ಹೇಳುತ್ತಾರೆ– 'ವಾಯುರ್ವಾತೇರ್ವೇತೇರ್ವಾ ಸ್ಯಾದ್ಗತಿಕರ್ಮಣಃ, ಏತೇರಿತಿ ಸ್ಥಾಲಾಷ್ಠೀವಿಃ, ಅನರ್ಥಕೋವಕಾರಃ' (ನಿ. 10-2). ವಾತಶಬ್ದ ನಿರ್ವಚನ ಹೇಳುತ್ತಾ ಯಾಸ್ಕರು 'ವಾತೋವಾತೀತಿಸತಃ' (ನಿ. 10-34-4) ಎಂದು ಹೇಳಿ 'ವಾಗತಿ ಗಂಧನಯೋಃ' ಎಂಬ ಧಾತುವಿನಿಂದ ಬಂದಿದೆಯೆಂದು ಹೇಳಿದ್ದಾರೆ.

ಈ ದೇಹಯಾತ್ರೆಯನ್ನು ಸುಗಮವಾಗಿ ನಡೆಸುವವನಿವನು. ಭಗವಂತನ ಸುರಿದರವಾದ ನಿರ್ಮಾಣವಾದ ಈ ಭೂಮಂಡಲದಲ್ಲಿರುವ ಸಾರತಮವಾದ ಸೃಷ್ಟಿಯನ್ನನುಭವಿಸಿ ವಿವೇಕವನ್ನು ಸಂಪಾದಿಸಿ ಯಜ್ಞಯಾಗಾದಿಗಳ ಮೂಲಕ ಆ ಪರಮದೇವನ ಆರಾಧನೆಯನ್ನು ಮಾಡಿ ಸಿದ್ಧಿಯನ್ನು ಹೊಂದಲು ಸಾಧ್ಯವಾಗುವುದು ಈ ಮಹಾತ್ಮನ ಕೃಪೆಯಿಂದ. ಆದರಿಂದಲೇ ವಾಯುದೇವನು ಸರ್ವತ್ರ ಇರುವುದನ್ನು ಮನಗಂಡ ಋಷಿ ಈ ದೇವನ ಸ್ತುತಿಯಲ್ಲಿ ಪರವಶನಾಗಿದ್ದಾನೆ. ನಮ್ಮನ್ನು ಧರಿಸಿ ಶರೀರಧಾರಣೆಗೆ ಸಹಾಯವೆಸಗಿ ಆತ್ಮಯಾತ್ರೆ ಸಾಧ್ಯವಾಗುವಂತೆ ಪೃಥ್ವೀದೇವಿ ಮಾಡುವಂತೆ ವಾಯುವೂ ಸಹ ನಾವು ಜೀವಿಸಿ ಜೀವನದ ಪರಮ ಫಲವನ್ನು ಪಡೆಯುವಂತೆ ಸಹಾಯ ಮಾಡುತ್ತಾನೆ. ವಾಯುವಿನ ಸತತವಾದ ಗತಿ ನಮಗೆ ಹೀಗೆ ಪರಮೋಪಕಾರಕ.

"ದ್ಯಾವಾಪೃಥಿವೀಗಳೆಂಬ ಎರಡು ಲೋಕಗಳೂ ವಾಯುವನ್ನು ಲೋಕದ ಸಂಪತ್ಪ್ರಾಪ್ತಿಗಾಗಿ ಉತ್ಪತ್ತಿ ಮಾಡಿದರು. ಇಂಥ ವಾಯು ಧನಾರ್ಥವಾದ ಸ್ತುತಿಗಳನ್ನು ಅಂಗೀಕರಿಸುವನು."

'ರಾಯೇನು ಯಂ ಜಜ್ಞತೂ ರೋದಸೀ ಮೇ
ರಾಯೇ ದೇವೀ ಧಿಷಣಾ ಧಾತಿ ದೇವಂ |' (7-90-3)

ಇವನನ್ನು 'ತ್ವಷ್ಟುರ್ಜಾಮಾತಃ' (8-26-21) ಎಂದು ಹೇಳಿದ್ದಾರೆ. ಪುರುಷ ಸೂಕ್ತದಲ್ಲಿ 'ಪ್ರಾಣಾದ್ವಾಯುರಜಾಯತ' ಎಂದು ಹೇಳಿ ಆ ಮಹಾನ್ ಆದ ಪುರುಷನ ಪ್ರಾಣದಿಂದ ಇವನು ಜನಿಸಿದನೆಂದಿದ್ದಾರೆ (10-90-13). 'ಅಜನಯೋ ಮರುತೋ ವಕ್ಷಣಾಭ್ಯೋದಿವ' (1-134-4) ದೀಪ್ತವಾದ ಅಂತರಿಕ್ಷದಿಂದ ಮರುನ್ನಾಮಕರಾದ ದೇವತೆಗಳನ್ನು ನೀನು ಜನಿಸುವಂತೆ ಮಾಡಿದೆ ಎಂದು ಹೇಳಿ ಮರುತ್ತುಗಳು ಜನಿಸುವಂತೆ ಇವನು ಮಾಡಿದನೆಂದಿದ್ದಾರೆ.

ವಾಯುದೇವ ಮನೋಹರ ರೂಪಿ—'ವಾಯವಾ ಯಾಹಿ ದರ್ಶತ' (1-2-1)

ಇಂದ್ರನಂತೆ ಇವನೂ ದ್ಯುಲೋಕವನ್ನು ಮುಟ್ಟುವಷ್ಟು ಉನ್ನತರೂಪಿ. ಅವನಂತೆ ಇವನೂ ಮನೋವೇಗವುಳ್ಳವನು. ಸಹಸ್ರನಯನಯುಕ್ತ. ಮೇಧಾವಿಗಳು ಇಬ್ಬರನ್ನೂ ಸೋಮಪಾನಕ್ಕೆ ಆಹ್ವಾನಿಸುವರು.

'ಉಭಾ ದೇವಾ ದಿವಿಸ್ಪೃಶೇಂದ್ರಾವಾಯೂ ಹವಾಮಹೇ |
ಅಸ್ಯ ಸೋಮಸ್ಯ ಪೀತಯೇ || (1-23-2)
'ಇಂದ್ರಾವಾಯೂ ಮನೋಜುವಾ ವಿಪ್ರಾ ಹವಂತ ಊತಯೇ |
ಸಹಸ್ರಾಕ್ಷಾ ಧಿಯಸ್ಪತೀ ||' (1-23-2)

ಅರುಣವರ್ಣದ ಅನೇಕಾಶ್ವಗಳಿಂದ ಹೂಡಿದ ರಥವಿವನದು. ಅರುಣವರ್ಣದ ಎರಡು ಕುದುರೆಗಳನ್ನೂ ಇದಕ್ಕೆ ಹೂಡಲಾಗಿದೆ. ಇವನ ಇಷ್ಟಕ್ಕನುಸಾರವಾಗಿ ಎರಡೋ, ತೊಂಬತ್ತೊಂಬತ್ತೋ, ನೂರೋ ಅಥವಾ ಸಾವಿರ ಕುದುರೆಗಳನ್ನೋ ಕಟ್ಟಿಕೊಂಡು ರಥದಲ್ಲಿ ಇವನು ಬರುತ್ತಾನೆ.

'ವಹಂತು ತ್ವಾ ಮನೋಯುಜೋ ಯುಕ್ತಾಸೋ ನವತಿರ್ನವ |
ವಾಯವಾ ಚಂದ್ರೇಣ ರಥೇನ ಯಾಹಿ ಸುತಸ್ಯಪೀತಯೇ ||'
(6-48-4)

'ಎಲೈ ವಾಯುವೇ ನಿನ್ನ ಮನಸ್ಸಿಗೆ ಸಮಾನವಾದ ವೇಗವುಳ್ಳ ಪರಸ್ಪರ ಸಂಯುಕ್ತವಾದ 99 ಅಶ್ವಗಳನ್ನು ಹೂಡಿದ ಆಹ್ಲಾದಕರವಾದ ರಥದಲ್ಲಿ ಕುಳಿತು ಸೋಮಪಾನಕ್ಕೆ ಬಾ'

'ಆ ವಾಂ ಸಹಸ್ರಂ ಹರಯ ಇಂದ್ರಾವಾಯೂ ಅಭಿಪ್ರಯಃ |
ವಹಂತು ಸೋಮಪೀತಯೇ |' (6-46-3).

ಆದರಿಂದಲೇ ಇವನಿಗೆ 'ನಿಯುತ್ವತ್' ಎಂಬ ವಿಶೇಷಣ ಬಂದಿದೆ. ಈ ರಥ ದ್ಯುಲೋಕವನ್ನೂ ಮುಟ್ಟುವುದು. ಇಂದ್ರನೂ ಪ್ರಾಯಃ ವಾಯುವಿನೊಡನೆ ಬರುವನು. ಸ್ವರ್ಣಮಯವಾದ ಪೀಠವುಳ್ಳದು ಆ ರಥ. ದೇವತೆಗಳಲ್ಲೆಲ್ಲಾ ಅತ್ಯಂತ ವೇಗಶಾಲಿಯಾದ ಇವನೂ ಕೂಡ ಸೋಮಪ್ರಿಯ. ಇವನು ಸೋಮರಕ್ಷಕನೆಂದೂ 'ಶುಚಿಪಾ' ಎಂದರೆ ಶುದ್ಧವಾದ ಸೋಮಪಾನಮಾಡುವವನೆಂದೂ ಹೇಳಿದ್ದಾರೆ. ಇವನು ಪಶ್ವನ್ನಪುತ್ರಾದಿಗಳನ್ನು ಅನುಗ್ರಹಿಸಿ, ರೋಗಗಳನ್ನು ಉಪಶಮನಮಾಡಿ ದೀರ್ಘಾಯುಸ್ಸನ್ನು ಕರುಣಿಸುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಶತ್ರುಧ್ವಂಸಮಾಡಿ ರಕ್ಷಿಸಬೇಕೆಂದು ಇವನನ್ನು ಬೇಡಿದ್ದಾರೆ.

"ವಾಯುದೇವನ ರಥ ಗುಡುಗಿನಂತೆ ಶಬ್ದ ಮಾಡುತ್ತಾ ಗಿರಿಗಹ್ವರಾದಿಗಳಲ್ಲಿ ವಿವಿಧವಾಗಿ ಪ್ರತಿಧ್ವನಿಮಾಡುತ್ತಾ ಬರುವುದು. ಇದು ಇವನ ರಥದ ಮಹಿಮೆ. ಈ ರಥದ ರಭಸಕ್ಕೆ ಸಿಕ್ಕಿದ ಸ್ಥಾವರಜಂಗಮಾದಿಗಳೆಲ್ಲ ನುಚ್ಚುನೂರಾಗುವುವು. ಆಕಾಶವನ್ನೂ ಮುಟ್ಟಿ ಇವನು ದಿಗಂತವನ್ನೂ ಅರುಣವರ್ಣಯುತವನ್ನಾಗಿ ಮಾಡಿ ಬರುವನು. ಭೂಮಿಯ ಧೂಳನ್ನು ಎಬ್ಬಿಸುತ್ತಾ ಸಾರಿಬರುವನು."

ವಾತಸ್ಯ ನು ಮಹಿಮಾನಂ ರಥಸ್ಯ
ರುಜನ್ನೇತಿ ಸ್ತನಯನ್ನಸ್ಯ ಘೋಷಃ |
ದಿವಿಸ್ಪೃಗ್ಯಾತ್ಯರುಣಾನಿ ಕೃಣ್ವನ್
ಉತೋ ಏತಿ ಪೃಥಿವ್ಯಾ ರೇಣುಮಸ್ಯನ್ || (10-168-1)

"ವಿಶೇಷವಾಗಿ ಅವಸ್ಥಿತವಾದ ಪರ್ವತಾದಿಗಳೂ ವಾಯುವಿಗನುಗುಣವಾಗಿ ಕಂಪಿಸುವುವು. ಸಂಗ್ರಾಮಗಳಲ್ಲಿ ಹೇಗೆಯೋ ಹಾಗೆ ವಡಬಾಗ್ನಿಗಳು ಇವನಲ್ಲಿಗೆ ಬರುವುವು. ಈ ವಡಬಾಗ್ನಿಗಳಿಂದ ಕೂಡಿದ ರಥದಲ್ಲಿ ದೀಪ್ಯಮಾನನಾದ ವಾಯು ಹೊರಡುತ್ತಾನೆ. ವಿಶ್ವದಲ್ಲಿರುವ ಸಮಸ್ತಕ್ಕೂ ಇವನು ರಾಜನಾಗಿದ್ದಾನೆ."

ಸಂ ಪ್ರೇರತೇ ಅನುವಾತಸ್ಯ ವಿಷ್ಠಾ
ಐನಂ ಗಚ್ಛಂತಿ ಸಮನಂ ನ ಯೋಷಾಃ |
ತಾಭಿಃ ಸಯುಕ್ಸರಥಂ ದೇವ ಈಯತೇ
ಅಸ್ಯವಿಶ್ವಸ್ಯ ಭುವನಸ್ಯ ರಾಜಾ || (10-168-2)

"ಅಂತರಿಕ್ಷಮಾರ್ಗಗಳಲ್ಲಿ ಸಂಚರಿಸುವ ವಾಯು ಒಂದು ದಿನವೂ ಎಲ್ಲಿಯೂ ನಿಲ್ಲುವುದಿಲ್ಲ. ಇವನು ಜಲದಸುಹೃತ್ (ಸಖಾ), ಪ್ರಥಮಜ–ಎಲ್ಲ ಪ್ರಾಣಿಗಳಿಗಿಂತಲೂ ಪೂರ್ವ ಉತ್ಪನ್ನನಾದವನು. ಋತಾವಾನ್. ಇಂತಹ ವಾಯುದೇವ ಎಲ್ಲಿ ಮೊದಲು ಹುಟ್ಟಿದನೋ ? ಎಲ್ಲಿಂದ ಬಂದು ಈ ಜಗತ್ತನ್ನೆಲ್ಲವನ್ನೂ ವ್ಯಾಪಿಸಿದನೋ ? ಸರ್ವದಾ ಸರ್ವತ್ರ ಇರುವ ಇವನ ಉತ್ಪತ್ತಿಯನ್ನೂ, ವ್ಯಾಪ್ತಿಪ್ರಕಾರವನ್ನೂ ಯಾರು ತಾನೇ ತಿಳಿಯಬಲ್ಲರು ?"

'ಅಂತರಿಕ್ಷೇ ಪಥಿಭಿರೀಯಮಾನೋ
ನ ನಿವಿಶತೇ ಕತಮಚ್ಚನಾಹಃ |
ಅಪಾಂ ಸಖಾ ಪ್ರಥಮಜಾ ಋತಾವಾ
ಕ್ವ ಸ್ವಿಜ್ಜಾತಃ ಕುತ ಆ ಬಭೂವ ||' (10-168-3)

"ಈ ವಾಯು ದೇವತೆಗಳಿಗೂ ಆತ್ಮನಾಗಿದ್ದಾನೆ. ಭೂತ ಜಾತಗಳೆಲ್ಲದರೊಳಗೆ ಪ್ರಾಣ

ರೂಪದಿಂದ ಅವಸ್ಥಿತನಾಗಿದ್ದಾನೆ. ಇಂಥ ಈ ಮಹಾನುಭಾವ ತನ್ನ ಸಂಕಲ್ಪಕ್ಕನುಗುಣವಾಗಿ ಚರಿಸುವನು ಅನಿವಾರಿತಗತಿಯುಳ್ಳವನಾಗಿ. ಬರುವಾಗ ಇವನು ಮಹತ್ತರವಾದ ಶಬ್ದದೊಡನೆ ಬರುತ್ತಾನೆ. ಆದರೆ ಅವನ ರೂಪ ಮಾತ್ರ ಕಾಣಿಸದು ನೀರೂಪನಾದುದರಿಂದ. ಇಂಥ ವಾಯುವಿಗೆ ಹವಿಸ್ಸಮರ್ಪಣೆ ಮಾಡೋಣ.

'ಆತ್ಮಾ ದೇವಾನಾಂ ಭುವನಸ್ಯ ಗರ್ಭೋ
ಯಥಾವಶಂ ಚರತಿ ದೇವ ಏಷಃ |
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ
ತಸ್ಮೈವಾತಾಯ ಹವಿಷಾ ವಿಧೇಮ ||' (10-168-4)

ವಾಯುದೇವ ಎಲ್ಲ ಪ್ರಾಣಿಗಳ ಜೀವನಾಧಾರನಾಗಿ ಅನಿವಾರಿತಗತಿಯುಳ್ಳವನಾಗಿ ಸರ್ವತ್ರ ಚಲಿಸುವನೆಂಬ ಅಂಶ ಇಲ್ಲಿ ಹೇಳಿದೆ. ಇವನ ರೂಪ ಕಣ್ಣಿಗೆ ಗೋಚರಿಸದು. ಆದರೆ ಶಬ್ದದಿಂದ ಅವನ ಬರವನ್ನು ಊಹಿಸಬಹುದು. ತನ್ನ ಇಚ್ಛೆ ಬಂದೆಡೆ ಇವನು ಚರಿಸುತ್ತಾನೆ. ಇವನು ಎಲ್ಲರಿಗೂ ಆತ್ಮಭೂತನಾಗಿದ್ದಾನೆ. (7-87-2; 10-92-13).

ರುದ್ರದೇವನಂತೆ ವಾತದೇವನೂ ರೋಗನಿವಾರಕ. ಭಿಷಕ್ತಮ. ದೀರ್ಘಾಯುವರ್ಧಕ.

'ವಾತ ಆ ವಾತು ಭೇಷಜಂ
ಶಂಭು ಮಯೋಭು ನೋ ಹೃದೇ !
ಪ್ರಣ ಆಯೂಂಷಿ ತಾರಿಷತ್ ||' (10-186-1)

"ವಾಯು ನಮ್ಮ ಹೃದಯಕ್ಕೆ ರೋಗನಾಶಕವೂ, ಸುಖಕರವೂ ಆದ ಔಷಧ ಪ್ರದಾನಮಾಡಲಿ. ನಮ್ಮ ಆಯುಸ್ಸನ್ನು ವೃದ್ಧಿಗೊಳಿಸಲಿ."

ನಮ್ಮ ಹೃದಯಕ್ಕೆ ಇವನೆರೆಯುವ ಔಷಧವಾದರೋ ಶಾಂತಿ. ಭಗವದ್ಭಕ್ತಿಯಿಂದ ತುಂಬಿದ ಹೃದಯ ಸಕಲ ಕ್ಲೇಶಗಳಿಂದ ದೂರವಾಗಿ ಅವನ ರಕ್ಷಣೆಯಲ್ಲಿ ವಿಶ್ವಾಸ ಹೊಂದಿ ತಾಪಗಳಿಂದ ದೂರವಾಗುವುದೇ ಆಗಿದೆ.

ಎಲ್ಲವನ್ನೂ ಪವಿತ್ರಗೊಳಿಸುವ ಸ್ವಭಾವ ವಾಯುವಿನದು. ನಿತ್ಯಶತ್ರುಗಳಾದ ರೋಗಗಳೆಂಬ ಅಂತರ ಶತ್ರುಗಳನ್ನು ಕಳೆದು ಮನಸ್ಸನ್ನು ನಿರ್ಮಲವನ್ನಾಗಿಮಾಡುವವನಿವನು. ಆದ್ದರಿಂದಲೇ ಜೀವರಾಶಿಯ ಮೇಲೆ ಕರುಣೆ ತೋರುವ ಈ ದೇವ ನಮಗೆ ಸರ್ವವಿಧವಾದ ಬಂಧುವಾಗಿದ್ದಾನೆ–

'ಉತ ವಾತ ಪಿತಾಸಿನ
ಉತ ಭ್ರಾತೋತನಃ ಸಖಾ |
ಸ ನೋ ಜೀವಾತವೇ ಕೃಧಿ ||' (10-186-2)

"ಎಲೈ ವಾಯುದೇವನೇ, ನೀನೆ ನಮ್ಮ ಉತ್ಪಾದಕನಾದ ತಂದೆ. ಸೋದರನೂ ನೀನೇ. ನಮ್ಮ ಮಿತ್ರನೂ ನೀನೇ. ಇಂಥ ನೀನು ನಮ್ಮ ಯಾಗಕ್ಕೆ ಬಾ."

ವಾಯುವಿನಲ್ಲಿ ಋಷಿಗಳ ಪ್ರಾರ್ಥನೆ ಇದು–

'ಹೇ ವಾಯೋ, ನಿನ್ನ ಪರಮಪದದಲ್ಲಿ ಯಾವ ಅಮೃತತ್ವದ ನಿಕ್ಷೇಪವಿದೆಯೋ ಅದರಿಂದ ಅಮೃತತ್ವವನ್ನು ನಮಗೂ ಕೊಡು.'

'ಯದದೋ ವಾತ ತೇ ಗೃಹೇ
ಅಮೃತಸ್ಯ ನಿಧಿರ್ಹಿತಃ !
ತತೋ ನೋ ದೇಹಿ ಜೀವಸೇ ||' (10-186-3)

## ಪರ್ಜನ್ಯ

ಋಗ್ವೇದದಲ್ಲಿ ಕೇವಲ ಮೂರು ಸೂಕ್ತಗಳು ಈ ದೇವತೆಗೆ ಮೀಸಲಾಗಿವೆ. ಒಳ್ಳೆಯ ವೃಷ್ಟಿ ಆಗದೆ ಜೀವಲೋಕ ಬಾಳದು. ಜೀವರುಗಳು ಈ ಲೋಕಕ್ಕೆ ಬರುವುದು ವೃಷ್ಟಿಯ ಮೂಲಕವೆಂದು ಉಪನಿಷದ್ದರ್ಶನದ ನೆಲೆ. ಪಂಚಾಗ್ನಿವಿದ್ಯೆಯು ಈ ಅಂಶವನ್ನೇ ದ್ಯೌ:, ಪರ್ಜನ್ಯಃ, ಪೃಥಿವೀ, ಪುರುಷಃ ಯೋಷಿತ್ ಎಂದು ಹೇಳುತ್ತದೆ. ಸಸ್ಯ ಸಮೃದ್ಧಿಯಾಗಬೇಕಾದರೆ ವೃಷ್ಟಿಯೇ ಆಧಾರ. ಮಳೆರಾಯನ ಕರುಣೆ ಇಲ್ಲದೆ ಜೀವನ ಸಾಧ್ಯವಿಲ್ಲ. ಮಾನವ ಜೀವನವನ್ನು ಪರಿಪೋಷಿಸುವ ಅನೇಕ ಅಂಶಗಳಲ್ಲಿ ಪರ್ಜನ್ಯನೂ ಒಬ್ಬ. ಆದ್ದರಿಂದಲೇ ಈ ದೇವನನ್ನು ಋಷಿ ಸ್ತುತಿಸಿದ್ದಾರೆ. ಋಗ್ವೇದದಲ್ಲಿ ಕೆಲವೆಡೆಗಳಲ್ಲಿ ಪರ್ಜನ್ಯ ಶಬ್ದ ಮೇಘವಾಚಕವಾಗಿಯೂ ಇದೆ-

'ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ।
ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥' (1-164-51)

'ಏಕರೂಪವಾದ ಈ ನೀರು ದಿನದಿನವೂ ಮೇಲೆ ಹೋಗಿ ಕೆಳಕ್ಕೆ ಬೀಳುವುದು. ನೀರುಂಡ ಮೇಘಗಳು ಭೂಮಿಯನ್ನು ತೃಪ್ತಿಪಡಿಸುವುವು. ಹಾಗೆಯೇ ಆಹವನೀಯಾದಿ ಅಗ್ನಿಗಳು ದ್ಯುಲೋಕವನ್ನು ತೃಪ್ತಿಪಡಿಸುವುವು.'

"ದುದೋಹ ಗಾಂ ಸಯಜ್ಞಾಯ ಸಸ್ಯಾಯಮಘವಾದಿವಂ' ಎಂದು ಕಾಳಿದಾಸ ಈ ಅಂಶವನ್ನು ಹೇಳಿದ. ಗೀತೆಯೂ ಸಹ "ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ । ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥" ಎಂದು ಸಾರಿತು. ಹೀಗೆ ಪರ್ಜನ್ಯನಿಂದಲೇ ಮಾನವನ ಜೀವಿತ ಈ ಭೂಮಿಯ ಮೇಲೆ ಸುಗಮವಾಗಿ ಸಾಗುವುದು. ಈ ಮೇಘೋದಯ, ವಿದ್ಯುದ್ವಿಭಂಗ ಮೊದಲಾದುವು ಈಶ್ವರನ ವಿಚಿತ್ರವಾದ ವ್ಯಾಪಾರವಾಗಿವೆ. ಆ ರೂಪದಲ್ಲಿ ಭಗವಂತನ ಸ್ತುತಿಯೇ ಪರ್ಜನ್ಯ ಸೂಕ್ತವಾಗಿದೆ. ಪರ್ಜನ್ಯದೇವ ನೀರುಂಡ ಮೇಘಗಳ ಅಧಿದೇವತೆ. ಮೇಘಗಳು ಅವನ ಅಧಿಷ್ಠಾನ. ಪರ್ಜನ್ಯದೇವ ಮಳೆಯನ್ನು ವರ್ಷಿಸುವುದರಿಂದ 'ವೃಷಭ'. ಬೇಗ ಮಳೆಯನ್ನು ಸುರಿಸುವವನಿವನು. ಗರ್ಜನೆ ಮಾಡುತ್ತಾ ಸಸ್ಯಗಳಲ್ಲಿ ಅಂಕುರಗಳನ್ನು ಸ್ಥಾಪಿಸುವನು ಪರ್ಜನ್ಯ.'

'ಕನಿಕ್ರದ ದ್ವೃಷಭೋ ಜೀರದಾನೂ
ರೇತೋ ದಧಾತ್ಯೋಷಧೀಷು ಗರ್ಭಮ್ !' (5-83-1)

'ಔಷಧಿಗಳನ್ನು ಬೆಳೆಸುವವನು ಇವನು. ಜಲವೃದ್ಧಿ ಇವನಿಂದಲೇ. ಪ್ರಕಾಶಮಾನನಾದ ಈ ಪರ್ಜನ್ಯ ಪ್ರಪಂಚದ ಸಮಸ್ತಕ್ಕೂ ಒಡೆಯ.'

'ಯೋ ವರ್ಧನ ಓಷಧೀನಾಂ ಯೋ ಅಪಾಂ
ಯೋ ವಿಶ್ವಸ್ಯ ಜಗತೋ ದೇವ ಈಶೇ ।' (7-101-2)

'ಈತ ತನ್ನ ಸಂಕಲ್ಪಕ್ಕನುಸಾರ ರೂಪವನ್ನು ತಾಳುವನು. ಒಮ್ಮೆ ಹಾಲು ತುಂಬಿದ ಕರೆಯುವ ಹಸುವಿನಂತೆ ಆಗುವನು. ಇನ್ನು ಕೆಲವು ವೇಳೆ ಬರಡು ಹಸುವಿನಂತೆ ರೂಪ ತೋರುವನು.'

'ಸ್ತರೀರು ತ್ವದ್ಭವತಿ ಸೂತ ಉತ್ವತ್
ಯಥಾವಶಂ ತನ್ವಂ ಚಕ್ರ ಏಷಃ ।' (7-101-3)

'ಈ ಪರ್ಜನ್ಯನಿಂದಲೇ ಸಮಸ್ತ ಭೂತಜಾತಗಳೂ ಬದುಕಿವೆ. ದ್ಯುಪ್ರಭೃತಿ ಲೋಕಗಳೂ ಇವನಿಗಧೀನವಾಗಿಯೇ ಇವೆ. ಪೂರ್ವ ಉತ್ತರ ಪಶ್ಚಿಮ ದಿಕ್ಕುಗಳಲ್ಲಿ ಅವನು ತ್ರೇಧಾ ಪ್ರವಹಿಸುವನು. ಈ ದಿಕ್ಕುಗಳ ಮೇಘ ಕೋಶಗಳು ಮಹತ್ತರವೂ ಮಧುಯುತವೂ ಆದ

ವೃಷ್ಟಿಯನ್ನು ಕರೆಯುತ್ತವೆ.'

'ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಃ
ತಿಸ್ರೋ ದ್ಯಾವಸ್ತ್ರೇಧಾ ಸಸ್ರುರಾಪಃ |
ತ್ರಯಃ ಕೋಶಾಸ ಉಪಸೇಚನಾಸಃ
ಮಧ್ವಃಶ್ಚೋತಂತ್ಯಭಿತೋ ವಿರಪ್ಶಮ್ ||' (7-101-4)

ಪರ್ಜನ್ಯದೇವನ ಮುಖ್ಯವಾದ ಕರ್ಮವೆಂದರೆ ಮಳೆಗರೆಯುವುದು. 'ಜಲರಥದಲ್ಲಿ ಕುಳಿತು ಮೇಘದ ಸುತ್ತಲೂ ಸುತ್ತುತ್ತಾ ಮೇಘಕೋಶವನ್ನು ಸಡಿಲಿಸಿ ಕೆಳಮೊಗನಾಗಿ ಬಗ್ಗಿಸಿ ಮಳೆಸುರಿಸುತ್ತಾನೆ. ಹೀಗೆ ವೃಷ್ಟಿಯಾದಾಗ ಹಳ್ಳತಗ್ಗುಗಳೆಲ್ಲಾ ಜಲದಿಂದ ತುಂಬಿ ಸಮನಾಗಿ ಕಾಣಲಿ. ಆದ್ದರಿಂದ ಭೂಮಿಗಭಿಮುಖವಾಗಿ ಶಬ್ದಮಾಡು, ಗರ್ಜಿಸು, ಜಲಗರ್ಭವನ್ನು ಸಸ್ಯಗಳೊಳಗಿಡು.'

'ಅಭಿಕ್ರಂದ ಸ್ತನಯ ಗರ್ಭಮಾಧಾ
ಉದನ್ವತಾ ಪರಿದೀಯಾ ರಥೇನ |
ದೃತಿಂ ಸು ಕರ್ಷ ವಿಷಿತಂ ನ್ಯಂಚಂ
ಸಮಾ ಭವಂತೂದ್ವತೋ ನಿಪಾದಾಃ' || (5-83-7)

ವೃಕ್ಷಗಳನ್ನು ಮುರಿಯುತ್ತಾ ಬರುವವನು ಪರ್ಜನ್ಯ. ರಾಕ್ಷಸರನ್ನೂ ಧ್ವಂಸಗೊಳಿಸುವ ಇವನ ಪರಾಕ್ರಮಕ್ಕೆ ಸಕಲ ಲೋಕವೂ ಹೆದರುವುದು–'ವಿಶ್ವಂಬಿಭಾಯಭುವನಂ ಮಹಾವಧಾತ್' (5-83-2). ಇವನು ದುಷ್ಟರನ್ನು ಶಿಕ್ಷಿಸುವಾಗ ನಿರ್ಮಲಚಿತ್ತರೂ ಪಾಪದೂರರೂ ಕೂಡ ಹೆದರಿ ಸಾರುವರು (5-83-2).

'ಪರ್ಜನ್ಯನಿಗೆ ಅನೇಕಾನೇಕ ಮಳೆಗರೆಯುವ ದೂತರಿದ್ದಾರೆ. ಸಾರಥಿ ಕುದುರೆಗಳನ್ನು ಚಾಟಿಯಿಂದ ಹೊಡೆಯುವಂತೆ ಪರ್ಜನ್ಯ ಚಾವಟಿಯಿಂದ ತನ್ನ ದೂತರಾದ ಮೋಡಗಳನ್ನು ಥಳಿಸುತ್ತಾನೆ. ಇವನು ಮಳೆಸುರಿಸುವಾಗ ದೂರದ ಸಿಂಹಗಳ ಘರ್ಜನೆ ಕೇಳಿಸುವುದು.'

'ರಥೀವ ಕಶಯಾಶ್ವಾನ್ ಅಭಿಕ್ಷಿಪನ್ ಆವಿಃ
ದೂತಾನ್ಕೃಣುತೇ ವರ್ಷ್ಯಾನಹ |
ದೂರಾತ್ಸಿಂಹಸ್ಯ ಸ್ತನಥಾ ಉದೀರತೇ
ಯತ್ಪರ್ಜನ್ಯಃ ಕೃಣುತೇ ವರ್ಷ್ಯಂನಭಃ ||' (5-83-3)

ಇಲ್ಲಿನ ಕಶಾಪ್ರಹಾರವೂ ಸಿಂಹ ಘರ್ಜನೆಯು ಮಿಂಚು ಗುಡುಗುಗಳಿಗನ್ವಯಿಸಿವೆ.

ಬಲವಾಗಿ ಮಳೆ ಸುರಿಸುವನು ಪರ್ಜನ್ಯ. ಆಗ ಬಿರುಗಾಳಿಗಳು ಮಳೆ ಬೀಳಲನು ಕೂಲಿಸುವಂತೆ ಬೀಸುವುವು. ಮಿಂಚುಗಳು ಗೊಂಚಲು ಗೊಂಚಲಾಗಿ ಸಂಚರಿಸುವುವು. ವನಸ್ಪತಿಗಳು ಗರ್ಭಧರಿಸುವುವು. ಭೂಮಿ ಸಮಸ್ತರಿಗೂ ಹಿತಕಾರಿಯಾಗುವುದು. (5-83-4) ಇವೆಲ್ಲಾ ಪರ್ಜನ್ಯನ ಕೃಪೆಯ ಪ್ರಭಾವ. ಸತ್ಯವರ್ಧಕನಿವನು. ಔಷಧಿಗಳು, ಪಶುಗಳು, ಸ್ತ್ರೀಯರು ಇವರೆಲ್ಲರೂ ಪರ್ಜನ್ಯದಿಂದ ಉದಕ ರೂಪವಾದ ಗರ್ಭವನ್ನು ಧರಿಸುವರು–

'ಯೋಗರ್ಭ ಮೋಷಧೀನಾಂ ಗವಾಂಕೃಣೋತ್ಯರ್ವತಾಂ |
ಪರ್ಜನ್ಯಃ ಪುರುಷೀಣಾಮ್' || (7-102-2)

ಸ್ವತಃ ದೀಪ್ತಿಮಂತನಾದವನಿವನು–'ಸ್ವರಾಚೇ'. ಪರ್ಜನ್ಯನ ಶಾಸನಕ್ಕೆ ಲೋಕವೇ ತಲೆಬಾಗುವುದು. ಇವನು ನಮಗೆ ತಂದೆ. ಮಹಾಮಹಿಮನಾದವನು–'ಅಸುರಃಪಿತಾನಃ' (5-83-6). ಪರ್ಜನ್ಯನ ದಯೆಯಿಂದಲೇ ಪಶುಗಳಿಗೂ, ಮನುಷ್ಯರಿಗೂ ಕುಡಿಯುವ ನೀರೂ,

ಊಟಮಾಡುವ ಆಹಾರವೂ. ಅದರಿಂದಲೇ ಪರ್ಜನ್ಯನನ್ನು

'ಮಹಾಂತಂ ಕೋಶಂ ಉದಚಾ ನಿಷಿಂಚ
ಸ್ಯಂದಂತಾಂ ಕುಲ್ಯಾವಿಷಿತಾಃ ಪುರಸ್ತಾತ್ ।
ಘೃತೇನ ದ್ಯಾವಾಪೃಥಿವೀ ವ್ಯುಂಧಿ
ಸುಪ್ರಪಾಣಂ ಭವಂತ್ವಘ್ನ್ಯಾಭ್ಯಃ ॥'

'ಎಲೈ ಪರ್ಜನ್ಯನೇ, ಪ್ರವೃದ್ಧವಾದ ಮೇಘವನ್ನು ಸಮೀಪಿಸು. ಮತ್ತು ಕೆಳಗೆ ಮಳೆ ಸುರಿಯುವಂತೆ ಮಾಡು. ನದಿಗಳೆಲ್ಲಾ ಪ್ರವಾಹದಿಂದ ತುಂಬಿ ಪೂರ್ವದಿಕ್ಕಿಗೆ ಹರಿಯಲಿ. ದ್ಯುಲೋಕವನ್ನೂ, ಭೂಲೋಕವನ್ನೂ ಜಲದಿಂದ ಚೆನ್ನಾಗಿ ನೆನಸು. ಗೋವುಗಳು ಪಾನಮಾಡಲು ತಿಳಿಯಾದ ಜಲ ದೊರೆಯಲಿ' ಎಂದು ಬೇಡಿದ್ದಾರೆ.

ಪರ್ಜನ್ಯದೇವ ಸಕಲಲೋಕದ ಚರಾಚರಗಳಿಗೂ ಸುಖಕರನಾಗಿದ್ದಾನೆ. ದುಷ್ಟರನ್ನಿವನು ಶಿಕ್ಷಿಸುವಾಗ ಲೋಕ ಸಂತೋಷಗೊಳ್ಳುವುದು (5-83-9). ಇಂಥ ಪರ್ಜನ್ಯ ಅತಿಯಾಗಿ ವರ್ಷಿಸಿದರೆ ಲೋಕಕ್ಕೆ ತೊಂದರೆ ತಾನೇ? ಆದ್ದರಿಂದಲೇ ಋಷಿಗಳು ಅತಿವೃಷ್ಟಿ ಪರಿಹಾರಮಾಡಿ ಲೋಕಕ್ಕೆ ಉಪಕಾರವಾಗಿ ರಕ್ಷಿಸಬೇಕೆಂದು ಬೇಡುತ್ತಾರೆ–'ಅವರ್ಷೀ, ವರ್ಷಂ ಉದುಷೂ ಗೃಭಾಯ' (5-83-10). 'ನೀನು ಈಗ ವರ್ಷಿಸಿರುವೆ. ಇನ್ನು ಮಳೆಯನ್ನು ತಡೆದಿಡು.' ಇಂಥ ದೇವತೆ ಲೋಕದವರಿಂದ ಕೊಂಡಾಡಲ್ಪಟ್ಟಿದ್ದಾನೆ–'ಪ್ರಜಾಭ್ಯೋ ಅವಿದೋಮನೀಷಾಮ್' (5-83-10). ಆದುದರಿಂದ ಇವನಲ್ಲಿ ಋಷಿಗಳ ಪ್ರಾರ್ಥನೆಯಿದು—

'ಇದಂ ವಚಃ ಪರ್ಜನ್ಯಾಯ ಸ್ವರಾಜೇ
ಹೃದೋ ಅಸ್ತ್ವಂತರಂ ತಜ್ಜುಜೋಷತ್ ।
ಮಯೋಭುವಃ ವೃಷ್ಟಯಃ ಸೂತ್ವಸ್ಮೇ
ಸುಪಿಪ್ಪಲಾ ಓಷಧೀರ್ದೇವಗೋಪಾಃ ॥'

"ಸ್ವತಃ ದೀಪ್ತಿಮಂತನಾದ ಪರ್ಜನ್ಯದೇವನಿಗೆ ಈ ಸ್ತುತಿ. ಇದು ಅವನ ಹೃದಯಾಂತರಾಳವನ್ನು ಸೇರಲಿ. ಅವನೂ ಈ ಸ್ತುತಿಯನ್ನು ಸೇವಿಸಲಿ. ಅವನ ದಯೆಯಿಂದ ಸುಖವುಂಟುಮಾಡುವ ವೃಷ್ಟಿಗಳು ಉಂಟಾಗಲಿ. ಅವನಿಂದ ರಕ್ಷಿತವಾದ ಔಷಧಿಗಳು ನಮಗೆ ಒಳ್ಳೆಯ ಫಲವನ್ನೀಯಲಿ."

**ಆಪಃ**

ಮನುಷ್ಯನು ಜೀವಿಸಲು ಗಾಳಿ ಆಹಾರ ಹೇಗೆ ಅತ್ಯಾವಶ್ಯಕವೋ ಹಾಗೆಯೇ ನೀರೂ ಅವಶ್ಯಕ. ಉಪನಿಷತ್ತಿನಲ್ಲಿ 'ಆಪೋಮಯಃ ಪ್ರಾಣಃ' ಎಂದು ಈ ಅಂಶವನ್ನೂ ಹೇಳಿದ್ದಾರೆ. ಲೋಕರಕ್ಷಣೆ ಆ ಕಾರಣದಿಂದಲೇ ಅಬ್ದೇವತೆಯ ಮುಖಾಂತರ ಆಗುತ್ತದೆಯೆಂದು ಋಷಿಗಳು ಹೇಳಿದ್ದಾರೆ. ಹೀಗೆ ಸಕಲ ಮಾನವರ ಜೀವನಾಧಾರವಾಗಿರುವ, 'ಜೀವನಂ' ಎಂಬ ಹೆಸರನ್ನೇ ಅನ್ವರ್ಥವಾಗಿ ಹೊಂದಿರುವ ಜಲ ಬಹಳ ಪ್ರಧಾನವಾದ ಸ್ಥಾನವನ್ನು ಹೊಂದಿದೆ. ಜಲವನ್ನು ಅಧಿಷ್ಠಾನವಾಗಿ ಹೊಂದಿರುವ ಜಲದೇವತೆಯನ್ನು ಋಗ್ವೇದಋಷಿ ಸ್ತುತಿಸಿರುವುದು ಯುಕ್ತವೇ ಆಗಿದೆ.

ಋಗ್ವೇದದಲ್ಲಿ ಅಬ್ದೇವತಾಕವಾದ ಸೂಕ್ತಗಳು ಕೇವಲ ನಾಲ್ಕು ಮಾತ್ರ. ಇವುಗಳಲ್ಲಲ್ಲದೆ ಇತರ ದೇವತೆಗಳೊಡನೆಯೂ ಇವರನ್ನು ಸ್ತುತಿಸಿದ್ದಾರೆ. ಜಲದೇವತೆ ಯನ್ನು ಋಷಿ 'ತಾಯಿ' ಎಂದು ಹೇಳಿದ್ದಾರೆ. ಏಕೆಂದರೆ 'ಅಪಾಂನಪಾತ್' ಸಂಜ್ಞಕನಾದ ಅಗ್ನಿಗೆ ಇವರು ಜನ್ಮಕೊಡುತ್ತಾರೆ–"ಆಪೋ ಅಗ್ನಿಂ ಜನಯಂತ ಮಾತರಃ" (10-91-6).

"ಸೂರ್ಯದೇವ ತನ್ನ ಕಿರಣಗಳಿಂದ ಜಲವನ್ನು ಹೀರಿ ಮಳೆಗರೆದು ಅಬ್ದೇವತೆಯನ್ನು ಬೆಳೆಸುತ್ತಾನೆ. ಇಂದ್ರದೇವ ವಜ್ರಾಯುಧದಿಂದ ಮೇಘಗಳನ್ನು ಮರ್ದಿಸಿ ಒಳಗೆ ಸೆರೆಯಾಗಿದ್ದ ಜಲ ಸ್ರವಿಸುವಂತೆ ಮಾಡುತ್ತಾನೆ. ಇಂಥ ಎಲ್ಲ ನದಿಗಳೆ, ನಮಗೆ ಧನವನ್ನು ಕುರುಣಿಸಿ. ಎಲ್ಲ ಅಬ್ದೇವತೆಗಳೇ, ಸರ್ವದಾ ನಮಗೆ ಮಂಗಳವುಂಟು ಮಾಡಿ ರಕ್ಷಿಸಿ."

ಯಾಃ ಸೂರ್ಯೋರಶ್ಮಿಭಿರಾತತನಾನ
  ಯಾಭ್ಯ ಇಂದ್ರೋ ಅರದದ್ಗಾತುಮೂರ್ಮಿಂ ।
ತೇ ಸಿಂಧವೋ ವರಿವೋ ಧಾತನಾನೋ
  ಯೂಯಂ ಪಾತ ಸ್ವಸ್ತಿಭಿಃ ಸದಾನಃ ॥ (7-47-4)

ಅಬ್ದೇವತೆ ಜನರಿಗೆ ಅನೇಕರೂಪದಲ್ಲಿ ಪ್ರತ್ಯಕ್ಷವಾಗಿ ಅವರನ್ನು ಸರ್ವಪ್ರಕಾರದಲ್ಲಿಯೂ ರಕ್ಷಿಸುವಳು–

"ಅಂತರಿಕ್ಷದಲ್ಲಿರುವ ದಿವ್ಯತೀರ್ಥವೂ, ಭೂಮಿಯ ಮೇಲೆ ಹರಿಯುವ ನದಿ ಮೊದಲಾದ ವುಗಳ ಉದಕವೂ, ತೋಡಿ ತೆಗೆದ ಜಲವೂ, ಸ್ವಯಂ ಉದ್ಭವಿಸಿದ ಊಟೆಗಳ ನೀರೂ ದೀಪ್ತಿಯುತವೂ, ಪವಿತ್ರಕರವೂ ಆಗಿ ಸಮುದ್ರಾಭಿಮುಖವಾಗಿವೆ. ಇಂಥ ದಿವ್ಯತೀರ್ಥಗಳು ನಮ್ಮನ್ನು ಪವಿತ್ರಗೊಳಿಸಲಿ."

'ಯಾ ಆಪೋ ದಿವ್ಯಾ ಉತ ವಾಸ್ರವಂತಿ
  ಖನಿತ್ರಮಾ ಉತ ವಾ ಯಾಃ ಸ್ವಯಂಜಾಃ ।
ಸಮುದ್ರಾರ್ಥಾ ಯಾಃ ಶುಚಯಃ ಪಾವಕಾಃ
  ತಾ ಆಪೋ ದೇವೀರಿಹ ಮಾಮವಂತು ॥ (7-49-2)

ಅಬ್ದೇವತೆ ಮಾತೃಪ್ರಯುಕ್ತವಾದ ವಾತ್ಸಲ್ಯದಿಂದ ತುಂಬಿದ್ದಾಳೆ. ಸಮಸ್ತವಾದ ಸ್ಥಾವರ ಮತ್ತು ಜಂಗಮ ಪದಾರ್ಥಗಳೆಲ್ಲವೂ, ಇವರಿಂದಲೇ ಜನಿಸಿವೆ.

'ಯೂಯಂ ಹಿಷ್ಠಾಭಿಷಜೋ ಮಾತೃತಮಾ
ವಿಶ್ವಸ್ಯ ಸ್ಥಾತುರ್ಜಗತೋ ಜನಿತ್ರೀಃ |' (6-50-7)

ಸಮಸ್ತ ಸ್ಥಾವರ ಜಂಗಮ ಪದಾರ್ಥಗಳ ಜನನಿ ಅಬ್ದೇವತೆ ಎಂದು ಹೇಳಿರುವ ಅಂಶ ಉಪನಿಷತ್ತಿನಲ್ಲಿ ವಿವರಿಸಲಾಗಿದೆ. 'ಬಹುಸ್ಯಾಂ ಪ್ರಜಾಯೇಯ' ಎಂದು ಸಂಕಲ್ಪಿಸಿದ ಪರಬ್ರಹ್ಮ ತೇಜಸ್ಸು, ಅಪ್ಪು, ಅನ್ನ ಎಂಬ ಮೂರು ದೇವತೆಗಳನ್ನು ಸೃಜಿಸಿ ಅವರುಗಳೊಳಗೆ–'ಹಂತಾ ಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮ ನಾನು ಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' (ಛಾಂ. ಉ. 6-3-2) ಎಂಬಂತೆ ತಾನು ಅನುಪ್ರವೇಶ ಮಾಡಿ ನಾಮರೂಪಾತ್ಮಕವಾದ ಪ್ರಪಂಚವನ್ನು ಸೃಷ್ಟಿಸಿದನಂತೆ. ಈ ಮೂರು ದೇವತೆಗಳಲ್ಲಿ ಒಂದಾದ ಅಬ್ದೇವತೆ ಹೇಗೆ ಪ್ರಧಾನವೆಂಬುದು ಇದರಿಂದ ಗೊತ್ತಾಗುವುದು. 'ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಂ' (ಮಹಾನಾರಾಯಣ 1-4). ಭಗವಂತನ ಮೊದಲನೆಯ ಸೃಷ್ಟಿಯೇ ಜಲವೆಂದು ಹೇಳಿದ್ದಾರೆ— 'ಅಪ ಏವ ಸಸರ್ಜಾದೌ ತಾಸು ವೀರ್ಯಮಪಾಸೃಜತ್' (ಮನುಸ್ಮೃತಿ). ಕಾಳಿದಾಸನಾದರೂ ಈ ಸಂಪ್ರದಾಯಕ್ಕನುಸಾರವಾಗಿ 'ಯಾ ಸೃಷ್ಟಿಃ ಸ್ರಷ್ಟುರದ್ಯಾ' ಎಂದು ಭಗವಂತನ ಪ್ರಥಮ ಸೃಷ್ಟಿ ಜಲವೆಂದು ಹೇಳಿದ್ದಾನೆ. ಇವೆಲ್ಲವನ್ನೂ ಗಮನಿಸಿದರೆ ಋಗ್ವೇದದಲ್ಲಿ ಅಬ್ದೇವತೆಯನ್ನು ಚರಾಚರಾತ್ಮಕವಾದ ಸಮಸ್ತಕ್ಕೂ ಜನನಿಯೆಂದು ಹೇಳಿರುವುದರ ಮಹತ್ವ ಅರಿವಾಗುವುದು.

ಈ ಅಬ್ದೇವತೆಗಳು ದೇವತೆಗಳ ಸತ್ಯಮಾರ್ಗವನ್ನನುಸರಿಸುವರು. ವಜ್ರಬಾಹುವಾದ

ಇಂದ್ರನ ಕಟ್ಟಳೆಯನ್ನು ಇವರು ಎಂದಿಗೂ ಮೀರುವುದಿಲ್ಲ. ವರುಣರೂಪಿಯಾದ ಭಗವಂತ ಇವುಗಳೊಳಗೆ ಪ್ರವೇಶಿಸಿ ಸಂಚರಿಸುತ್ತಾ ಜನರ ಸತ್ಯ ಮತ್ತು ಅನೃತಗಳನ್ನು ನೋಡುತ್ತಾನೆ.

'ವರುಣ ಈ ಅಬ್ದೇವತೆಗಳ ಸ್ವಾಮಿ. ಅವನು ಇವರ ನಡುವೆ ಮಧ್ಯಲೋಕದಲ್ಲಿ ಜನರ ಸತ್ಯ ಅನೃತಗಳನ್ನು ನೋಡುತ್ತಾ ಸಂಚರಿಸುವನು.'

'ಯಾಸಾಂ ರಾಜಾ ವರುಣೋ ಯಾತಿ ಮಧ್ಯೇ
ಸತ್ಯಾನೃತೇ ಅವ ಪಶ್ಯ‌ನ್ ಜನಾನಾಂ |' (7-49-3)

ದಿವ್ಯವಾದ ಅಬ್ದೇವತೆಗಳು ಮಾನವರನ್ನು ಸರ್ವವಿಧದಲ್ಲಿಯೂ ಪುನೀತರನ್ನಾಗಿ ಮಾಡುವರು. ನಮ್ಮ ಅಧರ್ಮವನ್ನು, ಹಿಂಸೆಯನ್ನು, ಪಾಪಗಳನ್ನು, ಶಾಪಗಳನ್ನು, ಅಸತ್ಯವನ್ನು ಹೋಗಲಾಡಿಸಿ ನಮ್ಮನ್ನು ಸದ್ಭಾವಯುತರಾಗಿ ಇವರು ಮಾಡುವರು. ಮತ್ತು ನಮಗೆ ಸನ್ಮಾರ್ಗ ತೋರಿಸುವರು. ದಿವ್ಯವಾದ ಔಷಧಪ್ರದಾನ ಮಾಡಿ ನಮ್ಮನ್ನು ಆರೋಗ್ಯ ದೃಢಕಾಯರನ್ನಾಗಿ ಮಾಡುವವರು ಇವರೇ. ಇವರಿಂದ ನಮಗೆ ದೀರ್ಘವಾದ ಆಯಸ್ಸೂ, ಅಮೃತವೂ ಲಭಿಸುವುದು.

'ಆಪೋ ಅಸ್ಮಾನ್ಮಾತರಃ ಶುಂಧಯಂತು'—ತಾಯಿಯರಾದ ಅಬ್ದೇವತೆಗಳು ನಮ್ಮನ್ನು ಪುನೀತರನ್ನಾಗಿ ಮಾಡಲಿ. (10-19-10)

'ಇದಮಾಪಃ ಪ್ರವಹತ ಯತ್ಕಿಂಚ ದುರಿತಂಮಯಿ |
ಯದ್ವಾಹಮಭಿದುದ್ರೋಹ ಯದ್ವಾಶೇಪ ಉತಾನೃತಮ್ || (10-9-8)
'ಯೂಯಂ ಹಿಷ್ಠಾ ಭಿಷಜಃ' (6-50-7)

"ಸಹಸ್ರವಿಧಗಳಲ್ಲಿ ಪಾವನಗೊಳಿಸುವ ಮಂಗಳರೂಪವನ್ನು ಹೊಂದಿ ಈ ಜಲದೇವತೆಗಳು ಪ್ರಕಾಶಿಸುತ್ತಾ ಇಂದ್ರಾದಿದೇವತೆಗಳ ಸ್ಥಾನವನ್ನು ಸೇರುವರು. ಇಂದ್ರನನ್ನು ತುಷ್ಟಿಗೊಳಿಸುವ ಯಜ್ಞಯಾಗಾದಿ ಕರ್ಮಗಳನ್ನಿವರು ಸಮೃದ್ಧಿಗೊಳಿಸುವರು. ಇಂಥ ಅಬ್ದೇವತೆಗಳಿಗೆ ಸ್ತೋತ್ರಗಳೊಡನೆ ಆಜ್ಯಸಹಿತವಾದ ಹವಿಸ್ಸನ್ನು ಅರ್ಪಿಸಿ."

"ಶತಪವಿತ್ರಾಃ ಸ್ವಧಯಾ ಮದಂತೀಃ
ದೇವೀರ್ದೇವಾನಾಮಪಿ ಯಂತಿ ಪಾಥಃ |
ತಾ ಇಂದ್ರಸ್ಯ ನಮಿನಂತಿ ವ್ರತಾನಿ
ಸಿಂಧುಭ್ಯೋ ಹವ್ಯಂ ಘೃತವಜ್ಜುಹೋತ ||" (7-47-3)

'ವರುಣದೇವನೂ. ಸೋಮಪವಮಾನನೂ, ವಿಶ್ವೇದೇವತೆಗಳೂ, ಅಗ್ನಿಯೂ ಸಹ ಅಬ್ದೇವತೆಗಳಲ್ಲಿ ಪ್ರವಿಷ್ಟರಾಗಿ ಇದ್ದಾರೆ. ಇಂಥ ದಿವ್ಯ ದೇವತೆಗಳು ನನ್ನನ್ನು ರಕ್ಷಿಸಲಿ.'

'ಯಾಸು ರಾಜಾವರುಣೋ ಯಾಸು ಸೋಮಃ
ವಿಶ್ವೇದೇವಾ ಯಾಸೂರ್ಜಂ ಮದಂತಿ |
ವೈಶ್ವಾನರೋ ಯಾಸ್ವಗ್ನಿಃ ಪ್ರವಿಷ್ಟಃ
ತಾ ಆಪೋದೇವೀರಿಹ ಮಾಮವಂತು ||' (7-49-4)

ಈ ಅಬ್ದೇವತೆಗಳು ಮಧುಯುತರೆಂದು ಹೇಳಿದ್ದಾರೆ. ಇವುಗಳ ಅಲೆಗಳು ಮಧುಯುತವಾಗಿ ಇಂದ್ರನಿಗೆ ಭೋಗ್ಯವಾದ ಪಾನವಾಗುವುದು. (7-47-1). ಅಬ್ದೇವತೆಗೂ ಸೋಮಪವಮಾನನಿಗೂ ನಿಕಟವಾದ ಸ್ನೇಹವಿದೆ–ಸೋಮರಸದೊಡನೆ ಜಲಮಿಶ್ರಣ ಮಾಡುವುದರಿಂದ. "ಸುಂದರಿಯಾದ ರಮಣಿಯರಲ್ಲಿ ಯುವಕ ರಮಿಸುವಂತೆ ಸೋಮ

ಅಬ್ದೇವತೆಯನ್ನು ರಮಿಸುವನು. ಯುವಕನಿಗೆ ತರುಣಿಯರು ಮನಸೋಲುವಂತೆ ಇವರೂ ಸೋಮನಿಗೆ ವಶವಾಗುವರು."

"ಯಾಭಿಃ ಸೋಮೋ ಮೋದತೇ ಹರ್ಷಟೇಚ
ಕಲ್ಯಾಣೀಭಿರ್ಯುವತಿಭಿರ್ನ ಮಯಃ |' (10-30-5)
'ಏವೇ ದ್ಯೂನೇ ಯುವತಯೋ ನಮಂತ' (10-30-6)

ಸೋಮದ ಉತ್ಪತ್ತಿ ದಿವ್ಯವಾದ ಜಲದಲ್ಲಿ ಎಂದು ಹೇಳಿರುವುದರಿಂದ ಈ ಅಬ್ದೇವತೆಗಳೂ ಸೋಮಸಮಾನವೆಂದು ಅರ್ಥವಾಗುತ್ತದೆ.

ಹೀಗೆ ಸಕಲಲೋಕ ಸಮೃದ್ಧಿ ಕಾರಣರಾದ ಅಬ್ದೇವತೆಗಳನ್ನು ಋಗ್ವೇದ ಋಷಿಗಳು ಸ್ತುತಿಸಿದ್ದಾರೆ. ಈ ದೇವತೆಗಳಲ್ಲಿ ಇವರ ಪ್ರಾರ್ಥನೆ ಇದು—

ಆಪೋ ಹಿಷ್ಠಾ ಮಯೋಭುವಃ
ತಾನ ಊರ್ಜೇ ದಧಾತನ |
ಮಹೇರಣಾಯ ಚಕ್ಷಸೇ || (10-9-1)

"ಸುಖಕರರಾಗಿರುವ ಕಾರಣದಿಂದಲೇ ನೀವು ನಮಗೆ ಅನ್ನ ಕೊಡಿ. (ಅನ್ನಪ್ರಾಪ್ತಿಗೆ ನಾವು ಯೋಗ್ಯರಾಗುವಂತೆ ಮಾಡಿ.) ಮಹತ್ತರವೂ ರಮಣೀಯವೂ ಆದ ಜ್ಞಾನ ಲಭಿಸುವಂತೆ ಅನುಗ್ರಹಿಸಿ. (ಸಮ್ಯಗ್ಜ್ಞಾನಕ್ಕೆ ನಮ್ಮನ್ನು ಯೋಗ್ಯರನ್ನಾಗಿ ಮಾಡಿ)"

"ಯೋ ವಃ ಶಿವತಮೋ ರಸಃ
ತಸ್ಯ ಭಾಜಯತೇಹ ನಃ |
ಉಶತೀರಿವ ಮಾತರಃ ||" (10-9-2)

"ಎಲೈ ಅಬ್ದೇವತೆಗಳೇ, ಪುತ್ರಸಮೃದ್ಧಿ ಬಯಸುವ ತಾಯಿಯರು ಹೇಗೊ ಹಾಗೆ (ಸ್ತನ್ಯಪಾನ ಮಾಡಿಸುವಂತೆ) ಸುಖತಮವಾದ ನಿಮ್ಮ ಜಲಗಳನ್ನು ಈ ಲೋಕದಲ್ಲಿ ನಮಗೆ ಸೇವಿಸಲು ಅನುಗ್ರಹಿಸಿ."

**ಅಪಾಂ ನ ಪಾತ್**

ಋಗ್ವೇದದಲ್ಲಿ ಅಪಾಂನಪಾತ್ ದೇವತೆಯನ್ನು ಒಂದು ಸೂಕ್ತದಲ್ಲಿ ಸ್ತುತಿಸಿದ್ದಾರೆ. ಅಲ್ಲದೆ ಪ್ರಾಸಂಗಿಕವಾಗಿ ಅಬ್ದೇವತಾಕವಾದ ಸೂಕ್ತಗಳಲ್ಲಿಯೂ ಇವನನ್ನು ಸ್ತುತಿಸಿದ್ದಾರೆ. ವೈದ್ಯುತಾಖ್ಯನಾದ ಈ ದೇವತೆ ಅಗ್ನಿಯ ಮತ್ತೊಂದು ರೂಪ. ಅಗ್ನಿ ದೇವ ಸರ್ವತ್ರ ಅಂತಃ ಪ್ರವೇಶ ಮಾಡಿದ್ದಾನೆಂದು ಅಗ್ನಿ ಸೂಕ್ತಗಳಲ್ಲಿ ಹೇಳಿದ್ದಾರೆ. ಜಲದಲ್ಲಿಯೂ ಅಗ್ನಿ ಬಡಬಾನಲ ರೂಪದಲ್ಲಿದ್ದಾನೆ. ಈ ರೂಪದಲ್ಲಿರುವ ದೇವತೆಗೆ ಅಪಾಂನಪಾತ್ ಎಂಬ ಅಭಿಧಾನ ಕೊಡಲಾಗಿದೆ. ಈ ದೇವತೆಯನ್ನು ಕೆಲವೆಡೆ ಅಗ್ನಿಯೆಂದೂ ಮತ್ತೆ ಕೆಲವೆಡೆ ಅಗ್ನಿಗಿಂತ ಭಿನ್ನನಾದವನೆಂದೂ ಹೇಳಿದ್ದಾರೆ.[56] ಅಬ್ದೇವತೆಗಳ ಪುತ್ರನಿವನು. 'ಇವನಿಗೆ ಮೂರು ಜನ ದೇವಿಯರು ಆಹಾರ ಕೊಡಲಿಚ್ಛಿಸುವರು. ಅವರು ಇವನಿಗೆ ಪಾಲುಣಿಸುವರು.' (2-35-5). ಜಲದೊಳಗೇ ಬರುವ ಈ ದೇವ ಬಲಿಷ್ಠನಾಗಿ ಬೆಳೆದು ತೇಜಸ್ವಿಯಾಗಿ ವಿರಾಜಿಸುವನು.

56. ಅಪಾಂನಪಾತ್ ಮತ್ತು ಅಗ್ನಿಗೆ ತಾದಾತ್ಮ್ಯ ಹೇಳಿರುವ ಮಂತ್ರಗಳಿವು–(2-35-15), (3-9-1), (1-143-1) ; ಅಪಾಂನಪಾತ್ ಜೊತೆಗೆ ಅಗ್ನಿ ವೃತ್ರನನ್ನು ಗೆಲ್ಲುತ್ತಾನೆಂದು ಹೇಳಿ ಇವರು ಬೇರೆ ಬೇರೆ ಎಂಬುದನ್ನು (6-13-3) ಹೇಳಿದೆ.

ಇಂಧನಗಳು ಇಲ್ಲದಿದ್ದರೂ ಅತ್ಯಂತವಾದ ಪ್ರಕಾಶ ಬೀರುವನು ಇವನು (10-30-4). ಅಪಾಂನಪಾತ್‌ದೇವ ಸ್ವರ್ಣರೂಪಿ. ವಿದ್ಯುತ್ಕವಚವನ್ನು ಧರಿಸಿರುವನಿವನು. ಪುಟವಿಟ್ಟ ಚಿನ್ನದಂತೆ ಹೊಳೆ ಹೊಳೆಯುವ ವರ್ಣವಿವನದು. ಇವನ ತೇಜಸ್ಸು ಎಂದೂ ಕುಂದದು.

'ಹಿರಣ್ಯರೂಪಃ ಸಹಿರಣ್ಯಸಂದೃಕ್
ಅಪಾಂನಪಾತ್ಸೇದು ಹಿರಣ್ಯವರ್ಣಃ |
ಹಿರಣ್ಯಯಾತ್ಪರಿಯೋನೇರ್ನಿಷದ್ಯಾ
ಹಿರಣ್ಯದಾ ದದಾತ್ಯನ್ನಮಸ್ಮೈ ||' (2-35-10)

'ಈ ಅಪಾಂನಪಾತ್‌ನ ದೇಹ ಸುವರ್ಣಮಯವಾಗಿದೆ. ಇವನ ಇಂದ್ರಿಯಗಳೂ ಸುವರ್ಣಮಯವಾಗಿವೆ. ಸ್ವರ್ಣಸದೃಶವಾದ ಕಾಂತಿಯಿಂದ ಇವನು ಕೂಡಿದ್ದಾನೆ. ಇವನು ಸ್ವರ್ಣಮಯವಾದ ಸ್ಥಾನದಿಂದ ಮೇಲೆ ಬಂದು ವಿರಾಜಮಾನನಾಗಿದ್ದಾನೆ. ಇಂಥ ದೇವತಗೆ ಸ್ವರ್ಣದಾನಿಗಳಾದ ಯಜಮಾನರು ಹವಿಸ್ಸನ್ನು ಸಮರ್ಪಿಸುತ್ತಾರೆ.'

ಈ ವರ್ಣನೆಗನುಸಾರವಾಗಿಯೇ ಛಾಂದೋಗ್ಯ ಉಪನಿಷತ್ತು ಪರಮಾತ್ಮನ ರೂಪ ವರ್ಣನೆಮಾಡುತ್ತಾ 'ಆಪ್ರಣಖಾತ್ಸರ್ವ ಏವ ಸುವರ್ಣಃ' ಎಂದು ಹೇಳುತ್ತದೆ. ಸರ್ವಾಶ್ಚರ್ಯಮಯವಾದ ಶಕ್ತಿಯನ್ನು ಹೊಂದಿರುವ ಈ ದೇವ ಸರ್ವರಿಗೂ ಮಂಗಳಾವಹನಾಗಿದ್ದಾನೆ.

ಎಲ್ಲ ಅಬ್ದೇವತೆಗಳೂ ಅಪಾಂನಪಾತ್ ದೇವತೆಯನ್ನು ಸಂತೋಷಗೊಳಿಸುತ್ತಾರೆ.

'ತಮೂ ಶುಚಿಂ ಶುಚಯೋ ದೀದಿವಾಂಸಂ
ಅಪಾಂ ನಪಾತಂ ಪರಿತಸ್ಥುರಾಪಃ |' (2-35-3)

'ಜನನಿಯರೂ ಪರಿಶುದ್ಧರೂ ಆದ ಅಬ್ದೇವತೆಗಳು ನಿರ್ಮಲನೂ ದೀಪ್ಯಮಾನನೂ ಆದ 'ಅಪಾಂನಪಾತ್' ದೇವನನ್ನು ಸುತ್ತುವರಿದು ಓಲೈಸುವರು.'

'ತಮಸ್ಮೇರಾ ಯುವತಯೋ ಯುವಾನಂ
ಮರ್ಮೃಜ್ಯಮಾನಾಃ ಪರಿಯಂತ್ಯಾಪಃ |' (2-35-4)

'ಸರಳ ಸ್ವಭಾವದ ಯುವತಿಯರು ಯುವಕರನ್ನು ಹೇಗೋ ಹಾಗೆ ಈ ಅಪಾಂನಪಾತ್ ದೇವತೆಯನ್ನು ಜಲದೇವತೆಗಳು ಅಲಂಕರಿಸುತ್ತಾ ಸುತ್ತುವರಿದಿದ್ದಾರೆ.'

ಪರಮೋತ್ಕೃಷ್ಟವಾದ ಅಂತರಿಕ್ಷ ಸ್ಥಾನದಲ್ಲಿ ಸರ್ವಕಾಲದಲ್ಲಿಯೂ ಕಳೆಗುಂದದ ಕಾಂತಿಯಿಂದ ವಿರಾಜಿಸುವ ಈ ಅಪಾನಂಪಾತ್ ದೇವನನ್ನು ಮಹತ್ವವನ್ನು ಹೊಂದಿರುವ ಜಲಗಳು ತಮ್ಮ ಸಹಜವಾದ ರೂಪದಿಂದ ಸುತ್ತುವರಿದಿದೆ.(2-35-14)

ಅಪಾಂನಪಾತ್ ದೇವತೆ ಸರ್ವಸ್ವವನ್ನೂ ಸೃಜಿಸಿದನು.

'ಅಪಾಂನಪಾದಸುರ್ಯಸ್ಯಮಹ್ನಾ
ವಿಶ್ವಾನ್ಯರ್ಯೋ ಭುವನಾ ಜಜಾನ |' (2-35-2)

'ಸ್ವಾಮಿಯಾದ ಅಪಾಂನಪಾತ್ ಶತ್ರುನಿರಸನ ಸಾಮರ್ಥ್ಯ ಹೊಂದಿ ಈ ಬಲದ ಮಹತ್ವದಿಂದ ಸರ್ವಲೋಕಗಳನ್ನೂ ಉತ್ಪಾದನೆ ಮಾಡಿದನು.'

'ಇವನಿಂದಲೇ ಅಶ್ವ ಮೊದಲಾದ ಪ್ರಾಣಿಗಳ ಜನನವೂ ಆಯಿತು. ಇವನಿಂದಲೇ ಸರ್ವ ಜಗತ್ತೂ ಹುಟ್ಟಿತು'—'ಅಶ್ವಸ್ಯಾತ್ರಜನಿಮಾಸ್ಯಚ ಸ್ವಃ' (2-35-6)

ಉಚ್ಚೈಶ್ರವಸ್ ಮೊದಲಾದ ಅಶ್ವಗಳು ಸಮುದ್ರ ಮಥನ ಕಾಲದಲ್ಲಿ ಸಮುದ್ರದಿಂದ ಜನಿಸಿದವು. ನೀರಿನಲ್ಲಿ ಅಡಗಿರುವ ತೇಜಸ್ಸಿನಿಂದ ಸರ್ವಸೃಷ್ಟಿಯಾಯಿತೆಂಬ ಅಂಶವನ್ನು

ಇದು ಸೂಚಿಸುವುದಕ್ಕೆ ಉಪಲಕ್ಷಣವಾಗಿದೆ. 'ಮೊದಲು ಜಲವನ್ನು ಸೃಜಿಸಿ ಅದರಲ್ಲಿ ವೀರ್ಯವನ್ನಿಟ್ಟನೆಂದೂ ಅದರಿಂದ ಸ್ವರ್ಣಮಯವಾದ ಅಂಡ ಉತ್ಪನ್ನವಾಯಿತೆಂದೂ' ಹೇಳಿರುವುದು ಇದಕ್ಕೆ ಸಂವಾದಿಯಾಗಿದೆ–

'ಆಪಏವ ಸಸರ್ಜಾದೌ ತಾಸುವೀರ್ಯ ಮಪಾಸೃಜತ್ | ತದಂಡಮಭವ ದ್ಧೈಮಂ' ಎಂದು ಹೇಳಿರುವುದು ಇದಕ್ಕನುಸಾರವಾಗಿಯೇ ಇದೆ. ಮೇಘದ ಮಧ್ಯದಲ್ಲಿಉದಕಗಳ ನಡುವೆ ಇರುವ ಈ ತೇಜೋರೂಪಿಯಾದ ದೇವ ವೃಷ್ಟಿಗೆ ಕಾರಣನಾಗಿ ವೃಷ್ಟಿಯ ಮುಖಾಂತರ ಸಕಲ ಲೋಕಗಳ ಜನ್ಮಕ್ಕೂ ಕಾರಣನಾಗಿದ್ದಾನೆ.

ಈ ಲೋಕದ ಸೃಷ್ಟಿವೈಚಿತ್ರ್ಯವನ್ನು ನೆನೆದರೆ ಒಂದೊಂದು ಅಂಶವೂ ಅದ್ಭುತವಾಗಿ ತೋರುವುದು. ಒಂದೊಂದೂ ಆ ಪರಮನ ಒಂದೊಂದು ರೂಪವಾಗಿದೆ. ಹೀಗೆ ಪೃಥ್ವಿ, ಜಲ, ವಾಯು, ಅಗ್ನಿ, ಪರ್ಜನ್ಯ, ಮರುತ್ ಮೊದಲಾಗಿ ಅನೇಕ ರೂಪಗಳಲ್ಲಿ ಆ ಅಮಾನುಷ ವಾದ ಶಕ್ತಿ ಮೈದೋರಿರುವುದನ್ನು ಸಾಕ್ಷಾತ್ಕರಿಸಿಕೊಂಡ ಋಷಿ ಒಂದೊಂದು ರೂಪದಲ್ಲಿಯೂ ಆ ದಿವ್ಯಶಕ್ತಿಯನ್ನು ಸ್ತುತಿಸಿದ್ದಾನೆ. ಶಕ್ತಿ ಒಂದೇ ಆದರೂ ಅದರ ರೂಪ ಅನೇಕ. ಅನೇಕೋಪಕಾರಕ ಅವನು. ಆದರಿಂದಲೇ ನಾನಾ ದೇವತೆಗಳ ರೂಪದಲ್ಲಿ ಸ್ತುತಿಗಳು ಬಂದಿವೆ. ಹೀಗೆ ನೋಡಿದಲ್ಲಿ ಅಪಾಂನಪಾತ್ ದೇವ ಜಗತ್ಕಾರಣನಾದ ಪರಬ್ರಹ್ಮರೂಪಿಯಾಗುತ್ತಾನೆ.

ಅಪಾಂನಪಾತ್ ದೇವ ಸಕಲ ಮಂಗಳಗುಣಪೂರ್ಣನು. ಸತ್ಯಸ್ವರೂಪಿ ಸದಾ ಏಕರೂಪ ದಿಂದಿರುವವನು. ತನ್ನ ಸ್ವಂತ ತೇಜಸ್ಸಿನಿಂದ ಅದ್ಭುತವಾಗಿ ಪ್ರಕಾಶಿಸುವನಿವನು.

'ಯೋ ಅಪ್ಸ್ವಾ ಶುಚಿನಾ ದೈವ್ಯೇನ
ಋತಾವಾ ಅಜಸ್ರ: ಉರ್ವಿಯಾವಿಭಾತಿ |
ವಯಾ ಇದನ್ಯಾ ಭುವನಾನ್ಯಸ್ಯ
ಪ್ರಜಾಯಂತೇ ವೀರುಧಶ್ಚ ಪ್ರಜಾಭಿಃ ||' (2-35-8)

'ಅಪಾಂನಪಾತ್ ಸತ್ಯರೂಪಿ. ನಿತ್ಯ. ಏಕರೂಪಿ. ವಿಸ್ತೀರ್ಣವಾದ ಮೇಘಗಳ ನಡುವೆ ಹೊಳೆಹೊಳೆಯುವ ದಿವ್ಯ ತೇಜಸ್ಸಿನಿಂದ ಹೆಚ್ಚಾಗಿ ಪ್ರಕಾಶಿಸುವನು. ಸರ್ವ ಭೂತಜಾತಗಳೂ ಈ ದೇವನ ಶಾಖೋಪಶಾಖೆಗಳು. ವೃಕ್ಷಾದಿಗಳೂ ಇವನಿಂದಲೇ ಜನಿಸಿ ಪುಷ್ಪಫಲಾದಿಗಳನ್ನು ಹೊಂದುತ್ತವೆ.'

'ಸಈಂ ವೃಷಾ ಅಜನಯತ್ ತಾಸು ಗರ್ಭಂ
ಸ ಈಂಶಿಶುರ್ಧಯತಿ ತಂ ರಿಹಂತಿ |
ಸೋ ಅಪಾಂನಪಾತ್ ಅನಭಿಮ್ಲಾತ ವರ್ಣ:
ಅನ್ಯಸ್ಯೇವೇಹ ತನ್ವಾ ವಿವೇಷ || (5-35-13)

'ಈ ಅಪಾಂನಪಾತ್ ದೇವನೇ ಮಳೆಯನ್ನು ಕರೆಯುವವನಾಗಿ ಮೇಘಗಳ ಜಲದೊಳಗೆ ತಾನೇ ಗರ್ಭರೂಪದಿಂದ ಸೇರಿದ. ಇವನೇ ವೈದ್ಯುತಾಗ್ನಿಯ ರೂಪಧರಿಸಿ ಆ ಮೇಘದಲ್ಲಡ ಗಿರುವ ಜಲಗಳ ಪುತ್ರನಾಗಿ ಆ ಜಲವನ್ನು ಸೇವಿಸುತ್ತಾನೆ. ಮಳೆಯೊಡನೆ ಭೂಮಿಯನ್ನು ಇವನೇ ಸೇರಿ ಸ್ವಲ್ಪವೂ ಕುಂದದ ಕಾಂತಿಯುಳ್ಳವನಾಗಿ ಮರ ಮೊದಲಾದ ಚರಾಚರಗಳೊಳಗೆ ಪಾರ್ಥಿವಾಗ್ನಿಯ ರೂಪದಿಂದ ಸೇರಿದ್ದಾನೆ.'

ಈ ಮಂತ್ರದಲ್ಲಿ 'ಅಪಾಂನಪಾತ್ ಸರ್ವಚರಾಚರಗಳಲ್ಲಿಯೂ ಅಂತಃಪ್ರವೇಶ ಮಾಡಿ ಅವುಗಳನ್ನು ಪ್ರೇರಿಸುತ್ತಿದ್ದಾನೆ. ಆದರೂ ಸ್ವತೇಜಸ್ಸಿನಿಂದಲೇ ದೇದೀಪ್ಯಮಾನನಾಗಿದ್ದಾನೆ

ದೋಷದೂರನಾಗಿ' ಎಂಬ ಭಾವ ಇದೆ. ಮರ, ಕಲ್ಲು ಮೊದಲಾದವುಗಳೊಳಗೆ ಗೂಢವಾಗಿ ಅಂತಃ ಪ್ರವೇಶಿಸಿದ್ದಾನೆ ಇವನು ತನ್ನ ಕಾಂತಿಯನ್ನು ಸ್ವಲ್ಪವೂ ಕಳೆದುಕೊಳ್ಳದೆ. ಹಾಗೆಯೇ ಅಂತರಿಕ್ಷದಲ್ಲಿ ಮೇಘೋದರಾಂತರ್ಗತನಾಗಿದ್ದಾನೆ. ಹೀಗೆ ಸ್ವತೇಜಸ್ಸಿನಿಂದ ದೀಪ್ತನಾಗಿ ಸರ್ವತ್ರ ಇರುವ ಮಹಾನುಭಾವನಿವನು.

ಇಂಥ ದೇವನನ್ನು ಸರ್ವವಿಧವಾದ ಸ್ತೋತ್ರಾದಿಗಳಿಂದ ಅರ್ಚಿಸಿ ಧನ್ಯರಾಗಬೇಕು. ದ್ರೋಹಿಗಳಿಂದಲೂ, ಹಿಂಸಕರಿಂದಲೂ ಸ್ತುತಿಪಾಠಕರಿಂದಲೂ ನಮ್ಮನ್ನು ರಕ್ಷಿಸಬೇಕೆಂದು ಬೇಡಿದ್ದಾರೆ–'ದ್ರುಹೋರಿಷಃ ಸಂಪೃಚಃ ಪಾಹಿಸೂರೀನ್' (2-35-6). ಈ ದೇವನಲ್ಲಿ ಸರ್ವವಿಧವಾದ ಪೂಜೆಯನ್ನೂ ಅರ್ಪಿಸಬೇಕು. 'ಇವನು ದೇವತೆಗಳಲ್ಲಿ ಆದಿದೇವ. ಯಾಗಸಾಧನಗಳಿಂದ ಯಾಗಮಾಡಿ ಸಂತೋಷಪಡಿಸೋಣ ಇವನನ್ನು. ನಮಸ್ಕರಿಸೋಣ. ಇವನಿಗೆ ಯುಕ್ತವಾದ ಪ್ರದೇಶಗಳನ್ನು ಅಲಂಕರಿಸೋಣ, ಸಿದ್ಧಪಡಿಸೋಣ. ಕಾಷ್ಠಾದಿಗಳಿಂದ ಅಗ್ನಿರೂಪಿಯಾದ ಇವನನ್ನು ತುಷ್ಟಿಪಡಿಸೋಣ. ಹವಿಸ್ಸನ್ನು ಅರ್ಪಿಸೋಣ. ಮಂತ್ರಗಳನ್ನು ಪಠಿಸಿ ಪ್ರಸನ್ನನಾಗುವಂತೆ ಮಾಡೋಣ' (2-35-12).

ಇವನಲ್ಲಿ ಋಷಿಗಳ ಪ್ರಾರ್ಥನೆಯಾದರೋ–

'ಅಯಾಂಸಮಗ್ನೇ ಸುಕ್ಷಿತಿಂ ಜನಾಯ
ಅಯಾಂಸಮು ಮಘವದ್ಭ್ಯಃ ಸುವೃಕ್ತಿಮ್
ವಿಶ್ವಂ ಯದ್ಭದ್ರಂ ತದವಂತಿ ದೇವಾಃ
ಬೃಹದ್ವದೇಮ ವಿದಥೇ ಸುವೀರಾಃ ॥ (2-35-15)

'ಎಲೈ ಅಗ್ನಿರೂಪಿಯೇ, ಶೋಭನನಿವಾಸನಾದ ನಿನ್ನನ್ನು ನಾನು ಬಂದು ಸೇರಿದೆ ನಮ್ಮ ಪುತ್ರಾದಿಗಳ ಅಭಿವೃದ್ಧಿಗಾಗಿ, ಉದಾರಿಗಳಾದ ಯಾಜಕರಿಂದ ಮಂಗಳಕರವಾದ ನಿನ್ನ ಸ್ತುತಿಗಳೊಡನೆ ಬಂದಿದ್ದೇನೆ. ಸರ್ವದೇವತೆಗಳೂ ರಕ್ಷಿಸಿ ಅನುಗ್ರಹಿಸುವಂತಹ ಸಮಸ್ತ ಮಂಗಳವೂ ನಮಗಾಗಲಿ. ಸುಪುತ್ರರೊಡನೆ ನಾವು ಯಜ್ಞದಲ್ಲಿ ನಿನ್ನನ್ನು ಪ್ರೌಢವಾಗಿ ಸ್ತುತಿಸುವಂತಾಗಲಿ.'

## ರುದ್ರ

ರುದ್ರನನ್ನು ಕೇವಲ ಮೂರು ಸೂಕ್ತಗಳಲ್ಲಿ ಮಾತ್ರ ಋಗ್ವೇದದಲ್ಲಿ ಸ್ತುತಿಸಿರುವುದನ್ನು ಕಾಣುತ್ತೇವೆ. ಸೋಮನೊಡನೆ ರುದ್ರನೂ ಸೇರಿ ದ್ವಂದ್ವವಾಗಿ ಒಂದು ಸೂಕ್ತದಲ್ಲಿ ಸ್ತುತಿಸಲ್ಪಟ್ಟಿದ್ದಾನೆ. ಇವನ ಹೆಸರು ಋಗ್ವೇದದಲ್ಲಿ ಕೇವಲ 75 ಬಾರಿ ಬಂದಿದೆ. ರುದ್ರನೆಂಬ ಹೆಸರು ಸೂಚಿಸುವಂತೆಯೇ ಇವನು ದಂಡಧಾರಕನಾಗಿದ್ದಾನೆ. ಹಾಗೆಯೇ ಮಾನವನನ್ನು ವಿಪತ್ತಿನಿಂದ ಪಾರುಗಾಣಿಸುವ ಮಹಾನುಭಾವನೂ ಇವನೇ ಆಗಿದ್ದಾನೆ. ಆದರಿಂದಲೇ ಶಿವನೆಂಬ ಹೆಸರೂ ಇವನಿಗೆ ಅನ್ವರ್ಥವಾಗಿದೆ. ಶಿವಃ ಎಂಬ ಶಬ್ದ 18 ಬಾರಿ ಋಗ್ವೇದದಲ್ಲಿ ಬಳಸಿದೆ. ಸುಖಕರನೆಂಬ ಅರ್ಥದಲ್ಲಿ ಈ ಪದವನ್ನು ಬಳಸಿದೆ.

ಈತನ ರೂಪವರ್ಣನೆಯನ್ನು ಋಗ್ವೇದ ಹೀಗೆ ಮಾಡಿದೆ: ದೃಢವಾದ ಬಾಹು ಮತ್ತು ಹಸ್ತಗಳೊಡನೆ ಶೋಭಿಸಿದವನಿವನು. ಬಭ್ರುವರ್ಣದಿಂದ ವಿರಾಜಮಾನವಾದ ದೇಹ, ಪೂಷನ್ನಿನಂತೆ ಜಟಾಯುಕ್ತವಾದ ರೂಪ, (ಕಪರ್ದಿನಂ) (1-114-115), ಅನೇಕ ರೂಪದಿಂದ ಕೂಡಿದ ವೈಭವ (2-33-9), ಉಜ್ವಲನಾದ ಸೂರ್ಯನಂತೆ, ಸ್ವರ್ಣದಂತೆ ಪ್ರಜ್ವಲಿಸುವ ದೇಹಕಾಂತಿ, ಸ್ವರ್ಣಮಯವಾದ ಆಭರಣಗಳ ಸೊಗಸು (2-33-9), ಅತ್ಯುಜ್ವಲವಾದ ನಾನಾ

ರೂಪದ ಹಾರ (2-33-10), ಇವುಗಳಿಂದ ಪರಿಶೋಭಿತನಿವನು.[57] (ವಾಜಸನೇಯಿಸಂಹಿತೆ ಮತ್ತು ಅಥರ್ವಣ ವೇದದಲ್ಲಿ–ಇವನನ್ನೇ ಸಹಸ್ರಾಕ್ಷನೆಂದೂ, (ವಾ.ಸ-16-7) ನೀಲಕಂಠನೆಂದೂ ನೀಲ ಜಟಾಯುತನೆಂದೂ, ಚರ್ಮಾಂಬರನೆಂದೂ (ವಾ. ಸ. 36-1;16-5). ಪರ್ವತವಾಸಿಯೆಂದೂ (ವಾ. ಸ.16-2-4) ಹೇಳಿದೆ.)

ಇಂಥ ಈ ದೇವ ಕೈಯಲ್ಲಿ ವಜ್ರಾಯುಧ ಹಿಡಿದಿದ್ದಾನೆ (2-33-3). ಮಿಂಚಿನಂತೆ ಅವನ ಬಾಣ ಲೋಕವನ್ನೆಲ್ಲಾ ಮುಟ್ಟುವುದು. ಬಿಲ್ಲು ಮತ್ತು ಬಾಣಗಳನ್ನು ಇವನು ಧರಿಸಿದ್ದಾನೆಂದೂ ಅನೇಕ ಕಡೆ ಹೇಳಿದೆ.

'ಅರ್ಹನ್ಬಿಭರ್ಷಿ ಸಾಯಕಾನಿ ಧನ್ವ
ಅರ್ಹನ್ನಿದಂ ಯಜತಂ ವಿಶ್ವರೂಪಂ |
ಅರ್ಹನ್ನಿದಂ ದಯಸೇ ವಿಶ್ವಮಭ್ವಂ
ನ ವಾ ಓಜೀಯೋ ರುದ್ರ ತ್ವದಸ್ತಿ ||' (2-33-10)

'ಎಲೈ ರುದ್ರನೇ, ನೀನು ಸಮರ್ಥನಾದುದರಿಂದಲೇ ಧನುಸ್ಸನ್ನೂ ಬಾಣಗಳನ್ನೂ ಧರಿಸಿದ್ದೀಯೆ. ಹಾಗೆಯೇ ಬಹು ವಿಧವಾದ ರೂಪವುಳ್ಳ ಹಾರವನ್ನೂ ಹೊಂದಿದ್ದೀಯೆ. ರಕ್ಷಣೆಗೆ ಸಮರ್ಥನಾದುದರಿಂದಲೇ ಈ ಅತಿಮಹತ್ತರವಾದ ವಿಶ್ವವನ್ನು ದಯೆತೋರಿ ರಕ್ಷಿಸುವೆ. ಎಲೌ ದೇವ, ನಿನಗಿಂತ ಬಲವತ್ತರರಾದವರೊಬ್ಬರೂ ಇಲ್ಲವಷ್ಟೆ!'

ಸ್ಥಿರೇಭಿರಂಗೈಃ ಪುರುರೂಪ ಉಗ್ರೋ
ಬಭ್ರುಃ ಶುಕ್ರೇಭಿಃ ಪಿಪಿಶೇ ಹಿರಣ್ಯೈಃ |
ಈಶಾನಾದಸ್ಯ ಭುವನಸ್ಯ ಭೂರೇಃ
ನ ವಾ ಉ ಯೋಷದ್ರುದ್ರಾದಸುರ್ಯಂ || (2-33-9)

"ದೃಢವಾದ ಅವಯವಯುತನೂ, ಬಹುರೂಪಯುತನೂ, ಅತ್ಯಂತ ತೇಜಸ್ವಿಯೂ ಶೋಭಿತನೂ ಆದ ರುದ್ರದೇವನು ದೀಪ್ತವೂ ಹಿರಣ್ಮಯವೂ ಆದ ಅಲಂಕಾರಗಳಿಂದ ಜ್ವಲಿಸುತ್ತಿದ್ದಾನೆ. ಈಶ್ವರನಾದವನೂ, ಈ ಲೋಕವನ್ನು ಧರಿಸಿರುವವನೂ ಆದ ರುದ್ರನ ಬಲ ಎಂದೂ ಅವನಿಂದ ದೂರವಾಗದು."

ಮರುದ್ದೇವತೆಗಳ ಜನಕನು ರುದ್ರನೆಂದೂ ಹೇಳಿದೆ–'ಆ ತೇ ಪಿತರ್ಮರುತಾಂ ಸುಮ್ನಮೇತು' (2-33-1) ಎಂದು. ಸಮಸ್ತ ಜಗತ್ತುಗಳ ಮಧ್ಯದಲ್ಲಿ ತನ್ನ ಮಹದೈಶ್ವರ್ಯಯೋಗದಿಂದ ರುದ್ರದೇವ ಶ್ರೇಷ್ಠನಾಗಿದ್ದಾನೆ.

"ಶ್ರೇಷ್ಠೋ ಜಾತಸ್ಯ ರುದ್ರ ಶ್ರಿಯಾಸಿ
ತವಸ್ತಮಸ್ತವಸಾ ವಜ್ರಬಾಹೋ |
ಪರ್ಷಿಣಃ ಪಾರಮಂಹಸಃ ಸ್ವಸ್ತಿ
ವಿಶ್ವಾ ಅಭೀತೀರಪಸೋಯುಯೋಧಿ ||" (2-33-3)

"ಎಲೈ ರುದ್ರದೇವ, ಜನಿಸಿರುವ ಸಮಸ್ತ ಜಗತ್ತುಗಳ ನಡುವೆ ಸ್ವೈಶರ್ಯದಿಂದ ಪ್ರಶಸ್ಯತಮನಾಗಿದ್ದೀಯೆ. ಓ ವಜ್ರಬಾಹು, ನೀನು ಪ್ರವೃದ್ಧರಾದವರಲ್ಲಿ ಅತ್ಯಂತ ಪ್ರವೃದ್ಧ. ನಮ್ಮನ್ನು

57. ವಾಜಸನೇಯೀಸಂಹಿತೆ (3, 5, 8) ಶತಪಥ ಬ್ರಾಹ್ಮಣ (2-6-29)ದಲ್ಲಿ ರುದ್ರನಿಗೆ ತ್ರ್ಯಂಬಕನೆಂಬ ವಿಶೇಷಣ ಕೊಡಲಾಗಿದೆ. ಋಗ್ವೇದದಲ್ಲಿಯೂ (7-59-12)ರಲ್ಲಿ ಈ ಹೆಸರು ಬಂದಿದೆ. ವಾ. ಸ. (3-5) ರಲ್ಲಿ ಅಂಬಿಕಾಶಬ್ದವನ್ನು ಪ್ರಯೋಗಿಸಿದೆ. ಇಲ್ಲಿ ಇದು ಶಿವನ ಸೋದರಿ ಎಂಬ ಅರ್ಥದಲ್ಲಿ ಬಂದಿದೆ. ಉಮಾ ಪದ ಮೊಟ್ಟಮೊದಲಾಗಿ ಕೇನೋಪನಿಷತ್ತಿನಲ್ಲಿ ಬಂದಿದೆ.

ಸುರಕ್ಷಿತವಾಗಿ ಪಾಪದ ಕೊನೆಮುಟ್ಟಿಸು. ಹಾಗೆಯೇ ಪಾಪದ ಸರ್ವ ವಿಧವಾದ ಆಕ್ರಮಣ ಗಳನ್ನೂ ಖಂಡಿಸು."

ರುದ್ರನನ್ನು ಅಗ್ನಿಯೊಡನೆ ತಾದಾತ್ಮ್ಯದಿಂದ ಹೇಳಿದ್ದಾರೆ. ಋಗ್ವೇದದಲ್ಲಿ (2-1-6) ರುದ್ರನು ಭಯಂಕರ ರೂಪವನ್ನು ಹೊಂದಿದ್ದಾನೆ. ಸಿಂಹದಂತೆ ಭಯಂಕರನೂ, ಶತ್ರುಗಳ ಹಂತಾರನೂ ಆದವನಿವನು. ಕೆಳಗಿನ ಮಂತ್ರವನ್ನು ನೋಡಿ—

ಸ್ತುಹಿ ಶ್ರುತಂ ಗರ್ತಸದಂ ಯುವಾನಂ
ಮೃಗಂನ ಭೀಮಮುಪಹತ್ನುಮುಗ್ರಂ |
ಮೃಳಾ ಜರಿತ್ರೇ ರುದ್ರಸ್ತವಾನೋಽನ್ಯಂ
ತೇ ಅಸ್ಮನ್ನಿವಪಂತು ಸೇನಾಃ || (2-33-11)

'ಎಲೈ ಸ್ತುತಿಮಾಡುವವನೇ, ರಥದಲ್ಲಿ ಸಂಚರಿಸುವವನೂ, ನಿತ್ಯ ತರುಣನೂ, ಸಿಂಹದಂತೆ ಭಯಂಕರನೂ, ಶತ್ರುಧ್ವಂಸಕನೂ, ಉಗ್ರಸ್ವರೂಪಿಯೂ ಆದ ರುದ್ರನನ್ನು ಸ್ತುತಿಸು. ಹೇ ರುದ್ರನೇ, ನಮ್ಮಿಂದ ಸ್ತುತನಾಗಿ, ಸ್ತುತಿಸುವ ನಮ್ಮನ್ನು ಸುಖಿಗೊಳಿಸು. ನಿನ್ನ ಸೇನೆಗಳು ನಮ್ಮನ್ನು ಬಿಟ್ಟು ಇತರರನ್ನು ದಂಡಿಸಲಿ'. ಕಾಮ ವರ್ಷಕನಾದುದರಿಂದ ಇವನು ವೃಷಭ. (2-33-7). ಅನಭಿಭವನೀಯನಿವನು. ಶಕ್ತಿಯಲ್ಲಿ ಇವನನ್ನು ಮೀರಿಸಿದವರಿಲ್ಲ. ಈ ಸಮಸ್ತ ಪ್ರಪಂಚಕ್ಕೂ ಒಡೆಯನಾಗಿ 'ಈಶಾನ' ಶಬ್ದವಾಚ್ಯನಿವನಾಗಿದ್ದಾನೆ. ಸಕಲ ಲೋಕಕ್ಕೂ ರುದ್ರದೇವ ತಂದೆ–'ಭುವನಸ್ಯಪಿತರಂ' (6-49-10); ಲೋಕವನ್ನು ನಿಯಮಕ್ಕೊಳಪಡಿಸಿ ನಡೆಸುತ್ತಿರುವವನಿವನೇ. ತನ್ನ ಶಾಸನದಿಂದ ಇವನು ಮಾನವರ ಮತ್ತು ದೇವತೆಗಳೆಲ್ಲರ ಕೆಲಸಗಳನ್ನರಿಯಬಲ್ಲನು. ಇವನು–

"ಸ ಹಿ ಕ್ಷಯೇಣ ಕ್ಷಮಸ್ಯ ಜನ್ಮನಃ
ಸಾಮ್ರಾಜ್ಯೇನ ದಿವ್ಯಸ್ಯ ಚೇತತೆ |" (7-46-2)

ನದಿಯು ಪ್ರವಹಿಸುವಂತೆ ಮಾಡುವ ಇವನು ಎಲ್ಲವನ್ನೂ ನೆನೆಸುತ್ತಾನೆ. (10-92-5) ಇವನು ಮೇಧಾವಿ, ಬುದ್ಧಿವಂತ. ದಯಾಮಯನೂ ಹೌದು. ಇವನ ಔದಾರ್ಯವನ್ನು 'ಮೀಢ್ವಃ' ಎಂದು ಅನೇಕ ಬಾರಿ ಹೊಗಳಿದ್ದಾರೆ.

ಮಂಗಳಕರನಾದ ಕಾರಣ 'ಶಿವ'ನೆಂದು ಪ್ರಖ್ಯಾತನಾದ ಇವನನ್ನು ಸ್ತುತಿಸಿರೆಂದು ಹೇಳಿಯವ ಈ ಮಂತ್ರವನ್ನು ನೋಡಿ :

ಸ್ತೋಮಂ ವೋ ಅದ್ಯ ರುದ್ರಾಯ ಶಿಕ್ವಸೇ
ಕ್ಷಯದ್ವೀರಾಯ ನಮಸಾ ದಿದಿಷ್ಟನ |
ಯೇಭಿಃ ಶಿವಃ ಸ್ವವಾಂ ಏವಯಾವಭಿಃ
ದಿವಃ ಸಿಷಕ್ತಿ ಸ್ವಯಶಾ ನಿಕಾಮಭಿಃ || (10-92-9)

"ಕುದುರೆಗಳ ಮೇಲೆ ಕುಳಿತು ಬರುವ ಮರುತ್ತುಗಳೊಡನೆ ಸ್ವತಃ ಕೀರ್ತಿವಂತನೂ (ಶಿವಃ) ಸುಖಕರನೂ ಆದ ಪರಮೇಶ್ವರನು[58] ದ್ಯುಲೋಕದಿಂದ ಯಜಮಾನರನ್ನು ಸೇವಿಸುವನು.

---

58. ವಾ. ಸಂ. (16, 18, 28) ರಲ್ಲಿ ಶರ್ವ, ಭವ ಎಂಬ ಹೆಸರುಗಳನ್ನು ಕೊಟ್ಟಿದೆ. ವಾ. ಸಂ. (39, 8) ರಲ್ಲಿ ಅಗ್ನಿ, ಅಶನಿ, ಪಶುಪತಿ, ಭವ, ಶರ್ವ, ಈಶಾನ, ಮಹಾದೇವ, ಉಗ್ರದೇವ–ಇವೆಲ್ಲ ಒಬ್ಬನೇ ದೇವನ ರೂಪಗಳೆಂದು ಹೇಳಿದೆ. ರುದ್ರ, ಶರ್ವ, ಪಶುಪತಿ, ಉಗ್ರ, ಅಶನಿ, ಭವ, ಮಹಾದೇವ– ಇವು ಅಗ್ನಿಯ ಎಂಟು ರೂಪಗಳೆಂದು–(ಶ. ಬ್ರಾ. 6-1-37)ರಲ್ಲಿ ಹೇಳಿದೆ.

ಅದರಿಂದ ಎಲೈ ಋತ್ವಿಕ್ಕುಗಳೇ, ನೀವೂ ಸಹಾ ಈ ಯಾಗದಲ್ಲಿ, ನಿಯತವಾದ ಅಭಿಲಾಷೆ ಹೊಂದಿದ ಮರುತ್ತುಗಳಿಂದ ಕೂಡಿದ, ಶತ್ರು ಧ್ವಂಸಕನೂ, ರಕ್ಷಿಸಲು ಶಕ್ತನೂ ಆದ ರುದ್ರನಿಗೆ ಹವಿಸ್ಸುಗಳಿಂದಲೂ, ನಮಸ್ಕಾರಗಳಿಂದಲೂ ಸ್ತೋತ್ರವನ್ನು ಅರ್ಪಿಸಿರಿ."

ಋಗ್ವೇದದಲ್ಲಿ ರುದ್ರನ ಭಯಂಕರ ರೂಪಮಾತ್ರ ಹೇಳಿಲ್ಲ. ಅವನ ಸರ್ವರಕ್ಷಕತ್ವವೂ, ಕಾರುಣ್ಯವೂ ಅನೇಕ ಬಾರಿ ವರ್ಣಿಸಲಾಗಿವೆ. ದೇವತೆಗಳ ಕೋಪವನ್ನು ಕಳೆಯಬೇಕೆಂದೂ, ಕಷ್ಟದಿಂದ ರಕ್ಷಿಸಬೇಕೆಂದೂ ಇವನಿಗೆ ಮೊರೆಯಿಟ್ಟಿದ್ದಾರೆ. ರೋಗವನ್ನು ಕಳೆಯುವ ಅಪಾರಶಕ್ತಿ ಇವನದು–

'ಭಿಷಕ್ತಮಂ ತ್ವಾ ಭಿಷಜಾ ಶೃಣೋಮಿ' ಎಂದು ಕೊಂಡಾಡಿದ್ದಾರೆ.

'ತ್ವಾ ದತ್ತೇಭೀ ರುದ್ರ ಶಂತಮೇಭಿಃ
ಶತಂ ಹಿಮಾ ಅಶೀಯ ಭೇಷಜೇಭಿಃ |' (2-33-2)

"ನೀನು ಕರುಣಿಸಿದ ಅತಿಶಯವಾಗಿ ಸುಖಕರವಾದ ಔಷಧಗಳಿಂದ ನೂರು ಹೇಮಂತ ಕಾಲವನ್ನು ನಾನು ಕಳೆಯುವಂತಾಗಲಿ."

ರುದ್ರನು ಅತ್ಯಂತ ಶ್ರೇಷ್ಠವಾದ ವೈದ್ಯರಾಜನಾಗಿದ್ದಾನೆ ಋಗ್ವೇದದಲ್ಲಿ. ಇವನಲ್ಲಿ ಸಹಸ್ರಾರು ಔಷಧಿಗಳಿವೆ–'ಸಹಸ್ರಂತೇ ಸ್ವಪಿವಾತ ಭೇಷಜಾ' (7-46-3). ತನ್ನ ಕರದಲ್ಲಿ ಅತ್ಯುತ್ತಮವಾದ ಔಷಧಿಯನ್ನಿವನು ಹೊಂದಿದ್ದಾನೆ–"ಹಸ್ತೇಬಿಭ್ರದ್ಭೇಷಜಾ ವಾರ್ಯಾಣಿ" (1-114-5) ; ಅವನ ಹಸ್ತ ಸರ್ವ ಸುಖಕರವೂ ರೋಗಪರಿಹಾರಕವೂ ಆದುದು–

"ಕ್ವ ಸ್ಯ ತೇ ರುದ್ರ ಮೃಳಯಾಕುರ್ಹಸ್ತೋ
ಯೋ ಅಸ್ತಿಭೇಷಜೋ ಜಲಾಷಃ " (2-33-7)

'ಎಲೈ ರುದ್ರನೇ, ಸುಖಗೊಳಿಸುವ ಆ ನಿನ್ನ ಹಸ್ತವೆಲ್ಲಿ ? ಅದಾದರೂ ಭೇಷಜ ಮಾಡಿ ಸರ್ವರಿಗೂ ಸುಖಕರವಾಗಿದೆ.'

ರೋಗ ಪರಿಹಾರಕವಾದ ಈ ಔಷಧಗಳು ಪ್ರಾಯಃ ಮಳೆಯೇ ಆಗಿರಬಹುದೆಂದು ಪಾಶ್ಚಾತ್ಯರ ಅಭಿಪ್ರಾಯ. ರುದ್ರನ ಸ್ವರೂಪನಿರೂಪಕವಾದ ಧರ್ಮಗಳೆರಡು. ಅವಾದರೂ ಅವನ ಕೈಯಲ್ಲಿರುವ ಕೂರಾದ ಆಯುಧ ಹಾಗೂ ಔಷಧಕರಣ.

ವಾಚ್ಯವಾಗಿ ಹೆಸರು ಹೇಳದೆ ಈ ದೇವತೆಯನ್ನೇ ಸ್ತುತಿಸುವ ಈ ಮಂತ್ರವನ್ನು ನೋಡಿ :

'ತಿಗ್ಮಮೇಕೋ ಬಿಭರ್ತಿ ಹಸ್ತ ಆಯುಧಂ ಶುಚಿರುಗ್ರೋ ಜಲಾಷ ಭೇಷಜಃ !' (8-29-5)

'ಸ್ವತೇಜಸ್ಸಿನಿಂದ ಸರ್ವತಃ ದೀಪ್ಯಮಾನನಾದವನೂ, ಅತ್ಯಂತ ಬಲಯುತನೂ, ರೋಗ ಪರಿಹಾರಕನಾಗಿ ಸುಖಕರನೂ, ಆದ ಒಬ್ಬನು ಕೂರಾದ ಆಯುಧವನ್ನು ಕೈಲಿ ಹಿಡಿದಿದ್ದಾನೆ.' (7-46-3)ರಲ್ಲಿಯೂ ಈ ಅಭಿಪ್ರಾಯವನ್ನು ನಾವು ನೋಡುತ್ತೇವೆ.

ಇಂಥ ಮಹಿಮಾನ್ವಿತನಿವನು. ಅತಿ ಪ್ರತಾಪಶಾಲಿಯಾದರೂ ಕಾರುಣ್ಯಮೂರ್ತಿಯೆನಿಸಿ ಉದಾರಿಯಾಗಿದ್ದಾನೆ ರುದ್ರದೇವ. 'ಭೂರೇರ್ದಾತಾರಾಂ ಸತ್ಪತಿಂ' ಆದ ಇವನನ್ನು ಸೇವೆ ಮಾಡುವಂತಾಗಲಿ ಎಂದು ಋಷಿ ಹಂಬಲಿಸಿದ್ದಾರೆ–

'ಘೃಣೇವ ಛಾಯಾಮರಪಾ ಅಶೀಯಾ
ವಿವಾಸೇಯಂ ರುದ್ರಸ್ಯ ಸುಮ್ನಮ್ |' (2-33-6)

'ಸೂರ್ಯನ ಕಿರಣಗಳಿಂದ ಸಂತಪ್ತನಾದವನು ನೆರಳನ್ನು ಬಯಸಿ ಹೋಗುವಂತೆ ನಾನೂ

ಸಹ ಪಾಪದೂರನಾಗಿ ರುದ್ರದೇವನು ಕರುಣಿಸುವ ಸುಖವನ್ನು ಪಡೆಯುವಂತಾಗಲಿ. ಅದಕ್ಕಾಗಿ ಅವನನ್ನು ನಾನು ಸೇವಿಸುವಂತಾಗಲಿ.'

ಮಹಾಮಹಿಮನಾದ ರುದ್ರದೇವನಲ್ಲಿ ಋಷಿಗಳ ಪ್ರಾರ್ಥನೆಯಿದು–

'ಮಾ ನೋ ವಧೀ ರುದ್ರ ಮಾ ಪರಾದಾಃ
ಮಾ ತೇ ಭೂಮ ಪ್ರಸಿತೌ ಹೀಳಿತಸ್ಯ !
ಆ ನೋ ಭಜ ಬರ್ಹಿಷಿ ಜೀವಶಂಸೇ
ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ||' (7-47-4)

"ಎಲೈ ರುದ್ರನೇ, ನಮ್ಮನ್ನು ಹಿಂಸಿಸಬೇಡ ; ನಮ್ಮ ಕೈ ಬಿಡಬೇಡ. ಕುಪಿತನಾದ ನಿನ್ನ ಬಂಧನಕ್ಕೆ ನಾವು ಸಿಕ್ಕದಂತಾಗಲಿ. ಬಹಳವಾಗಿ ಜನ ಬಯಸುವ ಯಾಗಾದಿಗಳಲ್ಲಿ ನಮಗೆ ಭಾಗ ದೊರೆಯುವಂತಾಗಲಿ. ನಮ್ಮನ್ನು ನೀನು ಸೇರು. ರುದ್ರ ಪ್ರಮುಖರಾದ ದೇವತೆಗಳೇ, ನೀವು ಸದಾ ಮಂಗಳವನ್ನುಂಟುಮಾಡಿ ನಮ್ಮನ್ನು ರಕ್ಷಿಸಿ."[59]

## ಮರುದ್ದೇವತೆಗಳು

ಮರುದ್ದೇವತೆಗಳು ಋಗ್ವೇದದಲ್ಲಿ ಪ್ರಧಾನರಾಗಿದ್ದಾರೆ. ಮೂವತ್ತು ಮೂರು ಸೂಕ್ತಗಳು ಈ ದೇವತೆಗಳನ್ನು ಸ್ತುತಿಸುವುವು. ಅಗ್ನಿ, ಪೂಷ ಮತ್ತು ಇಂದ್ರ–ಇವರೊಡನೆ ಮರುತ್ತುಗಳನ್ನು ಸೇರಿಸಿ ಸ್ತುತಿಸಿದ್ದಾರೆ. ಇವರು ಒಂದು ಗುಣವನ್ನು ಪ್ರತಿನಿಧಿಸುತ್ತಾರೆ. ಅವರ ಸಂಖ್ಯೆ 21 ಎಂದೂ (1-133-6) ಅಥವಾ 180 ಎಂದೂ ಹೇಳಿದೆ (8-85-8). ರುದ್ರ ಮತ್ತು ಪೃಶ್ನಿಯ ಕುಮಾರರೆಂದು ಹೇಳಿದೆ (11-33). ರುದ್ರಾಃ, ರುದ್ರೀಯಾಃ', ಪೃಶ್ನಿಮಾತರಃ, ಗೋಮಾತರಃ ಮೊದಲಾದುವು ಇವರ ಅಭಿಧಾನಗಳು. ಮಿಂಚಿನ ಅಟ್ಟಹಾಸದಿಂದ ಇವರು ಹುಟ್ಟಿದರೆಂದೂ ಒಂದು ಕಡೆ ಹೇಳಿದೆ (1-23-12) ; ಅಗ್ನಿಯು ಇವರನ್ನು ರೂಪುಗೊಳಿಸಿದನೆಂದೂ (1-71-8), ದ್ಯುಲೋಕದ ವೀರರಿವರೆಂದೂ (1-64-4), ಸಾಗರದ ಮಕ್ಕಳಿವರೆಂದು ಇನ್ನೊಂದು ಕಡೆಯೂ (10-78-6) (ಸಿಂಧುಮಾತರಃ), ಮತ್ತೆ ಇವರು ಸ್ವಯಂಜಾತರೆಂದೂ (1-168-22) ಹೇಳಿದೆ. 'ರುದ್ರಸ್ಯತೇ ಮೀಳ್ಹುಷಃ ಸಂತಿ ಪುತ್ರಾಃ ' (6-66-3) ; 'ಯಾಮನ್ರುದ್ರಸ್ಯ ಸೂನವಃ ಸುದಂಸಸಃ' (1-85-1) ; ಈಗಣದ ಎಲ್ಲ ದೇವತೆಗಳೂ ಸಮಾನರು—' ಅಜ್ಯೇಷ್ಠಾಸೋ ಅಕನಿಷ್ಠಾಸ ಏತೇ' (5-60-5) ; ಭೂಮಿ, ಆಕಾಶ ಮತ್ತು ದ್ಯುಸ್ಥಾನಗಳಲ್ಲಿ ಇವರು ವಾಸಿಸುವರೆಂದು ಹೇಳಿದೆ. ಒಟ್ಟಿಗೆ ಬೆಳೆದವರಿವರು. ಇವರೆಲ್ಲ ಒಂದೇ ಮನೋಭಾವವುಳ್ಳವರು (8-20-1) ; 'ರೋದಸೀ' ದೇವತೆ ಇವರ ರಥದಲ್ಲಿ ಕುಳಿತು ಇವರೊಡನೆ

---

59. ರುದ್ರನು ಪ್ರಕೃತಿಯ ಯಾವ ಅಂಶವನ್ನು ಪ್ರತಿಬಿಂಬಿಸಿದ್ದಾನೆಂಬುದು ಸ್ಪಷ್ಟವಾಗಿ ಗೋಚರಿಸದು. ಇವನನ್ನು ಸಾಮಾನ್ಯವಾಗಿ 'ಬಿರುಗಾಳಿಯದೇವ'ನೆಂದು ಹೇಳುತ್ತಾರೆ. (Storm God). ಭಕ್ತರ ವಿರೋಧಿಗಳ ಮೇಲೆ ಇಂದ್ರ ತನ್ನ ಆಯುಧ ಪ್ರಯೋಗ ಮಾಡಿದರೆ ರುದ್ರನ ಆಯುಧ ಸರ್ವಭಯಂಕರವಾಗಿದೆ. ಆ ಕಾರಣ ಸರ್ವಧ್ವಂಸಕವಾದ ಮಿಂಚಿನ ಅಂಶವನ್ನಿವನು ಪ್ರತಿಬಿಂಬಿಸಿರಬಹುದು ಎಂದು ವಿಮರ್ಶಕರ ಭಾವ. ಮೊಟ್ಟಮೊದಲಾಗಿ ಭೋರಿಡುವ ಬಿರುಗಾಳಿಗೆ ರುದ್ರನೆಂಬ ವ್ಯವಹಾರವಿತ್ತೆಂದು ವೆಬರ್ ಹೇಳುತ್ತಾರೆ. ಎಲ್ಬ್ರ್ ಮಹಾಶಯ ಅಗ್ನಿ ಅಥವಾ ಇಂದ್ರನ ರೂಪವೇ ರುದ್ರನೆನ್ನುವರು. ಶ್ರೋಡರ್ ಮಹಾಶಯರಾದರೋ ಮೃತರಾದ ಜೀವರುಗಳ ನಾಯಕ ರುದ್ರನೆನ್ನುವರು. ಓಲ್ಡನ್‌ಬರ್ಗ್ ಆದರೋ ಪರ್ವತಾರಣ್ಯದ ಅಧಿದೇವನೇ ರುದ್ರನಾಗಿದ್ದನೆಂದು ಹೇಳುವರು.

ರುದ್ ಎಂಬುದರಿಂದ ಬಂದು ಇದು–ಘರ್ಜನೆ ಮಾಡುವವನು ಎಂಬ ಅರ್ಥದಲ್ಲಿ 'ರುದ್ರ' ಎಂಬುದಾಗಿದೆ ಎಂದು ಹೇಳಬಹುದು.

ಬರುತ್ತಾ ಅನೇಕ ಸುಖಗಳನ್ನು ತರುವರು—

'ರಥಂನು ಮಾರುತಂ ವಯಂ ಶ್ರವಸ್ಯುಮಾ ಹುವಾಮಹೇ |
ಆ ಯಸ್ಮಿನ್ತಸ್ಥೌ ಸುರಣಾನಿ ಬಿಭ್ರತೀ ಸಚಾ ಮರುತ್ಸು ರೋದಸೀ ||' (5-56-8)

"ನಾವು ಮರುದ್ದೇವತೆಗಳ ಅನ್ನಪ್ರದವಾದ ರಥವನ್ನು ಆಹ್ವಾನಿಸುತ್ತೇವೆ. ಆ ರಥದಲ್ಲಿ ಜಲವನ್ನು ಧರಿಸಿರುತ್ತಾ ರೋದಸೀ (ರುದ್ರಪತ್ನೀ ಅಥವಾ ವಾಯುಪತ್ನೀ) ನೆಲಸಿದ್ದಾಳೆ."

ಹುಟ್ಟುವಾಗಲೇ ಇವರು ಜಾಜ್ವಲಿಸುವರು. ಸೂರ್ಯಪ್ರಕಾಶಸಮಾನವಾದ ಪ್ರಕಾಶದಿಂದ ಬೆಳಗುವ ಈ ಸ್ವರ್ಣವರ್ಣದ ವೀರರ ರೂಪ ಅಗ್ನಿಸದೃಶವಾಗಿದೆ. 'ಅಹಿಭಾನವ' (1-172-1) ಎಂಬುದು ಇವರ ವಿಶೇಷಣ. ಸ್ವಯಂ ಪ್ರಕಾಶರಿವರು (1-37-2). ವಿದ್ಯುತ್ತುಗಳಿಗೂ ಮರುತ್ತುಗಳಿಗೂ ನಿಕಟವಾದ ಸಂಬಂಧ ಹೇಳಿದ್ದಾರೆ. ಮರುತ್ತುಗಳು ಘೃತಸೇಕ ಮಾಡುವಾಗ ವಿದ್ಯುತ್ತುಗಳು ಭೂಮಿಯನ್ನು ನೋಡಿ ಮಂದಹಾಸ ಬೀರುವರು.

'ಅವಸ್ಮಯಂತ ವಿದ್ಯುತಃ ಪೃಥಿವ್ಯಾಂ
ಯದೀ ಘೃತಂ ಮರುತಃ ಪ್ರುಷ್ಣುವಂತಿ |' (1-168-8)

'ಯಾವಾಗ ಭೂಮಿಯ ಮೇಲೆ ಮರುತ್ತುಗಳು ಘೃತಸೇಚನ ಮಾಡುವರೋ ಆಗ ವಿದ್ಯೋತಮಾನವಾದ ಮಿಂಚುಗಳು ಭೂಮಿಯಕಡೆ ಮಂದಸ್ಮೇರವಾಗಿ ಪ್ರಕಾಶಿಸುವುವು.'

'ವಾಶ್ರೇವ ವಿದ್ಯುನ್ಮಿಮಾತಿ
ವತ್ಸಂ ನ ಮಾತಾ ಸಿಷಕ್ತಿ |
ಯದೇಷಾಂ ವೃಷ್ಟಿರಸರ್ಜಿ ||' (1-38-8)

'ಕರುವನ್ನು ಹೇಗೆ ತಾಯಿಹಸು ಕೂಗುತ್ತಾ ಹಿಂಬಾಲಿಸುವುದೋ ಹಾಗೆ ಈ ಮರುತ್ತುಗಳು ವರ್ಷಿಸುವಾಗ ವಿದ್ಯುತ್ತುಗಳು ಶಬ್ದಿಸುತ್ತವೆ.'

ಮರುತ್ತುಗಳು ಕೈಯಲ್ಲಿ ಹಿಡಿದಿರುವುದು ಅಗ್ನಿಸದೃಶವಾದ ವಿದ್ಯುತ್ತನ್ನು. ಕೈಗಳಲ್ಲಿ ಕುಂತಕುಠಾರಾದಿ ಪ್ರಹರಣಗಳನ್ನೂ ಹಿಡಿದು ಚಲಿಸುವರಿವರು. ವಜ್ರವನ್ನು ಇವರು ಹಿಡಿದಿದ್ದಾರೆಂದೂ, ಬಿಲ್ಲುಬಾಣಗಳಿಂದ ಸನ್ನದ್ಧರಾಗಿದ್ದಾರೆಂದೂ ಹೇಳಿದೆ. ಮಾಲ್ಯಭೂಷಣಗಳಿಂದಲಂಕೃತರಿವರು.

ಯೇ ಅಂಜಿಷುಯೇ ವಾಶೀಷು
ಸ್ವಭಾನವಃ ಸ್ರಕ್ಷು ರುಕ್ಮೇಷು ಖಾದಿಷು |
ಶ್ರಾಯಾ ರಥೇಷು ಧನ್ವಸು || (5-53-4)

'ಸ್ವತಃ ದೀಪ್ತರಾದ ಇವರ ಪ್ರಕಾಶ ಆಭರಣಗಳಲ್ಲಿಯೂ, ಆಯುಧಗಳಲ್ಲಿಯೂ ಮಾಲ್ಯಗಳಲ್ಲಿಯೂ, ಉರೋಭೂಷಣಗಳಲ್ಲಿಯೂ, ಹಸ್ತಪಾದಗಳಲ್ಲಿನ ಕಟಕಗಳಲ್ಲಿಯೂ ರಥಗಳಲ್ಲಿಯೂ, ಧನುಸ್ಸುಗಳಲ್ಲಿಯೂ ಸಹ ನೆಲಸಿದೆ.'

ಸ್ವರ್ಣಕವಚ ಧಾರಿಗಳಿವರು. (5-55-6) 'ಹಿರಣ್ಯಯಾನ್ ಪ್ರತಿ ಅತ್ಕಾನ್' ಸಿರಿವಂತರಾದ ಮದುವಣಿಗರಂತೆ ತಮ್ಮ ದೇಹವನ್ನಿವರು ಸುವರ್ಣಾಲಂಕರಣಗಳಿಂದ ಸಿಂಗರಿಸಿಕೊಳ್ಳುವರು—

'ವರಾ ಇವೇ ದ್ರೈವತಾಸೋ ಹಿರಣ್ಯೈಃ
ಅಭಿಸ್ವಧಾಭಿಸ್ತನ್ವಃ ಪಿಪಿಶ್ರೇ !' (5-60-4)

'ಧನವಂತರಾದ ವಿವಾಹಯೋಗ್ಯರಾದ ತರುಣರು ಹಿರಣ್ಮಯವಾದ ಆಭರಣಗಳಿಂದಲೂ

ಉದಕಗಳಿಂದಲೂ ಸ್ವದೇಹವನ್ನು ಅಲಂಕರಿಸಿಕೊಳ್ಳುವಂತೆ ಮರುತ್ತುಗಳೂ ಸರ್ವಾಭರಣಗಳಿಂದಲೂ ಉದಕಗಳಿಂದಲೂ ಕೂಡಿದ್ದಾರೆ.'

ಇಂಥ ಮರುತ್ತುಗಳು ಸರ್ವಸುಂದರರಾಗಿದ್ದಾರೆ. ನಕ್ಷತ್ರಗಳಿಂದೊಡಗೂಡಿದ ಗಗನದಂತೆ, ಮುಗಿಲಿನಿಂದುದುರುವ ಧಾರಾವರ್ಷದಂತೆ ಇವರು ಪ್ರಕಾಶಮಾನರಾಗಿದ್ದಾರೆ.

"ದ್ಯಾವೋ ನ ಸ್ತೃಭಿಶ್ಚಿತಯಂತ ಖಾದಿನೋ
ವ್ಯಭ್ರಿಯಾ ನ ದ್ಯುತಯಂತ ವೃಷ್ಟಯಃ | (2-34-2)

'ನಕ್ಷತ್ರಗಳಿಂದೊಡಗೂಡಿದ ದ್ಯುಲೋಕದಂತೆ ಕಟಕಾದಿಭೂಷಣಭೂಷಿತರಾದ ಮರುತ್ತುಗಳು ಪ್ರಕಾಶಿಸುತ್ತಾರೆ. ವರ್ಷಕರಾದ ಮರುತ್ತುಗಳು ಮೋಡಗಳಲ್ಲಿರುವ ಮಿಂಚುಗಳಂತೆ ಶೋಭಿಸುತ್ತಾರೆ.'

ಮರುತ್ತುಗಳು ದಿವ್ಯರೂಪವನ್ನು ಮಂತ್ರವೊಂದರಲ್ಲಿ ಅದ್ಭುತವಾಗಿ ವರ್ಣಿಸಲಾಗಿದೆ–

"ಅಂಸೇಷು ವಋಷ್ಟಯೋ ಪತ್ಸು ಖಾದಯೋ
ವಕ್ಷಃಸು ರುಕ್ಮಾ ಮರುತೋ ರಥೇ ಶುಭಃ |
ಅಗ್ನಿಭ್ರಾಜಸೋ ವಿದ್ಯುತೋ ಗಭಸ್ತ್ಯೋಃ
ಶಿಪ್ರಾಃ ಶೀರ್ಷಸು ವಿತತಾ ಹಿರಣ್ಮಯೀಃ ||' (5-54-11)

"ಎಲೈ ಮರುದ್ದೇವತೆಗಳೇ, ನಿಮ್ಮ ಹೆಗಲುಗಳ ಮೇಲೆ ಆಯುಧಗಳು ಶೋಭಿಸಿವೆ. ನಿಮ್ಮ ಪಾದಗಳಲ್ಲಿ ಕಾಲ್ಬಳೆಗಳೂ, ವಕ್ಷಃಸ್ಥಳದಲ್ಲಿ ಸ್ವರ್ಣಹಾರಗಳೂ, ಹಸ್ತಗಳಲ್ಲಿ ಅಗ್ನಿಯಂತೆ ಜ್ವಲಿಸುವ ಮಿಂಚುಗಳೂ ಶಿರಸ್ಸುಗಳಲ್ಲಿ ಸ್ವರ್ಣಕಿರೀಟಗಳೂ, ರಥದಲ್ಲಿ ಮಧುರವಾದ ಉದಕವೂ ಪ್ರಕಾಶಿಸಿವೆ."

ಗಾಳಿ, ಮಳೆ, ಮಿಂಚು ಮೊದಲಾದುವುಗಳಿಗಿರುವ ಸುಂದರವಾದ ಸಂಬಂಧವನ್ನು ಮೇಲಿನ ಮಂತ್ರ ಬಹಳ ಸುಂದರವಾಗಿ ಚಿತ್ರಿಸುತ್ತದೆ.

ಮರುತ್ತುಗಳು ಮಹಾಮಹಿಮರು, ಅಸಮ ಬಲರು. ಅವರ ಮಹತ್ವ ಅಂತರಿಕ್ಷದಂತೆ ವಿಸ್ತಾರವಾದುದು. "ಮಹಿನಾ ದ್ಯೌರಿವೋರವಃ" (5-57-4) ; ಅವರ ಮಹತ್ವವನ್ನು ಅಳೆಯಲು ಶಕ್ಯವಿಲ್ಲ. 'ಅಮಿತಾ ಮಹಿತ್ವಾ' (5-58-2). ಮರುತ್ತುಗಳು ನಾನಾರೂಪಿಗಳಾಗಿದ್ದಾರೆ. ಅವರು ಮಧುರವಾಗಿ ಸುಳಿದಾಡುವಂತೆ ಭಯಂಕರವಾಗಿಯೂ ಕಾಣಿಸಿಕೊಳ್ಳುವರು. ಅವರು 'ಭೀಮಸದೃಶರು' (5-56-2) ಆದರೂ 'ಪ್ರಿಯನಾದ ಔರಸ ಪುತ್ರನು ಹೇಗೋ ಹಾಗೆ ಮಧುರವಾದ ಹವಿಸ್ಸನ್ನು ಹೊಂದಿ ಮರುತ್ತುಗಳು ಕ್ರೀಡನಶೀಲರಾಗಿ ಆಡುತ್ತಾರೆ ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ:

'ನಿತ್ಯಂ ನ ಸೂನುಂ ಮಧು ಬಿಭ್ರತ ಉಪ |
ಕ್ರೀಳಂತಿ ಕ್ರೀಳಾ ವಿದಥೇಷು ಘೃಷ್ವಯಃ ||' (1-166-2)

'ಸಿಂಹಾ ಇವ ನಾನದತಿ ಪ್ರಚೇತಸಃ' (1-64-2) ಎಂಬಲ್ಲಿ ಇವರು ಗಿರಿಗಹ್ವರಗಳಲ್ಲಿ ಸಿಂಹಗಳು ಗಂಭೀರವಾಗಿ ಘರ್ಜಿಸುವಂತೆ ಘರ್ಜಿಸುತ್ತಾರೆಂದು ವರ್ಣಿಸಿದೆ.

ಮರುದ್ದೇವತೆಗಳ ಸೌಮ್ಯರೂಪವೂ ಹಾಗೆಯೇ ಭಯಂಕರರೂಪವೂ ಹೀಗೆ ಕೊಂಡಾಡಲ್ಪಟ್ಟಿದೆ.

ಮರುದ್ದೇವತೆಗಳ ಮುಖ್ಯಕಾರ್ಯಗಳಲ್ಲಿ ಮಳೆಯನ್ನು ಸುರಿಸುವುದೂ ಒಂದು. ಮಳೆಯೇ ಅವರ ರೂಪವೆಂದು 'ವರ್ಷನಿರ್ಣಜಃ' (5-57-4) ಎಂಬಲ್ಲಿ ಸ್ತುತಿಸಿದ್ದಾರೆ. ಮಳೆಗೂ

ಮರುದ್ದೇವತೆಗಳಿಗೂ ಸಮೀಪದ ಸಂಬಂಧವಿದೆಯೆಂಬುವ ಅಂಶವನ್ನು ಬಗೆಬಗೆಯಾಗಿ ವರ್ಣಿಸಿದೆ.

'ಯೋಧರು ಅಶ್ವವನ್ನು ಹೇಗೋ ಹಾಗೆ ಮರುದ್ದೇವತೆಗಳು ಬಲಿಷ್ಠವಾದ ಮೇಘಗಳನ್ನು ಮಳೆ ಸುರಿಸುವುದಕ್ಕಾಗಿ ತಮ್ಮ ಸ್ವಾಧೀನಕ್ಕೊಳಪಡಿಸಿಕೊಳ್ಳುತ್ತಾರೆ.'

'ಅತಂ ನ ಮಿಹೇ ವಿ ನಯಂತಿ ವಾಜಿನಂ
ಉತ್ಸಂ ದುಹಂತಿ ಸ್ತನಯಂತಮಕ್ಷಿತಮ್ |' (1-64-6)

'ನೀರಿನಿಂದ ತುಂಬಿದ ಮೇಘದಿಂದ ಸೂರ್ಯನನ್ನು ಆಚ್ಛಾದಿಸಿ ಹಗಲಿನಲ್ಲಿಯೂ ಕತ್ತಲೆಯನ್ನುಂಟುಮಾಡುತ್ತಾರೆ ಇವರು.

'ದಿವಾ ಚಿತ್ತಮಃ ಕೃಣ್ವಂತಿ
ಪರ್ಜನ್ಯೇನೋದವಾಹೇನ |
ಯತ್ಪೃಥಿವೀಂ ವ್ಯುಂದತಿ |' (1-38-9)

ಪರ್ವತಗಳನ್ನು ಅದುರಿಸಿ ಲೋಕಗಳೆರಡನ್ನೂ ನಡುಗುವಂತೆ ಮಾಡುವ ಬಲಶಾಲಿಗಳಿವರು. ವೃಷ್ಟಿಯಿಂದ ಸೂರ್ಯನ ನೇತ್ರವನ್ನು ಇವರು ತುಂಬುವರು. ಅಂಧಕಾರವನ್ನು ಕಳೆದು ಬೆಳಕನ್ನು ಹರಡಿ ಸೂರ್ಯನಿಗೂ ಹಾದಿಯನ್ನು ಮಾಡಿಕೊಡುವರು ಇವರು.

'ಹಂಸಗಳು ಹೇಗೆ ತಮ್ಮ ತಮ್ಮ ನಿವಾಸಗಳಿಗೆ ತೆರಳುವುವೋ ಹಾಗೆ ನೀವು ಸಮಾನತೇಜಸ್ಕರಾಗಿ ಬನ್ನಿರಿ' ಎಂಬ ಬೇಡಿಕೆ ಇಲ್ಲಿದೆ.

'ಆ ಹಂಸಾಸೋ ನ ಸ್ವಸರಾಣಿ ಗಂತನ
ಮಧೋರ್ಮದಾಯ ಮರುತಃ ಸಮನ್ಯವಃ' (2-34-5)

ಲೋಕ ರಕ್ಷಣಕ್ಕಾಗಿ ಇವರು ಮಳೆ ಸುರಿಸುವರು. 'ಇವರು ಸುರಿಸುವ ಮಳೆಯಿಂದ ನೆಲವೆಲ್ಲ ಚರ್ಮವು ಹೇಗೋ ಹಾಗೆ ನೆನೆಯುವುದು–'ಚರ್ಮೇವಾದ್ಭಿರ್ವ್ಯುಂದಂತಿ ಭೂಮಂ' (1-85-5);

ಮರುದ್ದೇವತೆಗಳು ಬಹಳ ಬಲಿಷ್ಠರು, ಶಕ್ತರು ಎಂಬುವುದನ್ನು

'ವಿ ಯೇ ಭ್ರಾಜಂತೇ ಸುಮಖಾಸ ಋಷ್ಟಿಭಿಃ
ಪ್ರಚ್ಯಾವಯಂತೋ ಅಚ್ಯುತಾ ಚಿದೋಜಸೋ |' (1-85-4)

'ಯಜ್ಞಪ್ರವರ್ತಕರಾದ ಮರುದ್ದೇವತೆಗಳು ಜ್ವಲಿಸುವ ಆಯುಧಗಳಿಂದ ಸೊಗಸಾಗಿದ್ದಾರೆ. ತಮ್ಮ ಬಲದಿಂದ ಅವರು ಕದಲಿಸಲಸಾಧ್ಯವಾದುದನ್ನೂ ಚ್ಯುತಿಗೊಳಿಸುತ್ತಾರೆ'ಎಂಬಲ್ಲಿ ಕೊಂಡಾಡಿದೆ. ಈ ದೇವತೆಗಳ ಜನ್ಮವನ್ನು ಯಾರೂ ತಿಳಿಯರು–'ಕೋ ವೇದ ಜಾನಮೇಷಾಂ' (5-53-1) ; ಮರುತ್ತುಗಳ ಶಬ್ದವೂ ಪ್ರಖ್ಯಾತವಾದುದು. ಮನನದಿಂದ ಮುನಿಯಾದ ಸ್ತೋತೃ ಹೇಗೆ ಬಹುವಿಧವಾಗಿ ಶಬ್ದ ಪ್ರಯೋಗ ಮಾಡುವನೋ ಈ ಮರುತ್ತುಗಳೂ ಸಂಗ್ರಾಮದಲ್ಲಿ ಶತ್ರುಧ್ವಂಸಕವಾದ ಮತ್ತು ವೃಕ್ಷಾದಿಗಳನ್ನು ಕಂಪಿಸುವ ಬಹುವಿಧವಾದ ಶಬ್ದಗಳನ್ನು ಮಾಡುವರು' (7-56-8). ದ್ಯಾವಾಪೃಥಿವಿಗಳನ್ನೂ ನಡುಗಿಸುತ್ತಾ ಮೋಡಗಳಿಂದ ಮಳೆಗರೆಯುತ್ತಾ ಉಗ್ರರೂಪಿಗಳಾಗಿ ಇವರು ಎಲ್ಲೆಡೆಯೂ ಸಂಚರಿಸುವರು ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ:

'ಯೇ ರೇಜಯಂತಿ ರೋದಸೀ ಚಿದುರ್ವೀ
ಪಿನ್ವಂತ್ಯುತ್ಸಂ ಯದಯಾಸುರುಗ್ರಾಃ |' (7-57-1)

ಇಂಥ ಉಗ್ರರೂಪವನ್ನು ಹೊಂದಿದ್ದರೂ ಮರುದ್ದೇವತೆಗಳು ಲೋಕಹಿತಕಾರಕರಾಗಿದ್ದಾರೆ.

ಅವರು ಮಾಡದ ಸಾಹಸವಿಲ್ಲ. 'ಪರ್ವತಗಳನ್ನವರು ಭೇದಿಸುತ್ತಾರೆ ; ಕೂಪವನ್ನು ಮೇಲಕ್ಕೆ ತರುತ್ತಾರೆ ; ತಮ್ಮ ವಾಣ ವಾದ್ಯಗಳನ್ನು ಬಾರಿಸುತ್ತಾರೆ ; ಇಂಥ ಅದ್ಭುತ ಕರ್ಮಗಳನ್ನು ಮಾಡುವ ಇವರು ದಾನಶೀಲರಾಗಿಯೂ ಇದ್ದಾರೆ.' (1-85-10)

ತಮ್ಮನ್ನು ಸೇರಿ ಭಜಿಸುವವರಿಗೆ ಪರಮೋಪಕಾರಕರಿವರು. ಬಾಯಾರಿಕೆಯಿಂದ ಬಳಲಿದ್ದ ಗೋತಮನ ದಾಹವನ್ನು ಹೋಗಲಾಡಿಸಲು ಊಟೆಯೊಂದನ್ನು ಇವರು ಸೃಜಿಸಿದರು.

'ಅಸಿಂಚನ್ನುತ್ಸಂ ಗೋತಮಾಯ ತೃಷ್ಣಜೇ |' (1-85-11)

'ಇವರು ಕರುಣಿಸಿದ ಗೋಧನವನ್ನೂ ಅಶ್ವಸಂಪತ್ತನ್ನೂ ಭಕ್ತರು ಯಮುನೆಯಲ್ಲಿ ಮೀಯಿಸಿ ನಲಿಯುವರು' (5-52-17). ಇವರಿಂದ ಅನ್ನ, ಯುದ್ಧಪ್ರಜ್ಞಾನ, ದನದಾತೃತ್ವ, ಅನತಿ ಕ್ರಮಣೀಯವಾದ ಬಲ ಇವೆಲ್ಲಾ ಲಭಿಸುವುವು (2-34-7).

ಇವರು ಕೃಪೆಮಾಡಿಕೊಡುವಂತೆ ಮತ್ತೆ ಯಾರೂ ಕರುಣಿಸಲಾರರು ಎಂಬ ಭಾವ 'ನೈತಾವದನ್ಯೇ ಮರುತೋ ಯಥೇಮೇ' (7-57-3) ಎಂಬಲ್ಲಿದೆ. ಲೋಕಕ್ಕೇ ಭಯವನ್ನುಂಟು ಮಾಡುವ ನೀವು 'ವಿಶ್ವೇಯೋಯಾಮನ್ ಭಯತೇ ಸ್ವರ್ದೃಕ್' (7-58-2) ಹಾಗೆಯೇ ಪರಮೋಪಕಾರಕರೂ ಆಗಿರುವಿರೆಂದು ಕೊಂಡಾಡಿದ್ದಾರೆ. ಈ ಅನುಗ್ರಹ ಆಗಬೇಕಾದರೆ ಅವರ ಮಹತ್ವವನ್ನರಿತು ಬೇಡಬೇಕು. ಕೆಳಗಿನ ಮಂತ್ರದಲ್ಲಿ ಇಂಥ ಬೇಡಿಕೆ ಇದೆ:

'ಋಧಕ್ಸಾವೋ ಮರುತೋ ದಿದ್ಯುದಸ್ತು
ಯುದ್ವ ಆಗಃ ಪುರುಷತಾ ಕರಾಮ |
ಮಾವಸ್ತಸ್ಯಾಮಪಿ ಭೂಮಾಯಜತ್ರಾ
ಅಸ್ಮೇ ವೋ ಅಸ್ತು ಸುಮತಿಶ್ಚ ನಿಷ್ಠಾ ||' (5-57-4)

"ಎಲೈ ಮರುತ್ತುಗಳೆ, ಲೋಕಪ್ರಸಿದ್ಧವಾದ ಆ ನಿಮ್ಮ ಶಸ್ತ್ರಗಳು ನಮ್ಮ ಮೇಲೆ ಬೀಳದಿರಲಿ. ಮನುಷ್ಯ ಸ್ವಭಾವದಿಂದ ನಾವು ನಿಮ್ಮಲ್ಲಿ ಅಪರಾಧವನ್ನೇನೋ ಮಾಡಿದ್ದೇವೆ. ಪೂಜಾರ್ಹರಾದ ದೇವತೆಗಳೆ, ನಿಮ್ಮ ಆ ಕೋಪಕ್ಕೆ ನಾವು ಪಾತ್ರರಾಗದಂತಿರಲಿ. ಸಂಪತ್ಕರವಾದ ನಿಮ್ಮ ಅನುಗ್ರಹ ಬುದ್ಧಿಯು ನಮ್ಮ ಮೇಲೆ ಆಗಲಿ."

ಯುಷ್ಮೋತೋ ವಿಪ್ರೋ ಮರುತಃ ಶತಸ್ವೀ
ಯುಷ್ಮೋತೋ ಅರ್ವಾ ಸಹುರಿಃ ಸಹಸ್ರೀ |
ಯುಷ್ಮೋತಃ ಸಮ್ರಾಳುತ ಹಂತಿ ವೃತ್ರಂ
ಪ್ರತದ್ವೋ ಅಸ್ತು ದೂತಯೋ ದೇಷ್ಣಮ್ || (7-58-4)

ಎಲೈ ಮರುತ್ತುಗಳೇ ನಿಮ್ಮ ರಕ್ಷಣೆಯಿಂದಲೇ ಸ್ತೋತ್ರಮಾಡುವವನು ಶತಸಂಖ್ಯೆಯಲ್ಲಿ ಧನವನ್ನು ಪಡೆಯುವನು. ನಿಮ್ಮ ಕೃಪೆಯಿಂದಲೇ ಶತ್ರುದಮನಮಾಡಿ ಸಹಸ್ರ ಸಂಖ್ಯೆಯಲ್ಲಿ ಧನವನ್ನು ಪಡೆಯುವನು. ನಿಮ್ಮ ರಕ್ಷಣೆ ಇದ್ದರೆ ಚಕ್ರವರ್ತಿಯೂ ಆಗುತ್ತಾನೆ. ಶತ್ರುಗಳನ್ನು ನಾಶಪಡಿಸುತ್ತಾನೆ. ನಿಮ್ಮಿಂದಲೇ ಮಿಗಿಲಾದ ಸಂಪತ್ತು ಲಭಿಸುತ್ತದೆ.

ಮರುದ್ದೇವತೆಗಳ ಕೃಪೆ ಯಾರಮೇಲೆ ಆಗುವುದೋ ಅವರೇ ಧನ್ಯರೆಂಬ ಭಾವ ಕೆಳಗಿನ ಮಂತ್ರದಲ್ಲಿದೆ.

'ಸುದೇವಃ ಸಮಹಾಸತಿ ಸುವೀರೋ ನರೋ ಮರುತಃ ಸ ಮರ್ತ್ಯಃ |
ಯಂ ತ್ರಾಯಧ್ವೇ ಸ್ಯಾಮ ತೇ ||' (5-53-15)

'ಪ್ರಶಸ್ತವಾದ ವಾಕ್ಕುಳ್ಳ ಮರುದ್ದೇವತೆಗಳೇ, ಯಾರನ್ನು ನೀವು ಪಾಲಿಸುವಿರೋ ಅಂಥ ನರನು ಸುವೀರನೂ, ದೇವತೆಗಳಿಗೆ ಪ್ರಿಯನಾದವನೂ, ಶ್ಲಾಘ್ಯನೂ ನಾಯಕನೂ ಆಗುವನು.

ನಾವು ಹಾಗೆ ನಿಮ್ಮವರೇ ಆಗೋಣ.'

ಈ ದೇವತೆಗಳಲ್ಲಿ ಋಷಿಗಳ ಮಹತ್ವಪೂರ್ಣವಾದ ಬೇಡಿಕೆಯಾದರೋ ಹೀಗಿದೆ :

'ಆಭೂಷೇಣ್ಯಂ ವೋ ಮರುತೋ ಮಹಿತ್ವನಂ
ದಿದೃಕ್ಷೇಣ್ಯಂ ಸೂರ್ಯಸ್ಯೇವ ಚಕ್ಷಣಮ್ ।
ಉತೋ ಅಸ್ಮಾನ್ ಅಮೃತತ್ವೇ ದಧಾತನ
ಶುಭಂ ಯಾತಾಮನು ರಥಾ ಅವೃತ್ಸತ ॥' (5-55-4)

"ಎಲೈ ಮರುದ್ದೇವತೆಗಳೇ, ಸೂರ್ಯನ ರೂಪದಂತೆ ದರ್ಶನೀಯವಾದುದು ನಿಮ್ಮ ದಿವ್ಯರೂಪ. ನಿಮ್ಮ ಮಹತ್ವವೂ ಸಹ ವಿಶೇಷತಃ ಸ್ತೋತ್ರಾರ್ಹವಾದುದು. ನಮ್ಮನ್ನು ಮೋಕ್ಷಭಾಜನರನ್ನಾಗಿ ಮಾಡಿ. ಮಂಗಳವಾಗುವಂತೆ ಸಂಚರಿಸುವ ನಿಮ್ಮ ರಥಗಳು ನಮ್ಮನ್ನು ಅನುವರ್ತಿಸುತ್ತವೆ."

## ದ್ಯುಸ್ಥಾನ ದೇವತೆಗಳು

### ವರುಣ

ಋಗ್ವೇದದಲ್ಲಿ ವರುಣದೇವನು ಇಂದ್ರನ ಸ್ಥಾನಕ್ಕೆ ಸಮವಾದ ಸ್ಥಾನವನ್ನು ಹೊಂದಿದ್ದಾನೆ. ಈ ದೇವನ ಮಹಿಮೆಯನ್ನು ಇವನನ್ನು ಸ್ತುತಿಸಿರುವ ಸೂಕ್ತ ಸಂಖ್ಯೆಗಳಿಂದಲೇ ಅಳೆಯಬಾರದು. ಹನ್ನೆರಡು ಸೂಕ್ತಗಳು ಈ ದೇವತೆಯನ್ನು ಕೊಂಡಾಡಿದರೂ ಅವುಗಳಿಂದ ಇವನ ಅನುಪಮವಾದ ಮಹತ್ವ ಗೋಚರಿಸುತ್ತದೆ. ಇವನ ರೂಪ ಮತ್ತು ಸಾಧನಗಳ ವರ್ಣನೆಗಿಂತ ಇವನ ಕಾರ್ಯದ ವರ್ಣನೆಗೆ ಇಲ್ಲಿ ಹೆಚ್ಚು ಪ್ರಾಧಾನ್ಯ ಕೊಡಲಾಗಿದೆ.

ಇತರ ದೇವತೆಗಳನ್ನು ವರ್ಣಿಸಿರುವಂತೆಯೇ ವರುಣನನ್ನೂ ಪುರುಷಾಕಾರ ಸಂಪದ್ಯುಕ್ತನನ್ನಾಗಿ ವರ್ಣಿಸಿದ್ದಾರೆ. ಇವನು ಸಹಸ್ರ ನೇತ್ರಯುತ (7-34-10). ದೂರದೃಷ್ಟಿಯನ್ನು ಹೊಂದಿರುವ ಈ ಮಹಾಮಹಿಮನು ಸಕಲ ಲೋಕಗಳನ್ನೂ ಜಗಚ್ಚಕ್ಷುವಾಗಿ ನೋಡುತ್ತಿದ್ದಾನೆ–(1-25-5). ಇವನು ಸುಪಾಣಿ. ಅಸುರರ ಮಾಯೆಗಳನ್ನೆಲ್ಲಾ ತನ್ನ ದೀಪ್ತವಾದ ತೇಜಸ್ಸಿನಿಂದ ಖಂಡಿಸುತ್ತಾನೆ–'ಸ ಮಾಯಾ ಅರ್ಚಿನಾ ಪದಾಸ್ಪೃಣಾತ್' (7-41-8). ಇವನ ರಥ ಸೂರ್ಯನಂತೆ ಪ್ರಕಾಶಿಸುವುದು–'ರಥೋವಾಂ ಮಿತ್ರಾವರುಣಾ ದೀರ್ಘಾಪ್ಸಾಃ ಸ್ಯೂಮ ಗಭಸ್ತಿಃ ಸೂರೋ ನಾದ್ಯೌತ್' (1-122-15). ಈ ರಥ ಹಿರಣ್ಯರೂಪವಾಗಿ ಆಕಾಶದಲ್ಲಿ ವ್ಯಾಪಕವಾದ ಮೇಘದಂತೆ ವಿರಾಜಿಸುತ್ತದೆ (5-62-7). ಮಿತ್ರಾವರುಣರು ಈ ದಿವ್ಯ ರಥವನ್ನೇರಿ ಚಲಿಸುವರು. ಅಂಥ ವರುಣನ ರಥವನ್ನೂ ಭೂಮಿಯ ಮೇಲೆ ಕಾಣುವಂತಾಗಲೆಂದು ವರುಣಭಕ್ತ ಹಾರೈಸುವನು–(1-25-18).

ವರುಣನ ನಿವಾಸಸ್ಥಾನ ಉದ್ದೀಪ್ತವಾದುದು. ಅವನು ತನ್ನ ದಿವ್ಯಭವನಗಳಲ್ಲಿ ಕುಳಿತುಕೊಂಡೇ ಲೋಕದ ಜನರೆಲ್ಲರ ಪ್ರವೃತ್ತಿಗಳನ್ನೂ ನೋಡುತ್ತಿರುತ್ತಾನೆ.

'ನಿಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ ।
ಸಾಮ್ರಾಜ್ಯಾಯ ಸುಕ್ರತುಃ ॥' (1-25-10)
'ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾಂ ಅಭಿಪಶ್ಯತಿ ।
ಕೃತಾನಿ ಯಾ ಚ ಕರ್ತ್ವಾ ॥' (1-25-11)

'ಧೃತವ್ರತನಾದ ವರುಣನು ದಿವ್ಯ ಭವನಗಳಲ್ಲಿ ಬಂದು ಕುಳಿತನು–ಶೋಭನ ಕರ್ಮನಾದ ಅವನು ಪ್ರಜೆಗಳಿಗೆ ಚಕ್ರವರ್ತಿಯಾಗಿದ್ದಾನೆ.'

"ಅಲ್ಲಿಂದಲೇ ಸರ್ವಜ್ಞನಾದ ಅವನು ಹಿಂದೆ ಮಾಡಿದ ಮತ್ತು ಮುಂದೆ ನಡೆಯುವ ಎಲ್ಲ ಆಶ್ಚರ್ಯ ಕರ್ಮಗಳನ್ನೂ ಸರ್ವತಃ ಕಾಣುತ್ತಾನೆ."

ಇವನ ಸದಸ್ಸು ಮಹೋನ್ನತವೂ, ದೃಢವೂ, ಸರ್ವೋತ್ಕೃಷ್ಟವೂ ಸಹಸ್ರಸ್ತಂಭಯುತವೂ ಆಗಿ ವಿರಾಜಿಸುತ್ತದೆ.

'ರಾಜಾನಾವನಭಿದ್ರುಹಾ ಧ್ರುವೇ ಸದಸ್ಯುತ್ತಮೇ |
ಸಹಸ್ರಸ್ಥೂಣ ಆಸಾತೇ ||' (2-41-5)

'ದೀಪ್ಯಮಾನರಾದ ಮಿತ್ರಾವರುಣರು ವಂಚನೆಯನ್ನೆಂದೂ ಮಾಡುವುದಿಲ್ಲ. ಅವರು ಸ್ಥಿರವೂ ಉತ್ಕೃಷ್ಟವೂ, ಸಹಸ್ರಸ್ತಂಭ ಶೋಭಿತವೂ ಆದ ಸದಸ್ಸಿನಲ್ಲಿ ಮಂಡಿಸಿದ್ದಾರೆ.'

ವರುಣದೇವನ ದಿವ್ಯಭವನಕ್ಕೆ ಸಹಸ್ರಾರು ಬಾಗಿಲುಗಳಿವೆ.

'ಬೃಹಂತಂ ಮಾನಂ ವರುಣ ಸ್ವಧಾವಃ |
ಸಹಸ್ರದ್ವಾರಂ ಜಗಮಾ ಗೃಹಂ ತೇ |' (7-88-5)

'ಅನ್ನವಂತನಾದ ವರುಣನೇ, ನಿನ್ನ ಮಹತ್ತಮವೂ, ಮಾನನೀಯವೂ, ಸಹಸ್ರ ದ್ವಾರ ಮಂಡಿತವೂ ಆದ ಭವನವನ್ನು ಎಂದು ಬಂದು ಸೇರಿಯೇನು?'

ವರುಣನ ಧಾಮ ಅತ್ಯುನ್ನತವಾದುದು. ಸರ್ವಸಾಕ್ಷಿಯಾದ ಸೂರ್ಯನು ಮಿತ್ರಾವರುಣರಿಗೆ ಜನರ ಸುಕೃತದುಷ್ಕೃತಗಳನ್ನು ತಿಳಿಸುವನೆಂದು ಕೆಳಗಿನ ಮಂತ್ರದಲ್ಲಿ ಹೇಳಿದೆ–

'ಯದದ್ಯ ಸೂರ್ಯ ಬ್ರವೋಽನಾಗಾ
ಉದ್ಯನ್ಮಿತ್ರಾಯ ವರುಣಾಯ ಸತ್ಯಮ್ |' (7-60-1)

'ಎಲೈ ಸೂರ್ಯನೇ, ಮಿತ್ರನಿಗೂ ವರುಣನಿಗೂ ನಾವು ಪಾಪರಹಿತರೆಂದು ನಿತ್ಯವೂ ಉದಯಿಸುವ ನೀನು ಹೇಳುವಂತಾಗಲಿ.'

ವರುಣನು ಇತರ ಕೆಲವು ಮುಖ್ಯ ದೇವತೆಗಳಂತೆಯೇ 'ರಾಜಾ' ಎಂದು ಸ್ತುತಿಸಲ್ಪಟ್ಟಿದ್ದಾನೆ. ದೇವತೆಗಳಿಗೂ ಮನುಷ್ಯರಿಗೂ ಇವನು ರಾಜನಾಗಿದ್ದಾನೆ. ಪ್ರಪಂಚಕ್ಕೇ ಇವನು ಒಡೆಯ. ಇಂದ್ರನಂತೆ ಇವನೂ ಸ್ವತಂತ್ರನಾದ ದೇವ. ಆದ್ದರಿಂದಲೇ ಇವನನ್ನು 'ಸಮ್ರಾಟ್' ಎಂದು ಕರೆದಿದ್ದಾರೆ.

'ರಾಜಾ ರಾಷ್ಟ್ರಾನಾಂ ಪೇಶೋ ನದೀನಾಂ' (7-34-11)

ವರುಣದೇವನು ತನ್ನ ಅಸಾಧಾರಣವಾದ ಶಕ್ತಿಯಿಂದ ಪ್ರಪಂಚದ ಅದ್ಭುತ ವ್ಯಾಪಾರಗಳನ್ನೂ ನಡೆಸುತ್ತಿದ್ದಾನೆ. ಇವನು ಸರ್ವವನ್ನೂ ಸೃಜಿಸಿ ನಿಲ್ಲಿಸಿದ್ದಾನೆಂದೂ ನಿಯಮಿಸುತ್ತಿದ್ದಾನೆಂದೂ ಕೊಂಡಾಡಲ್ಪಟ್ಟಿದ್ದಾನೆ.

'ವನೇಷು ವ್ಯಂತರಿಕ್ಷಂ ತತಾನ
ವಾಜಮರ್ವತ್ಸು ಪಯ ಉಸ್ರಿಯಾಸು |
ಹೃತ್ಸು ಕ್ರತುಂ ವರುಣಃ ಅಪ್ಸ್ವಗ್ನಿಂ
ದಿವಿ ಸೂರ್ಯಮದಧಾತ್ಸೋಮಮದ್ರೌ ||' (5-85-2)

'ವರುಣದೇವನು ವೃಕ್ಷಾಗ್ರದಲ್ಲಿ ಅಂತರಿಕ್ಷವನ್ನು ಹರಡಿದ್ದಾನೆ; ಅಶ್ವಗಳಲ್ಲಿ ಬಲವನ್ನಿಟ್ಟನು; ಪಶುಗಳಲ್ಲಿ ಕ್ಷೀರವನ್ನೂ, ಹೃದಯದಲ್ಲಿ ಕರ್ಮಸಂಕಲ್ಪವನ್ನೂ, ಜಲದಲ್ಲಿ ವೈದ್ಯುತಾಗ್ನಿಯನ್ನೂ, ದ್ಯುಲೋಕದಲ್ಲಿ ಸೂರ್ಯನನ್ನೂ, ಪರ್ವತದಲ್ಲಿ ಸೋಮವನ್ನೂ ನೆಲೆಗೊಳಿಸಿದನು.'

'ವರುಣನು ತನ್ನ ಅಪಾರವಾದ ಪ್ರಜ್ಞೆಯಿಂದ ಅಂತರಿಕ್ಷದಲ್ಲಿ ನಿಂತು ಸೂರ್ಯನಿಂದ,

ಅಳತೆಯ ಕೋಲಿನಿಂದಲೋ ಎಂಬಂತೆ, ಪೃಥಿವಿಯನ್ನು ಅಳೆಯುವನೆಂಬುದಾಗಿ' ಹೇಳಿದೆ.

'ಮಾನೇನೇವ ತಸ್ಥಿವಾನ್ ಅಂತರಿಕ್ಷೇ
ವಿಯೋ ಮಮೇ ಪೃಥಿವೀಂ ಸೂರ್ಯೇಣ |' (5-85-5)

ಇವನ ಶಾಸನದಿಂದಲೇ ದ್ಯಾವಾಪೃಥಿವೀಗಳು ಬೇರೆಬೇರೆಯಾಗಿ ನಿಂತಿದ್ದಾರೆ. ಇವನು ಜ್ಯೋತಿರ್ಮಯ; ತನ್ನ ದೀಪ್ತಿಯಿಂದ ವಿಸ್ತೀರ್ಣವಾದ ದ್ಯಾವಾಪೃಥಿವಿಗಳನ್ನು ಇವನು ಬೆಳಗುತ್ತಾನೆ. ಮಹಾಕರ್ಮಿಯೂ, ಪ್ರಜ್ಞಾಯುತನೂ, ಜರಾರಹಿತನೂ ಆದವನಿವನು. ಈ ಭಾವವನ್ನು ಕೆಳಗಿನ ಮಂತ್ರದಲ್ಲಿ ಕಾಣಬಹುದು.

'ಪ್ರ ಸಾಮ್ರಾಜೇ ಬೃಹತೇ ಮನ್ಮನು ಪ್ರಿಯಂ
ಅರ್ಚ ದೇವಾಯ ವರುಣಾಯ ಸಪ್ರಥಃ |
ಅಯಂ ಯ ಉರ್ವೀ ಮಹಿನಾ ಮಹಿವ್ರತಃ
ಕೃತ್ವಾ ವಿಭಾತ್ಯಜರೋ ನ ಶೋಚಿಷಾ ||' (6-68-9)

"ಎಲೈ ಸ್ತೋತೃವೇ, ಸಮ್ರಾಟನೂ ಬೃಹತ್ತಮನೂ ದ್ಯೋತಮಾನನೂ ಆದ ವರುಣ ದೇವನಿಗೆ ಮನೋಹರವೂ ವಿಸ್ತಾರವೂ ಆದ ಸ್ತೋತ್ರವನ್ನು ಅರ್ಪಿಸು. ಈ ವರುಣನು ಮಹಿಮಾಯುತನು; ಮಹಾಕರ್ಮಿಯು. ಪ್ರಜ್ಞಾಯುತನೂ ಜರಾರಹಿತನೂ ಆದ ಇವನು ವಿಸ್ತೀರ್ಣವಾದ ದ್ಯಾವಾಪೃಥಿವಿಗಳನ್ನು ತನ್ನ ದೀಪ್ತಿಯಿಂದ ಬೆಳಗುತ್ತಿದ್ದಾನೆ. (6-68-9)

'ಸಮುದ್ರಕ್ಕೆ ನದಿಗಳೆಲ್ಲಾ ಹರಿದರೂ ಸಮುದ್ರ ಕೋಡಿವರಿಯದಂತೆ ನಿಂತಿರುವುದು ಇವನ ಬಲದಿಂದಲೇ–'ಅವ ಸಿಂಧುಂವರುಣೋ ದ್ಯೌರಿವಸ್ಥಾತ್' (7-87-6).

ಎಲ್ಲ ದೇವತೆಗಳಿಗಿಂತ ವರುಣದೇವನಿಗೆ ಪ್ರಧಾನವಾದ ಸ್ಥಾನವಿರುವುದು ಅವನು ನೀತಿರಕ್ಷಕನಾಗಿರುವುದರಿಂದ. ಇವನ ಅಪ್ಪಣೆಯನ್ನು ಉಲ್ಲಂಘಿಸಿದವರ ಮೇಲೆ ಇವನ ಕೋಪವುಂಟಾಗುವುದು. ಶಾಶ್ವತವಾದ ಋತವನ್ನು, ಧರ್ಮವನ್ನು ಪಾಲಿಸುವವರ ವಿಷಯದಲ್ಲಿ ಇವನ ದಯೆ ಹರಿಯುವುದು. ಪಾಪಿಗಳನ್ನು ಇವನ ಪಾಶಗಳು ಬಂಧಿಸುತ್ತವೆ. ಆದರೂ ಅವರು ಪಶ್ಚಾತ್ತಾಪಪಟ್ಟರೆ ಇವನ ಕ್ಷಮೆಗೆ ಪಾತ್ರರಾಗುವರು. ಇಂದ್ರನಿಗೂ ವರುಣನಿಗೂ ಇರುವ ಕರ್ತವ್ಯಗಳ ವ್ಯತ್ಯಾಸವನ್ನು ಒಂದು ಮಂತ್ರದಲ್ಲಿ ಸುಂದರವಾಗಿ ಹೇಳಿದೆ. ಇಂದ್ರ ವೃತ್ರವಧಾದಿಗಳನ್ನು ಮಾಡಿ ತನ್ನ ವೀರ್ಯವನ್ನು ಪ್ರದರ್ಶಿಸುತ್ತಾನೆ. ವರುಣನು ನೀತಿಯನ್ನು ರಕ್ಷಿಸುವ ದೇವನಾಗಿ ಜನರ ನೀತಿರೀತಿಗಳನ್ನು ನೋಡಿಕೊಳ್ಳುತ್ತಾನೆ. ಇವರಿಬ್ಬರ ಈ ವಿಶಿಷ್ಟವಾದ ಕರ್ಮಗಳನ್ನು ಕೆಳಗಿನ ಮಂತ್ರದಲ್ಲಿ ನೋಡಬಹುದು.

"ವೃತ್ರಾಣ್ಯನ್ಯಃ ಸಮಿಥೇಷು ಜಿಘ್ನತೇ
ವ್ರತಾನ್ಯನ್ಯೋ ಅಭಿರಕ್ಷತೇ ಸದಾ |" (7-83-9)

ಒಬ್ಬನು ಶತ್ರುಗಳನ್ನು ಸಂಗ್ರಾಮದಲ್ಲಿ ಕೊಲ್ಲುತ್ತಾನೆ. ಮತ್ತೊಬ್ಬನಾದ ವರುಣನು ಸರ್ವದಾ ಸತ್ಕರ್ಮಗಳ ರಕ್ಷಕನಾಗಿದ್ದಾನೆ.'

ವರುಣನು ಸರ್ವವ್ಯಾಪಕ. ಇವನು ಸರ್ವಧಾರಕನಾಗಿದ್ದಾನೆ. ಇವನು ಪ್ರೇರಿಸುವ ವಾಯು ಸರ್ವಪ್ರಾಣಿಜಾತದ ಪ್ರಾಣವಾಗಿ ಎಲ್ಲರನ್ನೂ ಕಾಪಾಡುತ್ತಿದೆ. ಈ ವಾಯುವಿನಿಂದಲೇ ಮಳೆ, ಸಸ್ಯಸಮೃದ್ಧಿ, ಜನರ ಸುಖ ಸಂತೋಷಗಳು ಉಂಟಾಗುತ್ತವೆ (7-87-2). ಲೋಕದಲ್ಲಿ ಜನರು ಬದುಕಲು ಈ ದೇವನ ಕೃಪೆ ಹೀಗೆ ಮೂಲಕಾರಣವಾಗಿದೆ.

ವರುಣನ ಸರ್ವಶಕ್ತಿತ್ವವನ್ನೂ ಸರ್ವಜ್ಞತ್ವವನ್ನೂ ವರ್ಷಧಾರಕತ್ವವನ್ನೂ

ಕೊಂಡಾಡಿದ್ದಾರೆ. ವರುಣನಿಟ್ಟ ಕಟ್ಟಳೆಯನ್ನು ಎಲ್ಲರೂ ಪಾಲಿಸುವರು. ಲೋಕದ ಕಾರ್ಯಗಳು ಅವನ ಕಟ್ಟಳೆಯಂತೆಯೇ ನಡೆಯುತ್ತವೆ. ಅವನ ಕಟ್ಟಳೆಗಳು ಸ್ಥಿರವಾದವು. 'ಧೃತವ್ರತ' ಎಂದು ಆ ಕಾರಣದಿಂದಲೇ ಅವನನ್ನು ಸಂಬೋಧಿಸಿದ್ದಾರೆ. ಅವನ ಶಕ್ತಿ ಎಷ್ಟು ಅಪಾರವೆಂದರೆ ಲೋಕದಲ್ಲಿ ಯಾರೂ ಅದನ್ನು ಮುಟ್ಟಲಾರರು.

'ನಹೀ ತೇ ಕ್ಷತ್ರಂ ಸಹೋ ನ ಮನ್ಯುಂ
ವಯಶ್ಚನಾಮೀ ಪತಯಂತ ಆಪುಃ |
ನೇಮಾ ಆಪೋ ಅನಿಮಿಷಂ ಚರಂತೀಃ
ನ ಯೇ ವಾತಸ್ಯ ಪ್ರಮಿನಂತ್ಯಭ್ವಮ್ ||' (1-24-6)

'ಎಲೈ ವರುಣನೇ, ಆಕಾಶದಲ್ಲಿ ಬಹಳ ಮೇಲೆ ಹಾರಾಡುವ ಪಕ್ಷಿಗಳೂ ನಿನ್ನ ಸ್ಥಾನವನ್ನಾಗಲೀ, ಬಲವನ್ನಾಗಲೀ ಕೋಪವನ್ನಾಗಲೀ ಮುಟ್ಟಲಾರವು. ಕ್ಷಣವೂ ನಿಲ್ಲದೆ ಹರಿಯುವ ನದಿಗಳೂ ನಿನ್ನ ಬಲಕ್ಕೆ ಸಮನಾಗಲಾರವು. ವಾಯುವಿನ ಗತಿವಿಶೇಷಗಳೂ ನಿನ್ನ ವೇಗವನ್ನು ಮೀರಿಸಲಾರವು.'

'ಮೂರು ಬಗೆಯಾದ ದ್ಯುಲೋಕಗಳೂ ಮೂರು ಭೂಲೋಕಗಳೂ ಅವನಲ್ಲೇ ಇವೆ'– 'ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ ತಿಸ್ರೋ ಭೂಮೀಃ' (7-87-5). ವರುಣನ ಸರ್ವಜ್ಞತ್ವವನ್ನು ಕೆಳಗಿನ ಮಂತ್ರದಲ್ಲಿ ಕಾಣಬಹುದು.

'ವೇದಾ ಯೋ ವೀನಾಂ ಪದಂ
ಅಂತರಿಕ್ಷೇಣ ಪತತಾಮ್ |
ವೇದ ನಾವಃ ಸಮುದ್ರಿಯಃ ||' (1-25-7)

'ಆಕಾಶದಲ್ಲಿ ಹಕ್ಕಿಗಳ ಗಮನವನ್ನು ಬಲ್ಲನು. ಸಮುದ್ರದಲ್ಲಿ ಅವಸ್ಥಿತನಾದ ಇವನು ಜಲಚರಗಳ ಗಮನವನ್ನೂ ಬಲ್ಲನು.'

ದ್ವಾದಶ ಮಾಸಗಳನ್ನೂ ಅವನು ಬಲ್ಲನು ; ಅಧಿಕಮಾಸವನ್ನೂ ತಿಳಿದವನವನು. ವಿಸ್ತೀರ್ಣವೂ ದರ್ಶನೀಯವೂ ಆದ ವಾಯುವಿನ ಗತಿಗಳನ್ನೂ ಅವನು ಬಲ್ಲನು. ಜನರ ಸತ್ಯಾನೃತಗಳನ್ನು ಇವನು ಪ್ರತ್ಯಕ್ಷವಾಗಿ ನೋಡುವನು–'ಸತ್ಯಾನೃತೇ ಅವಪಶ್ಯನ್ ಜನಾನಾಂ' (7-49-3). ವರುಣನ ಗೂಢಚಾರರು ನಮ್ಮ ಸುತ್ತಮುತ್ತಲೂ ಇದ್ದು ನಮ್ಮ ಶುಭಾಶುಭ ಕರ್ಮಗಳನ್ನು ನೋಡುತ್ತಿರುತ್ತಾರೆ (7-87-3).

ವರುಣನು ಪಾಪಮಾಡಿದವರನ್ನೂ, ತನ್ನ ಕಟ್ಟಳೆಯನ್ನು ಮೀರಿನಡೆದವರನ್ನೂ ಕ್ರೂರವಾಗಿ ಶಿಕ್ಷಿಸುತ್ತಾನೆ (7-28-4). ಪಾಪಿಗಳನ್ನವನು ತನ್ನ ಪಾಶಗಳಿಂದ ಕಟ್ಟಿಹಾಕುತ್ತಾನೆ–'ಪ್ರನೋ ಮುಂಚತಂ ವರುಣಸ್ಯ ಪಾಶಾತ್' (6-74-4). ಸುಳ್ಳು ಹೇಳಿದವನನ್ನೂ ಅಕೃತ್ಯ ಮಾಡಿದವನನ್ನೂ ಈ ಪಾಶಗಳು ಬಂಧಿಸುತ್ತವೆ. ಇವುಗಳಿಂದ ಬಿಡಿಸಿ ರಕ್ಷಿಸಬೇಕೆಂಬ ಪ್ರಾರ್ಥನೆ ಅನೇಕ ಕಡೆ ಬಂದಿದೆ.

ವರುಣದೇವನು ಮಹಾಕರ್ಮಿಯೂ ಉಗ್ರನೂ ಆಗಿರುವಂತೆಯೇ ದಯಾಮಯನೂ ಆಗಿದ್ದಾನೆ. 'ಸತೋ ಅಸ್ಯ ರಾಜಾ' (7-87-6) ಆಗಿ ಇರುವುದಕ್ಕೆಲ್ಲಾ ಸಾರ್ವಭೌಮನಾದ ಇವನು ಜನರನ್ನು ದುಃಖದಿಂದ ಪಾರು ಮಾಡಲು ಸಮರ್ಥನೂ ಆಗಿದ್ದಾನೆ–'ಸುಪಾರಕ್ಷತ್ರಃ' (7-87-6). ತಮ್ಮ ಪಾಪಕ್ಕಾಗಿ ಪಶ್ಚಾತ್ತಾಪಪಟ್ಟು ಈ ದೇವನನ್ನು ಆಶ್ರಯಿಸುವಂಥವರ ಪಾಪವನ್ನು ಇವನು ಹೋಗಲಾಡಿಸುತ್ತಾನೆ. ಕರುವಿನ ಕುತ್ತಿಗೆಯಿಂದ ಹಗ್ಗವನ್ನು ಬಿಚ್ಚುವಂತೆ ನಮ್ಮಿಂದ ಪಾಪದ ಕುಣಿಕೆಯನ್ನು ತೆಗೆದುಹಾಕುತ್ತಾನೆ–'ಸೃಜಾ ವತ್ಸಂ ನ ದಾಮ್ನೋ' (7-86-5).

ನಾವು ಮಾಡಿದ ಪಾಪವನ್ನೇ ಕಳೆಯುವುದಲ್ಲದೆ ನಮ್ಮ ಪೂರ್ವಜರ ಪಾಪಗಳಿಂದಲೂ ನಮ್ಮನ್ನು ಬಿಡಿಸಬಲ್ಲನು ಈ ಮಹಾಮಹಿಮ.

'ಅವ ದ್ರುಗ್ಧಾನಿ ಪಿತ್ರ್ಯಾ ಸೃಜಾನೋ
ಅವ ಯಾ ವಯಂ ಚಕೃಮಾ ತನೂಭಿಃ । (7-86-5)

ತನ್ನ ಕಟ್ಟಳೆಯನ್ನು ಮೀರಿ ನಡೆದವನನ್ನೂ ವರುಣನು ರಕ್ಷಿಸುತ್ತಾನೆ, ಅವನು ತನ್ನಲ್ಲಿ ಶರಣು ಬಂದರೆ. ವರುಣಸೂಕ್ತಗಳಲ್ಲೆಲ್ಲಾ ಈ ಬಗೆಯಾದ ಅಪರಾಧಗಳಿಂದ ಕ್ಷಮಿಸಬೇಕೆಂಬ ಪ್ರಾರ್ಥನೆ ಇದ್ದೇ ಇದೆ.

'ಎಲೈ ವರುಣದೇವನೇ, ಪಾಪಪ್ರವೃತ್ತಿಯಲ್ಲಿ ಪುರುಷನ ಸ್ವಭೂತವಾದ ಬಲಕಾರಣವಲ್ಲ. ಹುಟ್ಟುವ ಸಮಯದಲ್ಲಿಯೇ ನಿಶ್ಚಿತವಾದ ದೈವಗತಿ ಕಾರಣ. ಅದಕ್ಕಾದರೂ ಸುರೆ, ಕ್ರೋಧ, ದ್ಯೂತಸಾಧನವಾದ ಅಕ್ಷ, ಅಜ್ಞಾನ ಇವುಗಳೇ (ಕಾರಣ). (ಅಲ್ಲದೆ) ಅಲ್ಪನಾದ ಪುರುಷನ (ಪಾಪಪ್ರವೃತ್ತಿಯಲ್ಲಿ ನಿಯಾಮಕನಾಗಿ) ಸಮೀಪದಲ್ಲಿಯೇ ಸರ್ವಾಧಿಕನಾದ ಈಶ್ವರನೂ ಇದ್ದಾನೆ. ಸ್ವಪ್ನವೂ ಸಹ ಪಾಪಕ್ಕೆ ಹೆಚ್ಚಾಗಿ ಕಾರಣವಾಗಿದೆ' ಎಂಬ ಭಾವ ಇಲ್ಲಿ ಬಂದಿದೆ–

'ನ ಸ ಸ್ವೋ ದಕ್ಷೋ ವರುಣ ಧ್ರುತಿಃ ಸಾ
ಸುರಾ ಮನ್ಯುರ್ವಿಭೀದಕೋ ಅಚಿತ್ತಿಃ ।
ಅಸ್ತಿ ಜ್ಯಾಯಾನ್ಕನೀಯಸ ಉಪಾರೇ
ಸ್ವಪ್ನಶ್ಚನೇದನೃತಸ್ಯ ಪ್ರಯೋತಾ ॥' (7-86-6)

ಈ ಮಂತ್ರದಲ್ಲಿ 'ಸ್ವಪ್ನದಲ್ಲಿಯೂ ಪಾಪಗಳನೇಕ ಘಟಿಸುವಾಗ ಜಾಗ್ರದವಸ್ಥೆಯಲ್ಲಿ ಹೇಳಬೇಕಾದುದೇನು ? ಈ ಪಾಪಸಂಬಂಧವೂ ದೈವಗತವಾದುದು. ಇದನ್ನು ಕ್ಷಮಿಸಬೇಕು' ಎಂಬ ಭಾವವಿದೆ.

ವರುಣನಲ್ಲಿ ಬಂಧನಿವಾರಕವಾದ ನೂರಾರು, ಸಹಸ್ರಾರು ಔಷಧಿಗಳಿವೆ–'ಶತಂ ತೇ ರಾಜನ್ ಭಿಷಜಃ ಸಹಸ್ರಂ' (1-24-9). ದೀರ್ಘವಾದ ಆಯುಸ್ಸನ್ನು ಕರುಣಿಸಲೂ ಹಾಗೆಯೇ ಅಲ್ಪಾಯುವನ್ನಾಗಿ ಮಾಡಲೂ ಅವನು ಸಮರ್ಥನು (1-25-12). ಅಮೃತತ್ವದ ರಕ್ಷಕನವನು– 'ಅಮೃತಸ್ಯಗೋಪಾಂ' (7-42-2).

ವರುಣಭಕ್ತನು ತನ್ನ ಆರಾಧ್ಯದೈವವಾದ ವರುಣನನ್ನು ಯಾವಾಗ ಕಂಡೇನು ಎಂದು ಹಂಬಲಿಸುತ್ತಾನೆ–'ಕದಾನು ಅಂತಃ ವರುಣೇ ಭುವಾನಿ' (7-86-2), ಇಂಥ ಪರಮಶಕ್ತನೂ ಪರಮಕರುಣಾಕರನೂ ಆದ ದೇವನಲ್ಲಿ ಸಲ್ಲಿಸಿರುವ ಪ್ರಾರ್ಥನೆ ಇದು :

'ಯತ್ಕಿಂಚೇದಂ ವರುಣ ದೈವ್ಯೇ
ಜನೇಭಿದ್ರೋಹಂ ಮನುಷ್ಯಾಶ್ಚರಾಮಸಿ ।
ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ
ಮಾ ನಸ್ತಸ್ಮಾದೇನಸೋ ದೇವ ರೀರಿಷಃ ॥' (7-89-5)

'ಎಲೈ ವರುಣನೇ, ಮನುಷ್ಯರಾದ ನಾವು ದೇವತೆಗಳಲ್ಲಿ ಯಾವ ಅಪಕಾರವನ್ನು ಮಾಡಿದ್ದೇವೆಯೋ, ನೀನಿಟ್ಟ ಧರ್ಮವನ್ನು ಅಜ್ಞಾನದಿಂದ ಉಲ್ಲಂಘಿಸಿದ್ದೇವೆಯೋ ಆ ಎಲ್ಲ ಪಾಪಕ್ಕಾಗಿ ನಮ್ಮನ್ನು ಹಿಂಸಿಸಬೇಡ.'

ಕಿತವಾಸೋ ಯದ್ರಿ ರಿಪುರ್ನದೀವಿ
ಯದ್ವಾಘಾ ಸತ್ಯಮುತ ಯನ್ನ ವಿದ್ಮ

ಸರ್ವಾ ತಾ ವಿಷ್ಯ ಶಿಥಿರೇವ ದೇವಾ-
ಽಥಾತೇ ಸ್ಯಾಮ ವರುಣ ಪ್ರಿಯಾಸಃ ॥ (5-85-8)

"ಎಲೈ ದೇವನೆ, ದ್ಯೂತಕಾರರು ಜೂಜಾಟದಲ್ಲಿ ಆರೋಪಮಾಡುವಂತೆ ನಮ್ಮ ಮೇಲೆ ಶತ್ರುಗಳಿಂದ ಆರೋಪಿಸಲ್ಪಟ್ಟ ಪಾಪಗಳನ್ನೂ, ನಾವು ನಿಜವಾಗಿ ಮಾಡಿದ ಪಾಪಗಳನ್ನೂ ಮತ್ತು ಮಾಡಿದ ಯಾವ ಪಾಪವನ್ನು ನಾವು ಅರಿತಿಲ್ಲವೋ ಅವುಗಳನ್ನೂ ಹೀಗೆ ಎಲ್ಲ ಪಾಪಗಳನ್ನೂ ನಮ್ಮಿಂದ ಶಿಥಿಲಗೊಳಿಸಿ ಬಿಡಿಸು. ಎಲೈ ವರುಣನೇ ನಾವು ನಿನಗೆ ಪ್ರಿಯರಾಗುವಂತಾಗಲಿ."

ವರುಣದೇವನೂ ಮಿತ್ರದೇವನೂ ಸೌರದೇವತೆಗಳಾಗಿದ್ದಾರೆ. ಇವರಿಬ್ಬರನ್ನೂ ಒಟ್ಟಿಗೆ ಅನೇಕ ಸೂಕ್ತಗಳಲ್ಲಿ ಸ್ತುತಿಸಿದ್ದಾರೆ. ಮಿತ್ರನಂತೂ ಸೂರ್ಯನೊಡನೆ ಸಂಬಂಧಿಸಿರುವುದು ಸುಸ್ಪಷ್ಟವಾಗಿಯೇ ಇದೆ. ವರುಣದೇವನು ವಿಸ್ತಾರವಾದ ಆಕಾಶವನ್ನು ಪ್ರತಿನಿಧಿಸುವನೆಂದು ಕೆಲವು ವಿಮರ್ಶಕರು ಭಾವಿಸುತ್ತಾರೆ. ಸೂರ್ಯನಿಗೆ ಆಶ್ರಯವಾಗಿ ತೋರುವ ಆಕಾಶ ಅವನಿಗಿಂತಲೂ ವಿಶಾಲವಾಗಿದೆ. ಇವರಿಬ್ಬರಿಗೂ ಸಂಬಂಧವೂ ನಿಕಟವಾಗಿದೆ. ಸೂರ್ಯನನ್ನು ಆಕಾಶದ ನೇತ್ರವೆಂದು ಹೇಳುವುದೂ ಅರ್ಥಯುಕ್ತವಾಗುತ್ತದೆ. ಪರಮಾಕಾಶದಲ್ಲಿ ಭವ್ಯವಾದ ವರುಣಭವನ ಇದೆಯೆಂಬುದೂ ವರುಣನು ಮಳೆಯನ್ನು ಕರುಣಿಸುವನೆಂಬುದೂ ಆಕಾಶಧಾಮವನ್ನು ಪ್ರತಿನಿಧಿಸುವ ದೇವತೆಗೆ ಯುಕ್ತವಾಗಿ ಕಾಣುತ್ತದೆ. ಸರ್ವವನ್ನೂ ವ್ಯಾಪಿಸಿ ಪರಮೋನ್ನತವಾಗಿ ಭೂಮಿಯನ್ನು ಮೀರಿ ನಿಂತಿರುವುದೂ, ಗ್ರಹಣಗಳೆಲ್ಲದರ ಗತಿಗಳಿಗೆ ಏಕಾಯವಾಗಿ ಆಶ್ರಯವಾಗಿರುವುದೂ ಆದ ಗಗನಮಂಡಲವನ್ನು ವರುಣದೇವನೆಂದು ರೂಪಣಮಾಡಿ ಹೀಗೆ ವರ್ಣಿಸಿದ್ದಾರೆಂದು ಆಧುನಿಕ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಆದರೆ ಈ ವಿಚಾರದಲ್ಲಿಯೂ ವಿಮರ್ಶಕರಲ್ಲಿ ಒಮ್ಮತವಿಲ್ಲ. ಓಲ್ಡೆನ್‌ಬರ್ಗ್ ಮಹಾಶಯ ವರುಣನು ಮೊದಲು ಚಂದ್ರನನ್ನು ಪ್ರತಿನಿಧಿಸಿದನೆಂದು ಹೇಳುತ್ತಾನೆ. ಇವನ ಅಭಿಪ್ರಾಯದಂತೆ ವರುಣನು ಚಂದ್ರನನ್ನೂ ಮಿತ್ರನು ಸೂರ್ಯನನ್ನೂ ಸೂಚಿಸುತ್ತಾರೆ. ಋಗ್ವೇದದಲ್ಲಿ ವರುಣದೇವನು ಜ್ಯೋತಿರ್ಗಣಗಳನ್ನು ನಿಯಮಿಸುವವನೂ ಭೌತಿಕ ಮತ್ತು ನೈತಿಕ ಪ್ರಪಂಚದಲ್ಲಿ ನೀತಿಯನ್ನು ಪಾಲಿಸುವವನೂ ಆಗಿದ್ದಾನೆ. ಆದರೂ ಸಾಹಸಿಯೂ, ವೀರನೂ ವೀರಚರಿತನೂ ಆದ ಇಂದ್ರನಿಗೆ ಹೆಚ್ಚಿನ ಪ್ರಾಧಾನ್ಯ ಬಂದಿತು. ಮುಂದೆ ಪ್ರಜಾಪತಿಯನ್ನು ಪರಮದೇವನೆಂದು ಎಣಿಸಿದಾಗ ವರುಣನ ಪ್ರಾಬಲ್ಯ ಕುಂದಿಹೋಯಿತು. ಆತನನ್ನು ವೇದೋತ್ತರ ಕಾಲದಲ್ಲಿ ಜಲದೇವತೆಯೆಂದು ಭಾವಿಸಿದರು. ಹೀಗೆ ಈ ದೇವತೆಯ ನಿಜ ಸ್ವರೂಪವನ್ನು ಅರಿಯಲು ವಿಚಾರ ಮಾಡಿದ್ದಾರೆ.

ವರುಣದೇವನು ಇಂಡೋ ಇರಾನಿಯನ್ ಕಾಲಕ್ಕಿಂತಲೂ ಹಿಂದಿನ ಕಾಲಕ್ಕೆ ಸಂಬಂಧಿಸಿರುವನೆಂದು ತಿಳಿಯಬಹುದು. ಜಂತವಸ್ತಾದ ಅಹುರಮಜ್ದನು ವರುಣದೇವನ ಲಕ್ಷಣಗಳನ್ನೇ ಹೊಂದಿರುವುದನ್ನು ನಾವು ಗಮನಿಸಬಹುದು. ವರ್-ಆವರಿಸು ಎಂಬ ಧಾತುವಿನಿಂದ ಈ ಪದ ಬಂದಿದೆ. 'ವರುಣೋ ವೃಣೋತೀತಿ ಸತಃ' ಎಂದು ಹೇಳಿ ಮೇಘಜಾಲದಿಂದ ಆಕಾಶವನ್ನು ಆವರಿಸುವವನು ವರುಣನೆಂದು ಯಾಸ್ಕಾಚಾರ್ಯರು ಹೇಳುತ್ತಾರೆ-(ನಿ. 10-3-2). ಸಾಯಣಾಚಾರ್ಯರು 'ವೃಣೋತಿ ಪಾಪಕೃತಃ ಸ್ವಕೀಯೈಃ ಪಾಶೈರಾವೃಣೋತೀತಿ ರಾತ್ರ್ಯಭಿಮಾನಿದೇವೋ ವರುಣಃ' ಎಂದು ಹೇಳುತ್ತಾರೆ. (1-89-3). ಇವರ ಅಭಿಪ್ರಾಯದಲ್ಲಿ ವರುಣನು ರಾತ್ರಿಗೆ ಅಭಿಮಾನದೇವತೆ. ಬ್ರಾಹ್ಮಣ ಗ್ರಂಥಗಳಲ್ಲಿ ಮಿತ್ರನು ಹಗಲಿಗೆ ಅಭಿಮಾನಿದೇವತೆಯೆಂದೂ ವರುಣನು ರಾತ್ರಿಗೆ ಅಭಿಮಾನಿದೇವತೆಯೆಂದೂ ವರ್ಣಿಸಿದೆ.

ತೈತ್ತರೀಯ ಸಂಹಿತೆಯಲ್ಲಿ (2-1-74) ಮಿತ್ರನಿಗೆ ಬಿಳಿಯ ಬಣ್ಣದ ಪಶುವನ್ನೂ ವರುಣನಿಗೆ ಕೃಷ್ಣವರ್ಣದ ಪಶುವನ್ನೂ ಯಾಗ ಮಾಡಬೇಕೆಂದು ಹೇಳಿದೆ. ಪ್ರಾತಃಕಾಲದ ಸಂಧ್ಯಾವಂದನೆಯಲ್ಲಿ ಮಿತ್ರಸ್ತುತಿಯೂ ಸಾಯಂಸಂಧ್ಯೆಯಲ್ಲಿ ವರುಣಸ್ತುತಿಯೂ ಈ ಕಾರಣದಿಂದಲೇ ರೂಢಿಗೆ ಬಂದಿದೆ. ಆದ್ದರಿಂದ ವರುಣನು ರಾತ್ರ್ಯಭಿಮಾನಿ ದೇವತೆಯೆಂದು ಪ್ರಾಚೀನರ ಅಭಿಪ್ರಾಯ.

## ಮಿತ್ರ

ಮಿತ್ರ ದೇವತೆಯನ್ನು ವರುಣನೊಡನೆಯೇ ಅಧಿಕವಾಗಿ ಸ್ತುತಿಸಿದ್ದಾರೆ. ಪ್ರತ್ಯೇಕವಾಗಿ ಇವನೊಬ್ಬನನ್ನೇ ಸ್ತುತಿಸಿರುವ ಸೂಕ್ತ ಒಂದೇ ಒಂದು. ಅವೆಸ್ತಾದಲ್ಲಿನ 'ಮಿಥ್ರ' ದೇವತೆಯನ್ನು ಇವನು ಹೋಲುತ್ತಾನೆ. ಅಲ್ಲಿಯೂ 'ಮಿಥ್ರ'ನು ಸೂರ್ಯನಿಗೆ ಸಂಬಂಧಿಸಿದ್ದಾನೆ. ಸೌರದೇವತೆಗಳಲ್ಲಿ ಮಿತ್ರನೂ ಒಬ್ಬನು. ಸಾಯಣಾಚಾರ್ಯರು ಮಿತ್ರ ಎಂಬ ಶಬ್ದದ ನಿರ್ವಚನವನ್ನು ಮಾಡುತ್ತಾ 'ಪ್ರಕರ್ಷೇಣ ಸರ್ವೈರ್ಮಿರ್ಯತೇ ತಥಾ ಸರ್ವಾನ್ ವೃಷ್ಟಿಪ್ರದಾನೇನ ತ್ರಾಯತೇ ಇತಿ ವಾ ಮಿತ್ರಃ ಸೂರ್ಯ:' (3-59-1) ಎಂದು ಹೇಳುತ್ತಾರೆ.

'ಪ್ರಬ್ರುವಾಣಃ ಶಬ್ದಂ ಕುರ್ವನ್ ಮಿತ್ರ ಏವ ಧಾರಯತಿ
ಪೃಥಿವೀಂ ಚ ದಿವಂ ಚ ಮಿತ್ರಂ ಕೃಷ್ಟೀರನಿಮಿಷನ್ನಭಿವಿಶ್ಚಕ್ಷೀತಿ'–

'ಮಳೆಸುರಿಸಿ ಸರ್ವಲೋಕಗಳನ್ನೂ ನಾಶವಾಗದಂತೆ ಕಾಪಾಡುವವನು ಮಿತ್ರ ; ಅಂತರಿಕ್ಷಲೋಕದಲ್ಲಿ ಸುತ್ತಲೆತ್ತಲೂ ಮಳೆಸುರಿಸುವವನು ಮಿತ್ರ; ಎಲ್ಲವನ್ನೂ ಮಳೆಯಿಂದ ನೆನೆಸುವವನು ಮಿತ್ರ'–'ಮಿತ್ರಃ ಪ್ರಮೀತೇಸ್ತ್ರಾಯತೇಃ ಸಮ್ಮಿನ್ವಾನೋ ದ್ರವತೀತಿವಾ ; ಮೇದಯತೇರ್ವಾ' ಎಂದು ಯಾಸ್ಕರು ಈ ಶಬ್ದದ ನಿರ್ವಚನ ಮಾಡುತ್ತಾರೆ (ನಿ. 19-21-4). 'ಮಿತ್ರನು ಶಬ್ದಮಾಡುತ್ತಾ ಜನಗಳನ್ನು ಪ್ರೇರಿಸುತ್ತಾನೆ ; ಉಭಯಲೋಕಗಳನ್ನೂ ಧರಿಸಿದ್ದಾನೆ; ಮನುಷ್ಯರು ಕರ್ಮವಂತರಾಗುವಂತೆ ಮಾಡುತ್ತಾನೆ' ಎಂದು ಯಾಸ್ಕಾಚಾರ್ಯರು ಹೇಳುತ್ತಾರೆ (ನಿ. 10-22). ಮಿತ್ರ ಎಂಬ ಶಬ್ದಕ್ಕೆ ಸ್ನೇಹಿತನೆಂಬ ಅರ್ಥವಿದೆ. ಈ ಅರ್ಥದಲ್ಲಿಯೂ ಈ ಪದ ಋಗ್ವೇದದಲ್ಲಿ ಬಳಸಲಾಗಿದೆ. ಮಿತ್ರನ ಸ್ನೇಹಮಯವಾದ ಶೀಲವನ್ನು ಈ ಹೆಸರು ಸೂಚಿಸುತ್ತದೆ.

'ಆದಿತ್ಯರಲ್ಲಿ ಶ್ರೇಷ್ಠನಿವನು. ದ್ಯಾವಾಪೃಥಿವಿಗಳನ್ನು ಇವನು ದೃಢವಾಗಿ ನಿಲ್ಲಿಸಿದ್ದಾನೆ. ಅನಿಮಿಷ ನೇತ್ರಗಳಿಂದ ಜನರನ್ನು ಇವನು ನೋಡುತ್ತಾ ಅವರು ಕೃಷಿಯೇ ಮೊದಲಾದ ಕೆಲಸಗಳಲ್ಲಿ ತೊಡಗುವಂತೆ ಮಾಡುತ್ತಾನೆ' ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ:

'ಮಿತ್ರೋ ಜನಾನ್ಯಾತಯತಿ ಬ್ರುವಾಣೋ
ಮಿತ್ರೋ ದಾಧಾರ ಪೃಥಿವೀಮುತ ದ್ಯಾಮ್ ।
ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ
ಮಿತ್ರಾಯ ಹವ್ಯಂ ಘೃತವಜ್ಜುಹೋತ ॥' (3-59-1)

ಮಿತ್ರನು ಎಲ್ಲ ಜನರನ್ನೂ ಒಂದುಗೂಡಿಸುತ್ತಾನೆ ಮತ್ತು ಕೆಲಸಗಳಲ್ಲಿ ಪ್ರವರ್ತನಗೊಳಿಸುತ್ತಾನೆ–'ಜನಂ ಚ ಮಿತ್ರೋ ಯತತಿ ಬ್ರುವಾಣಃ' (7-36-2). ವರುಣನಾದರೋ ಧರ್ಮಾಧರ್ಮಸಂಸ್ಥಾಪಕನಾಗಿದ್ದಾನೆ. ಇವರಿಬ್ಬರಿಗಿರುವ ವ್ಯತ್ಯಾಸವಿದು. ಇವನ ರಕ್ಷಣೆಗೊಳಗಾದವನಿಗೆ ಹತ್ತಿರದ ಅಥವಾ ದೂರದ ಪಾಪಗಳ ಭೀತಿಯೂ ಇಲ್ಲವೆಂದು ಹೇಳಿದೆ.

'ಪ್ರ ಸ ಮಿತ್ರಮರ್ತೋ ಅಸ್ತು ಪ್ರಯಸ್ವಾನ್
ಯಸ್ತ ಆದಿತ್ಯ ಶಿಕ್ಷತಿ ವ್ರತೇನ |
ನ ಹನ್ಯತೇ ನ ಜೀಯತೇ ತ್ವೋತೋ ನೈನಂ
ಅಂಹೋ ಅಶ್ನೋತ್ಯಂತಿತೋ ನ ದೂರಾತ್ ||' (3-59-2)

'ಎಲೈ ಆದಿತ್ಯನೇ, ಮಿತ್ರನೇ, ಯಾವನು ಯಾಗಮಾಡಿ ನಿನಗೆ ಹವಿಸ್ಸಮರ್ಪಣೆಯನ್ನು ಮಾಡುವನೋ ಆ ಮನುಷ್ಯನು ಅನ್ನವಂತನಾಗಲಿ. ನಿನ್ನಿಂದ ರಕ್ಷಿಸಲ್ಪಟ್ಟವನನ್ನು ಯಾರೂ ಬಾಧಿಸಲಾರರು. ಯಾರೂ ಜಯಿಸಲಾರರು. ಅಂಥವನನ್ನು ಸಮೀಪದ ಅಥವಾ ದೂರದ ಪಾಪಗಳು ಸೋಕುವುದಿಲ್ಲ.'

ಮಿತ್ರನು ಸರ್ವಧಾರಕನಾಗಿದ್ದಾನೆ. ದೇವತೆಗಳಿಗೂ ಅವನು ಧಾರಕ. 'ಸ ದೇವಾನ್ ವಿಶ್ವಾನ್ ಬಿಭರ್ತಿ' (3-59-8). 'ಮಿತ್ರನು ತನ್ನ ಮಹಿಮೆಯಿಂದಲೇ ಅಂತರಿಕ್ಷವನ್ನೆಲ್ಲಾ ಅಭಿಭವಿಸುತ್ತಾನೆ. ಮಳೆಯುಂಟುಮಾಡುವುದರ ಮೂಲಕ ಅನ್ನೋತ್ಪತ್ತಿಗೆ ಕಾರಣನಾಗಿ ಪೃಥಿವಿಯನ್ನೂ ತನ್ನ ಮಹಿಮೆಯಿಂದ ವ್ಯಾಪಿಸಿದ್ದಾನೆ' ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ:

'ಅಭಿಯೋ ಮಹಿನಾ ದಿವಂ
ಮಿತ್ರೋ ಬಭೂವ ಸಪ್ರಥಾಃ |
ಅಭಿ ಶ್ರವೋಭಿಃ ಪೃಥಿವೀಮ್ ||' (3-59-7)

ತನ್ನ ಮಹಿಮೆಯಿಂದ ಇವನು ದ್ಯುಲೋಕ ಮತ್ತು ಭೂಲೋಕಗಳೆರಡರಲ್ಲಿಯೂ ಸರ್ವಶ್ರೇಷ್ಠನಾಗಿದ್ದಾನೆ. ಆದ್ದರಿಂದಲೇ ಇವನು 'ಮಹಾನ್ ಆದಿತ್ಯಃ'. ಪ್ರತಿದಿನವೂ ಜನರು ಕರ್ಮಪ್ರವಣರಾಗುವಂತೆ ಪ್ರೇರಿಸುವನಿವನು. ಆದ್ದರಿಂದಲೇ ಇವನು 'ಯಾತಯಜ್ಜನಃ' ಎಂದು ಪ್ರಸಿದ್ಧನಾಗಿದ್ದಾನೆ. ಸೂರ್ಯನ ಗತಿಯನ್ನು ಮಿತ್ರನು ಕ್ರಮಪಡಿಸುವಂತೆ ಕೆಲವು ಮಂತ್ರಗಳಿಂದ ಗೊತ್ತಾಗುತ್ತದೆ. ಸವಿತೃವಿಗೂ ಸೂರ್ಯನಿಗೂ ತಾದಾತ್ಮ್ಯವನ್ನು (5-81-4) ಹೇಳಿರುವುದೂ ಮಿತ್ರನ ಕಟ್ಟಳೆಯಂತೆ ವಿಷ್ಣು ಮೂರು ಪಾದನ್ಯಾಸಗಳನ್ನು ಮಾಡುವನೆಂದು (ವಾಲಖಿಲ್ಯ 6-43) ಹೇಳಿರುವುದೂ ಇದನ್ನು ಸೂಚಿಸುತ್ತವೆ.

ಮಿತ್ರದೇವನ ಸರ್ವಾನುಗ್ರಾಹಕತ್ವವನ್ನೂ, ಸರ್ವಶ್ರೇಷ್ಠತೆಯನ್ನೂ, ಸರ್ವಸ್ವಾಮಿತ್ವವನ್ನೂ ಇಲ್ಲಿ ಕೊಂಡಾಡಿದ್ದಾರೆ. ಪ್ರಕಾಶಪ್ರದನೂ, ಸರ್ವನಮಸ್ಕರಣೀಯನೂ, ಸರ್ವಸೇವ್ಯನೂ, ಸರ್ವಾಧಿಪನೂ ಆದ ಇವನಲ್ಲಿ ಋಷಿಗಳು ಬೇಡುವುದಾದರೂ ಇವನ ಅನುಗ್ರಹವನ್ನೇ. ಇವನ ಸೌಮನಸ್ಯ ನಮ್ಮ ಮೇಲುಂಟಾಗಲಿ ಎಂಬುದಾಗಿ ಅವರು ಬೇಡುತ್ತಾರೆ.

'ಅನಮೀವಾಸ ಇಳಯಾ ಮದಂತೋ
ಮಿತಜ್ಞವೋ ವರಿಮನ್ನಾ ಪೃಥಿವ್ಯಾಃ |
ಆದಿತ್ಯಸ್ಯ ವ್ರತಮುಪಕ್ಷಿಯಂತೋ
ವಯಂ ಮಿತ್ರಸ್ಯ ಸುಮತೌ ಸ್ಯಾಮ ||' (3-59-3)

'ಎಲೈ ಮಿತ್ರನೇ, ನಾವು ರೋಗರಹಿತರಾಗಿ ಅನ್ನ ಸಮೃದ್ಧಿಯಿಂದ ಸಂತುಷ್ಟರಾಗಿ ವಿಸ್ತೀರ್ಣವಾದ ಈ ಭೂಮಂಡಲದಲ್ಲಿ ಅಚಲವಾದ ಜಂಘಾಬಲದಿಂದ ಕೂಡಿ ಆದಿತ್ಯ ದೇವನ ಕಟ್ಟಳೆಗಳನ್ನು ಕಟ್ಟುನಿಟ್ಟಾಗಿ ಪರಿಪಾಲಿಸುತ್ತಾ ಮಿತ್ರದೇವನ ಅನುಗ್ರಹದ ನೆರಳಲ್ಲಿ ಬಾಳೋಣ.'

**ಸೂರ್ಯ**

ಸೌರದೇವತೆಗಳಲ್ಲಿ ಸೂರ್ಯನು ಪ್ರಧಾನತಮನಾದವನು. ಋಗ್ವೇದದ ಸೂಕ್ತ ಸೂರ್ಯೋಪಾಸನೆಗೇ ಪ್ರವೃತ್ತವಾಗಿದೆಯೋ ಎಂದು ಎನ್ನುವಷ್ಟು ಮಟ್ಟಿಗೆ ಈ ದೇವತೆಗೆ ಪ್ರಾಧಾನ್ಯವಿದೆ. ಕಾತ್ಯಾಯನರು ತಮ್ಮ ಸರ್ವಾನುಕ್ರಮಣಿಕೆಯಲ್ಲಿ ಬೇರೆ ಬೇರೆ ಕರ್ಮಗಳಿರುವ ಕಾರಣ ದೇವತೆಗಳನ್ನು ಬೇರೆ ಬೇರೆಯಾಗಿ ಕರೆದು ಸ್ತುತಿಸಿದ್ದಾರೆಂದೂ, ದೇವತೆ ಏಕಮೇವಾದ್ವಿತೀಯವೆಂದೂ ಹೇಳಿ ಆ ದೇವತೆ ಸೂರ್ಯ ಎಂದು ಹೇಳುತ್ತಾರೆ.–"ಏಕೈವ ವಾ ಮಹಾನಾತ್ಮಾ ದೇವತಾ | ಸ ಸೂರ್ಯ ಇತ್ಯಾಚಕ್ಷತೇ | ಸ ಹಿ ಸರ್ವಭೂತಾತ್ಮ | ತದುಕ್ತಂ ಋಷಿಣಾ ಸೂರ್ಯ ಆತ್ಮಾ ಜಗತಸ್ತ ಸ್ಥುಷಶ್ಚೇತಿ | ತದ್ವಿಭೂತಯೋ ಅನ್ಯಾ ದೇವತಾಃ" (ಸರ್ವಾನುಕ್ರಮಣೀ, ಪು. 2.)

ಯಾಸ್ಕಚಾರ್ಯರು ಸೂರ್ಯಶಬ್ದ ನಿರ್ವಚನಮಾಡುತ್ತಾ

'ಸೂರ್ಯಃ ಸರ್ತೇರ್ವಾ ; ಸುವತೇರ್ವಾ ; ಸ್ವೀರ್ಯತೇರ್ವಾ' ಎಂದು ಹೇಳಿ 'ಸವಿತೃ ಕಾಲದ ನಂತರ ಆ ಉತ್ತಮಜ್ಯೋತಿಗೆ ಭಗ ಎಂದು ಹೆಸರು ಬರುವುದು; ತದನಂತರ ಅದಕ್ಕೆ ಸೂರ್ಯನೆಂಬ ಹೆಸರು ಬರುವುದು; ಇದೆಲ್ಲವನ್ನೂ ಅವನೇ ಉಂಟುಮಾಡುವುದರಿಂದ ಸೂರ್ಯ; ವಾಯುವಿನಿಂದ ಇವನು ಪ್ರೇರಿಸಲ್ಪಡುವುದರಿಂದ ಸೂರ್ಯ ;' ಎಂದು ಹೇಳುತ್ತಾರೆ. ಸೂರ್ಯ ಶಬ್ದ ದೇವತಾಪರವಾಗಿರುವಂತೆ ಸೂರ್ಯನ ಮಂಡಲಕ್ಕೂ ಅನ್ವಯಿಸುತ್ತದೆ. ಋಗ್ವೇದದಲ್ಲಿ ಹತ್ತು ಸೂಕ್ತಗಳು ಸೂರ್ಯದೇವತಾಕವಾಗಿವೆ. ಆಕಾಶದಲ್ಲಿ ವಿರಾಜಿಸುವ ಪರಮಪೂಜ್ಯವಾದ ಸೂರ್ಯನ ತೇಜಸ್ಸು ಮಹತ್ತಮನಾದ ಅಗ್ನಿಯ ಮುಖಮಂಡಲದಂತೆ ವಿರಾಜಿಸಿದೆ–'ಅಗ್ನೇರನೀಕಂ ಬೃಹತಃ' (10-7-3). ಸೂರ್ಯನ ಚಕ್ಷುಸ್ಸನ್ನು ಅನೇಕಕಡೆ ಹೇಳಿರುವಂತೆಯೇ ಆ ಸೂರ್ಯನು ಮಿತ್ರಾವರುಣರ ಚಕ್ಷುಸ್ಸೆಂದೂ ವರ್ಣಿಸಿದೆ. ದೇವತೆಗಳು ಕಣ್ಣಾದ ಸೂರ್ಯನನ್ನು ಉಷೆ ಕರೆದುಕೊಂಡು ಬರುವಳೆಂದು–'ದೇವಾನಾಂ ಚಕ್ಷುಃ ಸುಭಗಾ ವಹಂತೀ' (7-77-3) ಎಂಬಲ್ಲಿ ವರ್ಣಿಸಿದ್ದಾರೆ. ಹೀಗೆ ಇವನನ್ನು ಜಗಚ್ಚಕ್ಷುವೆಂದು ಸ್ತುತಿಸಿದ್ದಾರೆ. ಸೂರ್ಯದೇವ ಸರ್ವದರ್ಶಿ–'ಸೂರ್ಯಾಯ ವಿಶ್ವಚಕ್ಷಸೇ' (1-50-2) ; ಹಾಗೆಯೇ ದೂರದರ್ಶಿಯೂ ಹೌದು–'ಸೂರ್ಯ ಉರುಚಕ್ಷಾಃ' (7-35-8) ; ಸಕಲಲೋಕಗಳಲ್ಲಿನ ಎಲ್ಲ ಜನರನ್ನೂ ಅವರು ಮಾಡುವ ಶುಭಾಶುಭ ಕರ್ಮಗಳನ್ನೂ ನೋಡುತ್ತಿರುವ ಸರ್ವಸಾಕ್ಷಿ– 'ವಿಶ್ವಸ್ಯ ಸ್ಥಾತುರ್ಜಗತಶ್ಚ ಗೋಪಾ ಋಜು ಮರ್ತೇಷು ವೃಜಿನಾ ಚ ಪಶ್ಯನ್' (7-60-2). ಸೂರ್ಯನು ಉದಯಿಸಿದಾಗಲೇ ಅವನಿಂದ ಪ್ರೇರಿತರಾಗಿ ಜನರು ತಾವು ಅನುಷ್ಠಿಸಬೇಕಾದ ಕೆಲಸಗಳಲ್ಲಿ ತೊಡಗುವರು–'ನೂನಂ ಜನಾಃ ಸೂರ್ಯೇಣ ಪ್ರಸೂತಾ ಅಯನ್ನರ್ಥಾನಿ ಕೃಣವನ್ನಪಾಂಸಿ' (7-63-4).

ಸೂರ್ಯದೇವನು ಸುಮನೋಹರವಾದ ರಥದಲ್ಲಿ ಕುಳಿತು ಬರುವನು ಮಹತ್ತಮನಾದ ತೇಜೋಯುಕ್ತನಾಗಿ. ಸೂರ್ಯನ ಉದಯದ ಬೆಡಗನ್ನು ಕೆಳಗಿನ ಮಂತ್ರಗಳಲ್ಲಿ ಕಾಣಬಹುದು.

> 'ಉದ್ವೇತಿ ಸುಭಗೋ ವಿಶ್ವಚಕ್ಷಾಃ
> ಸಾಧಾರಣಃ ಸೂರ್ಯೋ ಮಾನುಷಾಣಾಂ |
> ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಃ
> ಚರ್ಮೇವ ಯಃ ಸಮವಿವ್ಯಕ್ತಮಾಂಸಿ ||' (7-63-1)

'ಉನ್ನತವಾದ ಸ್ತೋತ್ರಗಳಿಗೆ ಪಾತ್ರನಾದವನೂ, ಸರ್ವವನ್ನೂ ಕಾಣುವವನೂ, ಎಲ್ಲ ಮನುಷ್ಯರಲ್ಲಿಯೂ ಏಕರೂಪಿಯಾಗಿರುವವನೂ, ಮಿತ್ರಾವರುಣರ ಪ್ರಕಾಶಕನೂ, ದ್ಯೋತಮಾನನೂ ಆದ ಸೂರ್ಯದೇವನು ಉದಯಿಸಿ ಬರುತ್ತಿದ್ದಾನೆ. ಮಹಾನುಭಾವನಾದ ಅವನು ಉದಯಿಸುವಾಗಲೇ ಕತ್ತಲೆಯನ್ನು ಚರ್ಮವನ್ನು ಸುರುಳಿಸುತ್ತುವಂತೆ ಸುತ್ತಿ ಬಿಸುಟಿದ್ದಾನೆ.'

'ಉದ್ವೇತಿ ಪ್ರಸವೀತಾ ಜನಾನಾಂ
ಮಹಾನ್ಕೇತುರ್ಣವಃ ಸೂರ್ಯಸ್ಯ |
ಸಮಾನಂ ಚಕ್ರಂ ಪರ್ಯಾವಿವೃತ್ಸನ್
ಯದೇತಶೋ ವಹತಿ ಧೂರ್ಷು ಯುಕ್ತಃ ||' (7-63-2)

'ಎಲ್ಲ ಜನರನ್ನೂ ಅವರವರ ಕರ್ತವ್ಯಗಳಲ್ಲಿ ಪ್ರೇರಿಸುತ್ತಾ ಪೂಜ್ಯನೂ, ಸರ್ವವನ್ನೂ ತೋರಿಸಿಕೊಡುವವನೂ ಉದಕಪ್ರದನೂ ಆದ ಸೂರ್ಯದೇವನು ಹಸಿರುಬಣ್ಣದ ಕುದುರೆ ಹೂಡಿದುದೂ ಒಂದೇ ಚಕ್ರವನ್ನು ಹೊಂದಿದುದೂ ಆದ ತನ್ನ ರಥವನ್ನು ತಿರುಗಿಸಿಕೊಳ್ಳಲು ಬಯಸಿ ಉದಯಿಸುತ್ತಿದ್ದಾನೆ.'

ಸೂರ್ಯನ ರಥವನ್ನು ಒಂದೇ ಕುದುರೆ ಎಳೆಯುವುದೆಂದು ಇಲ್ಲಿ ಹೇಳಿದೆ. ಇದನ್ನೇ 'ಏಕೋ ಅಶ್ವೋವಹತಿ ಸಪ್ತನಾಮಾ' (1-164-2) ಎಂಬಲ್ಲಿಯೂ ಕಾಣಬಹುದು. ಮತ್ತೆ ಕೆಲವೆಡೆಗಳಲ್ಲಿ ಆ ರಥವನ್ನು ಅನೇಕ ಕುದುರೆಗಳು ಎಳೆಯುತ್ತವೆಂದೂ, ಏಳು ಕುದುರೆಗಳು ಎಳೆಯುವುದೆಂದೂ ಬಗೆಬಗೆಯಾಗಿ ಬಣ್ಣಿಸಲಾಗಿದೆ–'ಭದ್ರಾಃ ಅಶ್ವಾಃ ಹರಿತಃ ಸೂರ್ಯಸ್ಯ' (1-115-3) ; 'ಸಪ್ತ ತ್ವಾ ಹರಿತೋ ರಥೇ ವಹಂತಿ ದೇವಸೂರ್ಯ' (1-50-8). ಇವುಗಳು ಸೂರ್ಯನ ಪ್ರಕಾಶದಲ್ಲಿರುವ ಸಪ್ತವರ್ಣಗಳಿಗೆ ಅನ್ವಯಿಸುವುದೆಂದು ವಿಮರ್ಶಕರು ಹೇಳುತ್ತಾರೆ.

ಲೋಕವನ್ನಾವರಿಸಿದ ಕತ್ತಲನ್ನು ಕಳೆದುಹಾಕಿ ಉದ್ದೀಪ್ತವಾದ ತೇಜಸ್ಸಿನಿಂದ ಎಲ್ಲವನ್ನೂ ಬೆಳಗುತ್ತಾ ರೋಚಮಾನನಾಗಿ ಉದಯಿಸಿ ಬರುವ ಸೂರ್ಯದೇವನ ಮಹೋನ್ನತವಾದ ಮಹಿಮೆಯನ್ನು ಬಗೆಬಗೆಯಾಗಿ ಕೊಂಡಾಡಿದ್ದಾರೆ.

'ಇತರರಿಂದ ನಡೆಯಲು ಸಾಧ್ಯವಾಗದ ದೂರವನ್ನು ನಡೆಯುವವನೂ, ಸರ್ವದರ್ಶನೀಯನೂ, ಎಲ್ಲ ಪದಾರ್ಥಗಳನ್ನೂ ಬೆಳಗುವವನೂ ತಮೋನಿವಾರಕನೂ ಆಗಿ ಸೂರ್ಯನು ವ್ಯಾಪಕವಾದ ಅಂತರಿಕ್ಷವನ್ನು ಸರ್ವತಃ ಬೆಳಗುತ್ತಾನೆ' ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ–

'ತರಣಿರ್ವಿಶ್ವದರ್ಶತೋ
ಜ್ಯೋತಿಷ್ಕೃದಸಿ ಸೂರ್ಯ |
ವಿಶ್ವಮಾಭಾಸಿ ರೋಚನಮ್ ||' (1-50-4)

ಆಕಾಶದಲ್ಲಿ ಸಂಚರಿಸುವ ಸೂರ್ಯದೇವನನ್ನು ಅನೇಕ ಕಡೆ ಪಕ್ಷಿಯೆಂದು ವರ್ಣಿಸಿ ಸ್ತುತಿಸಿದ್ದಾರೆ. ಅಂತರಾಳದಲ್ಲಿ ಹಾರಾಡುವ ಹಕ್ಕಿಯಂತೆ ಸೂರ್ಯ ಚಲಿಸುತ್ತಾನೆ ಎಂದು ಬಣ್ಣಿಸಿದ್ದಾರೆ. 'ಪತಂಗೋ ವಾಚಂ ಮನಸಾಬಿಭರ್ತಿ' (10-177-2). 'ಶ್ಯೇನೋ ನ ದೀಯನ್ ಅನ್ವೇತಿ ಪಾಥಃ' (7-63-5) ಮೊದಲಾದುವುಗಳಲ್ಲಿ ಇದನ್ನು ನೋಡಬಹುದು. ಮತ್ತೆ ಕೆಲವೆಡೆಗಳಲ್ಲಿ ಭ್ರಾಜಮಾನನಾದ ಸೂರ್ಯನನ್ನು ಗಗನಮಂಡಲದ ರತ್ನ ಎಂದು ಬಣ್ಣಿಸಿದೆ.

ದಿವೋ ರುಕ್ಮ ಉರುಚಕ್ಷಾ ಉದೇತಿ
ದುರೋ ಅರ್ಥಸ್ತರಣಿರ್ಭ್ರಾಜಮಾನಃ |' (7-63-4)

'ಈ ಸೂರ್ಯನು ಅಂತರಿಕ್ಷದ ಆಭರಣನಾಗಿ ಅತ್ಯಧಿಕವಾದ ತೇಜಸ್ಸಿನಿಂದ ಕೂಡಿ ಉದಯಿಸುತ್ತಾನೆ. ದೇದೀಪ್ಯಮಾನವಾಗಿ ಕತ್ತಲೆಯಿಂದ ಪಾರುಮಾಡುವವನಾಗಿ ನಿಡಿದಾದ ದೂರವನ್ನು ಕ್ರಮಿಸುತ್ತಾನೆ.' ಆಕಾಶದಲ್ಲಿರುವ ಸೂರ್ಯನನ್ನು ಜ್ವಲಿಸುವ ಆಯುಧವೆಂದೂ ಬಣ್ಣಿಸಿದ್ದಾರೆ–'ಸೂರ್ಯೋ ಜ್ಯೋತಿಶ್ಚರತಿ ಚಿತ್ರ ಮಾಯುಧಂ' (5-63-4). ಹಗಲಿನಲ್ಲಿ ಸೂರ್ಯನನ್ನು ಮಿತ್ರಾವರುಣರು ಮೇಘದಿಂದಲೂ ವೃಷ್ಟಿಯಿಂದಲೂ ಆಚ್ಛಾದಿಸುವರು (5-63-4).

ಸೂರ್ಯದೇವನು ಹಗಲು ರಾತ್ರಿಗಳನ್ನುಂಟುಮಾಡುತ್ತಾ ಜೀವಿತದ ದಿನಗಳನ್ನು ಅಭಿವೃದ್ಧಿಪಡಿಸುತ್ತಾನೆ–'ಅಹಾ ಮಿಮಾನೋ ಅಕ್ತುಭಿಃ' (1-50-7). ಆಲಸ್ಯ, ರೋಗ ಮತ್ತು ದುಃಸ್ವಪ್ನಗಳನ್ನು ದೂರಮಾಡಿ ಪ್ರಾಣಿಗಳ ಆಯುರ್ವೃದ್ಧಿಯನ್ನು ಸೂರ್ಯದೇವನು ಮಾಡುತ್ತಾನೆ.

'ಯೇನ ಸೂರ್ಯ ಜ್ಯೋತಿಷಾ ಬಾಧಸೇ ತಮೋ
ಜಗಚ್ಚ ವಿಶ್ವಮುದಿಯರ್ಷಿ ಭಾನುನಾ |
ತೇನಾಸ್ಮದ್ವಿಶ್ವಾಮನಿರಾಮನಾಹುತಿಂ
ಅಪಾಮೀವಾಮಪ ದುಷ್ವಪ್ನ್ಯಂ ಸುವ ||' (5-37-4)

'ಎಲೈ ಸೂರ್ಯನೇ, ನೀನು ಯಾವ ನಿನ್ನ ತೇಜಸ್ಸಿನಿಂದ ಅಂಧಕಾರವನ್ನು ನಿವಾರಿಸುವೆಯೋ, ಯಾವ ನಿನ್ನ ಪ್ರಕಾಶದಿಂದ ಸರ್ವಜಗತ್ತನ್ನೂ ಎಚ್ಚರಿಸುವೆಯೋ ಆ ತೇಜಸ್ಸಿನಿಂದಲೇ ಅನ್ನಾಭಾವವನ್ನೂ, ಕರ್ಮವೈಮುಖ್ಯವನ್ನೂ, ರೋಗಜಾತಗಳನ್ನೂ ಕೆಟ್ಟಕನಸಿನಿಂದಾಗುವ ಅನಿಷ್ಟಗಳನ್ನೂ ಹೋಗಲಾಡಿಸು.'

ಎಲ್ಲ ಲೋಕಗಳೂ ಸೂರ್ಯನಿಂದಲೇ ಬದುಕಿವೆ. ಅವನಿಂದಲೇ ಕಾರ್ಯಪ್ರವೃತ್ತವಾಗುತ್ತವೆ. ಆದ್ದರಿಂದಲೇ ಅವನು 'ಸರ್ವಕರ್ತಾ' ಆಗಿದ್ದಾನೆ. ಮಿತ್ರಾ ವರುಣರ ಮುಂದೆ ನಾವು ಪಾಪರಹಿತರೆಂದು ಹೇಳಬೇಕೆಂದು ಸರ್ವಸಾಕ್ಷಿಯಾದ ಸೂರ್ಯನಲ್ಲಿ ಬೇಡಿಕೆ ಸಲ್ಲಿಸಿದ್ದಾರೆ–'ಪ್ರನೋ ಮಿತ್ರಾಯ ವರುಣಾಯ ವೋಚಃ ಅನಾಗಸೋ ಆರ್ಯಮ್ಣೇ ಅಗ್ನಯೇ ಚ' (7-62-2). ಸೂರ್ಯನಿಂದ ನಾವು ಏನನ್ನೂ ಮುಚ್ಚಿಡುವುದಕ್ಕಾಗುವುದಿಲ್ಲ. ಆದ್ದರಿಂದಲೇ ಈ ಮಹಾಮಹಿಮನಲ್ಲಿ ಋಷಿಗಳ ಪ್ರಾರ್ಥನೆ ಹೀಗಿದೆ–

'ವಿಶ್ವಾಹಾ ತ್ವಾ ಸುಮನಸಃ ಸುಚಕ್ಷಸಃ
ಪ್ರಜಾವಂತೋ ಅನಮೀವಾ ಅನಾಗಸಃ |
ಉದ್ಯಂತಂ ತ್ವಾ ಮಿತ್ರಮಹೋ ದಿವೇದಿವೇ
ಜ್ಯೋಗ್ಜೀವಾಃ ಪ್ರತಿ ಪಶ್ಯೇಮ ಸೂರ್ಯ ||' (10-37-7)

'ಎಲೈ ಸೂರ್ಯನೇ, ನಾವು ಪ್ರೀತಿಯುಕ್ತಮನಸ್ಕರೂ, ಸುದರ್ಶನರೂ, ಪ್ರಜಾವಂತರೂ, ರೋಗರಹಿತರೂ, ಅಪರಾಧವಿಲ್ಲದವರೂ ಆಗಿ ನಿನ್ನನ್ನು ದಿನದಿನವೂ ಸೇವಿಸುವಂತಾಗಲಿ. ಮಿತ್ರರನ್ನು ಪೂಜಿಸುವ ಸೂರ್ಯದೇವನೇ, ಪ್ರತಿದಿನವೂ ಉದಯಿಸುವ ನಿನ್ನನ್ನು ನಾವು ಚಿರಂಜೀವಿಗಳಾಗಿ ನೋಡುವಂತಾಗಲಿ.

'ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ
ಶಂ ಭಾನುನಾ ಶಂ ಹಿಮಾ ಶಂ ಘೃಣೇನ |
ಯಥಾ ಶಮಧ್ವ ನ್ಛಮಸದ್ದುರೋಣೇ
ತತ್ಸೂರ್ಯ ದ್ರವಿಣಂ ಧೇಹಿ ಚಿತ್ರಮ್ ||' (10-37-10)

'ತೇಜಸ್ಸಿನಿಂದ ಸುಖಕರನಾಗು ; ಸೂರ್ಯನೇ, ಹಗಲಿನಲ್ಲಿ ಸುಖಕರನಾಗು ; ರಶ್ಮಿಗಳಿಂದಲೂ ಶೈತ್ಯದಿಂದಲೂ, ಔಷ್ಣ್ಯದಿಂದಲೂ ನೀನು ಸುಖಕರನಾಗು. ಬೀದಿಯಲ್ಲಿಯೂ, ಮನೆಯಲ್ಲಿಯೂ ನಮಗೆ ಸುಖವುಂಟಾಗುವಂಥ ಪೂಜ್ಯವಾದ ಧನ ಸಮೃದ್ಧಿಯನ್ನು ಕರುಣಿಸು.'

ಸೂರ್ಯಶಬ್ದ ಸ್ವರ್ ಎಂಬ ಧಾತುವಿನಿಂದ ಬಂದಿದೆ. ಅವೆಸ್ತಾದಲ್ಲಿ 'ಹ್ವರೇ' ದೇವ ಸೂರ್ಯನಂತೆ ತ್ವರಿತಗತಿಯ ಕುದುರೆಗಳನ್ನು ಹೊಂದಿದ್ದಾನೆ. ಅಲ್ಲಿ ಅವನನ್ನು ಅಹುರಮಜ್ದನ ಚಕ್ಷುಸ್ಸೆಂದು ವರ್ಣಿಸಿರುವುದೂ ಗಮನಾರ್ಹವಾಗಿದೆ.

## ಸವಿತೃ

ಋಗ್ವೇದದಲ್ಲಿ ಹನ್ನೊಂದು ಸೂಕ್ತಗಳು ಸವಿತೃದೇವತಾಕವಾಗಿವೆ. ಅಲ್ಲದೆ ಇತರ ಅನೇಕ ಸೂಕ್ತಗಳಲ್ಲಿಯೂ ಇವನ ಉಲ್ಲೇಖವಿದೆ. 'ಉದಯಾತ್‌ಪೂರ್ವಭಾವೀ ಸವಿತಾ ಉದಯಸ್ತಮಯವರ್ತೀ ಸೂರ್ಯ ಇತಿ' ಎಂದು ಸಾಯಣಾಚಾರ್ಯರು (5-81-4) ಹೇಳುತ್ತಾ ಉದಯಕ್ಕೆ ಮೊದಲು ಸೂರ್ಯನಿಗೆ ಸವಿತೃವೆಂಬ ಹೆಸರೆಂದು ಸೂಚಿಸುತ್ತಾರೆ. ಸವಿತೃವಿನ ಆವಿರ್ಭಾವದ ಕಾಲ ಕತ್ತಲೆಯು ನಿವಾರಿಸಲ್ಪಡುವ ಕಾಲವೆಂದು ಯಾಸ್ಕಾಚಾರ್ಯರು 'ತಸ್ಯ ಕಾಲೋ ಯದಾ ದ್ಯೌರ ಪಹತ ತಮಸ್ಕಾ ಕೀರ್ಣರಶ್ಮಿರ್ಭವತಿ' ಎಂದು (ನಿ. 12-12) ಹೇಳುತ್ತಾರೆ. ಪ್ರಪಂಚದ ಜನರನ್ನು ಸಚೇತನಗೊಳಿಸಿ ಕರ್ಮಗಳಲ್ಲಿ ಪ್ರೇರಿಸುವ ಮಹಾಶಕ್ತಿ ಈ ದೇವನದು. ಸೂರ್ಯನ ದಿವ್ಯಶಕ್ತಿಯನ್ನು ರೂಪಣ ಮಾಡಿ ಸವಿತೃವೆಂದು ಕೊಂಡಾಡಿದ್ದಾರೆ ಸೂರ್ಯನಿಷ್ಠವಾದ ಉದ್ದೀಪಕತ್ವಾಂಶ ಹಾಗೂ ಪ್ರಚೋದಕಾಂಶ ಸವಿತೃ ದೇವನ ರೂಪವನ್ನು ಪಡೆದಿದೆ. ಆದ್ದರಿಂದಲೇ ಯಾಸ್ಕರು 'ಸರ್ವಸ್ಯ ಪ್ರಸವಿತಾ' 'ಎಲ್ಲವನ್ನೂ ಉತ್ತೇಜನಗೊಳಿಸುವವನು' ಎಂದು ಈ ಶಬ್ದವನ್ನು ವಿವರಿಸುತ್ತಾರೆ (ನಿ. 10-31).

ಸವಿತೃದೇವನದು ಸರ್ವಾತಿಶಾಯಿಯಾದ ಸ್ವರ್ಣಮಯರೂಪ. ಇವನು ಸ್ವರ್ಣ ನೇತ್ರ, ಹಿರಣ್ಯಹಸ್ತ, ಹಿರಣ್ಯಪಾಣಿ. ಹಿರಣ್ಯಜಿಹ್ವ, ಹಿತರಮಣೀಯವಾದ ರೂಪ ಮತ್ತು ವಾಕ್ಕು ಇವನದು. ಈ ವಿಶೇಷ ಗುಣಗಳು ಇವನಿಗೇ ಮೀಸಲಾಗಿವೆ. ಇವನು ಸ್ವರ್ಣಮಯವಾದ ಬಾಹುಗಳನ್ನುಳ್ಳವನು. ಇವನ ರಥವೂ ಆ ರಥದ ನೊಗವೂ ಸ್ವರ್ಣಮಯವಾದುದು– 'ರಥಂ ಹಿರಣ್ಯ ಪ್ರಉಗಂ ವಹಂತಃ' (1-35-5). ಸವಿತೃದೇವನು ಸಾರಿಬರುವ ಸುಂದರಚಿತ್ರ ಕೆಳಗಿನ ಮಂತ್ರದಲ್ಲಿದೆ:

'ಆ ಕೃಷ್ಣೇನ ರಜಸಾ ವರ್ತಮಾನಃ
ನಿವೇಶಯನ್ನಮೃತಂ ಮರ್ತ್ಯಂ ಚ |
ಹಿರಣ್ಯಯೇನ ಸವಿತಾ ರಥೇನ
ಆ ದೇವೋಯಾತಿ ಭುವನಾನಿ ಪಶ್ಯನ್ ||' (1-35-2)

'ಕತ್ತಲೆಯ ಲೋಕದಿಂದ ಪುನಃ ಪುನಃ ಸಾರಿಬರುತ್ತಾ ಸವಿತೃದೇವನು ದೇವತೆಗಳನ್ನೂ ಮನುಷ್ಯರನ್ನೂ ಅವರವರ ಸ್ಥಾನದಲ್ಲಿ ನೆಲೆಗೊಳಿಸಿ ಎಲ್ಲ ಲೋಕಗಳನ್ನೂ ವೀಕ್ಷಿಸುತ್ತಾ ಸ್ವರ್ಣನಿರ್ಮಿತವಾದ ರಥದಲ್ಲಿ ಕುಳಿತು ನಮ್ಮೆಡೆಗೆ ಬರುತ್ತಿದ್ದಾನೆ.'

ಸವಿತೃದೇವನು ತೇಜೋಮೂರ್ತಿ. ಅವನ ಕುದುರೆಗಳೂ ಹಾಗೆಯೇ. ಸರ್ವ ಜಗತ್ತನ್ನೂ ಪ್ರೇರಣಗೊಳಿಸುವ ಈ ದೇವನ ಸ್ವರ್ಣಮಯವಾದ ದೀಪ್ತಿ ಇಷ್ಟೆಂದು ಯಾರೂ ಬಣ್ಣಿಸಲಾರರು–'ತದಿನ್ವಸ್ಯ ಸವಿತುರ್ನಕಿರ್ಮೇ ಹಿರಣ್ಯಯಿಂ ಅಮತಿಂ' (3-38-8). ಈ ದೀಪ್ತಿಯಿಂದ ಲೋಕವನ್ನೇ ಅವನು ತುಂಬಿಸಿಬಿಡುತ್ತಾನೆ.

'ಅಷ್ಟೌವ್ಯಖ್ಯತ್ಕಕುಭಃ ಪೃಥಿವ್ಯಾಃ
ತ್ರೀಧನ್ವ ಯೋಜನಾ ಸಪ್ತ ಸಿಂಧೂನ್ |
ಹಿರಣ್ಯಾಕ್ಷಃ ಸವಿತಾ ದೇವ ಆಗಾತ್
ದಧದ್ರತ್ನಾ ದಾಶುಷೇ ವಾರ್ಯಾಣಿ ||' (1-35-8)

'ಸವಿತೃದೇವನು ಎಂಟು ದಿಕ್ಕುಗಳನ್ನೂ ಪ್ರಕಾಶಗೊಳಿಸಿದನು; ಹಾಗೆಯೇ ಪ್ರಾಣಿಗಳಿಗೆ ಭೋಗವನ್ನುಂಟುಮಾಡುವ ಪೃಥಿವ್ಯಂತರಿಕ್ಷದ್ಯುಲೋಕಗಳೆಂಬ ಮೂರು ಲೋಕಗಳನ್ನೂ ಬೆಳಗಿದನು. ಸಪ್ತಸಿಂಧುಗಳನ್ನೂ ಪ್ರಕಾಶದಿಂದ ತುಂಬಿದನು. ಹವಿಸ್ಸಮರ್ಪಣೆ ಮಾಡಿದವನಿಗೆ ಇಷ್ಟವಾದ ರತ್ನಾದಿಗಳನ್ನು ಅನುಗ್ರಹಿಸುತ್ತಾ ಸ್ವರ್ಣನೇತ್ರನಾದ ಸವಿತೃದೇವನು ಇಲ್ಲಿಗೆ ಬರಲಿ'. ಸವಿತೃವನ್ನು ಸುಪರ್ಣನಿಗೆ ಹೋಲಿಸಿದೆ ಕೆಳಗಿನ ಮಂತ್ರದಲ್ಲಿ–

'ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯತ್
ಗಭೀರವೇಪಾ ಅಸುರಃ ಸುನೀಥಃ |
ಕ್ವೇದಾನೀಂ ಸೂರ್ಯಃ ಕಶ್ಚಿಕೇತ
ಕತಮಾಂ ದ್ಯಾಂ ರಶ್ಮಿರಸ್ಯಾ ತತಾನ ||' (1-35-7)

'ಸುಪರ್ಣವು (ಸವಿತೃವಿನ ರಶ್ಮಿಯು) ಲೋಕತ್ರಯಗಳನ್ನೂ ತುಂಬಿ ಪ್ರಕಾಶಪಡಿಸಿತು ಆದಾದರೂ ಯಾರಿಗೂ ಕಾಣದಂತೆ ಗಂಭೀರವಾಗಿ ಚಲಿಸುವುದೂ, ಎಲ್ಲರಿಗೂ ಪ್ರಾಣವನ್ನುಂಟು ಮಾಡುವುದೂ, ಶುಭಕರವಾದ ಮಾರ್ಗದರ್ಶನ ಮಾಡುವುದೂ ಆದುದು. ಇಂಥ ಸೂರ್ಯ ಈ ರಾತ್ರಿಯ ಹೊತ್ತು ಎಲ್ಲಿದ್ದಾನೆ? ಈ ರಹಸ್ಯವನ್ನು ಯಾರು ತಾನೇ ಬಲ್ಲರು? ಈ ಸೂರ್ಯನ ರಶ್ಮಿ ಯಾವ ದ್ಯುಲೋಕವನ್ನು ತಾನೇ ಈಗ ಬೆಳಗುತ್ತಿದೆ?'

ಸವಿತೃದೇವನು ಚರಿಸುವ ಅಂತರಿಕ್ಷದ ಹಾದಿ ಸ್ವಚ್ಛವಾಗಿ ಧೂಳಿಲ್ಲದೆ ಇದೆ 'ಅರೇಣವಃ ಸುಕೃತಾ ಅಂತರಿಕ್ಷೇ' (1-35-11).

ಸ್ವರ್ಣಮಯವಾದ ಕಾಂತಿಯ ಪ್ರವಾಹದಿಂದ ಲೋಕವನ್ನೇ ತುಂಬಿಬಿಡುವ ಸುಂದರವಾದ ಸನ್ನಿವೇಶವನ್ನು ಮೇಲೆ ಹೇಳಿದೆ. ಪೂರ್ವದಿಕ್ಕಿನಿಂದ ಸವಿತೃದೇವನು ತನ್ನ ಸೌವರ್ಣಕಾಂತಿಯಿಂದ ಎಲ್ಲವನ್ನೂ ಸ್ವರ್ಣಮಯವನ್ನಾಗಿಸಿ ಉದಯಿಸುವನು. ಸುದೀರ್ಘವೂ ದಿಗಂತಪರ್ಯಂತ ಚುಂಬಿಯೂ ಸ್ವರ್ಣಮಯವೂ ಆದ ತನ್ನ ಬಾಹುದ್ವಯವನ್ನು ಪ್ರಸಾರ ಮಾಡಿ ಸರ್ವರನ್ನೂ ಪ್ರಬೋಧಗೊಳಿಸಿದನು ಮತ್ತು ಅನುಗ್ರಹಿಸುವನು.

'ವಿಶ್ವಸ್ಯ ಹಿ ಶ್ರುಷ್ಟಯೇ ದೇವ ಊರ್ಧ್ವಃ
ಪ್ರಬಾಹವಾ ಪೃಥುಪಾಣಿಃ ಸಿಸರ್ತಿ ||' (2-38-2)

'ದ್ಯೋತಮಾನನಾದ ಸವಿತೃದೇವನು ಬೃಹತ್ಕರಗಳನ್ನು ಹೊಂದಿದ್ದಾನೆ. ಎದ್ದು ನಿಂತು ಲೋಕದ ಸುಖಕ್ಕಾಗಿ ತನ್ನ ಬಾಹುಗಳನ್ನು ನಿಡಿದಾಗಿ ಚಾಚುತ್ತಾನೆ.

'ಉದಸ್ಯ ಬಾಹೂ ಶಿಥಿರಾ ಬೃಹಂತಾ
ಹಿರಣ್ಯಯಾ ದಿವೋ ಅಂತಾ ಅನಷ್ಟಾಮ್ ||' (7-45-2)

'ದಾನಮಾಡಲು ಪ್ರಸಾರಮಾಡಿದವೂ, ಮಹತ್ತರವಾದವೂ, ಸ್ವರ್ಣಮಯವಾದವೂ ಆದ ಸವಿತೃದೇವನ ಬಾಹುಗಳೆರಡೂ ಅಂತರಿಕ್ಷದ ಪರ್ಯಂತ ಪ್ರದೇಶಗಳನ್ನು ವ್ಯಾಪಿಸುತ್ತವೆ.'

ಹರಿದ್ರಕೇಶಿಯಾದ ಈ ದೇವ ಉಷೆಯು ಬಂದಾದ ಮೇಲೆ ಬರುತ್ತಾನೆ. ದುಃಸ್ವಪ್ನಗಳನ್ನು ದೂರಮಾಡುತ್ತಾನೆ ಇವನು. ಮಾಯಾವಿಗಳಾದ ರಾಕ್ಷಸರನ್ನು ದೂರಕ್ಕೆ ಅಪವಾಹನ

ಮಾಡುತ್ತಾನೆ. ಋತವನ್ನು ಪಾಲಿಸುವ ಇವನ ಕಟ್ಟಳೆಗಳಿಗೆ ಮನುಷ್ಯರೂ ದೇವತೆಗಳೂ ತಲೆಬಾಗುವರು. 'ಲೋಕದಜನರ ಕಷ್ಟಗಳನ್ನೆಲ್ಲಾ ಪರಿಹಾರಮಾಡುತ್ತಾ ಆಕಾಶಮಾರ್ಗದಲ್ಲಿ ಈ ದೇವನು ತನ್ನ ಸ್ವರ್ಣಮಯವಾದ ರಥದಲ್ಲಿ ಕುಳಿತು ಬರುತ್ತಾನೆ–' 'ಯಾತು ದೇವಃ ಪ್ರವತಾ ಯಾತ್ಯುದ್ವತಾ ಯಾತಿ ಶುಭ್ರಾಭ್ಯಾಂ ಯಜತೋ ಹರಿಭ್ಯಾಮ್' (1-35-3). ಇತರ ದೇವತೆಗಳೂ ಸವಿತೃದೇವನನ್ನೇ ಅನುಸರಿಸುವರು. ಸವಿತೃವಿನ ಉದಯವಾಗದಿದ್ದರೆ ಅಗ್ನಿ ಹೋತ್ರಾದಿಗಳಿಗೂ ಇತರ ದೇವತೆಗಳ ಹವಿಸ್ಸಮರ್ಪಣೆಗೂ ಆಸ್ಪದವೇ ಇಲ್ಲ. ಈ ಅಂಶವನ್ನು ಸೂಚಿಸಿದೆ ಕೆಳಗಿನ ಮಂತ್ರದಲ್ಲಿ:

'ಯಸ್ಯ ಪ್ರಯಾಣಮನ್ವನ್ಯ ಇದ್ಯಯುಃ
ದೇವಾ ದೇವಸ್ಯ ಮಹಿಮಾನಮೋಜಸಾ |
ಯಃ ಪಾರ್ಥಿವಾನಿ ವಿಮಮೇ ಸ ಏತಶೋ
ರಜಾಂಸಿ ದೇವಃ ಸವಿತಾ ಮಹಿತ್ವನಾ ||' (5-81-3)

'ಅಗ್ನ್ಯಾದಿ ಇತರ ದೇವತೆಗಳು ದೀಪ್ತನಾದ ಸವಿತೃದೇವನ್ನನುಸರಿಸಿ ಮಹತ್ವವನ್ನು ಪಡೆಯುವರು ಹಾಗೂ ಬಲಯುತರಾಗುವರು. ಈ ಸವಿತೃವಾದರೂ ಪೃಥಿವ್ಯಾದಿ ಲೋಕಗಳನ್ನು ತನ್ನ ಮಹಿಮೆಯಿಂದ ಅಳೆದನು. ಅಂಥ ಈ ದೇವನು ಶೋಭಮಾನನಾಗಿ ವಿರಾಜಿಸಿದ್ದಾನೆ.'

ಈ ದೇವನ ಮಹತ್ವವನ್ನು ವರ್ಣಿಸುತ್ತಾ ಇವನಿಟ್ಟ ಕಟ್ಟಳೆಯಂತೆ ನದಿಗಳು ಹರಿದು ಲೋಕವನ್ನು ಪಾವನಗೊಳಿಸುವುವೆಂದೂ ವಾಯುವು ಸರ್ವತ್ರ ವ್ಯಾಪಕನಾಗಿ ವಿರಾಜಿಸುವನೆಂದೂ ಹೇಳುತ್ತಾರೆ (2-38-2). ಇವನ ಮಹತ್ಕರ್ಮಗಳಿಗೆ ಯಾವ ಇತರ ದೇವತೆಗಳೂ ಅಡ್ಡಿಯುಂಟುಮಾಡಲಾರರು. ಇವನು ಸರ್ವಸ್ವತಂತ್ರನೂ ಅನಿವಾರಿತನೂ ಆಗಿದ್ದಾನೆ.

'ನ ಯಸ್ಯೇನ್ದ್ರೋ ವರುಣೋ ನ ಮಿತ್ರೋ
ವ್ರತಮರ್ಯಮಾ ನ ಮಿನಂತಿ ರುದ್ರಃ |
ನಾರಾತಯಸ್ತಮಿದಂ ಸ್ವಸ್ತಿ ಹುವೇ
ದೇವಂ ಸವಿತಾರಂ ನಮೋಭಿಃ ||' (2-38-9)

'ಈ ಸವಿತೃದೇವನ ವ್ರತವನ್ನು (ಪ್ರಸವಾಖ್ಯಂ ಕರ್ಮ) ಇಂದ್ರನಾಗಲೀ ವರುಣನಾಗಲೀ, ಮಿತ್ರನಾಗಲೀ, ಆರ್ಯಮನಾಗಲೀ, ರುದ್ರನಾಗಲೀ, ಅಸುರರಾಗಲೀ ಹಿಂಸಿಸಲಾರರು. ಅಂಥ ಸರ್ವಪ್ರೇರಕನೂ ದ್ಯೋತಮಾನನೂ ಆದ ದೇವನನ್ನು ಕ್ಷೇಮವುಂಟಾಗಲೆಂದು ಹವಿಸ್ಸುಗಳಿಂದ ಸ್ತೋತ್ರ ಮಾಡುತ್ತೇನೆ.'

ಮಹಾಮಹಿಮನಾದ ಸವಿತೃದೇವನನ್ನು ಎಲ್ಲ ವಸುಗಳೂ, ಅದಿತಿದೇವಿಯೂ, ಸಮ್ರಾಜನಾದ ವರುಣನೂ, ಮಿತ್ರನೂ, ಅರ್ಯಮದೇವನೂ ಸ್ತುತಿಸುತ್ತಾರೆ (7-38-3,4). ಇವನು ಸ್ಥಾವರಜಂಗಮಾತ್ಮಕವಾದ ವಿಶ್ವವನ್ನೇ ತನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದಾನೆ– 'ಜಗತಃ ಸ್ಥಾತುರುಭಯಸ್ಯ ಯೋ ವಶೀ' (4-53-6). ಲೋಕಗಳೆರಡಕ್ಕೂ ಇವನು ಆಧಾರಭೂತನಾಗಿದ್ದಾನೆ–'ದಿವೋ ಧರ್ತಾ ಭುವನಸ್ಯ' (4-53-2); 'ವಿಶ್ವಂ ಭುವನಂ ಧಾರಯಿಷ್ಯತಿ' (4-54-4). ಸರ್ವಪ್ರೇರಕನಾದ ಈ ದೇವನು ಪೃಥಿವಿಯನ್ನು ದೃಢಪಡಿಸಿ ನಿಲ್ಲಿಸಿದನು; ಆಲಂಬನವೇ ಇಲ್ಲದೆಡೆ ದ್ಯುಲೋಕವನ್ನು ನೆಲೆಗೊಳಿಸಿದನು–'ಸವಿತಾಯಂತ್ರೈಃ ಪೃಥಿವೀಂ ಅರಮ್ಣಾತ್ ಅಸ್ಕಂಭನೇ ಸವಿತಾ ದ್ಯಾಮದೃಂಹತ್' (10-149-1).

ಸವಿತೃವನ್ನು ಒಮ್ಮೆ ಪ್ರಜಾಪತಿ ಎಂದು ಕರೆದಿದೆ (4-53-2). ಶತಪಥ ಬ್ರಾಹ್ಮಣದಲ್ಲಿ ಸವಿತೃ ಮತ್ತು ಪ್ರಜಾಪತಿಗಳಿಗೆ ಅಭೇದವನ್ನು ಹೇಳುವಂತಿದೆ (ಶ. ಬ್ರಾ. 12, 3, 5-¹).

ತೈತ್ತಿರಿಯ ಬ್ರಾಹ್ಮಣದಲ್ಲಿ (1-6-4') ಪ್ರಜಾಪತಿಯು ಸವಿತೃದೇವನಾಗಿ ಜನರನ್ನು ಸೃಜಿಸಿದನೆಂದು ಹೇಳಿದೆ. ಸವಿತೃ ತನ್ನ ಗತಿಗಳಿಂದ (ಯಾಮಭಿಃ) ಪೂಷನ್ ಆಗುವನು. ಇವನಿಗೂ ಪೂಷನ್ ದೇವತೆಗೂ ಸಾದೃಶ್ಯವೂ ಸಂಬಂಧವೂ ಇರುವುದು ಗೊತ್ತಾಗುತ್ತದೆ (3-62-9). ಕೆಲವು ಮಂತ್ರಗಳಲ್ಲಿ ಸವಿತೃದೇವನೇ ಭಗನೆಂದೂ ಹೇಳಿದೆ–'ಸವಿತಾ ಭಗಃ' (5-82-3) ಮತ್ತೆ ಕೆಲವು ಮಂತ್ರಗಳಲ್ಲಿ ಮಿತ್ರ, ಪೂಷನ್ ಮತ್ತು ಭಗ–ಈ ದೇವತೆಗಳಿಂದ ಸವಿತೃ ಭಿನ್ನನಾದವನೆಂದು ಹೇಳಿದೆ. ಹೀಗೆಯೇ ಕೆಲವು ಮಂತ್ರಗಳಲ್ಲಿ ಸೂರ್ಯ ಮತ್ತು ಸವಿತೃ ಶಬ್ದಗಳು ಒಂದೇ ದೇವತೆಯನ್ನು ಹೇಳುವಂತೆ ಇವೆ.

'ಊರ್ಧ್ವಂಕೇತುಂ ಸವಿತಾ ದೇವೋ ಅಶ್ರೇತ್
ಜ್ಯೋತಿರ್ವಿಶ್ವಸ್ಮೈ ಭುವನಾಯ ಕೃಣ್ವನ್ |
ಆ ಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ
ವಿ ಸೂರ್ಯೋ ರಶ್ಮಿಭಿಶ್ಚೇಕಿತಾನಃ ||' (4-14-2)

'ಎಲ್ಲ ಲೋಕಗಳಿಗೂ ತೇಜಸ್ಸನ್ನುಂಟುಮಾಡುತ್ತಾ ಸವಿತೃದೇವನು ತನ್ನ ಪ್ರಕಾಶದೊಡನೆ ಮೇಲಕ್ಕೆ ಉದಯಿಸುತ್ತಿದ್ದಾನೆ. ಎಲ್ಲವನ್ನೂ ನೋಡುತ್ತಾ ಸೂರ್ಯನು ತನ್ನ ಕಿರಣಗಳಿಂದ ದ್ಯುಲೋಕ, ಭೂಲೋಕ ಮತ್ತು ಅಂತರಿಕ್ಷಗಳನ್ನು ತುಂಬಿದ್ದಾನೆ. ಇಂಥ ಅನೇಕ ಮಂತ್ರಗಳಲ್ಲಿ ಸೂರ್ಯ ಮತ್ತು ಸವಿತೃಗಳಿಗೆ ಅಭೇದವೇ ತೋರುತ್ತದೆ. ಆದರೂ ಮತ್ತೆ ಕೆಲವು ಮಂತ್ರಗಳಲ್ಲಿ ಇವರಿಬ್ಬರೂ ಭಿನ್ನಭಿನ್ನರೆಂದೇ ಹೇಳಿದೆ. 'ಸವಿತೃದೇವನು ದ್ಯುಲೋಕ ಭೂಲೋಕಗಳ ನಡುವೆ ಚರಿಸುತ್ತಾನೆ ; ರೋಗಾದಿಬಾಧೆಗಳನ್ನು ನಿರಾಕರಿಸುತ್ತಾನೆ; ಹಾಗೆಯೇ ಸೂರ್ಯನನ್ನು ಹೋಗಿ ಸೇರುತ್ತಾನೆ' ಎಂದು 'ಸವಿತಾ ವಿಚರ್ಷಣಿರುಭೇ ದ್ಯಾವಾಪೃಥಿವೀ ಅಂತರೀಯತೇ | ಅಪಾಮೀವಾಂ ಬಾಧತೇ ವೇತಿಸೂರ್ಯಂ' (1-35-9)ರಲ್ಲಿ ಹೇಳಿದೆ. ಸವಿತೃ ಸೂರ್ಯರಲ್ಲಿ ಮೂರ್ತಿ ಭೇದವಿದೆಯೆಂಬುದನ್ನು 'ಯದ್ಯಪಿ ಸವಿತೃ ಸೂರ್ಯಯೋರೇಕ ದೇವತಾತ್ವಂ ತಥಾಪಿ ಮೂರ್ತಿಭೇದೇನ ಗಂತೃಗಂತವ್ಯಭಾವಃ' ಎಂದು ಸಾಯಣರು ಸೂಚಿಸುತ್ತಾರೆ. 'ನಾವು ಪಾಪರಹಿತರೆಂದು ಸೂರ್ಯನಿಗೆ ತಿಳಿಸಿ ಸವಿತೃ ಅನುಗ್ರಹಿಸಲಿ' ಎಂದು 'ಸವಿತಾ ದಮೂನಾ ಅನಾಗಸೋ ವೋಚತಿ ಸೂರ್ಯಾಯ (1-123-3) ಎಂಬಲ್ಲಿ ಹೇಳಿದೆ. ದಿನಾಂತಸೂರ್ಯತ್ವೇನ ಇವನನ್ನು ಸ್ತುತಿಸಿರುವುದೂ ಉಂಟು. ಭಾರತೀಯರ ಪ್ರಖ್ಯಾತವಾದ ಗಾಯತ್ರೀ ಮಂತ್ರವು ಸವಿತೃದೇವತಾಕವಾಗಿದೆಯೆಂಬುದನ್ನು ನಾವು ಗಮನಿಸಬೇಕು.

'ತತ್ಸವಿತುರ್ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ |
ಧಿಯೋ ಯೋ ನಃ ಪ್ರಚೋದಯಾತ್ ||' (3-62-10)

'ಯಾವ ದೇವನು ನಮ್ಮ ಬುದ್ಧಿಯನ್ನು ಪ್ರೇರಿಸುತ್ತಾನೆಯೋ ಅಂಥ ಸರ್ವಾಂತರ್ಯಾಮಿಯೂ ಪ್ರೇರಕನೂ ಆದ ಸವಿತೃದೇವನ ಸರ್ವೋಪಾಸ್ಯವಾದ ತೇಜಸ್ಸನ್ನು ಧ್ಯಾನಿಸುತ್ತೇವೆ.' ಇಂಥ ಮಹಾಮಹಿಮನಾದ ದೇವನಲ್ಲಿ ಋಷಿಗಳ ಪ್ರಾರ್ಥನೆ ಇದು–

'ಸವಿತಾ ಪಶ್ಚಾತಾತ್ಸವಿತಾ ಪುರಸ್ತಾತ್
ಸವಿತೋತ್ತರಾತ್ತಾತ್ಸವಿತಾಧರಾತ್ತಾತ್ |
ಸವಿತಾ ನಃ ಸುವತು ಸರ್ವತಾತಿಂ
ಸವಿತಾ ನೋ ರಾಸತಾಂ ದೀರ್ಘಮಾಯುಃ' (10-36-14)

'ಪಶ್ಚಿಮದಿಗ್ಭಾಗದಲ್ಲಿ ನಿಂತ, ಪೂರ್ವಭಾಗದಲ್ಲಿ ನಿಂತ, ಹಾಗೆಯೇ ಮೇಲೆಯೂ ಕೆಳಗೂ ವ್ಯಾಪಿಸಿ ನಿಂತ ಸವಿತೃದೇವನು ನಮ್ಮ ಸರ್ವಾಭೀಷ್ಟಗಳನ್ನೂ ಕರುಣಿಸಲಿ. ನಮಗೆ ದೀರ್ಘವಾದ ಆಯುಸ್ಸನ್ನು ಸವಿತೃದೇವನು ಕೊಡಲಿ.'

**ಪೂಷನ್**

ಪೂಷನ್ ದೇವತೆಯನ್ನು ಎಂಟು ಸೂಕ್ತಗಳಲ್ಲಿ ಸ್ತುತಿಸಿದೆ. ಇಂದ್ರ ಮತ್ತು ಸೋಮದೇವತೆಯೊಡನೆ ಎರಡು ಸೂಕ್ತಗಳಲ್ಲಿ ಇವನನ್ನು ಸ್ತುತಿಸಿದ್ದಾರೆ. ಪೂಷನ್ ಎಂದರೆ ಪೋಷಕನೆಂದು ಅರ್ಥ. ಸರ್ವಪ್ರಧಾನನಾದ ಸೂರ್ಯದೇವನ ಪೋಷಕ ಸ್ವರೂಪವೇ ಈ ದೇವತೆಯ ರೂಪವನ್ನು ಪಡೆದಿರುವಂತಿದೆ. ಪೂಷನ್ ಆದ್ದರಿಂದಲೇ ಸೌರದೇವತೆಗಳಲ್ಲಿ ಒಬ್ಬನಾಗಿದ್ದಾನೆ.

ಯಾಸ್ಕಾಚಾರ್ಯರು ಪೂಷನ್ ಶಬ್ದ ನಿರ್ವಚನ ಮಾಡುತ್ತಾ

'ಅಥಯದ್ರಶ್ಮಿ ಪೋಷಂ ಪುಷ್ಯತಿ ತತ್ ಪೂಷಾ ಭವತಿ' (ನಿ. 12-16-2) ಎಂದು ಹೇಳಿ 'ತೇಜಸ್ಸಿನಿಂದ ಪೂರ್ಣನಾಗಿ ರಶ್ಮಿಗಳನ್ನು ಧರಿಸಿದಾಗ ಸೂರ್ಯನು ಪೂಷನ್ ಆಗುವನೆಂದು' ಸಾರುತ್ತಾರೆ.

ಪೂಷನ್‌ದೇವತೆಯ ರೂಪ ಅಸಾಧಾರಣವಾದುದು. ದರ್ಶನೀಯ—ದಸ್ರ: (10-26-1). ಇವನು ದೀಪ್ತಿಯುತ ದುಷ್ಟರನ್ನು ಕಾಲಿನಿಂದ ತುಳಿಯುವನು. ಇವನು ಕೈಲಿ ಹಿಡಿದ ಚಕ್ರ ಅಕುಂಠಿತವಾದ ಧಾರೆಯನ್ನುಳ್ಳದಾಗಿ ಬೆಳಗುವುದು–

'ಪೂಷ್ಣಶ್ಚಕ್ರಂ ನ ರಿಷ್ಯತಿ ನ ಕೋಶೋಽವಪದ್ಯತೇ |
ನೋ ಅಸ್ಯ ವ್ಯಥತೇ ಪವಿ: ||' (6-53-3)

'ಪೋಷಕನಾದ ಈ ದೇವನ ಚಕ್ರಾಯುಧ ನಾಶರಹಿತವಾದುದು. ಅದರ ಕೋಶವೂ ನಾಶವಾಗದು. ಅದರ ಧಾರೆಯೂ ಅಕುಂಠಿತವಾಗಿರುವುದು.' 'ಇವನು ರಥದಲ್ಲಿ ಕುಳಿತು ಬರುವನು. ರುದ್ರನಂತೆ ಇವನು ಜಟಾಧಾರಿಯಾಗಿದ್ದಾನೆ. ಮಹತ್ತರವಾದ ಧನಕ್ಕೆ ಒಡೆಯನಾಗಿದ್ದಾನೆ' ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ:

'ರಥೀತಮಂ ಕಪರ್ದಿನಂ
ಈಶಾನಂ ರಾಧಸೋ ಮಹ: |' (6-55-2)

ಇವನು ಶ್ಮಶ್ರುಧಾರಿಯೂ ಆಗಿದ್ದಾನೆ (10-26-7). ಸ್ವರ್ಣಮಯವಾದ ಕುಂತಾಯುಧವನ್ನು ಹಿಡಿದಿದ್ದಾನೆ ಕೈಯಲ್ಲಿ–'ಹಿರಣ್ಯವಾಶೀಮತ್ತಮ' (1-42-6). ಹರಿತವಾದ ಅಂಕುಶವೂ ಇವನ ಆಯುಧ–'ಆರಯಾ' (6-53-6). ಇವನ ರಥವನ್ನು ಆಡುಗಳು ಎಳೆಯುತ್ತವೆ–'ಅಜಾಶ್ವ' (6-55-3).

'ಆ ತೇ ರಥಸ್ಯ ಪೂಷನ್
ಅಜಾಧುರಂ ವವೃತ್ಯು:' | (5-26-8).

ಇವನ ರಥವನ್ನು ಕುದುರೆಗಳು ಎಳೆಯುವುವೆಂದೂ ಹೇಳಿದೆ–'ಅಶ್ವಹಯೋರಥಾನಾಮ್' (5-26-5). ಹೊರಡುವುದಕ್ಕನುಕೂಲವಾಗುವಂತೆ ಯಾವಾಗಲೂ ರಥವನ್ನು ಇವನು ಸಿದ್ಧವಾಗಿಟ್ಟಿರುತ್ತಾನೆ–'ನಿಯುದ್ರಥ:' (5-26-1). ಇವನಿಗೆ ಘೃತಮಿಶ್ರವಾದ ಕರಂಭವೆಂಬ ಗಂಜಿ ಬಹಳ ಪ್ರಿಯ. 'ಯಾವ ಭಕ್ತನು ಈ ಪೂಷನ್ ದೇವನು ಕರಂಭಪ್ರಿಯನೆಂದು ಸ್ತುತಿಸುವನೋ ಅವನು ಮತ್ತೊಬ್ಬ ದೇವತೆಯನ್ನು ಸ್ತುತಿಸಿ ಬೇಡಬೇಕಾದುದಿಲ್ಲ' ಎಂದು.

'ಯ ಏನಮಾದಿದೇಶತಿ
ಕರಂಭಾದಿತಿ ಪೂಷಣಮ್ |
ನ ತೇನ ದೇವ ಆದಿಶೇ ||' (6-56-1) ಎಂಬಲ್ಲಿ ಹೇಳಿದೆ.

ಪೂಷನ್ ದೇವನು ಎಲ್ಲ ಪ್ರಾಣಿಗಳನ್ನೂ ವಿಶದವಾಗಿ ಒಮ್ಮೆಲೇ ಕಾಣಬಲ್ಲನು. ಸರ್ವದರ್ಶಿತ್ವ ಇವನದು.

'ಯೋ ವಿಶ್ವಾಭಿವಿಪಶ್ಯತಿ
ಭುವನಾ ಸಂಚ ಪಶ್ಯತಿ |
ಸ ನಃ ಪೂಷಾವಿತಾ ಭುವತ್ ||' (3-62-9)

'ಪೂಷನ್ ದೇವನು ಸರ್ವಲೋಕಗಳನ್ನೂ ನೇರವಾಗಿ ನೋಡುತ್ತಾನೆ. ಮತ್ತು ಆಯಾ ವಸ್ತುಗಳ ಯಾಥಾತ್ಮ್ಯವನ್ನು ನೇರವಾಗಿ ಕಾಣುತ್ತಾನೆ. ಅಂಥವನು ನಮಗೆ ರಕ್ಷಕನಾಗಲಿ.'

ಶೋಭನ ಸ್ತೋತ್ರಗಳ ಸ್ವರೂಪವನ್ನಿವನು ಅರಿತಿದ್ದಾನೆ. ಸೋಮದೇವನಂತೆ ಕಾಮವರ್ಷಕನಾಗಿದ್ದಾನೆ. ರೂಪವಂತನಾಗಿದ್ದಾನೆ. ನಮ್ಮಲ್ಲಿ ಕೃಪಾಳುವಾಗಿದ್ದಾನೆ. ನಮ್ಮ ಪಶುಗಳನ್ನು ಕಾಪಾಡುತ್ತಾನೆ.'

'ಸವೇದ ಸುಷ್ಟುತೀನಾಮಿಂದುರ್ನ ಪೂಷಾ ವೃಷಾ |
ಅಭಿಪ್ಸುರಃ ಪ್ರುಷಾಯತಿ ವ್ರಜಂನ ಆ ಪ್ರುಷಾಯತಿ ||' (10-26-3)

ಪೂಷನ್ ದೇವನನ್ನು ಲೋಕದ ಚರಾಚರ ಪದಾರ್ಥಗಳ ಪ್ರಭುವೆಂದು ಕೊಂಡಾಡಿದ್ದಾರೆ. ಸೂರ್ಯ ಮತ್ತು ಅಗ್ನಿಯನ್ನು ಕುರಿತು ಹೇಳುವಂತೆ ಈತನನ್ನು 'ಸ್ವಸುರ್ಜಾರಃ' 'ಮಾತುರ್ದಿಧಿಷು' (6-56-4,5) ಎಂದು ರಾತ್ರಿಯ ಮತ್ತು ಉಷಸ್ಸಿನ ಪತಿಯೆಂದು ನಿರ್ದೇಶಿಸಿದ್ದಾರೆ. ಈತನನ್ನು ದೇವತೆಗಳು ಸೂರ್ಯಾದೇವಿಗೆ ವಿವಾಹ ಮಾಡಿಕೊಟ್ಟರೆಂದೂ ಹೇಳಿದೆ–'ಯಂ ದೇವಾಸೋ ಅದದುಃ ಸೂರ್ಯಾಯೈ' (6-58-4) ಎಂಬಲ್ಲಿ. ಪೂಷನ್ ದೇವನು ತನ್ನ ಭಕ್ತರಿಗೆ ಕಮನೀಯರಾದ ಕನ್ಯೆಯರನ್ನು ವಿವಾಹ ಮಾಡಿಸಲಿ ಎಂದು ಕೆಳಗಿನ ಮಂತ್ರದಲ್ಲಿ ಬೇಡಿದೆ:

'ಅವಿತಾ ನೋ ಅಜಾಶ್ವಃ
ಪೂಷಾ ಯಾಮನಿ ಯಾಮನಿ |
ಆ ಭಕ್ಷತ್ಕನ್ಯಾಸು ನಃ || (9-67-10)

"ಅಜಗಳನ್ನು ವಾಹನಗಳನ್ನಾಗಿ ಉಳ್ಳ ಪೂಷನ್ ದೇವನು ನಮ್ಮನ್ನು ನಮ್ಮ ಸಕಲ ಗತಿಗಳಲ್ಲಿಯೂ ಪಾಲಿಸುವಂತಾಗಲಿ. ನಮಗೆ ಕನ್ಯೆಯರನ್ನು ಕೊಡಿಸಲಿ."

'ಹಿರಣ್ಮಯವಾದ ನೌಕೆಗಳಲ್ಲಿ ಕುಳಿತು ಅಂತರಿಕ್ಷ ಮಾರ್ಗದಲ್ಲಿ ಸಾರುತ್ತಾ ಇವನು ಸೂರ್ಯನ ದೂತನಾಗಿದ್ದಾನೆ' ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ:

'ಯಾಸ್ತೇ ಪೂಷನ್ನಾವೋ ಅಂತಃ ಸಮುದ್ರೇ
ಹಿರಣ್ಮಯೀರಂತರಿಕ್ಷೇ ಚರಂತಿ |' (6-58-3)

ರಥಿಗಳಲ್ಲಿ ಸರ್ವಶ್ರೇಷ್ಠನಿವನು ; ಸರ್ವರ ಪ್ರೇರಕನೂ ಸಜ್ಜನರ ಪಾಲಕನೂ ಆದವನು ಇವನು. ಇವನ ಸಹಾಯದಿಂದ ಇಂದ್ರನು ವೃತ್ರಾದಿಗಳನ್ನೂ ಸಂಹರಿಸುತ್ತಾನೆ. ಹೀಗೆ ಬಲಿಷ್ಠರಾದವರಿಗೂ ಇವನ ಸಹಾಯ ಆವಶ್ಯಕ. 'ಇವನು ಆದಿತ್ಯನ ಸ್ವರ್ಣ ನಿರ್ಮಿತವಾದ ರಥದ ಚಕ್ರವನ್ನೂ ಪ್ರೇರಿಸುವವನಾಗಿದ್ದಾನೆ'–

'ಉತಾದಃ ಪರುಷೇ ಗವಿ
ಸೂರಶ್ಚಕ್ರಂ ಹಿರಣ್ಯಯಮ್ ।
ನ್ಯೈರಯದ್ರಥೀತಮಃ ||' (6-56-3)

ಇವನು ಲೋಕದ್ವಯ ಮಾರ್ಗಗಳನ್ನೂ ಚೆನ್ನಾಗಿ ಅರಿತವನು. 'ಮಾರ್ಗದ ಪಾಲಕ'– 'ಪಥಸ್ಪತೇ'–ಎಂದೇ ಇವನನ್ನು ಕರೆಯುತ್ತಾರೆ ಆ ಕಾರಣ. ಇಹಲೋಕದಲ್ಲಿ ಮನುಷ್ಯರನ್ನೂ ಪಶುಗಳನ್ನೂ ರಕ್ಷಿಸುವ ಈ ಮಹಾನುಭಾವನು ಪರಲೋಕದಲ್ಲಿ ದಾರಿಕಾಣದೆ ಅಲೆಯುವ ಪಿತೃಲೋಕಗಾಮಿಗಳಾದ ಮೃತರಿಗೆ ಮಾರ್ಗದರ್ಶನ ಮಾಡಿ ಪರಮೋಪಕಾರಮಾಡುವನು.

'ಪೂಷೇಮಾ ಆಶಾ ಅನುವೇದ ಸರ್ವಾಃ
ಸೋ ಅಸ್ಮಾನ್ ಅಭಯತಮೇನ ನೇಷನ್ |' (10-17-5)

ಮಾರ್ಗಗಳನ್ನೆಲ್ಲಾ ಅರಿತ ಪೂಷನ್ ದೇವನು ರಸ್ತೆಯಲ್ಲೊದಗುವ ಅಪಾಯಗಳನ್ನೆಲ್ಲಾ ಪರಿಹರಿಸುವನು. ಮಾರ್ಗಪ್ರತಿಬಂಧಕರಾದ ಕಳ್ಳರುಗಳು, ಹಿಂಸಕರು ಮೊದಲಾದವರಿಂದ ಕಾಪಾಡಬೇಕೆಂದು ಬೇಡಿದ್ದಾರೆ (1-42-3). 'ವಿಮುಚೋನಪಾತ್' ಎಂದು ಸ್ತುತಿಸಿದ್ದಾರೆ ಆ ಕಾರಣ. 'ವಿಮೋಚನ' ಎಂಬ ಹೆಸರನ್ನೂ ಇವನಿಗೆ ಅನ್ವಯಿಸಿದೆ. ರಸ್ತೆಯಲ್ಲಿ ಸಂಭವಿಸುವ ಅಪಾಯದಿಂದ ಬಿಡಿಸಿ ಒಳ್ಳೆಯದನ್ನುಂಟು ಮಾಡಬೇಕೆಂದು ಬೇಡಿದ್ದಾರೆ. 'ಪಥಸ್ಪಥಃ ಪರಿಪತಿಂ' (6-49-8) ಎಂದು ಇವನನ್ನು ಸ್ತುತಿಸಿದ್ದಾರೆ.

ಇವನು ಮಾರ್ಗದರ್ಶಕನಾದುದರಿಂದಲೇ ಮಾರ್ಗಭ್ರಷ್ಟನಾದವನು ಪೂಷನ್ ದೇವತೆಯನ್ನು ಸ್ತುತಿಸಬೇಕೆಂದು ಹೇಳಿದೆ. ಪೂಷನ್ ದೇವತೆ ಪಶುಪಾಲಕ. ಇವನು ಹೇಗೆ ಮಾರ್ಗರಕ್ಷಕನಾಗಿದ್ದಾನೆಯೋ ಹಾಗೆಯೇ ಗೋಪಾಲನೂ ಆಗಿದ್ದಾನೆ. ಇತರ ದೇವತೆಗಳನ್ನು ಸ್ತುತಿಸುವಂತೆ ಇವನನ್ನೂ 'ಅಸುರ' ಎಂದು ಕರೆದಿದ್ದಾರೆ. ಸರ್ವಜ್ಞನೂ ಸರ್ವಶಕ್ತನೂ ಆದವನಿವನು. ಮಾನವರನ್ನತಿಶಯಿಸಿದ ಮಹತ್ತಮನಾದ ಇವನು ಅಜೇಯನಾದ ಪ್ರಭುವೂ ರಕ್ಷಕನೂ ಆಗಿದ್ದಾನೆ. ಎಲ್ಲ ನಿಧಿಗಳಿಗೂ ಒಡೆಯನಿವನು. ಇವನ ದಾತೃತ್ವವನ್ನು ಹೆಚ್ಚಾಗಿ ಕೊಂಡಾಡಿದ್ದಾರೆ. ಇವನ ಮಹಿಮೆಯನ್ನು ಕೆಳಗಿನ ಮಂತ್ರದಲ್ಲಿ ಕೊಂಡಾಡಿದೆ:

'ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್
ವಿಷುರೂಪೇ ಅಹನೀ ದ್ಯೌರಿವಾಸಿ |
ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ
ಭದ್ರಾ ತೇ ಪೂಷನ್ನಿಹ ರಾತಿರಸ್ತು ||' (6-58-1)

"ಎಲೈ ಪೂಷನ್ ದೇವನೇ, ಶುಕ್ಲವರ್ಣದ ಒಂದು ಹಗಲು ನಿನಗೇ ಸಂಬಂಧಿಸಿದೆ; ಹಾಗೆಯೇ ರಾತ್ರಿರೂಪದ ಮತ್ತೊಂದು ಭಾಗವೂ ನಿನಗೇ ಸಂಬಂಧಿಸಿದೆ. ಶುಕ್ಲಕೃಷ್ಣ ರೂಪವಾದ ದಿನಗಳೆಲ್ಲ ನಿನ್ನ ಮಹಿಮೆಯಿಂದಲೇ ಉಂಟಾಗುತ್ತದೆ. ಆದಿತ್ಯನಂತೆ ನೀನೂ ಪ್ರಕಾಶನಾಗಿ ದ್ದೀಯೆ. ಅನ್ನವಂತನಾದ ಎಲೈ ಪೂಷನ್ ದೇವನೇ, ಸಮಸ್ತವಾದ ಪ್ರಜ್ಞೆಯುಳ್ಳವನು ನೀನು. ಆದ್ದರಿಂದಲೇ ನೀನು ರಕ್ಷಕ. ಇಂಥ ನಿನ್ನ ಕಲ್ಯಾಣತಮವಾದ ದಾನವು ನಮ್ಮಲ್ಲಿ ಫಲಿಸಲಿ."

ಪೂಷನ್‌ದೇವತೆಯ ಸೌಲಭ್ಯಾತಿಶಯವನ್ನು ಅನೇಕ ರೀತಿಯಲ್ಲಿ ಕೊಂಡಾಡಿದ್ದಾರೆ. ಅನೇಕ ರೀತಿಯಲ್ಲಿ ಸಹಾಯ ಮಾಡುವವನಿವನು. ದಾನ ಮಾಡಲು ಇಷ್ಟಪಡದವನ ಮನಸ್ಸನ್ನೂ ತಿರುಗಿಸಿ ದಾನಮಾಡುವಂತೆ ಪ್ರೇರಿಸಬೇಕೆಂದೂ, ಲುಬ್ಧರಾದ ಪಣಿಗಳ ಹೃದಯವನ್ನು ಅಂಕುಶದಿಂದ ಭೇದಿಸಬೇಕೆಂದೂ ಬೇಡಿದೆ (6-53-3).

ಕೊಡುಗೈದಾನಕ್ಕೆ ಎತ್ತಿದ ಕೈ ಇವನದು. ಪಶುಗಳನ್ನು ಹಿಂಬಾಲಿಸಿಕೊಂಡು ಹೋಗಿ

ರಕ್ಷಿಸುವುದು ಮಾತ್ರವಲ್ಲದೆ ತಪ್ಪಿಸಿಕೊಂಡ ಪಶುಗಳನ್ನು ಮತ್ತೆ ಮನೆಗೆ ಹಿಂತಿರುಗಿಸುವವನಿವನು. ಪೂಷನ್ ಎಂಬ ಪದಕ್ಕೆ ಅನ್ವರ್ಥವಾಗಿದೆ ಇವನ ಪೋಷಕ ಸ್ವಭಾವ. ಇವನಲ್ಲಿ ಋಷಿಗಳ ಬೇಡಿಕೆ ಇದು–

'ತಾಂ ಪೂಷ್ಣಃ ಸುಮತಿಂ ವಯಂ
ವೃಕ್ಷಸ್ಯ ಪ್ರ ವಯಾಮಿವ |
ಇಂದ್ರಸ್ಯ ಚಾರಭಾಮಹೇ ||'(6-57-5)

'ಪೂಷನ್ ದೇವನ ಹಾಗೂ ಇಂದ್ರದೇವನ ಅನುಗ್ರಹ ಬುದ್ಧಿಯನ್ನು ನಾವು ಮರದ ಕೊಂಬೆಯನ್ನು ಹೇಗೋ ಹಾಗೆ, ಅವಲಂಬನವನ್ನಾಗಿ ಹೊಂದಿದ್ದೇವೆ.'

## ವಿಷ್ಣು

ಭಾರತದೇಶದ ವೈಷ್ಣವಪಂಥದವರ ಪರಮದೇವತೆಯಾಗಿ ಪುರುಷೋತ್ತಮನೆಂದೆಣಿಸಲ್ಪಟ್ಟಿರುವ ವಿಷ್ಣುದೇವತೆಗೆ ಋಗ್ವೇದದಲ್ಲಿ ಐದಾರು ಸೂಕ್ತಗಳು ಮೀಸಲಾಗಿವೆ. ಈ ದೇವತೆಯೂ ಸೂರ್ಯನಿಗೆ ಸಂಬಂಧಿಸಿದೆ. ಯಾಸ್ಕಾಚಾರ್ಯರು–'ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ, ವಿಷ್ಣುರ್ವಿಶತೇರ್ವಾ ವ್ಯಶ್ನೋ ತೇರ್ವಾ' ಎಂದು ವಿಷ್ಣು ಶಬ್ದ ನಿರ್ವಚನ ಮಾಡಿದ್ದಾರೆ. (ನಿ. 12-18-2). ಯಾವಾಗ ಸೂರ್ಯನು ತನ್ನ ರಶ್ಮಿಗಳಿಂದ ವ್ಯಾಪ್ತನಾಗುವನೋ ಆಗ ವಿಷ್ಣುವಾಗುತ್ತಾನೆ ; ತನ್ನ ಕಿರಣಗಳಿಂದ ಎಲ್ಲೆಲ್ಲಿಯೂ ಸೂರ್ಯನು ಯಾವಾಗ ಪ್ರವೇಶಿಸುವನೋ ಆಗ ವಿಷ್ಣುವಾಗುತ್ತಾನೆ; ಎಲ್ಲವನ್ನೂ ಸ್ವರಶ್ಮಿಗಳಿಂದ ವ್ಯಾಪಿಸಿದ ಕಾಲದಲ್ಲಿ ಸೂರ್ಯನು ವಿಷ್ಣುವೆನಿಸುತ್ತಾನೆ; 'ವ್ಯಾಪನಾತ್ ವಿಷ್ಣುಃ' ಎಂದು ಹೇಳಿದಂತೆ ಈ ದೇವತೆಯ ವ್ಯಾಪಕತ್ವವನ್ನು ಈ ಹೆಸರು ಸೂಚಿಸುತ್ತದೆ.

ವಿಷ್ಣು ಉರುಗಾಯ, ಉರುಕ್ರಮ. ಮೂರು ಕ್ರಮಣಗಳಲ್ಲಿ ಭೂಮ್ಯಾಕಾಶಾದಿಗಳನ್ನವನು ಕ್ರಮಿಸುವನು. ಈ ಮೂರು ಪಾದನ್ಯಾಸಗಳಲ್ಲಿ ಎರಡು ಮಾನವರಿಗೆ ಗೋಚರಿಸುವುವು. ಆದರೆ ಮೂರನೆಯ ಸ್ಥಾನವನ್ನು ಯಾವ ಮರ್ತ್ಯನೂ ಕಾಣಲಾರನು–'ತೃತೀಯಮಸ್ಯ ನಕಿರಾ ದಧರ್ಷತಿ ವಯಶ್ಚನ ಪತಯಂತಃ ಪತತ್ರಿಣಃ' (1-155-5). ವಿಷ್ಣುವಿನ ಪರಮಪದ ಸರ್ವೋನ್ನತವಾಗಿ ವಿರಾಜಿಸಿದೆ. ಸೂರಿಗಳು ಆ ದಿವ್ಯಸ್ಥಾನವನ್ನು ಸದಾ ಕಾಣುತ್ತಾರೆ ಆಕಾಶದಲ್ಲಿ ವಿಶದವಾಗಿ ಹರಡಿದ ದೃಷ್ಟಿಯು ಕಾಣುವಂತೆ.

ತದ್ವಿಷ್ಣೋಃ ಪರಮಂ ಪದಂ
ಸದಾ ಪಶ್ಯಂತಿ ಸೂರಯಃ |
ದಿವೀವ ಚಕ್ಷುರಾತತಮ್ || (1-22-20)

ಋಗ್ವೇದದಲ್ಲಿ ಪ್ರತಿಪಾದಿಸಿರುವ ಈ ಪರಮೋನ್ನತವಾದ ಸ್ಥಾನ ಸರ್ವಾತಿಶಾಯಿಯಾಗಿ ಈ ದೇವನಿಗೆ ಸಂಬಂಧಿಸಿದೆ. ಇದನ್ನು ಪಡೆಯಬೇಕೆಂಬ ಹಂಬಲ ಅವರದಾಗಿತ್ತು.

ಈ ದಿವ್ಯಸ್ಥಾನವನ್ನು ಬಗೆಬಗೆಯಾಗಿ ಕೊಂಡಾಡಿದ್ದಾರೆ. ಗಾಢವಾಗಿ ಸ್ತುತಿಸುವವರೂ ಜಾಗರೂಕರೂ ಆದ ಭಕ್ತರುಗಳು ಆ ವಿಷ್ಣುವಿನ ಪರಮಪದವನ್ನು ಸೇರಿ ಬೆಳಗುತ್ತಾರೆ.

'ತದ್ವಿಪ್ರಾಸೋ ವಿಪನ್ಯವೋ
ಜಾಗೃವಾಂಸಃ ಸಮಿಂಧತೇ |
ವಿಷ್ಣೋರ್ಯತ್ಪರಮಂ ಪದಮ್ ||' (1-22-21)

ಆ ಪರಮಪದದ ವರ್ಣನೆ ಹೀಗಿದೆ:

'ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ
ನರೋ ಯತ್ರ ದೇವಯವೋ ಮದಂತಿ |
ಉರುಕ್ರಮಸ್ಯ ಸಹಿ ಬಂಧುರಿತ್ಥಾ
ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ||' (1-154-5)

'ಆ ದೇವನನ್ನೇ ಹೊಂದಲು ಬಯಸಿದ ಮನುಷ್ಯರು ಎಲ್ಲಿ ಸಂತೋಷಿಸುತ್ತಾರೋ ಉರುಕ್ರಮನಾದ ವಿಷ್ಣುವಿನ ಯಾವ ಆ ಪರಮಪದದಲ್ಲಿ ಜೇನಿನ ಹೊಳೆಯೇ ಹರಿಯುತ್ತಿದೆಯೋ ಅಂಥ ಸುಪ್ರಸಿದ್ಧವಾದ ಆ ವಿಷ್ಣುವಿಗೆ ಪ್ರಿಯವಾದಂಥ ಶಾಶ್ವತ ಲೋಕವನ್ನು ನಾನು ಪಡೆಯುವಂತಾಗಲಿ. ಈ ರೀತಿಯಲ್ಲಿ ಅವನೀಗ ಎಲ್ಲ ಸುಕೃತಿಗಳಿಗೂ ಬಂಧುವಾಗಿದ್ದಾನೆ.'

ಸೂರ್ಯನ ಮೂರು ಗತಿಗಳಿಗೆ ಈ ಮೂರು ಪದನ್ಯಾಸಗಳು ಅನ್ವಯಿಸುವುದೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಯಾಸ್ಕರು ಈ ವಿಚಾರದಲ್ಲಿ ಇಬ್ಬರು ಪ್ರಾಚೀನರಾದ ಔರ್ಣವಾಭ ಮತ್ತು ಶಾಕಪೂಣಿಗಳ ಅಭಿಪ್ರಾಯವನ್ನು ಕೊಡುತ್ತಾರೆ. 'ಸಮಾರೋಹಣೇ ವಿಷ್ಣುಪದೇ ಗಯಶಿರಸೀತಿ ಔರ್ಣವಾಭಃ' 'ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ' (ನಿ 12-19) ಎಂದು. ಔರ್ಣವಾಭರ ಅಭಿಪ್ರಾಯದಲ್ಲಿ ಉದಯಿಸುವ, ನಡುಹಗಲಿನ ಮತ್ತು ಅಸ್ತಮಿಸುವ ಸೂರ್ಯನನ್ನು ಈ ಮೂರು ಕ್ರಮಣಗಳು ಸೂಚಿಸುತ್ತವೆ. ಆದರೆ ಇವು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳ ಮೂಲಕ ಸಾರುವ ಸೂರ್ಯನ ಗತಿಗಳನ್ನೂ ಸೂಚಿಸುವುವೆಂದು ಶಾಕಪೂಣಿಗಳ ಅಭಿಪ್ರಾಯ. ಯಾಸ್ಕರ ಬೆಂಬಲ ಇದಕ್ಕೇ ಇರುವಂತಿದೆ. ವಿಷ್ಣುವಿನ ಮೂರನೆಯ ಪದ ಸೂರ್ಯಾಸ್ತಕ್ಕೆ ಸಂಬಂಧಿಸದೆ ಅವನ ಪರಮಪದವನ್ನು ಸೂಚಿಸುತ್ತದೆ. ವಿಷ್ಣುವು (1-155-6)ರಲ್ಲಿ 94 ಸಂಖ್ಯೆಯ ಕಾಲಾವಯವಗಳನ್ನು ಪ್ರೇರಿಸಿ (1 ಸಂವತ್ಸರ +2 ಅಯನ +5 ಋತುಗಳು + 12 ತಿಂಗಳು + 24 ಅರ್ಧಮಾಸಗಳು+30 ಅಹೋರಾತ್ರಿಗಳು +8 ಯಾಮಗಳು +ದಿನದಲ್ಲಿ ಬರುವ 12 ಲಗ್ನಗಳು) ಚಕ್ರೋದೋಪಾಯದಲ್ಲಿ ತಿರುಗಿಸುವನೆಂದು ಹೇಳಿದೆ. ಈ ಮಂತ್ರದಲ್ಲಿ ವಿಷ್ಣುವನ್ನು ಕಾಲಾತ್ಮಕನನ್ನಾಗಿಯೂ ಬೃಹಚ್ಛರೀರಕನನ್ನಾಗಿಯೂ ನಿತ್ಯ ತರುಣನನ್ನಾಗಿಯೂ ಅಕುಮಾರನನ್ನಾಗಿಯೂ ಸ್ತುತಿಸಿರುವುದನ್ನು ನೋಡಿದರೆ ಇವನಿಗೂ ಸೂರ್ಯನಿಗೂ ಇರುವ ಸಂಬಂಧವು ಗೊತ್ತಾಗುವುದು.

'ಜ್ಯೋತಿಶ್ಚರತಿ ಚಕ್ರಮಾಯುಧಮ್' ಎಂದು ಸೂರ್ಯನನ್ನು ವರ್ಣಿಸುತ್ತಾ (5-63-4) ಚಕ್ರಾಯುಧವೆಂದು ಹೇಳಿರುವುದೂ, ಮುಂದೆ ಚಕ್ರವು ವಿಷ್ಣುವಿನ ಆಯುಧವಾಗಿರುವುದೂ, ವಿಷ್ಣುವಿನ ವಾಹನವಾದ ಗರುಡನ ಗರುತ್ಮತ್, ಸುಪರ್ಣ ಎಂಬ ಹೆಸರುಗಳು ಸೂರ್ಯನಿಗೆ ಅನ್ವಯಿಸಿರುವುದೂ ಈ ಸಂಬಂಧವನ್ನು ದೃಢಪಡಿಸುತ್ತವೆ.

ವಿಷ್ಣುವಿನ ಸರ್ವಶಕ್ತಿತ್ವವನ್ನೂ ವೀರಕರ್ಮಗಳನ್ನೂ ಹೇಳಲಾಗಿದೆ. 'ವಿಷ್ಣುದೇವನು ಲೋಕತ್ರಯಗಳಿಗೆ ಸಂಬಂಧಿಸಿದುದೆಲ್ಲವನ್ನೂ ನಿರ್ಮಿಸಿದನು. ಅತಿ ವಿಸ್ತೀರ್ಣವೂ ಮೂರುಲೋಕಗಳಿಗೂ ಆಶ್ರಯವಾದುದೂ ಆದ ಅಂತರಿಕ್ಷವನ್ನು ಅವುಗಳಿಗೆ ಆಧಾರವಾಗಿರುವಂತೆ ನಿರ್ಮಿಸಿದನು. ತಾನೇ ಸೃಜಿಸಿದ ಈ ಲೋಕಗಳನ್ನು ವಿವಿಧವಾಗಿ ಅವನು ಕ್ರಮಣ ಮಾಡಿದನು' ಎಂದು ಕೆಳಗಿನ ಮಂತ್ರ ಹೇಳುತ್ತದೆ:

'ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ
ಯಃ ಪಾರ್ಥಿವಾನಿ ವಿಮಮೇ ರಜಾಂಸಿ |
ಯೋ ಅಸ್ಕಭಾಯದುತ್ತರಂ ಸದಸ್ಥಂ
ವಿಚಕ್ರಮಾಣಸ್ತ್ರೇಧೋರುಗಾಯಃ ||' (1-154-1)

'ಈ ವಿಷ್ಣುವನ್ನು ಅವನ ವೀರಕರ್ಮಗಳಿಗಾಗಿ ಕೊಂಡಾಡುತ್ತಾರೆ–ಪರ್ವತದ ಉನ್ನತ ಪ್ರದೇಶದಲ್ಲಿರುವುವೂ ದುರ್ಗಮ ಪ್ರದೇಶಗಳಿಗೂ ಹೋಗುವುವೂ ಆದ ಸಿಂಹಾದಿಗಳನ್ನು ಹೇಳೋ ಹಾಗೆ. ಸಕಲ ಲೋಕಗಳಿಗೂ ಈ ಮಹಾನುಭಾವನ ಮೂರು ಪಾದನ್ಯಾಸಗಳನ್ನಾ ಶ್ರಯಿಸಿ ಬದುಕಿವೆ' (1-154-2). ಆ ಮೂರು ಲೋಕಗಳನ್ನೂ ಅದ್ವಿತೀಯನಾಗಿ ಇವನು ಮೂರು ಪಾದನ್ಯಾಸಗಳಿಂದ ಸೃಜಿಸಿದವನು–'ಏಕೋವಿಮಮೇ' (1-154-3).

'ಈ ಮಹಾನುಭಾವನ ಮೂರು ಪಾದನ್ಯಾಸಗಳೂ ದಿವ್ಯವಾದ ಅಮೃತದಿಂದ ತುಂಬಿವೆ; ನಾಶದೂರವಾಗಿವೆ ; ಆಶ್ರಿತರನ್ನು ಅನ್ನಾದಿಗಳಿಂದ ತೃಪ್ತಿಪಡಿಸುತ್ತವೆ. ಏಕೈಕನಾಗಿ ಈತನೇ ಪೃಥಿವೀಲೋಕ, ದ್ಯುಲೋಕ ಹಾಗೂ ಸರ್ವಲೋಕಗಳನ್ನೂ ಸರ್ವಪ್ರಾಣಿಗಳನ್ನೂ ತ್ರಿಧಾತುವಿಶಿಷ್ಟವಾಗುವಂತೆ ಮಾಡಿ ಎಲ್ಲಕ್ಕೂ ಆಧಾರವಾಗಿದ್ದಾನೆ.'

'ಯಸ್ಯ ತ್ರಿ ಪೂರ್ಣಾ ಮಧುನಾಪದಾ-
ನ್ಯಕ್ಷೀಯಮಾಣಾ ಸ್ವಧಯಾ ಮಧಂತಿ |
ಯ ಉ ತ್ರಿಧಾತು ಪೃಥಿವೀಮುತ ದ್ಯಾ-
ಮೇಕೋ ದಾಧಾರ ಭುವನಾನಿ ವಿಶ್ವಾ ||' (1-154-4)

ವಿಷ್ಣುದೇವನು ಮೂರು ಪಾದನ್ಯಾಸಗಳನ್ನು ಮಾಡಿದುದಾದರೂ ಮಾನವನ ಅನುಕೂಲ ಕ್ಕಾಗಿ. ಮಾನವರು ವಾಸಿಸಲು ಅನುಕೂಲಿಸುವಂತೆ ಭುವನಗಳನ್ನವನು ನಿರ್ಮಾಣಮಾಡಿದನು- 'ಜೀವಸೇ ನೋ ರಜಾಂಸಿ' (6-69-5).

'ಕ್ಷೇತ್ರಾಯ ವಿಷ್ಣುರ್ಮನುಷೇ ದಶಸ್ಯನ್' (7-100-4).

ಇಂದ್ರನೊಡನೆ ವಿಷ್ಣುವಿನ ಮೈತ್ರಿ ಗಮನಾರ್ಹವಾಗಿದೆ.

'ಇಂದ್ರಸ್ಯ ಯುಜ್ಯಃ ಸಖಾ' (1-22-19)

ವೃತ್ರನೊಡನೆ ಇಂದ್ರನು ಕಾದುವಾಗ ವಿಷ್ಣುವಿನ ಸಹಾಯ ಲಭಿಸಿತು–'ಹನ್ ಋಜೀಷಿನ್ ವಿಷ್ಣುನಾ ಸಚಾನಃ (6-20-2). ಇಂದ್ರಾವಿಷ್ಣುಗಳು ಯುದ್ಧದಲ್ಲಿ ಅಸುರರ ಮಾಯೆಗಳನ್ನೆಲ್ಲಾ ಖಂಡಿಸಿದರು. ಶಂಬರನ 99 ಪಟ್ಟಣಗಳನ್ನು ನಾಶಪಡಿಸಿದರು (7-99-5).

ಇವರಿಬ್ಬರೂ ಇತರರನ್ನು ಸೋಲಿಸುತ್ತಾರೆ; ಆದರೆ ಯಾರಿಂದಲೂ ಸೋಲಿಸಲ್ಪಡುವುದಿಲ್ಲ– 'ಉಭಾ ಜಿಗ್ಯಥುರ್ನ ಪರಾ ಜಯೇಥೇ' (6-69-8). ಹೀಗೆ ಇಂದ್ರನ ಪ್ರಿಯಸಖನಾಗಿದ್ದಾನೆ ವಿಷ್ಣು. ಮುಂದಿನ ಪುರಾಣಗಳಲ್ಲಿ ವಿಷ್ಣುವನ್ನು ಉಪೇಂದ್ರನೆಂದು ಕರೆದಿರುವ ಮೂಲವನ್ನಿಲ್ಲಿ ಕಾಣಬಹುದು.

ವಿಷ್ಣುವು ಅನೇಕ ರೂಪಗಳಲ್ಲಿರುವನೆಂಬುದು ಮಂತ್ರವೊಂದರಿಂದ ಗೊತ್ತಾಗುತ್ತದೆ. ಈ ಮಂತ್ರದಲ್ಲಿ 'ಈ ರೂಪವನ್ನು ನಮ್ಮಿಂದ ಮರೆಮಾಡಬೇಡ ; ಏಕೆಂದರೆ (ನಮಗೆ ಸಹಾಯಕನಾಗಿ) ಯುದ್ಧದಲ್ಲಿ ಬೇರೊಂದು ರೂಪದಲ್ಲಿ ನೀನಿದ್ದುದುಂಟು' ಎಂದು–'ಮಾ ವರ್ಪೋ ಅಸ್ಮದಪಗೂಹ ಏತದ್ಯದನ್ಯರೂಪಃ ಸಮಿಥೇ ಬಭೂಥ (7-100-6) ಹೇಳಿದೆ. 'ತದೇವ ಮೇ ದರ್ಶಯ ರೂಪಮದ್ಯ' ಎಂದು ಅರ್ಜುನ ಗೀತಾಚಾರ್ಯನಲ್ಲಿಟ್ಟ ಮೊರೆಗೆ ಇದು ಸಂವಾದಿಯಾಗಿದೆ.

ವಿಷ್ಣುವಿನ ಮಹತ್ತ್ವವನ್ನು ಕೊಂಡಾಡುವಾಗ ಅವನು ನಿಸ್ಸಮಾಭ್ಯಧಿಕನೆಂದು ಸ್ತುತಿಸಿದೆ. ಮುಂದೆ ಹುಟ್ಟುವ ಅಥವಾ ಹಿಂದೆ ಹುಟ್ಟಿದ ಯಾವನಾಗಲೀ ಆ ಮಹಾ ಮಹಿಮನ ಮಹಿಮೆಯನ್ನು ಹೊಂದುವುದಿಲ್ಲ ; ಹೊಂದಿಲ್ಲ. 'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ' (7-99-2) ; 'ನತೇ ಮಹಿತ್ವಮನ್ವಶ್ನುವಂತಿ' (7-99-1) ; ಇಂಥ ಮಹಾಮಹಿಮನು ಎಷ್ಟು ಮಹತ್ತಮನಾಗಿದ್ದಾನೋ ಅಷ್ಟೇ ಅನುಗ್ರಾಹಕನೂ ಆಗಿದ್ದಾನೆ. ಪರಮಕರುಣಾಕರನೂ, ದಾನಿಯೂ, ಆಗಿ ಸರ್ವರಕ್ಷಕನಾಗಿದ್ದಾನೆ. 'ವಿಷ್ಣುಃ ಸುಕೃತೇ ಸುಕೃತ್ತರಃ' (1-156-5). ಇಷ್ಟಾರ್ಥಗಳನ್ನು ಸಲ್ಲಿಸಿ ಕಾಪಾಡುವವರಲ್ಲಿ ಇವನು ಸರ್ವಶ್ರೇಷ್ಠ.

'ಅಸ್ಯ ದೇವಸ್ಯಮೀಳ್ಹುಷೋ ವಯಾ
ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ |' (7-40-5)

'ಹವಿಸ್ಸುಗಳನ್ನರ್ಪಿಸಿ ಈ ವಿಷ್ಣುವನ್ನು ಪಡೆಯಬೇಕು. ಇವನು ಕಾಮವರ್ಷಕನೂ ಸರ್ವದೇವಾತ್ಮಕನೂ ಆಗಿದ್ದಾನೆ. ಇತರರು ಇವನ ಶಾಖೆಗಳಂತೆ ಇದ್ದಾರೆ.' ಇವನು ಭಕ್ತರಲ್ಲಿ ದಯೆ ತೋರುವವನೂ ಪರಮದಾನಿಯೂ ಆಗಿದ್ದಾನೆ–'ಅಘ್ನತೇ ವಿಷ್ಣವೇ ವಯಮರಿಷ್ಯಂತಃ ಸುದಾನವೇ' (7-25-12) ಸರ್ವರಕ್ಷಕನೂ ಇವನೇ–'ವಿಷ್ಣುರ್ಗೋಪಾಃ ಪರಮಂ ಪಾತಿ ಪಾಥಃ' (3-55-10) ; 'ವಿಷ್ಣುರ್ಗೋಪಾ ಅದಾಭ್ಯಃ' (1-22-18) ; ಇವನ ಸೌಲಭ್ಯ ಸೌಶೀಲ್ಯಾದಿಗಳು ಇವನ ಮಹತ್ವಕ್ಕೆ ಭೂಷಣಪ್ರಾಯವಾಗಿವೆ.

ಇಂಥ ಮಹಾಮಹಿಮನಲ್ಲಿ ಸಲ್ಲಿಸಿರುವ ಪ್ರಾರ್ಥನೆ ಇದು:

'ತಮು ಸ್ತೋತಾರಃ ಪೂರ್ವ್ಯಂ ಯಥಾವಿದ
ಋತಸ್ಯ ಗರ್ಭಂ ಜನುಷಾ ಪಿಪರ್ತನ |
ಆಸ್ಯ ಜಾನಂತೋ ನಾಮ ಚಿದ್ವಿವಕ್ತನ
ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ ||' (1-156-3)

'ಎಲೈ ಸ್ತೋತೃಗಳೇ, ಅನಾದಿಸಂಸಿದ್ಧನೂ ಯಜ್ಞರೂಪಿಯಾಗಿ ಜನಿಸಿದವನೂ ಆದ ಆ ವಿಷ್ಣುವನ್ನೇ ನಿಮಗೆ ತಿಳಿದಂತೆ ಸ್ವತಃ ಸ್ತೋತ್ರಾದಿಗಳಿಂದ ಸಂತೋಷಪಡಿಸಿ. ಈ ಮಹಾನುಭಾವನ ದಿವ್ಯನಾಮಗಳನ್ನು ಅವನು ಪುರುಷಾರ್ಥಪ್ರದನೆಂದು ತಿಳಿದು ಮನಮುಟ್ಟಿ ಸಂಕೀರ್ತನೆ ಮಾಡಿ. ಎಲೈ ಸರ್ವಾತ್ಮಕನಾದ ದೇವನೇ, ಮಹತ್ತಮನಾದ ನಿನ್ನ ಮಂಗಳಕರವಾದ ಸಂಕಲ್ಪವನ್ನು ನಾವು ಸೇವಿಸುತ್ತೇವೆ.'

## ಆದಿತ್ಯರು

ಮರುದ್ದೇವತಾಗಣದಂತೆ ಆದಿತ್ಯರೂ ದೇವತಾಗಣವನ್ನು ಸೂಚಿಸುತ್ತಾರೆ. ಈ ದೇವತಾಗಣವನ್ನು ಆರು ಸೂಕ್ತಗಳಲ್ಲಿ ಸ್ತುತಿಸಿದೆ. ಈ ಗಣಕ್ಕೆ ಸೇರಿದ ದೇವತೆಗಳ ಹೆಸರುಗಳು ಮತ್ತು ಸಂಖ್ಯೆಯ ವಿಚಾರ ನಿರ್ದಿಷ್ಟವಾಗಿ ಹೇಳಿಲ್ಲ. ಈ ದೇವತೆಗಳ ಸಂಖ್ಯೆ ಏಳೋ ಎಂಟೋ ಎಂದು ಹೇಳಿದೆ. ಅವರಲ್ಲಿ ಆರು ದೇವತೆಗಳ ಹೆಸರನ್ನು ಕೆಳಗಿನ ಮಂತ್ರದಲ್ಲಿ ಹೇಳಿದೆ:

'ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ
ಸನಾದ್ರಾಜಭ್ಯೋ ಜುಹ್ವಾ ಜುಹೋಮಿ |
ಶೃಣೋತು ಮಿತ್ರೋ ಅರ್ಯಮಾ ಭಗೋ ನಃ
ತುವಿಜಾತೋ ವರುಣೋ ದಕ್ಷೋ ಅಂಶಃ ||' (2-27-1)

ತೈತ್ತರೀಯ ಆರಣ್ಯಕದಲ್ಲಿ 'ಅಷ್ಟೌಪುತ್ರಾಸೋ ಆದಿತೇಃ' ಎಂದು ಆರಂಭಿಸಿ ಸುಸ್ಪಷ್ಟವಾಗಿ 'ಮಿತ್ರಶ್ಚ ವರುಣಶ್ಚ ಧಾತಾಚ ಅರ್ಯಮಾಚ ಅಂಶುಶ್ಚ ಭಗಶ್ಚ ಇಂದ್ರಶ್ಚ ವಿವಸ್ವಾಂ ಶ್ಚೇತ್ಯೇತೇ' (ತೈ. ಆ. 1-13-3) ಎಂದು ನಾಮನಿರ್ದೇಶ ಮಾಡಿದೆ. ಆದಿತ್ಯ ಶಬ್ದ ನಿರ್ವಚನವನ್ನು ಯಾಸ್ಕರು 'ಆದಿತ್ಯಃ ಕಸ್ಮಾತ್ ಆದತ್ತೇ ರಸಾನಾದತ್ತೇ ಭಾಸಂ ಜ್ಯೋತಿಷಾಮಾದೀಪ್ತೋ ಭಾಸೇತಿ ವಾದಿತೇಃ ಪುತ್ರ ಇತಿವಾ' ಎಂದು ಹೇಳಿ 'ಏವಮನ್ಯಾಸಾಮಪಿ ದೇವತಾನಾಂ ಆದಿತ್ಯ ಪ್ರವಾದಾಃ ಸ್ತುತಯೋ ಭವಂತಿ | ತದ್ಯಥೈತನ್ಮಿತ್ರಸ್ಯ ವರುಣಸ್ಯಾರ್ಯಮ್ಣೋದಕ್ಷಸ್ಯ ಭಗಸ್ಯಾಂಶ ಸ್ಯೇತಿ |' ಎಂದು ಆದಿತ್ಯರ ಸಂಖ್ಯೆಯನ್ನು ಹೇಳಿದ್ದಾರೆ. (ನಿ. 2-13-5). ವೇದೋತ್ತರಕಾಲದ ಸಾಹಿತ್ಯದಲ್ಲಿ ಆದಿತ್ಯರ ಸಂಖ್ಯೆ ಹನ್ನೆರಡೆಂದೂ ಇವರು ದ್ವಾದಶ ಮಾಸಗಳಿಗೆ ಸಂಬಂಧಿಸಿರುವರೆಂದೂ ವರ್ಣಿಸಿದೆ. ಸೂರ್ಯ, ಮಾರ್ತಾಂಡ ಮತ್ತು ಸವಿತೃ ದೇವತೆಗಳನ್ನೂ ಆದಿತ್ಯರ ಗಣದಲ್ಲಿ ಸೇರಿಸಿ ಸ್ತುತಿಸಿರುವುದುಂಟು (7-18-3) (10-72-8, 9).

ಆದಿತ್ಯಗಣದಲ್ಲಿ ವರುಣ ಪ್ರಧಾನನಾಗಿದ್ದಾನೆ. ಆದುದರಿಂದಲೇ ಅವನನ್ನು ಆದಿತ್ಯನೆಂದೂ ಸ್ತುತಿಸಿದ್ದಾರೆ. ಒಬ್ಬ ದೇವತೆಯನ್ನೇ ಉದ್ದೇಶಿಸಿದಾಗ. ಇಬ್ಬರು ದೇವತೆಗಳನ್ನುದ್ದೇಶಿಸಿ ಸ್ತುತಿಸುವಾಗ ಆದಿತ್ಯ ಶಬ್ದದಿಂದ ಮಿತ್ರ ಮತ್ತು ವರುಣರು ಸ್ತೋತ್ರ ಮಾಡಲ್ಪಟ್ಟಿದ್ದಾರೆ. ಆದಿತ್ಯದಲ್ಲಿ ಮೂವರನ್ನು ಹೇಳುವಾಗ ಮಿತ್ರ, ವರುಣ ಮತ್ತು ಅರ್ಯಮನ್ ದೇವತೆಯನ್ನು ಹೇಳಿದ್ದಾರೆ. ಇವರೊಡನೆ ಪವಿತ್ರ ಮತ್ತು ಭಗ ದೇವತೆಗಳನ್ನು ಸೇರಿಸಿಯೂ, ದಕ್ಷನನ್ನೂ ಸೇರಿಸಿ ಆರುಮಂದಿ ಎಂದೂ ಸ್ತೋತ್ರ ಮಾಡಿದ್ದಾರೆ.

ಆದಿತ್ಯಗಣವನ್ನು ಇತರ ದೇವತಾ ಗಣಗಳಾದ ವಸುಗಳು, ರುದ್ರರು, ಮರುತ್ತುಗಳು, ಅಂಗಿರಸರು, ಋಭುಗಳು, ವಿಶ್ವೇದೇವರು ಮೊದಲಾದವರೊಡನೆ ಉಲ್ಲೇಖಿಸಿದೆ. ಸಾಮಾನ್ಯವಾಗಿ ದೇವತಾ ಸಮೂಹವನ್ನು ಈ ಗಣ ಪ್ರತಿನಿಧಿಸುತ್ತದೆ ಎಂದು ಹೇಳಬಹುದು.

ಆದಿತ್ಯರು ದೇದೀಪ್ಯಮಾನರೂ, ನಿರ್ಮಲರೂ, ದೋಷದೂರರೂ, ಅನಭಿಭವನೀಯರೂ ಆಗಿ ಸರ್ವಾನುಗ್ರಾಹಕರೂ ಆಗಿದ್ದಾರೆ.

'ಆದಿತ್ಯಾಸಃ ಶುಚಯೋ ಧಾರಪೂತಾ
ಅವೃಜಿನಾ ಅನವದ್ಯಾ ಅರಿಷ್ಟಾಃ |' (2-27-2)

ಇವರ ಸ್ವರೂಪ ಸ್ವಭಾವವನ್ನು ಕೆಳಗಿನ ಮಂತ್ರ ತಿಳಿಸುತ್ತದೆ:

'ತ ಆದಿತ್ಯಾಸ ಉರವೋ ಗಭೀರಾ
ಅದಬ್ಧಾಸೋ ದಿಪ್ಸಂತೋ ಭೂರ್ಯಕ್ಷಾಃ |
ಅಂತಃ ಪಶ್ಯಂತಿ ವೃಜಿನೋತ ಸಾಧು
ಸರ್ವಂ ರಾಜಭ್ಯಃ ಪರಮಾ ಚಿದಂತಿ ||' (2-27-3)

'ಆದಿತ್ಯರು ಮಹತ್ತಮರು ; ಗಂಭೀರರು ; ಶತ್ರುಗಳಿಂದ ಅಹಿಂಸಿತರು ; ಶತ್ರುಗಳನ್ನು ಪರಾಭವಗೊಳಿಸುವವರು ; ಅನೇಕನೇತ್ರರು ; ಎಲ್ಲ ಪ್ರಾಣಿಗಳ ಹೃದಯದಲ್ಲಿ ಅಂತಃಪ್ರವೇಶಿಸಿ ಪ್ರೇರಕರಾಗಿದ್ದುಕೊಂಡು ಅವರು ಮಾಡುವ ಪಾಪಪುಣ್ಯಗಳನ್ನು ನೇರವಾಗಿ ನೋಡುವವರು; ಈಶ್ವರರಾದ ಈ ಆದಿತ್ಯರಿಗೆ ಅತಿದೂರದಲ್ಲಿರುವ ಸಮಸ್ತವೂ ಕೂಡ ಸಮೀಪದಲ್ಲಿದ್ದಂತೆಯೇ.'

ಆದಿತ್ಯರ ಮಹಾಮಹಿಮೆಯನ್ನಿಲ್ಲಿ ಹೇಳಿದೆ. ಸರ್ವಪ್ರಾಣಿಗಳಿಗೂ ಇವರು ಪ್ರೇರಕರಾಗಿದ್ದಾರೆ. ಸರ್ವಸಾಕ್ಷಿಗಳಾಗಿದ್ದಾರೆ. ಸರ್ವವನ್ನೂ ನೇರವಾಗಿ ಕಾಣುವ ಸಾಮರ್ಥ್ಯವನ್ನು ಹೊಂದಿದವರಾಗಿದ್ದಾರೆ ಇವರು. ಕಾಂತಿಯುತರಾದ ಆದಿತ್ಯರು ಚರಾಚರಾತ್ಮಕವಾದ

ಸಕಲ ಲೋಕಗಳಿಗೂ ಆಧಾರರಾಗಿದ್ದಾರೆ–'ಧಾರಯಂತ ಆದಿತ್ಯಾಸೋ ಜಗತ್‌ಸ್ಥಾ:' (2-27-3). ಇವರು ಹಾಗೆಯೇ ಸರ್ವಲೋಕಗಳನ್ನೂ ರಕ್ಷಿಸುವವರೂ ಆಗಿದ್ದಾರೆ. "ದೇವಾ ವಿಶ್ವಸ್ಯ ಭುವನಸ್ಯ ಗೋಪಾಃ" (2-27-3). ವೃಷ್ಟ್ಯಾದಿಗಳನ್ನು ಆಯಾ ಕಾಲದಲ್ಲಿ ಕರುಣಿಸಿ ಸಂರಕ್ಷಿಸುವವರು ಇವರು. ಯಾರು ಸಜ್ಜನರು ಯಾರು ದುರ್ಜನರು ಎಂಬುದನ್ನು ಇವರು ಅರಿಯಬಲ್ಲವರಾಗಿದ್ದಾರೆ. ಶತ್ರುಗಳು ದಾಟಿ ಹೋಗಲಾರದಂಥ ಪಾಶಗಳನ್ನು ಇವರು ಬೀಸುತ್ತಾರೆ–'ಪಾಶಾ ಆದಿತ್ಯಾ ರಿಪವೇ ವಿಚೃತ್ತಾ:' (2-27-16). ಭಕ್ತರನ್ನು ಕಾಪಾಡಿ ಅವರ ದುಃಖವನ್ನು ಪರಿಹಾರಮಾಡುವರು. ಇವರು ಪಕ್ಷಿಗಳು ಹೇಗೆ ತಮ್ಮ ರೆಕ್ಕೆಗಳನ್ನು ಮರಿಗಳ ಮೇಲೆ ಹರಡಿ ಅವುಗಳಿಗೆ ಸುಖವುಂಟು ಮಾಡುವುವೋ ಹಾಗೆ–'ಪಕ್ಷಾ ವಯೋ ಯಥೋಪರಿ ವ್ಯಸ್ಮೇ ಶರ್ಮ ಯಚ್ಛತ' (8-47-2). ಯೋಧರಿಗೆ ರಕ್ಷಾಕವಚ ಹೇಗೋ ಹಾಗೆ ಜನರಿಗೆ ಇವರ ಅನುಗ್ರಹ–'ಯುಷ್ಮೇ ದೇವಾ ಅಪಿ ಷ್ಮಸಿ ಯುಧ್ಯಂತ ಇವ ವರ್ಮಸು' (7-47-8). ಇಂಥ ಮಹಾಮಹಿಮರನ್ನುಳಿದು ಬೇರೆ ರಕ್ಷಕರಿಲ್ಲದ ಕಾರಣ ಇವರನ್ನು ಸೇವಿಸಿ ಇವರಲ್ಲಿ ಮರೆ ಹೋಗುವುದೊಂದೇ ಮಾರ್ಗ ನಮಗೆ.

'ತೇನಾದಿತ್ಯಾ ಅಧಿವೋಚತಾ ನೋ
ಯಚ್ಛತಾ ನೋ ದುಷ್ಪರಿಹಂತು ಶರ್ಮ |' (2-27-6)

'ಎಲೈ ಆದಿತ್ಯರೇ, ನಮ್ಮ ಬೇಡಿಕೆಯನ್ನು ಆಭಿಮುಖ್ಯದಿಂದ ಲಾಲಿಸಿ ನಡೆಸಿಕೊಡಿ. ಅವಿನಾಶಿ ಯಾದ ಸುಖವನ್ನು ನಮಗೆ ಕೊಡಿ.'

ಆದಿತ್ಯಗಣದ ದೇವತೆಗಳೊಬ್ಬೊಬ್ಬರನ್ನೂ ಕುರಿತ ಬೇಡಿಕೆ ಈ ಸೂಕ್ತಗಳಲ್ಲಿವೆ. ಮಿತ್ರ, ವರುಣ ಮುಂತಾದ ದೇವತೆಗಳನ್ನು ಕುರಿತ ಸ್ತುತಿಗಳು ಇಲ್ಲಿಯೂ ಇವೆ. ಜೊತೆಗೆ ಅರ್ಯಮ, ಭಗ, ದಕ್ಷ, ಅಂಶ ಮುಂತಾದವರ ಸ್ತುತಿಗಳೂ ಇವೆ. ಅರ್ಯಮನ ಹೆಸರು ಅನೇಕ ಕಡೆ ಋಗ್ವೇದದಲ್ಲಿ ಬರುತ್ತದೆ. 'ಅರ್ಯಮಾ, ಆದಿತ್ಯಃ ಅರೀನ್ನಿಯಚ್ಛತಿ' ಎಂದು (ನಿ. 11-13-1) ಯಾಸ್ಕರು ಹೇಳಿ ಕತ್ತಲೆಯನ್ನು ಕಳೆಯುವವನೆಂಬ ಅರ್ಥಕೊಟ್ಟಿದ್ದಾರೆ. 'ಅರೀನ್ ಯಚ್ಛತಿ ನಿಯಚ್ಛತಿ' ಎಂದು ಹೇಳಿ ಸಾಯಣರು ಶತ್ರುನಾಶಕನಿವನೆನ್ನುತ್ತಾರೆ. ಈ ಶಬ್ದಕ್ಕೆ 'ಜೊತೆಗಾರ' ಎಂಬ ಅರ್ಥವೂ ಇದೆ. 'ತ್ವಮರ್ಯಮಾ ಭವಸಿ ಯತ್ಕನೀನಾಂ' (5-3-2) ಎಂಬಲ್ಲಿ ಅರ್ಯಮ ಶಬ್ದಕ್ಕೆ 'ನಿಯಮಿತಾ' ಎಂಬ ಅರ್ಥವನ್ನು ಸಾಯಣರು ಹೇಳುತ್ತಾರೆ. ಈ ದೇವತೆ ಹೀಗೆ ಮಿತ್ರನಂತೆ (ಸರ್ವೇಷಾಂಸ್ನಿಗ್ಧ:) ಜನರೆಲ್ಲರ ಸಂಗಡಿಗನಾಗಿರುವುದು ಕಂಡುಬರುತ್ತದೆ.

ಭಗ ದೇವತೆಯ ಉಲ್ಲೇಖವೂ ಅನೇಕ ಕಡೆ ಬಂದಿದೆ ಋಗ್ವೇದದಲ್ಲಿ. ಸವಿತೃವಿನೊಡನೆ ಈ ದೇವತೆಯ ಹೆಸರು ಅನೇಕ ಕಡೆ ಬಂದಿದೆ. 'ಶ್ರದ್ಧಾಂ ಭಗಸ್ಯ ಮೂರ್ಧನಿ' (10-151-1) ಎಂಬಲ್ಲಿ ಭಗಶಬ್ದಕ್ಕೆ 'ಭಾಗಧೇಯ' 'ಧರ್ಮ' ಎಂಬ ಅರ್ಥವನ್ನು ಯಾಸ್ಕರು ಹೇಳುತ್ತಾರೆ. ಈ ಶಬ್ದ ದೇವತಾವಾಚಕವಾದಾಗ ಅನುಗ್ರಹಿಸುವವನು, ಕೊಡುವವನು ಎಂಬ ಅರ್ಥವನ್ನು ಹೊಂದುತ್ತದೆ. ಭಗನಂತೆ ಐಶ್ವರ್ಯವನ್ನು ಕೊಡುವವನೆಂದು ಇತರ ದೇವತೆಗಳನ್ನು ಸ್ತುತಿಸಿರುವುದುಂಟು. 'ಇವನು ಜಯಶೀಲನೂ, ಉಗ್ರನೂ, ಅದಿತಿಪುತ್ರನೂ ಆಗಿದ್ದಾನೆ. ದರಿದ್ರನಾದ ಸ್ತೋತೃವೂ ಹಾಗೆಯೇ ಪ್ರಾಪ್ತಧನರಾದ ರಾಜನೂ ಈ ದೇವನನ್ನು ಕುರಿತು ಧನದಾನ ಮಾಡಬೇಕೆಂದುಬೇಡುತ್ತಾರೆ.'

ಪ್ರಾತರ್ಜಿತಂ ಭಗಮುಗ್ರಂ ಹುವೇಮ ವಯಂ
ಪುತ್ರ ಮದಿತೇರ್ಯೋ ವಿಧರ್ತಾ |

ಆಧ್ರಶ್ಚಿದ್ಯಂ ಮನ್ಯಮಾನಸ್ತುರಶ್ಚಿತ್
ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ ||' (7-41-2)

'ಇವನು ಭಗವಂತ. ಇವನೊಡನೆ ಸೇರಿ ನಾವೂ ಧನವಂತರಾಗೋಣ' ಎಂಬ ಆಶಯ 'ಭಗ ಏವ ಭಗವಾನ್ ಅಸ್ತು ದೇವಾಸ್ತೇನ ವಯಂ ಭಗವಂತಃ ಸ್ಯಾಮ' (7-41-5) ಎಂಬಲ್ಲಿದೆ.

ದಕ್ಷ ಎಂಬುದು ದೇವತಾವಾಚಕವಾಗಿ ಐದಾರು ಬಾರಿ ಮಂತ್ರಪ್ರಯುಕ್ತವಾಗಿದೆ ಋಗ್ವೇದದಲ್ಲಿ. ಅಂಶ ಎಂಬುದೂ ಬಹಳ ವಿರಳವಾಗಿ ಪ್ರಯುಕ್ತವಾಗಿದೆ. ಭಗಶಬ್ದಕ್ಕೆ ಸಮಾನವಾದ ಅರ್ಥದಲ್ಲಿ ಇದೂ ಬಳಸಲಾಗಿದೆ. ದೇವತಾವಾಚಕವಾದಾಗ ಈ ಹೆಸರು ಉದಾರಿಯಾದ ದೇವನನ್ನು ಸೂಚಿಸುತ್ತದೆ. ದಕ್ಷಶಬ್ದ ಹೆಚ್ಚಾಗಿ ವಿಶೇಷಣವಾಗಿ ಬಳಸಲಾಗಿದೆ 'ಸಮರ್ಥ' ಎಂಬ ಅರ್ಥದಲ್ಲಿ. ಈ ಹೆಸರಿನ ದೇವತೆ ಬಹಳ ಕೌಶಲ್ಯವನ್ನು ಹೊಂದಿದೆ. 'ಅದಿತೇರ್ದಕ್ಷೋ ಅಜಾಯತ ದಕ್ಷಾದದಿತಿಃ ಪರಿ' (10-72-45) ಎಂಬಲ್ಲಿ ಅದಿತಿಯಿಂದ ದಕ್ಷನೂ ದಕ್ಷನಿಂದ ಅದಿತಿಯೂ ಹುಟ್ಟಿದರೆಂದೂ ಅನಂತರ ಇತರರು ಜನಿಸಿದರೆಂದೂ ಹೇಳಿದೆ. ಮಿತ್ರಾವರುಣರನ್ನು 'ಸೂನೂ ದಕ್ಷಸ್ಯ' ಎಂದೂ, ಆದಿತ್ಯರನ್ನು 'ದಕ್ಷಪಿತರಃ' ಎಂದೂ ಹೇಳಿರುವುದುಂಟು ಇದಕ್ಕನುಗುಣವಾಗಿ. ಅದಿತಿಶಬ್ದನಿರ್ವಚನ ಮಾಡುವಾಗ ಯಾಸ್ಕರು 'ದಕ್ಷಸ್ಯವಾದಿತೇ ಜನ್ಮನಿ ವ್ರತೇ' (10-64-5) ಎಂಬ ಮಂತ್ರವನ್ನು ಉದಾಹರಿಸಿ ದಕ್ಷನೆಂದರೆ ಆದಿತ್ಯನೆಂದು ಅರ್ಥಮಾಡಿದ್ದಾರೆ. ದಕ್ಷಸ್ಯಜನ್ಮನಿ ಎಂಬುವುದಕ್ಕೆ ದುರ್ಗಭಾಷ್ಯಕಾರರೂ 'ಉದಯೇಚ ಅರ್ಧವರ್ತಿನ್ಯಾದಿತ್ಯೇ' ಎಂದೇ ಅರ್ಥಮಾಡುತ್ತಾರೆ. (ನಿ. 11-23-1). 'ಆದಿತ್ಯೋ ದಕ್ಷ ಇತ್ಯಾಹುಃ ಆದಿತ್ಯಮಧ್ಯೇ ಚ ಸ್ತುತಃ' (ನಿ. 11-23-2) ಎಂದು ಯಾಸ್ಕರೂ ಸ್ಪಷ್ಟವಾಗಿ ಹೇಳಿ ಅದಿತಿಯನ್ನು 'ದಾಕ್ಷಾಯಣೀ' ಎಂದು ಹೇಳಿದ್ದಾರೆ (ನಿ. 11-23-3). ಒಬ್ಬರಿಗೊಬ್ಬರು ಇವರು ಹೇಗೆ ಜನಕರಾಗುವರೆಂಬ ಪ್ರಶ್ನೆಗೆ 'ಅಪಿವಾ ದೇವಧರ್ಮೇಣ ಇತರೇತರಜನ್ಮಾನೌ ಸ್ಯಾತಾಂ ಇತರೇತರ ಪ್ರಕೃತೀ' (ನಿ. 11-23-4) ಎಂದು ಉತ್ತರಿಸಿದ್ದಾರೆ.

ಇಂಥ ಆದಿತ್ಯರನ್ನು ಭಜಿಸಿ ಮಾನವರು ಭಯರಹಿತರಾಗಬಹುದು ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ:

'ನ ದಕ್ಷಿಣಾ ವಿ ಚಿಕಿತೇನ ಸವ್ಯಾ
ನ ಪ್ರಾಚೀನಮಾದಿತ್ಯಾ ನೋತ ಪಶ್ಚಾ
ಪಾಕ್ಯಾಚಿದ್ವಸವೋ ಧೀರ್ಯಾ ಚಿತ್
ಯುಷ್ಮಾನೀತೋ ಅಭಯಂ ಜ್ಯೋತಿರಶ್ಯಾಮ್ ||' (2-27-11)

'ಆದಿತ್ಯರೇ ನನ್ನ ಬಲಗಡೆ ಇರುವುದು ನನಗೆ ತಿಳಿಯದು ; ಎಡಗಡೆ ಇರುವುದೂ ಗೊತ್ತಾಗದು ; ನನ್ನ ಮುಂದೆ ಏನಿರುವುದೆಂಬುದನ್ನೂ ನಾನರಿಯೆ ; ನನ್ನ ಹಿಂದೆ ಏನಿದೆಯೆಂಬುದೂ ನನಗೆ ಗೊತ್ತಾಗದು. ಪಕ್ವವಾಗದ ಜ್ಞಾನವುಳ್ಳವನಾದರೂ, ಕಾತರಪಡುವವನಾದರೂ, ಎಲೈ ಆದಿತ್ಯರೇ, ನಿಮ್ಮಿಂದ ಒಳ್ಳೆಯ ಮಾರ್ಗದಲ್ಲಿ ನಡೆಸಲ್ಪಟ್ಟು ಭಯರಹಿತವಾದ ಜ್ಞಾನಜ್ಯೋತಿಯನ್ನು ಪಡೆಯುವಂತಾಗಲಿ.'

ಆದಿತ್ಯರನ್ನು ಭಜಿಸುವವರಿಗೆ ಸಕಲ ಕ್ಲೇಶಗಳೂ ಪರಿಹಾರವಾಗಿ ಸರ್ವಮಂಗಳಗಳೂ ಉಂಟಾಗುವುವು. ಅಂಥವರಿಗೆ ಹತ್ತಿರದ ಅಥವಾ ದೂರದ ಬಾಧೆಗಳಾವುವೂ ಉಂಟಾಗುವುದಿಲ್ಲ – 'ನ ತಿಷ್ಮಂ ಘ್ನಂತ್ಯಂತಿತೋ ನ ದೂರಾದ್ಯ ಆದಿತ್ಯಾನಾಂ ಭವತಿ ಪ್ರಣೀತೌ' (2-27-13).

ಆದ್ದರಿಂದ ನಾವು ಮಾಡಿರುವ ಪಾಪವನ್ನು ಕ್ಷಮಿಸಿ ನಮಗೆ ಸಕಲ ಸುಖಗಳನ್ನೂ ಕರುಣಿಸಬೇಕೆಂದು ಆದಿತ್ಯರಲ್ಲಿ ಮೊರೆಯಿಡಬೇಕು.

'ಅದಿತೇ ಮಿತ್ರ ವರಣೋತ ಮೃಳ
ಯದ್ವೋ ವಯಂ ಚಕೃಮಾ ಕಚ್ಚಿದಾಗಃ |' (2-27-14)

'ನಿನ್ನ ವಿಸ್ತೀರ್ಣವೂ, ಭಯನಿವಾರಕವೂ ಆದ ದಿವ್ಯಪ್ರಕಾಶವನ್ನು (ಸುಜ್ಞಾನದ ಬೆಳಕನ್ನು, ನಾವು ಹೊಂದುವಂತೆ ಮಾಡು. ದೀರ್ಘವಾದ ಅಂಧತಮಸ್ಸು (ಅಜ್ಞಾನದ ಕತ್ತಲೆ) ನಮ್ಮನ್ನು ಆವರಿಸದಂತಿರಲಿ' ಎಂಬ ಬೇಡಿಕೆಯನ್ನು-

'ಉರ್ವಶ್ಯಾಂ ಅಭಯಂ ಜ್ಯೋತಿರಿಂದ್ರ
ಮಾ ನೋ ದೀರ್ಘಾ ಅಭಿನಶನ್ ತಮಿಸ್ರಾಃ ||' (2-27-14)

ಎಂಬ ಮಾತುಗಳಿಂದ ಈ ದೇವತೆಗಳಲ್ಲಿ ಸಲ್ಲಿಸಲಾಗಿದೆ.

**ಉಷಸ್**

ಋಗ್ವೇದದಲ್ಲಿ 20 ಸೂಕ್ತಗಳು ಉಷಸ್ಸೂಕ್ತಗಳಾಗಿವೆ. ವೇದವಾಙ್ಮಯದಲ್ಲಿ ಬರುವ ಸ್ತ್ರೀ ದೇವತೆಗಳಲ್ಲಿ ಉಷೆ ಪ್ರಧಾನತಮಳಾಗಿದ್ದಾಳೆ. ಉಷೆಯು ಉಷಃಕಾಲಕ್ಕೆ ಅಭಿಮಾನಿದೇವತೆಯಾಗಿದ್ದಾಳೆ. ಉಷಸ್ಸೂಕ್ತದಲ್ಲಿ ಮನೋಹರವಾದ ಉಷಃಕಾಲದ ಸೌಂದರ್ಯ ಅಚ್ಚಳಿಯದೆ ಉಳಿದಿದೆ. ಯಾಗದಲ್ಲಿ ಹವಿರ್ಭಾಗವಿಲ್ಲದ ಉಷೋ ದೇವತೆಯನ್ನು ಅನುಪಮವಾಗಿ ಸ್ತುತಿಸಿರುವುದು ಇದನ್ನು ಸಮರ್ಥಿಸುತ್ತದೆ.

ಲಲಿತವೂ ಸುಂದರವೂ ಆದ ಭಾವಗಳಿಂದ ಪರಿಪೂರ್ಣವಾದ ಆ ಸೂಕ್ತಗಳು ಉತ್ತಮ ಕಾವ್ಯವಾಗಿವೆ. ಉಷೆಯ ದಿವ್ಯರೂಪ ಎಲ್ಲಿಯೂ ಮಸುಕಾಗದೆ ಉಜ್ವಲವಾಗಿದೆ. ಈ ಅಂಶವನ್ನು–'Ushas is the most graceful creation of vedic poetry and there is no more charming figure in the descriptive religious lyrics of any other literature.' (Vedic Mythology.— A. A. Macdonell) p. 46 ಎಂದು ಮುಕ್ತಕಂಠದಿಂದ ಮೆಕ್ಡಾನಲ್ ಮಹಾಶಯ ಹೇಳಿದ್ದಾನೆ.

'ಉಷಾಃ ವಷ್ಟೇಃ ಕಾಂತಿಕರ್ಮಣಃ ಉಚ್ಛತೇಃ' ಎಂದು ಯಾಸ್ಕರು (ನಿ. 12-5-3) ಈ ಶಬ್ದದ ನಿರ್ವಚನ ಮಾಡಿ ಪ್ರಕಾಶಕ ಕರ್ಮವನ್ನು ಹೊಂದಿರುವವಳೆಂದು ಹೇಳುತ್ತಾರೆ. ಉಷೆ ಕಾಂತಿಮತೀ. 'ಉಷಾಃ ಕಸ್ಮಾತ್ ಉಚ್ಛತೀತಿ ಸತ್ಯಾಃ ರಾತ್ರೇರಪರಃ ಕಾಲಃ'–(ನಿ. 2-18-4) ಎಂದು ಹೇಳಿರುವಂತೆ ಉಷೆ ತಮಸ್ಸನ್ನು ಕಳೆಯುವ ಕೆಲಸವನ್ನು ಮಾಡುವವಳು. ರಾತ್ರಿಯ ಅಪರಕಾಲವೇ ಉಷೆಯ ಕಾಲ.

ಉಷೆ ನಭೋಜಾತೆ–'ದಿವಃ ದುಹಿತಾ' (1-92-7). ಇವಳು ಪುರಾತನೆಯಾದರೂ ನಿತ್ಯನೂತನೆ ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ:

'ಪುನಃ ಪುನರ್ಜಾಯಮಾನಾ ಪುರಾಣೀ
ಸಮಾನಂ ವರ್ಣಮಭಿಶುಂಭಮಾನಾ |
ಶ್ವಘ್ನೀವ ಕೃತ್ನುರ್ವಿಜ ಆಮಿನಾನಾ
ಮರ್ತಸ್ಯ ದೇವೀ ಜರಯಂತ್ಯಾಯುಃ ||'(1-92-10)

'ಪ್ರತಿದಿನವೂ ಆವಿರ್ಭವಿಸುವ ಇವಳು ಚಿರಂತನೆಯಾಗಿದ್ದಾಳೆ. ಆದ್ದರಿಂದಲೇ ಒಂದೇ ವಿಧವಾದ ರೂಪದಿಂದ ಎಂದೆಂದೂ ಶೋಭಿಸುತ್ತಾಳೆ. ಹಿಂಸಿಸುವ ಸ್ವಭಾವದ ವ್ಯಾಧ ಸ್ತ್ರೀಯು ಹಾರಾಡುವ ಪಕ್ಷಿಗಳ ರೆಕ್ಕೆಗಳನ್ನು ಕತ್ತರಿಸಿ ಹಿಂಸಿಸುವಂತೆ ಇವಳು ಕ್ರೀಡಾಲೋಲಳಾಗಿ ಮಾನವರ ಆಯುಷ್ಯವನ್ನು ಕಳೆಯುತ್ತಿರುತ್ತಾಳೆ.'

'ಉಷಸ್ಸೆಂಬ ಈ ಜ್ಯೋತಿ ಪ್ರಕಾಶಯುಕ್ತವಾದ ಗ್ರಹನಕ್ಷತ್ರಗಳೆಲ್ಲೆಲ್ಲಾ ಶ್ರೇಷ್ಠವಾದುದು. ಇಂಥ ಜ್ಯೋತಿ ಪೂರ್ವದಿಕ್ಕಿನಲ್ಲಿ ಆವಿರ್ಭವಿಸಿದೆ. ಪೂಜನೀಯಳಾದ ಇವಳು ಜನಿಸಿ ಸರ್ವ ದಿಕ್ಕುಗಳನ್ನೂ ವ್ಯಾಪಿಸಿದಳು. ಇವಳು ಸವಿತೃವಿಗೆ ಹೇಗೆ ಜನನಿಯಾಗಿರುವಳೋ ಹಾಗೆಯೇ ರಾತ್ರಿ ಇವಳಿಗೆ ಸ್ಥಾನವನ್ನು ಕಲ್ಪಿಸಿದ್ದಾಳೆ.

'ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾತ್
ಚಿತ್ರಂ ಪ್ರಕೇತೋ ಅಜನಿಷ್ಟ ವಿಭ್ವಾ |
ಯಥಾ ಪ್ರಸೂತಾ ಸವಿತುಃ ಸವಾಯಂ
ಏವಾ ರಾತ್ರ್ಯುಷಸೇ ಯೋನಿಮಾರೈಕ್ || . (1-113-1)

ಹಿಂದೆ ಹೇಗೋ ಇಂದು ಹೇಗೋ ಹಾಗೆಯೇ ಎಂದೆಂದೂ ಉಷೆ ಏಕರೂಪಳಾಗಿ ಪ್ರಕಾಶಿಸುವಳು. ಅವಳು 'ಅಜರಾ ಅಮೃತಾ' ಆದವಳು (1-113-13). 'ದ್ಯೋತಮಾನಳಾದ ಉಷೆ ತನ್ನ ರಥಕ್ಕೆ ಯಜ್ಞಗಾಮಿಗಳಾದ ಅಶ್ವಗಳನ್ನು ಹೂಡಿಕೊಂಡು ನಿಯಮಿತವಾದ ಕಾಲಕ್ಕೆ ಸರಿಯಾಗಿ ದಿನದಿನವೂ ಆವಿರ್ಭವಿಸಿ ಭುವನಗಳನ್ನೆಲ್ಲಾ ಸುತ್ತಿಕೊಂಡು ಬರುವಳು. ನಿದ್ರಿಸುತ್ತಿರುವ ಮನುಷ್ಯರನ್ನೂ ಪ್ರಾಣಿಗಳನ್ನೂ ಎಚ್ಚರಿಸಿ ಅವರವರ ಕೆಲಸದಲ್ಲಿ ಪ್ರವೃತ್ತರಾಗುವಂತೆ ಮಾಡುವವಳು ಇವಳು' (4-51-5).ಉಷಸ್ಸುಗಳು ಮಂಗಳರೂಪವನ್ನು ಹೊಂದಿವೆ. 'ಭದ್ರಾಃ'. ಸತ್ಯಕ್ಕಾಗಿ ಹುಟ್ಟಿವೆ ಮತ್ತು ಸತ್ಯಸ್ವರೂಪವನ್ನು ಹೊಂದಿವೆ–'ಋತಜಾತ ಸತ್ಯಾಃ' (4-51-7).

'ಉಷೆಯು ಜಗತ್ತನ್ನಾವರಿಸಿರುವ ಕತ್ತಲೆಯನ್ನು ಕತ್ತರಿಸಿಹಾಕುತ್ತಾಳೆ. ನರ್ತಕಿಯಂತೆ ದರ್ಶನೀಯವಾದ ರೂಪದಿಂದ ಕೂಡಿ ಕತ್ತಲೆಯಿಂದ ಅನಾವೃತವಾದ ತನ್ನ ವಕ್ಷಃಸ್ಥಲವನ್ನು ಪ್ರದರ್ಶಿಸುತ್ತಾಳೆ–ಹಾಲು ಕರೆಯುವಾಗ ಹಸು ತನ್ನ ಕೆಚ್ಚಲನ್ನು ತೋರುವಂತೆ. ಹಸುಗಳು ತಮ್ಮ ಕೊಟ್ಟಿಗೆಗೆ ಹೇಗೆ ತಾವೇ ಸೇರುವುವೋ ಹಾಗೆ ಉಷೆಯೂ ಪೂರ್ವದಿಕ್ಕಿನಲ್ಲಿ ಮೈದೋರಿ ಸಮಸ್ತಲೋಕಗಳಿಗೂ ಪ್ರಕಾಶವನ್ನುಂಟುಮಾಡಿ ಕತ್ತಲೆಯನ್ನು ಕಳೆಯುತ್ತಾಳೆ' ಎಂದು ಕೆಳಗಿನ ಮಂತ್ರದಲ್ಲಿದೆ:

'ಅಧಿ ಪೇಶಾಂಸಿ ವಪತೇ ನೃತೂರಿವ
ಅಪೋರ್ಣುತೇ ವಕ್ಷ ಉಸ್ರೇವ ಬರ್ಜಹಮ್ |
ಜ್ಯೋತಿರ್ವಿಶ್ವಸ್ಮೈ ಭುವನಾಯ ಕೃಣ್ವತೀ
ಗಾವೋನ ವ್ರಜಂ ವ್ಯುಷಾ ಆವರ್ತಮಃ ||' (1-92-4)

'ನಿರ್ಮಲೆಯೂ ಸ್ವಲಂಕೃತಳೂ ಆದ ತರುಣಿಯೋಪಾದಿಯಲ್ಲಿ ಅಂಗಾಂಗಗಳನ್ನು ತೋರಿಸುತ್ತಾ, ಸ್ನಾನ ಮಾಡಿ ಮೇಲೆದ್ದು ನಿಂತ ಹಾಗೆ ಪೂರ್ವದಿಕ್ಕಿನಲ್ಲಿ ಉಷೆ ನಿಂತಿದ್ದಾಳೆ'–'ಏಷಾ ಶುಭ್ರಾನ ತನ್ವೋ ವಿದಾನೋರ್ಧ್ವೇವ ಸ್ನಾತೀ ದೃಶಯೇ ನೋ ಅಸ್ಥಾತ್ (5-80-5). ಕಲ್ಯಾಣವೇಷಯುತಳಾದ ಯುವತಿಯಂತೆ ಇವಳು–'ಯೋಷೇವ ಭದ್ರಾ' (5-80-6).

ದ್ಯುಲೋಕದ ಸುತೆಯಿವಳು. ಎಲ್ಲ ಪ್ರಾಣಿಗಳಲ್ಲಿಯೂ ಆಭಿಮುಖ್ಯವನ್ನು ತೋರಿ ಇವಳು ಪೂರ್ವದಿಕ್ಕಿನಲ್ಲಿ ಕಾಣಿಸಿಕೊಳ್ಳುವಳು. ತೇಜೋರೂಪವಾದ ವಸ್ತ್ರದಿಂದ ಶೋಭಿಸಿರುವಳಿವಳು. ಇಂಥ ಇವಳು ಆದಿತ್ಯನ ಮಾರ್ಗವನ್ನನುಸರಿಸಿ ಸಾರುತ್ತಾಳೆ. ಋತವನ್ನು ಕಟ್ಟುನಿಟ್ಟಾಗಿ ಪಾಲಿಸುವವಳಿವಳು–(1-124-3). ಆಕಾಶದಲ್ಲಿ ಸೂರ್ಯನ ಚಕ್ರ ಮತ್ತೆ ಮತ್ತೆ ಸುತ್ತುತ್ತಿರುವಂತೆ ಇವಳು ಮತ್ತೆ ಮತ್ತೆ ತೋರಿ ಚಲಿಸುತ್ತಾಳೆ–'ಚಕ್ರಮಿವ ನವ್ಯಸ್ಯಾವವೃತ್ಸ್ವ' (3-61-3). 'ಸರ್ವಲೋಕಗಳಿಗೂ ಮೊದಲು ಎಚ್ಚೆತ್ತವಳಿವಳು ; ಕತ್ತಲೆಯನ್ನು ಗೆದ್ದವಳೂ ಅಮಿತವಾದ

ಧನವನ್ನು ದಾನಮಾಡುವವಳೂ ಇವಳೇ–

'ಪೂರ್ವಾ ವಿಶ್ವಸ್ಮಾದ್ಭುವನಾದಬೋಧಿ
ಜಯಂತೀ ವಾಜಂಬೃಹತೀ ಸನುತ್ರೀ' (1-123-2)

'ಎಲ್ಲವನ್ನೂ ಕಾಪಾಡುತ್ತಾ ಈ ದೇವಿ ದಿನದಿನವೂ ಬರುತ್ತಾಳೆ ಗೃಹಕೃತ್ಯದಲ್ಲಿ ನಿಪುಣೆಯಾದ ಗೃಹಿಣಿಯಂತೆ. ಪ್ರಾಣಿಜಾತಕ್ಕೆ ಮುಪ್ಪುಂಟುಮಾಡುವವಳಿವಳು. ಜನರನ್ನು ತಮ್ಮ ತಮ್ಮ ಕೆಲಸದಲ್ಲಿ ಪ್ರಚೋದಿಸುತ್ತಾಳೆ. ಪಕ್ಷಿಗಳೂ ಎಚ್ಚೆತ್ತು ಹಾರಾಡುವಂತೆ ಮಾಡುತ್ತಾಳೆ'–

'ಆಘಾ ಯೋಷೇವ ಸೂನರ್ಯುಷಾ ಯಾತಿ ಪ್ರಭುಂಜತೀ |
ಜರಯಂತೀ ವೃಜನಂ ಪದ್ವದೀಯತ ಉತ್ಪಾತಯತಿ ಪಕ್ಷಿಣಃ ||' (1-48-5)

ಪ್ರಪಂಚದ ಚೇಷ್ಟನ ಮತ್ತು ಪ್ರಾಣಧಾರಣ ಉಷೆಯಲ್ಲಿದೆ ; ಏಕೆಂದರೆ ಅವಳು ಕತ್ತಲೆಯನ್ನು ಕಳೆಯುವವಳಾಗಿದ್ದಾಳೆ–

'ವಿಶ್ವಸ್ಯಹಿ ಪ್ರಾಣನಂ ಜೀವನಂ
ತ್ವೇ ವಿಯದುಚ್ಛಸಿ ಸೂನರಿ |' (1-48-10)

ಉಷೆಯ ರಥ ಉಜ್ವಲವೂ ಕಾಂತಿಯುತವೂ ಆದುದು. ಅದು ಸ್ವರ್ಣಮಯವಾದುದು. ಬೃಹತ್ತಮವಾದುದು–'ಚಂದ್ರರಥಾ', 'ಸುಪೇಶಸಂ ಸುಖ ರಥಂ', 'ರಥೇನ ಬೃಹತಾ'. ನೂರಾರು ರಥಗಳಲ್ಲಿ ಇವಳು ಕುಳಿತು ಮಾನವರೆಡೆಗೆ ಬರುವಳೆಂದೂ ಹೇಳಿದೆ. 'ಶತಂ ರಥೇಭಿಃ ಸುಭಗೋಷಾ ಇಯಂ ವಿಯಾತ್ಯಭಿಮಾನುಷಾನ್' (1-48-7).

ಪ್ರತಿದಿನವೂ ಉಷೆ ಮೈದೋರಿದ ಮೇಲೆಯೇ ಅಗ್ನೀಂಧನವಾಗುವುದು. ಸೂರ್ಯೋದಯ ಕಾಲದಲ್ಲಿ ಹಾಗೂ ಅಗ್ನೀಂಧನ ಕಾಲದಲ್ಲಿ ಸೂರ್ಯನ ಅರುಣಕಿರಣಗಳೊಡನೆ, ಅಗ್ನಿಯ ತೇಜಸ್ಸಿನೊಡನೆ ಅಭ್ಯುದಯ ಸಾಧನವಾದ ಅನ್ನಸಂಪತ್ತನ್ನು ತಂದುಕೊಡಬೇಕೆಂದು ಈ ದೇವಿಯನ್ನು ಬೇಡಿದ್ದಾರೆ (5-79-8).

ಇವಳು ದೃಷ್ಟಿಗೋಚರಳಾಗಿ ಸ್ವರ್ಗದ್ವಾರವನ್ನು ತೆಗೆಯುವಳು. ಪಶುಗಳ ಮಂದೆಯಂತೆ ಇವಳ ಕಿರಣಗಳು ಪ್ರಕಾಶಿಸುವುವು. ದುಷ್ಟರಾದ ರಾಕ್ಷಸರುಗಳನ್ನೂ ಪಿಶಾಚಾದಿಗಳನ್ನೂ ಕೆಟ್ಟಕನಸುಗಳನ್ನೂ ಇವಳು ಓಡಿಸುತ್ತಾಳೆ. ಸೂರ್ಯನ ಸಂಚಾರಕ್ಕೆ ಇವಳು ಮಾರ್ಗವನ್ನು ಮಾಡಿಕೊಡುವಳು. ತರುಣ ತರುಣಿಯನ್ನು ಹೇಗೋ ಹಾಗೆ ಸೂರ್ಯನು ಉಷೆಯನ್ನು ಹಿಂಬಾಲಿಸುತ್ತಾನೆ–

'ಸೂರ್ಯೋ ದೇವೀಮುಷಸಂ ರೋಚಮಾನಾ
ಮರ್ಯೋ ನ ಯೋಷಾಮಭ್ಯೇತಿ ಪಶ್ಚಾತ್' | (1-115-2)

ಸೂರ್ಯ ಉಷೆಯ ಪತಿಯೆಂದು ಹೇಳಿದೆ. ಆದ್ದರಿಂದಲೇ–'ವಾಜಿನೀವತೀ ಸೂರ್ಯ ಸ್ಯಯೋಷಾ' (7-75-5). ಸೂರ್ಯನಿಗಿಂತ ಮೊದಲು ಉಷೆ ಬರುವುದರಿಂದ ಸೂರ್ಯನ ಮಾತೆಯೆಂದೂ ಇವಳನ್ನು ಹೇಳಿದೆ. ಅಗ್ನಿಯ ಆಧಾನ ಉಷಃಕಾಲದಲ್ಲಿ ಆಗುವುದರಿಂದ ಉಷೆಯನ್ನು ಸ್ವಾಗತಿಸಲು ಅಗ್ನಿ ಬರುತ್ತಾನೆಂದು ಹೇಳಿದೆ. ಅಶ್ವಿನೀ ದೇವತೆಗಳು ಇವಳಿಂದ ಎಚ್ಚರಿಸಲ್ಪಟ್ಟು ಇವಳನ್ನು ಮಿತ್ರರಂತೆ ಹಿಂಬಾಲಿಸುವರು. ಐಶ್ವರ್ಯ, ಆರೋಗ್ಯ, ಆಯುಷ್ಯ ಮತ್ತು ಸಂತಾನ ಇವಳಿಂದ ಲಭಿಸುವ ಕಾರಣ ಇವಳನ್ನು 'ಮಘೋನಿ'–ಉದಾರಿ ಎಂದು ಕೊಂಡಾಡಿದ್ದಾರೆ.

ಸಾಧ್ವಿಯಾದವಳು ಭ್ರಮಣಶೀಲನಾದ ಪತಿಯನ್ನು ತ್ಯಜಿಸದೆ ಆವನೊಡನೆಯೇ ಸಂಚರಿಸು ವಂತೆ ಉಷೆ ಸೂರ್ಯನನ್ನು ಹಿಂಬಾಲಿಸುತ್ತಾಳೆ–'ಯತಃ ಪರಿಜಾರ ಇವಾಚರಂತ್ಯುಷ' (7-76-3). ವಸ್ತ್ರಾದಿಗಳಿಂದ ಶೃಂಗರಿಸಿಕೊಂಡ ಯುವತಿಯಾದ ಪತ್ನಿ ಪತಿಯ ಸಮೀಪದಲ್ಲಿ ಸುಳಿಯುವಂತೆ ಉಷೆಯೂ ಸೂರ್ಯನ ಸಮೀಪದಲ್ಲಿ ರೋಚಮಾನಳಾಗಿದ್ದಾಳೆ–(7-77-1). ದೇವತೆಗಳಿಗೆ ಚಕ್ಷುಃಸ್ಥಾನೀಯವಾದ ತೇಜಸ್ಸನ್ನು ಧರಿಸಿದ ಈ ಸುಭಗೆ ಸುದರ್ಶನನೂ, ಸರ್ವದಾ ಗಮನಶೀಲನೂ ಆದ ಆದಿತ್ಯನನ್ನು ಪ್ರಕಾಶಯುತನನ್ನಾಗಿ ಮಾಡುತ್ತಾ ಕಾಂತವಾದ ರಶ್ಮಿ ಗಳಿಂದ ಕೂಡಿ ಅಭಿವ್ಯಕ್ತಳಾಗುತ್ತಾಳೆ ಎಂಬ ಭಾವ ಕೆಳಗಿನ ಮಂತ್ರದಲ್ಲಿದೆ:

'ದೇವಾನಾಂ ಚಕ್ಷುಃ ಸುಭಗಾ ವಹಂತೀ
ಶ್ವೇತಂ ನಯಂತೀ ಸುದೃಶೀಕಮಶ್ವಂ |
ಉಷಾ ಅದರ್ಶಿ ರಶ್ಮಿಭಿರ್ವ್ಯಕ್ತಾ
ಚಿತ್ರಾಮಘಾ ವಿಶ್ವಮನುಪ್ರಭೂತಾ || (7-77-3)

ನಿತ್ಯ ತರುಣಿಯಾದ ಉಷೆ ಸೂರ್ಯನ ಮುಂದೆ ಸುಳಿದಾಡುವಳು ಲಜ್ಜೆಯನ್ನು ತೋರದ ಯುವತಿಯಂತೆ–'ಅಗ್ರ ಏತಿ ಯುವತಿರಹ್ರಯಾಣಾ' (7-80-2). ಸೂರ್ಯನನ್ನೂ, ಯಜ್ಞವನ್ನೂ, ಅಗ್ನಿಯನ್ನೂ ಪ್ರಜ್ಞಾಪನಗೊಳಿಸುವ ಈ ದೇವತೆಯ ಮಹಿಮೆ ಅಪಾರವಾದುದು–'ಪ್ರಾಚಿಕಿತತ್ಸೂರ್ಯಂ ಯಜ್ಞಮಗ್ನಿಂ' (7-80-2). ಮಹಿಮಾನ್ವಿತಳಾದ ನೀನು ಬರಲು ವಿಲಂಬಿಸಬೇಡ ಎಂದು ಬೇಡಲಾಗಿದೆ. 'ಮಾ ಚಿರಂ ತನುಥಾ ಅಪಃ' (5-79-9).

ಉಷಸ್ಸೂಕ್ತ ಅತ್ಯುತ್ತಮವಾದ ಕಾವ್ಯವಾಗಿದೆ. ಇಲ್ಲಿ ಬರುವ ವರ್ಣನೆಗಳೂ ಉಪಮಾನಗಳೂ ಹೃದಯಂಗಮವಾಗಿ ಈ ದೇವತೆಯ ಸ್ವರೂಪವನ್ನು ತೋರುತ್ತವೆ. ಉಷೆ ಸೂರ್ಯನ ಜೊತೆಗೆ ನಿಕಟವಾದ ಸಂಬಂಧವನ್ನು ಹೊಂದಿದ್ದಾಳೆ ಎಂಬುದನ್ನು ಮೇಲಿನ ವಿವೇಚನೆಯಿಂದ ತಿಳಿಯಬಹುದು. ಉಷೆಯನ್ನು ಆದಿತ್ಯಭಗನ ಸೋದರಿ ಎಂದೂ, ವರುಣನ ಬಂಧುವೆಂದೂ, ರಾತ್ರಿಯ ಸೋದರಿ ಎಂದೂ ವರ್ಣಿಸಿದೆ. ಉಷಸ್ ಎಂಬ ಪದ 'ವಸ್' ಎಂದರೆ ಪ್ರಕಾಶಿಸು ಎಂಬ ಧಾತುವಿನಿಂದ ಬಂದಿದೆ. ಲ್ಯಾಟಿನ್ ಭಾಷೆಯ 'ಅರೋರ' ಮತ್ತು ಗ್ರೀಕ್ ಭಾಷೆಯ 'ಏವೋಲ್' ಎಂಬುವುದಕ್ಕೆ ಈ ಶಬ್ದ ಸಂವಾದಿಯಾಗಿದೆ. ಇಂಥ ನಿತ್ಯ ನೂತನೆಯೂ ವರಪ್ರದೆಯೂ ಆದ ಮಂಗಳ ದೇವತೆಯಲ್ಲಿ ಸಲ್ಲಿಸಿರುವ ಪ್ರಾರ್ಥನೆ ಹೀಗಿದೆ:

'ಶ್ರವಃ ಸೂರಿಭ್ಯೋ ಅಮೃತಂ ವಸುತ್ವಸಂ
ವಾಜಾಂ ಅಸ್ಮಭ್ಯಂ ಗೋಮತಃ |
ಚೋದಯಿತ್ರೀ ಮಘೋನಃ ಸೂನೃತಾವತೀ
ಉಷಾ ಉಚ್ಛದಪ ಸ್ರಿಧಃ ||' (7-82-6)

'ಎಲೈ ಉಷೋದೇವತೆಯೇ, ಸ್ತೋತೃಗಳಾದ ನಮಗೆ ಮರಣರಹಿತವೂ, ಸಂಪದ್ಯುಕ್ತವೂ ಆದ ಯಶಸ್ಸನ್ನು ಕರುಣಿಸು. ಗೋಸಂಪತ್ತಿನಿಂದಲೂ ಅನ್ನಸಂಪತ್ತಿನಿಂದಲೂ ನಮ್ಮನ್ನು ಅನುಗ್ರಹಿಸು. ಯಾಜಕನನ್ನು ಪ್ರೇರಿಸುವವಳೂ, ಪ್ರಿಯ ಸತ್ಯಾತ್ಮಿಕವಾದ ವಾಕ್ಕನ್ನುಳ್ಳವಳೂ ಆದ ಉಷೆಯು ಶೋಷಕರಾದ ಶತ್ರುಗಳನ್ನು ಹೋಗಲಾಡಿಸಲಿ.'

### ಅಶ್ವಿನೀ ದೇವತೆಗಳು

ಋಗ್ವೇದದಲ್ಲಿ 50ಕ್ಕಿಂತ ಹೆಚ್ಚಾದ ಸೂಕ್ತಗಳು ಅಶ್ವಿನೀ ದೇವತೆಗಳನ್ನು ಸ್ತುತಿಸುತ್ತವೆ. ಈ ಸೂಕ್ತಸಂಖ್ಯೆಯಿಂದ ಇವರಿಗೆ ಮಹತ್ವವಿತ್ತೆಂಬುದು ಗೊತ್ತಾಗುತ್ತದೆ. ದ್ಯುಸ್ಥಾನ ದೇವತೆ

ಗಳಲ್ಲಿ ಇವರು ವಿಶಿಷ್ಟರಾಗಿದ್ದರೂ ಯಾವ ಪ್ರಕಾಶದೊಡನೆ ಇವರಿಗೆ ಸಂಬಂಧವಿದೆ ಯೆಂಬುದನ್ನು ನಿರ್ಧಾರವಾಗಿ ಹೇಳುವುದಕ್ಕಾಗಿಲ್ಲ. ಇವರ ಆವಿರ್ಭಾವದ ಕಾಲ ಉಷಃ ಕಾಲದ ಮೊದಮೊದಲ ಕಾಲದಲ್ಲಿ ಎಂದು ಹೇಳಿದೆ-'ಕೃಷ್ಣಾ ಯದ್ಗೋಷ್ವರುಣೇಷುಸೀದತ್' (5-61-4).

'ಅರುಣಪಶುಗಳ ನಡುವೆ ಕತ್ತಲೆ ಇನ್ನೂ ಇರುವಾಗ' ಎಂದು ಇದನ್ನು ತಿಳಿಸಲಾಗಿದೆ. ಅಶ್ವಿನೀ ದೇವತೆಗಳು ಯಾರು ಎಂಬ ಅಂಶವನ್ನು ಯಾಸ್ಕರು ಚರ್ಚಿಸಿರುವ ಬಗೆ ಹೀಗಿದೆ– "ಅಶ್ವಿನೌ ಎಂದೇಕೆ ? ಏಕೆಂದರೆ ಇವರಲ್ಲೊಬ್ಬನು ಜಲದಿಂದ ಎಲ್ಲವನ್ನೂ ವ್ಯಾಪಿಸುತ್ತಾನೆ ; ಮತ್ತೊಬ್ಬನು ಪ್ರಕಾಶದಿಂದ ತುಂಬುತ್ತಾನೆ. ಕುದುರೆಗಳಿಂದ ಕೂಡಿದವರಾದ ಕಾರಣ ಅಶ್ವಿನೀ ದೇವತೆಗಳೆಂದು ಔರ್ಣವಾಭರ ಮತ. ದ್ಯಾವಾಪೃಥಿವೀಗಳೆಂದು ಕೆಲವರ ಮತ. ಅಹೋರಾತ್ರಿಗಳೇ ಇವರೆಂದು ಮತ್ತೆ ಕೆಲವರ ಅಭಿಪ್ರಾಯ. ಸೂರ್ಯ ಚಂದ್ರರೆಂದು ಇನ್ನು ಕೆಲವರು ಹೇಳುತ್ತಾರೆ. ಪುಣ್ಯವನ್ನು ಗಳಿಸಿದ ರಾಜರುಗಳೆಂದು ಐತಿಹಾಸಿಕರ ಮತ. ಇವರ ಕಾಲ ಮಧ್ಯರಾತ್ರಿಯಾದ ಮೇಲೆ ಕತ್ತಲೆಯನ್ನು ಜ್ಯೋತಿಯು ವ್ಯಾಪಿಸುವ ಕಾಲ.'

'ಅಶ್ವಿನೌ ಯ ದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯ: (ನಿ. 12-1-3)
... ... ... ... 'ತಯೋಃಕಾಲಃ ಊರ್ಧ್ವಮ
ರ್ಧರಾತ್ರಾತ್ ಪ್ರಕಾಶೀಭಾವಸ್ಯಾನುವಿಷ್ಟಂಭಮ್ । ಅನುತ್ತಮೋ
ಭಾಗಃ ಹಿ ಮಧ್ಯಮಃ ಜ್ಯೋತಿರ್ಭಾಗಃ ಆದಿತ್ಯಃ। (ನಿ 12-1-9)

'ಉಷಃಕಾಲಕ್ಕೂ ಮೊದಲಿನ ಅರ್ಧಕತ್ತಲೆ ಮತ್ತು ಅರ್ಧಬೆಳಕಿನ ಉಭಯ ಜ್ಯೋತಿಗಳನ್ನು ಈ ದೇವತೆಗಳು ಪ್ರತಿನಿಧಿಸುವರೆಂದು ಕೆಲವರು ಆಧುನಿಕ ವಿಮರ್ಶಕರೂ ಅಭಿಪ್ರಾಯ ಪಡುತ್ತಾರೆ. ಯಾಸ್ಕರ ಕಾಲಕ್ಕೆ ಈ ದೇವತೆಗಳ ಸ್ವರೂಪದ ವಿಚಾರದಲ್ಲಿ ಭಿನ್ನಾಭಿಪ್ರಾಯ ವಿತ್ತೆಂಬುದು ಮೇಲಿನ ವಚನದಿಂದ ಗೊತ್ತಾಗುತ್ತದೆ. (ಬೃಹದ್ದೇವತೆ-6-162,7)

ಇವರು ಯಮಳರು. ನಿತ್ಯಸುಂದರರೂ, ನಿತ್ಯಯೌವನಶಾಲಿಗಳೂ ಆದವರು. ಸ್ವರ್ಣಮಯ ವಾದ ತೇಜಸ್ಸಿನಿಂದ ರಾರಾಜಿಸುವರಿವರು. ಇವರು ದೇವತೆಗಳೆಲ್ಲೆಲ್ಲಾ ಕಿರಿಯರು ಮತ್ತು ಪುರಾತನರು. ಪುಷ್ಕರಮಾಲೆಗಳಿಂದಲಂಕೃತರಾಗಿ ಇವರು ಸೂರ್ಯ ದುಹಿತೆಯಾದ ಸೂರ್ಯೆ ಯಿಂದ ಅಧಿಷ್ಠಿತವಾದ ರಥದಲ್ಲಿ ಹೊರಟು ಬರುತ್ತಾರೆ. ಈ ರಥ ಸೂರ್ಯನಂತೆ ಶೋಭಿಸುವುದು. ಇವರು ರಥವನ್ನು ಹೂಡುವ ಕಾಲದಲ್ಲಿಯೇ ಉಷೆ ಪ್ರಾದುರ್ಭವಿಸುವಳು.

ಇವರು ಮಧುಯುತರು ; ಮಧುಪ್ರಿಯರು. ಇವರ ರಥದವೇಗ ಮನೋವೇಗಕ್ಕೂ ಮಿಗಿಲಾಗಿದೆ (1-117-2). ದಿವ್ಯಶಿಲ್ಪಿಗಳಾದ ಋಭುಗಳು ಇದನ್ನು ನಿರ್ಮಾಣ ಮಾಡಿಕೊಟ್ಟರು. (10-39-12). ಈ ರಥ ಹಿರಣ್ಮಯವಾದುದು. ಇದಕ್ಕೆ ಮೂರು ಚಕ್ರಗಳಿವೆ. ಸೂರ್ಯೆಯ ವಿವಾಹಕ್ಕೆ ಬಂದಾಗ ಇವುಗಳಲ್ಲೊಂದು ಚಕ್ರ ಮರೆಯಾಯಿತೆಂದು ಹೇಳಿದೆ (10-85-15). ಇವರ ರಥವನ್ನು ವೇಗಶಾಲಿಗಳಾದ ಕುದುರೆಗಳು ಎಳೆಯುತ್ತವೆ. ಪಕ್ಷಿಗಳು, ಮಹಿಷ ಮತ್ತು ರಾಸಭಗಳೂ ಈ ರಥವನ್ನು ಎಳೆಯುವುವೆಂದೂ ಹೇಳಿದೆ.

ದೂರದ ಪ್ರದೇಶದಿಂದ ಇವರು ಸಾರಿಬರುತ್ತಾರೆ–

'ಪರಾವತಶ್ಚಿದಾಗಚಮ್' (8-5-30).

ದ್ಯುಲೋಕದಿಂದಲೂ ಅಂತರಿಕ್ಷದಿಂದಲೂ ಬಂದು ಇವರು ಸ್ತೋತೃಗಳನ್ನು ಕಾಪಾಡು ತ್ತಾರೆ. ಇವರನ್ನು ದ್ಯುಲೋಕ ಪುತ್ರರೆಂದು ಸ್ತುತಿಸಿದೆ. ವಿವಸ್ವಾನ್ ಮತ್ತು ಸರಣ್ಯುಗಳ ಪುತ್ರರೆಂದೂ

(10-17-2), ಉಷೆ ಸೋದರಿಯೆಂದೂ (1-180-2), ಸೂರ್ಯೆಯಪತಿಗಳೆಂದೂ ('ಯೇನಪತೀಭವಥಃ ಸೂರ್ಯಾಯಾಃ') (4-43-6) ಹೇಳಿದೆ. ದೇವತೆಗಳು ಪೂಷನ್ ದೇವತೆಯನ್ನು ಇವನಿಗೆ ಕೊಟ್ಟರೆಂದು ಹೇಳಿದೆ (6-58-4).

ಅಶ್ವಿನೀದೇವತೆಗಳು ಪರಹಿತವನ್ನೇ ನೆರವೇರಿಸುವವರು. ರೋಗಬಾಧೆಗಳಿಂದಲೂ ಕಷ್ಟಕಾರ್ಪಣ್ಯಗಳಿಂದಲೂ ಅತಿಶೀಘ್ರವಾಗಿ ಪಾರುಮಾಡುವವರಿವರು. ಲೋಕದ ರೋಗರುಜಿನಗಳನ್ನು ನಾಶಮಾಡುವ ಇವರು ದೇವವೈದ್ಯರಾಗಿದ್ದಾರೆ–

'ಉತತ್ಯಾ ದೈವ್ಯಾ ಭಿಷಜಾ
ಶಂ ನಃ ಕರತೋ ಅಶ್ವಿನಾ |' (8-18-8)

ತಮ್ಮ ಔಷಧಿಗಳಿಂದ ರೋಗಪರಿಹಾರ ಮಾಡುವರಿವರು–'ಭಿಷಜ್ಯಂತಂ ಯದಾತುರಂ' (8-22-10).

ಅಶ್ವಿನೀದೇವತೆಗಳು ಮಾಡಿದ ಉಪಕಾರನಿರೂಪಣೆಯನ್ನು ಋಗ್ವೇದದಲ್ಲಿ ಕಾಣಬಹುದು. ವೃದ್ಧನೂ ಜೀರ್ಣಶರೀರನೂ ಆದ ಚ್ಯವಾನನ ಮುಪ್ಪನ್ನು ಕಳೆದು ಅವನಿಗೆ ದೀರ್ಘಾಯುಷ್ಯವನ್ನು ಕರುಣಿಸಿದರು. ಪೇದುವಿಗೆ ಶೀಘ್ರಗತಿಯ ಅಶ್ವವನ್ನಿತ್ತರು. ಅತ್ರಿಯನ್ನು ತಮಸ್ಸಿನಿಂದಲೂ ಪಾಪದಿಂದಲೂ ಬಿಡಿಸಿದರು. ಜಾಹುಷನನ್ನು ಸ್ವತಂತ್ರಗೊಳಿಸಿದರು–

'ಯುವಂ ಚ್ಯವಾನಂ ಜರಸೋ ಮುಮುಕ್ತಂ
ನಿ ಪೇದವ ಊಹಥುರಾಶುಂ ಮಶ್ವಮ್ |
ನಿರಂಹಸಸ್ತಮಸಃ ಸ್ಪರ್ತಮ ತ್ರಿಂ
ನಿ ಜಾಹುಷಂ ಶಿಥಿರೇ ಧಾತಮಂತಃ ||' (6-17-5).

ಕಲಿ ಎಂಬ ಋಷಿಗೂ ಇವರು ತಾರುಣ್ಯವನ್ನಿತ್ತರು-

'ಪುನಃ ಕಲೇರಕೃಣುತಂ ಯುವದ್ವಯಃ' (10-39-8).

ವಿಶ್ವಕ ಎಂಬ ಹೆಸರಿನ ಋಷಿಗೆ ಕಳೆದು ಹೋಗಿದ್ದ ಅವನ ಪುತ್ರನಾದ ವಿಷ್ಣಾಪುವನ್ನು ತೋರಿಸಿಕೊಟ್ಟರು–

'ದರ್ಶನಾಯ ವಿಷ್ಣಾಪ್ವಂ ದದಥುರ್ವಿಶ್ವಕಾಯ' (1-116-23)

'ರೇಭನೆಂಬ ಋಷಿಯನ್ನು ಅಸುರರು ತಿವಿದು ಬಾವಿಯಲ್ಲಿ ತಳ್ಳಿಬಿಟ್ಟಿದ್ದಾಗ ಅಲ್ಲಿಂದ ಉದ್ಧರಿಸಿ ಅವನನ್ನು ಕಾಪಾಡಿದರು ಅಶ್ವಿನಿಗಳು–'

'ಯಾಭೀ ರೇಭಂ ನಿವೃತಂ ಸಿತಮದ್ಭ್ಯ ಉದ್ವಂದನ ಮೈರಯತಂ ಸ್ವರ್ದೃಶೇ' (1-112-5)

ರಾಕ್ಷಸರಿಂದ ಪೀಡಿಸಲ್ಪಟ್ಟು ಗುಳಿಯಲ್ಲಿ ಹೂಳಲ್ಪಟ್ಟ ವಂದನನೆಂಬ ಋಷಿಯ ಸ್ತೋತ್ರಕ್ಕೆ ಮೆಚ್ಚಿ ಅವನನ್ನು ಮೇಲಕ್ಕೆ ತಂದು ರಕ್ಷಿಸಿದರು–

'ಉದ್ವಶ್ಚತಾ ದೂಪಥುರ್ವಂದನಾಯ' (1-116-11)

ನೂರೊಂದು ಕುರಿಗಳನ್ನು ತಾನು ಸಾಕುತ್ತಿದ್ದ ಹೆಣ್ಣು ತೋಳಕ್ಕೆ ತಿನ್ನಿಸಿದ ಋಜ್ರಾಶ್ವನೆಂಬುವನನ್ನು ಅವನ ತಂದೆ ಅಂಧನನ್ನಾಗಿ ಮಾಡಿದ. ಆ ಹೆಣ್ಣು ತೋಳದ ಪ್ರಾರ್ಥನೆಯನ್ನನುಸರಿಸಿ ಅವನಿಗೆ ಇವರು ಕಣ್ಣುಗಳನ್ನು ಕೊಟ್ಟರು.

'ಶತಂ ಮೇಷಾನ್ವೃಕ್ಯೇ ಚಕ್ಷದಾನಂ
ಋಜ್ರಾಶ್ವಂ ತಂ ಪಿತಾಂಧಂ ಚಕಾರ |

ತಸ್ಮಾ ಅಕ್ಷೀ ನಾಸತ್ಯಾ ವಿಚಕ್ಷ
ಆಧತ್ತಂ ದಸ್ರಾ ಭಿಷಜಾವನರ್ವನ್ ||'(1-116-16)

ಒಂದನೇ ಮಂಡಲದ 116, 112 ಮತ್ತು 117ನೇ ಸೂಕ್ತಗಳಲ್ಲಿ ಇವರು ಮಾಡಿದ ಇಂಥ ಅನುಗ್ರಹಗಳ ಉಲ್ಲೇಖ ವಿಶೇಷವಾಗಿ ಬರುತ್ತದೆ. ಇವರು ಮಾಡಿದ ಪವಾಡಗಳನ್ನು ಇಲ್ಲಿ ಕೊಂಡಾಡಿದೆ. ಅಂಗಿರಸಕುಲೋತ್ಪನ್ನನಾದ ಕಕ್ಷೀವತ್ ಎಂಬುವವನಿಗೆ ಅನುಗ್ರಹಿಸಿ ಕುದುರೆಯ ಗೊರಸಿನಿಂದ ಮಧುವಿನ ಪ್ರವಾಹವನ್ನು ಹರಿಸಿ ನೂರು ಪಾತ್ರೆಗಳ ತುಂಬ ಮಧುವನ್ನು ತುಂದಿಸಿಕೊಟ್ಟರು–

'ಶಫಾದಶ್ವಸ್ಯ ವಾಜಿನೋ ಜನಸ್ಯ ಶತಂ ಕುಂಭಾನ್ ಅಸಿಂಚತಂ ಮಧೂನಾಮ್' (1-117-6)

ಸಮುದ್ರದಲ್ಲಿ ಹಡಗೊಡೆದುದರಿಂದ ದುಃಖಕ್ಕೀಡಾಗಿದ್ದ ಭುಜ್ಯುವನ್ನು ಕಾಪಾಡಲು ಇವರೇ ಧೂಳಿಲ್ಲದ ಅಂತರಿಕ್ಷ ಮಾರ್ಗದಲ್ಲಿ ತ್ವರಿತಗತಿಯ ಕುದುರೆಗಳ ಮೇಲ ಕುಳಿತು ಬಂದರು–(6-62-6).

ಮಕ್ಕಳಿಲ್ಲದವರಿಗೆ ಸಂತಾನವನ್ನೂ, ಗೃಹಸ್ಥರಿಗೆ ಧನಧಾನ್ಯಗಳನ್ನೂ, ರೋಗಾದಿ ಉಪದ್ರವ ಗಳಿಂದ ನರಳುವವರಿಗೆ ಅವುಗಳಿಂದ ಪರಿಹಾರವನ್ನೂ, ಶತ್ರುಗಳ ಆಕ್ರಮಣಕ್ಕೊಳಗಾದವರಿಗೆ ರಕ್ಷಣೆಯನ್ನೂ ಒದಗಿಸಿ ಕಾಪಾಡುವವರಿವರು. ಹೀಗೆ ಅಶ್ವಿನೀ ದೇವತೆಗಳು ಮಹತ್ತರವಾದ ಕೆಲಸಗಳನ್ನು ಮಾಡಬಲ್ಲವರು; ಅಮರರು. ಅವರನ್ನು ಪ್ರಸನ್ನರಾಗಿಸಿಕೊಂಡವರು ಸಂಸಾರದ ದುಃಖವನ್ನು ದಾಟುತ್ತಾರೆ–

ಅತಾರಿಷ್ಮ ತಮಸಸ್ಪಾರಮಸ್ಯ
ಪ್ರತಿಸ್ತೋಮಂ ದೇವಯಂತೋ ದಧಾನಾಃ |
ಪುರುದಂಸಾ ಪುರುತಮಾ ಪುರಾಜಾ-
-ಽಮರ್ತ್ಯಾ ಹವತೇ ಅಶ್ವಿನಾ ಗೀಃ || (7-73-1)

'ದೇವಪರರಾಗಿ ದೇವತೆಗಳಲ್ಲಿ ಸ್ತುತಿಗಳನ್ನರ್ಪಿಸಿ ಈ ಅಜ್ಞಾನವನ್ನು ನಾವು ದಾಟಬಿಟ್ಟಿದ್ದೇವೆ. ಬಹು ವಿಧವಾದ ಕಾರ್ಯಗಳನ್ನು ಮಾಡಬಲ್ಲವರೂ, ಪ್ರಭೂತತಮರೂ, ಪೂರ್ವ ಜಾತರೂ, ಅಮರರೂ ಆದ ಅಶ್ವಿನೀದೇವತೆಗಳನ್ನು ಸ್ತೋತೃವು ಆಹ್ವಾನಿಸುತ್ತಾನೆ.'

ಎರಡನೆಯ ಮಂಡಲದ 39ನೇ ಸೂಕ್ತ ಅಶ್ವಿನೀದೇವತೆಗಳನ್ನು ಬಹಳ ಸುಂದರವಾಗಿ ಸ್ತುತಿಸುವುದು. ಇದರ ಕಾವ್ಯಶೋಭೆಯ ಪರಿಚಯವಾಗಲೆಂದು ಕೆಳಗೆ ಇದನ್ನು ಪೂರ್ಣವಾಗಿ ಉದಾಹರಿಸಿದೆ–

ಪ್ರಾತರ್ಯಾವಾಣಾ ರಥ್ಯೇವ ವೀರಾ
ಅಜೇವ ಯಮಾ ವರಮಾ ಸಚೇಥೇ |
ಮೇನೇ ಇವ ತನ್ವಾ ಶುಂಭಮಾನೇ
ದಂಪತೀವ ಕ್ರತುವಿದಾ ಜನೇಷು ||'

'ಶೃಂಗೇವ ನಃ ಪ್ರಥಮಾಗಂತಮರ್ವಾಕ್
ಶಫಾವಿವ ಜರ್ಭುರಾಣಾ ತರೋಭಿಃ |
ಚಕ್ರವಾಕೇವ ಪ್ರತಿವಸ್ತೋರುಸ್ರಾ
ಅರ್ವಾಂಚಾ ಯಾತಂ ರಥ್ಯೇವ ಶಕ್ರಾ ||'

'ನಾವೇವ ನಃ ಪಾರಯತಂ ಯುಗೇವ
ನಭ್ಯೇವ ನ ಉಪಧೀವ ಪ್ರಧೀವ |

ಶ್ವಾನೇವ ನೋ ಅರಿಷಣ್ಯಾ ತನೂನಾಂ
ಖೃಗಲೇವ ವಿಸ್ರಸಃ ಪಾತಮಸ್ಮಾನ್ ||'

'ವಾತೇವಾಜುರ್ಯಾ ನದ್ಯೇವ ರೀತಿಃ
ಅಕ್ಷೀ ಇವ ಚಕ್ಷುಷಾ ಯಾತಮರ್ವಾಕ್ |
ಹಸ್ತಾವಿವ ತನ್ವೇ ಶಂ ಭವಿಷ್ಟಾ
ಪಾದೇವ ನೋ ನಯತಂ ವಸ್ಯೋ ಅಚ್ಛ ||'

'ಓಷ್ಠಾವಿವ ಮಧ್ವಾಸ್ನೇ ವದಂತಾ
ಸ್ತನಾವಿವ ಪಿಪ್ಯತಂ ಜೀವಸೇ ನಃ |
ನಾಸೇವ ನಸ್ತನ್ವೋ ರಕ್ಷಿತಾರಾ
ಕರ್ಣಾವಿವ ಸುಶ್ರುತಾ ಭೂತಮಸ್ಮೇ ||'

'ಹಸ್ತೇವ ಶಕ್ತಿಮಭಿ ಸಂದದೀ ನಃ
ಕ್ಷಾಮೇವ ನಃ ಸಮಜತಂ ರಜಾಂಸಿ |
ಇಮಾ ಗಿರೋ ಅಶ್ವಿನಾ ಯುಷ್ಮಯಂತೀಃ
ಕ್ಷ್ಣೋತ್ರೇಣೇವ ಸ್ವಧಿತಿಂ ಸಂ ಶಿಶೀತಮ್ ||' (2-39-2 ರಿಂದ 2-39-7)

'ಶೂರರಾದ ಈರ್ವರು ರಥಿಗಳಂತೆ, ಅವಳಿಗಳಾದ ಎರಡು ಆಡುಗಳಂತೆ ಶೋಭಮಾನರಾದ ಇಬ್ಬರು ನಾರೀಮಣಿಯರಂತೆ, ಸಂಗತರಾದ ಪತಿಪತ್ನಿಯರಂತೆ ಯಮಳರಾದ ಅಶ್ವಿನೀ ದೇವತೆಗಳು ಪ್ರಾತಃಕಾಲದಲ್ಲಿ ಯಾಗಭೂಮಿಗೆ ಬರುವರು. ಕರ್ಮವನ್ನರಿತ ನೀವಿಬ್ಬರೂ ಭಜಿಸುವವನನ್ನು ಕೂಡಿಕೊಳ್ಳುವಿರಿ.'

'ಪಶುವಿನ ಎರಡು ಶೃಂಗಗಳಂತೆ ದೇವತೆಗಳಲ್ಲಿ ಶೃಂಗಪ್ರಾಯರಾದವರೂ ಕುದುರೆಗಳ ಖುರಪುಟಗಳೆರಡರಂತೆ ಶೀಘ್ರವಾಗಿ ಚರಿಸುವವರೂ, ಶತ್ರುಗಳನ್ನು ದಮನಮಾಡುವ ರಥಿಗಳಿಬ್ಬರಂತೆ ಸ್ವಕರ್ಮಶಕ್ತರೂ ಆದ ನೀವು ನಮಗಭಿಮುಖರಾಗಿ ಚಕ್ರವಾಕ ಮಿಥುನವು ಹೇಗೋ ಹಾಗೆ ಒಲಿದು ಬನ್ನಿರಿ.'

'ಹಡಗುಗಳೆರಡರಂತೆ, ನೊಗದ ಎರಡು ಪಕ್ಕಗಳಂತೆ, ರಥಚಕ್ರದ ನಾಭಿಫಲಕಗಳೆರಡರಂತೆ, ಅವುಗಳ ಪಕ್ಕದ ಹಲಗೆಗಳೆರಡರಂತೆ, ಚಕ್ರದ ಸುತ್ತಿರುವ ಬಳೆಗಳೆರಡರಂತೆ ನೀವಿಬ್ಬರೂ ನಮ್ಮನ್ನು ಕಷ್ಟಗಳಿಂದ ಪಾರುಮಾಡಿ. ನಮ್ಮನ್ನಾಕ್ರಮಿಸುವವರನ್ನು ಹಿಂಸಿಸಿ ನಮ್ಮನ್ನು ಕಾಪಾಡುವ ಶ್ವಾನಗಳೆರಡರಂತೆ ನಮ್ಮ ದೇಹವನ್ನು ರಕ್ಷಿಸಿರಿ. ಕವಚದ್ವಯ ದೇಹವನ್ನು ರಕ್ಷಿಸುವಂತೆ ನೀವಿಬ್ಬರೂ ಮುಪ್ಪಿನಿಂದ ನಮ್ಮನ್ನು ಕಾಪಾಡಿ.'

'ಸುಳಿಗಾಳಿಗಳೆರಡರಂತೆ ಅಜರರೂ, ನದಿಗಳೆರಡರಂತೆ ಶೀಘ್ರಗಾಮಿಗಳೂ, ನೋಡುವುದಕ್ಕೆ ಕಣ್ಮಣಿಗಳಂತಿರುವವರೂ ಆದ ನೀವು ನಮಗಭಿಮುಖರಾಗಿ ಬನ್ನಿರಿ. ದೇಹಕ್ಕೆ ಎರಡು ಹಸ್ತಗಳೂ ಎರಡು ಪಾದಗಳೂ ಹೇಗೆ ಸುಖವನ್ನುಂಟುಮಾಡುವುವೋ ಹಾಗೆ ನೀವಿಬ್ಬರೂ ನಮಗೆ ಶ್ರೇಷ್ಠವಾದ ಧನವನ್ನು ಕರುಣಿಸಿ.'

'ಮಧುರವೂ ರಸಭರಿತವೂ ಆದ ಮಾತುಗಳನ್ನು ತುಟಿಗಳೆರಡರಂತೆ ನೀವು ಆಡಿಸಿ ; ಸ್ತನದ್ವಯದಂತೆ ನೀವಿಬ್ಬರೂ ನಾವು ಬದುಕಲು ಪಾಲೂಡಿಸಿ. ನಾಸಿಕೆಗಳೆರಡರಂತೆ ನೀವಿಬ್ಬರೂ ನಮ್ಮ ಶರೀರವನ್ನು ರಕ್ಷಿಸುವವರಾಗಿ. ಶ್ರೋತ್ರದ್ವಯದಂತೆ ಒಳ್ಳೆಯ ಮಾತುಗಳನ್ನು ನಮ್ಮಿಂದ ಕೇಳಿಸುವವರಾಗಿ.'

'ಹಸ್ತಗಳೆರಡು ಹೇಗೋ ಹಾಗೆ ನೀವಿಬ್ಬರೂ ನಮಗೆ ಸಾಮರ್ಥ್ಯವನ್ನುಂಟು ಮಾಡಿ. ದ್ಯಾವಾಪೃಥಿವೀಗಳೋಪಾದಿಯಲ್ಲಿ ನಮಗೆ ಸ್ಥಾನಗಳನ್ನು ಕಲ್ಪಿಸಿಕೊಡಿ. ನಿಮ್ಮಿಬ್ಬರನ್ನೂ

ಬಯಸಿ ಬೇಡಿರುವ ಈ ನಮ್ಮ ಸ್ತೋತ್ರಗಳನ್ನು ಸಾಣೆಯಕಲ್ಲು ಕತ್ತಿಯನ್ನು ಹೇಗೋ ಹಾಗೆ ತೀಕ್ಷ್ಣಗೊಳಿಸಿ.'

ಇಂಥ ಅಶ್ವಿನೀದೇವತೆಗಳಲ್ಲಿ ಋಷಿಗಳ ಬೇಡಿಕೆ ಹೀಗಿದೆ–

'ಶುಶ್ರುವಾಂಸಾ ಚಿದಶ್ವಿನಾ ಪುರೂಣ್ಯಭಿ
ಬ್ರಹ್ಮಾಣಿ ಚಕ್ಷಾಥೇ ಋಷೀಣಾಮ್ ।
ಪ್ರತಿ ಪ್ರಯಾತಂ ವರಮಾ ಜನಾಯ
ಅಸ್ಮೇ ವಾಮಸ್ತು ಸುಮತಿಶ್ಚ ನಿಷ್ಠಾ ॥' (7-70-5)

'ಎಲೈ ಅಶ್ವಿನೀ ದೇವತೆಗಳೇ, ಶ್ರುತವಂತರಾದ ನೀವು ಋಷಿಗಳಾದ ನಮ್ಮ ಬಹುವಿಧವಾದ ಸ್ತವನಾದಿಕ್ರಿಯೆಗಳನ್ನು ಕಾಣುತ್ತಿದ್ದೀರಿ. ಆದ್ದರಿಂದ ನಮ್ಮ ಯಾಗಕ್ಕೆ ದಯಮಾಡಿ ಮೇಲೆ ಹೇಳಿದಂತಹ ನಿಮ್ಮ ಅನುಗ್ರಹಬುದ್ಧಿ ನಮ್ಮ ಮೇಲುಂಟಾಗಲಿ.'

**ವಿಶ್ವೇದೇವಾಃ**

ಇದುವರೆಗೆ ಪೃಥ್ವೀಸ್ಥಾನ, ಅಂತರಿಕ್ಷಸ್ಥಾನ ಮತ್ತು ದ್ಯುಸ್ಥಾನಗಳಲ್ಲಿನ ದೇವತೆಗಳಲ್ಲಿನ ದೇವತೆಗಳ ಸ್ವರೂಪವನ್ನು ಕುರಿತು ವಿಚಾರಿಸಿದೆವು. ಸಮಗ್ರವಾಗಿ ಈ ದೇವತೆಗಳನ್ನೆಲ್ಲಾ ಒಮ್ಮೆಯೇ ಸ್ತುತಿಸುವ ಪ್ರಯತ್ನವೇ ವಿಶ್ವೇದೇವತೆಗಳ ಕಲ್ಪನೆಗೆ ಕಾರಣ. ಯಾವ ದೇವತೆಯನ್ನೂ ಬಿಡದೆ ಸ್ತುತಿಸಲು 'ಎಲ್ಲಾ' ಎಂಬ ಪದದ ಪ್ರಯೋಗ ಬಂದಿದೆ ಇಲ್ಲಿ. ದೇವತಾ ವಿಭಾಗವನ್ನು ಮಾಡಿ ಅವುಗಳ ಸ್ವರೂಪ ಚಿಂತನೆಯನ್ನು ಮಾಡುವಾಗ ಯಾಸ್ಕರು 'ಏಕ ಏವ ಆತ್ಮಾ ಬಹುಧಾ ಸ್ತೂಯತೇ' ಎಂದು ಸಾರಿದರು. ಯಾವ ದೇವತೆಯನ್ನು ಕುರಿತು ಸ್ತುತಿಸಿದರೂ ಅದು ಅದ್ವಿತೀಯನಾದ ಒಬ್ಬನಿಗೇ ಸೇರುತ್ತದೆ. ಆದರೂ ಯಾಜ್ಞಿಕ ಸಂಪ್ರದಾಯದಲ್ಲಿ ದೇವತೆಗಳ ನಾನಾತ್ವ ತಥ್ಯವಾದುದು. ಈ ದೇವತೆಗಳೆಲ್ಲಾ ಮಹಾ ಆದ ಒಬ್ಬನೇ ಆತ್ಮನ ಅಂಗ ಪ್ರತ್ಯಂಗಗಳು ಎಂದಾಗ ಆ ಮಹಾನ್ ಆದ ಆತ್ಮನನ್ನು ಅವನ ಅಂಗಪ್ರತ್ಯಂಗಗಳೆಲ್ಲದರೊಡನೆ ಸ್ತುತಿಸಬೇಕೆಂಬ ಆಶೆ ಉದಿಸುವುದು ಸಹಜ. ವಿಶ್ವೇದೇವತೆಗಳ ಭಾವನೆ ಆ ಆಶೆಯನ್ನು ಸಫಲಪಡಿಸಿದೆ. ಆದ್ದರಿಂದಲೇ ಎಲ್ಲ ದೇವತೆಗಳೂ ನಮ್ಮಲ್ಲಿ ಅನುಗ್ರಹಿಸಲಿ ರಕ್ಷಿಸಲಿ ಎಂಬ ಬೇಡಿಕೆ ಬಂದಿದೆ. ಒಬ್ಬ ದೇವತೆಗಿಂತ ಮತ್ತೊಬ್ಬ ದೇವತೆ ಹೆಚ್ಚು ಅಥವಾ ಕಡಿಮೆ ಎಂಬ ಭಾವ ಇಲ್ಲಿಲ್ಲ. ಒಬ್ಬನೇ ಆತ್ಮನು ಅನಂತ ರೂಪಗಳಲ್ಲಿ ಮೆರೆದಿದ್ದಾನೆ. ಸಮಸ್ತರೂಪಗಳಿಂದಲೂ ಆ ದೇವನು ನಮಗೆ ಕಲ್ಯಾಣವನ್ನುಂಟುಮಾಡಲಿ ಎಂಬ ಪ್ರಾರ್ಥನೆ ಇಲ್ಲಿದೆ. ಕೆಳಗಿನ ಮಂತ್ರದಲ್ಲಿ ದೇವತೆಗಳನ್ನೆಲ್ಲಾ ಸೇರಿಸಿ ಸ್ತುತಿಸಿರುವುದನ್ನು ಕಾಣಬಹುದು:

'ಅಗ್ನಿರಿಂದ್ರೋ ವರುಣೋ ಮಿತ್ರೋ ಅರ್ಯಮಾ
ವಾಯುಃ ಪೂಷಾ ಸರಸ್ವತೀ ಸಜೋಷಸಃ ।
ಆದಿತ್ಯಾ ವಿಷ್ಣುರ್ಮರುತಃ ಸ್ವರ್ಬೃಹತ್
ಸೋಮೋ ರುದ್ರೋ ಅದಿತಿಃ ಬ್ರಹ್ಮಣಸ್ಪತಿಃ' (10-65-1)

ಋಗ್ವೇದದಲ್ಲಿ ಸುಮಾರು 40 ಸೂಕ್ತಗಳು ವಿಶ್ವೇದೇವತಾಕವಾಗಿದೆ. ದೇವತೆಗಳೆಲ್ಲರೂ ಋತವನ್ನು ರಕ್ಷಿಸುವವರು. ಸುಜಾತರು, ಐಶ್ವರ್ಯಯುತರು, ವಿಶ್ವವನ್ನು ಬೆಳಗಿ ಪವಿತ್ರಗೊಳಿಸುವವರು, ಮತ್ತು ಅನಭಿಭವನೀಯರು–

'ಸ್ತುಷ ಉವ್ವೋ ಮಹ ಋತಸ್ಯ ಗೋಪಾನ್'- (6-51-3)

ವಿಶ್ವೇದೇವತೆಗಳು ಎಂಥವರೆಂಬುದನ್ನು ಕೆಳಗಿನ ಮಂತ್ರದಲ್ಲಿ ಕಾಣಬಹುದು–

ರಿಶಾದಸಃ ಸತ್ಪತೀರದಬ್ಧಾನ್
ಮಹೋ ರಾಜ್ಞಃ ಸುವಸನಸ್ಯದಾತೄನ್।
ಯೂನಃ ಸುಕ್ಷತ್ರಾನ್ ಕ್ಷಯತೋ ದಿವೋನ್ನೄನ್
ಆದಿತ್ಯಾನ್ ಯಾಮಿ ಅದಿತಿಂ ದುವೋಯು ॥ (6-51-4)

'ಭಕ್ತರ ಹಿಂಸಕರನ್ನು ನಾಶಪಡಿಸುವವರೂ, ಸಜ್ಜನರ ಪಾಲಕರೂ, ಅಹಿಂಸಿತರೂ. ಮಹತ್ತಮರೂ, ರಾಜರಂತೆ ನಿಯಮಿಸುವವರೂ, ಮಂಗಳಮಯವಾದ ನಿವಾಸಗಳನ್ನು ಕೊಡುವವರೂ, ನಿತ್ಯ ಯವ್ವನಶಾಲಿಗಳೂ, ಮಹತ್ತರವಾದ ಬಲವುಳ್ಳವರೂ, ದ್ಯುಲೋಕದ ನಾಯಕರೂ, ಅದಿತಿಪುತ್ರರೂ ಆದ ಎಲ್ಲ ದೇವತೆಗಳನ್ನೂ ಅದಿತಿ ದೇವಿಯನ್ನೂ ಸಹ ನನ್ನ ಸೇವೆಯನ್ನು ಸ್ವೀಕರಿಸಲು ಬೇಡುತ್ತೇನೆ.'

ಈ ಮಂತ್ರದಲ್ಲಿ ದೇವತಾ ತತ್ತ್ವದ ಸ್ವರೂಪವನ್ನೇ ಸಂಗ್ರಹವಾಗಿ ಹೇಳಿದೆ. ಸರ್ವಾತಿಶಾಯಿತ್ವ ಮತ್ತು ಸರ್ವಶಕ್ತಿತ್ವವನ್ನು ಹೊಂದಿರುವಂತೆಯೇ ದೇವತೆ ಸರ್ವಸುಲಭವೂ ಆಗಿರುವುದರಿಂದ ಮಾನವ ಮತ್ತು ದೇವತೆಯ ಸಂಬಂಧ ಸಾರ್ಥಕವಾಗುತ್ತದೆ. ದೇವತೆಯ ಸ್ವರೂಪ ಹಾಗೂ ಆ ದೇವತೆಗೂ ಮಾನವರಿಗೂ ಇರುವ ಸಂಬಂಧ–ಈ ಎರಡು ಅಂಶಗಳನ್ನೂ ಇಲ್ಲಿ ವಿವೇಚಿಸಿದೆ.

ಮಾನವ ಮತ್ತು ದೇವರ ಸಂಬಂಧವನ್ನು ಇಲ್ಲಿ ಸೂಕ್ಷ್ಮವಾಗಿಯೂ ನಿರ್ಧಾರಕವಾಗಿಯೂ ಹೇಳಿದೆ. ಮಾನವನ ಆಗು ಹೋಗುಗಳು ದೇವರ ಅಧೀನ. ಪಾಪ ಮಾಡುವವನಿಗೆ ಪಾಪದಿಂದ ಬಿಡುಗಡೆಯ ಅವಕಾಶವೇ ಇಲ್ಲದಿದ್ದರೆ ಅವನ ಉದ್ಧಾರದ ಪ್ರಶ್ನೆಯೇ ಏಳದು. ಆದರ ದೈವವಶಾತ್ ಹಾಗಿಲ್ಲ. ಅಜ್ಞಾನದ ಕಾರಣ ಪಾಪದ ಹಾದಿಯಲ್ಲಿ ಪಶ್ಚಾತ್ತಾಪಪಟ್ಟು ದೇವರಲ್ಲಿ ಕ್ಷಮೆ ಬೇಡಿದರೆ ದೇವರು ಅವನನ್ನು ಕ್ಷಮಿಸುತ್ತಾನೆ. ಮಾನವನನ್ನು ಕ್ಷಮಿಸುವುದರಲ್ಲಿಯೇ ದೇವರ ಮಹಾತ್ಮ್ಯೆಯ ಗುಟ್ಟಡಗಿದೆ. ಆದ್ದರಿಂದ ಆತನಲ್ಲಿ ಮಾಡಿದ ನಮಸ್ಕಾರಕ್ಕೆ ಮಹತ್ವ ಇದೆ. ಈ ಅಂಶವನ್ನು ಕೆಳಗಿನ ಮಂತ್ರದಲ್ಲಿ ಕಾಣಬಹುದು:

'ನಮ ಇದುಗ್ರಂ ನಮ ಆ ವಿವಾಸೇ
ನಮೋ ದಾಧಾರ ಪೃಥಿವೀಮುತ ದ್ಯಾಮ್ ।
ನಮೋ ದೇವೇಭ್ಯೋ ನಮ ಈಶ ಏಷಾಂ
ಕೃತಂ ಚಿದೇನೋ ನಮಸಾ ವಿವಾಸೇ ॥' (6-5-18)

'ನಮಸ್ಕಾರವೇ ಸರ್ವೋತ್ಕೃಷ್ಟವಾದುದು. ಆದ್ದರಿಂದ ನಮಸ್ಕಾರವನ್ನು ನಾನು ಸೇವಿಸುತ್ತೇನೆ. ನಮಸ್ಕಾರವೇ ಪೃಥಿವೀಲೋಕವನ್ನೂ ದ್ಯುಲೋಕವನ್ನೂ ಧರಿಸಿ ನಿಲ್ಲಿಸಿದೆ. ಆದ್ದರಿಂದ ದೇವತೆಗಳಿಗೆ ಇಂಥ ನಮಸ್ಕಾರವನ್ನರ್ಪಿಸುತ್ತೇನೆ. ದೇವತೆಗಳು ನಮಸ್ಕಾರಕ್ಕೆ ವಶರಾಗುತ್ತಾರೆ. ನಮಸ್ಕಾರದಿಂದ ನಾನು ಮಾಡಿದ ಪಾಪವನ್ನು ಹೋಗಲಾಡಿಸಿಕೊಳ್ಳುತ್ತೇನೆ.'

ಇಂಥ ದೃಢನಿಶ್ಚಯವನ್ನು ಹೊಂದಿ ಭಗವತ್ಪರನಾದವನು ತನಗೆ ಬೇಕಾದ ಐಹಿಕ ಹಾಗೂ ಆಮುಷ್ಮಿಕವಾದ ಸಂಪತ್ತನ್ನು ಆ ದೇವರಿಂದಲೇ ಬೇಡುತ್ತಾನೆ. ಪಾಪರಹಿತವಾದ ಹಾದಿಯಲ್ಲಿ ನಡೆದು ಸುಖವನ್ನು ಹೊಂದಲು ಬಯಸುತ್ತಾನೆ–(6-51-16). ಮನಸ್ಸು ಸನ್ಮಾರ್ಗಗಾಮಿ ಯಾಗಲಿ–'ಸುಮನಸಃ ಸ್ಯಾಮ' (6-52-5) ಎಂದು ಬೇಡುತ್ತಾನೆ.

ವಿಶ್ವೇದೇವತೆಗಳ ಸೂಕ್ತಗಳಲ್ಲಿ ಭಗವತ್ಸ್ವರೂಪವನ್ನು ನಿರೂಪಿಸಿ ಅವರಿಂದ ರಕ್ಷಣೆಯನ್ನು ಬೇಡಿದ್ದಾರೆ ಹೀಗೆ–

'ಯೇ ದೇವಾನಾಂ ಯಜ್ಞಿಯಾ ಯಜ್ಞಿಯಾನಾಂ
ಮನೋರ್ಯಜತ್ರಾ ಅಮೃತಾ ಋತಜ್ಞಾಃ |
ತೇ ನೋ ರಾಸಂತಾಮುರುಗಾಯಮದ್ಯ
ಯೂಯಂ ಪಾತ ಸ್ವಸ್ತಿಭಿಃ ಸದಾ ನಃ |' (7-35-15)

'ಯಜನೀಯರಾದ ದೇವತೆಗಳಿಗೂ ಪೂಜ್ಯರಾದವರೂ, ಪ್ರಜಾಪ್ರತಿಯಿಂದಲೂ ಪೂಜಿಸಲ್ಪಡಬೇಕಾದವರೂ ಆದ ಅಮೃತರೂ ಋತಜ್ಞರೂ ಆದ ಯಾವ ದೇವತೆಗಳಿದ್ದಾರೆಯೋ ಅವರು ಎಲ್ಲರೂ ಇಂದು ನಮಗೆ ಬಹು ಕೀರ್ತಿಯನ್ನು ಕೊಡಲಿ. ನೀವೆಲ್ಲರೂ ಯಾವಾಗಲೂ ನಮಗೆ ಮಂಗಳವನ್ನುಂಟುಮಾಡಿ ನಮ್ಮನ್ನು ಕಾಪಾಡಿ.'

**ಇತರ ದೇವತೆಗಳು**

ಋಗ್ವೇದದಲ್ಲಿ ಕೆಲವು ಗುಣಗಳನ್ನು ರೂಪಣಮಾಡಿ ದೇವತೆಗಳಂತೆಯೇ ಸ್ತುತಿಸಿದ್ದಾರೆ. ಇಂದ್ರನ ಕೋಪ ಮನ್ಯುಸೂಕ್ತದಲ್ಲಿ ಸ್ತುತವಾಗಿದೆ (10-83, 84). ಮನ್ಯುದೇವತೆಯನ್ನು ಬಗೆಬಗೆಯಾಗಿ ಇಲ್ಲಿ ಸ್ತುತಿಸಿದೆ. 'ಮನ್ಯುವೇ ಇಂದ್ರ ; ಸರ್ವದೇವತೆಗಳೂ ಮನ್ಯುವೇ ; ಮನ್ಯುವೇ ಹೋತೃ, ಜಾತವೇದ ಮತ್ತು ವರುಣ. ಮಾನವ ಕುಲದಲ್ಲಿ ಜನಿಸಿದ ಪ್ರಜೆಗಳೆಲ್ಲರೂ ಮನ್ಯುವನ್ನೇ ಸ್ತುತಿಸುತ್ತಾರೆ. ಎಲೈ ಮನ್ಯುವೇ, ತಪಸ್ ದೇವತೆಯೊಡಗೂಡಿದ ನೀನು ಸುಪ್ರೀತನಾಗಿ ನಮ್ಮನ್ನು ರಕ್ಷಿಸು' ಎಂದು ಕೆಳಗಿನ ಮಂತ್ರದಲ್ಲಿ ಸ್ತುತಿಸಿದೆ:

'ಮನ್ಯುರಿಂದ್ರೋ ಮನ್ಯುರೇವಾಸ ದೇವೋ
ಮನ್ಯುರ್ಹೋತಾ ವರುಣೋ ಜಾತವೇದಾಃ |
ಮನ್ಯುಂ ವಿಶ ಈಳತೇ ಮಾನುರ್ಷೀಯಾಃ
ಪಾಹಿ ನೋ ಮನ್ಯೋ ತಪಸಾ ಸಜೋಷಾಃ ||' (10-83-2)

ಶ್ರದ್ಧೆಯನ್ನು ಒಂದು ಸೂಕ್ತದಲ್ಲಿ ಸುಂದರವಾಗಿ ಸ್ತುತಿಸಿದೆ. 'ಶ್ರದ್ಧೆಯಿಂದಲೇ ಅಗ್ನೀಂಧನವೂ ಹೋಮಾದಿಗಳೂ ನಡೆಯುತ್ತವೆ. ಐಶ್ವರ್ಯಪ್ರಾಪ್ತಿ ಶ್ರದ್ಧೆಯಿಂದಲೇ' ಎಂಬ ಭಾವವನ್ನು ಕೆಳಗಿನ ಮಂತ್ರದಲ್ಲಿ ಕಾಣಬಹುದು:

'ಶ್ರದ್ಧಯಾಗ್ನಿಃ ಸಮಿಧ್ಯತೇ
ಶ್ರದ್ಧಯಾ ಹೂಯತೇ ಹವಿಃ |
ಶ್ರದ್ಧಾಂ ಭಗಸ್ಯ ಮೂರ್ಧನಿ
ವಚಸಾ ವೇದಯಾಮಸಿ || (10-151-1)

'ಎಲೈ ಶ್ರದ್ಧಾ ದೇವಿಯೇ ಈ ಲೋಕದಲ್ಲಿ ಕರ್ಮವಂತರಾಗಲು ನಾವು ಶ್ರದ್ಧೆಯನ್ನು ಹೊಂದುವಂತೆ ಅನುಗ್ರಹಿಸು–

'ಶ್ರದ್ಧೇ ಶ್ರದ್ಧಾಪಯೇಹ ನಃ' (10-15-5) ಎಂದು ಬೇಡಿದ್ದಾರೆ.

ಋಗ್ವೇದದಲ್ಲಿ ಅನೇಕ ಸ್ತ್ರೀ ದೇವತೆಗಳನ್ನೂ ಸ್ತುತಿಸಿದ್ದಾರೆ. ಇವರಲ್ಲಿ ಉಷೆ, ರಾತ್ರಿ, ಸರಸ್ವತಿ, ಪೃಥಿವೀ ಮೊದಲಾದವರು ಮುಖ್ಯರಾದವರು. ಇವರಲ್ಲಿ ಉಷೆ. ಸರಸ್ವತೀ ಮತ್ತು ಪೃಥಿವೀ ದೇವತೆಗಳ ಸ್ವರೂಪವನ್ನು ಬೇರೆ ಕಡೆ ವಿವರಿಸಿದೆ. ಆದ್ದರಿಂದ ರಾತ್ರಿ ದೇವತೆಯ ವಿಚಾರವನ್ನು ಇಲ್ಲಿ ಪ್ರಸ್ತಾಪಿಸಬಹುದು.

ಉಷೆಯಂತೆ ರಾತ್ರಿಯೂ ನಭೋಜಾತೆ. ಇವಳು ಕತ್ತಲೆಯಲ್ಲ. ಆದರೆ ನಕ್ಷತ್ರ ಮಂಡಲದಿಂದ ದೀಪ್ತಳಾದ ರಾತ್ರಿ ದೇವತೆ ಅಸಂಖ್ಯವಾದ ತಾರೆಗಳಿಂದ ಝಗ ಝಗಿಸುವ

ನಭೋಮಂಡಲದಿಂದಿವಳು ಬೆಳಗುತ್ತಿದ್ದಾಳೆ. ಕಣಿವೆಗಳನ್ನೂ ಪರ್ವತಗಳನ್ನೂ ತನ್ನ ದೀಪ್ತಿಯಿಂದ ಇವಳು ತುಂಬುತ್ತಾಳೆ ಮತ್ತು ಕತ್ತಲೆಯನ್ನು ಕತ್ತರಿಸುತ್ತಾಳೆ–

'ಜ್ಯೋತಿಷಾ ಬಾಧತೇ ತಮಃ' (10-127-2). ರಾತ್ರಿದೇವಿ ಬಂದಾಗ ಮನುಷ್ಯರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ, ಹಕ್ಕಿಗಳು ಗೂಡುಗಳನ್ನು ಸೇರುವಂತೆ–

ಸಾ ನೋ ಅದ್ಯಯಸ್ಯಾವಯಂ
ನಿ ತೇ ಯಾಮನ್ನವಿಕ್ಷ್ಮಹಿ ।
ವೃಕ್ಷೇನ ವಸತಿಂ ವಯಃ ॥' (10-127-4)

ಎಲ್ಲ ಪ್ರಾಣಿಜಾತಗಳೂ ತಮ್ಮ ತಮ್ಮ ಜಾಗಗಳಿಗೆ ಹೋಗುತ್ತವೆ ರಾತ್ರಿಯಲ್ಲಿ. ಎಲ್ಲರೂ ವಿಶ್ರಾಂತಿ ಹೊಂದುತ್ತಾರೆ. ಹೀಗೆ ಮನುಷ್ಯರಿಗೂ, ಪ್ರಾಣಿಗಳಿಗೂ ವಿಶ್ರಾಂತಿಯಿತ್ತು ರಾತ್ರಿ ದೇವಿಯು ಸಂರಕ್ಷಿಸುತ್ತಾಳೆ.

ವಾಕ್ ದೇವತೆಯನ್ನು ಒಂದು ಸೂಕ್ತದಲ್ಲಿ ಸ್ತೋತ್ರಮಾಡಿದೆ. ತನ್ನನ್ನೇ ದೇವತೆ ಈ ಸೂಕ್ತದಲ್ಲಿ ವರ್ಣಿಸಿಕೊಂಡಿದ್ದಾಳೆ. ವಾಗ್ದೇವತೆ ಎಲ್ಲ ದೇವತೆಗಳ ಸ್ವರೂಪದಲ್ಲಿದ್ದಾಳೆ. ಎಲ್ಲ ದೇವತೆಗಳಿಗೂ ಆಧಾರವಾಗಿದ್ದಾಳೆ. ಮಿತ್ರಾವರುಣ, ಇಂದ್ರಾಗ್ನೀ, ಅಶ್ವಿನೀದೇವತೆಗಳು ಮೊದಲಾದ ದೇವತೆಗಳಿಗೂ ಇವಳು ಆಧಾರವಾಗಿದ್ದಾಳೆ–

'ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ।' (10-125-1)

ಹವಿಸ್ಸಮರ್ಪಣ ಮಾಡುವವರಿಗೆ ಧನವನ್ನು ಕರುಣಿಸುವವಳೂ ಇವಳೇ. 'ಸರ್ವ ಜಗತ್ತಿಗೂ ನಾನು ಈಶ್ವರೀ ; ಧನವನ್ನು ಕರುಣಿಸುವವಳೂ ನಾನೇ ; ಪರಬ್ರಹ್ಮ ವಸ್ತುವನ್ನು ಸಾಕ್ಷಾತ್ಕರಿಸಿಕೊಡುವಳು ನಾನು. ನಾನೇ ಪೂಜ್ಯರಲ್ಲಿ ಮೊದಲಿಗಳು. ಬಹು ಭಾವದಿಂದ ಪ್ರಪಂಚಾತ್ಮನಾ ಇರುವವಳೂ, ಅನೇಕ ಪ್ರಾಣಿಗಳಲ್ಲಿ ಜೀವಭಾವದಿಂದ ಪ್ರವೇಶಿಸಿದವಳೂ ಆಗಿ ಈ ರೀತಿ ವೈಶ್ವರೂಪದಿಂದ ಇರುವ ನನ್ನನ್ನು ಅನೇಕ ಕಡೆಗಳಲ್ಲಿ ದೇವತೆಗಳು ಸೇವಿಸುವರು' ಎಂದು (ಕೆಳಗಿನ ಮಂತ್ರದಲ್ಲಿ) ಹೇಳಿದ್ದಾಳೆ:

'ಅಹಂ ರಾಷ್ಟ್ರೀ ಸಂಗಮನೀ ವಸೂನಾಂ
ಚಿಕಿತುಷೀ ಪ್ರಥಮಾ ಯಜ್ಞಿಯಾನಂ ।
ತಾಂ ಮಾ ದೇವಾ ವ್ಯದಧುಃ ಪುರುತ್ರಾ
ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ॥' (10-125-3)

ಭಗವಂತನಲ್ಲಿ ಶ್ರದ್ಧೆ ಇಲ್ಲದವರ ವಿರುದ್ಧ ರುದ್ರನ ಬಿಲ್ಲನ್ನು ಇವಳೇ ಹೆದೆಯೇರಿಸುವಳು. 'ಅಹಂ ರುದ್ರಸ್ಯ ಧನುರಾತನೋಮಿ ಬ್ರಹ್ಮದ್ವಿಷೇ' (10-125-6).

'ಹೇಗೆ ವಾಯು ಸ್ವಯಂ ಬೀಸುವುದೋ ಹಾಗೆ ನಾನೇ ಮತ್ತೊಬ್ಬರಿಂದ ಅನಧಿಷ್ಠಿತಳಾಗಿ ಸರ್ವಭೂತಜಾತಕಗಳ ಕಾರ್ಯಗಳನ್ನೂ ಕಾರಣರೂಪದಿಂದ ಉತ್ಪಾದಿಸುವವಳಾಗಿದ್ದೇನೆ' ಎಂಬ ಭಾವ ಇಲ್ಲಿದೆ–

'ಅಹಮೇವ ವಾತ ಇವ ಪ್ರವಾಮಿ
ಆರಭಮಾಣಾ ಭುವನಾನಿ ವಿಶ್ವಾ ।' (10-125-8)

ಹೀಗೆ ವಾಗ್ದೇವತೆಯ ಪರಸ್ಪರೂಪದ ಸ್ತೋತ್ರವೂ ಇಲ್ಲಿದೆ.

**ಧಿಷಣಾ** ಎಂಬ ದೇವತೆಯು ಸಮೃದ್ಧಿಯನ್ನು ಕರುಣಿಸುವ ದೇವತೆ ಎಂದು ಸ್ತುತಿಸಲಾಗಿದೆ. ಹಾಗೆಯೇ ಇಳಾ, ಈಡಾ ಮುಂತಾದ ದೇವತೆಗಳ ಸ್ತುತಿಯೂ ಇಲ್ಲಿದೆ.

ಇತರ ದೇವತೆಗಳಲ್ಲಿ ಧಾತೃ, ತ್ವಷ್ಟೃ, ವಿಶ್ವಕರ್ಮ ಮತ್ತು ಪ್ರಜಾಪತಿ ದೇವತೆಗಳು ಮುಖ್ಯರಾದವರು. ದೇವತಾದ್ವಂದ್ವಗಳನ್ನೂ ಅನೇಕವಾಗಿ ಇಲ್ಲಿ ಕಾಣುತ್ತೇವೆ. ದ್ಯಾವಾ ಪೃಥಿವೀ, ಇಂದ್ರಾವರುಣಾ, ಸೋಮಾಪೂಷನ್ ಮುಂತಾದ ರೀತಿಯಲ್ಲಿ ದೇವತೆಗಳಿಬ್ಬರನ್ನು ಒಟ್ಟಿಗೆ ಒಂದೇ ಸೂಕ್ತದಲ್ಲಿ ಸ್ತುತಿಸಿದೆ. ಇದಲ್ಲದೆ ಅನೇಕ ದೇವತಾಗಣಗಳ ಸ್ತುತಿಯೂ ಬರುತ್ತದೆ. ಇಂಥ ಗಣಗಳಲ್ಲಿ ಪ್ರಧಾನವಾದವು ವಸುಗಳ ಮತ್ತು ಆದಿತ್ಯರ ಗಣಗಳು. ಋಭುಗಳು ಮೂವರು. ಅವರ ಹೆಸರುಗಳು ಋಭುಕ್ಷನ್, ವಾಜ ಮತ್ತು ವಿಭ್ವನ್. ಈ ಗಣವನ್ನು ಅನೇಕ ಕಡೆ ಸ್ತುತಿಸಿದ್ದಾರೆ. ಹೀಗೆ ಋಗ್ವೇದ ಸಂಹಿತೆಯಲ್ಲಿ ಅನೇಕ ದೇವತೆಗಳನ್ನು ಬೇರೆ ಬೇರೆಯಾಗಿಯೂ ಒಟ್ಟೊಟ್ಟಾಗಿಯೂ ಸ್ತುತಿಸಿರುವುದನ್ನು ನಾವು ನೋಡುತ್ತೇವೆ.

ಭಾರತ ದೇಶದಲ್ಲಿ ಪರಮ ಪವಿತ್ರವೆಂದು ಪೂಜಿಸಲ್ಪಡುವ ಗೋಮಾತೆಯನ್ನು ಬಹಳ ಹಿಂದಿನ ಕಾಲದಿಂದಲೂ ಪೂಜಿಸಿ ಸ್ತುತಿಸಿದ್ದಾರೆ. ಋಗ್ವೇದದಲ್ಲಿ ಬಂದಿರುವ ಗೋಸೂಕ್ತ ಬಹಳ ಸುಂದರವಾಗಿದೆ. ದೇವತೆಗಳನ್ನು ಕುರಿತು ಬೇಡುವಾಗ ಗೋಧನವನ್ನು ಅಧಿಕವಾಗಿ ಬೇಡಿರುವುದನ್ನು ಅಲ್ಲಿ ನಾವು ಕಾಣಬಹುದು. ಪಶುಪಾಲನೆ ಅವರ ಮುಖ್ಯವೃತ್ತಿಯಾಗಿತ್ತು. ಋಷಿಗಳ ಯಾಗಾದಿಗಳ ನಿರ್ವಾಹಕ್ಕೆ ಪಶುಸಮೃದ್ಧಿ ಆವಶ್ಯಕವಾಗಿತ್ತು. ಅನೇಕ ಕಡೆ ಋಗ್ವೇದ ಸಂಹಿತೆಯಲ್ಲಿ ಹಸು, ಕರು, ಕೊಟ್ಟಿಗೆ ಮೊದಲಾದವುಗಳಿಗೆ ಸಂಬಂಧಿಸಿದ ಉಪಮಾನಗಳು ಬಂದಿವೆ. ಪೂಜ್ಯಳಾದ ಗೋಮಾತೆಯ ಸ್ತುತಿ ಆ ಕಾರಣದಿಂದಲೇ ವಿಶಿಷ್ಟವಾದ ಮಹತ್ವವನ್ನು ಹೊಂದಿದೆ. ಗೋಮಾತೆಯ ಸ್ತುತಿಯೊಂದನ್ನು ಇಲ್ಲಿ ಉದ್ಧರಿಸಿದೆ:

'ಆಗಾವೋ ಅಗ್ಮನ್ನುತ ಭದ್ರಮಕ್ರನ್
ಸೀದಂತು ಗೋಷ್ಠೇ ರಣಯಂತ್ವಸ್ಮೇ |
ಪ್ರಜಾವತೀಃ ಪುರುರೂಪಾ ಇಹ ಸ್ಯುಃ
ಇಂದ್ರಾಯ ಪೂರ್ವೀರುಷಸೋ ದುಹಾನಾಃ ||' (6-28-1)

'ನ ತಾನಶಂತಿ ನದಭಾತಿ ತಸ್ಕರೋ
ನಾಸಾಮಮಿತ್ರೋ ವ್ಯಥಿರಾ ದಧರ್ಷತಿ |
ದೇವಾಂಶ್ಚ ಯಾಭಿರ್ಯಜತೇ ದದಾತಿ ಚ
ಜ್ಯೋಗಿತ್ತಾಭಿಃ ಸಚತೇ ಗೋಪತಿಃಸಹ ||' (6-28-3)

ಗಾವೋ ಭಗೋ ಗಾವ ಇಂದ್ರೋ ಮೇ ಅಚ್ಛಾನ್
ಗಾವಃ ಸೋಮಸ್ಯ ಪ್ರಥಮಸ್ಯ ಭಕ್ಷಃ |
ಇಮಾ ಯಾ ಗಾವಃ ಸಜನಾಸ ಇಂದ್ರಃ
ಇಚ್ಛಾಮೀದ್ಧೃದಾ ಮನಸಾಚಿದಿಂದ್ರಮ್ || (6-28-5)

'ಪ್ರಜಾವತೀಃ ಸೂಯವಸೂ ರಿಶಂತೀಃ ||
ಶುದ್ಧಾ ಅಪಃ ಸುಪ್ರಪಾಣೇ ಪಿಬಂತಿಃ |
ಮಾವಸ್ತೇನ ಈಶತ ಮಾಘಶಂಸಃ
ಪರಿವೋ ಹೇತೀ ರುದ್ರಸ್ಯ ವೃಜ್ಯಾಃ ||' (6-28-7)

'ಗೋವುಗಳು ನಮ್ಮ ಗೃಹಕ್ಕೆ ಬರಲಿ ; ನಮಗೆ ಮಂಗಳವನ್ನುಂಟುಮಾಡಲಿ ; ನಮ್ಮ ಮನೆಯ ಕೊಟ್ಟಿಗೆಯಲ್ಲಿ ಮಲಗಲಿ ; ನಮಗೆ ಸಂತಸವೀಯಲಿ ; ನಾನಾ ವರ್ಣದ ಗೋವುಗಳು ತಮ್ಮ ತಮ್ಮ ಕರುಗಳಿಂದ ಕೂಡಿದ್ದು ಇಂದ್ರನಿಗೋಸ್ಕರ ಉಷಃಕಾಲದಲ್ಲಿಯೇ ಸಮೃದ್ಧಿಯಾಗಿ ಹಾಲು ಕರೆಯಲಿ.'

'ಪಶುಗಳು ನಾಶಹೊಂದದಿರಲಿ. ಕಳ್ಳರು ಅವುಗಳನ್ನು ಹಿಂಸಿಸದಿರಲಿ. ಶತ್ರುಗಳ ಆಯುಧಗಳಿಂದ ಅವುಗಳ ಮೇಲೆ ಆಕ್ರಮಣವಾಗದಿರಲಿ. ಯಾವ ಗೋವುಗಳಿಂದ ಇಂದ್ರಾದಿ ದೇವತೆಗಳನ್ನುದ್ದೇಶಿಸಿ ಯಾಗಮಾಡುವರೋ ಅಂಥ ಗೋಪತಿಗಳೂ ಇಂದ್ರನಿಗಾಗಿ ಹಾಲು ಕರೆಯುವ ಹಸುಗಳೂ ಚಿರಕಾಲ ಕೂಡಿರುವಂತಾಗಲಿ.'

'ಪಶುಗಳೇ ನನಗೆ ಧನ ; ಇಂದ್ರನು ನನಗೆ ಗೋಧನವನ್ನೇ ಕೊಡಲಿ ; ಇವುಗಳೊಡನೆ (ಆಜ್ಯಾದಿಗಳೊಡನೆ) ಸೋಮ ಸಂಸರ್ಗವಾಗಲಿ. ಎಲೈ ಜನರೇ, ಇಂಥ ಹಸುಗಳೇ ನನಗೆ ಇಂದ್ರನೂ ಆಗಿವೆ (ಇಂದ್ರನಿಗೆ ಸಂತೋಷವುಂಟುಮಾಡುವುದರಿಂದ) ; ಇಂಥ ಇಂದ್ರನನ್ನು ಶ್ರದ್ಧಾಯುಕ್ತವಾದ ಮನಸ್ಸಿನಿಂದ ಪೂಜಿಸಲಿಚ್ಛಿಸುವೆನು.'

'ಎಲೈ ಪಶುಗಳೇ, ನೀವು ಕರುಗಳಿಂದ ಕೂಡಿರಿ. ಪುಷ್ಟಿಕರವಾದ ತೃಣಾದಿಗಳನ್ನು ಭುಜಿಸುತ್ತಾ, ಸುಖವಾಗಿ ಇಳಿಯಬಹುದಾದ ತಟಾಕಗಳಲ್ಲಿ ನಿರ್ಮಲವಾದ ನೀರನ್ನು ಕುಡಿಯುವವರಾಗಿರಿ. ನಿಮ್ಮನ್ನು ಕಳ್ಳಕಾಕರು ಹಿಂಸಿಸದಿರಲಿ. ವ್ಯಾಘ್ರಾದಿ ಶತ್ರುಗಳೂ ನಿಮ್ಮನ್ನು ಹಿಂಸಿಸದೆ ಇರಲಿ. ರುದ್ರನ ಆಯುಧವೂ ನಿಮ್ಮನ್ನು ಮುಟ್ಟದಿರಲಿ.'

### ಋಗ್ವೇದದಲ್ಲಿ ಲೌಕಿಕ ವಿಷಯ

ಆಧುನಿಕ ವಿಮರ್ಶಕರ ಅಭಿಪ್ರಾಯದಂತೆ ಋಕ್ಸಂಹಿತೆಯಲ್ಲಿ ಇರುವ ಸೂಕ್ತಗಳನ್ನು ಸ್ಥೂಲವಾಗಿ ಎರಡು ವಿಭಾಗಮಾಡಬಹುದು–ಧಾರ್ಮಿಕ ವಿಷಯಗಳನ್ನು ಕುರಿತವು, ಲೌಕಿಕ ವಿಚಾರಗಳನ್ನು ವಿವೇಚಿಸುವುವು ಎಂದು. ಅನೇಕಾನೇಕ ದೇವತೆಗಳನ್ನು ಕುರಿತ ಸ್ತೋತ್ರ ಸಮೂಹ ಧಾರ್ಮಿಕ ಮಹತ್ವವನ್ನು ಹೊಂದಿದೆ. ಪರಿಪಕ್ವವೂ ಭಕ್ತಿನಮ್ರವೂ ಆದ ಋಷಿಹೃದಯವನ್ನವು ಪ್ರತಿಬಿಂಬಿಸುತ್ತವೆ. ಋಗ್ವೇದದ ದರ್ಶನ, ಧರ್ಮ, ದೇವತಾಸ್ವರೂಪ, ಉನ್ನತಾದರ್ಶಗಳು, ಸಾಧನಾನುಷ್ಠಾನಗಳು ಮೊದಲಾದುವುಗಳನ್ನು ಅವು ತಿಳಿಸಿಕೊಡುತ್ತವೆ. ಮತ್ತೊಂದು ಬಗೆಯ ಸೂಕ್ತಗಳು ಲೌಕಿಕ ವಿಚಾರಗಳನೇಕವನ್ನು ಪ್ರತಿಪಾದಿಸುತ್ತವೆ. ಇವುಗಳಿಂದ ಅಂದಿನ ಸಾಮಾಜಿಕ ಜೀವನದ ಪರಿಚಯವಾಗುತ್ತದೆ. ಈ ಲೌಕಿಕ ವಿಚಾರಗಳ ಗುಂಪಿಗೆ ಕೆಳಗಿನ ಸೂಕ್ತಗಳನ್ನು ಸೇರಿಸಬಹುದು :

| | |
|---|---|
| ೧. ದಾನಸ್ತುತಿಗಳು | ೨. ಮಂಡೂಕ ಸೂಕ್ತ |
| ೩. ಔರ್ಧ್ವದೈಹಿಕ ಸೂಕ್ತಗಳು | ೪. ಅಕ್ಷಸೂಕ್ತ |
| ೫. ಸಂವಾದ ಸೂಕ್ತಗಳು | ೬. ವಿವಾಹ ಸೂಕ್ತ |
| ೭. ಐತಿಹಾಸಿಕ ಸೂಕ್ತಗಳು | ೮. ಅಭಿಚಾರಕ ಸೂಕ್ತಗಳು |
| ೯. ಬ್ರಹ್ಮೋದ್ಯಗಳು | |

ಋಗ್ವೇದದ ಮಂತ್ರಗಳು ಹೇಗೆ ಬಗೆಬಗೆಯಾಗಿವೆಯೆಂಬುದನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ ಪ್ರಸ್ತಾಪಿಸುತ್ತಾ ಸ್ತುತಿ, ಆಶೀರ್ವಾದ, ಶಪಥ, ಅಭಿಶಾಪ, ನಿಂದೆ, ಪರಿದೇವನೆ, ಆಚಿಖ್ಯಾಸಾ ಮೊದಲಾದುವೆಲ್ಲಾ ಮಂತ್ರದರ್ಶನ ಪ್ರಕರಣಗಳೆಂದು ವಿವರಿಸುತ್ತಾರೆ. ಬೃಹದ್ದೇವತೆಯಲ್ಲಿಯೂ ಈ ವಿಚಾರದ ಪ್ರಸ್ತಾಪವಿದೆ.

> 'ಮಂತ್ರಾ ನಾನಾಪ್ರಕಾರ ಸ್ಯುಃ ದೃಷ್ಟಾಯೇ ಮಂತ್ರದರ್ಶಿಭಿಃ ।
> ಸ್ತುತ್ಯಾಚೈವ ವಿಭೂತ್ಯಾಚ ಪ್ರಭಾವಾದ್ದೇವತಾತ್ಮನಃ ॥
> ಸ್ತುತಿಃ ಪ್ರಶಂಸಾ ನಿಂದಾಚ ಸಂಶಯಃ ಪರಿದೇವನಾ ।

ಸ್ಪೃಹಾಶೀಃ ಶಪ್ಥನಾ ಯಾಂಛಾ ಪ್ರಶ್ನಃ ಪ್ರೈಷಃ ಪ್ರವಲ್ಹಿಕಾ ||
ನಿಯೋಗಶ್ಚಾನುಯೋಗಶ್ಚ ಶ್ಲಾಘಾ ವಿಲಪಿತಂ ಚ ಯತ್ |
ಆಚಿಖ್ಯಾಸಾಥ ಸಂಲಾಪಃ ಪವಿತ್ರಾಖ್ಯಾನಮೇವ ಚ ||
ಆಹನಸ್ಯಾ ನಮಸ್ಕಾರಃ ಪ್ರತಿರಾಧಸ್ತಥೈವಚ
ಸಂಕಲ್ಪಶ್ಚ ಪ್ರಲಾಪಶ್ಚ ಪ್ರತಿವಾಕ್ಯಂ ತಥೈವಚ ||
ಪ್ರತಿಷೋಧೋಪದೇಶೌಚ ಪ್ರಮಾದಾಪಹ್ನವೌಚಹ |
ಉಪಪ್ರೈಷಶ್ಚ ಯಃ ಪ್ರೋಕ್ತ: ಸಂಜ್ವರೋ ಯಶ್ಚ ವಿಸ್ಮಯಃ ||
ಆಕ್ರೋಶೋಽಭಿಷ್ಟವಶ್ಚೈವ ಕ್ಷೇಪಃ ಶಾಪಸ್ತಥೈವಚ |'

(ಬೃಹದ್ದೇವತೆ 1-34 ರಿಂದ 1-39)

ಮಂತ್ರರಾಶಿ ಅಖಂಡ ಮತ್ತು ಅಪಾರ. ಇದರ ಅಭಿವ್ಯಕ್ತಿಗೆ ಭಾವವೈವಿಧ್ಯ ಕಾರಣ. ಋಷಿಗಳ ಅನುಭವ ಅನಂತವಾದುದು. ಆ ಅನುಭವಕ್ಕನುಗುಣವಾಗಿ ಮಂತ್ರಾಭಿವ್ಯಕ್ತಿ. ಹೀಗಾಗಿ ಸ್ತುತಿಯಿರುವಂತೆ ಆಶೀರ್ವಾದವೂ ಇದೆ, ಸಂಕಲ್ಪವೂ ಇದೆ, ಪ್ರಲಾಪವೂ ಇದೆ, ಶಾಪವೂ ಇದೆ, ಸಂಶಯವೂ ಇದೆ. ಮನೋರಾಜ್ಯ, ಭಾವನಾರಾಜ್ಯ ವಿಶ್ವದಷ್ಟು ವಿಸ್ತಾರವಾಗಿರುವುದರಿಂದ ಮಂತ್ರಗಳೂ ಅವುಗಳಿಗನುಗುಣವಾಗಿ ವಿಶ್ವಪ್ರಕಾರಗಳಾಗಿವೆ. ಹೀಗೆ ಯಾಸ್ಕರೂ ಶೌನಕರೂ ಮಂತ್ರವೈವಿಧ್ಯವನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಆಧುನಿಕ ವಿಮರ್ಶಕರು ಈ ಮೂಲ ಸೂತ್ರವನ್ನಂಗೀಕರಿಸಿದರೂ ವೇದಮಂತ್ರಗಳು ಋಷಿಗಳ ಕೃತಿಗಳೆಂದು ನಂಬುವ ಕಾರಣ ಅನೇಕಾನೇಕ ವಿಷಯಗಳನ್ನು ಕುರಿತು ಋಷಿಗಳು ಮಂತ್ರಗಳನ್ನು ರಚಿಸಿದ್ದಾರೆಂದೂ ಅವುಗಳೆಲ್ಲಾ ಇಲ್ಲಿವೆಯೆಂದೂ ಹೇಳಿದ್ದಾರೆ.

**ದಾನಸ್ತುತಿಗಳು :** ಮೇಲೆ ಸೂಚಿಸಿದ ವಿಚಾರಗಳನ್ನೊಂದೊಂದನ್ನೂ ಈಗ ನಾವು ವಿವೇಚಿಸೋಣ. ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ರಾಜರುಗಳ ಹೆಸರುಗಳು, ವಂಶಾವಳಿಗಳು, ಅವರು ಮಾಡಿದ ದಾನದ ವಿವರಗಳು, ಅವರಿಂದ ದಾನ ಪಡೆದ ಋಷಿಗಳ ಹೆಸರು, ಕುಲ, ಗೋತ್ರಗಳು ಇವುಗಳನ್ನು ಒಳಗೊಂಡ ಮಂತ್ರಗಳಿವೆ. ಇಂಥ ಮಂತ್ರಗಳನ್ನು ದಾನಸ್ತುತಿಗಳೆಂದು ಕರೆಯುತ್ತಾರೆ. ಬಹಳ ಹಿಂದಿನ ಕಾಲದಿಂದಲೂ ದಾನ ಪರಮಧರ್ಮವಾಗಿತ್ತೆಂಬುದನ್ನು ಇವು ತೋರಿಸುತ್ತವೆ. 'ತ್ರಯೋಧರ್ಮಸ್ಕಂಧಾಃ' ಎಂದು ಉಪನಿಷತ್ತುಗಳು ದಾನ, ತಪಸ್ಸು ಮತ್ತು ಯಜ್ಞಗಳನ್ನು ಕೊಂಡಾಡಿವೆ. ಇವುಗಳಲ್ಲಿ ಒಂದಾದ ದಾನಕ್ಕೆ ಎಂಥಾ ಮಹತ್ವವಿತ್ತೆಂಬುದನ್ನು ಇವು ತೋರಿಸುತ್ತವೆ. ತಮಗೆ ಮಹತ್ತಮವಾದ ನಿಧಿಯನ್ನು ಉದಾರಿಗಳಾದ ರಾಜರುಗಳ ಮೂಲಕ ದಾನ ಮಾಡಿಸಿದ ದೇವತೆಯನ್ನು ಪ್ರಸಕ್ತಾನುಪ್ರಸಕ್ತವಾಗಿ ಇವೂ ಸ್ತುತಿಸುತ್ತವೆ. ಕೆಲವು ದಾನಸ್ತುತಿಗಳನ್ನು ಇಲ್ಲಿ ಉದಾಹರಣೆಗಾಗಿ ಕೊಟ್ಟಿದೆ :

'ದ್ವೇ ನಪ್ತುರ್ದೇವವತಃ ಶತೇ ಗೋರ್ದ್ವಾ
ರಥಾ ವಧೂಮಂತಾ ಸುದಾಸಃ |
ಅರ್ಹನ್ನಗ್ನೇ ಪೈಜವನಸ್ಯ ದಾನಂ
ಹೋತೇವ ಸದ್ಮ ಪರ್ಯೇಮಿರೇಭನ್ ||'

'ಅಗ್ನಿದೇವನೇ, ದೇವವ್ರತರಾಜನ ಪೌತ್ರನೂ, ಪಿಜವನ ಪುತ್ರನೂ ಆದ ಸುದಾಸನಿಂದ ಇನ್ನೂರು ಹಸುಗಳ ಮತ್ತು ವಧೂಸಹಿತವಾದ ಎರಡು ರಥಗಳ ದಾನವನ್ನು ಪಡೆಯಲು ಇಂದ್ರನನ್ನು ಸ್ತುತಿಸಿ ಅರ್ಹನಾದ ನಾನು (ವಸಿಷ್ಠ) ವಷಟ್ಕಾರದೋಪಾದಿಯಲ್ಲಿ ಯಜ್ಞಗೃಹಕ್ಕೆ ಹೋಗುತ್ತೇನೆ.'

ದಶಾಶ್ವಾನ್ ದಶಕೋಶಾನ್ ದಶವಸ್ತ್ರಾದಿ ಭೋಜನಾ |
ದಶೋ ಹಿರಣ್ಯಪಿಂಡಾನ್ ದಿವೋದಾಸಾದಸಾನಿಷಮ್ || (6-47-23)

ಯ ಋಜಾ ಮಹ್ಯಂ ಮಾಮಹೇ ಸಹತ್ವಚಾ ಹಿರಣ್ಯಯಾ !
ಏಷ ವಿಶ್ವಾನ್ಯಭ್ಯಸ್ತು ಸೌಭಗಾಽಸಂಗಸ್ಯ ಸ್ವನ ದ್ರಥಃ || (8-13-2)

ಧೀಭಿಃ ಸಾತಾನಿ ಕಣ್ವಸ್ಯ ವಾಜಿನಃ ಪ್ರಿಯಮೇಧೈರಭಿದ್ಯುಭಿಃ |
ಷಷ್ಟಿಂ ಸಹಸ್ರಾನು ನಿರ್ಮಜಾಮಜೇ ನಿಯೂರ್ಥಾನಿ ಗವಾಂ ಋಷಿಂ || (8-4-20)

ತಾಮೇ ಅಶ್ವಿನಾ ಸನೀನಾಂ ವಿದ್ಯಾತಂ ನವಾನಾಮ್ |
ಯಥಾಚಿಚ್ಚೈದ್ಯಃ ಕಶುಃ ಶತಮುಷ್ಟ್ರಾನಾಂ ದದತ್ಸಹಸ್ರಾ ದಶಗೋನಾಂ ||' (8-5-37)

'ಅಧಯಚ್ಚಾರಥೇ ಗಣೇ ಶತಮುಷ್ಟ್ರಾಂ ಅಚಿಕ್ರದತ್ |
ಅಧ ಶ್ವಿತ್ನೇಷು ವಿಂಶತಂ ಶತಾ ||' (8-46-31)

ದಾನಮಾಡಿದವರಿಗೆ ಸದ್ಗತಿಯುಂಟಾಗುವುದು. ದಾನದಿಂದ ಸಮಾಜವೂ ಮುಂದುವರಿಯುತ್ತದೆ. ವ್ಯಕ್ತಿ ಮತ್ತು ಸಮಾಜದ ಸಂಬಂಧ ಮಧುರವಾಗುತ್ತದೆ. ದಾನಮಾಡಿದವನಿಗೆ ಐಹಿಕ ಮತ್ತು ಆಮುಷ್ಮಿಕಲಾಭವುಂಟು. ಈ ಅಂಶವನ್ನು ಕೆಳಗಿನ ಮಂತ್ರದಲ್ಲಿ ಹೇಳಿದೆ:

ಉಚ್ಚಾ ದಿವಿ ದಕ್ಷಿಣಾವಂತೋ ಅಸ್ಥು-
ರ್ಯೇ ಅಶ್ವದಾಃ ಸಹತೇ ಸೂರ್ಯೇಣ |
ಹಿರಣ್ಯದಾ ಅಮೃತತ್ವಂ ಭಜಂತೇ
ವಾಸೋದಾಃ ಸೋಮಪ್ರತಿರಂತ ಆಯುಃ ||' (10-107-2)

ಹತ್ತನೇ ಮಂಡಲದ 117ನೇ ಸೂಕ್ತದಲ್ಲಿ ದಾನದ ಮಹತ್ವವನ್ನು ಅನುಪಮವಾಗಿ ಕೊಂಡಾಡಿದ್ದಾರೆ. ಈ ಮಂತ್ರಕ್ಕೆ ಭಿಕ್ಷು ಎಂಬ ಹೆಸರಿನ ಆಂಗಿರಸಋಷಿ ದ್ರಷ್ಟಾ. ಧನದಾನ ಮತ್ತು ಅನ್ನದಾನವನ್ನು ಸ್ತುತಿಸಿರುವುದರಿಂದ ಅನ್ನದಾನವೇ ದೇವತೆ.

'ನ ವಾ ಉ ದೇವಾಃ ಕ್ಷುಧಮಿದ್ವಧಂ ದುದುಃ
ಉತಾಶಿತಮುಪಗಚ್ಛಂತಿ ಮೃತ್ಯವಃ |
ಉತೋ ರಯಿಃ ಪೃಣತೋ ನೋಪದಸ್ಯತಿ
ಉತಾ ಪೃಣನ್ ಮರ್ಡಿತಾರಂ ನ ವಿಂದತೇ ||' (10-117-1)

'ದೇವತೆಗಳು ಎಲ್ಲರಿಗೂ ಕೊಟ್ಟಿದ್ದು ಹಸಿವನ್ನಲ್ಲ ; ವಧೆಯನ್ನು. (ಇಂಥ ವಧರೂಪವಾದ ಹಸಿವನ್ನು ಅನ್ನದಾನದಿಂದ ಕಳೆಯುವವನೀಗ ದಾತನು). ದಾನ ಮಾಡದೆ ತಾನೇ ಊಟಮಾಡುವವನನ್ನು ಸಾವು ಸಮೀಪಿಸಿಯೇ ಬಿಡುತ್ತದೆ. ದಾನಿಯ ಧನ ಕರಗಿ ಹೋಗುವುದಿಲ್ಲ. ದಾನ ಮಾಡದವನ ಮೇಲೆ ದಯೆ ತೋರುವವರೂ ದೊರೆಯರು.'

'ಯ ಆಧ್ರಾಯ ಚಕಮಾನಾಯ ಪಿತ್ವಃ
ಅನ್ನವಾನ್‌ಸನ್ ರಫಿತಾಯ ಉಪಜಗ್ಮುಷೇ |
ಸ್ಥಿರಂ ಮನಃ ಕೃಣುತೇ ಸೇವತೇ ಪುರೋ-
ತೋ ಚಿತ್ಸ ಮರ್ಡಿತಾರಂ ನವಿಂದತೇ ||'

'ಸ ಇದ್ಭೋಜೋ ಯೋ ಗೃಹವೇ ದದಾತಿ
ಅನ್ನಕಾಮಾಯ ಚರತೇ ಕೃಶಾಯ |
ಅರಮಸ್ಮೈ ಭವತಿ ಯಾಮಹೂತಾ

ಉತಾಪರೀಷು ಕೃಣುತೇ ಸಖಾಯಮ್ ||'

'ನ ಸ ಸಖಾಯೋ ನ ದದಾತಿ ಸಖ್ಯೇ
ಸಚಾಭುವೇ ಸಚಮಾನಾಯ ಪಿತ್ವಃ |
ಅಪಾಸ್ಮಾತ್ ಪ್ರೇಯಾನ್ನತದೋಕೋ ಅಸ್ತಿ
ಪೃಣಂತಂ ಅನ್ಯಂ ಅರಣಂ ಚಿದಿಚ್ಛೇತ್ ||'

'ಪೃಣೀಯಾದಿತ್ ನಾಥ ಮಾನಾಯ ತವ್ಯಾನ್
ದ್ರಾಘೀಯಾಂಸಂ ಅನುಪಶ್ಯೇತ ಪಂಥಾಂ |
ಓ ಹಿವರ್ತಂತೇ ರಥ್ಯೇವ ಚಕ್ರಾ
ಅನ್ಯಮನ್ಯಮುಪತಿಷ್ಠಂತ ರಾಯಃ ||'

'ಮೋಘಮನ್ನಂ ವಿಂದತೇ ಅಪ್ರಚೇತಾಃ
ಸತ್ಯಂ ಬ್ರವೀಮಿ ವಧ ಇತ್ಸತಸ್ಯ |
ನಾರ್ಯಮಣಂ ಪುಷ್ಯತಿ ನೋ ಸಖಾಯಂ
ಕೇವಲಾಘೋ ಭವತಿ ಕೇವಲಾದೀ ||'

'ಕೃಷನ್ ಇತ್‌ಫಾಲಃ ಅಶಿತಂಕೃಣೋತಿ
ಯನ್ ಅಧ್ವಾನಂ ಅಪವೃಂಕ್ತೇ ಚರಿತ್ರೈಃ |
ವದನ್ ಬ್ರಹ್ಮಾವದತಃ ವನೀಯಾನ್
ಪೃಣನ್ನಾಪಿಃ ಅಪೃಣಂತಮಭಿಷ್ಯಾತ್ ||'

(10-117-2 ರಿಂದ 10-117-7)

'ದುರ್ಬಲನೂ, ಅನ್ನಬೇಡುವವನೂ, ಬಡತನಕ್ಕೊಳಗಾದವನೂ 'ಆದವನು ಮನೆ ಬಾಗಿಲಿಗೆ ಬಂದು ಬೇಡಿದಾಗ ಸಮೃದ್ಧಿಯಾಗಿ ಅನ್ನವಿದ್ದರೂ ಯಾರು ಮನಸ್ಸನ್ನು ಕಲ್ಲುಮಾಡಿಕೊಂಡು ದಾನಮಾಡುವುದಿಲ್ಲವೋ ಮತ್ತು ಯಾರು ಅವನ ಮುಂದೆಯೇ ಭೋಗಗಳನ್ನನುಭವಿಸುವನೋ ಅಂಥವನಿಗೆ ಕರುಣೆ ತೋರುವವರು ದೊರೆಯುವುದಿಲ್ಲ.'

'ಅನ್ನಬೇಡಿ ಮನೆಗೆ ಬಂದ ಬಡವನಿಗೆ ಅನ್ನವನ್ನು ನೀಡುವವನೀಗ ದಾತಾ. ಯಜ್ಞದಲ್ಲಿ ಇಷ್ಟಾರ್ಥಗಳಿಂದ ಫಲಗಳು ಅವನಿಗೇ ಸಿದ್ಧಿಸುವುವು. ಅಲ್ಲದ ಅಂಥವನನ್ನು ಅವನಿಗಾಗ ದವರೂ ಸ್ನೇಹಮಾಡಿಕೊಳ್ಳುವರು.'

'ಆಪ್ತನಾದ ಮಿತ್ರನಿಗೆ ಧನಾದಿಗಳನ್ನು ಕೊಡದವನು ಸಖನೇ ಅಲ್ಲ. ಅಂಥ ದಾನ ಮಾಡದವನನ್ನು ಅವನೂ ತೊರೆದು ಹೊರಟುಹೋದಾನು. ಆಗ ಪ್ರಿಯರಿಂದ ಬಿಡಲ್ಪಟ್ಟ ಅದು ಮನೆ ಎಂದೂ ಎನಿಸಿಕೊಳ್ಳಲಾರದೆ ಹೋದೀತು! ಧನದಾನಮಾಡುವ ಮತ್ತೊಬ್ಬನನ್ನು ಆತನು (ಆ ಮಿತ್ರನು) ಸ್ವಾಮಿಯಾಗಿ ಹೊಂದಿಯಾನು.'

'ಧನವುಳ್ಳವನು ಬೇಡುವವನಿಗೆ ಹಣವನ್ನು ಕೊಡಲೇಬೇಕು. ಕೊಟ್ಟರೀಗ ಅವನು ದೀರ್ಘವಾದ ಸುಕೃತದ ಹಾದಿಯನ್ನು ನೋಡಿಯಾನು. ಹಣ ಎಂದೂ ಒಂದು ಕಡೆ ನಿಲ್ಲಬಾರದು. ರಥದ ಚಕ್ರಗಳು ಮೇಲೆ ಕೆಳಗೆ ಹೇಗೆ ಬದಲಾಗುತ್ತಾ ಚಲಿಸುವುವೋ ಹಾಗೆ ಹಣವೂ ಒಬ್ಬನಿಂದ ಮತ್ತೊಬ್ಬನ ಕಡೆಗೆ ಚಲಿಸುವುದು.'

'ದಾನಮಾಡುವ ಬುದ್ಧಿಯೇ ಬಾರದವನು ಅನ್ನ ಪಡೆಯುವುದು ವ್ಯರ್ಥ. ಸತ್ಯವಾಗಿ ನಾನು ಹೇಳುತ್ತೇನೆ (ವ್ಯರ್ಥ ಮಾತ್ರವಲ್ಲ) ಅದು ಅವನ ವಧೆಯೇ. ಹವಿಃ ಪ್ರದಾನದಿಂದ ಅವನು ದೇವನನ್ನೂ ಸೇವಿಸಿ, ಮಿತ್ರನನ್ನು ಪೋಷಿಸಲಿ. ಕೇವಲ ತಾನೇ ತಿನ್ನುವ ಅವನು ಕೇವಲ ಪಾಪವಂತನಾಗುತ್ತಾನೆ.

'ನೇಗಿಲು ಕೃಷಿಮಾಡಿ ತನ್ನ ಯಜಮಾನನು ಊಟಮಾಡುವಂತೆ ಮಾಡುವುದು. ದಾರಿ ನಡೆದು ಮನುಷ್ಯನು ತನ್ನ ಗತಿಗಳಿಂದ ಧನ ಸಂಪಾದನೆ ಮಾಡುವನು. ಶಾಸ್ತ್ರಾದಿಗಳನ್ನು ಹೇಳುವವನು ನುಡಿಯದವರಿಗಿಂತ ಹೆಚ್ಚು ಪ್ರಿಯಕರನಾಗುವನು. (ಹೀಗೆ ತಮ್ಮ ತಮ್ಮ ಕರ್ಮಗಳಲ್ಲಿ ಪ್ರವರ್ತಿಸಿ ಉಪಕಾರಕರಾಗುವಂತೆ) ದಾನಿಯು ದಾನ ಮಾಡದ ಕೃಪಣನಿಗಿಂತ ಸಮೀಪ ಬಂಧುವಾಗುತ್ತಾನೆ.'

ಹೀಗೆ ದಾನವನ್ನು ಕೊಂಡಾಡುವ ಮಂತ್ರಗಳನೇಕವಿವೆ ಋಕ್ಸಂಹಿತೆಯಲ್ಲಿ. ಪ್ರಾಚೀನರಾದ ಭಾರತೀಯರ ದೃಷ್ಟಿಯಲ್ಲಿ ಇವು ಐತಿಹಾಸಿಕ ಘಟನೆಗಳನ್ನು ಸೂಚಿಸುವುದಿಲ್ಲ. ಏಕೆಂದರೆ ಅಪೌರುಷೇಯವಾದ ವೇದದಲ್ಲಿ ಇವು ಅಸಂಭಾವ್ಯವಾದವು. ಆದ್ದರಿಂದ ಇವು ದಾನಮಾಡಲು ಪ್ರೇರಿಸುವುದಕ್ಕಾಗಿ ಆಗಿರುವ ಆಖ್ಯಾನಗಳ ಕಲ್ಪನೆಗಳು. ವೈದಿಕಾಖ್ಯಾನಗಳೆಲ್ಲ ಪ್ರಯೋಜನಾರ್ಥವಾಗಿ ಬಂದವು ಎಂಬುದು ಮೀಮಾಂಸಕರ ಸಿದ್ಧಾಂತ.[60]

## ಮಂಡೂಕ ಸೂಕ್ತ

ಋಗ್ವೇದದ ಏಳನೇ ಮಂಡಲದ 103ನೇ ಸೂಕ್ತಕ್ಕೆ ಮಂಡೂಕ ಸೂಕ್ತವೆಂದು ಹೆಸರು. ವಾರ್ಷಿಕ ಸೂಕ್ತಗಳೊಡನೆ ಇದನ್ನೂ ಜಪಿಸಬೇಕೆಂದು ಋಗ್ವಿಧಾನದಲ್ಲಿ ಹೇಳಿದೆ. ವಸಿಷ್ಠರು ಮಳೆಗರೆಸಲು ಮಳೆಬೀಳುವ ಸೂಕ್ತ ಜಪಿಸಿದರೆಂದೂ ಆಗ ಮಂಡೂಕಗಳು ಅದನ್ನು ಅನುಮೋದಿಸಿ ಧ್ವನಿಗೈದವೆಂದೂ ಇದರಿಂದ ಸಂತುಷ್ಟರಾದ ವಸಿಷ್ಠರು ಮಂಡೂಕಗಳನ್ನು ಸ್ತುತಿಸಿದರೆಂದೂ ಯಾಸ್ಕರು ಹೇಳುತ್ತಾರೆ (ನಿ. 9-6).

ಪಾಶ್ಚಾತ್ಯ ಪಂಡಿತರಲ್ಲಿ ಕೆಲವರು ಇದರಲ್ಲಿ ಬ್ರಾಹ್ಮಣರನ್ನು ಕುರಿತ ಅಣಕವಿದೆ ಎನ್ನುತ್ತಾರೆ. ಆದರೆ ಮ್ಯಾಕ್ಸ್‌ಮುಲ್ಲರ್ ಮುಂತಾದವರು ಇದನ್ನು ಬ್ರಾಹ್ಮಣರೇ ಸೇರಿಸಿರುವರಾದ ಕಾರಣ ಅವರನ್ನು ಕುರಿತ ಅಣಕವಿದರಲ್ಲಿ ಇಲ್ಲವೆಂಬ ತೀರ್ಮಾನಕ್ಕೆ ಬಂದಿದ್ದಾರೆ. ಈ ಸೂಕ್ತದಿಂದ ಕೆಲವು ಮಂತ್ರಗಳನ್ನಿಲ್ಲಿ ಉದ್ಧರಿಸಿದೆ :

'ಸಂವತ್ಸರಂ ಶಶಯಾನಾ ಬ್ರಾಹ್ಮಣಾ ವ್ರತಚಾರಿಣಃ |
ವಾಚಂ ಪರ್ಜನ್ಯಜಿನ್ವಿತಾಂ ಪ್ರಮುಂಡೂಕಾ ಅವಾದಿಷುಃ ||'

'ದಿವ್ಯಾ ಆಪೋ ಅಭಿ ಯದೇನ ಮಾಯನ್
ದೃತಿಂ ನಶುಷ್ಕಂ ಸರಸೀ ಶಯಾನಮ್ |
ಗವಾಮಹ ನ ಮಾಯುರ್ವತ್ಸಿನೀನಾಂ
ಮಂಡೂಕಾನಾಂ ವಗ್ನುರತ್ರಾ ಸಮೇತಿ ||'

'ಅನ್ಯೋ ಅನ್ಯಮನು ಗೃಭ್ಣಾತ್ಯೇನೋಃ
ಅಪಾಂ ಪ್ರಸರ್ಗೇ ಯದಮಂದಿಷಾತಾಮ್ |
ಮಂಡೂಕೋ ಯದಭಿವೃಷ್ಟಃ ಕನಿಷ್ಕನ್
ಪೃಶ್ನಿಃ ಸಂಪೃಂಕ್ತೇ ಹರಿತೇನ ವಾಚಮ್ ||'

'ಯದೇಷಾಮನ್ಯೋ ಅನ್ಯಸ್ಯ ವಾಚಂ
ಶಕ್ತಸ್ಯೇವ ವದತಿ ಶಿಕ್ಷಮಾಣಃ |
ಸರ್ವಂ ತದೇಷಾಂ ಸಮೃಧೇವ ಪರ್ವ
ಯತ್ಸುವಾಚೋ ವದಥನಾಧ್ಯಪ್ಸು ||'

60. ಪೂ. ಮೀ. ಸೂ. 1-2-10

'ಗೋಮಾಯುರೇಕೋ ಅಜಮಾಯುರೇಕಃ
ಪೃಶ್ನಿರೇಕೋ ಹರಿತ ಏಕ ಏಷಾಮ್ |
ಸಮಾನಂ ನಾಮ ಬಿಭ್ರತೋ ವಿರೂಪಾಃ
ಪುರುತ್ರಾವಾಚಂ ಪಿಪಿಶುರ್ವದಂತಃ ||'

'ಬ್ರಾಹ್ಮಣಾಸೋ ಅತಿರಾತ್ರೇ ನ ಸೋಮೇ
ಸರೋನ ಪೂರ್ಣಮಭಿತೋ ವದಂತಃ |
ಸಂವತ್ಸರಸ್ಯ ತದಹಃ ಪರಿಷ್ಠ
ಯನ್ಮಂಡೂಕಾಃ ಪ್ರಾವೃಷೀಣಂ ಬಭೂವ ||'

'ಗೋಮಾಯುರದಾದಜಮಾಯುರದಾತ್
ಪೃಶ್ನಿರವಾದ್ಧರಿತೋ ನೋ ವಸೂನಿ |
ಗವಾಂ ಮಂಡೂಕಾ ದದತೋ ಶತಾನಿ
ಸಹಸ್ರಸಾವೇ ಪ್ರತಿರಂತ ಆಯುಃ ||' (7-103-1, 2, 4, 5, 6, 7, 10)

'ಒಂದು ವರ್ಷಕಾಲ ವ್ರತವನ್ನು ಆಚರಿಸಿದ ಬ್ರಾಹ್ಮಣರಂತೆ ಒಂದು ಸಂವತ್ಸರ ಮಳೆಗಾಗಿ ತಪಿಸುತ್ತಿದ್ದಂತೆ ಇರುವ ಈ ಮಂಡೂಕಗಳು ಪರ್ಜನ್ಯನಿಗೆ ಸಂತೋಷವಾಗುವಂತೆ ಮಾತುಗಳನ್ನಾಡುತ್ತವೆ.'

'ದ್ಯುಲೋಕದಲ್ಲಿರುವ ಜಲ ಹರಿದಂತೆ, ಮಳೆ ಶುಷ್ಕವಾದ ಸರೋವರದಲ್ಲಿ ವಾಸಿಸುತ್ತಿದ್ದ ಮಂಡೂಕಗಣಕ್ಕೆ ಸುರಿದಾಗ ಈ ಮಂಡೂಕಗಳ ಶಬ್ದವು ಕರುಗಳನ್ನು ಕೂಡಿಕೊಂಡ ಪಶುಗಳ ಕಲಕಲಶಬ್ದದಂತೆ ಉಂಟಾಗುತ್ತದೆ.'

'ಇವೆರಡು ಕಪ್ಪೆಗಳಲ್ಲಿ ಒಂದು ಮತ್ತೊಂದನ್ನನುಸರಿಸಿ ಹೋಗಿ ಹಿಡಿದುಕೊಳ್ಳುತ್ತದೆ– ಮಳೆ ವರ್ಷಿಸಲು ಇವು ಸಂತಸಗೊಂಡ ಕಾರಣ. ಮಳೆಯಿಂದ ಅಭಿಷಿಕ್ತವಾದಾಗ ಪೃಶ್ನಿವರ್ಣದ (ಚುಂಚು ಮಿಂಚಿನ) ಕಪ್ಪೆ ಕುಪ್ಪಳಿಸುತ್ತಾ ಹಸಿರು ಬಣ್ಣದ ಕಪ್ಪೆಯೊಡನೆ ಸೇರಿ ಪರಸ್ಪರ ನಲಿದು ಮಾತಾಡುತ್ತದೆ.'

'ಶಿಷ್ಯನು ಶಿಕ್ಷಕನ ಮಾತನ್ನನುಸರಿಸುವಂತೆ, ಎಲೈ ಮಂಡೂಕಗಳೇ, ನಿಮ್ಮಲ್ಲಿ ಒಂದು ಮತ್ತೊಂದರ ಮಾತನ್ನನುಕರಿಸುತ್ತದೆ. ಶೋಭನವಾದ ವಾಕ್ಕುಳ್ಳ ನೀವು ಮಳೆಯ ನೀರಿನ ಮೇಲೆ ಕುಪ್ಪಳಿಸುತ್ತಾ ಶಬ್ದ ಮಾಡುವಾಗ, ನಿಮ್ಮ ಶರೀರಗಳು ಸರ್ವಾವಯವಗಳಿಂದ ಸಂಪನ್ನವಾಗಿದೆಯೆಂಬುದು ತಿಳಿಯುವುದು.'

ಬೇಸಗೆಯಲ್ಲಿ ಮೃದ್ಭಾವವನ್ನು ಹೊಂದಿದ್ದ ಇವು ಮಳೆಗಾಲದಲ್ಲಿ ಸರ್ವಾಂಗ ಶೋಭಿತವಾಗಿ ಕಾಣಿಸಿಕೊಳ್ಳುತ್ತವೆ.

'ಈ ಕಪ್ಪೆಗಳಲ್ಲಿ ಒಂದು ಹಸುವಿನಂತೆಯೂ ಮತ್ತೊಂದು ಆಡಿನಂತೆಯೂ ಶಬ್ದ ಮಾಡುತ್ತದೆ. ಇವುಗಳಲ್ಲಿ ಒಂದು ಪೃಶ್ನಿವರ್ಣದ್ದಾದರೆ ಮತ್ತೊಂದು ಹಸಿರು ಬಣ್ಣದ್ದು. ಹೀಗೆ ನಾನಾ ರೂಪವಾಗಿದ್ದರೂ ಇವು 'ಮಂಡೂಕ' ಎಂಬ ಸಮಾನವಾದ ಹೆಸರನ್ನು ಹೊಂದಿ ಅನೇಕ ದೇಶಗಳಲ್ಲಿ ಶಬ್ದ ಮಾಡುವುವಾಗಿ ಕಾಣಿಸಿಕೊಳ್ಳುತ್ತವೆ.'

'ಅತಿರಾತ್ರವೆಂಬ ಸೋಮಯಾಗದಲ್ಲಿ ಬ್ರಾಹ್ಮಣರು ರಾತ್ರಿಯೆಲ್ಲ ಪರ್ಯಾಯದಿಂದ ಸ್ತುತಿಸುವಂತೆ ಈಗ ತುಂಬಿದ ಸರೋವರದ ಸುತ್ತಲೂ ರಾತ್ರಿಯೆಲ್ಲ ಶಬ್ದ ಮಾಡುವ ನೀವು ಮಳೆ ಬಿದ್ದ ದಿನವೆಲ್ಲಾ ಎಲ್ಲೆಲ್ಲಿಯೂ ಇರುವಿರಿ.'

'ಹಸುವಿನಂತೆ ಶಬ್ದಮಾಡುವ ಮಂಡೂಕ ನಮಗೆ ಧನಾದಿಗಳನ್ನು ಕೊಡಲಿ; ಆಡಿನಂತೆ

ವಟಗುಟ್ಟುವ ಕಪ್ಪೆಯೂ ಕೊಡಲಿ. ಪೃಶ್ನಿವರ್ಣದ ಹಾಗೂ ಹಸಿರು ಬಣ್ಣದ ಕಪ್ಪೆಯೂ ಧನಾದಿಗಳನ್ನು ನಮಗೆ ಕೊಡಲಿ. ವರ್ಷಾಕಾಲ ಬರಲಾಗಿ ಎಲ್ಲ ಮಂಡೂಕಗಳೂ ಅಸಂಖ್ಯವಾದ ಹಸುಗಳನ್ನು ನಮಗೆ ಕೊಟ್ಟು ನಮ್ಮನ್ನು ದೀರ್ಘಾಯುಗಳನ್ನಾಗಿ ಮಾಡಲಿ.'

ಈ ಸೂಕ್ತದಲ್ಲಿ ಮಳೆಗಾಲದ ಸನ್ನಿವೇಶವೊಂದರ ಸುಂದರ ಚಿತ್ರವಿದೆ. ಕಪ್ಪೆಗಳು ಮಳೆಬಿದ್ದ ಮಾರನೇ ದಿನ ಎಲ್ಲೆಲ್ಲಿಯೋ ಕಾಣಿಸಿಕೊಳ್ಳುತ್ತವೆ ; ಆ ದಿನ ರಾತ್ರಿ ಅವುಗಳ ಶಬ್ದ ದಿಕ್ಕುಗಳಲ್ಲೆಲ್ಲಾ ಪ್ರತಿಧ್ವನಿಸುತ್ತದೆ. ಈ ಒಂದು ಸಹಜಸುಂದರವಾದ ಪ್ರಾಕೃತಿಕ ಸನ್ನಿವೇಶವನ್ನು ಇಲ್ಲಿ ಕಾಣಬಹುದು. ಕೊನೆಯಲ್ಲಿ ಮಂಡೂಕಗಳನ್ನು ದೇವತೆಯೆಂದು ಭಾವಿಸಿ, ಸ್ತುತಿಸಿ, ಅವುಗಳಿಂದಲೂ ಅನುಗ್ರಹವನ್ನು ಬೇಡಿದೆ. ಆದ್ದರಿಂದಲೇ ಇದೂ ಧಾರ್ಮಿಕ ಮಹತ್ವವನ್ನೇ ಹೊಂದಿದೆಯೆಂದು ಸಂಪ್ರದಾಯಿಕರ ಸಿದ್ಧಾಂತ.

## ಔರ್ಧ್ವ ದೈಹಿಕ ಸೂಕ್ತಗಳು

ಋಗ್ವೇದದ ಹತ್ತನೆಯ ಮಂಡಲದಲ್ಲಿ ಬರುವ ಐದು ಸೂಕ್ತಗಳು ಮರಣ ಮತ್ತು ಮರಣಾನಂತರದ ವಿಚಾರಗಳನ್ನು ತಿಳಿಸುವುವು. ಈ ಶರೀರವು ಬಿದ್ದು ಹೋದಮೇಲೆ ಏನೂ ಉಳಿಯದೆ ಹೋಗುವುದಿಲ್ಲ. ದೇಹ ವಿನಾಶಿಯಾದರೂ ಅದರಲ್ಲಿ ಅವಿನಾಶಿಯಾದ ತತ್ತ್ವವೊಂದಿದೆ. ಅದೇ ಆತ್ಮಾ. ಈ ಆತ್ಮನು ಜಡದೇಹವನ್ನು ಪರಿತ್ಯಜಿಸಿ ನಿತ್ಯಲೋಕವನ್ನು ಸೇರುವನು. ಪಿತೃರಾಜನಾದ ಯಮನೊಡನೆಯೂ ತನ್ನ ಸ್ವಂತ ಪಿತೃಗಳೊಡನೆಯೂ, ವರುಣದೇವನೊಡನೆಯೂ ಸೇರಿ ಅತಿಶಯವಾದ ಆನಂದವನ್ನನುಭವಿಸುವನು. ಇಲ್ಲಿ ದೇಹ ಬಿಟ್ಟವನು ಅಕ್ಷತ ಶರೀರನಾಗಿ ಪಿತೃಗಳೆಡೆಗೆ ಸಾರುವನೆಂದೂ ಅಲ್ಲಿ ಅವನು ಅಮರನಾಗಿರುವನೆಂದೂ ಹೇಳಿದೆ. 'ತ್ಮನ್' ಎಂಬ ಶಬ್ದದಿಂದ ಆತ್ಮನನ್ನುದ್ದೇಶಿಸಿದೆ ಇಲ್ಲಿ— (1-63-8).

ಈ ಪ್ರೇತಸೂಕ್ತಗಳಲ್ಲಿ ಬರುವ ಅನೇಕಾನೇಕ ಮಂತ್ರಗಳನ್ನು ಇಂದೂ ಉಪಯೋಗಿಸುತ್ತಿದ್ದಾರೆ. ಈ ಮಂತ್ರಗಳ ಅಧ್ಯಯನದಿಂದ ಜೀವನು ಪಾಂಚಭೌತಿಕ ದೇಹವನ್ನು ಬಿಟ್ಟಮೇಲೆ ಹೋಗುವ ಮಾರ್ಗಗಳ ಮತ್ತು ಲೋಕದ ವಿಚಾರ ತಿಳಿಯುತ್ತದೆ. ದಹನ ಮತ್ತು ಖನನಗಳೆರಡಕ್ಕೂ ಅನ್ವಯಿಸುವ ಮಂತ್ರಗಳು ಇಲ್ಲಿವೆ.

ಖನನಕ್ಕೆ ಅನ್ವಯಿಸುವಂತಿದೆ ಕೆಳಗಿನ ಮಂತ್ರ:

'ಉಪಸರ್ಪ ಮಾತರಂ ಭೂಮಿಮೇತಾಂ
ಉರುವ್ಯಚಸಂ ಪೃಥಿವೀಂ ಸುಶೇವಾಂ |
ಊರ್ಣಮ್ರದಾ ಯುವತಿರ್ದಕ್ಷಿಣಾವತೇ
ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್ ||' (10-18-10)

'ತಾಯಿಯಾದ ಭೂಮಿಯನ್ನನುಪ್ರವೇಶಿಸು. ಇವಳು ವಿಸ್ತೀರ್ಣಳೂ, ಬಹಳ ವ್ಯಾಪಕಳೂ ಸರ್ವರಿಗೂ ಸುಖಕರಳೂ ಆದವಳು. ಯುವತಿಯಾದ ಇವಳು ಯಜಮಾನನಿಗೆ (ಬಾಧಕ ಳಾಗಿಲ್ಲ) ಉಣ್ಣೆಯಂತೆ ಮೃದುವಾಗಿರುವವಳು. ಮೃತ್ಯುದೇವತೆಯ ಸಮೀಪಸ್ಥಾನದಿಂದ ನಿನ್ನನ್ನು ಈ ಪೃಥಿವೀ ಕಾಪಾಡಲಿ.'

ಈ ಮಂತ್ರವನ್ನು ಖನನಕ್ಕೆ ಅನ್ವಯಿಸುತ್ತಿದ್ದರೆಂದು ಕೆಲವು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ದಹನಾನಂತರ ಸಂಚಿತವಾದ ಅಸ್ಥಿಗಳನ್ನು ಭೂಮಿಯಲ್ಲಿ ಪ್ರಕ್ಷೇಪಣ ಮಾಡುವಾಗ ಹೇಳುತ್ತಿದ್ದರೆಂದು ಸಾಯಣರು ಹೇಳಿ ಆಶ್ವಲಾಯನ ಗೃಹ್ಯಸೂತ್ರದ ಆಧಾರವನ್ನು ಉದಾಹರಿಸಿದ್ದಾರೆ.

'ಇವನ ಉಸಿರು ಮೇಲಕ್ಕೇಳುವಂತೆ ಮಾಡು. ಇವನನ್ನು ಪೀಡಿಸಬೇಡ. ಇವನನ್ನು ಚೆನ್ನಾಗಿ ಉಪಚರಿಸುವವಳಾಗು. ಇವನ ವಿಷಯದಲ್ಲಿ ಒಳ್ಳೆಯ ಗೌರವವುಳ್ಳವಳಾಗು. ತಾಯಿಯು ತನ್ನ ಬಾಲಕನನ್ನು ವಸ್ತ್ರಾಂತದಿಂದ ಆಚ್ಛಾದಿಸುವಂತೆ, ಎಲೌ ಭೂಮಿಯೇ, ನೀನೂ ಇವನನ್ನು ಅಭಿಮುಖ್ಯದಿಂದ ಆಚ್ಛಾದಿಸು'—ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ:

'ಮಾತಾ ಪುತ್ರಂ ಯಥಾ ಸಿಚಾಭ್ಯೇನಂ ಭೂಮ ಊರ್ಣುಹಿ.' (10-18-11)

ಈ ಮಂತ್ರದಿಂದ ಗರ್ತದಲ್ಲಿಟ್ಟ ಅಸ್ಥಿಗಳ ಮೇಲೆ ಮಣ್ಣನ್ನು ಹರಡಬೇಕೆಂದು ಆಶ್ವ. ಗೃಹ್ಯಸೂತ್ರದಲ್ಲಿ (4-5-6) ಹೇಳಿದೆ.

ಈ ಮಂತ್ರಗಳು ಖನನದಲ್ಲಿಯೂ ಪ್ರಯುಕ್ತವಾಗಿದ್ದಿರಬಹುದೆಂದು ವಿದ್ವಾಂಸರ ಮತ.[61] ಇವಲ್ಲದೆ ದಹನಕ್ಕಾಗಿಯೇ ವಿಧಿಸಿರುವ ಮಂತ್ರಗಳೂ ಅನೇಕವಿದೆ. ಅವುಗಳಲ್ಲಿ ಕೆಲವನ್ನು ಕೆಳಗೆ ಉದಾಹರಿಸಿದೆ:

'ಮೈನಮಗ್ನೇ ವಿ ದಹೋ ಮಾಭಿಶೋಚೋ
ಮಾಸ್ಯ ತ್ವಚಂ ಚಿಕ್ಷಿಪೋ ಮಾ ಶರೀರಮ್ |
ಯದಾಶೃತಂ ಕೃಣವೋ ಜಾತವೇದೋ-
ಽಥೇಮೇನಂ ಪ್ರಹಿಣುತಾತ್ಪಿತೃಭ್ಯಃ ||'
'ಶೃತಂ ಯದಾ ಕರಸಿ ಜಾತವೇದೋ
ಽಥೇಮೇನಂ ಪರಿದಾತ್ತಾತ್ ಪಿತೃಭ್ಯಃ |
ಯದಾಗಚ್ಛಾತ್ಯಸುನೀತಿಮೇತಾ-
ಮಥಾ ದೇವಾನಾಂ ವಶನೀರ್ಭವಾತಿ ||'
'ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ
ದ್ಯಾಂಚಗಚ್ಛ ಪೃಥಿವೀಂಚ ಧರ್ಮಣಾ |
ಅಪೋವಾ ಗಚ್ಛ ಯದಿತತ್ರತೇ ಹಿತಂ
ಓಷಧೀಷು ಪ್ರತಿತಿಷ್ಠಾ ಶರೀರೈಃ ||'
'ಅಜೋಭಾಗ ಸ್ತಪಸಾ ಸಂತಪಸ್ವ
ತಂತೇಶೋಚಿಸ್ತಪತು ತಂತೇ ಅರ್ಚಿಃ |
ಯಾಸ್ತೇ ಶಿವಾಸ್ತನ್ವೋ ಜಾತವೇದ-
ಸ್ತಾಭಿರ್ವಹೈನಂ ಸುಕೃತಾಮು ಲೋಕಮ್ ||'
'ಅವಸೃಜ ಪುನರಗ್ನೇ ಪಿತೃಭ್ಯೋ
ಯಸ್ತ ಆಹುತಿಶ್ಚರತಿ ಸ್ವಧಾಭಿಃ |
ಆಯುರ್ವಸಾನ ಉಪವೇತು ಶೇಷಃ
ಸಂಗಚ್ಛತಾಂ ತನ್ವಾ ಜಾತವೇದಃ ||' (10–6-1ರಿಂದ 5)

'ಎಲೈ ಅಗ್ನಿಯೇ, ಇವನನ್ನತಿಯಾಗಿ ದಹಿಸಬೇಡ. ಸಂತಾಪಗೊಳಿಸಬೇಡ. ಇವನ ಚರ್ಮವನ್ನು ಇತ್ತಲತ್ತ ವಿಕ್ಷೇಪಗೊಳಿಸಬೇಡ ಶರೀರವನ್ನೂ ಚದುರಿಸಬೇಡ. ಎಲೈ ಜಾತವೇದನೇ, ಇವನನ್ನು ಚೆನ್ನಾಗಿ ಪಕ್ವಗೊಳಿಸಿದಮೇಲೆ ಈ ಮೃತನನ್ನು ಪಿತೃಗಳ ಸಮೀಪಕ್ಕೆ ಪ್ರೇರಿಸು.'

'ಎಲೈ ಜಾತವೇದನೇ, ಈ ಪ್ರೇತ ಶರೀರವನ್ನು ಪಕ್ವಗೊಳಿಸಿದ ಮೇಲೆಯೇ ಪಿತೃಗಳಿಗೆ ಇವನನ್ನು ಒಪ್ಪಿಸು. ಈ ಪ್ರೇತವು ಅಗ್ನಿಯಿಂದ ಪ್ರಾಣಪ್ರೇರಣವನ್ನು ಪಡೆದೇ ದೇವತೆಗಳ ವಶಕ್ಕೆ ಸೇರಲಿ.'

61. Winternitz—History of Indian Literature, Vol.1, p. 96.

'ಎಲೈ ಪ್ರೇತವೇ, ನಿನ್ನ ಚಕ್ಷುರಿಂದ್ರಿಯ ಸೂರ್ಯನನ್ನು ಸೇರಲಿ ; ಪ್ರಾಣವಾಯುವನ್ನು ಸೇರಲಿ. ನೀನು ನಿನ್ನ ಸುಕೃತವನ್ನನುಭವಿಸಲು ದ್ಯುಲೋಕವನ್ನಾಗಲೀ ಪೃಥಿವೀಲೋಕವನ್ನಾಗಲೀ ಸೇರು. ಅಂತರಿಕ್ಷದಲ್ಲಿ ನಿನ್ನ ಕರ್ಮಫಲ ಸ್ಥಾಪಿತವಾಗಿದ್ದರೆ ಅದನ್ನಾದರೂ ಹೊಂದು. ಓಷಧಿಗಳಲ್ಲಿ ನಿನ್ನ ಶರೀರಾವಯಗಳಿಂದ ನಿಲ್ಲು.'

'ಎಲೈ ಅಗ್ನಿಯೇ, ನಿನ್ನ ಕಾವಿನಿಂದ ಇವನ ಜನನರಹಿತವಾದ (ಶರೀರೇಂದ್ರಿಯಾದಿ ಭಾಗವ್ಯತಿರಿಕ್ತವಾಗಿ ಅಂತರ ಪುರುಷ ಲಕ್ಷಣವಾದ) ಆ ಭಾಗವನ್ನು ಚೆನ್ನಾಗಿ ಪಕ್ವಗೊಳಿಸು.[62] ನಿನ್ನ ಜ್ವಾಲಾ ವಿಶೇಷ ಆ ಭಾಗವನ್ನು ಚೆನ್ನಾಗಿ ಶುದ್ಧಿಗೊಳಿಸಲಿ. ನಿನ್ನ ಪ್ರಕಾಶಕವಾದ ಜ್ವಾಲೆಯೂ ಅದನ್ನು ಸಂಸ್ಕರಿಸಲಿ. ಸುಖಕರವಾದ ನಿನ್ನ ಮೂರ್ತಿಗಳಿಂದ ಈ ಪ್ರೇತವನ್ನು ಶೋಭನ ಕರ್ಮವನ್ನಾಚರಿಸಿದವರು ಸೇರುವ ಸ್ಥಾನಕ್ಕೆ ಸೇರಿಸು.'

'ಹೇ ಅಗ್ನಿಯೇ, ಮಂತ್ರಪೂರ್ವಕ ಅಗ್ನಿಯಲ್ಲಿ ಅರ್ಪಿಸಲ್ಪಟ್ಟವನೂ ಸ್ವಧಾಕಾರಗಳಿಂದ ಕೊಡಲ್ಪಟ್ಟ ಉದಕವುಳ್ಳವನೂ ಆದ ಮೃತನನ್ನು ಅವನ ಪಿತೃಗಳ ಸಮೀಪಕ್ಕೆ ಪ್ರೇರಿಸು. ಇವನು ಆಯುಸ್ಸಿನಿಂದ ಯುಕ್ತನಾಗಿ ಶರೀರವನ್ನು ಹೊಂದಲಿ. ಎಲೈ ಜಾತವೇದನೇ, ನಿನ್ನ ಪ್ರಸಾದದಿಂದ ಇವನು ಶರೀರದಿಂದ ಕೂಡಿದವನಾಗಲಿ.'

ಇದರಿಂದ ಶರೀರಾತಿರಿಕ್ತನಾದ ಆತ್ಮನು ಮರಣಾನಂತರ ತನ್ನ ಪಿತೃಗಳನ್ನು ಸೇರುವನೆಂದು ತಿಳಿದುಬರುತ್ತದೆ. ಮರಣ ಸಹಜವಾದ ಧರ್ಮ. ಇದಕ್ಕಾಗಿ ಯಾರೂ ಅತೀವ ದುಃಖಿಸಬಾರದು. 'ಮೃತರೊಡನೆ ಇತರರೂ ಮೃತರಾಗಬಾರದು. ಪಿತೃಮೇಧಾಖ್ಯವಾದ ಯಜ್ಞ ಕಳೆದ ಮೇಲೆ ಕಲ್ಯಾಣವುಂಟಾಗುವುದು. ಆದ್ದರಿಂದ ಉಳಿದವರು ಅವರವರ ಕರ್ಮಾನುಷ್ಠಾನ ಮಾಡುತ್ತಾ ಪುತ್ರಪೌತ್ರರೊಡನೆ ರಮಿಸುತ್ತಾ ದೀರ್ಘವಾದ ಆಯುಸ್ಸನ್ನು ಹೊಂದಬೇಕು.' ಈ ಭಾವ ಕೆಳಗಿನ ಮಂತ್ರದಲ್ಲಿದೆ:

> 'ಇಮೇ ಜೀವಾ ವಿಮೃತೈರಾವವೃತ್ರನ್
> ಅಭೂದ್ಭದ್ರಾ ದೇವಹೂತಿರ್ನೋ ಅದ್ಯ |
> ಪ್ರಾಂಚೋ ಅಗಾಮ ನೃತಯೇ ಹಸಾಯ
> ದ್ರಾಘೀಯ ಆಯುಃ ಪ್ರತರಂ ದಧಾನಾಃ ||' (10-18-3)

ಮೃತನನ್ನು ದಹನ ಮಾಡುವ ಮೊದಲು ಆ ಕಾಷ್ಠಶಯ್ಯೆಯ ಮೇಲೆ ಅವನ ಪತ್ನಿಯೂ ಮಲಗುತ್ತಿದ್ದಳು. ಆಗ ಅವಳನ್ನು ಇತರರು 'ಉದೀರ್ಷ್ವನಾರಿ ಅಭಿಜೀವ ಲೋಕಂ' (10-18-8) ಎಂಬ ಮಂತ್ರದಿಂದ ಎಬ್ಬಿಸುತ್ತಿದ್ದರು. ಸಹಗಮನದ ಸೂಚನೆ ಇಲ್ಲಿದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಮೃತನ ಭಾರ್ಯೆಯ ಮೈದುನನು ಪತಿಯೆಡೆಯಿಂದ ಅವಳನ್ನು ಈ ಮಂತ್ರ ಹೇಳಿ ಎಬ್ಬಿಸಬೇಕೆಂದು ವಿಧಿಸಿದೆ.

ಆತ್ಮ ತತ್ತ್ವವು ಅವಿನಾಶಿಯಾದುದೆಂದೂ ದೇಹದ ವಿನಾಶ ಅದನ್ನು ನಾಶಪಡಿಸು ವುದಿಲ್ಲವೆಂದೂ ಇದರಿಂದ ತಿಳಿಯುವುದು. ಮೃತನಾದವನು ಅಗ್ನಿಯಿಂದ ತೋರಲ್ಪಟ್ಟ ದಾರಿಯಲ್ಲಿ ಸಾರಿ ವರುಣನನ್ನೂ ಪಿತೃದೇವತೆಗಳನ್ನೂ ಸೇರುವನು. ಪಿತೃಗಳನ್ನು ಸೇರಲು ಅಡ್ಡಿಯಾದ ದೋಷಗಳನ್ನು ಹೋಗಲಾಡಿಸಲು ಔರ್ಧ್ವದೈಹಿಕ ಸಂಸ್ಕಾರಗಳು ನಡೆಯುವುವು. ಇಲ್ಲಿ ಬರುವ ಪಿತೃಲೋಕದ ಚಿತ್ರವೂ ಚೆನ್ನಾಗಿದೆ. ಶಾಖೋಪಶಾಖೆಗಳಿಂದ ಶೋಭಿಸುವ

62. ಅಜೋಭಾಗಃ ಒಂದರೆ ಅಜಃ ಎಂದರೆ ಹುಟ್ಟಿಲ್ಲದುದು ಎಂದು ಯಾಸ್ಕರು ಹೇಳುತ್ತಾರೆ. ನೋಡಿ. (ನಿರುಕ್ತ 12-29, 30, 32, 33).

ಮರದ ನೆರಳಿನಲ್ಲಿ ಯಮದೇವನು ಇತರ ದೇವತೆಗಳೊಡನೆ ಸೋಮಪಾನಮಾಡುತ್ತಿದ್ದಾನೆ. ಮಧುರವಾದ ಮುರಳಿಯ ನಾದವೊಂದು ಕಡೆ ಕೇಳಿಬರುತ್ತಿದೆ. ಅವನನ್ನು ಮೃತನು ಸೇರಿ ಜರಾಮರಣದೂರನಾಗಿ ಸ್ವಚ್ಛಂದವಾದ ಸುಖವನ್ನು ಪಡೆಯುತ್ತಾನೆ. ಸಂಗ್ರಾಮಗಳಲ್ಲಿ ಕಾದಿ ಮಡಿದವರಿಗೆ ಈ ಪರಮ ಸುಖವುಂಟಾಗುತ್ತದೆ. ಇವರಿಗಿಂತ ಅಧಿಕವಾಗಿ ಈ ಸುಖ, ಯಾಗಾದಿಗಳನ್ನು ಮಾಡಿ ವೈತಾನ ದಾನಾದಿಗಳನ್ನು ಮಾಡಿದವರಿಗೆ ದೊರಕೊಳ್ಳುವುದು.

ಋಗ್ವೇದದ ಯಮದೇವ ಮೃತ್ಯುಮಾರ್ಗವನ್ನರಿತವನು. ಇವನಿಗೆ ಉಲೂಕ ಮತ್ತು ಕಪೋತಗಳೆಂಬ ದೂತರಿಬ್ಬರುಂಟು. ಪಿತೃಮಾರ್ಗವನ್ನು ಕಾಯುವ ನಾಯಿಗಳೆರಡು ಇವನಿಗೆ ದೂತರಾಗಿದ್ದಾರೆ. ಇವನು ಪುರಾಣಾದಿಗಳಲ್ಲಿ ಹೇಳುವಂತೆ ಮೃತ್ಯುದೇವತೆಯಲ್ಲ. ಋಗ್ವೇದದಲ್ಲಿ ಮೃತರು ಸಾರುವ ದೇವಯಾನ ಮತ್ತು ಪಿತೃಯಾನದ ಉಲ್ಲೇಖವೂ ಇದೆ.

ಧಾರ್ಮಿಕವಾದ ಜೀವನವನ್ನು ನಡೆಸಿದ ಮಹಾಮಹಿಮರು. ಈ ಸತ್ಪದವನ್ನು ಪಡೆಯುವರು. ತಮ್ಮ ಮಹಿಮಾತಿಶಯದಿಂದ ಪಿತೃಗಳಾಗಿ ದೇವತೆಗಳ ಮಟ್ಟಕ್ಕೂ ಅವರು ಏರುವರು (ಇದಕ್ಕೆ ಋಭುಗಳು ಉದಾಹರಣೆ). ಆದರೆ ದುರ್ಮಾರ್ಗಿಗಳ ಗತಿ ಏನು ? ಋಗ್ವೇದದಲ್ಲಿ ಅಂಥವರಿಗೆ ನರಕವೆಂದು ಸ್ಪಷ್ಟವಾಗಿ ಹೇಳಿಲ್ಲ. ಅವರು ಭೂಮಿಯೊಳಗೆ ಗೂಢವಾಗಿರುವ ಅಂಧತಮಸ್ಸನ್ನು ಹೊಗುವರೆಂದು ಹೇಳಿದೆ.

ಹೀಗೆ ಈ ಸೂಕ್ತಗಳು ಔರ್ಧ್ವದೈಹಿಕ ಕ್ರಿಯಾದಿಗಳನ್ನೂ ವಿಚಾರವನ್ನೂ ಪ್ರತಿಪಾದಿಸುತ್ತವೆ. ಆ ಕಾರಣವೇ ಇವುಗಳಿಂದ ಅಂದಿನ ಜನರ ಜನಜೀವನ, ಆಚಾರವಿಚಾರಗಳು ನಂಬಿಕೆಗಳು ಮೊದಲಾದವು ತಿಳಿದುಬರುವುದೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

**ಅಕ್ಷಸೂಕ್ತ**

ಋಗ್ವೇದದಲ್ಲಿರುವ ಲೌಕಿಕಸೂಕ್ತಗಳಲ್ಲಿ ಅಕ್ಷಸೂಕ್ತ ಬಹಳ ಸುಂದರವಾದುದು. ಇದು ಒಬ್ಬ ಜೂಜುಕೋರನ ಸ್ವಗತದಾದ ಪರಿದೇವನೆ. ಜೂಜಿನ ಹವ್ಯಾಸಕ್ಕೊಳಗಾದ ಕಾರಣ ಸಾಂಸಾರಿಕ ಸುಖವನ್ನು ಹೇಗೆ ಕಳೆದುಕೊಂಡನೆಂಬುವುದನ್ನೇ ಮಾರ್ಮಿಕವಾಗಿ ಇಲ್ಲಿ ಹೇಳಿದ್ದಾನೆ ಆ ಜೂಜುಕೋರ. ಅಕ್ಷಗಳದು ಅನಿವಾರಣೀಯವಾದ ಪ್ರಭಾವ. ಅದು ಅವನನ್ನು ಜೂಜುಕಟ್ಟೆಗೆ ಸೆಳೆದೊಯ್ಯುತ್ತದೆ. ತನ್ನ ದುಃಸ್ಥಿತಿಗೂ ದುರ್ದೈವಕ್ಕೂ ಅವನು ಮರುಗಿದರೂ ಅದರ ಪ್ರಲೋಭನೆಯಿಂದ ಪಾರಾಗಲಾರದ ತನ್ನ ಸ್ಥಿತಿಯನ್ನೂ ಬಣ್ಣಿಸುತ್ತಾನೆ ಅವನು. ಇದು ತಪ್ಪೆಂದು ನಾವು ತಿಳಿದಿದ್ದರೂ ಅದನ್ನು ಬಿಡಲು ಅನೇಕ ವೇಳೆ ಅಸಮರ್ಥರಾಗುತ್ತೇವೆ. ಅವುಗಳ ಪ್ರಭಾವ ಹಾಗಿರುವುದು. ಜೂಜು ಇಂಥವುಗಳಲ್ಲಿ ಒಂದು. ಸ್ಥಿರವಾದ ಮನಸ್ಸಿನಿಂದ ಆ ಪ್ರಲೋಭನೆಯನ್ನು ಗೆಲ್ಲಬೇಕು. ಪಾಪ ಪ್ರವೃತ್ತಿಗೆ ಅಕ್ಷಗಳೂ ಕಾರಣವೆಂಬುದನ್ನು (7-86-6)ರಲ್ಲಿ ಕಂಠೋಕ್ತವಾಗಿ ಹೇಳಿದೆ. ಸುರೆ, ಕ್ರೋಧ, ಅಕ್ಷಗಳು, ಅಜ್ಞಾನ ಇವುಗಳೆಲ್ಲಾ ಪಾಪಪ್ರವೃತ್ತಿಗೆ ಕಾರಣಗಳು. ಈ ಸೂಕ್ತದಲ್ಲಿ ಜೂಜಿನ ದುಷ್ಪರಿಣಾಮಗಳನ್ನು ಹೇಳಿ ಅದರಿಂದ ದೂರವಾಗಬೇಕೆಂದೂ ಪ್ರಾಮಾಣಿಕವಾದ ಪರಿಶ್ರಮದಿಂದ ಜೀವನವನ್ನು ನಡೆಸಿ ಬಾಳಬೇಕೆಂದೂ ಸೂಚಿಸಿದೆ.

ಜೂಜುಕೋರನಿಗೆ ಆ (ಕಾಯಿ) ದಾಳಗಳನ್ನು ನೋಡುವುದರಿಂದಲೇ ಹರ್ಷೋನ್ಮಾದವುಂಟಾಗುವುದು. ಈ ಅಂಶ ಕೆಳಗಿನ ಮಂತ್ರದಲ್ಲಿ ಹೇಳಿದೆ:

'ಪ್ರಾವೇಪಾ ಮಾ ಬೃಹತೋ ಮಾದಯಂತಿ
ಪ್ರವಾತೇಜಾ ಇರಿಣೇ ವರ್ವೃತಾನಾಃ |

ಸೋಮಸ್ಯೇವ ಮೌಜವತಸ್ಯ ಭಕ್ಷೋ
ವಿಭೀದಕೋ ಜಾಗೃವಿರ್ಮಹ್ಯಮಚ್ಛಾನ್ ॥ (10-34-1)

'ಪ್ರಬಲವಾದ ಗಾಳಿಗಳಿರುವ ದೇಶಗಳಲ್ಲಿ ಬೆಳೆದ, ವಿಭೀತ ಫಲಕಗಳಿಂದಾದ (ಕಾಯಿ) ದಾಳಗಳು ಅಕ್ಷಫಲದ ಮೇಲೆ ಉರುಳುವಾಗಲೇ ನನಗೆ ಹರ್ಷವುಂಟುಮಾಡುವುವು. ಮೂಜವಾನ್ ಪರ್ವತದಲ್ಲಿ ಬೆಳೆದ ಸೋಮದ ಪಾನ ಯಜಮಾನನಿಗೂ ದೇವತೆಗಳಿಗೂ ಮುದವನ್ನುಂಟುಮಾಡುವಂತೆ ಜೂಜುಕೋರರ ಜಾಗರಣೆಗೆ ಕಾರಣವಾದ (ಜಯಪರಾಜಯ ಹರ್ಷಶೋಕಗಳ ಕಾರಣ) ವಿಭೀತಕ ಫಲಗಳಿಂದಾದ (ಕಾಯಿಗಳು) ದಾಳಗಳು ನನಗೆ ಮದವನ್ನುಂಟು ಮಾಡುತ್ತವೆ.'

ಜೂಜುಕೋರನು ಜೂಜಿನ ಹವ್ಯಾಸಕ್ಕೆ ಬಿದ್ದು ನಿರಪರಾಧಿನಿಯಾದ ಪತ್ನಿಯನ್ನು ಮನೆಯಿಂದ ಓಡಿಸಿದುದಕ್ಕಾಗಿ ಕೆಳಗಿನ ಮಂತ್ರದಲ್ಲಿ ದುಃಖಿಸುತ್ತಾನೆ :

'ನ ಮಾ ಮಿಮೇಥ ನ ಜಿಹೀಳ ಏಷಾ
ಶಿವಾ ಸಖಿಭ್ಯ ಉತ ಮಹ್ಯಮಾಸೀತ್ ।
ಅಕ್ಷಸ್ಯಾಹಮೇಕಪರಸ್ಯ ಹೇತೋಃ
ಅನುವ್ರತಾಮಪ ಜಾಯಾಮರೋಧಮ್ ॥' (5-34-2)

'ಈ ನನ್ನ ಮಡದಿ ನನ್ನ ಮೇಲೆ ಕೋಪಗೊಳ್ಳಲಿಲ್ಲ ; ನನ್ನನ್ನು ಅಪಮಾನಪಡಿಸಲಿಲ್ಲ; (ಈ ದುಷ್ಟಪದ್ಧತಿಯವನು ನನ್ನ ಪತಿ ಎಂದು ಲಜ್ಜೆಪಡಲಿಲ್ಲ). ನನಗೂ ನನ್ನ ಜೂಜುಕೋರ ಮಿತ್ರರಿಗೂ ಸುಖವನ್ನೇ ಉಂಟುಮಾಡುತ್ತಿದ್ದಳು. ಇಂಥ ಅನುಕೂಲ ಪತ್ನಿಯನ್ನು (ದಾಳದ ಆಟವೊಂದರ) ಕಾರಣದಿಂದಲೇ ನಾನು ಓಡಿಸಿಬಿಟ್ಟಿದ್ದೇನೆ.'

ಜೂಜುಕೋರನನ್ನು ಯಾರೂ ಗೌರವಿಸುವುದಿಲ್ಲ. ಎಲ್ಲರೂ ದೂರಮಾಡುವವರೇ.

'ದ್ವೇಷ್ಟಿ ಶ್ವಶ್ರೂರಪ ಜಾಯಾ ರುಣದ್ಧಿ
ನ ನಾಥಿತೋ ವಿಂದತೇ ಮರ್ಡಿತಾರಮ್ ।
ಅಶ್ವಸ್ಯೇವ ಜರತೋ ವಸ್ನ್ಯಸ್ಯ
ನಾಹಂ ವಿಂದಾಮಿ ಕಿತವಸ್ಯಭೋಗಮ್ ॥' (10-34-3)

'(ಮನೆಗೆ ಬಂದರೆ) ಅತ್ತೆ ದ್ವೇಷಿಸುವಳು, ಹೆಂಡತಿಯೂ ದೂರಮಾಡುವಳು. ಬೇಡುವ ಜೂಜುಕೋರನಿಗೆ ದಯೆತೋರುವವರೂ ಇಲ್ಲ. ಕ್ರಯಕ್ಕಿರುವ ಮುದಿಕುದುರೆಯಂತೆ ಜೂಜುಕೋರನಿಗೆ ಸುಖ ಸ್ವಲ್ಪವೂ ಇಲ್ಲ.'

ಜೂಜುಕೋರನಿಗಾಗುವ ಪರಾಭವ ಹೇಳತೀರದು.

'ಅನ್ಯೇ ಜಾಯಾಂ ಪರಿಮೃಶಂತ್ಯಸ್ಯ
ಯಸ್ಯಾಗೃಧದ್ವೇದನೇ ವಾಜ್ಯಕ್ಷಃ ।
ಪಿತಾಮಾತಾ ಭ್ರಾತರ ಏನಮಾಹುಃ
ನ ಜಾನೀಮೋ ನಯತಾ ಬದ್ಧಮೇತಮ್ ॥' (10-34-4)

'ಇತರ ಜೂಜುಕೋರರ ಹಣದಲ್ಲಿ ತೀವ್ರವಾದ ಅಭಿಕಾಂಕ್ಷೆಯುಳ್ಳ ಜೂಜುಗಾರನ ಪತ್ನಿಯನ್ನು ಇತರ ಜೂಜುಕೋರರು (ವಸ್ತ್ರಕೇಶಾದಿಗಳನ್ನು ಹಿಡಿದು) ಎಳೆಯುವರು. ಇವನ ತಂದೆ, ತಾಯಿ, ಸೋದರರು ಇವನನ್ನು ಕುರಿತು 'ನಾವಿವನನ್ನು ಕಾಣೆವು ಮನಬಂದೆಡೆ ಇವನನ್ನು ಕಟ್ಟಿ ಎಳೆದೊಯ್ಯಿರಿ' ಎಂದು ಜೂಜುಕೋರರೊಡನೆ ಹೇಳುವರು.'

ಜೂಜಾಡುವುದು ತಪ್ಪು. ಅದನ್ನು ಬಿಡಬೇಕು ಎಂದು ಮತ್ತೆ ಮತ್ತೆ ನಿರ್ಣಯ ಮಾಡಿ

ಕೊಳ್ಳುತ್ತಾನೆ. ಆದರೆ ಮರುಕ್ಷಣದಲ್ಲಿ ಆ ವೇಳೆ ಬಂದಾಗ ತನ್ನನ್ನೂ ಮರೆತು ಜೂಜು ಕಟ್ಟೆಯನ್ನು ಸೇರುತ್ತಾನೆ.

'ಯದಾದೀಧ್ಯೇ ನ ದವಿಷಾಣ್ಯೇಭಿಃ
ಪರಾಯದ್ಭ್ಯೋಽವ ಹೀಯೇ ಸಖಿಭ್ಯಃ |
ನ್ಯುಪ್ತಾಶ್ಚ ಬಭ್ರವೋ ವಾಚಮಕ್ರತಂ
ಏಮೀ ದೇಷಾಂ ನಿಷ್ಕೃತಂ ಜಾರಿಣೀವ ||' (10-34-5)

'ನನ್ನ ಮನಸ್ಸಿನೊಡನೆ ಹೀಗೆ ಯೋಚಿಸುವೆನು—ಈ (ಕಾಯಿ) ದಾಳಗಳೊಡನೆ ಜೂಜಾಡುವುದು ಬೇಡ. ತಾವಾಗಿ ಹೊರಟು ಹೋಗುವ ಸ್ನೇಹಿತರ ಹಿಂದೆಯೇ ನಾನುಳಿಯುವೆ' (ಮೊದಲು ನಾನು ದಾಳವೆಸೆಯುವುದು ಬೇಡ ಎಂದು). ಆದರೆ ಬೂದು ಬಣ್ಣದ ಅಕ್ಷಗಳು (ಇತರ ಜೂಜುಗಾರರಿಂದ ಎಸೆಯಲ್ಪಟ್ಟು) ಶಬ್ದ ಮಾಡುವುವು. ಅದನ್ನು ಕೇಳಿದಾಗ (ನನ್ನ ಸಂಕಲ್ಪವನ್ನು ಪರಿತ್ಯಜಿಸಿ ಅಕ್ಷವ್ಯಸನದಿಂದ ಅಭಿಭೂಯಮಾನನಾಗಿ) ಜೂಜುಕಟ್ಟೆಯನ್ನು (ಕಾಮವ್ಯಸನದಿಂದ ಸಂಕೇತ ಸ್ಥಾನವನ್ನು ಸೇರುವ) ಜಾರಿಣಿಯಂತೆ ಸೇರುವೆನು'

ಜೂಜುಗಾರನು 'ಇಲ್ಲಿರುವ ಧನಿಕನನ್ನು ಗೆಲ್ಲುವೆನು' ಎಂದುಕೊಳ್ಳುತ್ತಾ ದ್ಯೂತಸಭೆಗೆ ಬರುತ್ತಾನೆ. ಅಕ್ಷಗಳು ಅವನ ಇಚ್ಛೆಗೆ ವಿರುದ್ಧವಾಗಿ ಉರುಳುತ್ತವೆ ಮತ್ತು ಅವನ ಪ್ರತಿಸ್ಪರ್ಧಿಗೇ ಅದೃಷ್ಟವನ್ನುಂಟುಮಾಡುತ್ತವೆ.

ಅಕ್ಷಗಳ ಪ್ರಭಾವ ತಪ್ಪಿಸಿಕೊಳ್ಳಲಾಗದ್ದು. ಆಟಗಾರರನ್ನವು ಅಂಕುಶವಿಟ್ಟು ಎಳೆಯುವುವು. ಪರಾಜಯವುಂಟಾದಾಗ ಸಂತಾಪವನ್ನುಂಟುಮಾಡುವುವು. ಗೆದ್ದವರಿಗೆ ಧನಧಾನ್ಯ ಲಾಭವನ್ನೂ ಸೋತವನಿಗೂ ಅವನ ಕುಟುಂಬಕ್ಕೂ ದುಃಖವನ್ನೂ ಉಂಟುಮಾಡುವುವು.

ಐವತ್ತುಮೂರು ಸಂಖ್ಯೆಗಳ ಅಕ್ಷಗಳು ಜೂಜಿನ ಹಲಗೆಯ ಮೇಲೆ ವಿಹರಿಸುತ್ತವೆ. ಸರ್ವಪ್ರೇರಕನಾದ ಸವಿತೃದೇವನಂತೆ. ಕ್ರೂರಿಗಳ ಕ್ರೋಧಕ್ಕೂ ಇವು ತಲೆ ಬಾಗುವುದಿಲ್ಲ. ದ್ಯೂತಕಾಲದಲ್ಲಿ ರಾಜನೂ ಇವುಗಳಿಗೆ ನಮಸ್ಕರಿಸುತ್ತಾನೆ (10-34-8).

ಇವುಗಳ ಶಕ್ತಿ ಎಂಥದು ಎಂಬುದನ್ನು ಕೆಳಗಿನ ಮಂತ್ರದಲ್ಲಿ ಹೇಳಿದೆ :

'ನೀಚಾ ವರ್ತಂತ ಉಪರಿ ಸ್ಫುರಂತಿ
ಅಹಸ್ತಾಸೋ ಹಸ್ತವಂತಂ ಸಹಂತೇ |
ದಿವ್ಯಾ ಅಂಗಾರಾ ಇರಿಣೇ ನ್ಯುಪ್ತಾಃ
ಶೀತಾಃ ಸಂತೋ ಹೃದಯಂ ನಿರ್ದಹಂತಿ ||' (10-34-9)

'ಈ ಅಕ್ಷಗಳು ಕೆಳಗಿದ್ದರೂ (ಸೋಲಿನ ಹೆದರಿಕೆಯಿಂದ ನಡುಗುವ ದ್ಯೂತಕಾರರ ಹೃದಯದ) ಮೇಲಕ್ಕೆ ಹೊರಳುತ್ತವೆ. ಹಸ್ತಗಳೇ ಇಲ್ಲದ ಇವು ಕೈಗಳಿರುವ ದ್ಯೂತಕಾರರನ್ನೂ ಗೆಲ್ಲುತ್ತವೆ. ದಿವ್ಯವಾದ ಈ ಇದ್ದಿಲುಗಳು ಅಕ್ಷಫಲಕದ ಮೇಲೆಸೆಯಲ್ಪಟ್ಟಾಗ ತಾವು ತಣ್ಣಗಿದ್ದರೂ ಸಹ ಜೂಜುಕಾರರ ಹೃದಯವನ್ನು (ಸೋಲಿನ ಸಂತಾಪದಿಂದ) ಸುಡುತ್ತವೆ.

ಜೂಜಾಡಿ ಸರ್ವವನ್ನೂ ಕಳೆದುಕೊಂಡವನ ಸ್ಥಿತಿ ಎಷ್ಟು ಅಪಮಾನಕರವಾದುದು!

'ಜಾಯಾ ತಪ್ಯತೇ ಕಿತವಸ್ಯ ಹೀನಾ
ಮಾತಾ ಪುತ್ರಸ್ಯ ಚರತಃ ಕ್ವಸ್ವಿತ್ |'
ಋಣಾವಾ ಬಿಭ್ಯದ್ಧನಮಿಚ್ಛಮಾನಃ
ಅನ್ಯೇಷಾಮಸ್ತಮುಪನಕ್ತಮೇತಿ ||' (10-34-10)

'ನಿರ್ವೇದದಿಂದ ಎಲ್ಲಿಯೋ ಓಡಿಹೋದ ಜೂಜುಗಾರನ ಹೆಂಡತಿಯು ದುಃಖಿಸುವಳು.

ಅವನ ತಾಯಿ ಪುತ್ರಶೋಕದಿಂದ ಸಂತಪ್ತಳಾಗುವಳು. ಜೂಜಿನಲ್ಲಿ ಸೋತು ಸಾಲಗಾರನಾದ ಆ ಜೂಜುಕೋರ ಕದ್ದು ಹಣ ಸಂಪಾದಿಸಲು ಇತರರ ಮನೆಗಳಿಗೆ ಕಳ್ಳತನಕ್ಕಾಗಿ ರಾತ್ರಿ ಬರುತ್ತಾನೆ.'

ಜೂಜುಗಾರನಿಗಾದರೂ ಸುಖವುಂಟೇ ಎಂದರೆ ಏನು ಹೇಳೋಣ? ಅವನು ತನ್ನ ಪಾಡನ್ನು ಇತರರೊಡನೆ ಹೋಲಿಸಿ ನೋಡಿ ತನ್ನನ್ನು ನಿಂದಿಸಿಕೊಳ್ಳುತ್ತಾನೆ. ತನ್ನವರ ಪಾಡನ್ನು ನೆನೆದು ದುಃಖಿಸುತ್ತಾನೆ. ಈ ಭಾವವನ್ನು ಕೆಳಗಿನ ಮಂತ್ರದಲ್ಲಿ ಕಾಣಬಹುದು :

'ಸ್ತ್ರಿಯಂ ದೃಷ್ಟ್ವಾಯ ಕಿತವಂ ತತಾಪ
ಅನ್ಯೇಷಾಂ ಜಾಯಾಂ ಸುಕೃತಂ ಚ ಯೋನಿಮ್ |
ಪೂರ್ವಾಹ್ಣೇ ಅಶ್ವಾನ್ಯುಯುಜೇ ಹಿ ಬಭ್ರೂನ್
ಸೋ ಅಗ್ನೇರಂತೇ ವೃಷಲಃ ಪಪಾದ ||' (10-34-11)

'ಇತರರ ಹೆಂಡತಿಯರನ್ನೂ, ಸುಖಮಯವಾದ ಅವರ ಮನೆಯನ್ನೂ ನೋಡಿ ಜೂಜುಗಾರ ತಪ್ಪಿಸುತ್ತಾನೆ-ಬೆಳಗಾದರೆ ಬಭ್ರುವರ್ಣದ ಅಕ್ಷಗಳನ್ನು ಹೂಡಿಯೇ ಬಿಡುತ್ತಾನೆ. ಮತ್ತೆ ಸೋತು ಭಿಕಾರಿಯಾಗಿ ಬೆಂಕಿಯ ಪಕ್ಕದಲ್ಲಿ ಚಳಿಯಿಂದ ನಡುಗುತ್ತಾ ಬಿದ್ದುಕೊಳ್ಳುವನು.'

ಎಲ್ಲವನ್ನೂ ಕಳೆದುಕೊಂಡು ಪರಿತಪಿಸುವ ಜೂಜುಕೋರ 'ಇನ್ನು ಜೂಜಾಡಲು ನನ್ನಲ್ಲಿ ಹಣವಿಲ್ಲ. ಇದೋ ನಿನಗೆ ನಮಸ್ಕಾರ' ಎಂದು ಗೋಳಾಡುವನು. ಆಗ ಇನ್ನು ಮುಂದೆ ಪಣ ವಿಟ್ಟು ಆಡುವುದಿಲ್ಲವೆಂದು ಪ್ರತಿಜ್ಞೆ ಮಾಡುತ್ತಾನೆ, ಕೆಳಗೆ ಕಂಡಂತೆ :

'ಯೋ ವಃ ಸೇನಾನೀರ್ಮಹತೋ ಗಣಸ್ಯ
ರಾಜಾ ವ್ರಾತಸ್ಯ ಪ್ರಥಮೋ ಬಭೂವ |
ತಸ್ಮೈ ಕೃಣೋಮಿ ನ ಧನಾ ರುಣಧ್ಮಿ
ದಶಾಹಂ ಪ್ರಾಚೀಸ್ತದೃತಂ ವದಾಮಿ ||' (5-34-12)

'ಎಲೈ ಅಕ್ಷಗಳೇ, ನಿಮ್ಮ ಮಹಾಸಮೂಹಕ್ಕೆ ಯಾರು ಸೇನಾಪತಿಯಾಗಿದ್ದಾನೆಯೋ, ನಿಮ್ಮ ಗುಂಪಿಗೆ ಯಾರು ರಾಜನೋ, ಯಾರು ಮುಖ್ಯಸ್ಥನೋ ಅಂಥವನಿಗೆ ನಾನು ಕೈಮುಗಿಯುತ್ತೇನೆ. ಇನ್ನು ಮುಂದೆ ಜೂಜಿಗಾಗಿ ನಾನು ಧನ ತರುವುದಿಲ್ಲ. ನನ್ನ ಹತ್ತು ಬೆರಳುಗಳಿಂದಲೂ ಕೂಡಿಸಿ ಅಂಜಲಿ ಮಾಡಿದ್ದೇನೆ. ಇದನ್ನು ಸತ್ಯವಾಗಿ ಹೇಳುತ್ತಿದ್ದೇನೆ.'

ಇತರರನ್ನು ಕುರಿತು ಜೂಜುಕೋರ ಹೇಳುವ ಮಾತೊಂದಿದೆ. ಅದೇನೆಂದರೆ-

ಅಕ್ಷೈರ್ಮಾದೀವ್ಯಃ ಕೃಷಿಮಿತ್ಕೃಷಸ್ವ
ವಿತ್ತೇ ರಮಸ್ವ ಬಹುಮನ್ಯಮಾನಃ |
ತತ್ರ ಗಾವಃ ಕಿತವ ತತ್ರ ಜಾಯಾ
ತನ್ಮೇ ವಿಚಷ್ಟೇ ಸವಿತಾಯಮರ್ಯಃ ||' (10-34-13)

'ಅಕ್ಷಗಳಿಂದ ಜೂಜಾಡಬೇಡ ; ಕೃಷಿಯನ್ನೇ ಮಾಡು. ಕೃಷಿಯಿಂದ ಸಂಪಾದಿಸಿದ ಧನವನ್ನೇ ಅಧಿಕವೆಂದು ತಿಳಿದು ಸಂತೋಷಿಸು. ಕೃಷಿಯಿಂದಲೇ ಪಶುಗಳೂ, ಪತ್ನಿಯೂ. ಈ ಧರ್ಮರಹಸ್ಯವನ್ನು ಸರ್ವಪ್ರೇರಕನೂ, ಈಶ್ವರನೂ ಆದ ಸವಿತೃದೇವನು ನನಗೆ ತಿಳಿಸಿದ್ದಾನೆ.'

ಅಕ್ಷಗಳಲ್ಲಿರುವ ಆಕರ್ಷಣಶಕ್ತಿಯನ್ನು ಕಂಡ ಜೂಜುಕೋರ ಅವುಗಳನ್ನು ಕುರಿತು ಹೀಗೆ ಬೇಡುತ್ತಾನೆ-(ಎಲೈ ಅಕ್ಷಗಳೇ, ನೀವು ನಮ್ಮ ಮಿತ್ರರಾಗಿ. ನಮಗೆ ದಯೆತೋರಿ ನಮ್ಮನ್ನು ಸುಖಿಗಳನ್ನಾಗಿ ಮಾಡಿ. ನಿಮ್ಮ ಆಕರ್ಷಣಶಕ್ತಿಯಿಂದ ನಮ್ಮನ್ನು ಬಲಾತ್ಕಾರವಾಗಿ

ಮೋಹಕ್ಕೊಳಗಾಗಿಸಬೇಡಿ. ನಿಮ್ಮ ಕೋಪ ನಮ್ಮ ಶತ್ರುಗಳ ಮೇಲೆ ಬೀಳಲಿ. ನಮ್ಮ ಶತ್ರುಗಳು ಬಭ್ರುವರ್ಣದ ನಿಮ್ಮ ಬಲವಾದ ಬಲೆಗೆ ಬೀಳಲಿ.' (10-34-14)

ಅಕ್ಷಸೂಕ್ತ ಬಹಳ ಮಾರ್ಮಿಕವಾಗಿ ಜೂಜಿನ ಅಪಾಯಗಳನ್ನು ಎತ್ತಿತೋರಿಸುತ್ತದೆ. ಪ್ರಾಮಾಣಿಕತನದ ದುಡಿಮೆಯ ಮಹತ್ವವನ್ನು ಇದು ಎತ್ತಿ ಹೇಳುತ್ತದೆ. ವ್ಯಕ್ತಿ ಜೀವನ ಪರಿಶುದ್ಧವಾಗದೆ ಆತನ ಉದ್ಧಾರವಾಗದು. ಪ್ರತಿಯೊಬ್ಬನೂ ತನ್ನ ತನ್ನ ಉದ್ಧಾರವನ್ನು ಮಾಡಿಕೊಳ್ಳಲು ಉನ್ನತವಾದ ಆದರ್ಶಗಳನ್ನು ಪರಿಪಾಲಿಸಬೇಕು. ನಿರ್ದುಷ್ಟವೂ, ಮಾನ್ಯವೂ ಆದ ವಿಧಾನದಲ್ಲಿ ಜೀವನ ನಡೆಸಬೇಕು. ಈ ಉನ್ನತವಾದ ಧ್ಯೇಯದ ನಿರೂಪಣೆ ಇಲ್ಲಿದೆ.

**ಸಂವಾದ ಸೂಕ್ತಗಳು**

ಋಗ್ವೇದದಲ್ಲಿನ ದಾರ್ಶನಿಕ ಸೂಕ್ತಗಳು ಮುಂದಿನ ಉಪನಿಷತ್ತುಗಳ ತಾತ್ವಿಕ ವಿವೇಚನೆಗೆ ಆಧಾರವಾಗಿರುವಂತೆಯೇ ಮತ್ತೆ ಕೆಲವು ಸೂಕ್ತಗಳು ಮುಂದಿನ ಕಾವ್ಯ ನಾಟಕಗಳಿಗೆ ಮೂಲವಾಗಿವೆ. ಪರಸ್ಪರ ಸಂವಾದಗಳ ರೂಪದಲ್ಲಿರುವ ಕೆಲವು ಸೂಕ್ತಗಳು ಸಂವಾದ ಸೂಕ್ತಗಳೆಂದು ಹೆಸರಾಗಿವೆ. ಇಂಥ ಸೂಕ್ತಗಳು ಸುಮಾರು ಇಪ್ಪತ್ತರವರೆಗೂ ಇವೆ. ಈ ಸಂವಾದ ಸೂಕ್ತಗಳ ವಿಚಾರದಲ್ಲಿ ಪಾಶ್ಚಾತ್ಯ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ. ಪ್ರಾಚೀನ ವಾದ ಆಖ್ಯಾನಗಳು ಗದ್ಯಪದ್ಯಾತ್ಮಕವಾಗಿದ್ದವೆಂದೂ ಅವುಗಳಲ್ಲಿ ಗದ್ಯಭಾಗ ಕಾಲಕ್ರಮೇಣ ಲುಪ್ತವಾಗಿ ಈ ಸಂವಾದ ಸೂಕ್ತಗಳ ರೂಪವನ್ನು ಹೊಂದಿದವೆಂದೂ ಕೆಲವರ ಅಭಿಪ್ರಾಯ. (ಉದಾ : ಓಲ್ಡೆನ್‌ಬರ್ಗ್). ಮತ್ತೆ ಕೆಲವರು (ಡಾ. ಹರ್ಟಲ್, ಡಾ. ಸಿಲ್ವನ್‌ಲೆವಿ ಮುಂತಾದವರು) ಇವು ವಸ್ತುತಃ ನಾಟಕದ ಅವಶಿಷ್ಟಾಂಶಗಳೆಂದೂ ಯಾಗದ ಸಂದರ್ಭಗಳಲ್ಲಿ ಇವನ್ನು ಪಾತ್ರರಚನೆ ಮತ್ತು ಸಂಗೀತದೊಡನೆ ಅಭಿನಯಿಸುತ್ತಿದ್ದರೆಂದೂ ಅಭಿಪ್ರಾಯಪಡುತ್ತಾರೆ. ಆದರೆ ನಾಟಕ ಮತ್ತು ಕಥೆಗಳ ಮಿಶ್ರಣವು ಎಂದು ಡಾ. ವಿಂಟರ್‌ನಿಟ್ಸ್‌ರ ಅಭಿಪ್ರಾಯ.

ಈ ಸಂವಾದ ಸೂಕ್ತಗಳಲ್ಲಿ ಯಮ-ಯಮಿಯರ ಸಂವಾದ (10-10), ಪುರೂರವ ಊರ್ವಶೀಯರ ಸಂವಾದ (10-95), ವಿಶ್ವಾಮಿತ್ರ ನದಿಗಳ ಸಂವಾದ (3-33), ಸರಮಾ ಮತ್ತು ಪಣಿಗಳ ಸಂವಾದ (10-108), ಅಗ್ನಿ ಮತ್ತು ದೇವತೆಗಳ ಸಂವಾದ–(10-51), ವಸಿಷ್ಠ, ವಾಸಿಷ್ಠರ ಮತ್ತು ಇಂದ್ರನ ಸಂವಾದ (7-33), ಅಗಸ್ತ್ಯ ಮತ್ತು ಲೋಪಾಮುದ್ರೆಯರ ಸಂವಾದ (1-179) ಇವು ಮುಖ್ಯವಾದವು.

ಯಮ–ಯಮಿಯರ ಸಂವಾದ ಸೂಕ್ತದಲ್ಲಿ 14 ಮಂತ್ರಗಳಿವೆ. ಇವುಗಳಲ್ಲಿ 1, 3, 5, 6, 7, 11, 13) ಏಳು ಮಂತ್ರಗಳು ಯಮಿ ಹೇಳುವುವು. ಉಳಿದವು ಯಮನ ಮಾತುಗಳು. ಯಮ-ಯಮಿಯರು ವೈವಸ್ವತನ ಅವಳಿ ಮಕ್ಕಳು. ಮಂದಪ್ರಕಾಶವುಳ್ಳ ದೂರದ ದ್ವೀಪವೊಂದಕ್ಕೆ ಇವರು ಬಂದಾಗ ಯಮಿ ಯಮನಲ್ಲಿ ಅನುರಕ್ತಳಾಗಿ ಅವನನ್ನು ಪ್ರಲೋಭನೆಗೊಳಿಸಲು ಆರಂಭಿಸುತ್ತಾಳೆ. ಯಮ ಧೀರನೂ, ವಿವೇಕಿಯೂ ಆದವನು. ಅವನು ಅವಳ ಪ್ರಾರ್ಥನೆಯನ್ನು ನಿರಾಕರಿಸುತ್ತಾನೆ. ಯಮಿಗೆ ಬುದ್ಧಿ ಹೇಳಿ ಪಾಪದಿಂದ ದೂರವಾಗುತ್ತಾನೆ. ಕಾಮವಶಳಾದ ಯಮಿ ಯಮನನ್ನು ಕುರಿತು ಹೇಳುತ್ತಾಳೆ ಕೇಳಕಂಡಂತೆ:

'ಓ ಚಿತ್ಸಖಾಯಂ ಸಖ್ಯಾ ವವೃತ್ಯಾಂ
ತಿರಃ ಪುರೂಚಿದರ್ಣವಂ ಜಗನ್ವಾನ್ ।
ಪಿತುರ್ನಪಾತಮಾ ದಧೀತ ವೇಧಾ
ಅಧಿಕ್ಷಮಿ ಪ್ರತರಂ ದೀಧ್ಯಾನಃ ॥' (5-10-1)

'ಏಸ್ತೀರ್ಣವಾದ ಸಾಗರದಿಂದಾವೃತವಾದ ಈ ದ್ವೀಪಕ್ಕೆ ಬಂದಿರುವ ನಾನು ಗರ್ಭವಾಸದಿಂದ ಹಿಡಿದು ನನ್ನ ಸಖನಾದ ನಿನ್ನಲ್ಲಿ ಆಭಿಮುಖ್ಯ ಹೊಂದಿದ್ದೇನೆ. ನಿನ್ನನ್ನು ಕೂಡಲಿಚ್ಛಿಸುತ್ತೇನೆ. ವಿಧಾತನು ನಮಗೆ ಶ್ರೇಷ್ಠವಾದ ಸಂತಾನವುಂಟಾಗಲೆಂದು ಚಿಂತಿಸುತ್ತಿದ್ದಾನೆ.'

'ತಾಯಿಯ ಗರ್ಭದಲ್ಲಿ ನಿನ್ನೊಡನೆ ಇದ್ದುದು ನಿಜ. ಆದ್ದರಿಂದಲೇ ನೀನು ನನಗೆ ಸೋದರಿ. ನಮ್ಮಲ್ಲಿ ಹೆಣ್ಣುಗಂಡಿನ ಪ್ರೇಮ ಸಲ್ಲದು. ನೀನು ನನ್ನ ಭಗಿನಿಯೇ ಸರಿ' ಎಂದು ಯಮ ಉತ್ತರಿಸುತ್ತಾನೆ-(5-10-2). ಯಮಿ ಇಷ್ಟರಿಂದ ಸುಮ್ಮನಾಗುವುದಿಲ್ಲ. 'ತೇ ಅಮೃತಾಸಃ ಏತತ್ ತ್ಯಜಸಂ ಉಶಂತಿ'-ದೇವತೆಗಳು ತಮ್ಮ ಸ್ವಂತ ದುಹಿತೃ ಭಗಿನಿಯನ್ನು ಕಾಮಿಸುತ್ತಾರೆ. ಹಾಗೆಯೇ ನಿನ್ನ ಚಿತ್ತವೂ ನನ್ನಲ್ಲಿ ನಿಲ್ಲಲಿ. ನಮ್ಮ ಜನಕನಾದ ಪ್ರಜಾಪತಿ ಮಗಳನ್ನೇ ಪತ್ನಿಯಾಗಿ ಹೊಂದಿದಂತೆ ನೀನೂ ನನ್ನನ್ನು ಕೂಡಿಕೋ' ಎಂದು ಮತ್ತೆ ರಮಿಸುತ್ತಾಳೆ.

ಯಮ ಇದಕ್ಕೆಲ್ಲ ಸೋಲುವವನಲ್ಲ. ಅಪರಿಮಿತವಾದ ಸಾಮರ್ಥ್ಯವುಳ್ಳ ಪ್ರಜಾಪತಿಯಂತೆ ಎಲ್ಲರೂ ನಡೆಯಲಾಗುವುದಿಲ್ಲವೆಂಬುದು ಅವನಿಗೆ ಗೊತ್ತು. 'ಆದಿತ್ಯ ಮತ್ತು ಸರಣ್ಯೂಗಳನ್ನು ತಾಯಿತಂದೆಯರನ್ನಾಗಿ ಹೊಂದಿರುವ ನಾವು ನಮ್ಮ ಪವಿತ್ರವಾದ ಸೋದರ ಬಂಧುತ್ವವನ್ನು ರಕ್ಷಿಸಬೇಕು' ಎಂದು ಅವನು ಬುದ್ಧಿಮಾತನ್ನು ಹೇಳುತ್ತಾನೆ. ಇದಕ್ಕೆ ಯಮಿಯ ಉತ್ತರವಿದು:

> 'ಗರ್ಭೇ ನು ನೌ ಜನಿತಾ ದಂಪತೀ
> ಕರ್ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ |
> ನ ಕಿರಸ್ಯ ಪ್ರಮಿನಂತಿ ವ್ರತಾನಿ
> ವೇದ ನಾವಸ್ಯ ಪೃಥಿವೀ ಉತ ದ್ಯೌಃ ||' (5-10-5)

'ಸರ್ವವನ್ನೂ ರೂಪಿಸುವವನೂ, ಪ್ರೇರಿಸುವವನೂ, ವಿಶ್ವರೂಪನೂ, ದೇವನೂ ಆದ ಪ್ರಜಾಪತಿದೇವನು ಗರ್ಭಾವಸ್ಥೆಯಲ್ಲಿಯೇ ನಮ್ಮನ್ನು ದಂಪತಿಗಳನ್ನಾಗಿ ಮಾಡಿದ್ದಾನೆ. ಇವನ ಈ ಕಾರ್ಯವನ್ನು ಯಾರುತಾನೇ ನಿರೋಧಿಸಿಯಾರು ? ಅಲ್ಲದೆ ತಾಯಿಯ ಗರ್ಭದಲ್ಲಿ ಒಟ್ಟಿಗೆ ವಾಸಮಾಡುವುದರಿಂದಾದ ಈ ನಮ್ಮ ದಂಪತಿತ್ವವನ್ನು ದ್ಯಾವಾ ಪೃಥಿವಿಗಳೂ ಅರಿತಿದ್ದಾರೆ.'

ಯಮಿ ತನ್ನ ವಾದವನ್ನು ಮುಂದುವರಿಸುತ್ತಾಳೆ-'ನಮ್ಮ ಈ ಸಮಾಗಮವನ್ನು ಈ ಮೊದಮೊದಲ ಮುಂಬೆಳಗಿನಲ್ಲಿ ಯಾರುತಾನೇ ಕಾಣಬಲ್ಲರು ? ಇತರರಿಗೆ ಯಾರುತಾನೇ ತಿಳಿಸಬಲ್ಲರು ? ಮಿತ್ರಾವರುಣರಿಗೆ ಸೇರಿದ ಹಗಲು ರಾತ್ರಿಗಳಲ್ಲಿ ಜನರು ಮಾಡುವ ಪಾಪಪುಣ್ಯಗಳಿಗೆ ಶುಭಾಶುಭ ಫಲಪ್ರದಾನ ಮಾಡುವವನು ನೀನು. ಈಗೇನು ಹೇಳುವಿ ?'

ಯಮ ಆದರೂ ಮನ ಸೋಲದುದನ್ನು ಕಂಡು ಯಮಿ ಆರ್ದ್ರಹೃದಯಳಾಗಿ 'ಯಮನಿಗೆ ನನ್ನ ಮೇಲೆ ಆಸೆ ಹುಟ್ಟುವಂತಾಗಲಿ ! ಜೊತೆಜೊತೆಯಲ್ಲಿ ಬೆಳೆದು ನಾವು ರಥದ ಗಾಲಿಗಳಂತೆ ಪತಿಪತ್ನಿಯರಾಗಿ ಕೂಡಿ ನಡೆಯುವಂತಾಗಬಾರದೇ' ಎಂದು ಮರುಗುವಳು.

ಯಮ ತನ್ನ ನಿಷ್ಠೆಯಲ್ಲಿ ಅಪ್ರಕಂಪ್ಯನಾಗಿದ್ದಾನೆ. ಪ್ರಲೋಭನೆಗಳಿಗವನು ಮನಸೋಲುವವನಲ್ಲ. ಋತದ ಪಾಲನೆ ತನ್ನ ಕರ್ತವ್ಯವೆಂದು ಮನಗಂಡಿದ್ದಾನೆ. 'ನಿನ್ನ ಅಸಹ್ಯ ಭಾಷಣದಿಂದ ನನ್ನ ಮನ ನೋಯಿಸಬೇಡ. ನಿನಗೆ ಅನುರೂಪನಾದ ವರನನ್ನು ಸೇರಿ ರಥದ ಗಾಲಿಗಳಂತೆ ಅನುವರ್ತಿಸು' ಎಂದು ಅವಳಿಗೆ ಬುದ್ಧಿ ಹೇಳುವನು. ಮತ್ತು ತನ್ನ ಮನಸ್ಸು ಸ್ಥಿರವಾಗಿರಲೆಂದೂ ಪ್ರಲೋಭನೆಗೊಳಗಾಗದಿರಲೆಂದೂ ಬೇಡುತ್ತಾನೆ-

'ರಾತ್ರೀ ಭಿರಸ್ಮಾ ಅಹಭಿರ್ದಶಸ್ಯೇತ್
ಸೂರ್ಯಸ್ಯ ಚಕ್ಷುರ್ಮುಹುರುನ್ಮಿಮೀಯಾತ್ |
ದಿವಾ ಪೃಥಿವ್ಯಾ ಮಿಥುನಾ ಸಬಂಧೂ
ಯಮೀರ್ಯಮಸ್ಯ ಬಿಭೃಯಾದಜಾಮಿ ||' (5-10-9)

'ಯಾಗ ಮಾಡುವವರು ನನಗೆ ಅಹೋರಾತ್ರಿಗಳಲ್ಲಿ ಹವಿರ್ಭಾಗವನ್ನು ಸಲ್ಲಿಸಲಿ (ಹಾಗೆ ನನ್ನ ಮನಸ್ಸು ಸ್ಥಿರವಾಗಿರಲಿ). ಸೂರ್ಯ ಸಂಬಂಧಿಯಾದ ತೇಜಸ್ಸು ನನ್ನಲ್ಲಿ ಮೈದೋರಲಿ. ದ್ಯಾವಾಪೃಥಿವಿಗಳೊಡನೆ ಸಮಾನ ಬಂಧುಗಳಾದ ಅಹೋರಾತ್ರಗಳು ಯಮನಾದ ನನಗೆ ಕರುಣಿಸಲಿ. ಈ ಯಮಿ ಒಡಹುಟ್ಟಿದವನನ್ನು ಬಿಟ್ಟು ಬೇರೆಯವನನ್ನು ವರಿಸುವಂತಾಗಲಿ.'

ಯಮನ ಮುಂದೆ ಯಮಿ ತಂದ ಪ್ರಲೋಭನ ಬಹಳ ಪ್ರಬಲವಾದದ್ದು. ಅದನ್ನು ಗೆಲ್ಲಲು ಅವನು ಸರ್ವಾತ್ಮನಾ ಪ್ರಯತ್ನಿಸಿದ. ದೇವತೆಗಳ ಅನುಗ್ರಹವನ್ನು ಬೇಡಿದ. ಪರ್ವತದಂತೆ ಅಚಲನಾಗಿ ನಿಂತ. ಯಮಿ ಯಮನನ್ನು ನಿಂದಿಸುತ್ತಾಳೆ, ಹೀಯಾಳಿಸುತ್ತಾಳೆ ಸಂತಾಪದಿಂದ ಖತಿಗೊಂಡು. ಆಸೆ ಕೈಗೂಡದಿದ್ದರೆ ಹೆಣ್ಣಿನ ಹೃದಯ ಹೇಗೆ ಸಂತಾಪಗೊಳ್ಳುವುದೆಂಬುದನ್ನು ಅವಳು ತೋರುತ್ತಾಳೆ. ಹೇಗಾದರೂ ತನ್ನ ಬಲೆಗೆ ಅವನನ್ನು ಬೀಳಿಸಬೇಕೆಂಬುದು ಅವಳ ದೂರದಾಸೆ. ಆದರೆ ಅದೂ ಫಲಿಸಲಿಲ್ಲ. ಯಮ ಹೃದಯವಿಲ್ಲದವನಂತೆಯೇ ನಡೆದುಕೊಂಡ. 'ಎಲೌ ಯಮಿ, ನೀನು ದುಃಖಿಸಬೇಡ. ಬೇರೆಯವನನ್ನು ನೀನು ಮನಸಾ ವರಿಸು. ಅವನೂ ನಿನ್ನನ್ನು ವರಿಸುವನು. ವೃಕ್ಷವನ್ನು ಲತೆಯು ಹೇಗೋ ಹಾಗೆ ನೀನು ಅವನನ್ನು ಅವಲಂಬಿಸು. ಪರಸ್ಪರ ವಶವರ್ತಿಗಳಾಗಿ ಸುಖಿಸಿ' ಎಂದು ಉಪದೇಶಿಸಿದ ಯಮ ಅವಳಿಗೆ. ಈ ಸಂವಾದ ಇಲ್ಲಿಗೆ ಮುಗಿಯುತ್ತದೆ. ಮುಂದೆ ಇವರ ಕಥೆ ಏನಾಯಿತೆಂಬುದು ಗೊತ್ತಾಗುವುದಿಲ್ಲ. ಯಮ ಯಮಿಯನ್ನು ವಿವಾಹವಾಗುವುದಿಲ್ಲ ಎಂಬುದು ಸ್ಪಷ್ಟವಾಗಿದೆ.

ಸೋದರ ಸೋದರಿಯರಲ್ಲಿ ವಿವಾಹ ಬೆಳೆಯುವ ಪದ್ಧತಿ ಎಂದಾದರೂ ಇತ್ತೇ ಎಂಬುದರ ಮೇಲೆ ಇದು ಬೆಳಕು ಚೆಲ್ಲುವುದು. ಈ ಸೂಕ್ತದ ಅಭಿಪ್ರಾಯ ಅಂಥ ಪದ್ಧತಿ ಹಿಂದಿನಿಂದ ಇರಲಿಲ್ಲವೆಂಬುದನ್ನು ಖಚಿತಪಡಿಸುತ್ತದೆ. ಮಾನವಕುಲದ ಪುರುಷರ ಕಥೆ ಈ ಸಂಭಾಷಣೆಯ ಹಿನ್ನೆಲೆಯಲ್ಲಿದೆ ಎಂದು ಮತ್ತೆ ಕೆಲವರು ಅಭಿಪ್ರಾಯಪಡುತ್ತಾರೆ. ಈ ಸಂವಾದ ಸೂಕ್ತದಲ್ಲಿ ನಾಟಕದ ಅಂಶ ತುಂಬಿದೆ.

ಸಂವಾದ ಸೂಕ್ತಗಳಲ್ಲೆಲ್ಲ ಪುರೂರವಸ್ ಮತ್ತು ಉರ್ವಶಿ ಸಂವಾದ ಪ್ರಧಾನವಾದುದು. ಈ ಸೂಕ್ತದಲ್ಲಿ 18 ಮಂತ್ರಗಳಿವೆ. ಪುರೂರವ ಮಾನವ ; ಊರ್ವಶಿ ಅಪ್ಸರೆ. ಈ ದಿವ್ಯಾಪ್ಸರೆ ಪುರೂರವನೊಡನೆ ಭೂಮಿಯ ಮೇಲೆ ನಾಲ್ಕು ವರ್ಷಗಳ ಕಾಲ ದಾಂಪತ್ಯ ನಡೆಸಿದಳು. ಗರ್ಭವತಿಯಾದ ಉರ್ವಶಿ ಮರೆಯಾದಳು. ಅನಂತರ ಪುರೂರವ ಅವಳನ್ನು ಹುಡುಕಿಕೊಂಡು ಹೊರಟ. ಅವಳು ಇತರ ಅಪ್ಸರೆಯರೊಡನೆ ಸರೋವರದಲ್ಲಿ ಕ್ರೀಡಿಸುತ್ತಿದ್ದಾಗ ಇವನು ಅವಳನ್ನು ಕಂಡ. ಇಷ್ಟು ಕಥೆ ಈ ಸಂವಾದ ಸೂಕ್ತದಿಂದ ದೊರೆಯುತ್ತದೆ.

ಉರ್ವಶಿಯಿಂದ ಪರಿತ್ಯಕ್ತನಾದ ಪುರೂರವ ಜಲಕೇಳಿಯಲ್ಲಿದ್ದ ಉರ್ವಶಿಯೊಡನೆ ನಡೆಸಿದ ಸಂವಾದ ಈ ಸೂಕ್ತದಲ್ಲಿದೆ.

'ಎಲೌ ದುಃಖಜನಕಳಾದ ನಲ್ಲೆಯೇ, ಸಾನುರಾಗಳಾಗಿ ಕ್ಷಣಮಾತ್ರ ನನ್ನೊಡನೆ ನಿಲ್ಲು. ಬೇಗ ಸ್ವಲ್ಪ ಮಾತಾಡಿಬಿಡೋಣ ಇಬ್ಬರೂ. ನಮ್ಮ ಮಾತುಕಥೆ ರಹಸ್ಯವಾದುದು. ಈ ಮಾತು ಬಹಳ ದಿನಗಳವರೆಗೆ–ಕೊನೆಯವರೆಗೆ ಸುಖವನ್ನುಂಟುಮಾಡುವುದು. ಅದಕ್ಕಾಗಿ

ಕ್ಷಣ ಮಾತ್ರ ನಿಲ್ಲು'–ಎಂದು ಪುರೂರವ ಉರ್ವಶಿಯನ್ನು ಕುರಿತು ಹೇಳಿದಾಗ ಈ ಕೊಳದಿಂದ ಅವಳು ಹೇಳುವ ಮಾತಿದು :

'ಕಿಮೇತಾ ವಾಚಾ ಕೃಣವಾ ತವಾಹಂ
ಪ್ರಾಕ್ರಮಿಷಮುಷಸಾಮಗ್ರಿಯೇವ |
ಪುರೂರವಃ ಪುನರಸ್ತಂ ಪರೇಹಿ
ದುರಾಪನಾ ವಾತ ಇವಾಹಮಸ್ಮಿ || (10-95-2)

'ಈ ಮಾತಿನಿಂದ ಈಗೇನು ? ಅನೇಕ ಉಷಸ್ಸುಗಳಲ್ಲಿ ಮೊದಮೊದಲಿನ ಉಷಸ್ಸುಗಳು ಹೇಗೆ ದೂರದೂರ ಹೋಗುವುವೋ ಹಾಗೆ ನಿನ್ನಿಂದ ನಾನು ದೂರವಾಗಿದ್ದೇನೆ. ಆದ್ದರಿಂದ ಎಲೈ ಪುರೂರವನೇ, ನೀನು ಮತ್ತೆ ಮನೆಯನ್ನು ಸೇರು. ವಾಯುವಿನಂತೆ ನಾನು ನಿನ್ನ ಕೈಗೆ ಸಿಕ್ಕಲಾರದವಳಾಗಿದ್ದೇನೆ.'

ವಿರಹತಪ್ತನಾದ ಪುರೂರವ ಸುತ್ತಿಸುಳಿದು ಕೊನೆಗೆ ನಲ್ಲೆಯನ್ನು ಕಂಡು ಆಸೆಯಿಂದ ನುಡಿಸಿದಾಗ ಈ ಮಾತನ್ನವಳು ಹೇಳಿದಳು. ಇದರಿಂದ ಅವನಿಗೆಷ್ಟು ದುಃಖವಾಗಿರಬೇಕು ! ನೊಂದ ಪುರೂರವ ತನ್ನ ವಿರಹಾವಸ್ಥೆಯನ್ನು ತೋಡಿಕೊಳ್ಳುತ್ತಾನೆ:

'ಇಷುರ್ನ ಶ್ರಿಯ ಇಷುಧೇರಸನಾ
ಗೋಷಾಃ ಶತಸಾ ನರಂಹಿಃ |
ಅವೀರೇ ಕ್ರತೌ ವಿ ದವಿದ್ಯುತ-
ನ್ನೋರಾ ನ ಮಾಯುಂ ಚಿತಯಂತ ಧುನಯಃ ||' (10-95-3)

'ಜಯಗಳಿಸಲು ಬತ್ತಳಿಕೆಯಿಂದ ಬಾಣವನ್ನೆಳೆಯಲೂ ಮನಸ್ಸಾಗದು. ವೀರನಾದ ನಾನು ಶತ್ರುಗಳ ಗೋಧನವನ್ನೂ ಅಪರಿಮಿತವಾದ ಧನವನ್ನೂ ಕೈ ಬಿಟ್ಟುಬಿಟ್ಟೆ (ನಿನ್ನ ವಿರಹದ ಕಾರಣ). ವೀರ್ಯಾಪೇಕ್ಷೆಯಿಲ್ಲದ ರಾಜಕಾರ್ಯದಲ್ಲಿಯೂ ನನ್ನ ಸಾಮರ್ಥ್ಯ ತೊಡಗದು. ಇತರರನ್ನು ನಡುಗಿಸುವ ನಮ್ಮ ಭಟರು ಸಂಗ್ರಾಮದಲ್ಲಿ ಸಿಂಹನಾದ ಮಾಡಲೂ ತಿಳಿಯರು.'

ಉರ್ವಶಿ ಪುರೂರವನ ಗುಣಗಳನ್ನು ಮರೆತಿಲ್ಲ. ಅವನೊಡನೆ ಅವಳಿದ್ದ ಕಾಲದಲ್ಲಿ ಸಕಲ ಸುಖಗಳನ್ನೂ ಪಡೆದವಳವಳು. ಅವಳಿಗೂ ಅವನಲ್ಲಿ ಅತಿಯಾದ ಅನುರಾಗವಿತ್ತು. ಆದರೂ ತನ್ನ ಒಪ್ಪಂದಕ್ಕನುಗುಣವಾಗಿ ಆತನನ್ನು ಬಿಡಬೇಕಾಗಿ ಬಂದುದರಿಂದ ಮನಸ್ಸನ್ನು ಕಲ್ಲು ಮಾಡಿಕೊಂಡು ಬಿಟ್ಟುಬಂದಳು. ಆತನಲ್ಲಿ ತನಗಿದ್ದ ಗೌರವ ಪ್ರೀತಿಗಳನ್ನು ಉರ್ವಶಿ ತೋರಿಸುತ್ತಾಳೆ (10-95-7).

ಪುರೂರವನ ಗುಣಗಳನ್ನು ಕೊಂಡಾಡಿ ಅವನು ತನ್ನ ಕೆಲಸದಲ್ಲಿ ಪ್ರವೃತ್ತನಾಗುವಂತೆ ಮಾಡಲು ಇವಳು ಯತ್ನಿಸಿದಳು. ಮಹತ್ತರವಾದ ಸಂಗ್ರಾಮದ ಜವಾಬ್ದಾರಿಯನ್ನವನು ಹೊಂದಿದವನೆಂದೂ ಕೇವಲ ಒಬ್ಬ ಹೆಂಗಸಿಗಾಗಿ ಶೋಕಿಸುತ್ತಾ ಕೊರಗಬಾರದೆಂದೂ ಮೃದುವಾಗಿ ತಿಳಿಸಿದಳು.

ಉರ್ವಶೀ ಪುರೂರವರ ಪ್ರಣಯ ಅಪೂರ್ವವಾದುದು. ಒಬ್ಬನು ಮರ್ತ್ಯ ; ಮತ್ತೊಬ್ಬಳು ಅಪ್ಸರೆ. ಇವರ ಸಮಾಗಮ ಆ ಕೊಳದಲ್ಲಿ ಆದುದೂ ಒಂದು ಅಪೂರ್ವ ಘಟನೆ. ಇವರ ಸಂಭಾಷಣೆ ಆಗುತ್ತಿದ್ದಾಗ ಇತರ ಅಪ್ಸರೆಯರು ತಮ್ಮನ್ನು ತೋರಿಸಿಕೊಳ್ಳಲಿಲ್ಲ (10-95-9). ಉರ್ವಶಿ ಪುರೂರವನ ಬಾಳಿನಲ್ಲಿ ಮಿಂಚಿನಂತೆ ತೋರಿ ಬೆಳಗಿ ಮಾಯವಾದಳು. ಅವನ ಆಶೆಗಳೆಲ್ಲವನ್ನೂ ಸಫಲಗೊಳಿಸಿದಳು. ಅವಳಿಂದ ಸುಪುತ್ರನು ಜನಿಸಲು ಅವನ ಕುಲ

ಬೆಳೆಯಿತು, ಆಯುಸ್ಸು ವೃದ್ಧಿಯಾಯಿತು (10-95-10).

ಪುತ್ರನಾಗುವವರೆಗೂ ಅವನೊಡನೆ ಇರುವುದಾಗಿ ಅವಳು ಸಂಕೇತ ಮಾಡಿಕೊಂಡಿದ್ದಳು. ಆ ಸಂಕೇತವನ್ನು ಪಾಲಿಸಬೇಕೆಂದೂ ಪ್ರಲಪಿಸಕೂಡದೆಂದೂ ಉರ್ವಶಿ ತಿಳಿಸುತ್ತಾಳೆ (10-95-11). ಪುರೂರವ ಆ ಸಂಕೇತವನ್ನು ಕುರಿತು ದುಃಖಿಸುತ್ತಾನೆ. 'ಈ ಪುತ್ರನಾದರೂ ಎಂಥವನು! ತಾಯಿತಂದೆಯರನ್ನಗಲಿಸಿದನಲ್ಲವೇ ಅವನು! ಆ ಮಗು ತಂದೆಯಾದ ನನ್ನನ್ನು ಸೇರಿ ಅಳುತ್ತಿರಬಹುದೇ ? ತಾಯಿತಂದೆಯರನ್ನು ಒಟ್ಟಿಗಿಟ್ಟು ಸುಖಪಡಿಸಬೇಡವೇ ?' (10-95-12) ಎಂದು ಪುರೂರವ ಗೋಳಿಡುತ್ತಾನೆ. ಹೆಣ್ಣಿನ ಕರುಳನ್ನು ಕರಗಿಸಲು ಅವನು ಈ ಮನ ಮುಟ್ಟುವ ಮಾತನ್ನಾಡಿದ. ತಾಯಿಯಿಲ್ಲದ ಶಿಶುವಿನ ಬಾಳು ಕರುಣಾಜನಕವೆಂದು ಸೂಚಿಸಿದ. ಆದರೆ ಉರ್ವಶೀ ಈ ಮಾತಿಗೆ ಮರುಳಾಗಲಿಲ್ಲ. ಇವನ್ನೆಲ್ಲಾ ಗದ್ದಿದ್ದಳವಳು ಈ ಮಗುವನ್ನೇ ಅವಳು ಮುಂದೆಮಾಡಿ ಅವನನ್ನು ಮನೆಗೆ ಹೋಗಲೂ ಪ್ರೇರೇಪಿಸಿದಳು.

'ಈ ನಿನ್ನ ಮಗು ಕಣ್ಣೀರಿಡುತ್ತಾ ಅಳುತ್ತಿದೆ. ನಾನು ಧರಿಸಿದ್ದ ಈ ಮಗುವನ್ನು ನಿನಗೆ ಕೊಡುತ್ತಿದ್ದೇನೆ. ಇದನ್ನು ಮನೆಗೆ ತೆಗೆದುಕೊಂಡು ಹೋಗಿ ಸಲಹು ಇದನ್ನು ನೋಡಿಕೊಂಡು ನಿನ್ನ ದುಃಖವನ್ನು ನುಂಗಿಕೋ. ಕರ್ತವ್ಯ ತತ್ಪರನಾಗು. ಎಲೈ ಮೂಢ, ನನ್ನನ್ನಿನ್ನು ನೀನು ಪಡೆಯಲಾರೆ. ಇದು ದಿಟ' ಎನ್ನುವಳವಳು (10-95-13). ಈ ಮಾತು ಪುರೂರವನಿಗೆ ಬಹಳ ದುಃಖವನ್ನುಂಟುಮಾಡಿತು. ಊರ್ವಶಿಯಿಂದ ವಿಯುಕ್ತನಾಗಿಯೂ ತಾನು ಬದುಕಿರುವೆನಲ್ಲಾ ಎಂದು ತನ್ನನ್ನೇ ಅವನು ಹಳಿದುಕೊಳ್ಳುತ್ತಾನೆ (10-95-14). ಇವನ ಈ ಶೋಕ ಉರ್ವಶಿಯ ಹೃದಯವನ್ನು ಕಲುಕಿತು. ಅವಳು ಅವನನ್ನು ಸಮಾಧಾನ ಮಾಡುತ್ತಾಳೆ ಕೆಳಗೆ ಕಂಡಂತೆ:

'ಪುರೂರವೋ ಮಾ ಮೃಥಾ ಮಾ ಪ್ರಪಪ್ತೋ
ಮಾ ತ್ವಾ ವೃಕಾಸೋ ಅಶಿವಾಸ ಉ ಕ್ಷನ್ ।
ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ
ಸಾಲಾವೃಕಾಣಾಂ ಹೃದಯಾನ್ಯೇತಾ ||' (10-95-15)

ಎಲೈ ಪುರೂರವನೇ, ನೀನು ಪ್ರಾಣವನ್ನು ಬಿಡಬೇಡ ; ಪತನವನ್ನೂ ಹೊಂದಬೇಡ. ಅಶುಭವಾದ ತೋಳಗಳೂ ನಿನ್ನನ್ನು ಹಿಂಸಿಸದಿರಲಿ. ಸ್ತ್ರೀಯರೊಡನೆ ಸ್ನೇಹವೆಂಬುದು ನಿಜವಲ್ಲ. ಅವರ ಹೃದಯಗಳು ತೋಳಗಳ ಹೃದಯದಂತೆ. (ವಿಶ್ವಾಸವಿಟ್ಟ ವತ್ಸಾದಿಗಳನ್ನು ಸಾಲಾವೃಕಗಳು ಘಾತಿಸುವುವಷ್ಟೆ?) ಆದರೂ ಪುರೂರವ ಮತ್ತೆ ಅವಳನ್ನು ಹಿಂತಿರುಗಬೇಕೆಂದು ಕೋರುತ್ತಾನೆ–'ನಿವರ್ತಸ್ವ ಹೃದಯಂ ತಪ್ಯತೇ ಮೇ' (10-95-17) ಎಂದು. ಉರ್ವಶಿ ಕೊನೆಯದಾಗಿ ಹೇಳುವ ಮಾತಿದು—"ಪುರೂರವನೇ, ದೇವತೆಗಳೇ ಮಾತನ್ನು ನಿನಗೆ ಹೇಳುತ್ತಿದ್ದಾರೆ. 'ಮೃತ್ಯುಬಂಧುವಾದ ನೀನು ಹವಿಸ್ಸುಗಳಿಂದ ದೇವತೆಗಳನ್ನುದ್ದೇಶಿಸಿ ಯಾಗಮಾಡು. ಸ್ವರ್ಗದಲ್ಲಿ ನಮ್ಮೊಡನೆ ಸಂತೋಷಿಸುವೆಯಂತೆ' ಎಂದು. ಆದ್ದರಿಂದ ನನ್ನ ಅಭಿಲಾಷೆ ಬಿಟ್ಟು ಸುಖಿಯಾಗು."

ಪುರೂರವ ಮತ್ತು ಉರ್ವಶಿಯರ ಈ ಕಥೆ ಇತರ ಕಡೆಗಳಲ್ಲಿಯೂ ಬರುತ್ತದೆ. ಶತಪಥ ಬ್ರಾಹ್ಮಣದಲ್ಲಿ (11-5-1) ಈ ಮಂತ್ರಗಳನ್ನು ಸಂವಾದವಾಗಿ ಹೆಣೆದಿದೆ. ಅಲ್ಲಿ ಮೂರು ಷರತ್ತುಗಳನ್ನು ಉರ್ವಶಿ ಹಾಕುತ್ತಾಳೆ ರಾಜನಿಗೆ. ನಗ್ನನಾಗಿ ರಾಜನು ತನಗೆ ಕಾಣಿಸಿಕೊಳ್ಳಬಾರದೆಂಬುದು ಅವುಗಳಲ್ಲೊಂದು ಷರತ್ತು. ಗಂಧರ್ವರ ಕುಟಿಲ ತಂತ್ರದಿಂದ ರಾಜನು ಉರ್ವಶಿಗೆ ನಗ್ನನಾಗಿ ಕಾಣಿಸಿಕೊಳ್ಳುತ್ತಾನೆ. ಅವಳು ಅದೃಶ್ಯಳಾದಾಗ ಹುಚ್ಚನಂತೆ

ಅಲೆಯುತ್ತಾನೆ–ಕೊನೆಗೆ ಕೊಳದ ಬಳಿ ಅವಳನ್ನು ಕಂಡು ಮೇಲೆ ಕಂಡಂತೆ ಸಂಭಾಷಿಸುತ್ತಾನೆ.

ಕೊನೆಗೆ ಉರ್ವಶಿಯೊಡನೆ ಪುರೂರವ ಸೇರಿದನೇ ಇಲ್ಲವೇ ಎಂಬ ಅಂಶ ಸ್ಪಷ್ಟವಾಗಿಲ್ಲ. ಈ ಸಂವಾದದಂತೆ ಅವರ ಸಮಾಗಮ ಮತ್ತೆ ಆಗಲಿಲ್ಲವೆಂದೇ ಧ್ವನಿತವಾಗುತ್ತದೆ. ಈ ಕಥೆ ಕಾಠಕದಲ್ಲಿ, ಬೋಧಾಯನ ಶ್ರೌತಸೂತ್ರ, ಬೃಹದ್ದೇವತೆ, ಸರ್ವಾನುಕ್ರಮಣಿಕೆಗಳಲ್ಲಿ ಬಂದಿದೆ. ಇದರ ಆಧಾರದ ಮೇಲೆ ಕಾಳಿದಾಸನ 'ವಿಕ್ರಮೋರ್ವಶೀಯ' ನಿರ್ಮಿತವಾಗಿದೆ.

ಮೂರನೆಯ ಮಂಡಲದಲ್ಲಿ 33ನೇ ಸೂಕ್ತ ವಿಶ್ವಾಮಿತ್ರ ಮತ್ತು ನದಿಗಳ ಸಂವಾದವಾಗಿದೆ. ಇದರಲ್ಲಿ 13 ಮಂತ್ರಗಳಿವೆ. ಪೈಜವನ ಸುದಾಸನ ಪುರೋಹಿತನಾದ ವಿಶ್ವಾಮಿತ್ರ ವಿಪಾಟ್ ಮತ್ತು ಶತದ್ರುಗಳ ಸಂಗಮಕ್ಕೆ ಬಂದ. ಆಗ ನದಿಗಳು ಪೂರ್ಣಪ್ರವಾಹದಲ್ಲಿದ್ದವು. ವಿಶ್ವಾಮಿತ್ರನನ್ನುಸರಿಸಿ ಇತರರೂ ಬರುತ್ತಿದ್ದರು. ಆಗ ವಿಶ್ವಾಮಿತ್ರ ತನಗೆ ದಾರಿ ಬಿಡಬೇಕೆಂದು ಆ ನದಿಗಳನ್ನು ಬೇಡುತ್ತಾನೆ. ಮೂರು ಮಂತ್ರಗಳಿಂದ ಆ ನದಿಗಳನ್ನು ವಿಶ್ವಾಮಿತ್ರ ಮೊದಲು ಸ್ತುತಿಸುತ್ತಾನೆ

'ಈ ವಿಪಾಟ್ ಶತದ್ರುಗಳು ಶೈಲಗಳ ಉತ್ಸಂಗದಿಂದ ಸಮುದ್ರವನ್ನು ಸೇರಲಿಚ್ಛಿಸಿ ಹೊರಟಿವೆ—ಲಾಯದಿಂದ ಬಿಡಲ್ಪಟ್ಟ ಕುದುರೆಗಳ ಜೋಡಿ ಪೈಪೋಟಿಯಿಂದ ಓಡುವಂತೆ— ಬೆಳ್ಳಗಿರುವ ಹಸುಗಳೆರಡು ಶುಭ್ರವಾಗಿ ಪ್ರಕಾಶಿಸುವಂತೆ. ಕರುವನ್ನು ಕಂಡು ಮುದ್ದಿಸಲು ಹೊರಟ ಧೇನುವಿನಂತೆ ಈ ನದಿಗಳೆರಡೂ ವೇಗವಾಗಿ ಸಾಗುತ್ತಿವೆ.' (3-33-1) ವಿಶ್ವಾಮಿತ್ರನ ಸ್ತುತಿಯನ್ನು ಕೇಳಿದ ನದಿಗಳು ಹೇಳಿದವು:

'ನಾವು ಜಲಸಮೃದ್ಧಿಯಿಂದ ವರ್ಧಿಸಿ ಎಲ್ಲರಿಗೂ ಸಂತೋಷವುಂಟುಮಾಡುತ್ತಾ ಇಂದ್ರನಿಂದ ಸಂದಿಷ್ಟವಾದ ಸಮುದ್ರಕ್ಕೆ ಹೋಗುತ್ತಿದ್ದೇವೆ. ಮುಂದೆ ಸಾಗುವ ಸ್ವಭಾವವುಳ್ಳ ನಾವು ನಮ್ಮ ಉದ್ಯೋಗದಿಂದ ಹಿಂತಿರುಗುವಂತಿಲ್ಲ. ಯಾವ ಉದ್ದೇಶದಿಂದ ಈ ಬ್ರಾಹ್ಮಣ ನಮ್ಮನ್ನು ಸ್ತುತಿಸಿ ಆಹ್ವಾನ ಮಾಡುತ್ತಿದ್ದಾನೆ?' (3-33-4). ಆಗ ವಿಶ್ವಾಮಿತ್ರನು ಹೇಳಿದನು:

'ರಮಧ್ವಂ ಮೇ ವಚಸೇ ಸೋಮ್ಯಾಯ
ಋತಾವರೀರುಪ ಮುಹೂರ್ತಮೇವೈಃ।' (3-33-5)

'ಎಲೈ ನದಿಗಳೇ, ಸೋಮಯಾಜಿಯಾದ ನನ್ನ ಮಾತುಗಳಿಗೆ ಒಲಿಯಿರಿ. ನನಗೋಸ್ಕರ ಒಂದು ಮುಹೂರ್ತ ಮಾತ್ರ ವೇಗವನ್ನು ಕಡಿಮೆ ಮಾಡಿಕೊಳ್ಳಿ. ರಾಜರ್ಷಿ ಕುಶಿಕನ ಮಗ ನಾನು. ಆತ್ಮ ರಕ್ಷಣೆಗಾಗಿ ನಿಮ್ಮನ್ನು ಮಹತ್ತರವಾಗಿ ಸ್ತುತಿಸುತ್ತಿದ್ದೇನೆ. ಕ್ಷಣಕಾಲ ಅಭಿಮುಖ್ಯ ತೋರಬೇಕು ನೀವು.' ವಿಶ್ವಾಮಿತ್ರ ಹೀಗೆ ಶುತದ್ರು ನದಿಯನ್ನು ಬೇಡಿದ.

ನದಿಗಳು ಆಗ ಹೇಳಿದವು–'ನಾವು ಇಂದ್ರನ ಕಟ್ಟಳೆಯಂತೆ ಸಾಗುತ್ತಿದ್ದೇವೆ. ನಿನ್ನ ಮಾತಿನಿಂದ ಸುಮ್ಮನಾಗಲಾರೆವು' ಎಂದು. ಆಗ ವಿಶ್ವಾಮಿತ್ರನು ತನ್ನ ವೈಶಿಷ್ಟ್ಯವನ್ನು ಹೇಳಿಕೊಂಡು ಬೇಡುತ್ತಾನೆ ಅವುಗಳನ್ನು–'ನಾನು ಸ್ತೋತ್ರಕಾರ. ನನ್ನ ಮಾತನ್ನು ಲಾಲಿಸಿ. ಬಹಳ ದೂರದಿಂದ ರಥದಲ್ಲಿ ಬಂದಿದ್ದೇನೆ. ನೀವು ಗಾಧೋದಕರಾಗಿ ಹಾಯಲು ಅನುಕೂಲವಾಗುವಂತೆ ಕರುಣಿಸಿ.' ಈ ಮಾತು ನದಿಗಳ ಮನಸ್ಸನ್ನು ಸಂತೋಷಪಡಿಸಿತು. ತಾನು 'ಕಾರು' ಸ್ತೋತ್ರಕಾರ, ಋಷಿ ಎಂಬುದನ್ನು ಕೇಳಿ ಮೆಚ್ಚಿದ ನದಿಗಳು ಅವನಿಗೆ ದಾರಿಕೊಟ್ಟವು. ಋಷಿ ನದಿಗಳಿಂದ ಅನುಜ್ಞಾತನಾಗಿ ನದಿಯನ್ನು ದಾಟ ಹೋಗುತ್ತಾನೆ.

ಹತ್ತನೇ ಮಂಡಲದ 108ನೇ ಸೂಕ್ತದಲ್ಲಿ ಸರಮಾ ಮತ್ತು ಪಣಿಗಳ ಸಂವಾದವಿದೆ. ಈ ಸೂಕ್ತದಲ್ಲಿ 11 ಮಂತ್ರಗಳಿವೆ. ಈ ಸೂಕ್ತಾರಂಭದಲ್ಲಿ ಸಾಯಣರು ಹೇಳುವ ಕಥೆ

ಹೀಗಿದೆ–ಐಂದ್ರ ಪುರೋಹಿತನಾದ ಬೃಹಸ್ಪತಿಯ ಗೋವುಗಳನ್ನು ವಲನೆಂಬ ರಾಕ್ಷಸನ ಭಟರು (ಪಣಿಗಳೆಂಬ ಅಸುರರು) ಅಪಹರಿಸಿ ಗುಹೆಯೊಳಗೆ ಮುಚ್ಚಿಟ್ಟರು. ಬೃಹಸ್ಪತಿಯಿಂದ ಪ್ರೇರಿತ ನಾದ ಇಂದ್ರನು ಆ ದನಗಳನ್ನು ಹುಡುಕಿಕೊಂಡು ಬರಲು 'ಸರಮಾ' ಎಂಬ ದೇವಶುನಿಯನ್ನು ಕಳುಹಿಸಿದನು. ಸರಮೆಯು ಮಹತ್ತರವಾದ ನದಿಯನ್ನು ದಾಟಿ ವಲಪುರವನ್ನು ಸೇರಿ ಮುಚ್ಚಿಟ್ಟಿದ್ದ ಹಸುಗಳನ್ನು ನೋಡಿಬಿಟ್ಟಳು. ಈ ಸಮಾಚಾರ ತಿಳಿದ ಪಣಿಗಳು ಸರಮೆಯೊಡನೆ ಸ್ನೇಹವನ್ನು ಸಂಪಾದಿಸಲು ಸಂವಾದ ನಡೆಸಿದರು.

ತಮ್ಮ ನೆಲೆಯನ್ನು ಕಂಡುಕೊಂಡ ಸರಮೆಯನ್ನು ಕುರಿತು ಪಣಿಗಳು ಹೇಳುತ್ತಾರೆ– 'ಎಲೌ ಸರಮೆ, ಏನನ್ನಪೇಕ್ಷಿಸಿ ನಮ್ಮ ನೆಲೆಗೆ ಬಂದೆ ? ಈ ಮಾರ್ಗ ಸಂಚಾರಕ್ಕೆ ದುಸ್ತರವಾದುದು. ದೂರವಾದುದು. ಮನಬಂದಾಗ ಬರಲಾಗದು ಇಲ್ಲಿಗೆ. ನಮ್ಮಿಂದ ನೀನು ಬಯಸುವುದೇನು? ನೀನು ಬರುತ್ತಿದ್ದ ಹಾಗೆ ರಾತ್ರಿ ಹೇಗೆ ಕಳೆಯಿತು ? ರಸಾನದಿಯ ಪ್ರವಾಹವನ್ನು ಹೇಗೆ ದಾಟಿ ಬಂದೆ ?' ಆಗ ಸರಮೆ ಹೇಳಿದಳು:

'ಇಂದ್ರಸ್ಯ ದೂತೀರಿಷಿತಾ ಚರಾಮಿ
ಮಹ ಇಚ್ಛಂತೀ ಪಣಯೋ ನಿಧೀನ್ ವಃ |
ಅತಿಷ್ಕದೋ ಭಿಯಸಾ ತನ್ನ ಆವತ್
ತಥಾ ರಸಾಯಾ ಅತರಂ ಪಯಾಂಸಿ ||'(10-108-2)

'ಎಲೈ ಪಣಿಗಳೇ, ನಾನು ಇಂದ್ರನ ದೂತಿ. ಅವನಿಂದ ಕಳುಹಲ್ಪಟ್ಟು ಇಲ್ಲಿಗೆ ಬಂದೆ. ನಿಮ್ಮ ಮಹತ್ತರವಾದ ಗೋಧನವನ್ನು ಬಯಸಿಬಂದೆ. ಅತಿಕ್ರಮಣದಿಂದ ಭಯಗೊಂಡ ನದೀಜಲ ನನ್ನನ್ನು ರಕ್ಷಿಸಿತು. ಹಾಗೆಯೇ ರಸಾನದಿಯನ್ನು ದಾಟಿಬಂದೆ.'

ಆಗ ಪಣಿಗಳು ಇಂದ್ರನ ಪರಾಕ್ರಮವನ್ನೂ ಸೇನಾ ಬಲವನ್ನೂ ವಿಚಾರಿಸಿದರು. ತಮ್ಮ ತಮ್ಮಲ್ಲಿ ಹೇಳಿಕೊಂಡರು–'ಈ ಸರಮೆ ಇಲ್ಲಿಗೆ ಬರಲಿ. ಇವಳನ್ನು ಒಲಿಸಿಕೊಂಡು ಸ್ನೇಹಮಾಡಿಕೊಳ್ಳೋಣ ಇವಳೊಡನೆ. ನಮ್ಮೆಲ್ಲ ಗೋವುಗಳಿಗೆ ಇವಳು ಒಡೆಯಳಾಗಲಿ' ಎಂದು–'ಆಚಗಚ್ಛಾನ್ಮಿತ್ರಮೇನಾ ದಧಾಮಾಥ ಗವಾಂಗೋಪತಿರ್ನೋ ಭವಾತಿ' (10-108-3).

ಇಂದ್ರನನ್ನು ಯಾರೂ ಹಿಂಸಿಸಲಾರರೆಂದೂ, ಎಲರೂ ಅವನಿಂದ ಹಿಂಸೆಗೊಳಗಾಗುವ ರೆಂದೂ, ಗಂಭೀರಸ್ವಭಾವದ ನದಿಗಳೂ ಅವನನ್ನು ಆವರಿಸಲಾರವೆಂದೂ ಹೇಳಿ ಎಚ್ಚರಿಸಿ ಸರಮೆ ಆ ಪಣಿಗಳನ್ನು ಕುರಿತು ಹೇಳಿದಳು–'ಇಂದ್ರನಿಂದ ನೀವು ಹತರಾಗಿ ಬೀಳುವಿರಿ'ಎಂದು (10-108-4).

ಈ ಮಾತು ಪಣಿಗಳನ್ನೂ ರೇಗಿಸಿತು. 'ನಮ್ಮಲ್ಲಿರುವ ಗೋವುಗಳನ್ನು ಅಪಹರಿಸಿಕೊಂಡು ಹೋಗುವುದೇನೂ ಸುಲಭವಲ್ಲ. ನಾವೂ ಆಯುಧಗಳನ್ನು ಹೊತ್ತಿದ್ದೇವೆ. ಯುದ್ಧಮಾಡದೆ ಯಾರು ತಾನೇ ಹಸುಗಳನ್ನು ಒಯ್ಯಬಲ್ಲರು ? ಹಸುಗಳು ಬೆಟ್ಟದೊಳಗೆ ಭದ್ರವಾಗಿವೆ. ಅಸುರರ ಬಲವಾದ ಕಾವಲೂ ಇದೆ. ನೀನಿಷ್ಟು ಪ್ರಯಾಸಪಟ್ಟು ಈ ನದಿಯನ್ನು ದಾಟಿ ಬಂದುದು ವ್ಯರ್ಥವೇ ಸರಿ' ಎಂದರು. ಆಗ ಸುರಮೆ ನುಡಿಯುತ್ತಾಳೆ–'ಸೋಮಪಾನದಿಂದ ಮತ್ತರೂ ನವಗ್ವರೂ ಆದ ಅಂಗೀರಸರು ಈ ನಿಮ್ಮ ಗುಪ್ತಸ್ಥಾನಕ್ಕೆ ಬಂದೇ ಬರುವರು ; ನಿಮ್ಮ ಗೋಸಂಪತ್ತನ್ನು ಪಡೆದುಕೊಂಡು ಹಂಚಿಕೊಳ್ಳುವರು' ಎಂದು. ಇವಳು ಹೇಳಿದುದು ನಿಜವೆಂದು ತಿಳಿದ ಪಣಿಗಳು ಹೆದರಿದರು. ಹೇಗಾದರೂ ಸರಮೆಯನ್ನು ಒಲಿಸಿಕೊಂಡು ಅಲ್ಲೇ ಉಳಿಸಿಕೊಳ್ಳಬೇಕೆಂದು ಚಿಂತಿಸಿ ಅವರು ಸರಮೆಗೆ ಇಂತೆಂದರು :

'ಏವಾ ಚ ತ್ವಂ ಸರಮ ಆಜಗಂಥ
ಪ್ರಬಾಧಿತಾ ಸಹಸಾ ದೈವ್ಯೇನ |
ಸ್ವಸಾರಂ ತ್ವಾ ಕೃಣವೈ ಮಾಪುನರ್ಗಾ:
ಅಪ ತೇ ಗವಾಂ ಸುಭಗೇ ಭಜಾಮ ||' (10-108-9)

'ಹೇ ಸರಮೇ, ದೈವಬಲದಿಂದ ಕೂಡಿ ಬಲಪೂರದಲ್ಲಿ ಹಸುಗಳ ನೆಲೆಯನ್ನರಿತು ಹಿಂತಿರುಗಿ ಬರಬೇಕೆಂದು ಹೇಳಲ್ಪಟ್ಟ ನೀನು ಇಲ್ಲಿಗೆ ಬಂದಿರುವುದು ಸರಿಯಷ್ಟೆ ? ನಿನ್ನನ್ನು ನಾವೀಗ ಸೋದರಿಯನ್ನಾಗಿ ಮಾಡಿಕೊಳ್ಳುವೆವು. ನೀನು ಮತ್ತೆ ಹಿಂತಿರುಗಿ ಹೋಗುವುದೇ ಬೇಡ. ಇಲ್ಲಿರುವ ಹಸುಗಳನ್ನು ನಾವೆಲ್ಲರೂ ಹಂಚಿಕೊಳ್ಳೋಣ.'

ಈ ಮಾತಿಗೆ ಸರಮೆ ಒಲಿಯಲಿಲ್ಲ. ಅವರ ಪ್ರಾರ್ಥನೆಯನ್ನು ನಿರಾಕರಿಸಿದಳವಳು. ತಾನು ಹೋದ ಕೂಡಲೇ ಇಂದ್ರನೂ ಆಂಗಿರಸರೂ ಅಲ್ಲಿಗೆ ಬರುವರೆಂದೂ ಆ ಕಾರಣ ಗೋವ್ರಗಳನ್ನಲ್ಲೇ ಬಿಟ್ಟುಬಿಟ್ಟು ತಲೆತಪ್ಪಿಸಿಕೊಂಡು ಹೋಗುವುದು ಮೇಲೆಂದೂ ಪಣಿಗಳಿಗೆ ಅವಳು ತಿಳಿಸಿದಳು. ಅದರಂತೆ ಪಣಿಗಳು ಇಂದ್ರಾದಿಗಳಿಂದ ಪರಾಭವಗೊಂಡರೆಂದು ಊಹಿಸಬಹುದು.

ಈ ಸೂಕ್ತಕ್ಕೆ ಐತಿಹಾಸಿಕ ಮಹತ್ವವಿದೆಯೆಂದು ವಿಮರ್ಶಕರ ಅಭಿಪ್ರಾಯವಿದೆ ರಸಾನದಿ ಆರ್ಯನಿವಾಸದ ಗಡಿಯಾಗಿತ್ತೆಂದೂ ಪಣಿಗಳು ಗಡಿಯಾಚೆ ಇದ್ದ ಅನಾರ್ಯರೆಂದೂ ಹೇಳುತ್ತಾರೆ. ಆರ್ಯದಸ್ಯುಗಳ ವಿವಾದದ ಸೂಚನೆ ಈ ಸೂಕ್ತದಲ್ಲಿದೆಯೆಂದು ಆ ಕಾರಣ ಹೇಳುತ್ತಾರೆ. 'ಪಣಿ: ವಣಿಗ್ಭವತಿ' ಎಂದು ಯಾಸ್ಕರು ಹೇಳುತ್ತಾರೆ. ಪಣಿಗಳು ಆರ್ಯಾವರ್ತಕ್ಕೂ ಪ್ರಪಂಚದ ಇತರ ಭಾಗಗಳಿಗೂ ಸಂಪರ್ಕವನ್ನುಂಟುಮಾಡುವ ವರ್ತಕರಾಗಿದ್ದಿರಬಹುದು. ಸರಮೆ ಆರ್ಯವೀರರ ಪರಾಕ್ರಮಾತಿಶಯಗಳನ್ನು ಕೊಂಡಾಡುತ್ತದೆ. ಗೋಧನವನ್ನಪಹರಿಸುವ ವಾಡಿಕೆ ಬಹಳ ಹಿಂದಿನದೆಂದು ಇದು ಸೂಚಿಸುತ್ತದೆ. ಮಹಾಭಾರತದಲ್ಲಿಯೂ ಗೋಗ್ರಹಣದ ಪ್ರಸಂಗ ಬರುತ್ತದೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಅಗ್ನಿ ಮತ್ತು ದೇವತೆಗಳ ಸಂವಾದವೊಂದು ಹತ್ತನೆಯ ಮಂಡಲದಲ್ಲಿದೆ (10-51). ಕನಿಷ್ಠನಾದ ಸೌಚೀಕನೆಂಬ ಅಗ್ನಿ ವಷಟ್ಕಾರ ಮತ್ತು ಹವಿರ್ವಹನರೆಂಬುವರಿಗೆ ಹೆದರಿ ನೀರಿನಲ್ಲಿ ಅಡಗಿಕೊಂಡನೆಂದು ಸಾಯಣರು ಸೂಚಿಸುತ್ತಾರೆ. ಇಂಥವನನ್ನು ಹುಡುಕುತ್ತಾ ದೇವತೆಗಳು ಬಂದರು. ಮತ್ಸ್ಯಗಳಿಂದ ಇವನು ಪ್ರದರ್ಶಿತನಾಗಿಬಿಟ್ಟ. ಆಗ ಆ ದೇವತೆಗಳೊಡನೆ ಸಂವಾದ ಬೆಳೆಯಿತು.

'ಅಗ್ನಿಯನ್ನು ಕಂಡ ದೇವತೆಗಳು ಹೇಳಿದರು–'ಮಹತ್ತರವಾದ ಪ್ರಾವರಣದಿಂದ ಆವೇಷ್ಟಿತನಾಗಿ ಜಲವನ್ನು ಪ್ರವೇಶಿಸಿದ್ದೀಯೆ. ಎಲೈ ಜಾತವೇದನೇ, ನಿನ್ನ ಸಮಸ್ತಾಂಗಗಳನ್ನೂ ಬಹು ಪ್ರಕಾರವಾಗಿ ದೇವತೆಗಳು ಕಂಡಿದ್ದಾರೆ–' ಎಂದು. 'ವಿಶ್ವಾ ಅಪಶ್ಯದ್ಬಹುಧಾತೇ ಅಗ್ನೇ ಜಾತವೇದಸ್ತನ್ವೋ ದೇವ ಏಕ:' (10-51-1). ಆಗ ಅಗ್ನಿ ಉತ್ತರಿಸಿದನು–

'ಕೋ ಮಾ ದದರ್ಶ ಕತಮ: ಸದೇವ:
ಯೋ ಮೇ ತನ್ವೋ ಬಹುಧಾ ಪರ್ಯಪಶ್ಯತ್ |
ಕ್ವಾಹ ಮಿತ್ರಾವರುಣಾ ಕ್ಷಿಯಂತಿ
ಅಗ್ನೇರ್ವಿಶ್ವಾ: ಸಮಿಧೋ ದೇವಯಾನೀ: ||' (10-15-2)

'ಯಾರು ನನ್ನನ್ನು ಕಂಡವರು ? ಬಹುವಿಧವಾಗಿರುವ ನನ್ನ ದೇಹವನ್ನು ಕಂಡ ಆ ದೇವತೆ ಯಾರು ? ನನ್ನ ಸಮಸ್ತವೂ, ದೀಪ್ತವೂ, ದೇವಯಾನಸಾಧನಭೂತವೂ ಆದ ದೇಹಗಳನ್ನು

ಕಂಡಿದ್ದೇ ನಿಜವಾದರೆ, ಎಲೈಮಿತ್ರಾವರುಣರೇ, ಅವೆಲ್ಲಿವೆಯೆಂದು ತಿಳಿಸಿ.' ಅಗ್ನಿದೇವ ಈ ಮಾತನ್ನು ದೇವತೆಗಳ ಮುಂದಿದ್ದ ಮಿತ್ರಾ ವರುಣರನ್ನು ಕುರಿತು ಆಡಿದನು. 'ಎಲೈ ಜಾತವೇದನೇ, ಉದಕದಲ್ಲಿಯೂ ಓಷಧಿಗಳಲ್ಲಿಯೂ ಪ್ರವೇಶಿಸಿರುವ ನಿನ್ನನ್ನು ನಾವು ಬಯಸುತ್ತೇವೆ. ಅತಿಪ್ರಕಾಶಮಾನವಾದ ನಿನ್ನ ಹತ್ತು ಗೂಢಸ್ಥಾನಗಳನ್ನೂ ತಿಳಿದೆವು'–ಎಂದು ದೇವತೆಗಳೆಂದರು. ಪೃಥಿವ್ಯಾದಿ ಮೂರು ಲೋಕಗಳು, ಅಗ್ನಿವಾಯ್ವಾದಿತ್ಯರೆಂಬ ಮೂರು ದೇವತೆಗಳು ಅಪ್ಪು, ಓಷಧಿ, ವನಸ್ಪತಿ ಮತ್ತು ಪ್ರಾಣಿಶರೀರ—ಈ ಹತ್ತು ಗೂಢಸ್ಥಾನಗಳಲ್ಲಿ ಅಗ್ನಿಪ್ರಕಾಶಮಾನನಾಗಿದ್ದಾನೆ. ಈ ಹತ್ತು ಸ್ಥಾನಗಳನ್ನೂ ಇಲ್ಲಿ 'ದಶಾಂತರೂಷ್ಯಾತ್' ಎಂದು ಹೇಳಿದೆ (10-51-3).

ಹವಿರ್ವಹನವನ್ನು ಮಾಡಲು ಹೆದರಿ ತಾನು ಜಲದೊಳಗೆ ಹೊಕ್ಕೆನೆಂದೂ ಮತ್ತೆ ಆ ಕಾರ್ಯವನ್ನು ತಾನು ವಹಿಸಿಕೊಳ್ಳಲಾರೆನೆಂದೂ ಅಗ್ನಿ ಹೇಳುತ್ತಾನೆ. ಮಾನವರು ಯಜ್ಞ ಮಾಡಲಿಚ್ಛಿಸುವರೆಂದೂ ಅವರು ದೇವತೆಗಳನ್ನು ಸೇರುವಂತೆ ಅವರ ಮಾರ್ಗಗಳನ್ನು ಸುಗಮ ಗೊಳಿಸಬೇಕೆಂದೂ ಆದ್ದರಿಂದ ಸೌಮನಸ್ಯದಿಂದ ಹವಿರ್ವಹನವನ್ನು ಆಚರಿಸಬೇಕೆಂದೂ ದೇವತೆಗಳು ಕೇಳಿಕೊಳ್ಳುತ್ತಾರೆ. ಆಗ ಅಗ್ನಿ ಯಾಗದಲ್ಲಿ ತನಗೂ ಪ್ರಧಾನವಾದ ಭಾಗ ಸಲ್ಲಬೇಕೆಂದು ಕೋರುತ್ತಾನೆ–'ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನ್ ಊರ್ಜಸ್ವಂತಂ ಹವಿಷೋ ದತ್ತಭಾಗಂ(10-51-8). ದೇವತೆಗಳು ಈ ಕೋರಿಕೆಯನ್ನು ಅನುಮೋದಿಸುತ್ತಾರೆ–

'ತವ ಪ್ರಯಾಜಾ ಅನುಯಾಜಾಶ್ಚ ಕೇವಲ
ಊರ್ಜಸ್ವಂತೋ ಹವಿಷಃ ಸಂತು ಭಾಗಾಃ |
ತವಾಗ್ನೇ ಯಜ್ಞೋऽಯಮಸ್ತು ಸರ್ವ:
ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ' || (10-51-9)

'ಎಲೈ ಅಗ್ನಿಯೇ, ಯಾಗದಲ್ಲಿ ಪ್ರಧಾನವಾದ ಪ್ರಯಾಜಗಳೂ, ಅನುಯಾಜಗಳೂ ಆದ ಹವಿರ್ಭಾಗಗಳು ನಿನಗೆ ಸಲ್ಲಲಿ. ಈ ಯಾಗವೆಲ್ಲ ನಿನ್ನದಾಗಲಿ. ಸರ್ವ ದಿಕ್ಕುಗಳೂ ನಿನಗೆ ನಮಸ್ಕರಿಸಲಿ.'

ಒಂದನೆಯ ಮಂಡಲದಲ್ಲಿ ಅಗಸ್ತ್ಯ ಮತ್ತು ಲೋಪಾಮುದ್ರೆಯರ ಸಂವಾದವಿದೆ. ಪರಮ ತಪಸ್ವಿಗಳೂ ನೈಷ್ಠಿಕರೂ ಆದ ಅಗಸ್ತ್ಯರು ತಮ್ಮ ಯಜ್ಞಾದ್ಯನುಷ್ಠಾನಗಳಲ್ಲಿಯೇ ಮಗ್ನರಾಗಿ ದ್ದರು. ತಮ್ಮನ್ನು ಅನವರತ ಸೇವಿಸುತ್ತಿದ್ದ ಪತ್ನಿಯಾದ ಲೋಪಾಮುದ್ರೆಯೊಡನೆ ಗಾರ್ಹಸ್ಥ್ಯ ಜೀವನವನ್ನು ಪೂರ್ಣಗೊಳಿಸಲಿಲ್ಲ. ಲೋಪಾಮುದ್ರೆ ಪತಿಯೊಡನೆ ಸಹವಾಸದ ಸೌಖ್ಯವನ್ನು ಬಯಸುತ್ತಾಳೆ. ಸಾಂಸಾರಿಕ ಸುಖಗಳನ್ನು ಬಯಸುವುದಾಗಿ ತಿಳಿಸುತ್ತಾಳೆ ಅಗಸ್ತ್ಯರಿಗೆ ಅವಳು. (1-279-1, 2) ಅಗಸ್ತ್ಯರು ಲೋಪಾಮುದ್ರೆಯ ಅಭೀಷ್ಟವನ್ನು ನೆರವೇರಿಸಲೊಪ್ಪುತ್ತಾರೆ.

ದಂಪತಿಗಳ ಈ ರಹಸ್ಯಸಂವಾದವನ್ನು ಪಕ್ಕದಲ್ಲಿದ್ದ ಶಿಷ್ಯನು ಕೇಳಿದ. ಆ ಪಾಪ ಪರಿಹಾರಾರ್ಥವಾಗಿ ಮುಂದಿನ ಎರಡು ಮಂತ್ರಗಳನ್ನವನು ಹೇಳಿದನು. ತಾನು ಸೋಮಯಾಗದಲ್ಲಿ ಮಾಡಿದ ಸೋಮಪಾನ ತನ್ನನ್ನು ಆ ಪಾಪದಿಂದ ಕಾಪಾಡಲೆಂದು ಕೋರಿದನವನು. ತನ್ನ ಗುರುವನ್ನು ಕೊನೆಗೆ ಸ್ತುತಿಸಿದನು ಕೆಳಗೆ ಕಂಡಂತೆ:

'ಅಗಸ್ತ್ಯಃ ಖನಮಾನಃ ಖನಿತ್ರೈಃ
ಪ್ರಜಾಮಪತ್ಯಂ ಬಲಮಿಚ್ಛಮಾನಃ |
ಉಭೌ ವರ್ಣಾವೃಷಿರುಗ್ರಃ ಪುಪೋಷ
ಸತ್ಯಾದೇವೇಷ್ವಾಶಿಷೋ ಜಗಾಮ ||' (1-179-6)

'ನಮ್ಮ ಗುರು ಅಗಸ್ತ್ಯರು ಯಜ್ಞಸ್ತ್ರವಗಳಿಂದ ತಮ್ಮ ಅಪೇಕ್ಷೆಗಳನ್ನು ಪೂರಯಿಸಿಕೊಂಡು ವಂಶವೃದ್ಧಿಗೆ ಸಾಧನವಾದ ಪುತ್ರಬಲವನ್ನಿಚ್ಛಿಸಿದರು. ಆ ಮಹಾನುಭಾವರು ಸಂಸಾರ ದಲ್ಲಿದ್ದರೂ ಪಾಪದೂರರಾಗಿ ಕಾಮ ಮತ್ತು ತಪಸ್ಸುಗಳ ಉಭಯಾಕಾರಗಳನ್ನೂ ಬೆಳೆಸಿಕೊಂಡು ದೇವತೆಗಳ ಅನುಗ್ರಹಕ್ಕೆ ಪಾತ್ರರಾದರು' ಎಂದು–

ಹೀಗೆ ಋಕ್ಸಂಹಿತೆಯಲ್ಲಿ ಹಲವಾರು ಸಂವಾದ ಸೂಕ್ತಗಳಿವೆ. ಇವು ಮುಂದಿನ ಕಾವ್ಯ ನಾಟಕಗಳಿಗೆ ಆಧಾರವಾಗಿವೆ.

## ವಿವಾಹ ಸೂಕ್ತ

ಋಗ್ವೇದದ ಹತ್ತನೇಮಂಡಲದ 85ನೇ ಸೂಕ್ತ ಸೂರ್ಯಾಸೂಕ್ತವೆಂದು ಪ್ರಸಿದ್ಧವಾಗಿದೆ– ಇದಕ್ಕೆ ವಿವಾಹ ಸೂಕ್ತವೆಂದೂ ಹೆಸರುಂಟು. ವಿವಾಹ ಪ್ರಯುಕ್ತವಾದ ಅನೇಕ ಮಂತ್ರಗಳ ಸಂಗ್ರಹವಿಲ್ಲಿದೆ. ಇದು ಭಾರತ ದೇಶದ ವಿವಾಹ ಕ್ರಮದ ವಿಚಾರವನ್ನು ತಿಳಿಸುತ್ತದೆ. ಸೂರ್ಯಪುತ್ರಿಯಾದ ಸೂರ್ಯೆ ಮತ್ತು ಸೋಮನ ವಿವಾಹವರ್ಣನೆ ಈ ಸೂಕ್ತದಲ್ಲಿದೆ. ವೈದಿಕವಿವಾಹ ನಡೆಯುವ ಬಗೆಯನ್ನು ಇದರಿಂದ ನಾವು ತಿಳಿಯಬಹುದು. ವರನು ವಧುವಿನ ಮನೆಗೆ ಬಂದು ವಿವಾಹ ಸಮಾರಂಭವನ್ನು ಮೊದಲು ಮಾಡುತ್ತಿದ್ದನು. ವಧುವನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಕುಲವೃದ್ಧರ ಅನುಮತಿಯನ್ನು ಪಡೆದುಕೊಂಡು ಅಗ್ನಿಸಾಕ್ಷಿಯಾಗಿ ಪಾಣಿಗ್ರಹಣ ಮಾಡುತ್ತಿದ್ದನು. ಕನ್ಯಾಪಿತನು ಕೊಟ್ಟ ಪಶುಗಳು, ಕುದುರೆಗಳು ಮೊದಲಾದ ಬಳುವಳಿಯನ್ನೆಲ್ಲಾ ಜೊತೆಯಲ್ಲಿ ತೆಗೆದುಕೊಂಡು ವಧು ಪತಿಯ ಮನೆಗೆ ಸಾರುತ್ತಿದ್ದಳು. ವಧು ಅವಿಭಕ್ತ ಕುಟುಂಬಕ್ಕೆ ಪ್ರವೇಶಿಸುತ್ತಿದ್ದಳು. ಅತ್ತೆಯ ಮನೆಯಲ್ಲಿ ಅವಳಿಗೆ ಒಳ್ಳೆಯ ಗೌರವದ ಸ್ಥಾನವಿತ್ತು. ವಿವಾಹ ಬಹಳ ಪವಿತ್ರವಾದುದಾಗಿತ್ತು.

ಈ ಸೂಕ್ತದಲ್ಲಿ 47 ಮಂತ್ರಗಳಿವೆ. ಸವಿತೃ ಪುತ್ರಿಯಾದ ಸೂರ್ಯೆಯೇ ಇದಕ್ಕೆ ಋಷಿ ಎಂದು ಹೇಳಿದೆ. ಸೂಕ್ತದ ಆರಂಭದಲ್ಲಿ ಸೋಮದೇವನ ಮಹಿಮೆಯನ್ನು ಕೊಂಡಾಡಿದೆ. 'ದ್ಯುಲೋಕದ'ಲ್ಲಿ ಸೋಮನು ನೆಲಸಿದ್ದಾನೆ. ಆ ದೇವನ ಮಹಿಮೆ ಅಪಾರ. ಭೂಮಿ ಮಹತ್ವ ಪಡೆದುದು ಅವನಿಂದ. ಅವನು ಅಮೃತಸೇಚನದಿಂದ ಓಷಧಿಗಳನ್ನು ಅಭಿವೃದ್ಧಿಪಡಿಸಿದನು. ಆದಿತ್ಯರೂ ಸೋಮನ ಕಾರಣದಿಂದಲೇ ಬಲಿಷ್ಠರಾದರು. ನಕ್ಷತ್ರಗಳೆಲ್ಲದರ ಮೇಲೆ ಸೋಮನು ರಸಾತ್ಮಕನಾಗಿ ನಿಂತಿದ್ದಾನೆ. ಈ ಸೋಮದೇವನ ನಿಜಸ್ವರೂಪವನ್ನು ತಿಳಿದವರು ವಿರಳ.

> ಸೋಮೇನಾದಿತ್ಯಾ ಬಲಿನಃ ಸೋಮೇನ ಪೃಥಿವೀ ಮಹಿ |
> ಅಥೋ ನಕ್ಷತ್ರಾಣಾಮೇಷಾಮುಪಸ್ಥೇ ಸೋಮ ಆಹಿತಃ ||' (10-85-2)

ಹೀಗೆ ಸೋಮನ ಮಹಿಮೆಯ ವರ್ಣನೆಯಿಂದ ಸೂಕ್ತ ಆರಂಭವಾಗುತ್ತದೆ.

'ಸೂರ್ಯಾದೇವಿಯು ಪ್ರಾಪ್ತವಯಸ್ಕಳಾಗಿ ಪತಿಯನ್ನು ಆಶಿಸುವಂತಾದಳು. ಸೋಮನು ಪತ್ನಿಯನ್ನು ಹೊಂದಲಿಚ್ಛಿಸಿದನು. ಅಶ್ವಿನೀದೇವತೆಗಳೂ ವರರಾಗಿದ್ದರು. ಆಗ ಸವಿತೃದೇವ ಮಗಳನ್ನು ಸೋಮನಿಗೆ ಕೊಟ್ಟನು (10-85-9).

ವರನು ಕನ್ಯಾಪಿತನನ್ನು ತನಗೆ ಮಗಳನ್ನು ಮದುವೆಮಾಡಿಕೊಡಬೇಕೆಂದು ಬೇಡುವನು. ಹುಡುಗಿಯ ತಂದೆ ಮಗಳನ್ನು ಯೋಗ್ಯವಾದ ವರನಿಗೆ ಮದುವೆಮಾಡಿಕೊಡುತ್ತಿದ್ದನು.

ಪತಿಯ ಗುಣಾಗಣಗಳಿಂದ ಮುಗ್ಧಳಾದ ವಧು ವಿವಾಹ ನಿಶ್ಚಯವಾದಾಗಲೇ ಪತಿಯನ್ನು ಮನಸಾ ಸೇರಿದಳೆಂದು ಕೆಳಗಿನ ಮಂತ್ರದಲ್ಲಿ ರೂಪಣ ಮಾಡಿದೆ–

'ಮನೋ ಅಸ್ಯಾಅನ ಆಸೀತ್
ದ್ಯೌರಾಸೀದುತಚ್ಛದಿಃ |
ಶುಕ್ರಾವನಡ್ವಾಹಾವಾಸ್ತಾಂ
ಯದಯಾತ್ಸೂರ್ಯಾ ಗೃಹಮ್ ||' (10-85-10)

'ಪತಿಯ ಮನೆಗೆ ತೆರಳುವ ಸೂರ್ಯೆಗೆ ಮನಸ್ಸೇ ರಥವಾಯಿತು. ದ್ಯುಲೋಕವೇ ರಥದ ಹೊದಿಕೆಯಾಯಿತು. ದೀಪ್ತರಾದ ಸೂರ್ಯಚಂದ್ರರೇ ರಥವೆಳೆಯುವ ವೃಷಭಗಳಾದರು. ಹೀಗೆ ಸೂರ್ಯೆ ಪತಿಯ ಮನೆಗೆ ಹೋದಳು.'

ಸವಿತೃದೇವನು ಹಸುಗಳೇ ಮೊದಲಾದ ಬಳುವಳಿಯನ್ನು ಅಳಿಯನಿಗೆ ಕೊಟ್ಟನು. ಅವಳು ಪತಿಗೃಹವನ್ನು ಸೇರುವ ಮೊದಲೇ ಈ ಬಳುವಳಿಯಾದ ಹಸುಗಳು ಅಳಿಯನ ಮನೆಯನ್ನು ಸೇರಿದವು (10-85-13).

ಸೋಮ ಸೂರ್ಯೆಯನ್ನು ತನ್ನ ಮನೆಗೆ ಕರೆದೊಯ್ಯುವಾಗ ರಥವನ್ನೇರುವಂತೆ ಹೇಳುತ್ತಾನೆ–

'ಸುಕಿಂಶುಕಂ ಶಾಲ್ಮಲಿಂ ವಿಶ್ವರೂಪಂ
ಹಿರಣ್ಯವರ್ಣಂ ಸುವೃತಂ ಸುಚಕ್ರಂ |
ಆರೋಹ ಸೂರ್ಯೇ ಅಮೃತಸ್ಯ ಲೋಕಂ
ಸ್ಯೋನಂ ಪತ್ಯೇ ವಹತುಂ ಕೃಣುಷ್ವ ||' (10-85-20)

'ಶೋಭನವಾದ ಕಿಂಶುಕ ಮತ್ತು ಶಾಲ್ಮಲಿ ವೃಕ್ಷದಿಂದ ನಿರ್ಮಿತವಾದುದೂ ನಾನಾ ರೂಪವುಳ್ಳುದೂ, ಹಿರಣ್ಯಾಲಂಕಾರ, ಉತ್ತಮವಾದ ಹೊದಿಕೆ ಮತ್ತು ಒಳ್ಳೆಯ ಚಕ್ರಗಳನ್ನುಳ್ಳುದೂ ಆದ ಈ ರಥವನ್ನಾರೋಹಿಸು. ಪತಿಯ ಮನೆಗೆ ಹೋಗುವಾಗ ಅಮರವಾದ ದೇವ ಲೋಕ ಪತಿಗೆ ಸುಖಕರವಾಗುವಂತೆ ಮಾಡು.'

ವಧು ರಥವನ್ನು ಹತ್ತುವಾಗ ಅಲ್ಲಿ ನೆರೆದವರು–'ಪೂರ್ಷದೇವನು ನಿನ್ನನ್ನು ಕೈಹಿಡಿದು ಭರ್ತೃಕುಲಕ್ಕೆ ಕರೆದೊಯ್ಯಲಿ. ಅಶ್ವಿನೀದೇವತೆಗಳು ರಥದಲ್ಲಿ ನಿನ್ನನ್ನು ಕರೆದುಕೊಂಡು ಹೋಗಲಿ. ಪತಿಯ ಮನೆಗೆ ತೆರಳಿ ಗೃಹಸ್ವಾಮಿನಿಯಾಗು. ಪತಿಯ ವಶದಲ್ಲಿದ್ದು ಪತಿಗೃಹ ದಲ್ಲಿರುವವರೊಡನೆ ನಡೆನುಡಿಯನ್ನು ನಡೆಸು (10-85-26)' ಎಂದು ಹೇಳುವರು.

ವರನು ವಧುವನ್ನು ತನ್ನ ಮನೆಗೆ ಕರೆದುಕೊಂಡು ಬರುವನು. ತನ್ನ ಮನೆಯನ್ನು ಅವಳು ಪ್ರವೇಶಿಸುವ ಸಂದರ್ಭದಲ್ಲಿ–

'ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಂ
ಅಸ್ಮಿನ್‌ಗೃಹೇ ಗಾರ್ಹಪತ್ಯಾಯ ಜಾಗೃಹಿ |' (10-85-27)

'ಎಲೌ ವಧುವೇ, ನಿನಗೆ ಈ ಪತಿಕುಲದಲ್ಲಿ ಸಂತಾನ ಸಮೃದ್ಧಿಯಿಂದ ಪ್ರಿಯ ಉಂಟಾಗಲಿ. ಈ ಮನೆಯಲ್ಲಿ ಗೃಹಸ್ವಾಮಿನಿಯಾಗಿ ವರ್ಧಿಸು' ಎಂದು ಹೇಳುತ್ತಾನೆ.

ಊರಿನ ಹಿರಿಯರನ್ನೂ ಮಿತ್ರರನ್ನೂ ಕರೆದು ಅವರಿಗೆ ವಧುವನ್ನು ತೋರಿಸಿ–

'ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ |
ಸೌಭಾಗ್ಯಮಸ್ಯೈ ದತ್ವಾಯಾಥಾಸ್ತಂ ವಿ ಪರೇತನ ||' (10-85-33)

'ಈ ವಧು ಶೋಭನ ಮಂಗಳೆ ನೀವೆಲ್ಲ ಬಂದು ಇವಳನ್ನು ನೋಡಿ. ಇವಳಿಗೆ ಸೌಭಾಗ್ಯವನ್ನು ಹರಸಿ ಸ್ವಗೃಹಗಳಿಗೆ ತೆರಳಿ' ಎಂದು ಹೇಳುವನು ವರ.

ವರನ ಮನೆಯಲ್ಲಿ ಪಾಣಿಗ್ರಹಣ ನಡೆಯುವುದು. ಆಗ ಅವನು 'ಎಲೌ ವಧುವೇ, ಸೌಭಾಗ್ಯಕ್ಕಾಗಿ ನಿನ್ನ ಪಾಣಿಗ್ರಹಣ ಮಾಡುವೆ. ನನ್ನೊಡನೆ ಬಾಳಿ ವಾರ್ಧಕ್ಯವನ್ನು ಹೊಂದು.

ನಾನು ಗೃಹಪತಿಯಾಗಲೆಂದೇ ಭಗ, ಅರ್ಯಮ, ಸವಿತೃ, ಪುರಂಧಿ ಮೊದಲಾದ ದೇವತೆಗಳು ನಿನ್ನನ್ನು ನನಗೆ ಕೊಟ್ಟಿದ್ದಾರೆ.'

'ಗೃಹ್ಣಾಮಿ ತೇ ಸೌಭಾಗತ್ವಾಯ ಹಸ್ತಂ
ಮಯಾ ಪತ್ಯಾ ಜರದಷ್ಟಿರ್ಯಥಾಸಃ |
ಭಗೋ ಅರ್ಯಮಾ ಸವಿತಾ ಪುರಂಧಿಃ
ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ||' (10-85-36)

ಎಂದು ಹೇಳಿ ವಧುವಿನ ಪಾಣಿಗ್ರಹಣವನ್ನು ಮಾಡುವನು ಅಗ್ನಿಸಾಕ್ಷಿಕವಾಗಿ.

ಈ ಸೂಕ್ತದಲ್ಲಿ ವಿವಾಹ ವಿನಿಯುಕ್ತವಾದ ಅನೇಕ ಸುಂದರವಾದ ಆಶೀರ್ವಾದಗಳಿವೆ. ಕೆಳಗೆ ಕೆಲವು ಮಂತ್ರಗಳನ್ನು ಉದಾಹರಿಸಿದೆ–

'ಇಹೈವ ಸ್ತಂ ಮಾವಿಯೌಷ್ಟಂ ವಿಶ್ವಮಾಯುರ್ವ್ಯಶ್ನುತಮ್ |
ಕ್ರೀಳಂತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇ ಗೃಹೇ || (10-85-42)

'ನೀವು ಈ ಮನೆಯಲ್ಲಿಯೇ ಇರುತ್ತಾ ಪೂರ್ಣವಾದ ಆಯುಸ್ಸನ್ನು ಬಾಳಿರಿ. ಮಕ್ಕಳು ಮೊಮ್ಮಕ್ಕಳೊಡನೆ ಕ್ರೀಡಿಸುತ್ತಾ ಈ ನಿಮ್ಮ ಸ್ವಗೃಹದಲ್ಲಿಯೇ ಸುಖಿಸುವವರಾಗಿ.' ವಧುವಿಗೆ ಮಾಡುವ ಆಶೀರ್ವಾದವಿದು–

'ಅಘೋರಚಕ್ಷುರಪತಿಘ್ನ್ಯೇಧಿ
ಶಿವಾ ಪಶುಭ್ಯಃ ಸುಮನಾಃ ಸುವರ್ಚಾಃ |
ವೀರಸೂರ್ದೇವಕಾಮಾ ಸ್ಯೋನಾ
ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ||' (10-85-44)

'ಎಲೌ ವಧುವೇ, ಘೋರವಾದ ದೃಷ್ಟಿ ಇಲ್ಲದವಳಾಗಿ ವರ್ಧಿಸು. ಪತಿಗೆ ಕೇಡು ಬಯಸದವಳಾಗು. ಪ್ರಾಣಿಗಳಿಗೆ ಹಿತಕರಳಾಗು. ಸುಮನಳೂ ಸುವರ್ಚಸ್ಸುಳ್ಳವಳೂ ಆಗು. ವೀರಮಾತೆಯಾಗು. ದೈವಭಕ್ತಿಯನ್ನು ಹೊಂದಿ ಸುಖಕರಳಾಗಿ ನಮಗೂ ಪ್ರಾಣಿಗಳಿಗೂ ಸುಖಕರಳಾಗು.'

ಗೃಹಿಣಿಯ ಮಹೋನ್ನತವಾದ ಆದರ್ಶ ಮತ್ತು ನಿರೀಕ್ಷೆಗಳನ್ನು ಇಲ್ಲಿ ನಾವು ಕಾಣ ಬಹುದು. ಆದರ್ಶ ಸತೀತ್ವದ ವರ್ಣನೆಯೇ ಇದಾಗಿದೆ. ಪತಿಪತ್ನಿಯರು ಒಮ್ಮನಸ್ಸಿನವರಾಗಿ ಬೆಸುಗೆ ಹೊಯ್ದ ಹೃದಯವುಳ್ಳವರಾಗಿ ಪರಸ್ಪರ ಹಿತಕರರಾಗಿ ಬಾಳುವಂತಾಗಬೇಕೆಂಬ ಬೇಡಿಕೆ ಈ ಸೂಕ್ತದ ಕೊನೆಯ ಮಂತ್ರದಲ್ಲಿದೆ.

ಈ ಸೂಕ್ತದಲ್ಲಿ ವರ್ಣಿಸಿರುವ ಸೂರ್ಯೆ ಸೋಮರ ವಿವಾಹದ ಪ್ರಕರಣ ಬಹಳ ಗಹನವಾಗಿದೆ. ಇದು ಲೌಕಿಕ ವಿಚಾರವೇ ಅಥವಾ ಗಹನವಾದ ಆಧ್ಯಾತ್ಮಿಕ ತತ್ತ್ವವೇ ಎಂಬ ವಿಚಾರದಲ್ಲಿಯೂ ಬಹಳ ಚರ್ಚೆ ನಡೆದಿದೆ. ಲೌಕಿಕ ವಿವಾಹ ಪ್ರಯುಕ್ತವಾದ ಮಂತ್ರಗಳನ್ನು ನಾವು ಇಲ್ಲಿ ಕಾಣುವುದೂ, ಅವುಗಳನ್ನು ಇಂದು ವಿವಾಹದಲ್ಲಿ ಬಳಸುತ್ತಿರುವುದೂ ಇದು ಲೌಕಿಕ ವಿಚಾರವೆಂಬ ನಿರ್ಣಯಕ್ಕೆ ಆಧಾರವಾಗಿದೆ. ಇದರೊಡನೆ ಈ ಸೂಕ್ತದಲ್ಲಿ ಸೂರ್ಯೆ ಸೋಮರ ವಿವಾಹ ವಿಚಾರವೂ ಬೆರೆತುಕೊಂಡಿದೆ. ಆ ಕಾರಣ ಇದು ಲೌಕಿಕ ವಿಚಾರವಷ್ಟೇ ಅಲ್ಲ. ಯಾಸ್ಕರು, ಶೌನಕರು ಮೊದಲಾದವರೂ ಈ ವಿಚಾರವನ್ನು ಪರೀಕ್ಷಿಸಿದ್ದಾರೆ. ಬಹಳ ಹಿಂದಿನಿಂದ ವಿಚಾರ ಮಥನ ಆಗಿದೆ. ಆದರೆ ನಿರ್ಣಯ ಮಾತ್ರ ಏಕರೂಪವಾಗಿ ಆಗಿಲ್ಲ. ಇದರಲ್ಲಿ ಬರುವ ಸೂರ್ಯೆ, ಸೋಮ, ಅಶ್ವಿನಿ ದೇವತೆಗಳು ಇವರೆಲ್ಲಾ ಯಾರು ? ಸೂರ್ಯೆ

ಸೋಮನನ್ನು ವಿವಾಹವಾಗುವುದೆಂದರೇನು ? ಮುಂತಾದ ಅನೇಕ ಜಟಿಲವಾದ ಪ್ರಶ್ನೆಗಳೇಳುತ್ತವೆ.

ಈ ಸೂಕ್ತಕ್ಕೆ ಅಂತರಾರ್ಥವುಂಟೆಂಬುದನ್ನು ಯಾಸ್ಕಾದಿಗಳು ಸಮರ್ಥಿಸುತ್ತಾರೆ. ಎರಡು ಬಗೆಯಾದ ರಹಸ್ಯಾರ್ಥಗಳನ್ನು ಪ್ರಧಾನವಾಗಿ ಈ ವೈವಿಧ್ಯದಲ್ಲಿ ನಾವು ಆರಿಸಿಕೊಳ್ಳಬಹುದು.

(೧) ಈ ಸೂಕ್ತದಲ್ಲಿ ಸೂರ್ಯನ ಪ್ರಕಾಶ ಚಂದ್ರನಿಗೆ ಸೇರುವುದೆಂಬುದನ್ನು ಸುಂದರವಾಗಿ ಸೂರ್ಯನ ಮಗಳಾದ ಸೂರ್ಯೆಯನ್ನು ಸೋಮನಿಗೆ ಕೊಟ್ಟು ವಿವಾಹವಾಯಿತೆಂದು ವರ್ಣಿಸಿದೆ. ವಿವಾಹದ ವಿಷಯ ಬಂದ ಕಾರಣ ರೂಢಿಯಲ್ಲಿದ್ದ ವಿಧಾನದಲ್ಲಿ ಈ ರೂಪಣದ ಸುಂದರವಾದ ಚಿತ್ರ ಕೊಡಲ್ಪಟ್ಟಿದೆ. ಸೂರ್ಯೆ ರಥವನ್ನೇರುವುದೂ ಇತರರು ಹರಸುವುದೂ ಇದಕ್ಕೆ ನಿದರ್ಶನ. ಇದಕ್ಕೆ ಯಾಸ್ಕರ ಬೆಂಬಲವಿದೆ. (ನಿ. 11-4 ; 11-5). ಈ ಸೂಕ್ತದ 2, 5, 35 ನೇ ಮಂತ್ರಗಳು ಇದಕ್ಕೆ ಆಧಾರವಾಗಿವೆ.

(೨) ಮತ್ತೊಂದು ಮುಖ್ಯವಾದ ಅಭಿಪ್ರಾಯದಂತೆ ಈ ಸೂಕ್ತದಲ್ಲಿ ಬಂದಿರುವ ಸೂರ್ಯೆ ವಿಶ್ವವನ್ನು ವ್ಯಾಪಿಸಿರುವ ವಾಕ್ತತ್ತ್ವವಾಗಿದ್ದಾಳೆ. ಬೃಹದ್ದೇವತೆ ಇದನ್ನು ಪ್ರಸ್ತಾಪಿಸುತ್ತದೆ. ಈ ಸೂಕ್ತದ 6, 7, 8, 10, 11, 12ನೇ ಮಂತ್ರಗಳು ಇದಕ್ಕೆ ಪೋಷಕವಾಗಿವೆ. (ಬೃ. ದೇ. 2-8ರಿಂದ 10 ; 2-79, -80 ; 7-119ರಿಂದ 121).

'ಸೂರ್ಯಾಮೇವ ಸತೀಮೇತಾಂ ಗೌರೀಂ ವಾಚಂ ಸರಸ್ವತೀಂ' (ಬೃ. ದೇ.) ಎಂದು ಬೃಹದ್ದೇವತೆ ಶಬ್ದಬ್ರಹ್ಮಾತ್ಮಕವಾದ ವಾಕ್ಕು ಸೂರ್ಯಾರೂಪದಲ್ಲಿ ಅಂತರಿಕ್ಷದಲ್ಲಿದೆಯೆಂದು ಹೇಳುತ್ತದೆ.

ಈ ಮಂಡಲದ ಇತರ ಅನೇಕ ಸೂಕ್ತಗಳು ನೋಡಲು ಲೌಕಿಕವಾಗಿ ಕಂಡರೂ ಅವುಗಳಿಗೂ ಆಧ್ಯಾತ್ಮಿಕಾರ್ಥ ಉಂಟೆಂಬುದನ್ನು ಹಿಂದಿನವರು ಹೇಳುವರು. ಆದ್ದರಿಂದ ಸೂಕ್ತಗಳು ಲೌಕಿಕವೇ ಅಲ್ಲವೇ ಎಂಬುದನ್ನು ನಿರ್ಣಯಿಸುವುದಸಾಧ್ಯ. ಲೌಕಿಕ ವಿಚಾರ ಮಾರ್ಗದಲ್ಲಿ ಆಧ್ಯಾತ್ಮಿಕ ವಿವರಣೆ ಮಾಡಿರುವುದನ್ನು ನಾವು ಕಾಣಬಹುದು. ಹಾಗೆಯೇ ಈ ಸೂಕ್ತವೂ ಸಹ ಆಧ್ಯಾತ್ಮಿಕ ತತ್ತ್ವವನ್ನು ನಿರೂಪಿಸುವ ಸುಂದರ ರೂಪಣವಾಗಿದೆ.

## ಐತಿಹಾಸಿಕ ಸೂಕ್ತಗಳು

ಆಧುನಿಕ ವಿಮರ್ಶಕರ ಅಭಿಪ್ರಾಯದಂತೆ ಋಗ್ವೇದದಲ್ಲಿ ನಿರ್ವಿವಾದವಾಗಿ ಇತಿಹಾಸವನ್ನು ಸೂಚಿಸುವ ಅನೇಕ ಅಂಶಗಳಿವೆ. ಇವುಗಳ ಸಹಾಯದಿಂದ ಅಂದಿನ ಇತಿಹಾಸವನ್ನು ಕಟ್ಟಬಹುದೆಂದು ಇವರ ಅಭಿಪ್ರಾಯ. ಆದರೆ ಮತ್ತೆ ಕೆಲವರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಋಗ್ವೇದದ ಮಂತ್ರಗಳೆಲ್ಲಕ್ಕೂ ಆಧ್ಯಾತ್ಮಿಕಾರ್ಥವನ್ನೋ ಜ್ಯೌತಿಷಿಕವಾದ ಅರ್ಥವೃತ್ತಿಯನ್ನೋ ಹೇಳಬೇಕೆಂದು ಇವರು ಅಭಿಪ್ರಾಯಪಡುತ್ತಾರೆ. ಇವರ ದೃಷ್ಟಿ ನೇರವಾಗಿ ಪರಸ್ಪರವಿರುದ್ಧವಾಗಿರುವುದರಿಂದ ಇವರಲ್ಲಿ ಐಕಕಂಠ್ಯವನ್ನು ನಾವು ಕಾಣಲಾರೆವು. ಬಹಳ ಪ್ರಾಚೀನ ಕಾಲದಿಂದಲೂ ಇಂಥ ಭಿನ್ನಾಭಿಪ್ರಾಯಗಳು ಇದ್ದವೆಂಬುದನ್ನು ನಾವು ಯಾಸ್ಕರ ನಿರುಕ್ತದಿಂದ ತಿಳಿಯಬಹುದು. ಈ ಬಗೆಯ ಅಭಿಪ್ರಾಯಭೇದಗಳಿಗೆ ವೇದದ ಬಗ್ಗೆ ಇವರು ತಳೆದಿರುವ ಪೌರುಷೇಯ ಅಥವಾ ಅಪೌರುಷೇಯದ ನಂಬಿಕೆ ಕಾರಣ.

ಋಗ್ವೇದದಲ್ಲಿರುವ ಅನೇಕ ಮಂತ್ರಗಳು ಆ ಕಾಲದ ರಾಜರ ವಿಚಾರವನ್ನು ತಿಳಿಸುತ್ತವೆ. ರಾಜರ ವಂಶಾವಳಿ, ವೈಭವ ಪರಾಕ್ರಮಗಳು ಮೊದಲಾದುವನ್ನು ಇವು ತಿಳಿಸುತ್ತವೆ.

ದಾನಸ್ತುತಿಗಳು ರಾಜರ ನಾಮಗೋತ್ರಗಳನ್ನು ತಿಳಿಸುತ್ತವೆ. ಬಿಡಿಮಂತ್ರಗಳನೇಕ ಇಂಥ ಮಹತ್ವವನ್ನು ಹೊಂದಿವೆ. ರಾಜರುಗಳು ಪಡೆದ ವಿಜಯಗಳು ಅನೇಕ ಕಡೆ ಪ್ರಸ್ತುತವಾಗಿವೆ. ಏಳನೇ ಮಂಡಲದ 18, 19 ಮತ್ತು 33 ನೇ ಸೂಕ್ತಗಳು ಈ ದೃಷ್ಟಿಯಿಂದ ಮುಖ್ಯವಾಗಿವೆ.

ಯದು, ತುರ್ವಶು, ಮತ್ಸ್ಯ, ಭೃಗು, ದ್ರುಹ್ಯ ಮೊದಲಾದವರು ಯಾಗ ಮಾಡಿ ಯಶಸ್ವಿಯಾಗಲೆಳಸಿದಾಗ ಇಂದ್ರ ಅವರಲ್ಲಿ ಸುದಾಸನನ್ನೇ ರಕ್ಷಿಸಿದ ಎಂಬ ಅಂಶ ಕೆಳಗಿನ ಮಂತ್ರದಲ್ಲಿದೆ:

'ಪುರೋಳಾ ಇತ್ತುರ್ವಶೋ ಯಕ್ಷುರಾಸೀದ್ರಾಯೇ
ಮತ್ಸ್ಯಾಸೋ ನಿಶಿತಾ ಅಪೀವ ।
ಶ್ರುಷ್ಟಿಂ ಚಕ್ರುರ್ಭೃಗವೋ ದ್ರುಹ್ಯವಶ್ಚ
ಸಖಾ ಸಖಾಯಮತರ ದ್ವಿಷೂ ಚೋಃ ॥' (7-18-6)

ಪಕ್ಥಾಸರು, ಭಲಾಸರು, ಅಲೀನಾಸರು, ವಿಷಾಣಿಗಳು, ಶಿವಾಸರು ಮುಂತಾದವರ ಉಲ್ಲೇಖ (7-18-7)ರಲ್ಲಿ ಬಂದಿದೆ. ಈ ಶತ್ರುಗಳನ್ನು ಕೊಂದು ಇಂದ್ರನು ತೃತ್ಸುಗಳಿಗೆ ಗೋವುಗಳನ್ನು ತಂದು ಕೊಟ್ಟನೆಂದು ಹೇಳಿದೆ. ದುರಭಿಸಂಧಿಯುಳ್ಳ ಮಂದಮತಿಗಳಾದ ಶತ್ರುಗಳು ಬಲವತ್ತರವಾದ ಪರುಷ್ಣೀನದಿಯ ಪ್ರವಾಹವನ್ನು ತಿರುಗಿಸಲು ಕೂಲವನ್ನು ಅಗೆದರು. ಆದರೆ ಸಯಮಾನನ ಪುತ್ರನಾದ ಆಕವಿ ಎಂಬುವನು ಸುದಾಸನಿಂದ ಹತನಾಗಿ ಯಾಗದಲ್ಲಿ ಸಂಜ್ಞಪ್ತವಾದ ಪಶುವಿನಂತೆ ಸತ್ತು ಬಿದ್ದನು (7-18-8). ಪರುಷ್ಣಿ ಮೊದಲಿನಂತೆ ಹರಿಯತೊಡಗಿತು. ಇಂದ್ರನು ಸುದಾಸನ ಶತ್ರುಗಳನ್ನೆಲ್ಲಾ ಧ್ವಂಸ ಮಾಡಿದ. ಸುದಾಸನು ಯಶಸ್ಕಾಮಿಯಾಗಿ 21 ಮಂದಿ ವೈಕರ್ಣರನ್ನು ವಧಿಸಿದ–'ಏಕಂ ಚ ಯೋ ವಿಂಶತಿಂ ಚ ಶ್ರವಸ್ಯಾ ವೈಕರ್ಣಯೋರ್ಜನಾನ್ ರಾಜಾ ನ್ಯಸ್ತಃ' (7-18-11). ಇಂದ್ರನನ್ನು ಸ್ತುತಿಸುವವರು ಅವನಿಗೆ ಮಿತ್ರರಾದರು. ಆದರೆ ಅವನನ್ನು ದ್ವೇಷಿಸಿದ ಶ್ರುತ, ಕವಷ ಮತ್ತು ವೃದ್ಧ—ಇವರು ಜಲಸಮಾಧಿಯಾದರು (7-18-12). ಅನುವಿನ ಮಗನ ಧನಾದಿಗಳನ್ನು ತೃತ್ಸುಗಳು ಇಂದ್ರನ ದಯೆಯಿಂದ ಪಡೆದರು (7-18-13). ಇಂದ್ರನ ಮಹಿಮೆಯಿಂದ ರಣರಂಗದಲ್ಲಿ 66066 ಮಂದಿ ಅನುಗಳೂ, ದ್ರುಹ್ಯಗಳೂ ಹತರಾದರು–'ನಿಗವ್ಯವೋಽನವೋ ದ್ರುಹ್ಯವಶ್ಚ ಷಷ್ಟಿಃ ಶತಾ ಸುಷುಪುಃ ಷಟ್ಸಹಸ್ರಾ' (7-18-14). ಭೇದನೆಂಬುವನು ಸುದಾಸನ ಶತ್ರುವಾಗಿದ್ದನು (7-18-18). ಈ ಭೇದನನ್ನು ಇಂದ್ರ ವಧಿಸಲು ಆಗ ಯಮುನರು, ತೃತ್ಸುಗಳು, ಅಜಾಸರು, ಶಿಗ್ರವರು, ಯಕ್ಷವರು–ಇವರೆಲ್ಲರೂ ಇಂದ್ರನನ್ನು ಸ್ತುತಿಸಿ ಅವನಿಗೆ ಅಶ್ವಶಿರಸ್ಸುಗಳನ್ನು ಕಾಣಿಕೆಯಾಗಿ ಇತ್ತರು.

'ಆವದಿಂದ್ರಂ ಯಮುನಾ ತೃತ್ಸವಶ್ಚ
ಪ್ರಾತ್ರಭೇದಂ ಸರ್ವತಾತಾಮುಷಾಯತ್ ।
ಅಜಾಸಶ್ಚ ಶಿಗ್ರವೋ ಯಕ್ಷವಶ್ಚ
ಬಲಿಂ ಶೀರ್ಷಾಣಿ ಜಭ್ರುರಶ್ವ್ಯಾನಿ' (7-18-19)

ಇದರಿಂದ ಪೈಜವನ ಪುತ್ರನಾದ ಸುದಾಸನು ಪರುಷ್ಣಿ ನದೀ ತೀರದಲ್ಲಿ ಅನು, ದ್ರುಹ್ಯ, ಪುರು, ಮತ್ಸ್ಯ, ತುರ್ವಶು ಎಂಬ ಅನಾರ್ಯ ಪಂಗಡದವರೊಡನೆ ಯುದ್ಧ ಮಾಡಿ ಜಯಶೀಲನಾದನೆಂದು ತಿಳಿದುಬರುತ್ತದೆ. ಯಮುನಾ ತೀರವಾಸಿಗಳೂ ಇಂದ್ರನ ಕಟ್ಟಳೆಗೆ ತಲೆಬಾಗಿದರೆಂಬುವುದರಿಂದ ಸುದಾಸ ಯಮುನಾತೀರದವರೆಗಿನ ಪ್ರದೇಶವನ್ನು ಗೆದ್ದಿದ್ದನೆಂಬುದನ್ನು ಸೂಚಿಸುತ್ತದೆ.

ಕುತ್ಸನೆಂಬುವನನ್ನು ಇಂದ್ರನು ಕಾಪಾಡಿ ಅವನೊಡನೆ ಯುದ್ಧಹೂಡಿದ್ದ ದಾಸ, ಶುಷ್ಣ

ಮತ್ತು ಕುವಯ ಎಂಬ ಅಸುರರನ್ನು ಅಡಗಿಸಿದ (7-19-2). ದಭೀತನೆಂಬ ರಾಜರ್ಷಿಗಾಗಿ ದಸ್ಯು, ಚುಮುರಿ, ಧುನಿ ಎಂಬವರನ್ನು ವಧಿಸಿದ ಇಂದ್ರ–(7-19-4). ಶಂಬರನ 99 ಪಟ್ಟಣಗಳನ್ನು ನಾಶಪಡಿಸಿದ ಮತ್ತು ವೃತ್ರ ನಮುಚಿಗಳನ್ನು ಕೊಂದ (7-19-5).

ಏಳನೇ ಮಂಡಲದ ಮೂವತ್ತಮೂರನೇ ಸೂಕ್ತ ದಾಶರಾಜ್ಞ ಯುದ್ಧವನ್ನು ಸ್ಪಷ್ಟವಾಗಿ ಹೇಳುತ್ತದೆ. ಈ ಸೂಕ್ತ ವಸಿಷ್ಠ ವಾಸಿಷ್ಠರ ಸಂವಾದ ರೂಪದಲ್ಲಿದೆ. ಸುದಾಸ ವಸಿಷ್ಠರ ಸಹಾಯ ಸಂಪತ್ತಿನಿಂದ ಜಯಶಾಲಿಯಾದ. ವಸಿಷ್ಠರ ಸ್ತೋತ್ರದ ಕಾರಣವೇ ಇಂದ್ರ ಸುದಾಸನನ್ನು ದಾಶರಾಜ್ಞ ಯುದ್ಧದಲ್ಲಿ ರಕ್ಷಿಸಿದ.

'ಏವೇನ್ನು ಕಂ ದಾಶರಾಜ್ಞೇ ಸುದಾಸಂ
ಪ್ರಾವದಿಂದ್ರೋ ಬ್ರಹ್ಮಣಾ ವೋ ವಸಿಷ್ಠಾಃ |' (7-33-3)

ಇದೇ ಮಂಡಲದ 83ನೇ ಸೂಕ್ತ ದಾಶರಾಜ್ಞ ಯುದ್ಧದ ವಿಚಾರವನ್ನು ಸ್ಪಷ್ಟಗೊಳಿಸುತ್ತದೆ. ಈ ಸೂಕ್ತ ಇಂದ್ರಾವರುಣರನ್ನು ಸ್ತುತಿಸುವುದು. ಅನು, ದ್ರುಹ್ಯ, ಮತ್ಸ್ಯ ಮೊದಲಾದ ಅನಾರ್ಯರು ಒಂದು ಪಂಗಡದ ಆರ್ಯರಿಗೆ ಸಹಾಯ ಮಾಡಿರಬೇಕು. ಹತ್ತುಮಂದಿ ರಾಜರುಗಳಲ್ಲಿ ಕೆಲವರು ಆರ್ಯರೂ ಇದ್ದಿರಬೇಕು. ಯಾಗ ಮಾಡದ, ಇಂದ್ರಾವರುಣರನ್ನು ಸ್ತುತಿಸದ ಆ ಆರ್ಯರನ್ನೂ, ಅವರಿಗೆ ಸಹಾಯಕರಾಗಿ ಬಂದ ಆ ಅನಾರ್ಯರನ್ನೂ ಇಂದ್ರನ ಬಲದಿಂದ ಆ ಯುದ್ಧದಲ್ಲಿ ಸುದಾಸನು ಹತಗೊಳಿಸಿದನು. ಈ ಅಂಶವನ್ನು–

'ದಾಸಾ ಚ ವೃತ್ರಾ ಹತಮಾರ್ಯಾಣಿ ಚ
ಸುದಾಸಮಿಂದ್ರಾವರುಣಾವಸಾವತಮ್ |' (7-83-1)

ಎಂಬ ಮಂತ್ರ ಸೂಚಿಸುತ್ತದೆ. 'ಹತ್ತುಮಂದಿ ರಾಜರುಗಳಿಂದ ತೀವ್ರವಾದ ಆಕ್ರಮಣ ನಡೆದ ಕಾಲದಲ್ಲಿ, ಆ ಸಂಗ್ರಾಮದಲ್ಲಿ ತೃತ್ಸುಗಳ ಜೊತೆಗಿದ್ದ ಸುದಾಸನನ್ನು ಇಂದ್ರನು ರಕ್ಷಿಸಿದನು' ಎಂಬ ಅಂಶ–

'ಯತ್ರ ರಾಜಭಿರ್ದಶಭಿರ್ನಿಬಾಧಿತಂ
ಪ್ರಸುದಾಸಮಾವತಂ ತೃತ್ಸುಭಿಃ ಸಹ |' (7-83-6)

ಎಂಬಲ್ಲಿ ಹೇಳಿದೆ. ಹತ್ತು ರಾಜರುಗಳೂ ಒಮ್ಮೆಲೇ ಸುದಾಸನ ಮೇಲೆ ಆಕ್ರಮಣ ಮಾಡಿದರು. ಆದರೆ ಅವನೊಡನೆ ಕಾದಲಾರದಾದರು. ಈ ಅಂಶ ಕೆಳಗಿನ ಮಂತ್ರದಲ್ಲಿದೆ:

'ದಶರಾಜಾನಃ ಸಮಿತಾ ಅಯಜ್ಯವಃ
ಸುದಾಸಮಿಂದ್ರಾವರುಣಾ ನ ಯುಯುಧುಃ |
ಸತ್ಯಾನೃಣಾಮದ್ಮಸದಾಮುಪಸ್ತುತಿಃ
ದೇವಾ ಏಷಾಮಭವನ್ದೇವಹೂತಿಷು ||' (7-83-7)

'ಯಾಗಾದಿಗಳನ್ನು ಮಾಡದ ಹತ್ತುರಾಜರೂ ಒಟ್ಟಾಗಿ ಸೇರಿ ಸುದಾಸನೊಡನೆ ಯುದ್ಧ ಮಾಡದಾದರು. ಯಾಗದಲ್ಲಿ ಮುಂದಾಳುಗಳಾದ ಋತ್ವಿಜರ ಸ್ತೋತ್ರಗಳು ಸಫಲವಾದವು. ಯಾಗಗಳಲ್ಲಿ ನಿಮ್ಮ ಅನುಗ್ರಹದಿಂದ ದೇವತೆಗಳು ಕಾಣಿಸಿಕೊಂಡರು.'

ಈ ವಿಜಯ ಲಭಿಸಿದುದಾದರೂ ವಸಿಷ್ಠರ ಸ್ತುತಿಯ ಕಾರಣವೇ. ಇಂದ್ರಾ ವರುಣರು ವಸಿಷ್ಠರ ಸ್ತುತಿಗೆ ಪ್ರಸನ್ನರಾಗಿ ಸುದಾಸನಿಗೆ ಬಲವನ್ನು ಕೊಟ್ಟರು.

'ದಾಶರಾಜ್ಞೇ ಪರಿಯತ್ತಾಯ ವಿಶ್ವತಃ
ಸುದಾಸ ಇಂದ್ರಾವರುಣಾವಶಿಕ್ಷತಮ್ |

ಶ್ವಿತ್ಯಂಚೋ ಯತ್ರ ನಮಸಾ ಕಪರ್ದಿನೋ
ಧಿಯಾ ಧೀವಂತೋ ಅಸಪಂತ ತೃತ್ಸವಃ ||' (7-83-8)

'ಎಲೈ ಇಂದ್ರಾವರುಣರೇ, ಹತ್ತು ರಾಜರುಗಳಿಂದ ಸುತ್ತುವರಿಯಲ್ಪಟ್ಟ ಸುದಾಸನಿಗೆ ನೀವು ಬಲವನ್ನು ಕರುಣಿಸಿದಿರಿ. ಬೆಳ್ಳಗಿರುವವರೂ, ಜಟಿಲರೂ, ಕರ್ಮಶೀಲರೂ ಆದ ತೃತ್ಸುಗಳೆಂಬ ವಸಿಷ್ಠಶಿಷ್ಯರು ಹವಿಸ್ಸಮರ್ಪಣೆಯಿಂದಲೂ, ಸ್ತುತಿಯಿಂದಲೂ ನಿಮ್ಮನ್ನು ಆಗ ಸೇವಿಸಿದರು.'

ಋಗ್ವೇದದಲ್ಲಿ ಬಂದಿರುವ ಈ ಸುದಾಸ ಅತಿ ಪ್ರಾಚೀನಕಾಲದವನೆಂದೂ ಅವನು ಹತ್ತುರಾಜರೊಡನೆ ಕಾದಿದ ಘಟನೆ ಬಹಳ ಪ್ರಾಚೀನವಾದುದೆಂದೂ ಹೇಳುತ್ತಾರೆ ವಿಮರ್ಶಕರು. ಇಂಥ ಅನೇಕ ಸೂಕ್ತಗಳಿಂದ ಭಾರತದ ಪ್ರಾಚೀನ ಕಾಲದ ಇತಿಹಾಸವು ಗೊತ್ತಾಗುತ್ತದೆ.

ದಾನ ಸ್ತುತಿಗಳನೇಕವನ್ನು ನಾವು ಅಧ್ಯಯನ ಮಾಡಿದರೆ ಋಗ್ವೇದ ಕಾಲೀನರಾದ ಅನೇಕ ರಾಜರುಗಳ ವಿಚಾರ ಗೊತ್ತಾಗುತ್ತದೆ. ಪುರುಮೀಢ(5-61-9,10) ಅಭ್ಯಾವರ್ತೀಚಾಯಮಾನ, (6-27-4ರಿಂದ 6-27-8) ಮನುಸಾವರ್ಣಿ (10-62-7,8) ಮುಂತಾದವರು ಮಹತ್ತಮವಾದ ದಾನಮಾಡಿದವರೆಂದು ಪ್ರಸಿದ್ಧರಾಗಿದ್ದಾರೆ. ಇವರಂತೆಯೇ ಪೃಥುಶ್ರವಸ್, ಸ್ವನಯಭಾವ್ಯ, ಋಣಂಜಯ, ಶ್ರುತರಥ, ಪಾಕಸ್ಥಾಮಾ, ಕುರಂಗ, ಕಶು, ಚಿತ್ರ, ವರೋಸುಷಾಮನ್, ಇಂದ್ರೋತ, ಶ್ರುತರ್ವನ್ ಮುಂತಾದ ರಾಜರುಗಳು ಮಾಡಿದ ದಾನಗಳನ್ನೂ ಕೊಂಡಾಡಿದ್ದಾರೆ.

ಆರ್ಯ, ದಾಸ, ಅದೇವ ಮುಂತಾದ ಪದಗಳ ಪ್ರಯೋಗ ಇಲ್ಲಿರುವುದರಿಂದ ಅಂದಿನ ಜನರಲ್ಲಿ ಮುಖ್ಯವಾಗಿ ಎರಡು ಪಂಗಡಗಳಿದ್ದಿರಬೇಕು. ದಸ್ಯುಗಳೆಂದರೆ ಯಾರು ಎಂಬ ವಿಚಾರದಲ್ಲಿ ಬಹಳ ಚರ್ಚೆ ಆಗಿದೆ. ಭಾರತ ದೇಶದ ಮೂಲ ನಿವಾಸಿಗಳನ್ನು ಇಲ್ಲಿಗೆ ವಲಸೆ ಬಂದ ಆರ್ಯರು ದಸ್ಯುಗಳೆಂದು ಕರೆಯುತ್ತಿದ್ದರೆಂದು ಅನೇಕ ವಿಮರ್ಶಕರು ಹೇಳುತ್ತಾರೆ. ಭಾರತದಲ್ಲಿಯೇ ಆರ್ಯರು ಮೂಲನಿವಾಸಿಗಳಾಗಿದ್ದರೆಂದೂ, ಅವರು ಎಲ್ಲಿಂದಲೂ ಇಲ್ಲಿಗೆ ಬರಲಿಲ್ಲವೆಂದೂ ನಿಶ್ಚಯಿಸುವ ವಿಮರ್ಶಕರು ದಸ್ಯು ಶಬ್ದ ಆರ್ಯರ ಧರ್ಮವನ್ನನುಸರಿಸದ ಜನರಿಗೆ ಅನ್ವಯಿಸಿತ್ತೆಂದು ಹೇಳುತ್ತಾರೆ. ವೇದ ಧರ್ಮವನ್ನಂಗೀಕರಿಸದೆ ಯಾಗಾದಿಗಳನ್ನು ಮಾಡದವರನ್ನು ದಾಸ, ದಸ್ಯುಗಳೆಂದು ಕರೆಯುತ್ತಿದ್ದರೆಂದು ಇವರ ಮತ.

ಋಗ್ವೇದದಲ್ಲಿ ಬರುವ ನದಿಗಳ ಮತ್ತು ದೇಶ ಪರ್ವತಾದಿಗಳ ವರ್ಣನೆಯಿಂದ ಆ ಜನರು ವಾಸಮಾಡುತ್ತಿದ್ದ ಪ್ರದೇಶವನ್ನು ಗುರುತಿಸುವ ಪ್ರಯತ್ನ ನಡೆದಿದೆ. ಸಿಂಧೂನದಿಯ ಉಲ್ಲೇಖ ಹೆಚ್ಚಾಗಿರುವುದರಿಂದ ಆರ್ಯರು ಸಿಂಧೂನದಿಯ ತೀರದಲ್ಲಿದ್ದರೆಂದು ಊಹಿಸ ಲಾಗಿದೆ. ಸಪ್ತಸಿಂಧು ಎಂಬ ಶಬ್ದ ಇಲ್ಲಿ ದೊರೆಯುತ್ತದೆ. ಇವು ಯಾವುವೆಂಬುದು ಸ್ಪಷ್ಟವಾಗಿ ಅಲ್ಲಿ ಹೇಳಿಲ್ಲ. ಸಿಂಧೂನದಿ, ಅದರ ಉಪನದಿಗಳು ಐದು ಮತ್ತು ಸರಸ್ವತೀನದಿ ಸೇರಿ ಸಪ್ತ ಸಿಂಧೂಗಳೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಸಪ್ತಸಿಂಧುಗಳೆಂಬುವುದಕ್ಕೆ ವಿದ್ವಾಂಸರು ಬಗೆಬಗೆಯಾಗಿ ವರ್ಣನೆ ನೀಡಿದ್ದಾರೆ. ಹತ್ತನೆಯಮಂಡಲದ 75ನೇ ಸೂಕ್ತದಲ್ಲಿ ನದಿಗಳ ಸ್ತುತಿ ಇದೆ. ಈ ಸೂಕ್ತದಲ್ಲಿ ಮೊದಲ ನಾಲ್ಕು ಮಂತ್ರಗಳಿಂದ ಸಿಂಧೂ ನದಿಯನ್ನೂ ಮುಂದಿನ ಮಂತ್ರಗಳಿಂದ ಸಿಂಧೂನದಿಗೆ ಪೂರ್ವದಲ್ಲಿರುವ ನದಿಗಳನ್ನೂ ಸ್ತುತಿಸಿದೆ. ಆದರೆ ಅಲ್ಲಿಂದ ಕ್ರಮವಾಗಿ ಪೂರ್ವಕ್ಕಿರುವ ನದಿಗಳನ್ನೇ ಹೇಳಿಲ್ಲ. ಪೂರ್ವದಿಂದ ಪಶ್ಚಿಮಕ್ಕೆ ಬಂದರೆ ಕ್ರಮವಾಗಿ ದೊರೆಯುವ ನದಿಗಳ ಉಲ್ಲೇಖವಿಲ್ಲದೆ. ಹೀಗಾಗಿ ಗಂಗಾ, ಯಮುನಾ, ಸರಸ್ವತಿ, ಶುತುದ್ರಿ, ಪರುಷ್ಣಿ, ಅಸಿಕ್ನಿ, ಮರುದ್ವೃಧಾ, ವಿತಸ್ತಾ, ಆರ್ಜಿಕೀಯಾ ನದಿಗಳ ಹೆಸರಿದೆ. (10-75-5). ಮುಂದಿನ ಮಂತ್ರದಲ್ಲಿ ಸಿಂಧೂನದಿಯ ಉಪನದಿಗಳಾದ ರಸಾ, ಶ್ವೇತ್ಯಾ, ಕುಭಾ, ಗೋಮತೀ,

ಕ್ರಮುಗಳನ್ನು ಹೇಳಿದೆ (10-75-6). ಇದರಿಂದ ಇವರ ವಸತಿ ಉತ್ತರದಲ್ಲಿ ಹಿಂದೂಕುಷ್‌ನಿಂದ ಹಿಡಿದು ಗಂಗಾನದಿಯ ಬಯಲಿನವರೆಗೂ ಹರಡಿತ್ತು. ಋಗ್ವೇದದಲ್ಲಿ ಸರಸ್ವತೀ ನದಿಯನ್ನು ವಿಶೇಷವಾಗಿ ಸ್ತುತಿಸಿರುವುದರಿಂದ ಅದು ಬಹಳ ಪವಿತ್ರವಾಗಿದ್ದಿತು. (ಈ ನದಿಯ ಹೆಸರಾದ 'ಸರಸ್ವತೀ' ಪರ್ಷಿಯನರಲ್ಲಿ 'ಹರ್ಕ್ಯ್ವತಿ' ಎಂದಿರುವುದು ಗಮನಾರ್ಹ). ಈ ನದಿ ಪ್ರಾಯಃ ಈಗಿನ ಆಫ್ಘಾನಿಸ್ಥಾನದ ಪಶ್ಚಿಮಕ್ಕಿದ್ದು ಇಂಡೋ ಇರಾನಿಯನ್ನರಿಬ್ಬರಿಗೂ ಚಿರಪರಿಚಿತವಾಗಿದ್ದಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇಂಡೋ ಆರ್ಯನರು ಹಿಮಾಲಯಕ್ಕೆ ಸಮನಾಗಿ ಪೂರ್ವದಿಕ್ಕಿಗೆ ಹೊರಟು ಸರಯೂ ನದೀ ತೀರಕ್ಕೆ ಬಂದು ಸೇರಿದರು. ಇರಾನಿಯನ್ನರು ಇದನ್ನು 'ಹರಯೂ' ಎಂದು ಕರೆದಿರುವುದುಂಟು.

ಋಗ್ವೇದ ಸೂಕ್ತಗಳಲ್ಲಿ ಸೂರ್ಯಚಂದ್ರವಂಶಗಳ ಉಲ್ಲೇಖದ ಸೂಚನೆಯೂ ಇದೆ ಯೆಂದು ವಿಮರ್ಶಕರ ಮತ. ಪುರೂರವ, ನಹುಷ, ಯಯಾತಿಗಳು ಚಂದ್ರವಂಶದವರು. ಯಯಾತಿಯು ಐದು ಮಕ್ಕಳಿಗೆ ಐದು ಹೆಸರನ್ನು ಕೊಟ್ಟನೆಂಬುದನ್ನು

'ಯದಿಂದ್ರಾಗ್ನೀ ಯದುಷು ತುರ್ವಶೇಷು
ಯದ್ ದ್ರುಹ್ಯುಷ್ವನುಷು ಪೂರುಷುಸ್ಥಃ |' (1-108-8)

ಎಂಬಲ್ಲಿ ಕಾಣಬಹುದು. ಪೂರುಗಳು ಸರಸ್ವತೀ ನದೀತೀರದಲ್ಲಿ ರಾಜ್ಯ ಸ್ಥಾಪನೆ ಮಾಡಿದರು. ಕುರುಗಳ ಉಲ್ಲೇಖ ಋಗ್ವೇದದಲ್ಲಿಲ್ಲ. ಋಗ್ವೇದದಲ್ಲಿ ಬಂದಿರುವ ಭರತರೆಂಬುವರು ಸೂರ್ಯವಂಶದವರು. ಇವರು ಮನುವಿನ ಮೊಮ್ಮಕ್ಕಳು. ಇವರು ಸರಸ್ವತೀ ನದೀತೀರದಲ್ಲಿ ಆಳುತ್ತಿದ್ದರು. ಭರತವರ್ಷವೆಂಬ ಹೆಸರು ಇವರಲ್ಲಿ ಪ್ರಸಿದ್ಧನಾದ ಭರತನಿಂದ ಬಂದಿತು, ಈ ಪಂಗಡಕ್ಕೆ ಸೇರಿದವರು ವಿಶ್ವಾಮಿತ್ರರ ಮಾರ್ಗದರ್ಶನದಲ್ಲಿ ವಿಪಾಟ್, ಶುತದ್ರುನದಿಗಳನ್ನು ದಾಟಿ ಸರಯೂ ನದಿಯವರೆಗೆ ಹರಡಿಕೊಂಡರು. 'ವಿಶ್ವಾಮಿತ್ರಸ್ಯ ರಕ್ಷತಿ ಬ್ರಹ್ಮೇದಂ ಭಾರತಂ ಜನಂ' (3-33-13) ಎಂದು ಇವರ ಉಲ್ಲೇಖವಿದೆ. ಋಗ್ವೇದದಲ್ಲಿ ಮಹಾಭಾರತ ಯುದ್ಧದ ಉಲ್ಲೇಖವಾಗಲೀ ಶ್ರೀಕೃಷ್ಣನ ಹೆಸರಾಗಲೀ ಇಲ್ಲ. ಹತ್ತನೆಯ ಮಂಡಲದಲ್ಲಿ ಭಾರತ ವೀರರಾದ ದೇವಾಪಿ, ಶಂತನುಗಳನ್ನು ಹೇಳಿದೆ. ಹತ್ತನೆಯ ಮಂಡಲದ 93ನೇ ಸೂಕ್ತದ 14ನೇ ಮಂತ್ರದಲ್ಲಿ–

'ಪ್ರತದ್ದುಃ ಶೀಮೇ ಪೃಥವಾನೇ ವೇನೇ
ಪ್ರರಾಮೇ ವೋಚಮಸುರೇ ಮಘವತ್ಸು |' (10-95-14)

ಎಂಬಲ್ಲಿ ದುಃಶೀಮ, ಪೃಥವಾನ, ವೇನ, ಬಲಿಷ್ಠನಾದ ರಾಮ–ಇವರ ಹೆಸರುಗಳನ್ನು ಹೇಳಿದೆ. ಈ ರಾಮ ಶ್ರೀಮದ್ರಾಮಾಯಣದ ರಾಮನೆಂದು ಕೆಲವರೂ ಬೇರೆ ಯಾವನೋ ಋಷಿಯೆಂದು ಆಧುನಿಕ ವಿಮರ್ಶಕರೂ ಅಭಿಪ್ರಾಯಪಡುತ್ತಾರೆ.

ಋಗ್ವೇದ ಸೂಕ್ತಗಳು ಹೆಚ್ಚಾಗಿ ಧಾರ್ಮಿಕ ಮಹತ್ವವುಳ್ಳವು. ಇಲ್ಲಿ ಇತಿಹಾಸವನ್ನು ಸೂಚಿಸತಕ್ಕ ಅಂಶಗಳನ್ನು ಹುಡುಕಿ ತೆಗೆಯಬೇಕು. ಇವೂ ಬಹಳ ಸ್ವಲ್ಪವಾಗಿವೆ. ಆದರೂ ಇವುಗಳಿಂದ ಮಹತ್ತಮವಾದ ಐತಿಹಾಸಿಕ ವಿಚಾರಗಳು ಬೆಳಕಿಗೆ ಬರುತ್ತವೆ. ಅಂದಿನ ಜನಜೀವನ ತಾಮಸವಾಗಿರದೆ ಪ್ರಚಂಡವಾದ ಕ್ರಿಯಾಶಕ್ತಿಯಿಂದ ತುಂಬಿ ತುಳುಕುತ್ತಿತ್ತೆಂದು ಇವುಗಳಿಂದ ತಿಳಿಯಬಹುದು.

**ಅಭಿಚಾರಕ ಸೂಕ್ತಗಳು**

ಋಗ್ವೇದದಲ್ಲಿ ದೇವತೆಗಳನ್ನುದ್ದೇಶಿಸಿ ಸೂಕ್ತ ಬಹಳ ವಿರಳ. ಇವುಗಳ ಸಂಖ್ಯೆ 30ರಷ್ಟೂ ಇಲ್ಲ. ಹತ್ತನೆಯ ಮಂಡಲದಲ್ಲಿನ ಸುಮಾರು 10-12 ಸೂಕ್ತಗಳು ಈ ಬಗೆಯವು. ಅಥರ್ವವೇದದಲ್ಲಿ ಬರುವ ಅಭಿಚಾರಕ ಸೂಕ್ತಗಳ ಜಾತಿಗೆ ಇವು ಸೇರಿವೆ. ರೋಗನಿವಾರಣೆಗಾಗಲೀ, ಇಷ್ಟಪ್ರಾಪ್ತಿಗೋಸ್ಕರವಾಗಲೀ, ಪರಪೀಡೆಗಾಗಲೀ ಅನುಸರಿಸುವ ವಾಮಾಚಾರದ ಮಾರ್ಗ ಅಭಿಚಾರಕ ಕ್ರಿಯೆಯಾಗುತ್ತದೆ. ಇಂಥವುಗಳನ್ನು ಅನುಷ್ಠಿಸಬಾರದೆಂದು ಸಜ್ಜನರ ಮತ. ಇವು ಕ್ಷುದ್ರದೇವತೆಗಳನ್ನುದ್ದೇಶಿಸಿರುವ ಕಾರಣದಿಂದಲೂ, ಅಕ್ರಮವಾಗಿರುವುದರಿಂದಲೂ, ಹಿಂಸಾಮಾರ್ಗವನ್ನನುಸರಿಸುವುದರಿಂದಲೂ ಬಹುಜನಮಾನ್ಯವಾಗಿಲ್ಲ. ಅಷ್ಟರಿಂದಲೇ ಸಮಾಜದಲ್ಲಿ ಇವು ಇರಬಾರದೆನ್ನಲಾಗುವುದಿಲ್ಲ. ವಿವಿಧಮನೋವೃತ್ತಿಯ ಜನರಿಗಾಗಿ ವಿವಿಧ ಮಾರ್ಗಗಳಿರುವುದುಂಟು ಒಂದು ಸಮಾಜದಲ್ಲಿ. ಹೀಗಾಗಿ ಋಕ್ಸಂಹಿತೆಯಲ್ಲಿಯೂ ಈ ಬಗೆಯ ಸೂಕ್ತಗಳು ಕೆಲವು ಸೇರಿಕೊಂಡಿವೆ.

ಎರಡನೆಯ ಮಂಡಲದ 42 ಮತ್ತು 43ನೇ ಸೂಕ್ತಗಳು ಕಪಿಂಜಲರೂಪಿಯಾದ ಇಂದ್ರನನ್ನು ದೇವತೆಯನ್ನಾಗಿ ಹೊಂದಿವೆ. ಅಮನೋಜ್ಞವಾದ ಮತ್ತು ಅಶುಭವಾದ ಪಕ್ಷಿಧ್ವನಿಗಳನ್ನು ಕೇಳಿದಾಗ ಈ ಸೂಕ್ತಗಳನ್ನು ಜಪಿಸಬೇಕೆಂದು ವಿಧಿಸಿದೆ– 'ವಯಸಾಮಮನೋಜ್ಞಾನಾಂ ವಾಚಂ ಶ್ರುತ್ವಾ ಕನಿಕ್ರದಜ್ಜನುಷಂ ಪ್ರಬ್ರುವಾಣ ಇತಿ ಸೂಕ್ತೇ ಜಪೇತ್' (ಆಶ್ವ. ಗೃ. 3-10-9) ಎಂದು. ಆದ್ದರಿಂದ ಕೆಲವು ಹಕ್ಕಿಗಳ ವಾಕ್ಕು ಅಶುಭವನ್ನು ನುಡಿಯುತ್ತವೆಂದು ತಿಳಿಯಲಾಗಿತ್ತು. ಹಕ್ಕಿಯ ಶಕುನದ ವಿಚಾರವನ್ನು ನಂಬುತ್ತಿದ್ದರೆಂದು ತಿಳಿಯುತ್ತೇವೆ ಇದರಿಂದ. ಒಂದನೇ ಮಂಡಲದ 191ನೇ ಸೂಕ್ತ ವಿಷಕ್ರಿಮಿಗಳನ್ನು ನಾಶಪಡಿಸಲು ಹೇಳಬೇಕಾಗಿದೆ. ಮರಣಶಯ್ಯೆಯಿಂದ ಮನುಷ್ಯನನ್ನು ಬದುಕಿಸುವ ಸಲುವಾಗಿ ಹೇಳಬೇಕಾದ ಮಂತ್ರಗಳು ಹತ್ತನೇ ಮಂಡಲದ 58 ಮತ್ತು 60ನೇ ಸೂಕ್ತಗಳಲ್ಲಿವೆ. ಸುಬಂಧುವೆಂಬುವನು ಮೃತನಾಗಿ ಬಿದ್ದಾಗ ಅವನನ್ನು ಬದುಕಿಸಲು ಅವನ ಪತ್ನಿಯೂ, ಬಂಧುಗಳೂ ಅವನ ಆಶ್ರಯದಾತನಾದ ಇಕ್ಷ್ವಾಕುರಾಜನನ್ನು ಬೇಡುವರು. ಆ ರಾಜನು ಅವರ ಕೋರಿಕೆಯಂತೆ ಅವರೊಡನೆ ಸೇರಿ ಅಗ್ನಿಯನ್ನು ಸ್ತುತಿಸುವನು. ಅಗ್ನಿದೇವನು ಇದರಿಂದ ಸಂತುಷ್ಟನಾದ. ಅವನಿಗೆ ಜೀವ ಬರಲೆಂದು ಅವನು ಅನುಗ್ರಹಿಸುತ್ತಾನೆ (ಬೃ. ದೇ. 7-97ರಿಂದ 101). ಸುಬಂಧುವಿನ ಜೀವವನ್ನು ಆಹ್ವಾನಿಸುವಾಗ ಹೇಳುವ ಮಂತ್ರವಿದು–

'ಅಯಂ ಮಾತಾಯಂ ಪಿತಾಯಂ ಜೀವಾತುರಾಗಮತ್ ।
ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರಿಹಿ ॥' (10-60-7)

'ಇವನೇ ತಾಯಿ, ತಂದೆ. ನಿನ್ನನ್ನು ಬದುಕಿಸಲು ಬಂದವನೂ ಈ ಅಗ್ನಿದೇವನೇ. ಎಲೈ ಸುಬಂಧುವೇ, ಜೀವಪರಿಧಿಯಲ್ಲಿರುವ ನೀನು ನಿನ್ನ ಪದಾರ್ಪಣಕ್ಕೆ ಅರ್ಹವಾದ ಈ ಶರೀರವನ್ನು ಸೇರಿಕೋ. ಈ ಪರಿಧಿಯಿಂದ ಹೊರಟು ಬಾ.'

'ಯಥಾ ಯುಗಂ ವರತ್ರಯಾ ನಹ್ಯಂತಿ ಧರಣಾಯ ಕಮ್ ।
ಏವಾದಾಧಾರ ತೇ ಮನೋ ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥'

'ಯಥೇಯಂ ಪೃಥಿವೀ ಮಹೀ ದಾಧಾರೇಮಾನ್ವನಸ್ಪತೀನ್ ।
ಏವಾ ದಾಧಾರತೇ ಮನೋ ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥'

'ಯಮಾದಹಂ ವೈವಸ್ವತಾತ್ಸುಬಂಧೋರ್ಮನ ಆಭರಮ್ ।

ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ||'
'ನ್ಯಗ್ವಾತೋಽವ ವಾತಿ ನ್ಯಕ್ತಪತಿ ಸೂರ್ಯಃ |
ನೀಚೀನಮಘ್ನ್ಯಾ ದುಹೇ ನ್ಯಗ್ಭವತು ತೇ ರಪಃ ||' (10-60-8 ರಿಂದ 11)

'ರಸಾದಿಗಳ ಧಾರಣಕ್ಕಾಗಿ ನೊಗವನ್ನು ಪಾಶದಿಂದ ಕಟ್ಟುವಂತೆ ನಿನ್ನ ಮನಸ್ಸನ್ನು (ಆತ್ಮ) ಅಗ್ನಿದೇವನು ಕಟ್ಟಿದ್ದಾನೆ ನೀನು ಬದುಕಲೆಂದು. ಮುಂದೆ ಅರಿಷ್ಟವಿಲ್ಲದೆ ಚೆನ್ನಾಗಿ ಬಾಳಲೆಂದು. ಸಾಯಲೆಂದಲ್ಲ.'

'ಹೇಗೆ ಮಹತ್ತರವಾದ ಪೃಥಿವೀ ಈ ವೃಕ್ಷಾದಿಗಳನ್ನು ಧರಿಸಿದೆಯೋ ಹಾಗೆ ನಿನ್ನ (ಮನಸ್ಸನ್ನು) ಆತ್ಮವನ್ನು ಅಗ್ನಿದೇವನು ನೀನು ಬದುಕಲೆಂದೂ, ಮುಂದೆ ಅರಿಷ್ಟವಿಲ್ಲದೆ ಚೆನ್ನಾಗಿ ಬಾಳಲೆಂದೂ (ನಿನ್ನಲ್ಲಿ) ದೃಢವಾಗಿ ಕಟ್ಟಿದ್ದಾನೆ. ಸಾಯಲೆಂದಲ್ಲ.'

'ವೈವಸ್ವತಯಮನಿಂದ ಸುಬಂಧುವಿನ ಆತ್ಮವನ್ನು ಅವನು ಬದುಕಲೆಂದೂ ಅರಿಷ್ಟವಿಲ್ಲದೆ ಚೆನ್ನಾಗಿ ಬಾಳಲೆಂದೂ ತಂದಿದ್ದೇನೆ. ಸಾಯಲೆಂದಲ್ಲ.'

'ವಾಯುವಿನ ಗತಿ ಕೆಳಮುಖವಾಗಿಯೇ ಬೀಸುವುದಾಗಿದೆ. ಸೂರ್ಯನ ಸುಡುಕಿರಣಗಳು ಕೆಳ ಮುಖವಾಗಿಯೇ ಸಾರುತ್ತವೆ. ಗೋವುಗಳೂ ಕೆಳ ಮುಖವಾಗಿಯೇ ಹಾಲನ್ನು ಕರೆಯುತ್ತವೆ. ಹಾಗೆಯೇ ನಿನ್ನ ಪಾಪವು ಕೆಳಕ್ಕೆ ಬಿದ್ದು ಬಿಡಲಿ.'

ಈ ಮಂತ್ರಗಳಿಂದ ಸುಬಂಧು ಮತ್ತೆ ಜೀವವನ್ನು ಪಡೆದ. ಲಬ್ಧಜೀವನಾದ ಸುಬಂಧುವನ್ನು ಅವನ ಬಂಧುಗಳು ತಮ್ಮ ಕರಗಳಿಂದ–'ಸಜೀವನಾದ ಸುಬಂಧುವನ್ನು ಸ್ಪರ್ಶಿಸುವ ಈ ಹಸ್ತವೀಗ ಶುಭಕರವಾದುದು. ಅತಿಶಯಹೊಂದಿದುದು. ಜೀವಚಿಕಿತ್ಸಾ ಸಾಧನವಾದ ಸರ್ವೌಷಧವನ್ನು ಹೊಂದಿದುದು ಈ ಹಸ್ತ. ಇದು ತಾನೇ ಮಂಗಲಸ್ಪರ್ಶವಾದುದು' ಎಂದು ಹೇಳುತ್ತಾ ಸ್ಪರ್ಶಿಸುತ್ತಾರೆ. ಇವು ಮುಂದಿನ ಮೃತಸಂಜೀವಿನೀವಿದ್ಯೆಗೆ ಮೂಲವಾಗಿವೆ.

ಹತ್ತನೇ ಮಂಡಲದ 183ನೇ ಸೂಕ್ತ ಸಂತಾನವನ್ನನುಗ್ರಹಿಸಲು ಪ್ರಯುಕ್ತವಾಗಿದೆ. ಇದೇ ಮಂಡಲದ 162ನೇ ಸೂಕ್ತ ಗರ್ಭಸಂಸ್ರಾವವನ್ನು ಹೋಗಲಾಡಿಸಿ ಗರ್ಭರಕ್ಷಣೆಯನ್ನು ಮಾಡಲು ಉಪಯುಕ್ತವಾಗಿದೆ. ಆರು ಮಂತ್ರಗಳಿರುವ ಈ ಸೂಕ್ತದ ಮೊದಲನೆ ಮಂತ್ರ ಹೀಗಿದೆ:

"ಬ್ರಹ್ಮಣಾಗ್ನಿಃ ಸಂವಿದಾನೋ ರಕ್ಷೋಹಾ ಬಾಧತಾಮಿತಃ |
ಅಮೀವಾ ಯಸ್ತೇ ಗರ್ಭಂ ದುರ್ಣಾ ಮಾಯೋನಿಮಾಶಯೇ ||' (10-162-1)

'ರಾಕ್ಷಸರ ಹಂತಕನಾದ ಅಗ್ನಿಯು ಮಂತ್ರದೊಡನೆ ಏಕೀಭವಿಸಿ ಅರ್ಶಸ್ ರೋಗ ರೂಪಿಯಾಗಿ ಗರ್ಭವನ್ನು ಸೇರಿರುವ ರಾಕ್ಷಸರನ್ನು ನಮ್ಮಿಂದ ಉಚ್ಚಾಟನೆ ಮಾಡಲಿ.'

ಶತ್ರುಗಳ ನಾಶವನ್ನು ಸಾಧಿಸಲು ಬಳಸುವ ಮಂತ್ರಗಳೂ ಇವೆ. ಹತ್ತನೇ ಮಂಡಲದ 166ನೇ ಸೂಕ್ತ ಇಂಥದು. ಕೆಳಗಿನದು ಈ ಸೂಕ್ತದ ಒಂದು ಮಂತ್ರ.

'ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ |
ಅದಃ ಸಪತ್ನಾಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ ||' (10-166-2)

'ನಾನು ಶತ್ರುನಾಶಕನಾಗುವಂತಾಗಲಿ. ಇಂದ್ರನಂತೆ ಅಹಿಂಸಿತನಾಗಿ ಅಕ್ಷತ ಶರೀರನಾಗಿರುವಂತಾಗಲಿ. ನನ್ನ ಈ ಎಲ್ಲ ಶತ್ರುಗಳೂ ನನ್ನ ಕಾಲಕೆಳಗೆ ಆಕ್ರಾಂತರಾಗಿ ಬಿದ್ದಿರಲಿ.'

ಸಪತ್ನಿಗೆ ಬಾಧೆಯನ್ನುಂಟುಮಾಡುವ ಸೂಕ್ತ (10-145) ಹತ್ತನೇ ಮಂಡಲದಲ್ಲಿದೆ. ಮೂಲಿಕೆಯೊಂದನ್ನು ಸಪತ್ನೀ ನಾಶವನ್ನು ಕೋರಿ ಅಗೆದು ತೆಗೆದು, ಅಭಿಮಂತ್ರಣ ಮಾಡಿ

ತಾನು ಅದನ್ನು ಕಟ್ಟಿಕೊಳ್ಳಬೇಕೆಂದೂ ಆ ಮೂಲಿಕೆ ಪತಿಯ ಸ್ಪರ್ಶವನ್ನು ಹೊಂದುವಂತೆ ಪತಿಯನ್ನು ಆಲಂಗಿಸಿಕೊಳ್ಳಬೇಕೆಂದೂ ಹೇಳಿದೆ. ಆಗ ಕರುವಿನೆಡೆ ಓಡುವ ಹಸುವಿನಂತೆ, ಹಳ್ಳಕ್ಕೆ ಹರಿಯುವ ನೀರಿನಂತೆ, ಅವನ ಮನಸ್ಸು ಅವಳೆಡೆಗೆ ಧಾವಿಸುವುದು–'ಮಾಮನು ಪ್ರತೇ ಮನೋ ವತ್ಸಂಗೌರಿವ ಧಾವತು ಪಥಾ ವಾರೀವ ಧಾವತು.' (10-145-6). ಈ ಸೂಕ್ತದ ಮೊದಲ ಮಂತ್ರ ಹೀಗಿದೆ :

'ಇಮಾಂ ಖನಾಮ್ಯೋಷಧಿಂ ವೀರುಧಂ ಬಲವತ್ತಮಾಂ |
ಯಯಾ ಸಪತ್ನೀಂ ಬಾಧತೇ ಯಯಾ ಸಂವಿಂದತೇ ಪತಿಂ ||' (10-145-1).

'ತನ್ನ ಕೆಲಸವನ್ನು ಬಲವಾಗಿ ಮಾಡುವ ಈ ಮೂಲಿಕೆಯನ್ನು ಅಗೆದು ತೆಗೆಯುವೆನು. ಅದರಿಂದ ಸಪತ್ನಿಗೆ ಬಾಧೆ ಉಂಟಾಗುವುದು. ಪತಿಯನ್ನು ಮತ್ತೆ ಪಡೆದುಕೊಳ್ಳುವೆನು.'

ಹತ್ತನೇ ಮಂಡಲದ 159ನೇ ಸೂಕ್ತದಲ್ಲಿ ಸಪತ್ನಿಯನ್ನು ಪರಾಭವಿಸಿ ಮತ್ತೆ ಪ್ರಾಬಲ್ಯವನ್ನು ಪಡೆದ ಸಂತೋಷವನ್ನು ವ್ಯಕ್ತಪಡಿಸಿದೆ. ಸಪತ್ನೀ ನಾಶನದಲ್ಲಿ ಸೂರ್ಯೋಪಸ್ಥಾನದಲ್ಲಿ ಈ ಸೂಕ್ತವನ್ನು ಬಳಸಬೇಕೆಂದು ಆಪಸ್ತಂಬಗೃಹ್ಯದಲ್ಲಿ (9-9) ಹೇಳಿದೆ. ಈ ಸೂಕ್ತದಿಂದ ಕೆಲವು ಮಂತ್ರಗಳನ್ನು ಇಲ್ಲಿ ಉದ್ಧರಿಸಿದೆ :

'ಉದಸೌ ಸೂರ್ಯೋ ಅಗಾದುದಯಂ ಮಾಮಕೋ ಭಗಃ |
ಅಹಂ ತದ್ವಿದ್ವಲಾ ಪತಿಮಭ್ಯಸಾಕ್ಷಿ ವಿಷಾಸಹಿಃ ||'
'ಸಮಜೈಷಮಿಮಾ ಅಹಂ ಸಪತ್ನೀರಭಿಭೂವರೀ |
ಯಥಾಹಮಸ್ಯ ವೀರಸ್ಯ ವಿರಾಜಾನಿ ಜನಸ್ಯ ಚ ||' (10-159-1, 6)

'ಸೂರ್ಯನು ಮೇಲುದಯಿಸಿದ್ದಾನೆ. ಹಾಗೆಯೇ ನನ್ನ ಭಾಗ್ಯವೂ ಉದಿಸಿದೆ. ಪತಿಯನ್ನು ಪಡೆದವಳಾಗಿ ಅತ್ಯಧಿಕವಾಗಿ ಸಪತ್ನಿಯರನ್ನು ಅಭಿಭವಿಸಿ ಗೆದ್ದೆನು.'

'ಎಲ್ಲರನ್ನೂ ಅತಿಶಯಿಸಿ ನಾನು ಸಪತ್ನಿಯರನ್ನೆಲ್ಲಾ ಗೆದ್ದೆನು. ಈ ವೀರನನ್ನೂ ಅವನ ಜನರನ್ನೂ ವಿಶೇಷವಾಗಿ ಆಳುವೆನು ನಾನು.' ಹಾಗೆಯೇ ಕ್ಷಯರೋಗವನ್ನು ಪರಿಹರಿಸಲು ಪ್ರಾರ್ಥಿಸುವ ಮಂತ್ರಗಳೂ ಇಲ್ಲಿವೆ. ಹೃದಯರೋಗಗಳ ಉಪಶಮನಕ್ಕೆ ಈ ಸೂಕ್ತಗಳಿಂದ ಹೋಮಮಾಡಬೇಕೆಂದು ಆಶ್ವಲಾಯನ ಗೃಹ್ಯ ಸೂತ್ರದಲ್ಲಿ (ಆ. ಗೃ. 3, 6-4, 5) ಹೇಳಿದೆ.

'ಮುಂಚಾಮಿ ತ್ವಾ ಹವಿಷಾ ಜೀವನಾಯ
ಕಮಜ್ಞಾತಯಕ್ಷ್ಮಾದುತ ರಾಜಯಕ್ಷ್ಮಾತ್ |
ಗ್ರಾಹಿರ್ಜಗ್ರಾಹ ಯದಿ ವೈತದೇನಂ
ತಸ್ಯಾ ಇಂದ್ರಾಗ್ನೀ ಪ್ರ ಮುಮುಕ್ತಮೇನಮ್ || (10-161-1)

'ಎಲೈ ಯಕ್ಷ್ಮಾಭಿಭೂತನೇ, ನೀನು ಚಿರಕಾಲ ಬದುಕುವುದಕ್ಕಾಗಿ ಈ ಹವಿಸ್ಸಿನಿಂದ, ಇದಿಂಥದೆಂದು ತಿಳಿಯದ ಕ್ಷಯರೋಗದಿಂದಲೂ, ರಾಜಯಕ್ಷ್ಮದಿಂದಲೂ ನಿನ್ನನ್ನು ಮುಕ್ತ ಮಾಡುವೆನು. ಎಲೈ ಇಂದ್ರಾಗ್ನಿಗಳೇ, ಇವನನ್ನು ಹಿಡಿದಿರುವ ಗ್ರಹರೂಪವಾದ ದೇವತೆ ಯಿಂದಲೂ ಇವನನ್ನು ಬಿಡಿಸಿರಿ.' ಹೀಗೆ ಅನೇಕವಾದ ಉದ್ದೇಶಗಳಿಗಾಗಿ ಪ್ರಯುಕ್ತವಾಗಿರುವ ಆಭಿಚಾರಕ ಸೂಕ್ತಗಳೂ ಋಗ್ವೇದ ಸಂಹಿತೆಯಲ್ಲಿವೆ. ಇವು ಹೆಚ್ಚಾಗಿ ಹತ್ತನೇ ಮಂಡಲದಲ್ಲಿ ಕಂಡುಬರುತ್ತವೆ

## ಬ್ರಹ್ಮೋದ್ಯಗಳು

ಋಗ್ವೇದದಲ್ಲಿರುವ ಕೆಲವು ಮಂತ್ರಗಳು ಸಮಸ್ಯೆಗಳ ರೂಪದಲ್ಲಿವೆ. ಇವುಗಳ ಅರ್ಥ

ಗೂಢವಾಗಿದೆ. ಇವುಗಳಲ್ಲಿ ಕೆಲವು ಮಂತ್ರಗಳು ಯಾವ ದೇವತೆಯನ್ನು ಸ್ತುತಿಸುವುವೆಂಬುದು ಸ್ಪಷ್ಟವಾಗಿಲ್ಲ. ಪ್ರಹೇಳಿಕೆಯ ರೂಪದಲ್ಲಿರುವ ಇವುಗಳಿಗೆ ಬ್ರಹ್ಮೋದ್ಯಗಳೆಂಬ ಹೆಸರಿದೆ. ಎಂಟನೆಯ ಮಂಡಲದ 29ನೇ ಸೂಕ್ತದಲ್ಲಿರುವ ಮಂತ್ರಗಳು ಈ ಗುಂಪಿಗೆ ಸೇರಿವೆ. ಮಂತ್ರದಲ್ಲಿರುವ ವಿಶಿಷ್ಟವಾದ ಪದದ ಆಧಾರದ ಮೇಲೆ ಯಾವ ದೇವತೆಯನ್ನಲ್ಲಿ ಸ್ತುತಿಸಿದೆಯೆಂಬುದನ್ನರಿಯಬಹುದು. ಈ ಸೂಕ್ತದ ಮೊದಲ ಮಂತ್ರದಲ್ಲಿ 'ಬಭ್ರುರೇಕೋ ವಿಷುಣಃ' ಎಂದು ಬಭ್ರುಶಬ್ದವಿದೆ. ಇದರಿಂದ ಈ ಮಂತ್ರ ಸೋಮ ದೇವತಾಕವೆಂದು ಊಹಿಸಬೇಕು. ಈ ಸೂಕ್ತದ 2, 4, 5, 6, 7, 8, 9ನೇ ಮಂತ್ರಗಳಲ್ಲಿ ಅಗ್ನಿ, ಇಂದ್ರ, ರುದ್ರ, ಪೂಷನ್, ವಿಷ್ಣು, ಅಶ್ವಿನೀ ಮತ್ತು ಮಿತ್ರಾ ವರುಣರನ್ನು ಅನುಕ್ರಮವಾಗಿ ಸ್ತುತಿಸಿದೆ. ಉದಾಹರಣೆಗೆ ಎರಡು ಮಂತ್ರಗಳನ್ನು ಇಲ್ಲಿ ಕೊಡಬಹುದು.

'ತಿಗ್ಮಮೇಕೋ ಬಿಭರ್ತಿ ವಜ್ರ ಆಯುಧಂ
ಶುಚಿರುಗ್ರೋ ಜಲಾಷಭೇಷಜಃ ||' (8-29-5)

ಈ ಮಂತ್ರಕ್ಕೆ ರುದ್ರದೇವತೆಯೆಂದು ಜಲಾಷಭೇಷಜ ಎಂಬುದರಿಂದ ತಿಳಿಯಬೇಕು.

'ವಿಭಿರ್ದ್ವಾಚರತ ಏಕಯಾಸಹ
ಪ್ರಪ್ರವಾಸೇವ ಸಹತಃ ||' (8-29-8)

'ಏಕಯಾಸಹ' ಎಂಬುದರಿಂದ ಈ ಮಂತ್ರ ಅಶ್ವಿನೀದೇವತೆಗಳನ್ನು ಸ್ತುತಿಸುವುದೆಂದು ತಿಳಿಯಬೇಕು.

ಋಗ್ವೇದ ಸಂಹಿತೆಯ ಒಂದನೇ ಮಂಡಲದ 164ನೇ ಸೂಕ್ತವೂ ಇಂಥದೇ ಆಗಿದೆ.

ಋಗ್ವೇದ ಸಂಹಿತೆಯಲ್ಲಿನ ವಿಷಯ ವಿವೇಚನೆಯನ್ನು ಇದುವರೆಗೆ ಸೂಕ್ಷ್ಮವಾಗಿ ಮಾಡ ಲಾಯಿತು. ಧಾರ್ಮಿಕ ಸ್ತೋತ್ರಗಳ ಅತ್ಯಂತ ದೊಡ್ಡದಾದ ಸಮೂಹ ಇದಾಗಿದೆ. ಇದರಲ್ಲಿ ಅನೇಕ ಋಷಿಗಳಿಂದ ದೃಷ್ಟವಾದ ನಾನಾ ದೇವತೆಗಳನ್ನು ಕುರಿತ ಸುಂದರವೂ ಭಾವಪೂರ್ಣವೂ ಆದ ಸ್ತುತಿಗಳಿವೆ. ಋಗ್ವೇದದಲ್ಲಿ ಅನೇಕ ದೇವತೆಗಳ ಸ್ತುತಿಯಿದ್ದರೂ ಅವೆಲ್ಲಾ ಏಕಮೇವಾ ದ್ವಿತೀಯವಾದ ದೇವತೆಯನ್ನೇ ಆ ಮಹಾದೇವತೆಯ ವಿಶ್ವವಿಭೂತಿತ್ವದೊಡನೆ ಕೊಂಡಾಡುವುದೆಂದೂ ಅಲ್ಲಿಯೇ ಸಾರಿದೆ. ಎಲ್ಲ ದೇವತೆಗಳೂ ಸಕಲಗುಣಪರಿಪೂರ್ಣರಾಗಿ ಸರ್ವಸಮರಾಗಿದ್ದಾರೆ. ಈ ಸ್ತೋತ್ರಗಳೆಲ್ಲ ಅನುಪಮವಾಗಿ ದೇವತೆಗಳನ್ನು ಸ್ತುತಿಸುತ್ತಾ ದೇವತೆಯ ಸರ್ವಶಕ್ತಿತ್ವ, ಸರ್ವಜ್ಞತ್ವ, ಸರ್ವಾನುಗ್ರಾಹಕತ್ವಾದಿಗಳನ್ನು ಮಾರ್ಮಿಕವಾಗಿ ಹೇಳುತ್ತವೆ. ಮಾನವನ ಐಹಿಕ ಮತ್ತು ಆಮುಷ್ಮಿಕಾಭಿವೃದ್ಧಿ ಭಗವದಧೀನವೆಂದು ಇವು ಸಾರುತ್ತವೆ. ಇವಲ್ಲದೆ ಋಗ್ವೇದ ಸಂಹಿತೆಯಲ್ಲಿ ಕೆಲವು ಲೌಕಿಕ ಸೂಕ್ತಗಳೂ ಇವೆ. ಇವುಗಳಲ್ಲಿ ಅಕ್ಷಸೂಕ್ತ, ಪ್ರೇತಸೂಕ್ತ, ದಾನಸ್ತುತಿ, ಆಭಿಚಾರಕಸೂಕ್ತ, ಸಂವಾದಸೂಕ್ತ ಮೊದಲಾದುವೆಲ್ಲ ಸೇರಿವೆ. ಇವುಗಳ ವಿಚಾರವನ್ನೂ ಸ್ಥೂಲವಾಗಿ ವಿವೇಚಿಸಲಾಗಿದೆ. ಋಷಿಗಳು ಇವೆಲ್ಲವನ್ನೂ ದೇವತೆಯನ್ನಾಗಿ ಮಾಡಿ ಸ್ತುತಿಸಿದ್ದಾರೆ. ಅಶ್ವ, ರಥ, ಆಯುಧ ಮೊದಲಾದುವುಗಳನ್ನು ಸ್ತುತಿಸಿರುವುದು ಹೇಗೆ ಉಪಪನ್ನವಾದೀತು ಎಂಬ ಸಂದೇಹ ಬರಬಹುದು. ಇದಕ್ಕೆ ಯಾಸ್ಕರು 'ಅಪಿಚ ಸತ್ವಾನಾಂ ಪ್ರಕೃತಿ ಭೂಮಭಿಃ ಋಷಯಃ ಸ್ತುವಂತೀ ತ್ಯಾಹುಃ', 'ಪ್ರಕೃತಿ ಸಾರ್ವನಾಮ್ನ್ಯಾಚ್ಚ' (ನಿ. 7-4-10, 11) ಎಂದು ಉತ್ತರಿಸಿದ್ದಾರೆ. ಋಷಿಗಳು ಪ್ರಕೃತಿಗೂ ವಿಕೃತಿಗಳಿಗೂ ಭೇದವೆಣಿಸದೆ ಸ್ತುತಿಸಿದ್ದಾರೆ. 'ಸ ಏಷ ಮಹಾನ್ ಆತ್ಮಾ ಸತ್ವಾಲಕ್ಷಣಃ ತತ್ಪರಂ ತದ್ಬ್ರಹ್ಮ. ಸಭೂತಾತ್ಮಾ ಸ ಭೂತಪ್ರಕೃತಿಃ' ಎಂದು ಹೇಳಿ ಸರ್ವಕ್ಕೂ ಆ ಮಹಾನ್

ಆತ್ಮನು ಪ್ರಕೃತಿ ಎಂದು ಹೇಳಿದೆ. ಅವನು ಕಾರಣ. ಉಳಿದುದೆಲ್ಲ ಕಾರ್ಯ. ಕಾರ್ಯಕಾರಣಗಳು ಅನನ್ಯವಾದುದರಿಂದ ಕಾರ್ಯರೂಪವಾದ ಅಶ್ವ, ಅಕ್ಷ ಮೊದಲಾದವುಗಳಲ್ಲಿ ಕಾರಣ ವಸ್ತುವಿನ ಮಹಿಮೆಯನ್ನು ಋಷಿಗಳು ವರ್ಣಿಸಿದ್ದಾರೆ. ಇವುಗಳೆಲ್ಲದರ ಸ್ತುತಿಯಿಂದ ಆ ಮಹಾನ್ ಆತ್ಮನನ್ನೇ ಸ್ತುತಿಸಿದ್ದಾರೆ ಅವರು. ಆದ್ದರಿಂದ ಈ ಸ್ತುತಿಗಳು ಕೇವಲ ಆಯಾ ವಸ್ತುಗಳನ್ನೂ ದೇವತೆಗಳನ್ನೂ ಸ್ತುತಿಸುವುದಿಲ್ಲ. ಆದರೆ ತತ್ವರೂಪಿಯಾದ ಆ ಸರ್ವಾತ್ಮನನ್ನೇ ಸ್ತುತಿಸುವುವು. ಸರ್ವತ್ರೇನ ಅವನಿಗೆ ಹೆಸರಿರುವುದರಿಂದ ಎಲ್ಲ ಹೆಸರುಗಳೂ ಅವನಿಗೇ ಅನ್ವಯಿಸುವುವು. ಇದನ್ನೇ ಯಾಸ್ಕರು–'ಆತ್ಮೈವೈಷಾಂ ರಥೋಭವತಿ ಆತ್ಮಾ ಅಶ್ವಃ ಆತ್ಮಾ ಆಯುಧಂ ಆತ್ಮಾ ಇಷವಃ ಆತ್ಮಾ ಸರ್ವಂ ದೇವಸ್ಯ ದೇವಸ್ಯ' (ನಿ. 7-14-15) ಎಂದು ಹೇಳಿ ಏಕೈಕನಾದ ಆತ್ಮನಿಗೇ ಬಹುಮುಖವಾದ ನಾಮಧೇಯ ಯೋಗವಿದೆಯೆಂದೂ ಆದ್ದರಿಂದಲೇ ಎಲ್ಲದರ ಸ್ತುತಿಯೂ ಆತನ ಸ್ತುತಿಯೇ ಎಂದೂ ನಿರ್ಣಯಿಸಿದ್ದಾರೆ.

ಈ ದೃಷ್ಟಿಯಿಂದ ನಾವು ವಿಚಾರಿಸಿದಾಗ ಇಲ್ಲಿ ಬರುವ ಎಲ್ಲ ಬಗೆಯ ಸೂಕ್ತಗಳಿಗೂ ಧಾರ್ಮಿಕ ಮಹತ್ವವಿರುವುದು ಗೊತ್ತಾಗುತ್ತದೆ. ಆಧುನಿಕ ವಿಮರ್ಶಕರ ದೃಷ್ಟಿಯಲ್ಲಿ ಅಂದಿನ ಜನಜೀವನ, ಆಚಾರ ವಿಚಾರಗಳು, ಆದರ್ಶಧ್ಯೇಯಗಳು ಮೊದಲಾದುವುಗಳನ್ನು ಲೌಕಿಕ ಸೂಕ್ತಗಳು ತಿಳಿಸುವುವೆಂದೂ ಉಳಿದ ಸ್ತೋತ್ರಗಳಿಂದ ಅವರ ಧರ್ಮ, ದರ್ಶನ ಮುಂತಾದುವುಗಳು ಗೊತ್ತಾಗುವುದೆಂದೂ ಹೇಳುತ್ತಾರೆ. ತಮ್ಮ ಕಾಲದಲ್ಲಿದ್ದ ಆಚಾರ ವಿಚಾರಗಳನ್ನೇ ಋಷಿಗಳು ತಮ್ಮ ಸೂಕ್ತದಲ್ಲಿ ಉಲ್ಲೇಖಿಸಿದ್ದಾರೆಂದೂ, ಇದರ ಅಧ್ಯಯನದಿಂದ ವಿಶ್ವದ ಅತ್ಯಂತ ಪ್ರಾಚೀನವಾದ ಸಮಾಜದ ಪರಿಚಯವಾಗುವುದೆಂದೂ, ಅಂದಿನ ಮಹತ್ಸಾಧನೆಗಳ, ಆಶೆ ಆಕಾಂಕ್ಷೆಗಳ ಮತ್ತು ಜೀವನಕ್ರಮದ ವಿಚಾರ ನಮಗೆ ತಿಳಿಯುವುದೆಂದೂ ವಿದ್ವಾಂಸರು ಸಮರ್ಥಿಸುತ್ತಾರೆ.

### ಋಗ್ವೇದ ಋಷಿಗಳು

ಪ್ರತಿಯೊಂದು ಸೂಕ್ತವನ್ನೂ ಪ್ರಯೋಗಿಸುವಾಗಲೂ ಆ ಸೂಕ್ತದ ಋಷಿ, ದೇವತೆ ಮತ್ತು ಛಂದಸ್ಸುಗಳನ್ನು ತಿಳಿದುಕೊಂಡೇ ಪ್ರಯೋಗಿಸಬೇಕೆಂದು ವಿಧಿಸಿದೆ (ಸರ್ವಾನುಕ್ರಮಣಿ 1-1). ಇಲ್ಲದಿದ್ದರೆ ಆ ಮಂತ್ರ ಫಲಿಸದು. ಅಷ್ಟೇ ಅಲ್ಲದೆ ಪಾಪವೂ ಘಟಿಸುತ್ತದೆ. ಕಾತ್ಯಾಯನರು ಋಷಿ, ದೇವತೆ ಛಂದಸ್ಸುಗಳ ವಿಚಾರವನ್ನು–'ಯಸ್ಯ ವಾಕ್ಯಂ ಸ ಋಷಿಃ |ಯಾತೇನೋಚ್ಯತೇ ಸಾ ದೇವತಾ| ಯದಕ್ಷರ ಪರಿಮಾಣಂ ತಚ್ಛಂದಃ' ಎಂದು ವಿವರಿಸಿದ್ದಾರೆ. 'ಋಷಿಃ ದರ್ಶನಾತ್' ಎಂದು ತಿಳಿಸಿರುವಂತೆ ಮಂತ್ರವನ್ನು ಯಾರು ಮೊದಲು ಕಂಡರೋ ಅವರು ಋಷಿ. ಪರಮೇಶ್ವರನ ಅನುಗ್ರಹದಿಂದ ಅತೀಂದ್ರಿಯವಾದ ವೇದವನ್ನು ಮೊಟ್ಟ ಮೊದಲು ಕಂಡವನು ಋಷಿ ಎಂದು ಸಾಯಣರು ಹೇಳುತ್ತಾರೆ–'ಅತೀಂದ್ರಿಯಸ್ಯವೇದಸ್ಯ ಪರಮೇಶ್ವರಾನುಗ್ರಹೇಣ ಪ್ರಥಮತೋ ದರ್ಶನಾತ್ ಋಷಿತ್ವಂ' ಎಂದು.

ಋಗ್ವೇದ ದ್ರಷ್ಟಾರರುಗಳ ವಿಚಾರ ಬೃಹದ್ದೇವತೆಯಲ್ಲಿ ಹೇಳಿದ್ದಾರೆ:

'ಲೂಶೇ ದುವಸ್ಯೌ ಶಾರ್ಯಾತೇ ಗೋತಮೇಽಥ ಋಜಿಶ್ವನಿ |
ಅವತ್ಸಾರೇ ಪರೂಥೇಪೇ ಅತ್ರೌ ದೀರ್ಘತಮ ಸ್ವಪಾ ||
ವಸಿಷ್ಠೇನಾದಿಷ್ಟೇ ಗಯೇ ಮೇಧಾತಿಥೌಮನೌ |
ಕಕ್ಷೀವತಿ ವಿಹವ್ಯೇಚ ಬಹುಷ್ಯನ್ಯೇಷ್ಯಥರ್ವಷು ||
ಅಗಸ್ತ್ಯೇ ಬೃಹದುಕ್ಥೇ ಚ ವಿಶ್ವಾಮಿತ್ರೇ ಚ ಗಾಥಿನ |

ದೃಶ್ಯಂತೇ ವಿಪ್ರವಾದಾಶ್ಚ ತಾಸು ತಾಸು ಸ್ತುತಿಷ್ವಿಹ || (ಬೃ. 2-129 ರಿಂದ 131)
ಮೇಧಾತಿಥಿಃ ಅಗಸ್ತ್ಯಸ್ತು ಬೃಹದುಕ್ಥೋಮನುರ್ಗಯಃ |
ಋಜಿಶ್ವಾ ವಸುಕರ್ಣಶ್ಚ ಶಾರ್ಯಾತೋ ಗೋತಮೋ ಲುಶಃ
ಸ್ವಸ್ತ್ಯಾತ್ರೇಯಃ ಪರುಛೇಪಃ ಕಕ್ಷೀವಾನ್ ಗಾಥಿನೌರ್ವರೌ |
ನಾಭಾಕಶ್ಚೈವ ನಿರ್ದಿಷ್ಟಃ ದುವಸ್ಯುಃ ಮಮತಾಸುತಃ |
ವಿಹವ್ಯಃ ಕಶ್ಯಪಋಷಿಃ ಅವತ್ಸಾರಶ್ಚ ನಾಮಯಃ |
ವಾಮದೇವೋ ಮಧುಚ್ಛಂದಾಃ ಪಾರ್ಥೋ ದಕ್ಷಸುತಾದಿತಿಃ ||
ಜುಹೂಃ ಗೃತ್ಸ ಮದಶ್ಚರ್ಷಿಃ ದೇವಾಃ ಸಪ್ತರ್ಷಯಶ್ಚ ಯೇ |
ಯಮೋಽಗ್ನಿಃ ತಾಪಸಃ ಕುತ್ಸಃ ಕುಸೀದೀ ತ್ರಿತ ಏವಚ ||
ಬಂಧು ಪ್ರಭೃತಯಶ್ಚೈವ ಚತ್ವಾರೋ ಭ್ರಾತರಃ ಪೃಥಕ್ |
ವಿಷ್ಣುಶ್ಚ ನೇಜಮೇಷಸ್ತ ನಾಮ್ನಾ ಸಂವನಶ್ಚ ಯಃ
ಏತೇ ತು ಸರ್ವ ಏವಾಸ್ಯ ವಿಶ್ವೈಃ ಸ್ವೈಃ ಕರ್ಮಜೈರ್ಗುಣೈಃ |
ಸಮುಸ್ಯೆರಥಚವ್ಯಸ್ವೈಃ ಪೃಥಕ್ ಸೂಕ್ತೇಷು ತುಷ್ಟುವುಃ || (ಬೃ. 2-55 ರಿಂದ 60)

ದ್ರಷ್ಟಾರರಾಗಿದ್ದ ಅನೇಕ ಸ್ತ್ರೀಯರ ವಿವರವನ್ನೂ ಬೃಹದ್ದೇವತೆಯಲ್ಲಿ ಕಾಣಬಹುದು.

'ಘೋಷಾ ಗೋಧಾ ವಿಶ್ವವಾರಾ ಅಪಾಲೋಪನಿಷನ್ನಿಷತ್ |
ಬ್ರಹ್ಮಜಾಯಾ ಜುಹೂರ್ನಾಮ ಅಗಸ್ತ್ಯಸ್ಯ ಸ್ವಸಾऽದಿತಿಃ ||
ಇಂದ್ರಾಣೀಚೇಂದ್ರಮಾತಾಚ ಸರಮಾ ರೋಮಶೋರ್ವಶೀ |
ಲೋಪಾಮುದ್ರಾಚ ನದ್ಯಶ್ಚ ಯಮೀ ನಾರೀ ಚ ಶಶ್ವತೀ ||
ಶ್ರೀಃ ಲಾಕ್ಷಾಸರ್ಪರಾಜ್ಞೀವಾಕ್ ಶ್ರದ್ಧಾ ಮೇಧಾ ಚ ದಕ್ಷಿಣಾ |
ರಾತ್ರೀ ಸೂರ್ಯಾ ಚ ಸಾವಿತ್ರೀ ಬ್ರಹ್ಮವಾದಿನ್ಯ ಈರಿತಾಃ ||' (ಬೃ. 2-82 ರಿಂದ 84)

ಹತ್ತನೇ ಮಂಡಲದ ಋಷಿಗಳಲ್ಲಿ ಅನೇಕರು ರಾಜರ್ಷಿಗಳೂ ಆಗಿದ್ದರು. ಕಾವೇಷ ಐಲೂಷ (10-31), ಅರುಣಾವೈತಹವ್ಯ (10-91), ಸುದಾಸಪೈಜವನ (10-133), ಮಾಂಧಾತ್ರಿ ಯೌವನಾಶ್ವ (10-134) ಮೊದಲಾದವರು ಇಂಥವರು. ವತ್ಸಪ್ರಿಭಲಂದನನೆಂಬ ವೈಶ್ಯನೂ (9-68) ಸೂಕ್ತಕಾರನಾಗಿದ್ದಾನೆ. ಊರ್ಧ್ವಗ್ರಾವ ಆರ್ಬುದಿ ಎಂಬ ಅನಾರ್ಯ ಋಷಿಯೂ (?) ಸೂಕ್ತಕಾರನಾಗಿರುವುದು (10-175) ಕಂಡುಬರುತ್ತದೆ.

ಕೆಲವು ಸೂಕ್ತಗಳ ಋಷಿಗಳ ಹೆಸರುಗಳು ಪೂರ್ಣವಾಗಿ ಮರೆತು ಹೋಗಿವೆ. ಅಂಥ ಸೂಕ್ತಗಳನ್ನು ಕಾಲ್ಪನಿಕ ಋಷಿಗಳಿಗೋ, ಸೂಕ್ತದಲ್ಲಿ ಹೇಳಲಾದ ವ್ಯಕ್ತಿಯೊಬ್ಬನಿಗೋ ಅಥವಾ ಸ್ತುತಿಸಲಾದ ದೇವತೆಗೋ ಸಂಬಂಧಿಸಲಾಗಿದೆ–ಹತ್ತನೇ ಮಂಡಲದ 90ನೇ ಸೂಕ್ತಕ್ಕೆ ಋಷಿ ನಾರಾಯಣನೆಂದು ಹೇಳಿದೆ–ಇದೇ ಮಂಡಲದ 103ನೇ ಸೂಕ್ತದಲ್ಲಿ ವೇನನ ಹೆಸರು ಬರುವುದರಿಂದ ವೇನನೇ ಆ ಸೂಕ್ತದ ಋಷಿ ಎಂದು ಹೇಳಿದೆ. ಎಂಟನೇ ಮಂಡಲದಲ್ಲಿ 27ರಿಂದ 31ನೇ ಸೂಕ್ತಗಳು ಪೂರ್ತಾಮನುವೈವಸ್ವತನಿಂದ ದೃಷ್ಟವಾದವು ಎಂದು ಹೇಳಿದೆ. ಈ ಸೂಕ್ತದಲ್ಲಿ ಕೆಲವು ಕಡೆ 'ಮನು'ವಿನ ಹೆಸರು ಬಂದಿರುವುದು ಇದಕ್ಕೆ ಕಾರಣವಿರಬೇಕು. ಉರ್ವಶೀ ಪುರೂರವರ ಮತ್ತಿತರ ಸಂವಾದ ಸೂಕ್ತಗಳಿಗೆ ಇವರೇ ಋಷಿಗಳಾಗಲಾರರು. 'ಯಸ್ಯ ವಾಕ್ಯಂ ಸ ಋಷಿಃ' ಎಂಬ ಸೂತ್ರಕ್ಕನುಸಾರ ಇವರು ಇವರಿವರು ಹೇಳುವ ಮಂತ್ರಗಳಿಗೆ ಕ್ರಮವಾಗಿ ಋಷಿಗಳೆಂದು ಹೇಳಬಹುದಾದರೂ ಈ ಸೂಕ್ತದ ಋಷಿ ಬೇರೆ ಇರಬೇಕೆಂದು ಹೇಳಬಹುದು. ಅನೇಕ ವೇಳೆ ಸೂಕ್ತದಲ್ಲಿಯೇ ಆ ಸೂಕ್ತದ ಋಷಿಯನ್ನು ಬಹಳ ಗೌರವದಿಂದ ಉಲ್ಲೇಖಿಸಿರುವುದೂ ಕಂಡುಬರುತ್ತದೆ. ಏಳನೇ ಮಂಡಲದ 33ನೇ ಸೂಕ್ತವನ್ನು ಇದಕ್ಕೆ

ಉದಾಹರಣೆಯಾಗಿ ಹೇಳಬಹುದು. ಈ ಸೂಕ್ತದ ಏಳನೇ ಮಂತ್ರದಲ್ಲಿ 'ಸರ್ವಾ ಇತ್ತಾಂ ಅನುವಿದುಃ ವಸಿಷ್ಠಾಃ' (7-33-7) ಎಂದೂ ಅದೇ ಸೂಕ್ತದ 11ನೆಯ ಮಂತ್ರದಲ್ಲಿ 'ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ ಮನಸೋಽಧಿಜಾತಃ' (7-33-11) ಎಂದೂ ಹೇಳಿದೆ. ಈ ಪ್ರಕರಣದಲ್ಲಿ ವಸಿಷ್ಠರನ್ನೇ ಋಷಿಯಾಗಿ ಹೇಳಿದ್ದರೂ ಈ ಸೂಕ್ತಕ್ಕೆ ಅವರ ವಂಶೀಕನೊಬ್ಬನು ಋಷಿಯಾಗಿದ್ದಿರಬೇಕೆಂದು ತಿಳಿಯಬಹುದು.

ಋಷಿಗಳ ವಿಚಾರದಲ್ಲಿ ಅನೇಕ ಸ್ವಾರಸ್ಯವಾದ ಕಥಾನಕಗಳನ್ನು ಭಾಷ್ಯಕಾರರು ಹೇಳುತ್ತಾರೆ. ಇವುಗಳಲ್ಲಿ ಕೆಲವಕ್ಕೆ ನಿರುಕ್ತ, ಬೃಹದ್ದೇವತೆಗಳಿಂದಲೂ ಕೆಲವು ಸಲ ಪುರಾಣಗಳಿಂದಲೂ ಆಧಾರಗಳನ್ನು ಹೇಳುತ್ತಾರೆ. ಋಗ್ವೇದ ಕಾಲದಲ್ಲಿಯೇ ಈ ಕಥೆಗಳು ಪ್ರಚಾರದಲ್ಲಿದ್ದವೆನ್ನಲು ಋಗ್ವೇದದಲ್ಲಿ ಅವುಗಳ ಉಲ್ಲೇಖವಿರುವುದೇ ಸಾಕ್ಷಿಯಾಗಿದೆ. ಶುನಶ್ಶೇಫ ಆಜೀಗರ್ತಿ, ಶುನಕ ಪುತ್ರ ಗೃತ್ಸಮದ, ಗಾಧಿಪುತ್ರ ವಿಶ್ವಾಮಿತ್ರ ಮೊದಲಾದವರ ಕಥೆಗಳನ್ನೂ, ವಾಯುದೇವ ಮತ್ತು ಇಂದ್ರರ ಸಂವಾದದ, ಪ್ರಜಾಪತಿಯಿಂದ ಆಂಗಿರಸ, ಭೃಗು ಮತ್ತು ಅತ್ರಿಗಳ ಜನನದ, ಉಚಥ್ಯಕುಮಾರ ಧೀರ್ಘತಮಸ್ಸಿನ, ವಿಶ್ವಾಮಿತ್ರರ ಸೇವಕರಿಂದ ದಹಿಸಲ್ಪಟ್ಟ ವಸಿಷ್ಠಪುತ್ರ ಶಕ್ತಿಯ, ಘೋರಪುತ್ರ ಪ್ರಗಾಥಿಯ ಅತ್ರಿಕುಮಾರಿ ಅಪಾಲಾ ಎಂಬುವಳ ಕಥೆಗಳನ್ನು ಷಡ್ಗುರು ಶಿಷ್ಯರು ವಿವರಿಸುತ್ತಾರೆ. ಇವೆಲ್ಲಾ ಋಗ್ವೇದ ಕಾಲದಲ್ಲಿ ಪ್ರಚಾರದಲ್ಲಿದ್ದಿರಬೇಕೆಂದು ಊಹಿಸಬಹುದು. ಕೆಲವು ಕಥಾನಕಗಳು ಸೂಕ್ತಗಳಿಗೆ ಬ್ರಾಹ್ಮಣ ಕಾಲಗಳಲ್ಲಿಯೂ ಸೇರಿಸಲ್ಪಟ್ಟಿರಬಹುದು.

ಋಗ್ವೇದ ಕಾಲದಲ್ಲಿಯೇ ಸಪ್ತರ್ಷಿಗಳಿಗೆ ಹೆಚ್ಚಿನ ಗೌರವ ಸಲ್ಲುತಿದ್ದಿತೆಂಬುದನ್ನು ಸೂಚಿಸುವ ಸೂಕ್ತವೊಂದು ಗಮನಾರ್ಹವಾಗಿದೆ–'ತಥಾಚಾನುಕ್ರಮ್ಯತೇ-ತ್ರ್ಯಂಸೋಮಾಸಿ ದ್ವಾತ್ರಿಂಶದ್ಭರದ್ವಾಜಃ ಕಶ್ಯಪೋ ಗೋತಮೋಽತ್ರಿರ್ವಿಶ್ವಾಮಿತ್ರೋ ಜಮದಗ್ನಿರ್ವಸಿಷ್ಠ ಇತಿಹ ತೃಚಾಃ ಸಪ್ತಋಷಯಃ ಶೇಷೇ ಪವಿತ್ರೋ ವಸಿಷ್ಠೋವೋಭೌ ವಾ.....ಪಾವಮಾನ್ಯಧ್ಯೇತೃ ಸ್ತುತೀ!' (ಸಾ. ಭಾ. 9-67) ಒಂಭತ್ತನೆಯ ಮಂಡಲದ 67ನೇ ಸೂಕ್ತವಿದು. ಇದರಲ್ಲಿ 32 ಮಂತ್ರಗಳಿವೆ. ಮೊದಲ ಮೂರು ಋಕ್ಕುಗಳು ಭರದ್ವಾಜ ಋಷಿಗೂ, ಮುಂದಿನ ಮೂರು ಕಾಶ್ಯಪರಿಗೂ ಹಾಗೆಯೇ ಮುಂದಿನ ಮೂರು ಋಕ್ಕುಗಳು ಕ್ರಮವಾಗಿ ಗೌತಮ, ಅತ್ರಿ, ವಿಶ್ವಾಮಿತ್ರ, ಜಮದಗ್ನಿ ಮತ್ತು ವಸಿಷ್ಠರಿಗೂ ಸೇರಿವೆ. ಕೊನೆಯ ಹನ್ನೊಂದು ಋಕ್ಕುಗಳು ಪವಿತ್ರ ವಸಿಷ್ಠರೆಂಬ ಋಷಿಯವು. ಕೊನೆಯ ಎರಡು ಮಂತ್ರಗಳು ಸಪ್ತರ್ಷಿಗಳ ಈ ಪಾವಮಾನೀ ಸೂಕ್ತವನ್ನು ಕಲಿತವರಿಗೂ, ಪಠಿಸಿದವರಿಗೂ ಸಂಪತ್ಸಮೃದ್ಧಿಯಾಗುವುದೆಂದು ಫಲಶ್ರುತಿಯ ರೂಪದಲ್ಲಿ ತಿಳಿಸುತ್ತವೆ. ಪ್ರಾಯಃ ವಸಿಷ್ಠರ ವಂಶದ ಪವಿತ್ರರು ಪೂಜ್ಯರಾದ ಸಪ್ತರ್ಷಿಗಳ ಋಕ್ಕುಗಳನ್ನು ಒಂದೇ ಸೂಕ್ತದಲ್ಲಿ ಸಂಗ್ರಹಿಸಿದ್ದಾರೆಂದು ಗೊತ್ತಾಗುತ್ತದೆ.

ಋಗ್ವೇದ ಸಂಹಿತೆಯ ಋಷಿಗಳನ್ನು ಕುರಿತು ತಿಳಿಸುವಾಗ ಆಶ್ವಲಾಯನ ಗೃಹ್ಯಸೂತ್ರದಲ್ಲಿ 'ಅಥ ಋಷಯಃ ಶತರ್ಚಿನೋ ಮಾಧ್ಯಮಾ ಗೃತ್ಸಮದೋ ವಿಶ್ವಾಮಿತ್ರೋ ವಾಮದೇವೋ ಭರದ್ವಾಜೋ ವಸಿಷ್ಠಃ ಪ್ರಗಾಥಃ ಪಾವಮಾನ್ಯಃ ಕ್ಷುದ್ರಸೂಕ್ತಾ ಮಹಾಸೂಕ್ತಾಃ' (3-4) ಎಂದು ಹೇಳಿದೆ. ಮೊದಲನೆಯ ಮಂಡಲದ ಋಷಿಗಳಿಗೆ ಶತರ್ಚಿನಃ ಎಂದು ಹೆಸರೆಂದು ಷಡ್ಗುರು ಶಿಷ್ಯರು ಹೇಳುತ್ತಾರೆ. ಮಧುಚ್ಛಂದಸ್ ಎಂಬ ಋಷಿಗೆ ನೂರ ಎರಡು ಋಕ್ಕುಗಳಿರುವುದರಿಂದಲೂ, ಇತರನೇಕರಿಗೆ ಈ ಹೆಸರು ಇವನ ಸಹಯೋಗದಿಂದ ಬಂದಿರುವುದರಿಂದಲೂ ಈ ಮಂಡಲದ ಋಷಿಗಳಿಗೆ ಶತರ್ಚಿನಃ ಎಂಬ ಹೆಸರೆಂದು ಅವನು

ವಿವರಿಸುತ್ತಾನೆ. ಈ ವಿವರಣೆಯನ್ನು ಇತರ ವಿಮರ್ಶಕರು (C. V. Vaidya, p. 61) ಒಪ್ಪುವುದಿಲ್ಲ. ಅವರ ಅಭಿಪ್ರಾಯದಂತೆ ಒಂದನೆಯ ಮಂಡಲದಲ್ಲಿ ನೂರು ಋಕ್ಕುಗಳನ್ನು ಋಷಿಗಳಿಗೆ 'ಶತರ್ಚಿನಃ' ಎಂದೂ ಆ ಸಂಖ್ಯೆಗಿಂತ ಕಡಿಮೆಯ ಸಂಖ್ಯೆಯ ಋಕ್ಕುಗಳುಳ್ಳವರಿಗೆ 'ಮಧ್ಯಮಾ' ಎಂಬ ಹೆಸರೆಂದೂ ಅರ್ಥವಾಗುತ್ತದೆ. ಆದರೆ ಷಡ್ಗುರು ಶಿಷ್ಯರು 'ವಂಶೀಯ ಮಂಡಲದ ಋಷಿಗಳಿಗೆ ಮಧ್ಯಮಾಃ ಎಂಬ ಹೆಸರೆಂದು ತಿಳಿಸುತ್ತಾರೆ.

ಎರಡನೆಯ ಮಂಡಲದಿಂದ ಏಳು ಮಂಡಲಗಳು ವಂಶೀಯ ಮಂಡಲಗಳಾಗಿವೆ. ಇವುಗಳು ಕ್ರಮವಾಗಿ ಗೃತ್ಸಮದ, ವಿಶ್ವಾಮಿತ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ– ಈ ಋಷಿಗಳ ವಂಶದವರನ್ನು ಋಷಿಗಳನ್ನಾಗಿ ಹೊಂದಿವೆ. ಎಂಟನೇ ಮಂಡಲದ ವಿಚಾರದಲ್ಲಿ ಆಶ್ವಲಾಯನರು ಪ್ರಗಾಥರು ಋಷಿಗಳೆಂದು ಹೇಳುವರು. ಮೊದಲು ಪ್ರಗಾಥನ ಸೂಕ್ತ ಬಂದಿರುವುದು ಇದಕ್ಕೆ ಕಾರಣವಿರಬೇಕು. ಈ ಪ್ರಗಾಥನೂ ಕಾಣ್ವನೆಂದು (8-48) ಗೊತ್ತಾಗುತ್ತದೆ. ಈ ಮಂಡಲದ 103 ಸೂಕ್ತಗಳಲ್ಲಿ 11 ವಾಲಖಿಲ್ಯ ಸೂಕ್ತಗಳೂ ಮತ್ತಿತರ 50 ಸೂಕ್ತಗಳೂ ಕಾಣ್ವರಿಂದಲೇ ದೃಷ್ಟವಾದವು. ಆ ಕಾರಣ ಇದನ್ನು ಕಾಣ್ವವಂಶೀಯ ಮಂಡಲವೆನ್ನುತ್ತಾರೆ. ಒಂಭತ್ತು ಮತ್ತು ಹತ್ತನೇ ಮಂಡಲಗಳಲ್ಲಿ ಬೇರೆ ಬೇರೆ ಋಷಿಗಳಿಂದ ದೃಷ್ಟವಾದ ಸೂಕ್ತಗಳ ಸಂಗ್ರಹವಿದೆ. ಒಂಭತ್ತರಲ್ಲಿ ಎಲ್ಲ ಸೂಕ್ತಗಳು ಪಾವಮಾನ್ಯಗಳಾಗಿವೆ, ಹತ್ತನೆಯ ಮಂಡಲದಲ್ಲಿ ಅನೇಕ ದೇವತೆಗಳನ್ನು ಕುರಿತ ಅನೇಕ ಋಷಿಗಳ ಸೂಕ್ತಗಳ ಸಂಗ್ರಹವಿದೆ.

ಹೀಗೆ ಋಕ್ಸಂಹಿತೆಯ ಸೂಕ್ತಗಳ ಋಷಿಗಳ ವಿಚಾರವನ್ನು ತಿಳಿಸಿದ್ದಾರೆ.

## ಋಗ್ವೇದ ಛಂದಸ್ಸು

ಋಗ್ವೇದ ಸಂಹಿತೆಯ ಮಂತ್ರಗಳೆಲ್ಲಾ ಛಂದೋಬದ್ಧವಾಗಿವೆ. ಅದರಲ್ಲೂ ನಾನಾ ಛಂದಸ್ಸುಗಳ ನಿಪುಣಪ್ರಯೋಗ ಇದರ ವೈಶಿಷ್ಟ್ಯವೆಂದು ಹೇಳಬೇಕು. ವೇದಾಂಗವೆಂದು ಎಣಿಸಲಾದ ಪಿಂಗಳಾಚಾರ್ಯರ ಛಂದಶ್ಶಾಸ್ತ್ರ ವೇದದ ಮತ್ತು ಕಾವ್ಯದ ಛಂದಸ್ಸುಗಳನ್ನು ವಿವರಿಸುತ್ತದೆ. ಕಾತ್ಯಾಯನನ ಸರ್ವಾನುಕ್ರಮಣಿಕೆಯೂ ಈ ಅಂಶಗಳನ್ನು ಕ್ಲೋದಕ್ಲೋಮವಾಗಿ ವಿವೇಚಿಸುತ್ತದೆ, ಕಾವ್ಯಗಳ ಛಂದಸ್ಸಿಗಿಂತ ವೈದಿಕ ಛಂದಸ್ಸು ವಿಲಕ್ಷಣವಾಗಿದೆ. ಕಾವ್ಯಗಳಲ್ಲಿ ತೋರಿಬರುವ ವೃತ್ತಗಳೇ ಮೊದಲಾದವುಗಳ ಮೂಲರೂಪ ವೇದದಲ್ಲಿಲ್ಲ. ಆದರೆ ವೇದದ ಕೆಲವು ಛಂದಸ್ಸುಗಳು ಮೂಲಭೂತವಾದ ಮಾರ್ಪಾಟುಗಳನ್ನು ಹೊಂದಿ ಕಾವ್ಯಗಳಲ್ಲಿ ತಲೆದೋರಿವೆ. 'ಯದಕ್ಷರಪರಿಮಾಣಂ ತಚ್ಛಂದಃ' ಎಂದು ಹೇಳಿರುವಂತೆ ವೈದಿಕಛಂದಸ್ಸು ಅಕ್ಷರ ಸಂಖ್ಯೆಯನ್ನವಲಂಬಿಸಿದೆ. ಅಕ್ಷರಗಳು ಗುರುಲಘುಗಳಾಗಿರಬೇಕೆಂಬ ನಿರ್ಬಂಧವೂ ಗಣಗಳ ಪ್ರಯೋಗವೂ ಇಲ್ಲಿಲ್ಲ. ಕಾವ್ಯಛಂದಸ್ಸುಗಳಲ್ಲಿ ಈ ನಿರ್ಬಂಧ ತಲೆದೋರಿತು.

ವೇದದ ಛಂದಸ್ಸುಗಳು ಮುಖ್ಯವಾಗಿ 14. ಅವು ಯಾವುವೆಂದರೆ:

ಅಕ್ಷರಗಳು

| | | | |
|---|---|---|---|
| 1. ಗಾಯತ್ರೀ | – | 2 | ಅಕ್ಷರಗಳು |
| 2. ಉಷ್ಣಿಃ | – | 28 | " |

| | | | |
|---|---|---|---|
| 3. ಅನುಷ್ಟುಪ್ | – | 32 | ಅಕ್ಷರಗಳು |
| 4. ಬೃಹತೀ | – | 36 | " |
| 5. ಪಂಕ್ತಿ | – | 40 | " |
| 6. ತ್ರಿಷ್ಟುಪ್ | – | 44 | " |
| 7. ಜಗತೀ | – | 48 | " |
| 8. ಅತಿಜಗತೀ | – | 52 | " |
| 9. ಶಕ್ವರೀ | – | 56 | " |
| 10. ಅತಿಶಕ್ವರೀ | – | 60 | " |
| 11. ಅಷ್ಟೀ | – | 64 | " |
| 12. ಅತ್ಯಷ್ಟೀ | – | 68 | " |
| 13. ಧೃತಿಃ | – | 72 | " |
| 14. ಅತಿಧೃತಿಃ | – | 76 | " |

ಗಾಯತ್ರೀ ಛಂದಸ್ಸಿನಲ್ಲಿ ಎಂಟು ಅಕ್ಷರದ ಮೂರು ಪಾದಗಳಿರುವುವು. ಉಳಿದವು 7 ಅಥವಾ 8 ಅಕ್ಷರಗಳ ಪರಿಮಾಣವುಳ್ಳ ನಾಲ್ಕು ಪಾದಗಳನ್ನು ಹೊಂದಿವೆ. ಪಂಕ್ತಿಯಲ್ಲಿ 8 ಅಕ್ಷರಗಳ 5 ಪಾದಗಳಿವೆ. ಕೊನೆಯ ಅತಿಧೃತಿಃ ಎಂಬುದಕ್ಕೆ ಪಾದಸಂಖ್ಯೆ ಇರುವಂತಿಲ್ಲ. ಈ ಛಂದಸ್ಸಿನಲ್ಲಿ ಒಂದೇ ಒಂದು ಮಂತ್ರ ಮಾತ್ರ ಉಪಲಬ್ಧವಾಗಿದೆ. ಇವುಗಳಲ್ಲಿ ಮೊದಲನೆಯ ಏಳು ಛಂದಸ್ಸುಗಳು ಬಹಳ ಪ್ರಧಾನವಾದವು. 11 ಅಕ್ಷರಗಳುಳ್ಳ ನಾಲ್ಕು ಪದಗಳನ್ನು ತ್ರಿಷ್ಟುಪ್ ಛಂದಸ್ಸು ಹೊಂದಿದೆ. ಇದು ಬಹಳ ಪ್ರಾಧಾನ್ಯ ಹೊಂದಿದೆ. ಋಗ್ವೇದದ ಮಂತ್ರರಾಶಿಯಲ್ಲಿ ಐದನೆಯ ಎರಡು ಭಾಗಗಳಿಗಿಂತ ಹೆಚ್ಚಾಗಿ ಮಂತ್ರಗಳು ಈ ಛಂದಸ್ಸಿನಲ್ಲಿವೆ.

ಶೌನಕರ ಛಂದೋನುಕ್ರಮಣಿ ಶಾಕಲ ಶಾಖೆಯ ಋಕ್ಸಂಹಿತೆಯಲ್ಲಿ ಒಂದೊಂದು ಛಂದಸ್ಸಿನಲ್ಲಿಯೂ ಇರುವ ಮಂತ್ರ ಸಂಖ್ಯೆಯನ್ನು ಕೆಳಗೆ ಕಂಡಂತೆ ಕೊಟ್ಟಿದೆ :

| | | | | | |
|---|---|---|---|---|---|
| 1. | ಗಾಯತ್ರೀ ಛಂದಸ್ಸಿನಲ್ಲಿ | | – | 2467 | ಮಂತ್ರಗಳು |
| 2. | ಉಷ್ಣಿಯಲ್ಲಿ | " | – | 341 | " |
| 3. | ಅನುಷ್ಟುಪ್ | " | – | 855 | " |
| 4. | ಬೃಹತೀ ಛಂದಸ್ಸಿನಲ್ಲಿ | | – | 181 | ಮಂತ್ರಗಳು |
| 5. | ಪಂಕ್ತೀ | " | – | 312 | " |
| 6. | ತ್ರಿಷ್ಟುಪ್ | " | – | 4253 | " |
| 7. | ಜಗತೀ | " | – | 1348 | " |
| 8. | ಅತಿಜಗತೀ | " | – | 17 | " |

| | | | | |
|---|---|---|---|---|
| 9. ಶಕ್ವರೀ | " | – | 19 | |
| 10. ಅತಿಶಕ್ವರೀ | " | – | 9 | |
| 11. ಅಷ್ಟೀ | " | – | 6 | |
| 12. ಅತ್ಯಷ್ಟೀ | " | – | 84 | " |
| 13. ಧೃತೀ | " | – | 2 | " |
| 14. ಅತಿಧೃತೀ | " | – | 1 | " |
| ಮೊತ್ತ | | – | 9885 | " |
| 15. ಏಕಪದಾ | | – | 6 | " |
| 16. ದ್ವಿಪದಾ | | – | 17 | " |
| 17. ಪ್ರಾಗಾಥಬಾರ್ಹತ | | – | 194 | " |
| 18. ಕಾಕುಭ | | – | 55 | " |
| 19. ಮಹಾಬಾರ್ಹತ | | – | 257 | " |
| ಎಲ್ಲ ಸೇರಿ | | – | 10414 | ಮಂತ್ರಗಳು |

ಋಗ್ವೇದದ ಪದ ಸಂಖ್ಯೆಗೂ ಮೇಲಿನ ಮಂತ್ರ ಸಂಖ್ಯೆಗೂ ಸ್ವಲ್ಪ ವ್ಯತ್ಯಾಸ ಬರುತ್ತದೆ. ಪ್ರಾಯಃ ಈ ಸಂಖ್ಯೆ ಕಾತ್ಯಾಯನರ ಮತ್ತು ಇತರರ ಅನುಕ್ರಮಣಿಯಿಂದ ತೆಗೆದುಕೊಂಡಿದ್ದಾಗಿರಬಹುದು. ಶೌಕನರು ಕೊಡುವ 10414 ಮಂತ್ರ ಸಂಖ್ಯೆಗೂ ಋಗ್ವೇದದ 10552 ಮಂತ್ರ ಸಂಖ್ಯೆಗೂ ಇರುವ ವ್ಯತ್ಯಾಸಕ್ಕೆ ಪ್ರಾಯಃ ಸಂದಿಗ್ಧವಾದ ಛಂದಸ್ಸುಳ್ಳ ಮಂತ್ರಗಳನ್ನು ಅನುಕ್ರಮಣಿಕೆಯಲ್ಲಿ ಕೈಬಿಟ್ಟಿರುವುದು ಕಾರಣವಾಗಿರಬಹುದು.

ವೇದಋಷಿಗಳು ಇಷ್ಟೇ ಅಕ್ಷರಗಳನ್ನು ಬಳಸಬೇಕೆಂಬ ಕಟ್ಟುನಿಟ್ಟಿಗೊಳಗಾಗಿರಲಿಲ್ಲ. ಅನೇಕ ವೇಳೆ ಒಂದೆರಡು ಅಕ್ಷರಗಳು ಕಡಮೆಯಾಗಿಯೋ ಅಥವಾ ಒಂದೆರಡು ಅಕ್ಷರಗಳು ಹೆಚ್ಚಾಗಿಯೂ ಬಳಸಿರುವುದೂ ಉಂಟು. ಈ ಅಂಶ ಕಾತ್ಯಾಯನರ ಗಮನಕ್ಕೆ ಬಾರದಿಲ್ಲ. ಕಾತ್ಯಾಯನರ 'ಊನಾಧಿಕೇನೈಕೇನ ನಿಚೃದ್ಭೂರಿಜೌ | ದ್ವಾಭ್ಯಾಂ ವಿರಾಟ್ ಸ್ವರಾಜೌ |' ಎಂಬ ಸೂತ್ರ ಒಂದು ಅಕ್ಷರ ಕಡಿಮೆಯಾದರೆ ಅಥವಾ ಹೆಚ್ಚಾದರೆ ಅವುಗಳನ್ನು ಕ್ರಮವಾಗಿ 'ನಿಚೃತ್' ಮತ್ತು 'ಭೂರಿಜ್' ಎಂದೂ ಹೇಳಬೇಕೆಂದೂ, ಎರಡು ಅಕ್ಷರಗಳು ಕಡಿಮೆಯಾದರೆ ಅಥವಾ ಹೆಚ್ಚಾದರೆ ಅವುಗಳನ್ನು ಕ್ರಮವಾಗಿ 'ವಿರಾಟ್' ಮತ್ತು 'ಸ್ವರಾಟ್' ಎಂದು ಕರೆಯಬೇಕೆಂದೂ ಸೂಚಿಸುತ್ತದೆ. ಹೀಗಾಗಿ ಗಾಯತ್ರೀ ಛಂದಸ್ಸಿನಲ್ಲಿರಬೇಕಾದ 24 ಅಕ್ಷರಗಳಲ್ಲಿ ಒಂದು ಕಡಿಮೆಯಾಗಿ 23 ಅಕ್ಷರಗಳೇ ಇದ್ದರೆ ಅದರ ಛಂದಸ್ಸು 'ನಿಚೃದ್ ಗಾಯತ್ರೀ' ಆಗುವುದು. ಅದಕ್ಕೆ ಪ್ರತಿಯಾಗಿ 25 ಅಕ್ಷರಗಳನ್ನು ಅದು ಹೊಂದಿದ್ದರೆ 'ಭೂರಿಜ್ ಗಾಯತ್ರೀ' ಆಗುವುದು. ಪಂಕ್ತಿಛಂದಸ್ಸಿನಲ್ಲಿರಬೇಕಾದ 40 ಅಕ್ಷರಗಳಿಗೆ ಬದಲಾಗಿ

ಎರಡಕ್ಷರಗಳು ಕಡಿಮೆಯಾಗಿ 38 ಅಕ್ಷರಗಳಿದ್ದರೆ ಅದು 'ವಿರಾಟ್ ಪಂಕ್ತೀ' ಆಗುವುದು. ಎರಡಕ್ಷರ ಹೆಚ್ಚಾಗಿ 42 ಅಕ್ಷರಗಳಿದ್ದರೆ ಅದು 'ಸ್ವರಾಟ್ ಪಂಕ್ತೀ' ಆಗುವುದು.

ಇವಲ್ಲದೆ ಕಕುಪ್, ಪದಪಂಕ್ತೀ, ವರ್ಧಮಾನ, ಪ್ರತಿಷ್ಠಾ ಮೊದಲಾದ ಇನ್ನೂ ಕೆಲವು ಛಂದಸ್ಸುಗಳಿವೆ. ಪ್ರಾಗಾಥಗಳಲ್ಲಿ ಬಾರ್ಹತ, ಕಾಕುಭ ಮತ್ತು ಮಹಾಬಾರ್ಹತ ಮೊದಲಾದವೂ ಇವೆ. ಪ್ರಾಗಾಥವೆಂಬುದು ಮಿಶ್ರವಾದ ಛಂದಸ್ಸೆಂದು ವ್ಯಾಖ್ಯಾಕಾರರು ತಿಳಿಸುತ್ತಾರೆ. ಎಂಟಕ್ಷರದ ಮೂರು ಪಾದಗಳಾದ ಮೇಲೆ ಆರಕ್ಷರದ ನಾಲ್ಕನೆಯ ಪಾದವೊಂದು ಬಂದರೆ ಪ್ರಾಗಾಥವಾಗುವುದು. ಋಷಿಗಳು ಕೊನೆಯ ಪಾದದಲ್ಲಿ ಛಂದಸ್ಸನ್ನು ಬದಲಾಯಿಸಿ ಮಿಶ್ರಛಂದಸ್ಸುಗಳನ್ನು ಪ್ರಯೋಗಿಸಿ ಸೂಕ್ತಗಳ ನೀರಸತೆಯನ್ನು ನಿವಾರಣ ಮಾಡಿದ್ದಾರೆ.

ವೈದಿಕ ಛಂದಸ್ಸುಗಳನ್ನು ಮೂಲವಾಗಿ ಹೊಂದಿ ಅನೇಕ ಕಾವ್ಯ ಛಂದಸ್ಸುಗಳು ಬಳಕೆಗೆ ಬಂದಿವೆ. ಕಾವ್ಯಗಳ ಇಂದ್ರವಜ್ರಾ ಮತ್ತು ಉಪೇಂದ್ರವಜ್ರಾ ಛಂದಸ್ಸುಗಳು ತ್ರಿಷ್ಟುಪ್ ಛಂದಸ್ಸಿನಿಂದ ಮೂಡಿ ಬಂದಿವೆ. ಹಾಗೆಯೇ ಜಗತೀಛಂದಸ್ಸು ವಂಶಸ್ಥವಾಗಿಯೂ, ಶಕ್ವರಿಯು ವಸಂತ ತಿಲಕವಾಗಿಯೂ ಆಯಿತೆಂದು ತೋರುತ್ತದೆ. ಅನುಷ್ಟುಪ್ ಛಂದಸ್ಸಂತೂ ಬಹಳ ಜನಪ್ರಿಯವಾಗಿ ಸುದೀರ್ಘವಾದ ಕಾವ್ಯಗಳ ರಚನೆಗೆ ಬಳಸಲಾಯಿತು. ಇದರಲ್ಲಿ ಲಘು ಗುರುಗಳ ನಿರ್ಬಂಧ ಅಷ್ಟು ಹೆಚ್ಚಾಗಿಲ್ಲದಿರುವುದು ಇದರ ಭೂರಿಪ್ರಯೋಗಕ್ಕೆ ಕಾರಣವಾಗಿದೆ. ಮೊದಲನೆಯ ಮತ್ತು ಮೂರನೆಯ ಪಾದದ ಐದನೇ ಅಕ್ಷರವೂ ಎರಡನೆಯ ಮತ್ತು ನಾಲ್ಕನೇ ಪಾದದ ಏಳನೇ ಅಕ್ಷರವೂ ಲಘುವಾಗಿರುವ ಅನುಷ್ಟುಪ್ ಛಂದಸ್ಸನ್ನು ಮೊಟ್ಟಮೊದಲಾಗಿ ರಚನೆಮಾಡಿದ ಕೀರ್ತಿ ಆದಿಕವಿ ವಾಲ್ಮೀಕಿಗಳದು.

ವೇದದ ಛಂದಸ್ಸುಗಳ ಹೆಸರುಗಳೆಲ್ಲಾ ಬಹಳ ಪ್ರಾಚೀನವಾದುವು. ಇವುಗಳಲ್ಲಿ ಪ್ರಸಿದ್ಧವಾದ ಏಳು ಛಂದಸ್ಸುಗಳ ಹೆಸರನ್ನು ಋಗ್ವೇದದ ಹತ್ತನೇ ಮಂಡಲದ 130 ನೇ ಸೂಕ್ತದಲ್ಲಿ ಹಾಗೂ 14 ನೇ ಸೂಕ್ತದಲ್ಲಿ ಹೇಳಿದೆ. ಈ ಛಂದಸ್ಸುಗಳು ದೇವತೆಗಳಿಂದ ಬಂದವೆಂದೂ ಇಲ್ಲಿ ತಿಳಿಸಿದೆ. ಗಾಯತ್ರೀ ಛಂದಸ್ಸು ಅಗ್ನಿಯಿಂದಲೂ, ಉಷ್ಣಿ ಸೂರ್ಯನಿಂದಲೂ, ಅನುಷ್ಟುಪ್ ಸೋಮನಿಂದಲೂ, ಬೃಹತೀ ಬೃಹಸ್ಪತಿಯಿಂದಲೂ ವಿರಾಟ್ ಮೈತ್ರಾವರುಣದಿಂದಲೂ ಆದವು ಎಂದು ಇಲ್ಲಿ ಹೇಳಿದೆ. ಇಂದ್ರ ತ್ರಿಷ್ಟುಪ್ ಛಂದಸ್ಸನ್ನು ಸೃಜಿಸಿದನಂತೆ. ಋಗ್ವೇದದಲ್ಲಿ 250 ಸೂಕ್ತಗಳು ಇಂದ್ರದೇವತಾಕವಾಗಿರುವುದೂ ಇವುಗಳಲ್ಲಿ ಅತ್ಯಧಿಕವಾಗಿ ತ್ರಿಷ್ಟುಪ್ ಛಂದಸ್ಸನ್ನು ಬಳಸಿರುವುದೂ ಇದಕ್ಕೆ ಆಧಾರವಾಗಿರುವಂತಿದೆ. ವಿಶ್ವೇದೇವತೆಗಳು ಜಗತೀ ಛಂದಸ್ಸನ್ನು ಸೃಜಿಸಿದರೆಂದು ಹೇಳಿದೆ. ಮೇಲಿನ ವಿವೇಚನೆಯಿಂದ ವೇದ ಋಷಿಗಳು ವಿವಿಧ ಛಂದಸ್ಸುಗಳನ್ನು ಹೆಚ್ಚಾದ ಕೌಶಲ್ಯದಿಂದ ಬಹಳ ಪ್ರಾಚೀನ ಕಾಲದಲ್ಲಿಯೇ ಬಳಸಬಲ್ಲವರಾಗಿದ್ದರೆಂದು ಅರಿಯಬಹುದು.

## ಋಗ್ವೇದ ಕಾಲದ ಜನಜೀವನ

ಋಗ್ವೇದ ಸಂಹಿತೆಯ ಅನುಶೀಲನದಿಂದ ಆ ಕಾಲದ ಜನಜೀವನದ ಪರಿಚಯವನ್ನು ಪಡೆಯಬಹುದು. ಆ ಕಾಲದ ಸಾಮಾಜಿಕ ಜೀವನ, ರಾಜಕೀಯ ಜೀವನ, ಆರ್ಥಿಕ ಜೀವನ ಮತ್ತು ಧಾರ್ಮಿಕ ಜೀವನದ ಸ್ವರೂಪವನ್ನು ನಾವು ತಿಳಿಯಬಹುದು.

ಋಕ್ಸಂಹಿತೆಯಲ್ಲಿರುವ ಸೂಕ್ತಗಳೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಧಾರ್ಮಿಕ ಮಹತ್ವವನ್ನು ಹೊಂದಿವೆ. ಅನೇಕಾನೇಕ ಭಾವಗಳ ರಸಮೇಳವೇ ಇಲ್ಲಿದೆ. ದೇವತಾ ಸಂಬಂಧವನ್ನು ಮರೆಮಾಡಿರುವ ಸನ್ನಿವೇಶವೇ ಎಲ್ಲಿಯೂ ತೋರಿಬರುವುದಿಲ್ಲ. ಮಾನವನಿಗೂ

ದೇವತೆಗಳಿಗೂ ಇರುವ ಅವರ್ಜನೀಯವಾದ ಸಂಬಂಧದ ಹಿನ್ನೆಲೆಯಲ್ಲಿ ಇವು ಮೂಡಿ ಬಂದಿವೆ. ಲೌಕಿಕ ಸೂಕ್ತಗಳೆಂದು ಹೇಳಿರುವುವೂ ಕೂಡ ಅಪ್ರತ್ಯಕ್ಷವಾಗಿ ಧಾರ್ಮಿಕವೇ ಆಗಿವೆ. ಲೌಕಿಕ ಪಾರಲೌಕಿಕ ಜೀವನಗಳ ಅಪೂರ್ವ ಸಮನ್ವಯವಿಲ್ಲಿದೆ. ಲೌಕಿಕ ಜೀವನವನ್ನು ತಮಗೆ ದೊರಕಿದ ಅಪೂರ್ವಾವಕಾಶವೆಂದೂ ಇದರಿಂದ ಪಾರಲೌಕಿಕ ಸಿದ್ಧಿ ಪಡೆಯಬೇಕೆಂದೂ ಅವರು ತಿಳಿದಿದ್ದರು. ಲೌಕಿಕ ಜೀವನ ಪರಿಪೂರ್ಣವಾಗಿ, ಶುದ್ಧವಾಗಿ, ಪವಿತ್ರವಾಗಿ ವಿಕಾಸಗೊಂಡು ವ್ಯಕ್ತಿ ಮತ್ತು ಸಮಾಜದ ಕಲ್ಯಾಣಕ್ಕೆ ಕಾರಣವಾಗಬೇಕೆಂಬುದೇ ಅವರ ನಂಬಿಕೆಯಾಗಿತ್ತು. ಆದ್ದರಿಂದಲೇ ಅನೇಕ ಕಡೆ ಪರಿಶುದ್ಧವಾದ ಜೀವನ ಸಾಧನಗಳನ್ನೂ ಐಹಿಕ ಸಂಪತ್ಸಮೃದ್ಧಿಯನ್ನೂ ದೇವತೆಗಳಿಂದ ಬೇಡುತ್ತಾರೆ. ಜೀವನದ ಉನ್ನತ ಧ್ಯೇಯಗಳಾದ ಸತ್ಯ, ಧರ್ಮ, ದಾನ, ಅದ್ರೋಹ ಮೊದಲಾದುವನ್ನೇ ಬಯಸಿದ್ದಾರೆ. ನಿದ್ರೆ, ದ್ರೋಹ, ಆಲಸ್ಯ, ಕೃಪಣತೆ, ನಿಂದೆ ಮೊದಲಾದುವುಗಳನ್ನು ತಮ್ಮಿಂದ ದೂರಮಾಡಬೇಕೆಂದು ಬೇಡಿಕೊಂಡಿದ್ದಾರೆ. ಅವರ ನೈತಿಕ ಜೀವನದ ಮಹತ್ವವನ್ನು ಸೂಚಿಸುವ ಕೆಲವು ಮಂತ್ರಗಳನ್ನು ಇಲ್ಲಿ ಉದಾಹರಿಸಬಹುದು.

ಜನರ ನೀತಿ ಪಾಲನೆಯನ್ನು ಮಾಡುವ ವರುಣನಿಗೆ ಉನ್ನತ ಸ್ಥಾನವನ್ನಿತ್ತಿರುವುದರಿಂದ ಅವರ ನೈತಿಕ ಜೀವನದ ಧ್ಯೇಯ ಗೊತ್ತಾಗುತ್ತದೆ. ಉನ್ನತವಾದ ನೈತಿಕ ಜೀವನಕ್ಕೆ ಇದ್ದ ಬೆಲೆ ಮತ್ತೆ ಯಾವುದಕ್ಕೂ ಇರಲಿಲ್ಲ. ಅನೃತವಾದಿಗಳಿಗೆ ಹಿಂಸೆಯೂ ಸತ್ಯವಾದಿಗಳಿಗೆ ರಕ್ಷಣೆಯೂ ದೊರಕುವುವೆಂದು ಸಾರಿ ಹೇಳಿ ಸತ್ಯಮಾರ್ಗದಲ್ಲಿ ನಡೆಯಬೇಕೆಂದು ವಿಧಿಸಿದ್ದಾರೆ. ಈ ಮಂತ್ರಗಳನ್ನು ನೋಡಿ :

'ಪಾಪಿಗಳೂ, ಮಾನಸಸತ್ಯರಹಿತರೂ, ವಾಚಿಕಸತ್ಯರಹಿತರೂ ಆಗಿ ಪಾಪಿಗಳು ಶಿಕ್ಷೆಯನ್ನನುಭವಿಸುವ ಈ ಸ್ಥಾನವನ್ನುಂಟುಮಾಡುತ್ತಾರೆ.'

'ಪಾಪಾಸಃ ಸಂತೋ ಅನೃತಾ ಅಸತ್ಯಾ
ಇದಂ ಪದಮಜನತಾ ಗಭೀರಮ್ | (4-5-5) ಎಂದು.

'ಯಾರ ಮಧ್ಯೆ ವರುಣನು ಜನರ ಸತ್ಯ ಅನೃತಗಳನ್ನು ನೋಡುತ್ತಾ ಚಲಿಸುತ್ತಿರುವನೋ'

'ಯಾಸಾಂ ರಾಜಾ ವರುಣೋ ಯಾತಿ ಮಧ್ಯೇ
ಸತ್ಯಾನೃತೇ ಅವಪಶ್ಯಂ ಜನಾನಾಮ್ (7-49-3)

ಆದಿತ್ಯರು ಅನೃತವಾದಿಗಳನ್ನು ಹಿಂಸಿಸುತ್ತಾರೆ.

'ಪ್ರಾಯ ಆದಿತ್ಯೋ ಅನೃತಾ ಮಿನಾತಿ.' (8-84-4)

'ಮತ್ತೊಬ್ಬರ ಹಂಗಿನಲ್ಲಿ ಜೀವನವನ್ನು ನಡೆಸದೆ ಸ್ವತಂತ್ರವಾದ ದುಡಿಮೆಯಿಂದ ಜೀವಿಸುವಂತಾಗಲಿ'

'ಮಾಹಂ ರಾಜನ್ನನ್ಯಕೃತೇನ ಭೋಜಂ' (2-28-9)

'ಮತ್ತೊಬ್ಬರಲ್ಲಿ ಹೋಗಿ ನಮ್ಮ ಬಡತನವನ್ನು ಹೇಳಿಕೊಂಡು ಅವರಿಂದ ಸಹಾಯ ಕೋರದಂತಾಗಲಿ.'

'ಮಾಹಂ ಮಘೋನೋ ವರುಣ ಪ್ರಿಯಸ್ಯ
ಭೂರಿದಾವ್ನ ಆವಿದಂ ಶೂನಮಾಪೇಃ |' (2-27-17)

ದ್ರೋಹದೂರವಾದ ಸತ್ಯಶೀಲತೆ ನಮ್ಮಲ್ಲಿ ಸಿದ್ಧಿಸಲಿ.

'ಅದ್ರೋಘೇಣ ವಚಸಾ ಸತ್ಯಮಗ್ನೇ' (3-14-6)

'ಜೀವನ ಸುಖಮಯವಾಗುವಂತೆ ದೃಢವಾದ ಶರೀರಾರೋಗ್ಯದಿಂದ ಬಾಳುವಂತಾಗಲಿ' 'ಬಲಂ ಧೇಹಿ ತನೂಷು ನೋ' (3-53-18) 'ಅರಿಷ್ಟಿಂ ತನೂನಾಂ' (2-21-6).

ದ್ವೇಷ ಕಾರ್ಪಣ್ಯಗಳು ಮನಸ್ಸಿನಿಂದ ದೂರವಾಗಲಿ. 'ವಿಷುದ್ವೇಷೋ ವ್ಯಂಹಂತಿಂ' (8-56-21) ; ರೋಗ, ದೌರ್ಬಲ್ಯ ಮತ್ತು ಅವಿವೇಕಗಳು ನಮ್ಮಿಂದ ತೊಲಗಲಿ. 'ಅಪಾಮೀವಾ ಮಪಸಿಧ್ರಮಪಸೇಧತ ದುರ್ಮತಿಂ' (8-18-10)–ನಿದ್ರೆ ವ್ಯರ್ಥಾಲಾಪಗಳು ನಮ್ಮನ್ನಾ ಕ್ರಮಿಸದಿರಲಿ–'ಮಾ ನೋ ನಿದ್ರಾ ಈಶತ ಮೋತ ಜಲ್ಪಿಃ' (8-48-14). ಮನುಸ್ಸು ಸನ್ಮಾರ್ಗದಲ್ಲಿ ನಡೆಯಲಿ–'ಭದ್ರಂ ನೋ ಅಪಿ ವಾತಯ ಮನಃ' (10-25-1).

ಇದರಿಂದ ಗೊತ್ತಾಗುವುದಾದರೂ ಏನು? ಐಹಿಕ ಜೀವನವನ್ನು ಪರಿಶುದ್ಧವಾಗಿ ನಡೆಸಿದ ಹೊರತು ಮುಂದಿನ ಮಂಗಳವಿಲ್ಲವೆಂಬ ದೃಢವಾದ ಅರಿವು ಇಲ್ಲಿ ಸ್ಪಷ್ಟವಾಗಿದೆ. ಈ ಐಹಿಕ ಜೀವನವೂ ಚೆನ್ನಾಗಿ ನಡೆಯಬೇಕಾದರೆ ಭಗವಂತನ ಕೃಪೆ ಆವಶ್ಯಕ. ದೇವತೆಗಳ ಅನುಗ್ರಹದಿಂದಲೇ ನಾವು ನಿರ್ಮಲವಾದ ಜೀವನ ನಡೆಸಬಲ್ಲೆವು. ಆದ್ದರಿಂದ ದೇವತೆಗಳನ್ನು ಬೇಡಿ ಅವರ ಪ್ರಸನ್ನತೆಯನ್ನು ಸಂಪಾದಿಸಿಕೊಳ್ಳಬೇಕು. ಪರರೊಡವೆಗೆ ಬಯಸದೆ, ಇತರರ ಹಂಗಿನಲ್ಲಿ ನಿಲ್ಲದೆ, ಇತರರನ್ನು ಪೀಡಿಸದೆ, ಸತ್ಯನಿಷ್ಠರೂ, ಸತ್ಕಾರ್ಯ ಪ್ರವಣರೂ, ನಿದ್ರಾಲಸ್ಯಾದಿ ಪ್ರಮಾದದೂರರೂ ಆಗಿ ಸಕಲಜನಹಿತೈಷಿಗಳಾಗಿ ಪರಿಶುದ್ಧವಾದ ಭಗವತ್ಪರವಾದ ಜೀವನವನ್ನು ನಡೆಸಬೇಕೆಂಬುದು ಅವರ ಆದರ್ಶವಾಗಿದ್ದಿತೆಂಬುದನ್ನು ನಾವು ತಿಳಿಯಬಹುದು. ಜೀವನದ ಬಗ್ಗೆ ಇರುವ ಈ ಉನ್ನತ ದೃಷ್ಟಿ ಋಗ್ವೇದದ ಮಹತ್ವವನ್ನು ತೋರಿಸುತ್ತದೆ. ಉನ್ನತವಾದ ಶೀಲ, ಭಗವತ್ಪರವಾದ ಜೀವನ, ಪುಷ್ಟವಾದ ಐಹಿಕ ಜೀವನ–ಇವು ಮುಂದಿನ ಸಿದ್ಧಿಗೆ ಕಾರಣಗಳು. ಋಗ್ವೇದದಲ್ಲಿ ಪಶುಪುತ್ರಾದಿಗಳನ್ನು ಬೇಡಿರುವುದನ್ನು ಈ ಹಿನ್ನೆಲೆಯಲ್ಲಿ ನಾವು ನೋಡಿದರೆ ಅವರು ಎಂಥ ಪರಿಪೂರ್ಣ ದೃಷ್ಟಿಯುಳ್ಳವರೆಂಬ ಅಂಶ ಗೋಚರಿಸುವುದು. ಐಹಿಕ ಜೀವನದ ಅನುಕೂಲತೆಗಳನ್ನೂ ಹೊಂದಿ ಅವುಗಳನ್ನು ಧರ್ಮಕ್ಕೆ ವಿರೋಧವಿಲ್ಲದಂತೆ ಅನುಭವಿಸಿ ಅದರ ಅಡಿಮಣೆಯ ಮೇಲೆ ಆಧ್ಯಾತ್ಮಿಕ ನಿಃಶ್ರೇಯಸ್ಸನ್ನು ಸಾಧಿಸಬೇಕೆಂಬ ಧ್ಯೇಯ ಅವರದಾಗಿತ್ತೆಂದು ನಾವು ತಿಳಿಯಬಹುದು.

ಋಗ್ವೇದ ಕಾಲದ ಸಾಮಾಜಿಕ ಜೀವನದ ಪರಿಚಯ ನಮಗೆ ಮಂತ್ರಗಳಿಂದಾಗುವುದು. ಆ ಕಾಲದಲ್ಲಿ ಜನ ಗ್ರಾಮಗಳಲ್ಲಿಯೂ ಪಟ್ಟಣಗಳಲ್ಲಿಯೂ ವಾಸವಾಗಿದ್ದರು. 'ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ ಅನಾತುರಂ' (1-114-1) ; ಅಸಿಗ್ರಾಮೇಷ್ವವಿತಾ (1-44-10). ಕಬ್ಬಿಣದ ಕೋಟೆ ಕೊತ್ತಳಗಳ, ಪಟ್ಟಣಗಳ ಉಲ್ಲೇಖವೂ ಇಲ್ಲಿದೆ–'ಶತಂ ಪೂರ್ಭಿರಾಯಸೀಭಿರ್ನಿಪಾಹಿ' (7-3-7) ; 'ಪೂರ್ಭವಾಶತಭುಜಿಃ' (7-15-14). ಸಮಾಜದಲ್ಲಿ ಕುಟುಂಬ ಜೀವನಕ್ಕೆ ಪ್ರಾಧಾನ್ಯವಿತ್ತು. ವಿವಾಹ ಪವಿತ್ರವೂ ಪ್ರಧಾನವೂ ಆಗಿತ್ತು. ಕುಟುಂಬದಲ್ಲಿ ಸಾಮ್ರಾಜ್ಞಿಯಾಗಿರೆಂದು ವಧುವಿಗೆ ಆಶೀರ್ವಾದ ಮಾಡುತ್ತಿದ್ದರು. ಪತ್ನಿಯೂ ಪತಿಯೊಡನೆ ಯಾಗಾದಿಗಳಲ್ಲಿ ಭಾಗವಹಿಸುತ್ತಿದ್ದಳು.

'ಯಾ ದಂಪತೀ ಸಮನಸಾ ಸುನುತ ಆ ಚಧಾವತಃ |
ದೇವಾಸೋ ನಿತ್ಯಯಾಶಿರಾ ||' (8-31-5)

ಈ ಮಂತ್ರದಲ್ಲಿ ಸೋಮಾಭಿಷವ ಮಾಡುವ ಸುಮನಸ್ಕರಾದ ದಂಪತಿಗಳು ಅನ್ನಾದಿಗಳನ್ನು ಪಡೆಯಲೆಂದು ಹೇಳಿದೆ. ಸಮಾಜದಲ್ಲಿ ಏಕ ಪತ್ನೀತ್ವವಿದ್ದಿತೆಂಬುದನ್ನು 'ಜಾಯೇವ ಪತ್ಯಉಶತೀ ಸುವಾಸಾಃ' (4-3-2) ಎಂಬ ಮಂತ್ರದಿಂದ ತಿಳಿಯುವಂತೆ ಬಹು ಪತ್ನೀತ್ವವೂ

ರೂಢಿಯಲ್ಲಿತ್ತೆಂಬುದು 'ರಾಜೇವ ಹಿ ಜನಿಭಿಃ' (7-18-2) ಎಂಬುದರಿಂದ ಗೊತ್ತಾಗುತ್ತದೆ– ಇಲ್ಲಿನ 'ರಾಜೇವ' ಎಂಬ ಶಬ್ದದಿಂದ ಕ್ಷತ್ರಿಯರು ಅನೇಕ ಪತ್ನಿಯರನ್ನು ಮದುವೆಯಾಗುತ್ತಿದ್ದರೆಂದು ಊಹಿಸಲಾಗಿದೆ.

ಸ್ತ್ರೀಯರ ಶೀಲ ಸರ್ವರ ಪ್ರಶಂಸೆಗೂ ಪಾತ್ರವಾಗುತ್ತಿತ್ತು–

'ಅನವದ್ಯಾ ಪತಿಜುಷ್ಟೇವ ನಾರಿ' (1-73-2)

'ಭದ್ರಾವಧೂರ್ಭವತಿ ಯತ್ಸುಪೇಶಾಃ
ಸ್ವಯಂ ಸಾಮಿತ್ರಂ ವನುತೇ ಜನೇಚಿತ್ ||'

ಎಂಬ ಮಂತ್ರ 'ಶೋಭನ ರೂಪಳಾದ ವಧು ತಾನಾಗ್ಗಿಯೇ ಜನರ ನಡುವೆ ಸ್ವಯಂವರ ಧರ್ಮದಿಂದ ತನ್ನ ಪತಿಯನ್ನು ಆರಿಸಿಕೊಳ್ಳುತ್ತಾಳೆ' ಎಂದು ತಿಳಿಸುತ್ತದೆ. ಇದರಿಂದ ಕನ್ಯೆಗೆ ಪತಿಯನ್ನು ಆರಿಸುವ ಸ್ವಾತಂತ್ರ್ಯವಿತ್ತೆಂದು ಗೊತ್ತಾಗುತ್ತದೆ. ದತ್ತುಪುತ್ರಗಿಂತ ಔರಸ ಪುತ್ರನಲ್ಲಿ ಹೆಚ್ಚು ಆದರವಿತ್ತೆಂಬುದು 'ನ ಶೇಷೋ ಅಗ್ನೇ ಅನ್ಯಜಾತಮಸ್ತಿ' (7-4-7) ಎಂಬುದರಿಂದ ಗೊತ್ತಾಗುತ್ತದೆ. ಸ್ತ್ರೀ ಸಂತಾನಕ್ಕಿಂತ ಅಧಿಕವಾಗಿ ಪುತ್ರಸಂತಾನವನ್ನು ಬಯಸುತ್ತಿದ್ದರು. ಸಹಗಮನದ ಪದ್ಧತಿ ಇದ್ದಿತೇ ಇಲ್ಲವೇ ಎಂಬುದು ಸ್ಪಷ್ಟವಾಗಿಲ್ಲ. ಮೃತಕನನ್ನು ಸಂಸ್ಕಾರ ಮಾಡುವ ಮೊದಲು ಅವನ ಪತ್ನಿಯನ್ನು ಚಿತೆಯ ಮೇಲೆ ಮಲಗಿಸಿ ಎಬ್ಬಿಸುತ್ತಿದ್ದರೆಂಬ ಅಂಶಮಾತ್ರ–

'ಉದೀರ್ಷ್ವ ನಾರಿ ಅಭಿಜೀವಲೋಕಂ
ಗತಾಸುಮೇತಮುಪಶೇಷ ಏಹಿ |' (10-18-8)

ಎಂಬ ಮಂತ್ರದಿಂದ ಗೊತ್ತಾಗುತ್ತದೆ. 'ವಿಧವೇವ ದೇ ವರಂ' (10-40-2) ಎಂಬ ಮಂತ್ರ ವಿಧವೆ ತನ್ನ ಪತಿಯ ಸೋದರನನ್ನು ಮದುವೆಯಾಗಲವಕಾಶವಿತ್ತೆಂಬುದನ್ನು ಸೂಚಿಸುತ್ತದೆ. ಪುರುಷ ಸೂಕ್ತದಲ್ಲಿ ಚಾತುರ್ವರ್ಣ್ಯದ ಪ್ರಸ್ತಾಪವಿರುವುದರಿಂದ ಆ ಕಾಲದಲ್ಲಿ ವರ್ಣವ್ಯವಸ್ಥೆ ಬೇರೂರಿತ್ತೆಂದು ತಿಳಿಯುತ್ತದೆ. 'ಪಂಚಜನಾಃ' ಎಂಬ ಶಬ್ದಕ್ಕೆ ವಿವರಣೆ ಕೊಡುವಾಗ ನಿಷಾದನನ್ನೂ ನಾಲ್ಕು ವರ್ಣಗಳೊಡನೆ ಸೇರಿಸಿ ಹೇಳುವುದರಿಂದ ಆ ಕಾಲದಲ್ಲೇ ಅನುಲೋಮ ವರ್ಣಗಳೂ ಇದ್ದವೆಂದು ಗೊತ್ತಾಗುತ್ತದೆ.

ಪಶುಪಾಲನೆ ಮತ್ತು ವ್ಯವಸಾಯ ಜನರ ಮುಖ್ಯವಾದ ವೃತ್ತಿಯಾಗಿತ್ತೆಂದು ಕಾಣುತ್ತದೆ. ಪಶುಗಳನ್ನೂ ಕರುಗಳನ್ನೂ ಕಂಡರೆ ಅವರಿಗೆ ಬಹಳ ಪ್ರೇಮ. ಅನೇಕ ಸಂದರ್ಭಗಳಲ್ಲಿ ಹಸುಗಳನ್ನು ಹೋಲಿಕೆಗೆ ಹೇಳಿದ್ದಾರೆ : 'ವತ್ಸಂ ನ ದಾಮಂ', 'ಯವಸಸ್ಯ ಪಿಪ್ಯುಷೀ', 'ಗಾವ ಇವ ಗೋಷ್ಠಂ ವ್ರಜಂತಃ' ಮೊದಲಾದುವುಗಳನ್ನು ಉದಾಹರಣಾರ್ಥವಾಗಿ ಹೇಳಬಹುದು. ಗೋಧನ ಅವರ ಮುಖ್ಯವಾದ ಧನವಾಗಿತ್ತು. ಅನೇಕ ವೃತ್ತಿಗಳ ಉಲ್ಲೇಖವೂ ಬಂದಿದೆ ಇಲ್ಲಿ. 'ನಾನಾನಂ ವಾ ಉನೋ ಧಿಯೋ ವಿ ವ್ರತಾನಿ ಜನಾನಾಮ್' (9-112-1), ಎಂಬಲ್ಲಿ ಜನರ ವೃತ್ತಿವೈವಿಧ್ಯದ ಉಲ್ಲೇಖವಿದೆ. ಬಡಗಿ, ಕಮ್ಮಾರ, ವೈದ್ಯ, ಯಾಜಕ, ಸ್ತೋಮಕರ್ತಾ ಇವರೆಲ್ಲರ ಉಲ್ಲೇಖವೂ ಇದೆ. 'ತಕ್ಷಾ ರಿಷ್ಟಂ ರುತಂಭಿಷಕ್' (9-112-1),

'ಕಾರ್ಮಾರೋ ಅಶ್ಮಭಿಃ' (9-112-2), 'ಕಾರುರಹಂ ತತೋ' (9-112-3) ಮೊದಲಾದವುಗಳಲ್ಲಿ ಇದನ್ನು ಕಾಣಬಹುದು. ರಥ ನಿರ್ಮಾಣ, (ತಷ್ಟೇವಬಂಧುರಂ), ನೇಯುವುದು (6-9-2), ಹಡಗು ನಿರ್ಮಾಣ, (10-101-2), ಹಗ್ಗಗಳನ್ನು ತಯಾರಿಸುವುದು (ಅರಜ್ಜುಭಿಃ

ಸಿನೀಥಃ) (7-84-2), ಚರ್ಮದ ಕೆಲಸ (7-63-1) ಇವೆಲ್ಲ ಆ ಕಾಲದಲ್ಲಿ ಬಳಕೆಯಲ್ಲಿದ್ದವು. ವ್ಯವಸಾಯದಲ್ಲಿ ಅವರು ಮುಂದುವರಿದಿದ್ದರು.

'ಯುನಕ್ತ ಸೀರಾ ವಿಯುಗಾ ತನುಧ್ವಂ
ಕೃತೇ ಯೋನೌ ವಪತೇಹ ಬೀಜಂ |
ಗಿರಾ ಚ ಶ್ರುಷ್ಟಿಃ ಸಭರಾಅಸನ್ನೋ
ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ ||' (10-101-3)

'ನೇಗಿಲು ಹೂಡಿ. ನೊಗಗಳನ್ನು ವಿಸ್ತಾರಗೊಳಿಸಿ. ಉಳುಮೆ ಮಾಡಿದ ಸಾಲುಗಳಲ್ಲಿ ಕಾಳುಗಳನ್ನು ಬಿತ್ತನೆ ಮಾಡಿ. ನಮ್ಮ ಸ್ತುತಿಯಿಂದ ಸಮೃದ್ಧವಾದ ಬೆಳೆ ಆಗುತ್ತದೆ. ಕೊಯ್ಲು ಮಾಡುವವರು ಕುಡುಗೋಲುಗಳೊಡನೆ ಮಾಗಿದ ಪೈರಿನ ಕಡೆ ಬರುವಂತಾಗಲಿ.' ಪ್ರಾಮಾಣಿಕವಾದ ವೃತ್ತಿಯಿಂದ ಜೀವನವನ್ನು ಸಂಪಾದಿಸಬೇಕೆಂದು 'ಕೃಷಿಮಿತ್ ಕೃಷಸ್ವ' (5-34-13) ಎಂದು ಹೇಳಿದೆ. ನೀರಾವರಿ ವ್ಯವಸಾಯವು ರೂಢಿಯಲ್ಲಿತ್ತು. ಸಹಜವಾದ ಮತ್ತು ಕೃತಕವಾದ ಕಾಲುವೆಗಳ ಉಲ್ಲೇಖವೂ ಸಹ

'ಯಥಾ ಹ್ರದಂ ಕುಲ್ಯಾ ಇವಾಶತ' (3-45-3)
ಯಾ ಆಪೋ ದಿವ್ಯಾ ಉತವಾ ಸ್ರವಂತಿ
ಖನಿತ್ರಿಮಾ ಉತವಾ ಯಾಃ ಸ್ವಯಂಜಾಃ ||' (7-49-2)

ಎಂಬಲ್ಲಿದೆ. ಪುಷ್ಟಿಕರವಾದ ವ್ಯವಸಾಯ ಹಾಗೂ ವಿವಿಧವಾದ ಇತರ ವೃತ್ತಿಗಳೂ ಆ ಕಾಲದಲ್ಲಿ ರೂಢಿಯಲ್ಲಿದ್ದವೆಂದು ಇವುಗಳೆಲ್ಲದರಿಂದ ಗೊತ್ತಾಗುತ್ತದೆ.

ಜನರು ಧೀರರಾಗಿ ಯುದ್ಧಾದಿಗಳಲ್ಲಿ ಭಾಗವಹಿಸುತ್ತಿದ್ದರು. ಅಂದಿನ ರಾಜಾಧಿರಾಜರುಗಳ ಹಾಗೂ ಅವರ ಯುದ್ಧಗಳ ವರ್ಣನೆ ಸುಂದರವಾಗಿದೆ. ಜನರು ಬಹಳ ನಾಗರಿಕರಾಗಿದ್ದರು. ಒಳ್ಳೆಯ ರಥಗಳು, ಕುದುರೆಗಳು, ವಸ್ತ್ರಗಳು, ವಿವಿಧವಾದ ಆಯುಧಗಳು ಇವುಗಳೆಲ್ಲದರ ಉಪಯೋಗ ಅವರಿಗೆ ಗೊತ್ತಿತ್ತು. ಒಳ್ಳೆಯ ಉಣ್ಣೆ ವಸ್ತ್ರಗಳು, ಚಿನ್ನ ಮೊದಲಾದ ಲೋಹಗಳು, ಜೇನುತುಪ್ಪ—ಇವುಗಳೆಲ್ಲದರ ಉಪಯೋಗವೂ ಅವರಿಗೆ ತಿಳಿದಿತ್ತು. ದೇವಾಲಯಗಳೂ, ವಿಗ್ರಹಗಳೂ ಆ ಕಾಲದಲ್ಲಿದ್ದವೇ ಎಂಬ ವಿಚಾರ ಸ್ಪಷ್ಟವಾಗಿಲ್ಲ. ವಿಗ್ರಹಾರಾಧನೆ ಇತ್ತೆಂದು ಕೆಲವರೂ ಇಲ್ಲವೆಂದು ಇತರರೂ ಹೇಳುತ್ತಾರೆ. ಸಾಮೂಹಿಕವಾದ ಪ್ರಾರ್ಥನಾದಿಗಳನ್ನು ನಡೆಸುತ್ತಿದ್ದರೆಂಬುದು 'ಸಹಸ್ರಂ ಸಾಕಮರ್ಚತ' ಎಂಬುದರಿಂದ ಗೊತ್ತಾಗುತ್ತದೆ.

ಜನರು ಕಲಾಭಿರುಚಿಯನ್ನು ಹೊಂದಿದ್ದರು. ಸಂಗೀತ ನೃತ್ಯ ಮೊದಲಾದವು ಅವರಿಗೆ ತಿಳಿದಿತ್ತು. 'ಪ್ರಾಂಚೋ ಅಗಾಮ ನೃತಯೇ ಹಸಾಯ' (10-18-3) ಎಂಬಲ್ಲಿ ನರ್ತನದ ವಿಚಾರ ಬಂದಿದೆ. ಜೀವನವನ್ನು ಹೇಗೆ ಮಂದಹಾಸ ಪರಿಮಳಿಸುವುದೆಂಬುದನ್ನು ಇಲ್ಲಿ ಹೇಳಿದೆ. 'ಅಮ್ವರಾತಿ ಗರ್ಗರೋ ಗೋಧಾ' ಎಂಬಲ್ಲಿ ಹೇಳುವಂತೆ ಅನೇಕಾನೇಕ ವಾದ್ಯಗಳನ್ನು ಉಪಯೋಗಿಸುತ್ತಿದ್ದರು ಎಂಬುದು ಗೊತ್ತಾಗುತ್ತದೆ.

ಸಮಾಜದಲ್ಲಿ ಕಳ್ಳಕಾಕರ ಕಾಟವು ಇತ್ತೆಂದು ಗೊತ್ತಾಗುತ್ತದೆ. 'ಸ್ತೇನಂ ರಾಯ ಸಾರಮೇಯ ತಸ್ಕರಂ ವಾ ಪುನಃಸರ' ಎಂಬಲ್ಲಿ ಕಳ್ಳಕಾಕರ ಕಾಟವನ್ನು ಕಳೆಯಬೇಕೆಂಬ ಬೇಡಿಕೆ ಇದೆ. ಜೂಜು ಜನರಲ್ಲಿ ರೂಢಿಯಲ್ಲಿತ್ತು. ಜೂಜಾಡುವುದನ್ನು ನಿಂದಿಸಿ ಪ್ರಾಮಾಣಿಕವಾದ ವೃತ್ತಿಯನ್ನು ಅಂಗೀಕರಿಸಿ ಬಾಳುವೆಯನ್ನು ಹಸನಾಗಿ ನಡೆಸಬೇಕೆಂದು 'ಅಕ್ಷೈರ್ಮಾದೀವ್ಯಃ' ಎಂಬಲ್ಲಿ ಉಪದೇಶಿಸಿದೆ. ಅಂದೂ ಜನ ಅನೇಕ ರೋಗಗಳಿಗೆ ತುತ್ತಾಗುತ್ತಿದ್ದರು. ಕ್ಷಯ,

ಕಾಮಾಲೆ, ಹೃದ್ರೋಗ ಇವುಗಳ ಬಾಧೆ ಹೋಗಲಾಡಿಸಲು ಬೇಡಿಕೆ ಆದ್ದರಿಂದಲೇ ಬಂದಿದೆ. ಅಂದಿನ ವಿವಾಹ ಪದ್ಧತಿಯ ಪರಿಚಯ ವಿವಾಹ ಸೂಕ್ತದಿಂದ ಗೊತ್ತಾಗುತ್ತದೆ. ಒಟ್ಟಿನಲ್ಲಿ ಅಂದಿನ ಜನಜೀವನ ತಾಮಸವಾಗಿರಲಿಲ್ಲ. ಅದ್ಭುತವಾದ ಕ್ರಿಯಾಶಕ್ತಿ ಅವರಿಗೆ ಸ್ಫೂರ್ತಿಯನ್ನು ಕೊಡುತ್ತಿದ್ದಿತು.

ಅಂದಿನ ಸಮಾಜದಲ್ಲಿ ದಾನಕ್ಕೆ ಪರಮೋನ್ನತವಾದ ಸ್ಥಾನವಿತ್ತು.

> 'ಉಚ್ಚಾದಿವಿ ದಕ್ಷಿಣಾವಂತೋ ಅಸ್ಥುಃ
> ಯೇ ಅಶ್ವದಾಃ ಸಹ ತೇ ಸೂರ್ಯೇಣ |
> ಹಿರಣ್ಯದಾ ಅಮೃತತ್ವಂ ಭಜಂತೇ
> ವಾಸೋದಾಃ ಸೋಮ ಪ್ರತಿರಂತ ಆಯುಃ ||' (10-107-2)

'ದಕ್ಷಿಣೆಯನ್ನು ದಾನಮಾಡಿದವರು ಉನ್ನತವಾದ ದ್ಯುಲೋಕದಲ್ಲಿ ನಿಲ್ಲುತ್ತಾರೆ. ಅಶ್ವಗಳನ್ನು ದಾನಮಾಡಿದವನು ಸೂರ್ಯನ ಸಹವಾಸವನ್ನೂ, ಹಿರಣ್ಯ ದಾನ ಮಾಡಿದವನು ಅಮೃತತ್ವವನ್ನೂ, ಎಲೈ ಸೋಮದೇವನೇ, ವಸ್ತ್ರದಾನ ಮಾಡಿದವರು ನಿನ್ನನ್ನೂ (ಸೋಮನನ್ನು) ಪಡೆದು ವರ್ಧಿಸುತ್ತಾರೆ.' ಧನದ ಸಮರಸವಾದ ವಿಭಾಗದಿಂದ ಸಮಾಜ ಬೆಳೆಯಲಿ ಎಂಬುದನ್ನು 'ದೇವಾಭಾಗಂ ಯಥಾಪೂರ್ವೇ ಸಂಜಾನಾನಾ ಉಪಾಸತೇ' (10-191-2) ಎಂಬಲ್ಲಿ ಹೇಳಿದೆ. ವ್ಯಕ್ತಿಗಳು ಸಮಾಜದಲ್ಲಿ ಏಕಮನಸ್ಕರಾಗಿ ಸಹಕಾರ ತೋರಿ ಪರಸ್ಪರ ಹಿತೈಷಿಗಳಾಗಿ ಸರ್ವರ ಹಿತವನ್ನು ಸಾಧಿಸಬೇಕೆಂಬ ಆದರ್ಶವಿಲ್ಲಿದೆ.

ಋಗ್ವೇದ ಕಾಲದ ಜನ ಉನ್ನತ ಮಟ್ಟದ ನಾಗರಿಕರಾಗಿದ್ದರೆಂಬುದನ್ನು ಇದರಿಂದ ತಿಳಿಯಬಹುದು. ಅವರು ಕಾಡುಜನರಾಗಿರಲಿಲ್ಲ. ವಿವಿಧವಾದ ಛಂದಸ್ಸುಗಳಲ್ಲಿ ಲೀಲಾಜಾಲವಾಗಿ ಹಾಡಬಲ್ಲ ಸಾಮರ್ಥ್ಯವಿರುವವರು ಅನಾಗರಿಕರಾಗಲಾರರು. ಈ ಮಂತ್ರರಾಶಿಯೂ ಯಜ್ಞಾರ್ಥವಾಗಿಯೇ ಆದುದು, ಯಾಗಾದಿಗಳ ಅನುಷ್ಠಾನ ಕ್ರಮ ಋಗ್ವೇದಕ್ಕೂ ಹಿಂದಿನ ಕಾಲದಲ್ಲಿ ಪೂರ್ಣವಾಗಿ ವಿಕಾಸಗೊಂಡಿತ್ತೆಂಬುದನ್ನು ಇವು ತಿಳಿಸುವುವು ಋಕ್ಕುಗಳಲ್ಲಿ ಹೋತೃ, ಅಧ್ವರ್ಯು, ಉದ್ಗಾತಾ ಮೊದಲಾದ ಋತ್ವಿಕ್ಕುಗಳ ಕೆಲಸವೂ ವಿವರವೂ ಸೋಮಾಭಿಷವ ಮಾಡುವ ವಿಚಾರವೂ ಬರುವುದು ಇದಕ್ಕೆ ನಿದರ್ಶನ. ಮಂತ್ರಗಳನ್ನು ಬಹಳ ಕೌಶಲ್ಯದಿಂದ ಸಂಯೋಜಿಸಲಾಯಿತೆಂಬ ವಿಚಾರವನ್ನು 'ಅಹಂ ತಷ್ಟೇವ ಬಂಧುರಂ ಪರ್ಯಚಾಮಿ ಹೃದಾಮತಿಂ' (10-119-5) ಎಂಬುದು ತಿಳಿಸುತ್ತದೆ.

ಯಜ್ಞಸಂಸ್ಥೆಗೆ ಆ ಸಮಾಜದಲ್ಲಿ ಬಹಳ ಉನ್ನತವಾದ ಸ್ಥಾನ ಇತ್ತು. ಈ ಸೂಕ್ತಗಳೆಲ್ಲ ಯಜ್ಞಕ್ಕೆ ಅಂಗವಾಗಿ ಬಂದವು. ಸೋಮಯಾಗವನ್ನು ಮಾಡಿ ಆಜ್ಯಾಹುತಿಗಳನ್ನರ್ಪಿಸಿ ತಮಗೆ ಬೇಕಾದ ಆಯುರಾರೋಗ್ಯೈಶ್ವರ್ಯಾದಿಗಳನ್ನೂ ಪುತ್ರ ಸಂಪತ್ತನ್ನೂ ಬೇಡುತ್ತಿದ್ದರು. ಕೆಳಗಿನ ಮಂತ್ರದಲ್ಲಿ ಇದನ್ನು ಕಾಣಬಹುದು:

'ದಾನೋ ಅಗ್ನೇ ಧಿಯಾ ರಯಿಂ ಸುವಿರಂ ಸ್ವಪತ್ಯಂ ಸಹಸ್ಯ ಪ್ರಶಸ್ತಂ' (7-1-5)

ಯಜ್ಞ ಸಂಸ್ಥೆಗೆ ಪ್ರಾಧಾನ್ಯವಿರುವಂತೆ ಪುರೋಹಿತ ವರ್ಗಕ್ಕೂ ಆ ಸಮಾಜದಲ್ಲಿ ಪ್ರಾಧಾನ್ಯ ವಿತ್ತೆಂದು ಗೊತ್ತಾಗುತ್ತದೆ. ಯಾಗಾದಿಕರ್ಮಗಳನ್ನು ಸಾಂಗವಾಗಿ ನೆರವೇರಿಸಿಕೊಡುವ ಋತ್ವಿಜರಿಗೆ ಪ್ರಾಧಾನ್ಯವಿತ್ತು. 'ಅಗ್ನಿಸ್ಸರ್ವಾದೇವತಾಃ' ಎಂಬಂತೆ ಹೊಗಳಲ್ಪಡುವ ಅಗ್ನಿದೇವನನ್ನೂ ಅವರು 'ಪುರೋಹಿತಂ' ಎಂದು ಹೊಗಳಿರುವುದನ್ನು ನಾವು ನೋಡಬಹುದು. ಋತ್ವಿಜರೂ ಪುರೋಹಿತರೂ ವಿಹಿತವಾದ ಯಾಗಾದಿಗಳ ಅನುಷ್ಠಾನದಿಂದ ತಮ್ಮನ್ನು ಆಶ್ರಯಿಸಿದ

ರಾಜರುಗಳ ಅಭೀಷ್ಟಗಳನ್ನು ಪೂರ್ಣಮಾಡಿಕೊಡುತ್ತಿದ್ದರು. ದೇವತೆಗಳಿಗೂ ಯಾಜಕರಿಗೂ ನಡುವೆ ಪುರೋಹಿತರು ಪುರುಷಕಾರವನ್ನು ವಹಿಸುತ್ತಿದ್ದರು. ಋಷಿಯ ಪ್ರಾರ್ಥನೆಗೆ ಮನಗೊಟ್ಟು ಶತ್ರು ಸೇನೆಯನ್ನು ಇಂದ್ರನು ಧ್ವಂಸಗೊಳಿಸಿದನೆಂದು ಕೊಂಡಾಡಿರುವುದನ್ನು (7-18-14) ಕಾಣಬಹುದು. ವಸಿಷ್ಠರು ಸುದಾಸನನ್ನು ರಕ್ಷಿಸಬೇಕೆಂದು ಇಂದ್ರಾ ವರುಣರಲ್ಲಿ ಸ್ತೋತ್ರವನ್ನರ್ಪಿಸಿದ್ದಾರೆ (7-83-1). ದೇವತೆಗಳನ್ನು ಋಷಿಗಳು ವಿಶಿಷ್ಟವಾದ ತಮ್ಮ ಭಕ್ತಿಯಿಂದ ಒಲಿಸಿಕೊಳ್ಳುತ್ತಿದ್ದುದರಿಂದ ಅಂಥ ಋಷಿಗಳ ಆಶ್ರಿತರು ಸುಖಿಗಳಾಗುತ್ತಿದ್ದರು. ಅಂಥ ತಪಶ್ಶಕ್ತಿಯುತರನ್ನು ರಾಜರುಗಳು ಆಶ್ರಯಿಸುತ್ತಿದ್ದರು.

ಮಂತ್ರಸಾಮರ್ಥ್ಯವನ್ನೂ ಮಂತ್ರಪ್ರಯೋಕ್ತೃವಿನ ಸಾಮರ್ಥ್ಯವನ್ನೂ ಅನೇಕ ಕಡೆ ವರ್ಣಿಸಿದೆ. ವಸಿಷ್ಠ ವಾಸಿಷ್ಠರ ಮತ್ತು ಇಂದ್ರನ ಸಂವಾದದಲ್ಲಿ ಇತರರು ಆಹ್ವಾನ ನೀಡಿದರೂ ದೇವತೆ ಅವರಲ್ಲಿಗೆ ಹೋಗದೆ ತಮ್ಮ ಕಡೆ ಬಂದುದರ ಕಾರಣವನ್ನು ಬಣ್ಣಿಸಲಾಗಿದೆ. ಪಾಶದ್ಯುಮ್ನನೆಂಬ ರಾಜನ ಸೋಮಯಾಗದಲ್ಲಿ ಸೋಮಪಾನ ಮಾಡುತ್ತಿದ್ದ ಇಂದ್ರನನ್ನು ಸುದಾಸನ ಯಜ್ಞ ಮಂಟಪಕ್ಕೆ ವಸಿಷ್ಠಪುತ್ರರು ತಮ್ಮ ಮಂತ್ರ ಸಾಮರ್ಥ್ಯದಿಂದ ಬರಮಾಡಿದರು.

'ದೂರಾದಿಂದ್ರಮನಯನ್ನಾಸುತೇನ
ತಿರೋ ವೈಶಂತಮತಿಪಾಂತಮುಗ್ರಮ್ |
ಪಾಶದ್ಯುಮ್ನಸ್ಯ ವಾಯತಸ್ಯ ಸೋಮಾತ್
ಸುತಾದಿಂದ್ರೋಽವೃಣೀತಾ ವಸಿಷ್ಠಾನ್ (7-33-2)

ಹೀಗೆ ಸೌಹೃದದ ಬೇಡಿಕೆಯಿಂದಲೂ ಸ್ತುತಿಗಳಿಂದಲೂ ಪುರೋಹಿತರು ತಮ್ಮನ್ನು ಆಶ್ರಯಿಸಿದರಾಜರ ಮಂಗಳಾಕಾಂಕ್ಷಿಗಳಾಗಿ ದೇವತೆಗಳನ್ನೊಲಿಸಿ ಕಾಪಾಡುತ್ತಿದ್ದಂತೆ ಆ ರಾಜರೂ ತಮ್ಮ ಪುರೋಹಿತರುಗಳಿಗೆ ಅಮಿತವಾದ ದಾನಾದಿಗಳನ್ನು ಮಾಡುತ್ತಿದ್ದರು.

ಋಗ್ವೇದಧರ್ಮ ಉಚ್ಚವರ್ಗದ ಜನರ ಧರ್ಮ, ಸುವ್ಯವಸ್ಥಿತವಾದ ಉದಾತ್ತ ವರ್ಗದ ಭವ್ಯಚಿತ್ರವನ್ನಿದು ನಮ್ಮ ಕಣ್ಮುಂದಿಡುತ್ತದೆ. ಬಹುದ್ರವ್ಯಸಾಧ್ಯವಾದ ಯಾಗಾದಿಗಳನ್ನು ನಡೆಸಲು ಅಪಾರವಾದ ಸಲಕರಣೆಗಳೂ ಸೌಲಭ್ಯಗಳೂ ಬೇಕು. ಅಂಥ ಉಪಪತ್ತಿಗಳನ್ನು ಹೊಂದಿದ ರಾಜಾಧಿರಾಜರು ನಡೆಸಬಹುದಾದ ಯಾಗ ವಿವರಣೆಗಳು ಇಲ್ಲಿರುವಂತೆಯೇ ಸರ್ವಜನ ಸಾಧ್ಯವಾದ ಭಗವತ್ಪರತೆಯನ್ನು ಬೆಳೆಸುವ ಅಂಶಗಳೂ ಇಲ್ಲಿವೆ. ಒಟ್ಟಿನಲ್ಲಿ ಹೇಳುವುದಾದರೆ ನೈತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಧಾರ್ಮಿಕವಾಗಿ ವ್ಯಕ್ತಿ ಮತ್ತು ಸಮಾಜಗಳೆರಡರ ಪರಿಪೂರ್ಣವಾದ ವಿಕಾಸಕ್ಕೆ ಆವಶ್ಯಕವಾದ ಸಾರತಮವಾದ ಅಂಶ ಗಳನ್ನೆಲ್ಲಾ ಒಳಗೊಂಡ ಜೀವನ ಕ್ರಮ ನಮಗೆ ಇಲ್ಲಿ ಗೋಚರಿಸುತ್ತದೆ.

## ಋಗ್ವೇದ ದರ್ಶನ

ವೇದಾಂತ ದರ್ಶನದ ಉಗಮಸ್ಥಾನ ಋಗ್ವೇದ ಸಂಹಿತೆಯೆಂಬುದು ನಿರ್ವಿವಾದವಾದ ವಿಚಾರ. ನದಿಯ ಮೂಲಸ್ಥಾನದಲ್ಲಿ ಹೇಗೋ ಹಾಗೆಯೇ ಇಲ್ಲೂ ದಾರ್ಶನಿಕ ವಿಚಾರದ ಪ್ರವಾಹ ಗೂಢವಾಗಿದೆ. ಕೆಲವೆಡೆ ಪ್ರಕಟವಾಗುತ್ತದೆ. ಮತ್ತೆ ಕೆಲವೆಡೆ ಗುಪ್ತವಾಗಿಯೇ ಪ್ರವಹಿಸಿದೆ.

ಋಗ್ವೇದ ಸಂಹಿತೆ ಇಂದು ವಿಶ್ವದಲ್ಲಿ ಉಪಲಬ್ಧವಾಗಿರುವ ಆಧಾರಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದೆಂದು ಆಧುನಿಕ ವಿಮರ್ಶಕರೂ ಒಪ್ಪಿದ್ದಾರೆ. ಈ ಸಂಹಿತೆಯಲ್ಲಿ ಬರುವ

ವಿಚಾರಗಳು ಬಹುಮುಖವಾದ ಪ್ರಾಧಾನ್ಯ ಹೊಂದಿವೆ. ಅಗ್ನಿ, ಇಂದ್ರ, ವರುಣ, ರುದ್ರ, ವಿಷ್ಣು, ಮರುತ್, ವಿಶ್ವೇದೇವತೆಗಳು ಮೊದಲಾದ ಅನೇಕ ದೇವತೆಗಳನ್ನು ಕುರಿತ ಅನರ್ಘ್ಯವಾದ ಸ್ತುತಿಗಳು ಇಲ್ಲಿ ಹೇರಳವಾಗಿವೆ. ಋಗ್ವೇದ ಕೇವಲ ಸ್ತೋತ್ರದ ಪುಸ್ತಕವಲ್ಲ. ಅತ್ಯಂತ ನಿಗೂಢವಾದ ಸೃಷ್ಟಿರಹಸ್ಯವನ್ನು ಕುರಿತ ವಿವೇಚನೆ ಇಲ್ಲಿದೆ ; ಇಲ್ಲಿ ಶಾಶ್ವತವಾದ ಧರ್ಮಸ್ವರೂಪದ ವಿವೇಚನೆ ಇದೆ ; ಅಂದಿನ ಇತಿಹಾಸವನ್ನರಿಯಲು ಸಾಧ್ಯವಾಗುವ ಐತಿಹಾಸಿಕ ಸೂಕ್ತಗಳಿವೆ ; ರಾಜಮಹಾರಾಜರುಗಳು ಮಾಡಿದ ದಾನಗಳ ಸ್ತುತಿಯಿದೆ ; ಸಾಮಾಜಿಕ ವಿಚಾರಗಳ ಮೇಲೆ ಬೆಳಕು ಚೆಲ್ಲುವ ವಿವಾಹಸೂಕ್ತ ಮತ್ತು ಔರ್ಧ್ವದೈಹಿಕ ಸೂಕ್ತಗಳಿವೆ ; ಮುಂದಿನ ನಾಟಕಗಳಿಗೆ ಮೂಲವಾದ ಸಂವಾದ ಸೂಕ್ತಗಳಿವೆ ; ಕಾವ್ಯಕ್ಕೆ ಬುನಾದಿಯಾದ ಉತ್ತಮ ವರ್ಣನೆಗಳಿವೆ. ಸದ್ವರ್ತನೆ ಹಾಗೂ ಉತ್ತಮ ಆದರ್ಶಗಳನ್ನು ಸೂಚಿಸುವ ಭಾಗಗಳೂ ಇವೆ ; ತಿಳಿಯಾಗಿ ವಿಡಂಬನವನ್ನು ಮಾಡುವ ಮಂಡೂಕ ಸೂಕ್ತವೂ ಇದೆ ; ಬಯಕೆಗಳನ್ನು ಪಡೆಯಲು ಸಾಮಾನ್ಯರು ಅನುಸರಿಸುವ ಆಭಿಚಾರಕ ವಿಚಾರಗಳೂ ಇವೆ ; ಹೀಗೆ ಋಗ್ವೇದ ಸಂಹಿತೆ ಅನೇಕ ದೃಷ್ಟಿಗಳಿಂದ ಅಮೂಲ್ಯವಾದ ಗಣೆಯಾಗಿದೆ. ಸಾಮಾಜಿಕ, ಧಾರ್ಮಿಕ, ನೈತಿಕ ಐತಿಹಾಸಿಕ ಮತ್ತು ಸಾಹಿತ್ಯಿಕ ಪ್ರಾಧಾನ್ಯವನ್ನಿದು ಹೊಂದಿರುವಂತೆ ಆಧ್ಯಾತ್ಮಿಕ ಮಹತ್ವವನ್ನೂ ಹೊಂದಿದೆ. ಅತ್ಯುನ್ನತವಾದ ದಾರ್ಶನಿಕ ವಿಚಾರ ಧಾರೆಯನ್ನು ಪ್ರತಿಪಾದಿಸಿ.[63]

ಧರ್ಮ ಮತ್ತು ದರ್ಶನದ ಮೂಲವನ್ನು ನಮ್ಮ ದೇಶದಲ್ಲಿ ನಾವು ಕಾಣುವಂತೆ ಮತ್ತಾವ ದೇಶದಲ್ಲಿಯೂ ಕಾಣಲಾರೆವು.[64] ನಮ್ಮ ದೇಶದಲ್ಲಿ ಧರ್ಮ ಮತ್ತು ದರ್ಶನದ ಮೂಲವನ್ನರಿಯಲು ಋಗ್ವೇದ ಸಂಹಿತೆಗೇ ಶರಣು ಹೋಗಬೇಕು. ಭಾರತೀಯ ಋಷಿವರ್ಯರ ತಪೋ ದೃಷ್ಟಿಯ ಪರಮಫಲವಾದ ದಿವ್ಯಜ್ಞಾನ ಇಲ್ಲಿ ಶಿಲೆಯ ಪದರದಲ್ಲಿನ ಸ್ವರ್ಣರೇಖೆಯಂತೆ ಬೆಳಗುತ್ತಿದೆ.

ಪ್ರಕೃತಿಯ ಪೂಜೆಯಿಂದ ಧರ್ಮ ಆರಂಭವಾಯಿತೆಂದು ಹೇಳುವವರು ಋಗ್ವೇದ ಸಂಹಿತೆಯನ್ನು ತೋರಿಸುತ್ತಾರೆ. ಇಲ್ಲಿ ಬರುವ ಅನೇಕ ದೇವತೆಗಳು ಪ್ರಕೃತಿಯ ನಾನಾಮುಖಗಳನ್ನು ಪ್ರತಿಬಿಂಬಿಸುವಂತಿದ್ದಾರೆ. ಉಷಸ್ಸು, ಮರುತ್, ಮಿತ್ರ, ವರುಣ, ಸವಿತೃ, ಪೃಥಿವೀ, ದ್ಯೌಃ, ವಾಯು, ಇಂದ್ರ, ಪರ್ಜನ್ಯ, ಆಪಃ, ರಾತ್ರಿ, ಅಗ್ನಿ, ಆದಿತ್ಯ ಮೊದಲಾದ ದೇವತೆಗಳು ನೇರವಾಗಿ ಪ್ರಕೃತಿಗೆ ಸಂಬಂಧಿಸಿದಂತೆಯೇ ಇದ್ದಾರೆ. ಈ ಅಂಶವನ್ನು ಗಮನಿಸಿದ ವಿಮರ್ಶಕರು ಇತರ ದೇಶಗಳಲ್ಲಿ ಆರಂಭವಾದಂತೆ ಭಾರತ ದೇಶದಲ್ಲಿಯೂ ಪ್ರಕೃತಿಯ ಪೂಜೆಯಿಂದಲೇ ಧರ್ಮ ಆರಂಭವಾಯಿತೆಂದು ಹೇಳುತ್ತಾರೆ. ಈ ವಿಚಾರವನ್ನು ನಮ್ಮ ಜನ ಬಹಳ ಹಿಂದಿನಿಂದಲೂ ಚರ್ಚಿಸಿದ್ದಾರೆ.

---

63. 'The hymns of the Rigveda display not only the ancient Indian polytheism in its full extent, but contain also in certain of the later hymns the first germs of a philosophical view of the world.'

–*Outlines of Indian Philosophy, Deussen. Ind. Ant. XXIX* p. 365

64. 'For the origin and essence of religion there is no book in the world more instructive than the Rigveda'. *Ibid*, p. 366

ಅತ್ಯಂತ ಪ್ರಾಚೀನರೂ ವೇದದ ಸಂಪ್ರದಾಯಗಳಿಗನುಗುಣವಾಗಿ ಅರ್ಥವಿವರಣೆ ಮಾಡಿರುವವರೂ ಆದ ಯಾಸ್ಕಾಚಾರ್ಯರು ವೇದದಲ್ಲಿ ಬರುವ ಸ್ತುತಿಗಳೆಲ್ಲಾ ಆಯಾಯಾ ದೇವತೆಗಳ ಅಥವಾ ಪದಾರ್ಥಗಳ ದ್ವಾರಾ ಒಬ್ಬನೇ ಆದ ದೇವನನ್ನು ಸ್ತುತಿಸಿರುವುವೆಂದು ಹೇಳಿರುವುದು ಬಹಳ ಮುಖ್ಯವಾದ ಅಂಶ. ಇದರಿಂದ ಋಷಿಗಳ ದೃಷ್ಟಿ ಕೇವಲ ಪ್ರಕೃತಿಯ ಸ್ತುತಿಯೇ ಆಗಿರಲಿಲ್ಲವೆಂದೂ ಇವೆಲ್ಲದರ ಹಿನ್ನೆಲೆಯಲ್ಲಿ ಅದೃಶ್ಯನಾಗಿರುತ್ತಾ ನಾನಾ ವಿಧದಲ್ಲಿ ತನ್ನ ಮಹಿಮೆಯನ್ನು ಪ್ರದರ್ಶಿಸುವ ಸತ್ಯ ಸ್ವರೂಪಿಯ ಕಡೆ ಇದ್ದಿತೆಂದೂ ನಾವರಿಯಬಹುದು. ವಿಶ್ವದ ವೈವಿಧ್ಯ ಮತ್ತು ವೈಚಿತ್ರ್ಯವನ್ನು ಕಂಡು ಬೆರಗಾದ ಋಷಿಗಳು ಅವುಗಳ ಹಿಂದೆ ಅಕ್ಷಯನಾಗಿದ್ದ ಕಾರಣಸ್ವರೂಪಿಯನ್ನು ಸಾಕ್ಷಾತ್ಕರಿಸಿಕೊಂಡಿದ್ದರು.[65] ಎಲ್ಲಕ್ಕೂ ಮೂಲ ಕಾರಣನೂ ಋತಜ್ಞನೂ, ಋತಸ್ವರೂಪಿಯೂ, ಋತರಕ್ಷಕನೂ ಆದ ಆ ದೇವನನ್ನು ಅನ್ವೇಷಿಸಿ, ಸಾಕ್ಷಾತ್ಕರಿಸಿಕೊಳ್ಳಬೇಕೆಂದು ಇವರು ಸಾರಿ ಹೇಳಿದರು. ಈ ಗೂಢಜ್ಞಾನಿಗಳು ತಮ್ಮ ದೃಷ್ಟಿಯನ್ನು ಪ್ರಕೃತಿಯ ಕಡೆಯಿಂದ ಬೇರೆಕಡೆಗೆ ತಿರುಗಿಸಿ ವಿಶ್ವದ ವಿಚಿತ್ರಗಳಿಗೆ ನಿಯಾಮಕವಾದ ಆ ಶಕ್ತಿಯನ್ನು ತಮ್ಮ ತೀವ್ರವಾದ ಪ್ರಣಿಧಾನದಿಂದ ಅರಿತು ಎಲ್ಲ ಬಗೆಯ ಸ್ತುತಿಗಳಿಂದಲೂ ಆ ವಿಶ್ವಶಕ್ತಿಯನ್ನು ಅನುಪಮವಾಗಿ ಸ್ತುತಿಸಿದರು. ಇದರಿಂದ ಯಾಸ್ಕಾಚರ್ಯರ[66] ಅಭಿಪ್ರಾಯದಂತೆ ಋಗ್ವೇದದ ಸೂಕ್ತಗಳು ಕೇವಲ ಪ್ರಕೃತಿಯ ಪವಾಡವನ್ನು ರಚಿಸಿರುವ ಆ ವಿಶ್ವ ಶಿಲ್ಪಿಯನ್ನೇ ಸ್ತುತಿಸುತ್ತವೆ.

ಋಗ್ವೇದದ ದೃಷ್ಟಿಯಲ್ಲಿ ಎರಡು ಲೋಕಗಳುಂಟು. ಒಂದು ಅಮೃತದ ಲೋಕ. ಇದು 'ಸದನಂ ಋತಸ್ಯ'[67] ಆದುದು. ಇದಕ್ಕಿಂತ ಬೇರೆಯಾದುದು ನಾವು ವಾಸಿಸುತ್ತಿರುವ ಈ ಲೋಕ. ಇದು 'ಅನೃತಸ್ಯ ಭೂರೇಃ'[68] ಆಗಿ ಆ ಅಮೃತಲೋಕಕ್ಕಿಂತ ಕಡಿಮೆಯಾಗಿರುವುದು. ನಮ್ಮ ಗುರಿ ಈ ಅನೃತ ಲೋಕದಿಂದ ಆ ಋತದ ಲೋಕಕ್ಕೆ ಹೋಗುವುದೇ ಆಗಿದೆ. ಇದಕ್ಕೆ ಮಾರ್ಗವನ್ನು ನಾವು ಕಾಣಬೇಕಷ್ಟೇ? ಅದು 'ಋತಸ್ಯ ಪಂಥಾಃ'[69]. ಋತದ ಪಾಲನೆ ಮತ್ತು ಉಪಾಸನೆ ಆ ಅಮೃತ ಲೋಕಕ್ಕೆ ನಮ್ಮನ್ನು ಕರೆದೊಯ್ಯುವ ಉಪಾಯಗಳಾಗಿವೆ. ಆದರಿಂದ ಮೃತ್ಯುವಿನಿಂದ ಅಮೃತತ್ವಕ್ಕೆ ಸಾರಬೇಕೆಂಬುದು ಋಗ್ವೇದದ ಅತ್ಯಂತ ಮುಖ್ಯವಾದ ಉಪದೇಶ.[70] ಇದನ್ನೇ 'ಮೃತ್ಯೋರ್ಮುಕ್ಷೀಯ ಮಾಮೃತಾತ್'[71] ಎಂದು ಬೇಡಿದೆ. ಈ ಲೋಕದಿಂದ ಆ ಅಮೃತ ಲೋಕಕ್ಕೆ ಸಂದು ಬಾಳಬೇಕೆಂಬ ಆದರ್ಶವನ್ನು 'ಸಂಪತಂ ಋತಂ ಅಮೃತಂ'[72] ಎಂಬ ಸೂಕ್ತಿ ತಿಳಿಸುತ್ತದೆ.

ಈ ಅಂಶಗಳು ಮಾನವನು ಬಾಳಬೇಕಾದ ಆಧ್ಯಾತ್ಮಿಕ ಜೀವನದ ಪೂರ್ಣ ಸ್ವರೂಪವನ್ನು ಸ್ಥೂಲವಾಗಿ ತಿಳಿಸುವುವು. ನಮ್ಮ ತತ್ತ್ವಸ್ಥಿತಿಯನ್ನುರುಹಿ ನಾವು ಪಡೆಯಬೇಕಾದ ಪರಮ

65. *Hymns to the Mystic Fire* : Aurobindo. Intro. p. lii and iv
66. ಯಾಸ್ಕಾಚಾರ್ಯರ ಕಾಲ ಕ್ರಿ. ಪೂ. ೭೦೦ ಎಂದು ವಿಮರ್ಶಕರ ಅಭಿಪ್ರಾಯ.
67. ಋಗ್ವೇದ (4-21-3)
68. ಋಗ್ವೇದ (7-60-5)
69. ಋಗ್ವೇದ (7-66-3)
70. ಋಗ್ವೇದ 7-113
71. 9-59-12
72. 1-68-2

ಫಲವನ್ನು ತಿಳಿಸಿ ಆ ಪುರಾಷಾರ್ಥ ಸಾಧನೆಗೆ ನಾವು ಅನುಷ್ಠಿಸಬೇಕಾದ ಉಪಾಯವನ್ನೂ ಇವು ವಿಧಿಸಿ ಮುಮುಕ್ಷುತ್ವವನ್ನುಂಟುಮಾಡಿ ವೇದಾಂತ ದರ್ಶನದ ಸಾರಸರ್ವಸ್ವವನ್ನೇ ಉಪದೇಶಿಸುತ್ತಿವೆ.

ಅಮೃತತ್ವವನ್ನು ಸಾಧಿಸಲು ಎಲ್ಲರೂ ಯತ್ನಿಸಬೇಕೆಂದು ತಿಳಿಸಿದಂತೆ ಅದಕ್ಕೆ ಉಪಾಯ ವನ್ನೂ ಋಗ್ವೇದ ತಿಳಿಸುತ್ತದೆ. ಈ ಪ್ರಯತ್ನ ಫಲಿಸಬೇಕಾದರೆ ಭಗವಂತನ ಪ್ರಸಾದ ಅತ್ಯಾವಶ್ಯಕ. ಮಾನವನ ಜೀವನ ಪೂರ್ಣವಾಗಿ ಭಗವದಧೀನವೆಂದು ಋಗ್ವೇದದ ಸಿದ್ಧಾಂತ. ಸರ್ವಲೋಕಗಳಿಗೂ ಕಾರಣನಾದ ಆ ಮಹಾಮಹಿಮನನ್ನು ಸೇವಿಸಿ ಅವನ ದಯೆಯಿಂದಲೇ ನಾವು ಉದ್ಧಾರವಾಗಬೇಕು. ಭಗವಂತನನ್ನು ಸೇವಿಸಿ ಅವನ ಸಖ್ಯವನ್ನು ನಾವು ಪಡೆದವೆಂದರೆ ನಮ್ಮ ನಿತ್ಯಜೀವನದಲ್ಲಿ ನಡೆಯುವ ಒಳಿತು ಕೆಡಕುಗಳ ಹೋರಾಟದಲ್ಲಿ ಜಯಶೀಲರಾಗಿ ಆಸುರೀಶಕ್ತಿಗಳನ್ನು ದಮನಮಾಡಲು ಸಮರ್ಥರಾಗುತ್ತೇವೆ. ನಮ್ಮಲ್ಲಿ ಕನಿಕರಿಸಿ ನಮಗೆ ಸಹಾಯ ಮಾಡಲು ಆ ದೇವನಿಗೆ ನಾವು ಅರ್ಪಿಸುವ ಪೂಜೆಯೇ ಯಜ್ಞವೆನ್ನಿಸುವುದು.[73] ಬೇರೆ ಬೇರೆ ಸಲಕರಣೆಗಳಿಂದ ನಾವು ಮಾಡುವ ಯಜ್ಞ ಆತ್ಮಸಮರ್ಪಣೆಯ ಪ್ರತೀಕ. ಬಾಹ್ಯಯಜ್ಞ ಪೂರ್ಣವಾಗಿ ಆತ್ಮಯಾಗವನ್ನು ಪ್ರತಿಬಿಂಬಿಸುತ್ತದೆ. ಭಗವಂತನಲ್ಲಿ ಆತ್ಮಾತ್ಮೀಯ ಸಮರ್ಪಣೆಯೇ ಯಜ್ಞದ ಅಂತರಾರ್ಥ. ಆದರಿಂದಲೇ 'ಪ್ರಾಂಚಂ ಯಜ್ಞಂ ಪ್ರಣಯತಾ ಸಖಾಯಃ'[74] ಎಂದು ಹೇಳಿ ಈ ಯಜ್ಞದ.ಪರಂಪರೆಯನ್ನು ವಿಚ್ಛೇದವಿಲ್ಲದೆ ಮುಂದುವರಿಸಿಕೊಂಡು ಹೋಗಬೇಕೆಂದು ತಿಳಿಸಿದರು. ಭಗವದಾರಾಧನಾರೂಪವಾದ ಯಜ್ಞವನ್ನು ಬೆಳಸಿಕೊಂಡು ಬಾಳಬೇಕೆಂದೂ ಇದು ದ್ರವ್ಯಯಜ್ಞ, ತಪೋಯಜ್ಞವೇ ಮೊದಲಾಗಿ ಅನೇಕ ಬಗೆಯಾಗಿದೆಯೆಂದೂ ಭಗವದ್ಗೀತೆಯು ತಿಳಿಸುವುದರ ಮೂಲವನ್ನಿಲ್ಲಿ ನಾವು ಕಾಣಬಹುದು.[75]

ಭಗವತ್ಸ್ವರೂಪದ ವಿಚಾರವನ್ನು ಋಗ್ವೇದ ಅನುಪಮವಾಗಿ ತಿಳಿಸುತ್ತದೆ. ಋಗ್ವೇದ ಸಂಹಿತೆಯಲ್ಲಿ ಅಗ್ನೀಂದ್ರಾದಿ ಅನೇಕ ದೇವತೆಗಳ ಸ್ತುತಿ ಇರುವುದು ನಿಜ. ಈ ದೇವತಾ ನಾನಾತ್ವ ಪಾರಮಾರ್ಥಿಕವಾದುದಲ್ಲ. ಮಹಾನುಭಾವನಾದ ಒಬ್ಬನೇ ದೇವನ ಅಂಗಪ್ರತ್ಯಂಗಗಳಂತೆ ಈ ದೇವತೆಗಳು. ಆದರಿಂದ ಈ ನಾನಾತ್ವದಲ್ಲಿ ಐಕ್ಯವನ್ನು ಕಾಣುವುದೀಗ ತತ್ತ್ವ. ಏಕದೇವತಾತ್ವ ಹಾಗೂ ನಾನಾ ದೇವತಾತ್ವಗಳ ಸಮನ್ವಯವನ್ನು ಋಗ್ವೇದ ಸಂಹಿತೆಯೇ ಮಾಡಿದೆ. ಗ್ರೀಸ್ ದೇಶದಲ್ಲಿ ನಾವು ಕಾಣುವ ದೇವತಾನಾನಾತ್ವದಂತೆ ಈ ನಾನಾತ್ವವಿಲ್ಲ. ಅಲ್ಲಿನ ದೇವತೆಗಳು ಎಲ್ಲರೂ ಸಮರಾಗಿರಲಿಲ್ಲ. ಕೆಲವರು ಅಧಿಕಬಲರು ಮತ್ತೆ ಕೆಲವರು ಕಡಿಮೆ ಶಕ್ತಿಯವರು. ಋಗ್ವೇದ ಸಂಹಿತೆಯಲ್ಲಿ ಬರುವ ದೇವತೆಗಳಲ್ಲಿ ಅಧಿಕರೂ ಇಲ್ಲ;

73. 'The elements of the outer sacrifice in the veda are used as symbols of inner sacrifice and self-offering: we give what we are and what we have in order that the riches of the Divine Truth and Light may descend into our life and become the elements of our inner birth into the truth......our sacrifice is a journey, a pilgrimage and a battle–a travel towards Gods and we also make that journey with Agni : the inner flame as our pathfinder and leader.' *(Hymns to the Mystic Fire*, Intro xxiii) ಮಹಾನಾರಾಯಣೋಪನಿಷತ್ತು-ಖಂಡ ೨೫ರಲ್ಲಿ ಆತ್ಮಯಾಗದ ವಿಚಾರ ಹೇಳಿದೆ.

74. ಋಗ್ವೇದ (10-101-2)

75. ಭ. ಗೀ. 3-10 : 4-28

ನ್ಯೂನರೂ ಇಲ್ಲ. ಎಲ್ಲರೂ ಸಮರು, ಸತ್ಯಸ್ವರೂಪಿಗಳು, ಋತಾವಾನರು, ಕಲ್ಯಾಣೈಕತಾನರು, ದೋಷದೂರರು.

'ಯುವಾಂ ದೇವಾಸ್ತ್ರಯ ಏಕಾದಶಾಸಃ
ಸತ್ಯಾಃ ಸತ್ಯಸ್ಯ ದದೃಶೇ ಪುರಸ್ತಾತ್.'[76]

ಎಂಬ ನುಡಿ ಇದನ್ನು ಸಮರ್ಥಿಸುತ್ತದೆ. ಎಲ್ಲ ದೇವತೆಗಳೂ ಪರಿಪೂರ್ಣ ಸ್ವರೂಪರೆಂದು ನಾವು ಅರಿಯಬೇಕು. ಅನಂತಗುಣಯುತನಾದ ಒಬ್ಬನೇ ದೇವನನ್ನು ನಾನಾ ನಾಮರೂಪ ಗಳಿಂದ ಸ್ತುತಿಸಿದೆ ಎಂಬ ಅಂಶವನ್ನು ಪ್ರಾಚೀನರಾದ ಯಾಸ್ಕಾಚಾರ್ಯರು ನಿರುಕ್ತದಲ್ಲಿ ವಿವರಿಸಿದ್ದಾರೆ.[77]

ಇದರಿಂದ ಋಗ್ವೇದ ಸಂಹಿತೆಯಲ್ಲಿ ಅನೇಕಾನೇಕ ದೇವತೆಗಳ ಉಲ್ಲೇಖವಿದ್ದರೂ ಅವೆಲ್ಲಾ ಒಬ್ಬನೇ ದೇವನಿಗೆ ಅನ್ವಯಿಸುವುದು ಎಂಬುದು ಪ್ರಾಚೀನರ ಸಿದ್ಧಾಂತವೆಂದು[78] ಅರಿಯ ಬಹುದು.

ಅನೇಕ ಗುಣಗಣಗಳನ್ನು ಹೊಂದಿರುವ ಆ ದೇವನ ಒಂದೊಂದು ಗುಣವನ್ನೂ ಅನುಭವಿಸುತ್ತಾ ಒಂದೊಂದು ಹೆಸರಿನಿಂದ ಆ ಗುಣದ ಹೆಚ್ಚಳವನ್ನು ಕೊಂಡಾಡಿದ್ದಾರೆಂದು ಅನುಭವಿಗಳು ಅನುಭವಿಸುತ್ತಾರೆ. ಆತನ ವೀರ್ಯ, ಶಕ್ತಿ ಮೊದಲಾದುವನ್ನು ಇಂದ್ರನು ಪ್ರತಿನಿಧಿಸಿದರೆ ಆತನ ಪೋಷಕತ್ವವನ್ನು ಪೂಷನ್ ದೇವನೂ ರಕ್ಷಕತ್ವವನ್ನು ವಿಷ್ಣುವೂ ಪ್ರಕಾಶಕತ್ವವನ್ನು ಸೂರ್ಯನೂ ಕೋಪವನ್ನು ರುದ್ರನೂ ಪ್ರತಿಬಿಂಬಿಸುತ್ತಾರೆ. ಅಖಂಡವೂ ಅದ್ಭುತವೂ ವಿಚಿತ್ರತಮವೂ ಆದ ವಿಶ್ವವೇ ಅವನ ರೂಪವೆಂದು ಮನಗಂಡು ಭಾವಿಸಿದಾಗ ಅವನನ್ನು ಸ್ತುತಿಸಲೆಂತು ಸಾಧ್ಯವಾದೀತು ! ಆ ಅನಿರ್ವಚನೀಯ ವಸ್ತುವನ್ನು ಸ್ತುತಿಸಲು ವಿಶ್ವೇದೇವಾಃ, ವಿಶ್ವಕರ್ಮ, ಪ್ರಜಾಪತಿ ಎಂಬ ಹೆಸರುಗಳನ್ನು ಬಳಸಿದೆ.[79] ಸಕಲಗುಣ ಸಮನ್ವಿತನೂ, ಅಪಾರ ಮಹಿಮಾಯುತನೂ, ಅಖಿಲ ಜಗತ್ಕಾರಣನೂ ಅಕ್ಷಯನೂ ಅನಂತನೂ

---

76. ಋಗ್ವೇದ (8-57-2) 77. ನಿರುಕ್ತ (7-4-8)

78. ಆಧುನಿಕ ವಿಮರ್ಶಕರು ಋಗ್ವೇದ ಸಂಹಿತೆಯಲ್ಲಿ ದೇವತಾನಾನಾತ್ವವಿತ್ತೆಂದೂ ಹೇಳುವರು. ಮ್ಯಾಕ್ಸ್‌ಮುಲ್ಲರ್ ಮಹಾಶಯನು ಋಗ್ವೇದದ ದೇವತಾಸ್ವರೂಪದ ವೈಶಿಷ್ಟ್ಯವನ್ನೇ ಗಮನಿಸಿ ಇಲ್ಲಿ Heno-Theism ಎಂಬುದು ಪ್ರತಿಪಾದಿತವಾಗಿದೆಯೆಂದು ಅಭಿಪ್ರಾಯಪಡುತ್ತಾನೆ. ದೇವತಾನಾನಾತ್ವದಿಂದ ಏಕದೇವತಾತತ್ವದ ವಿಕಾಸ ಸಹಜವಾಗಿ ಆಗಲಿಲ್ಲವೆಂದು ಆಧುನಿಕ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಪರದೈವವಾಗಬೇಕಾದ ಮಹತ್ವ ವರುಣನಿಗಿದ್ದರೂ ಇಂದ್ರಾಗ್ನಿಗಳ ಪ್ರಾಬಲ್ಯ ತಪ್ಪಿದಂತೆ ಈ ದೇವತೆಗೂ ಪ್ರಾಬಲ್ಯ ತಪ್ಪಿರುವುದನ್ನು ಉದಾಹರಿಸುತ್ತಾರೆ. ವಿವರಗಳಿಗೆ *Outlines of Indian Philosophy,* Prof. M. Hiriyanna, p. 41 ನೋಡಿ. ಇದ್ದ ಅನೇಕ ದೇವತೆಗಳಲ್ಲಿ ಒಬ್ಬ ದೇವತೆಯನ್ನು ಪರದೈವವೆಂದು ಭಾವಿಸುವ ಬದಲು ಎಲ್ಲ ದೇವತೆಗಳನ್ನೂ ಒಳಗೊಂಡ ಹೊಸ ಹೊಸ ದೇವತೆಗಳನ್ನು ನಾವು ಕಾಣುತ್ತೇವೆ. ವಿಶ್ವೇದೇವಾಃ, ವಿಶ್ವಕರ್ಮ ಮತ್ತು ಪ್ರಜಾಪತಿ ಮೊದಲಾದವರು ಇಂಥವರೆಂದು ವಿಮರ್ಶಕರ ಭಾವ. *Ibid.,* p. 39 ; ಆದರೆ ಪ್ರಾಚೀನರು ಈ ಬಗೆಯ ಭೇದವನ್ನೇ ಒಪ್ಪುವುದಿಲ್ಲ. ಎಲ್ಲ ನಾಮಗಳೂ ಆ ಪರಮಾತ್ಮನಿಗೇ ಅನ್ವಯಿಸುವೆಂಬುದು ಅವರ ಸಿದ್ಧಾಂತ.

79. Just as Xenophanes in Greece puts above all the popular Gods his own deity who is nothing more than the universe considered as a unity, we find in the Rigveda remarkable seeking and enquiring after that one from which, as our eternal, unfathomable, unspeakable unity–all Gods, worlds and creatures originate' *Outlines of Indian Philosophy.* Deussen. Ind. Ant. XXIX, p. 368.

ಆದ ಆ ದೇವನನ್ನು ಹೀಗೆ ಅದ್ಭುತವಾಗಿ ಸ್ತುತಿಸಿರುವುದನ್ನು ನಾವು ಇಲ್ಲಿ ಕಾಣುತ್ತೇವೆ.

ಭಗವಂತನು ಒಬ್ಬನೇ ಎಂಬುದನ್ನು ತಿಳಿಸಿದಂತೆ ಋಗ್ವೇದ ಆತನ ಸ್ವರೂಪವನ್ನೂ ತಿಳಿಸುತ್ತದೆ. ಋಗ್ವೇದ ಸಂಹಿತೆಯಲ್ಲಿ ಸಗುಣೋಪಾಸನೆಯೇ ಅದ್ಭುತವಾಗಿ ಪ್ರತಿಪಾದಿತವಾಗಿದೆ. ಮುಂದೆ ಉಪನಿಷತ್ತುಗಳಲ್ಲಿ ನಿರ್ಗುಣೋಪಾಸನೆ ಪ್ರಸ್ತುತವಾಗುತ್ತದೆ, ಋಗ್ವೇದ ಸಂಹಿತೆಗನುಗುಣವಾಗಿ ಭಗವಂತನು ಸಕಲ ಗುಣಗಣಯುತ. ಪಾರ್ಥಿವ ಹಾಗೂ ದಿವ್ಯಲೋಕಗಳಿಗೆ ಅವನು ರಾಜಾಧಿರಾಜನು. (6-19-10) ಜಗತ್ತುಗಳನ್ನು ಸೃಷ್ಟಿ ಮಾಡಿ ನಿಲ್ಲಿಸಿರುವ ಮಹಾಮಹಿಮನು (10-82-1) ; (6-22-9). ಅವನು ಸರ್ವಜ್ಞ ಹಾಗೂ ಸರ್ವಕಾರಣನು (6-7-6) ; ಸರ್ವವನ್ನೂ ವ್ಯಾಪಿಸಿರುವ ವಿಶ್ವರೂಪಿಯವನು (1-13-10) ; ಇದ್ದಲ್ಲಿಂದಲೇ ಕಣ್ಮುಚ್ಚಿಯೂ ಎಲ್ಲವನ್ನೂ ತಿಳಿಯಬಲ್ಲ ಸಮರ್ಥನವನೂ (8-25-9). ಈ ಲೋಕ ಕಾರಣನ ಕೀರ್ತಿಯನ್ನು ಸಪ್ತನದಿಗಳೂ ದ್ಯಾವಾಪೃಥಿವೀಗಳೂ ಸೂರ್ಯಚಂದ್ರರೂ ಸಾರುತ್ತಾರೆ (1-102-2) ; ಈ ಸರ್ವಜ್ಞ ಮೂರು ಲೋಕಗಳನ್ನೂ ದೇವತೆಗಳ ಜನ್ಮಾದಿಗಳನ್ನೂ ಮನುಷ್ಯರ ಋಜುತ್ವ ಕುಟಿಲತೆಗಳನ್ನೂ ತಿಳಿಯುತ್ತಾನೆ (6-51-2) ; ಇವನು ಚರಾಚರ ಜಗತ್ಪತಿ (6-45-20) ; ಅವನನ್ನು ವಾಕ್ಕಾಗಲೀ ಮನಸ್ಸಾಗಲೀ ಪೂರ್ಣವಾಗಿ ಸ್ತುತಿಸಲಾರದು, ತಿಳಿಯಲಾರದು (6-47-15) (6-9-6), (1-7-7) ; ಅವನು ನಿಸ್ಸಮಾಭ್ಯಧಿಕ (6-30-1), (6-30-4), (6-21-10), (6-25-5) ; ಅವನು ಮಹತ್ತಮರಲ್ಲಿ ಮಹತ್ತಮ (2-29-3) ; ಅಸಮಶಕ್ತಿಯುತ (3-59-1), (10-88-9), (10-73-8), (1-67-2) ; ಕಾಲದ ಪರಿಣಾಮಕ್ಕೆ ಒಳಗಾಗದ ಅವನು ಕಾಲಕ್ಕೂ ಪ್ರಭುವೇ ಆಗಿದ್ದಾನೆ. (6-24-7) ; ದೋಷಗಳೊಂದೂ ಇರದವನು (6-11-4); ಸರ್ವರನ್ನೂ ಅತಿಶಯಿಸಿದವನು (7-86-1), (1-52-11), (1-24-6) ; ಭಕ್ತರೊಡನೆ ಕೂಡಿ ನಲಿಯುವನು (6-47-17) ; ಪರಮ ಕರುಣಾಕರ (2-34-5), (7-104-1), (8-18-15), (1-75-4) ; ಭಕ್ತರಿಗೆ ಪರಮ ಸುಲಭನು (8-32-15), (10-54-2) ; ವಿಶ್ವವನ್ನೇ ಹೆದರಿಕೆಯಲ್ಲಿಟ್ಟು ನಿಯಮಿಸುವವನು (8-83-11), (8-14-9), (6-31-2) ; ಸರ್ವರಕ್ಷಕ (6-7-7), (1-31-10), (6-38-2), (10-4-1), (8-66-13), (1-71-6) ; ಪರಮಬಂಧು (10-82-3), (1-78-5) ; ಸರ್ವಾಂತರ್ಯಾಮಿ (10-80-2), (6-9-5), (6-66-4), (1-164-21), (1-67-2) ; ಅಮೃತತ್ವಪ್ರಾಪಕ (6-45-6), (5-47-7).

ಋಗ್ವೇದ ಸಂಹಿತೆಯು ಭಗವತ್ಸ್ವರೂಪವನ್ನು ಮೇಲೆ ವಿವರಿಸಿದಂತೆ ತೋರಿಸಿ ಮುಂದ ವಿಕಾಸಗೊಂಡ ದ್ವೈತಾದ್ವೈತದರ್ಶನಗಳಿಗೆಲ್ಲ ಮೂಲವಾಗಿದೆ. ದ್ವೈತ ಹಾಗೂ ವಿಶಿಷ್ಟಾದ್ವೈತದರ್ಶನಗಳಲ್ಲಿ ಭಗವತ್ಸ್ವರೂಪವನ್ನು ಹೇಳುವುದಕ್ಕೂ ಇದಕ್ಕೂ ಪೂರ್ಣವಾದ ಸಾಮ್ಯವಿದೆ. ಭಗವಂತನು ಸರ್ವಶಕ್ತನಾಗಿ ಮಹಾಮಹಿಮನಾಗಿರುವಂತೆಯೇ ಪರಮ ಕರುಣಾಕರನೂ ಭಕ್ತಾನುಗ್ರಾಹಕನೂ ಆಗಿ ಪರಮ ರಕ್ಷಕನಾಗಿದ್ದಾನೆಂದೂ ಪ್ರಾಪ್ಯನೂ. ಪ್ರಾಪಕನೂ ಅವನೇ ಆಗಿದ್ದಾನೆಂದೂ ವಿವರಿಸುವ ಅಂಶಗಳೆಲ್ಲಾ ಋಗ್ವೇದ ಸಂಹಿತೆಯಲ್ಲಿ ಅದ್ಭುತವಾಗಿ ಬಂದಿವೆ. 'ಸಕಲ ಚರಾಚರ ಜಗತ್ತೂ ಅವನಲ್ಲದೆ ಬೇರೆಯಲ್ಲ'[80] 'ಸಕಲ ಜಗತ್ತೂ ನೀನೆ ; ಜಗತ್ತನ್ನು ಮೀರಿರುವನೂ ನೀನೇ'[81], ಒಬ್ಬನೇ ಆದ ಈಶ್ವರನು ತಾನು

80. ಋಗ್ವೇದ (3-55-19)
81. ಋಗ್ವೇದ (10-123-10)

ಹೊಂದಿದ್ದ ರೂಪಕ್ಕನುಗುಣವಾಗಿ ವ್ಯವಹರಿಸಲ್ಪಡುತ್ತಾನೆ'[82], 'ಒಬ್ಬನನ್ನೇ ಅನೇಕ ಬಗೆಯ ಕಲ್ಪನೆ ಮಾಡುತ್ತಾರೆ'[83], 'ವಿಶ್ವಮೇಕಂ'[84], 'ತದೇಕಂ'[85], 'ಸ್ಥಾವರ ಜಂಗಮಗಳಿಗೆಲ್ಲಾ ಆತ್ಮಾ'[86], 'ಇದೆಲ್ಲವೂ ಪುರುಷನೇ'[87] ಮೊದಲಾದ ವಾಕ್ಯಗಳು ಉಪನಿಷತ್ಪ್ರತಿಪಾದ್ಯ ಅದ್ವೈತದರ್ಶನದ ಬ್ರಹ್ಮೈಕತ್ವವನ್ನು ಸೂಚಿಸುತ್ತವೆ.

ಭಗವಂತನು ಜಗತ್ತಿಗೆ ಏಕೈಕಕಾರಣನೆಂದೂ ಇವನು ಸರ್ವಾಧಿಕನೂ ಸರ್ವರಕ್ಷಕನೂ ಆಗಿದ್ದಾನೆಂದೂ ಋಗ್ವೇದ ತಿಳಿಸಿ ಆ ದೇವನ ದಯೆಯಿಂದಲೇ ಅಮೃತತ್ವ ಪ್ರಾಪ್ತಿಯೆಂದು ತಿಳಿಸುತ್ತದೆ. ಇಂಥ ಭಗವಂತನಿಗೂ ಜಗತ್ತಿಗೂ ಇರುವ ಸಂಬಂಧವನ್ನು ಈಗ ವಿಚಾರಿಸೋಣ.

ಇಲ್ಲಿ ಜಗತ್ಸೃಷ್ಟಿಯ ವಿಚಾರ ನಾಲ್ಕಾರು ಸೂಕ್ತಗಳಲ್ಲಿ ಬಂದಿದೆ. ಈ ಜಗತ್ತು ಆ ಭಗವಂತನ ಸಂಕಲ್ಪಕ್ಕನುಗುಣವಾಗಿ ಹುಟ್ಟಿತು. ಅವನ ಇಚ್ಛೆಗನುಗುಣವಾಗಿ ಸೃಷ್ಟಿ ಹಾಗೂ ಲಯಗಳು ಆಗುವುವು. ಸೃಷ್ಟಿಗೆ ಮೊದಲು ಒಬ್ಬನೇ ಇದ್ದ ದೇವನು ತಾನೇ ಜಗದ್ರೂಪವನ್ನು ಹೊಂದುತ್ತಾನೆ. ಜಗತ್ತಿನಲ್ಲಿ ನಡೆಯುವ ವ್ಯಾಪಾರಗಳೆಲ್ಲಾ ಅವನ ಲೀಲೆ. ನಾಮರೂಪಗಳಿಲ್ಲದ ಅವಸ್ಥೆಯಿಂದ ನಾಮರೂಪಗಳಿರುವ ಅವಸ್ಥೆಯನ್ನು ಹೊಂದುವುದೇ ಸೃಷ್ಟಿ ಎನ್ನಿಸುವುದು. ಇದನ್ನೇ 'ದೇವನಾಂ ಪೂರ್ವೇ ಯುಗೇಽಸತಃ ಸದಜಾಯತ'[88] ಎಂದು ಹೇಳಿದ್ದಾರೆ. ಪರಮಾತ್ಮನು ಜಗದತೀತನೂ ಹೌದು ; ಜಗದಂತರ್ಯಾಮಿಯೂ ಹೌದು ; ಜಗತ್ತಿಗೆ ನಿಮಿತ್ತಕಾರಣನೂ ಆಗಿ ಉಪಾದಾನಕಾರಣವೂ ಆಗಿದ್ದಾನೆ. ವೇದಾಂತ ದರ್ಶನದ ಮೂಲಭೂತ ತತ್ವಗಳು ಋಗ್ವೇದದಲ್ಲಿರುವುದು ಇವುಗಳಿಂದ ಸ್ಪಷ್ಟವಾಗುವುದು. ಈಗ ಕೆಲವು ಮಂತ್ರಗಳನ್ನು ಉದಾಹರಿಸಿದರೆ ಈ ಅಂಶ ಚೆನ್ನಾಗಿ ಗೊತ್ತಾಗುವುದು. ಪ್ರಳಯದ ವಿಚಾರವನ್ನು ಹೇಳಿ ಏಕೈಕನಾದ ಬ್ರಹ್ಮವಸ್ತು ಜಗತ್ತಿಗೆ ಸರ್ವಕಾರಣವೆಂದೂ ಎಲ್ಲದರಲ್ಲಿಯೂ ಅದು ಅಂತಃಪ್ರವಿಷ್ಟವಾಗಿದೆಯೆಂದೂ ಕೆಳಗಿನ ಮಂತ್ರ ಹೇಳುತ್ತದೆ:

'ಯ ಇಮಾ ವಿಶ್ವಾ ಭುವನಾನಿ ಜುಹ್ವ-
ದೃಷಿರ್ಹೋತಾ ನ್ಯಸೀದತ್ಪಿತಾ ನಃ ।
ಸ ಆಶಿಷಾ ದ್ರವಿಣಮಿಚ್ಛಮಾನಃ
ಪ್ರಥಮಚ್ಛದವರಾಂ ಆ ವಿವೇಶ ॥'[89]

"ಋಷಿಯೂ ಹೋತೃವೂ ಆದ ವಿಶ್ವಕರ್ಮನು ಎಲ್ಲ ಲೋಕಗಳನ್ನೂ ತನ್ನಲ್ಲಿಯೇ ಆಹುತಿರೂಪದಲ್ಲಿ ಉಪಸಂಹರಿಸಿ ತನ್ನ ಸ್ಥಾನದಲ್ಲಿ ಕುಳಿತನು. ಅವನೇ ನಮ್ಮ ಜನಕನು. ಸೃಜಿಸಬೇಕೆಂಬ ಇಚ್ಛೆಯಿಂದ ಲೋಕೈಶ್ವರ್ಯವನ್ನು ಬಯಸಿ ಅವ್ಯಾಕೃತವಾದ ರೂಪವನ್ನು ಮೊದಲು ಹೊಂದಿದ ಅವನೇ ತನ್ನ ಸಂಕಲ್ಪದಿಂದ ಸೃಜಿಸಲ್ಪಟ್ಟ ಸಕಲ ಭೂತಜಾತಗಳಲ್ಲಿಯೂ ಅಂತಃಪ್ರವೇಶಿಸಿದನು."

---

82. ಋಗ್ವೇದ (5-44-6)
83. ಋಗ್ವೇದ (10-114-5)
84. ಋಗ್ವೇದ (3-54-8)
85. ಋಗ್ವೇದ (10-129-2)
86. ಋಗ್ವೇದ (1-115-1)
87. ಋಗ್ವೇದ (10-90-2)
88. ಋಗ್ವೇದ (10-72-2) ; ಛಾಂ. ಉ. 3-19-11
89. ಋಗ್ವೇದ (10-81-1)

ಏಕಮೇವಾದ್ವಿತೀಯನಾದ ದೇವನಿಂದ ಜಗತ್ಸೃಷ್ಟಿಯಾಯಿತೆಂಬ ಅಂಶ ಮೇಲಿನ ಮಂತ್ರದಲ್ಲಿ ಹೇಳಿದೆ.[90]

ಲೋಕವನ್ನು ಸೃಜಿಸಲು ನಿಮಿತ್ತಕಾರಣವೂ ಉಪಾದಾನಕಾರಣವೂ ಬೇಕಷ್ಟೇ? ಇದನ್ನು ಸೃಜಿಸುವವನು ನಿಮಿತ್ತಕಾರಣ. ಇದನ್ನು ನಿರ್ಮಿಸಲು ಉಪಯೋಗಿಸುವ ಪದಾರ್ಥವೇ ಉಪಾದಾನ ಕಾರಣ. ಆದರಿಂದ ದ್ಯಾವಾ ಪೃಥಿವೀಗಳನ್ನು ನಿರ್ಮಾಣ ಮಾಡಲು ಉಪಯೋಗಿಸಿದ ಪದಾರ್ಥವಾವುದು ? ನಿರ್ಮಿಸಿದವನಾರು ? ಸೃಷ್ಟಿಗೆ ಮೊದಲು ಪರಮಾತ್ಮನೊಬ್ಬನೇ ತಾನೇ ಇದ್ದನು? ಅವನು ನಾನಾ ವಿಧವಾದ ಜಗತ್ತನ್ನು ಹೇಗೆತಾನೇ ನಿರ್ಮಿಸಿದ ? ಅವನೊಬ್ಬನೇ ಇದ್ದ ಕಾರಣ ಜಗತ್ತಿಗೆ ಉಪಾದಾನ ಕಾರಣವಾವುದು ? ಅವೆಲ್ಲಿದ್ದುವು ? ಅವೂ ಮೊದಲೇ ಇದ್ದವೆಂದರೆ ದೇವನೊಬ್ಬನೇ ಇದ್ದನೆಂದು ಹೇಗೆ ಹೇಳುವುದು? ಆದರಿಂದ ಈ ಸೃಷ್ಟಿಯ ಬಗೆ ಎಂಥದು? ಈ ವಿಧವಾದ ವಿಚಾರದ ಮಥನ ಕೆಳಗಿನ ಮಂತ್ರಗಳಲ್ಲಿ ಕಾಣಬಹುದು :

'ಕಿಂ ಸ್ವಿದಾಸೀದಧಿಷ್ಠಾನಮಾರಂ-
ಭಣಂ ಕಥಮ ಸ್ವಿತ್ಕಥಾಸೀತ್ ।
ಯತೋ ಭೂಮಿಂ ಜನಯ ನ್ವಿಶ್ವಕರ್ಮಾ
ವಿದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ॥'

'ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ
ವಿಶ್ವತೋ ಬಾಹುರುತ ವಿಶ್ವತಸ್ಪಾತ್ ।
ಸಂ ಬಾಹುಭ್ಯಾಂ ಧಮತಿ ಸಂಪತತ್ರೈ-
ರ್ದ್ಯಾವಾಭೂಮೀ ಜನಯನ್ ದೇವ ಏಕಃ ॥'

'ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸ
ಯತೋ ದ್ಯಾವಾ ಪೃಥಿವೀ ನಿಷ್ಟತಕ್ಷುಃ ।
ಮನೀಷಿಣೋ ಮನಸಾ ಪೃಚ್ಛತೇದುತ-
ದ್ಯದಧ್ಯತಿಷ್ಠದ್ಭುವನಾನಿ ಧಾರಯನ್ ॥[91]

'ಜಗತ್ತನ್ನು ದೇವನು ಸೃಜಿಸುವಾಗ ಆಧಾರಸ್ಥಾನ ಯಾವುದಾಗಿದ್ದಿತು ? ಮೂಲವಾದ ಉಪಾದಾನ ಕಾರಣ ಯಾವುದಾಗಿದ್ದಿತು ? ಅವನೊಬ್ಬನೇ ಇದ್ದ ಕಾರಣ ಅದು ಹೇಗೆ ಸಂಭವಿಸಿತು ? ಸರ್ವದ್ರಷ್ಟನೂ ಪರಮೇಶ್ವರನೂ ಆದ ವಿಶ್ವಕರ್ಮನು ಭೂಮಿಯನ್ನು ಸೃಜಿಸಿ ತನ್ನ ಮಹಿಮೆಯಿಂದ ದ್ಯುಲೋಕವನ್ನೂ ಹೇಗೆ ಸೃಜಿಸಿದನು?

'ವಿಶ್ವಚಕ್ಷುವೂ ವಿಶ್ವಮುಖನೂ ವಿಶ್ವಬಾಹುವೂ ಆದ ಆ ಪರಮೇಶ್ವರನು ಸರ್ವತ್ರ ನಿಂತವನಾಗಿ ಮತ್ತೊಂದರ ಸಹಾಯವನ್ನೂ ಬಯಸದೆ ಒಬ್ಬನೇ ತನ್ನ ತೋಳುಗಳಿಂದ ದ್ಯುಲೋಕವನ್ನೂ, ಪಾದಗಳಿಂದ ಭೂಮಿಯನ್ನೂ ಪ್ರೇರಿಸುತ್ತಾನೆ. ಹೀಗೆ ದ್ಯಾವಾ ಪೃಥಿವಿಗಳನ್ನು ಸೃಜಿಸಿದ ಆ ದೇವನು ಅದ್ವಿತೀಯನಾಗಿ ವಿರಾಜಿಸುತ್ತಾನೆ.

'ದ್ಯಾವಾಪೃಥಿವೀಗಳನ್ನು ಯಾವುದರಿಂದ ನಿರ್ಮಿಸಿದನೋ ಆ ವನವು ಯಾವುದು ? ಆ

---

90. ಉಪನಿಷತ್ತುಗಳ ಸಿದ್ಧಾಂತವಾದರೂ ಇದೇ–'ಆತ್ಮಾವಾ ಇದಮೇಕ ಏವಾಗ್ರ ಆಸೀತ್ (ಐ. ಆ. ೨-೪-೧) ; 'ಸದೇವ ಸೋಮ್ಯೇದಮಗ್ರ ಆಸೀತ್ (ಛಾಂ. ಉ. ೬-೨-೧); ಸೋಽ. ಕಾಮಯತ ಬಹುಸ್ಯಾಂ ಪ್ರಜಾಯೇಯೇತಿ (ತೈ. ಆ. ೮-೬) ; ಬೃ. ಉ. ೧-೨-೧ ; ತೈ. ಆ. ೧-೨-೧; ತೈ. ಉ. ೨-೬.

91. ಋಗ್ವೇದ 10-81-2ರಿಂದ 4.

ವೃಕ್ಷವು ಯಾವುದು ? ಎಲೈ ಪ್ರಾಜ್ಞರೇ, ಇವೆರಡನ್ನು ನೀವು ಮನಸಾ ತಿಳಿಯಿರಿ. ಲೋಕಗಳನ್ನೆಲ್ಲಾ ಧರಿಸಿರುವ ಈ ಸರ್ವೇಶ್ವರನ ಸ್ಥಾನವನ್ನೂ ವಿಮರ್ಶಿಸಿ ತಿಳಿಯಿರಿ.'

ಅದ್ವಿತೀಯನೂ ಮಹಾಮಹಿಮನೂ ಆದ ದೇವನು ಅಸಾಧಾರಣವಾದ ತನ್ನ ಮಹಿಮೆಯ ಕಾರಣ ಜಗತ್ತನ್ನು ಸೃಜಿಸಲು ತಾನೇ ನಿಮಿತ್ತ ಕಾರಣನೂ ಉಪಾದಾನ ಕಾರಣನೂ ಆಗಿದ್ದಾನೆಂದು ಹೇಳಿದೆ. ಅವನೇ ಸದ್ರೂಪನು. ಪುಂ ಸ್ತ್ರೀಭಾವಗಳೂ ಅವನೇ. ಅವನೇ ಅಗ್ನಿಯು. ಅವನೇ ಆದಿತ್ಯನು. ಪರ್ಜನ್ಯನೂ ವಾಯುವೂ ಅವನೇ. ಈ ಅಂಶವನ್ನು ಕೆಳಗಿನ ಮಂತ್ರ ಹೇಳುತ್ತದೆ:

'ಅಸಚ್ಚ ಸಚ್ಚ ಪರಮೇ ವ್ಯೋಮ-
ನ್ದಕ್ಷಸ್ಯ ಜನ್ಮನ್ನದಿತೇರುಪಸ್ಥೇ ।
ಅಗ್ನಿರ್ಹನಃ ಪ್ರಥಮಜಾ ಋತಸ್ಯ
ಪೂರ್ವ ಆಯುನಿ ವೃಷಭಶ್ಚ ಧೇನುಃ ॥[92]

'ನಾಮರೂಪಗಳಿರದ ಅವ್ಯಾಕೃತರೂಪವೂ ನಾಮರೂಪಗಳಿಂದ ಕೂಡಿದ ವ್ಯಾಕೃತರೂಪವೂ ಸರ್ವೋತ್ತಮನಾದ ಆ ಸರ್ವಕಾರಣನದೇ. ಪೃಥಿವಿ ಮತ್ತು ಅದಿತ್ಯರ ಜನನವೂ ಅವನಿಂದಲೇ. ಕರ್ಮಫಲವನ್ನನುಭವಿಸಬೇಕಾದ ನಮಗಿಂತ ಮೊದಲಿದ್ದ ಅವನು ಪ್ರಥಮಜ. ಸೃಷ್ಟಿಗೆ ಮುಂಚೆ ಅವನೇ ವೃಷಭನೂ ಆಗಿ ಧೇನುವೂ ಆಗಿದ್ದನು.' ಕೆಳಗಿನ ಮಂತ್ರವನ್ನು ನೋಡಿ:

'ಅಹಮೇವ ವಾತ ಇವ ಪ್ರವಾ-
ಮ್ಯಾರಭಮಾಣಾ ಭುವನಾನಿ ವಿಶ್ವಾ ।
ಪರೋ ದಿವಾ ಪರ ಏನಾ ಪೃಥಿ-
ವ್ಯೈತಾವತೀ ಮಹಿನಾ ಸಂ ಬಭೂವ ॥[93]

"ಇತರರ ಸಹಾಯವಿಲ್ಲದ ನಾನೊಬ್ಬಳೇ ಸ್ವೇಚ್ಛೆಯಿಂದ ಚರಿಸುವ ವಾಯುವಿನಂತೆ ಸಕಲ ಕಾರ್ಯಗಳಿಗೂ ಕಾರಣವಾಗಿ ಪ್ರವರ್ತಿಸುತ್ತೇನೆ. ಕಾರ್ಯಗಳಾದ ಈ ಭೂಮಿ ಆಕಾಶಗಳಿಗಿಂತ ಅಧಿಕಳಾಗಿ ನನ್ನ ಮಹಿಮೆಯಿಂದ ಸರ್ವಜಗದಾತ್ಮನಾ ಸಂಭೂತಳಾಗಿದ್ದೇನೆ."

ಇದರಿಂದ ಜಗತ್ಕಾರಣನಾದ ಆ ದೇವನೇ ಈ ಜಗತ್ತಿಗೆ ಸರ್ವಕಾರಣನೆಂದು ಹೇಳಿದಂತಾಯಿತು. ದೇವನೇ ಜಗತ್ತಿಗೆ ನಿಮಿತ್ತ ಕಾರಣನೂ ಉಪಾದಾನ ಕಾರಣನೂ ಆಗಿರುವನೆಂದು ತೈತ್ತಿರೀಯ ಬ್ರಾಹ್ಮಣವು

'ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀ-
ದ್ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ ।[94]

ಎಂದು ಸಮರ್ಥಿಸುತ್ತದೆ. ಸರ್ವವನ್ನೂ ಸೃಜಿಸಿ ಅವುಗಳಲ್ಲಿ ತಾನು ಅಂತಃಪ್ರವೇಶಿಸಿ ನಾಮರೂಪಗಳಿಂದ ಕೂಡಿದ ಜಗತ್ತನ್ನು ಆ ಪರವಸ್ತು ಉಂಟುಮಾಡಿತು. 'ಮಹೋದೇವೋ ಮರ್ತ್ಯಾನ್ ಆವಿವೇಶ'[95] ಎಂಬ ವಾಕ್ಯ ಇದನ್ನು ತಿಳಿಸುತ್ತದೆ. ಹೀಗೆ ಈ ಮೂಲಾತ್ಮನಿಂದ ಸಕಲ ಲೋಕಗಳೂ, ಜೀವಜಂತುಗಳೂ ಉಂಟಾದುವೆಂದು ಅರಿಯುತ್ತೇವೆ.

92. ಋಗ್ವೇದ 10-5-7

93. ಋಗ್ವೇದ (10-125-8) 94 ತೈ.ಬ್ರಾ. (2-8-97)

95. ಋಗ್ವೇದ (4-58-3) ; 'ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ.' (ಛಾಂ. ಉ. 6-3-2).

ಜಗತ್ಕಾರಣವಸ್ತುವನ್ನು ಪುರುಷನೆಂದು ಹೇಳಿ ಆತನಿಂದ ಜಗತ್ತಿನ ಸೃಷ್ಟಿಯಾಯಿತೆಂದು ಪುರುಷ ಸೂಕ್ತವು[96] ಬಹಳ ಸುಂದರವಾಗಿ ಹೇಳುತ್ತದೆ.

'ಆದಿಕಾರಣನಾದ ಪರಮಪುರುಷನು ಸಹಸ್ರಾರು ಶಿರಸ್ಸುಗಳನ್ನೂ ನೇತ್ರಗಳನ್ನೂ ಪಾದಗಳನ್ನೂ ಹೊಂದಿದ್ದಾನೆ. ಈ ವಿರಾಟ್ಪುರುಷನು ವಿಶ್ವವನ್ನು ಎಲ್ಲ ಕಡೆಯಿಂದಲೂ ಆವರಿಸಿ ಹತ್ತು ಅಂಗುಲಗಳಷ್ಟು ಪ್ರಮಾಣ ಮೀರಿಯೂ ನಿಂತಿದ್ದಾನೆ.[97]

'ಹಿಂದೆ ಇದ್ದ, ಮುಂದೆ ಉಂಟಾಗತಕ್ಕ ಮತ್ತು ಈಗ ನಮಗೆ ಗೋಚರಿಸುತ್ತಿರುವ ಸಕಲ ಜಗತ್ತೂ ಆ ಪುರುಷನೇ. ಅವನು ಅಮೃತತ್ವಕ್ಕೆ ಪ್ರಭು. ಅನ್ನದ ನಿಮಿತ್ತದಿಂದ (ಕರ್ಮ ಫಲಭೋಗ) ಅವನು ಜಗದವಸ್ಥೆಯನ್ನು ಸ್ವೀಕರಿಸುವನು.'[98]

'ಇವೆಲ್ಲವೂ ಆದಿಪುರುಷನ ಮಹಿಮೆಯೇ ಆಗಿದೆ. ಆ ಪರಮಪುರುಷನು ಈ ಜಗತ್ತಿಗಿಂತಲೂ ಅಧಿಕನು. ಸಮಸ್ತ ಭೂತ ಜಾತವೂ ಅವನ (ಪಾದ) ಕಾಲುಭಾಗ. ಇವನ ಉಳಿದ ಮೂರು ಪಾಲು ಸ್ವಯಂ ಪ್ರಕಾಶವಾದ ದ್ಯುಲೋಕದಲ್ಲಿ ಅವಿಕಾರವಾಗಿರುವುದು.'

'ನಮಗೆ ಅಗೋಚರವಾಗಿರುವ ಆ ತ್ರಿಪಾದ್ವಿಭೂತಿ ಉತ್ಕೃಷ್ಟನಾದ ನಿತ್ಯಲೋಕದಲ್ಲಿ ನೆಲಸಿದೆ. ಅವನ ಏಕಪಾದ್ವಿಭೂತಿ ಈ ಸಂಸಾರ ಮಂಡಲದಲ್ಲಿ ಮತ್ತೆ ಮತ್ತೆ ಆವಿರ್ಭವಿಸಿ ಚೇತನಾಚೇತನಗಳೆಂಬ ನಾನಾ ರೂಪದಲ್ಲಿ ಜಗತ್ತನ್ನು ವ್ಯಾಪಿಸುತ್ತದೆ.'[99]

'ಆ ಆದಿಪುರುಷನಿಂದ ವಿರಾಟ್ ಅಥವಾ ಬ್ರಹ್ಮಾಂಡವು ಹುಟ್ಟಿತು. ಇದನ್ನಾಶ್ರಯಿಸಿ ಪುರುಷನು ಆವಿರ್ಭವಿಸಿದನು. ಇವನು (ದೇವ, ತಿರ್ಯಕ್, ಮನುಷ್ಯ) ಬೇರೆ ಬೇರೆ ರೂಪ ಹೊಂದಿ ಬೆಳೆದನು. ಅನಂತರ ಭೂಮಿಯೂ ಪಾಂಚಭೌತಿಕ ಶರೀರವೂ ಆದವು.'[100]

'ಆಮೇಲೆ ದೇವತೆಗಳು ಪುರುಷಸಂಜ್ಞಕನಾದ ಹವಿಸ್ಸುಗಳಿಂದ ಯಜನ ಮಾಡಿದರು. ಈ ಯಾಗದಲ್ಲಿ ವಸಂತವೇ ಘೃತವಾಯಿತು. ಗ್ರೀಷ್ಮ ಸಮಿತ್ತಾಯಿತು. ಶರತ್ಕಾಲ ಹವಿಸ್ಸಾಯಿತು.'[101]

'ಪ್ರಥಮ ಜಾತನೂ ಯಜ್ಞರೂಪನೂ ಆದ ಆ ಪುರುಷನನ್ನು ದರ್ಭೆಗಳ ಮೇಲೆ ದೇವತೆಗಳು

---

96. ಋಗ್ವೇದ (10-90) ; ಈ ಪುರುಷ ಸೂಕ್ತದ ವಿಚಾರ ತೈತ್ತಿರೀಯ ಆರಣ್ಯಕದಲ್ಲಿಯೂ (1-2-3-1), ಶತಪಥ ಬ್ರಾಹ್ಮಣದಲ್ಲಿ (13-6-1-1)ಯೂ ಬರುತ್ತದೆ.

97. ಶ್ವೇ. ಉ. 3-11 ; ಶ. ಬ್ರಾ. 13-6-2-1.

98. ಪರಮಾತ್ಮನು ಎಲ್ಲಕ್ಕೂ ಅಂತರ್ಯಾಮಿಯಾಗಿದ್ದಾನೆ. ಬೃ. ಉ. 1-4-7 ; ಈಶಾವಾಸ್ಯ 1 ; ಛಾಂ. ಉ. 7-25-2 ; 3-14-1 ; ಮುಂ. ಉ. 2-2-11 ; 2-2-5 ; ಶ್ವೇ. ಉ. 6-19 ; ಬೃ. ಉ. 3-7.

99. ಏಕ ಪಾದಾತ್ಮಕವಾದ ಜಗತ್ತು ದುಃಖಮಿಶ್ರವಾದುದು. ತ್ರಿಪಾದ್ವಿಭೂತಿಯು ಆನಂದಮಯವಾದುದು.

100. ಸೃಷ್ಟಿಸಂಹಾರಾದಿಗಳು ಮತ್ತೆ ಮತ್ತೆ ಆಗುತ್ತಲೇ ಇರುವುವು. ಪುರುಷನಿಂದ ವಿರಾಟ್-ಅವನಿಂದ ಜೀವ-ಅನಂತರ ಶರೀರ ; ಸೃಷ್ಟಿಯ ವಿಚಾರ ಶ. ಬ್ರಾ. (13-2-6-3) ಮತ್ತು ತೈ. ಸಂ. (3-3-5-2)ರಲ್ಲಿಯೂ ಬಂದಿದೆ. ಹೋಲಿಸಿ.

101. ಜಗತ್ಸೃಷ್ಟಿಯಾದ ಮೇಲೆ ಉತ್ತರಸೃಷ್ಟಿಯ ಸಿದ್ಧಿಗಾಗಿ ಬೇರೆ ಹವಿಸ್ಸು ಇನ್ನೂ ಉತ್ಪನ್ನವಾಗಿಲ್ಲದ ಕಾರಣ ಪುರುಷಸ್ವರೂಪವನ್ನೇ ಹವಿಸ್ಸಾಗಿ ಮನಸಾ ಸಂಕಲ್ಪಿಸಿ ಮಾನಸಿಕ ಯಜ್ಞವನ್ನು ಮಾಡಿದರು. ಸೃಷ್ಟಿಯ ಅಂಶ ತೈ. ಬ್ರಾ. (2-2-1-1)ದಲ್ಲಿಯೂ ಶ. ಬ್ರಾ. (11-1)ದಲ್ಲಿಯೂ ವಿವರಿಸಿರುವುದನ್ನು ನೋಡಿ.

ಪ್ರೋಕ್ಷಣ ಮಾಡಿದರು. ಸಾಧ್ಯರೂ[102] ಋಷಿಗಳೂ ಸೇರಿ ಆ ಮಾನಸಿಕ ಯಾಗವನ್ನು ನಿರ್ವಹಿಸಿದರು.'

'ಸರ್ವಾತ್ಮಕನಾದ ಪುರುಷನನ್ನೇ ಆಹುತಿಯಾಗಿ ಉಳ್ಳ ಆ ಯಜ್ಞದಿಂದ ದಧಿಮಿಶ್ರವಾದ ಆಜ್ಯ ಉಂಟಾಯಿತು. ವಾಯುಮಂಡಲದಲ್ಲಿ ಹಾರಾಡುವ ಹಕ್ಕಿಗಳೂ ಅಡವಿಗಳಲ್ಲಿ ವಾಸಿಸುವ ಮೃಗಗಳೂ ಗ್ರಾಮಗಳಲ್ಲಿರುವ ಪಶುಗಳೂ ಉಂಟಾದರು.'

'ಸರ್ವವನ್ನೂ ಹೋಮಮಾಡಿದ ಆ ಯಜ್ಞದಿಂದಲೇ ಋಕ್ಕುಗಳೂ ಸಾಮಗಳೂ ಛಂದಸ್ಸುಗಳೂ ಯಜಸ್ಸೂ ಉಂಟಾಯಿತು.'

'ಆ ವಿಶ್ವಯಜ್ಞದಿಂದಲೇ ಅಶ್ವಗಳು ಹುಟ್ಟಿದವು. ಎರಡು ಸಾಲು ಹಲ್ಲುಗಳುಳ್ಳ ಪ್ರಾಣಿಗಳೂ ಜನಿಸಿದುವು. ಗೋವುಗಳೂ ಆಡು, ಕುರಿ ಮೊದಲಾದುವೂ ಅದರಿಂದಲೇ ಆದವು.'

'ಆ ವಿರಾಟ್ಪುರುಷನನ್ನು ಆಹುತಿಯಾಗಿ ಸಂಕಲ್ಪಿಸಿದಾಗ ಅದನ್ನೆಷ್ಟು ಪ್ರಕಾರವಾಗಿ ವಿಭಾಗಿಸಿದರು ? ಈ ದೇವನ ಮುಖವಾವುದು ? ಬಾಹುಗಳು ಯಾವುವು ? ತೊಡೆಗಳೂ ಪಾದಗಳೂ ಯಾವುವು ?

'ಬ್ರಾಹ್ಮಣನು ಈ ಪುರುಷನ ಮುಖ ; ರಾಜನ್ಯರು ತೋಳುಗಳು ; ವೈಶ್ಯರು ತೊಡೆಗಳು; ಪಾದದಿಂದ ಜನಿಸಿದವರು ಶೂದ್ರರು.'

'ಆ ವಿರಾಟ್ಪುರುಷನ ಮನಸ್ಸಿನಿಂದ ಚಂದ್ರನೂ ನೇತ್ರಗಳಿಂದ ಸೂರ್ಯನೂ ಮುಖದಿಂದ ಇಂದ್ರಾಗ್ನಿಗಳೂ ಪ್ರಾಣದಿಂದ ವಾಯುವೂ ಉಂಟಾದರು.'

'ಅವನ ನಾಭಿಯಿಂದ ಅಂತರಿಕ್ಷವೂ ಶಿರಸ್ಸಿನಿಂದ ದ್ಯುಲೋಕವೂ ಪಾದಗಳಿಂದ ಭೂಮಿಯೂ ಕಿವಿಗಳಿಂದ ದಿಕ್ಕುಗಳೂ ಆದುವು. ಹೀಗೆಯೇ ಆ ದೇವತೆಗಳು ಎಲ್ಲ ಲೋಕಗಳನ್ನೂ ಆ ಪುರುಷನಿಂದಲೇ ಉತ್ಪತ್ತಿ ಮಾಡಿದರು.'

'ಈ ಸಾಂಕಲ್ಪಿಕ ಯಜ್ಞಕ್ಕೆ ಸಪ್ತ ಛಂದಸ್ಸುಗಳೇ ಪರಿಧಿಗಳಾದವು. ಇಪ್ಪತ್ತೊಂದು ತತ್ವಗಳು (12 ತಿಂಗಳು + 5 ಋತುಗಳು + 3 ಲೋಕಗಳು + ಆದಿತ್ಯ) ಸಮಿತ್ತುಗಳಾದವು. ದೇವತೆಗಳು ಆ ಪುರುಷನನ್ನು ಯಜ್ಞಸಾಧನವನ್ನಾಗಿ ಮಾಡಲಿಚ್ಛಿಸಿ ಅವನನ್ನೇ ಪಶುವೆಂದು ಭಾವಿಸಿದರು.

'ಪ್ರಜಾಪತಿಯ ಪ್ರಾಣಭೂತರಾದ ದೇವತೆಗಳು ಮೇಲೆ ಹೇಳಿದಂತೆ ಮಾನಸವಾದ ಸಂಕಲ್ಪದಿಂದ ಯಜ್ಞರೂಪಿಯಾದ ಆ ಪ್ರಜಾಪತಿದೇವನನ್ನು ಪೂಜಿಸಿದರು. ಜಗದ್ರೂಪವಾಗಿ ವಿಕಾರ ಹೊಂದಿದ ಆ ಪ್ರಸಿದ್ಧ ಧರ್ಮಗಳೇ ಮುಖ್ಯವಾಗಿ ಬೆಳಗಿದವು. ಯಾವ ಬ್ರಹ್ಮಲೋಕದಲ್ಲಿ ಪುರಾತನರಾದ ದೇವತೆಗಳೂ ಸಾಧ್ಯರೂ ಇರುವರೋ ಆ ದಿವ್ಯಲೋಕವನ್ನೇ ವಿರಾಟ್ಪುರುಷನನ್ನು ಉಪಾಸನೆ ಮಾಡುವ ಮಹಾತ್ಮರು ಸೇರುತ್ತಾರೆ.'[103]

ಈ ಸೂಕ್ತದಲ್ಲಿ ಯಾಜ್ಞಿಕವಾದ ಕ್ರಮದಲ್ಲಿ ಈ ಜಗತ್ತು ವಿಶ್ವರೂಪಿಯಾದ ಪುರುಷನಿಂದ ಆಯಿತೆಂದು ಹೇಳಿದೆ. ಈ ಜಗತ್ತಿನ ವೈವಿಧ್ಯಕ್ಕೆ ಆ ಪುರುಷನೇ ಕಾರಣನೆಂದೂ ಅವನ ಬೇರೆ ಬೇರೆ ಅವಯವಗಳಿಂದ ಈ ವಿಶ್ವದ ಬೇರೆ ಬೇರೆ ಭಾಗಗಳು ಆದುವೆಂದೂ ಹೇಳಿದೆ. ಇಲ್ಲಿ ಬರುವ ಯಾಗದ ಉಲ್ಲೇಖ ಕೇವಲ ರೂಪಣವಾಗಿದೆ. ವಿಚಿತ್ರವಾದ ಈ ಜಗತ್ತು ಆ ಏಕೈಕನಾದ

102. ಸಾಧ್ಯರು ದೇವತೆಗಳಲ್ಲಿ ಪ್ರಥಮರೆಂದು ನಿರುಕ್ತ (12-41)ದಲ್ಲಿಯೂ ಪ್ರಾಣಗಳೆಂದು ಭಟ್ಟ ಭಾಸ್ಕರಭಾಷ್ಯದಲ್ಲಿಯೂ (ತೈ. ಆ. ಭಾಷ್ಯ-3-12) ಹೇಳಿದೆ. ಛಾಂ. ಉ. 3-10-1 ರಿಂದ 4 ನೋಡಿ.

103. ನಾಕಂ-'ಕಮಿತಿಸುಖನಾಮ. ತತ್ಪ್ರತಿಷಿದ್ಧಂ ಪ್ರತಿಷಿಧ್ಯೇತ.' ನಿರುಕ್ತ (2-14) ; ಈ ಯಜ್ಞ ಅಗ್ನಿರೂಪವಾದುದೆಂದು ನಿರುಕ್ತಕಾರರ ಅಭಿಪ್ರಾಯ. 'ಅಗ್ನಿನಾಮಯಜಂತದೇವಾಃ (ನಿರುಕ್ತ-12-41).

ಪುರುಷನಿಂದಲೇ ಆಗಿದೆಯೆಂಬುದು ಇದರ ಸಾರಾಂಶ.

ಜಗತ್ಕಾರಣವಾದ ಪರವಸ್ತುವನ್ನು ಹಿರಣ್ಯಗರ್ಭನೆಂದು ಹೇಳಿ ಅವನಿಂದ ಚೇತನಾಚೇತನ ಲಕ್ಷಣವಾದ ಸಕಲ ಜಗತ್ತೂ ಆಯಿತೆಂದು ಕೆಳಗಿನ ಮಂತ್ರಗಳು ಹೇಳುತ್ತವೆ.

'ಹಿರಣ್ಯಗರ್ಭಃ ಸಮವರ್ತತಾಗ್ರೇ
ಭೂತಸ್ಯ ಜಾತಃ ಪತಿರೇಕ ಆಸೀತ್ |
ಸ ದಾಧಾರ ಪೃಥಿವೀಂ ದ್ಯಾಮುತೇಮಾಂ
ಕಸ್ಮೈ ದೇವಾಯ ಹವಿಷಾ ವಿಧೇಮ ||'

'ಯ ಆತ್ಮದಾ ಬಲದಾ ಯಸ್ಯ ವಿಶ್ವ
ಉಪಾಸತೇ ಪ್ರಶಿಷಂ ಯಸ್ಯದೇವಾಃ |
ಯಸ್ಯ ಛಾಯಾಽಮೃತಂ ಯಸ್ಯ ಮೃತ್ಯುಃ
ಕಸ್ಮೈದೇವಾಯ ಹವಿಷಾ ವಿಧೇಮ ||'

'ಯಃ ಪ್ರಾಣತೋ ನಿಮಿಷತೋ ಮಹಿ-
ತ್ವೈಕ ಇದ್ರಾಜಾ ಜಗತೋ ಬಭೂವ |
ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ
ಕಸ್ಮೈದೇವಾಯ ಹವಿಷಾ ವಿಧೇಮ ||'

'ಯಸ್ಯೇಮೇ ಹಿಮವಂತೋ ಮಹಿತ್ವಾ
ಯಸ್ಯ ಸಮುದ್ರಂ ರಸಯಾ ಸಹಾಹುಃ |
ಯಸ್ಯೇಮಾಃ ಪ್ರದಿಶೋ ಯಸ್ಯ ಬಾಹೂ
ಕಸ್ಮೈದೇವಾಯ ಹವಿಷಾ ವಿಧೇಮ ||'[104]

'ಪ್ರಪಂಚ ಹುಟ್ಟುವ ಮೊದಲು ಹಿರಣ್ಯಗರ್ಭನೊಬ್ಬನೇ ಇದ್ದನು. ಅದ್ವಿತೀಯನಾದ ಅವನು ಜನಿಸುವಾಗಲೇ ಎಲ್ಲ ಭೂತಜಾತಗಳಿಗೂ ಒಡೆಯನಾದನು. ವಿಸ್ತಾರವಾದ ದ್ಯುಲೋಕಕ್ಕೂ ಭೂಮಿಗೂ ಅವನೇ ಧಾರಕ. ಸುಖೈಕ ಸ್ವರೂಪನಾದ ಆ ದೇವನಿಗೆ ಹವಿಸ್ಸಮರ್ಪಣೆ ಮಾಡುತ್ತೇವೆ.'[105]

'ಆ ದೇವನು ಆತ್ಮಪ್ರದನು ; ಬಲಪ್ರದನು. ಎಲ್ಲ ದೇವತೆಗಳೂ ಪ್ರಾಣಿಗಳೂ ಅವನ ಶಾಸನವನ್ನನುಸರಿಸುತ್ತಾರೆ. ಅಮೃತತ್ವವೂ ಮೃತ್ಯುವೂ ಅವನನ್ನು ನೆರಳಿನಂತೆ ಸೇವಿಸುವುವು. ಅಂಥ ದೇವನಿಗೆ ಪೂಜೆ ಸಲ್ಲಿಸೋಣ.'

'ನಮ್ಮ ಕಣ್ಣಿಗೆ ಗೋಚರಿಸುತ್ತಿರುವ ಈ ವಿಚಿತ್ರವಾದ ಜಗತ್ತು ಆ ಜಗತ್ಕರ್ತೃವಿನ ಮಹಿಮೆಯನ್ನು ಸಾರುತ್ತಿದೆ, ಲೋಕದಲ್ಲಿ ಉಸಿರಾಡುವವರಿಗೂ, ಕಣ್ಣೆವೆಯಾಡಿಸುವವರಿಗೂ ಸಂಚರಿಸುವವರಿಗೂ ದೇವನು ಈಶ್ವರನಾಗಿದ್ದಾನೆ.'

'ನಮಗೆ ಗೋಚರಿಸುವ ಮಾನವರಿಗೂ ಪ್ರಾಣಿಗಳಿಗೂ ಅವನೇ ಒಡೆಯನು. ಹಿಮ ಕವಿದಿರುವ ಬೆಟ್ಟಗಳೂ ನದಿಗಳಿಂದ ಕೂಡಿದ ಸಾಗರಗಳೂ ಅವನಿಂದಾದ ಕಾರಣ ಅವನ ಮಹಾ ಭಾಗ್ಯವನ್ನು ಕೊಂಡಾಡುತ್ತಿವೆ. ದಿಕ್ಕುಗಳೂ ಅವಾಂತರ ದಿಕ್ಕುಗಳೂ ಆ ಮಹಾಮಹಿಮನದೇ ಆಗಿವೆ.'

104. ಋಗ್ವೇದ (10-221-1, 2, 3, 4).

105. ಹಿರಣ್ಯಗರ್ಭನು ಪ್ರಜಾಪತಿ ದೇವನೆಂದು ತೈ. ಸಂ. 5-5-1-2 ರಲ್ಲಿ ಹೇಳಿದೆ. 'ಕ' ಶಬ್ದ ಬ್ರಹ್ಮಪರವೆಂದು ಉಪನಿಷತ್ತು ಹೇಳುವುದು. 'ಕ' ಎಂದರೆ ಪ್ರಜಾಪತಿ ದೇವನೆಂದು ಐ. ಬ್ರಾ. (3-21)ರಲ್ಲಿ ಹೇಳಿದೆ.

'ಚಕ್ಷುಷಃ ಪಿತಾ ಮನಸಾ ಹಿ ಧೀರೋ
ಘೃತಮೇನೇ ಅಜನನ್ನಮ್ನಮಾನೇ |
ಯದೇದಂತಾ ಅದದೃಹಂತ ಪೂರ್ವ
ಇದಿ ದ್ಯಾವಾಪೃಥಿವೀ ಅಪ್ರಥೇತಾಂ ||'

'ವಿಶ್ವಕರ್ಮಾ ವಿಮನಾ ಆ ದ್ವಿಹಾಯಾ
ಧಾತಾ ವಿಧಾತಾ ಪರಮೋತ ಸಂದೃಕ್ |
ತೇಷಾಮಿಷ್ಟಾನಿ ಸಮಿಷಾ ಮದಂತಿ
ಯತ್ರಾ ಸಪ್ತಋಷೀನ್ ಪರ ಏಕಮಾಹುಃ ||'

'ಯೋನಃ ಪಿತಾ ಜನಿತಾ ಯೋ ವಿಧಾತಾ
ಧಾಮಾನಿ ವೇದ ಭುವನಾನಿ ವಿಶ್ವಾ |
ಯೋ ದೇವಾನಾಂ ನಾಮಧಾ ಏಕ ಏವ
ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ||'

'ಪರೋ ದಿವಾ ಪರ ಏನಾ ಪೃಥಿವ್ಯಾ
ಪರೋ ದೇವೇಭಿರಸುರೈರ್ಯದಸ್ತಿ |
ಕಂಸ್ವಿದ್ಗರ್ಭಂ ಪ್ರಥಮಂ ದದ್ರ ಆಪೋ
ಯತ್ರ ದೇವಾಃ ಸಮಪಶ್ಯಂತ ವಿಶ್ವೇ ||'

'ತಮಿದ್ಗರ್ಭಂ ಪ್ರಥಮಂ ದದ್ರ ಆಪೋ
ಯತ್ರ ದೇವಾಃ ಸಮಗಚ್ಛಂತ ವಿಶ್ವೇ |
ಅಜಸ್ಯ ನಾಭಾವಧ್ಯೇಕಮರ್ಪಿತಂ
ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಃ ||'[106]

'ಧೀರನಾದ ಆ ವಿಶ್ವಕರ್ಮದೇವನು ಕಣ್ಣುಗಳನ್ನು ಪ್ರಧಾನವಾಗಿ ಹೊಂದಿರುವ ದೇಹಗಳನ್ನೇ ಸೃಜಿಸುವನು. ತನ್ನ ಮಹಿಮೆಯಿಂದ ಎಲ್ಲವನ್ನೂ ತಿಳಿಯುವನವನು. ಮೊದಲು ಜಲವನ್ನು ಸೃಜಿಸಿ ಅನಂತರ ಅದರಲ್ಲಿ ತೇಲಾಡುವ ದ್ಯಾವಾಪೃಥಿವಿಗಳನ್ನು ಉತ್ಪನ್ನಗೊಳಿಸಿದನು. ಅವುಗಳ ದಿಗಂತಗಳು ದೃಢವಾಗಿ ಅವೂ ವಿಸ್ತೃತವಾಗಿ ನಿಂತವು.'[107]

'ವಿಶ್ವಕರ್ಮದೇವನು[108] ವಿಶೇಷವಾದ ಪ್ರಜ್ಞಾಯುತನು ; ಮಹಾತ್ಮನು. ಸಕಲ ಜಗದಾಧಾರನೂ ಸಕಲ ನಿರ್ಮಾಪಕನೂ ಆದ ಶ್ರೇಷ್ಠನು. ಎಲ್ಲವನ್ನೂ ಸ್ವತಃ ಒಮ್ಮೆಯೇ ಸಾಕ್ಷಾತ್ಕಾರ ಮಾಡಿಕೊಂಡನು. ಇವನು ಸಪ್ತಸಂಖ್ಯಾತವಾದ ಇಂದ್ರಿಯಗಳಿಗಿಂತಲೂ ಬೇರೆಯಾಗಿ ಅತೀತನಾಗಿರುವನೆಂದು ತತ್ವಜ್ಞಾನಿಗಳು ಹೇಳುವರು.'

'ಇವನು ನಮ್ಮ ತಂದೆ, ಜನಕ, ಜಗನ್ನಿರ್ಮಾಪಕ. ಸಕಲ ಭೂತಜಾತಗಳನ್ನೂ ತಿಳಿದವನಿವನು. ಇಂದ್ರನೇ ಮೊದಲಾದ ದೇವತೆಗಳನ್ನು ಸೃಜಿಸಿ ನಾಮನಿರ್ದೇಶ ಮಾಡಿದವನೂ ಇವನೇ. ಏಕೈಕನಾದ ಈ ದೇವನನ್ನೇ ಇತರ ಭೂತಜಾತಗಳು "ಪರಮೇಶ್ವರನಾರು" ಎಂಬ ಪ್ರಶ್ನೆಯೊಡನೆ ಸೇರುವುವು.'

---

106. ಋಗ್ವೇದ (10-82-1, 2, 3, 5, 6.)

107. 'ಮನಸಾ' ಎಂಬ ಶಬ್ದ ಸೃಷ್ಟಿಯು ಭಗವತ್ಸಂಕಲ್ಪದಿಂದ ಆಯಿತೆಂಬುದನ್ನು ಸೂಚಿಸುತ್ತದೆ. ಈ ಅಂಶವನ್ನೇ ತೈ. ಸಂ. (7-1-5-1, 2), ತೈ. ಆ. (1-2-3-1), ಮನುಸ್ಮೃತಿ (1-8, 9)ಯಲ್ಲಿಯೂ ನೋಡಬಹುದು.

108. ವಿಶ್ವಕರ್ಮ ಶಬ್ದನಿರ್ವಚನಕ್ಕೆ ನಿರುಕ್ತ (10-26) ನೋಡಿ.

'ದ್ಯುಲೋಕ, ಪೃಥಿವೀಲೋಕಗಳನ್ನು ಮೀರಿಸಿರುವವನು ಅವನು. ಅಸುರರು ದೇವತೆಗಳು ಮೊದಲಾದವರಿಗೆಲ್ಲ ಇವನು ಅಧಿಕನು. ಗುಹೆಯಲ್ಲಿ ಅಡಗಿರುವುದೂ ಜಲ ಮೊಟ್ಟಮೊದಲು ಧರಿಸಿದುದೂ ಆದ ಆ ರಹಸ್ಯತತ್ತ್ವದ ಸ್ವರೂಪವೇನು ?'

'ಸರ್ವ ದೇವತೆಗಳೂ ಎಲ್ಲಿ ಸಂಗತರಾಗಿದ್ದರೋ ಅಂಥ ವಿಶ್ವಕರ್ಮನ ಗರ್ಭಸ್ಥಾನವನ್ನು ಸೃಷ್ಟಿಗೆ ಪೂರ್ವದಲ್ಲಿ ಜಲಗಳು ಧರಿಸಿದವು. ಜನ್ಮರಹಿತನಾದ ಆ ಪರಮಾತ್ಮನ ನಾಭಿಯಲ್ಲಿ ಸಕಲ ಲೋಕಗಳನ್ನೂ ಒಳಗೊಂಡಿರುವ ಅದ್ವಿತೀಯವಾದ ಬ್ರಹ್ಮಾಂಡವು ಸ್ಥಾಪಿತವಾಗಿದೆ.'

ಪರಮಾತ್ಮನ ಸೃಷ್ಟಿಯಲ್ಲಿ ಮೊಟ್ಟಮೊದಲಾದುದು ಜಲವೆಂದೂ ಅದರಲ್ಲಿ ಪರಮಾತ್ಮನ ಸಂಕಲ್ಪಕ್ಕನುಗುಣವಾಗಿ ಉತ್ತರಸೃಷ್ಟಿಯಾಯಿತೆಂದೂ ಬ್ರಹ್ಮಾಂಡದ ಸೃಷ್ಟಿಯು ಪರಮಾತ್ಮನ ನಾಭಿಯಲ್ಲಿ ಆಯಿತೆಂದೂ ಈ ಮಂತ್ರಗಳಿಂದ ತಿಳಿಯುತ್ತೇವೆ. ಸೃಷ್ಟಿವಿಚಾರವನ್ನು ಪ್ರತಿಪಾದಿಸುವುದರಲ್ಲಿ ಶಿಖರಪ್ರಾಯವಾಗಿರುವುದು ನಾಸದೀಯ ಸೂಕ್ತ.[109] ಇದರ ಉಲ್ಲೇಖ ಇಲ್ಲಿ ಅತ್ಯವಶ್ಯ.

'ನಾಸದಾಸೀನ್ನೋ ಸದಾಸೀತ್ತದಾನೀಂ
ನಾಸೀದ್ರಜೋ ನೋವ್ಯೋಮಾ ಪರೋಯತ್ |
ಕಿಮಾವರೀವಃ ಕುಹ ಕಸ್ಯ ಶರ್ಮ-
ನ್ನಂಭಃ ಕಿಮಾಸೀದ್ಗಹನಂ ಗಭೀರಂ ||'

'ನ ಮೃತ್ಯುರಾಸೀದಮೃತಂ ನ ತರ್ಹಿ
ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ |
ಆನೀದವಾತಂ ಸ್ವಧಯಾ ತದೇಕಂ
ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ||'

'ತಮ ಆಸೀತ್ತಮಸಾ ಗೂಳ್ಹಮಗ್ರೇ-
ಽಪ್ರಕೇತಂ ಸಲಿಲಂ ಸರ್ವಮಾ ಇದಂ |
ತುಚ್ಛ್ಯೇನಾಭ್ವಪಿಹಿತಂ ಯದಾಸೀ-
ತ್ತಪಸಸ್ತನ್ಮಹಿನಾ ಜಾಯತೈಕಂ ||'

'ಕಾಮಸ್ತದಗ್ರೇ ಸಮವರ್ತತಾಧಿ
ಮನಸೋ ರೇತಃ ಪ್ರಥಮಂ ಯದಾಸೀತ್ |
ಸತೋ ಬಂಧುಮಸತಿ ನಿರವಿಂದನ್
ಹೃದಿ ಪ್ರತೀಷ್ಯಾ ಕವಯೋ ಮನೀಷಾ ||'

'ತಿರಶ್ಚೀನೋ ವಿತತೋ ರಶ್ಮಿರೇಷಾ-
ಮಧಃ ಸ್ವಿದಾಸೀದುಪರಿ ಸ್ವಿದಾಸೀತ್ |
ರೇತೋಧಾ ಆಸನ್ಮಹಿಮಾನ ಆಸ-
ನ್ತ್ಸ್ವಧಾ ಅವಸ್ತಾತ್ಪ್ರಯತಿಃ ಪರಸ್ತಾತ್ ||'

'ಕೋ ಅದ್ಧಾವೇದ ಕ ಇಹ ಪ್ರವೋಚ-
ತ್ಕುತ ಆ ಜಾತಾ ಕುತ ಇಯಂ ವಿಸೃಷ್ಟಿಃ |
ಅರ್ವಾಗ್ದೇವಾ ಅಸ್ಯ ವಿಸರ್ಜನೇನಾ-
ಥಾ ಕೋ ವೇದ ಯುತ ಆಬಭೂವ ||'

---

109. ಋಗ್ವೇದ (10-192) ; "The song of creation has been extolled as containing the flower of Indian thought." *Outlines of Indian Philosophy*, Prof. M. Hiriyanna, p. 42.

'ಇಯಂ ವಿಸೃಷ್ಟಿರ್ಯತ ಆಬಭೂವ
ಯದಿ ವಾ ದಧೇ ಯದಿವಾ ನ |
ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮ-
ನ್ಸ್ಯೋ ಅಂಗ ವೇದ ಯದಿ ವಾ ನ ವೇದ ||'

'ಆಗ (ಸೃಷ್ಟಿಗೆ ಮುಂಚೆ) ಅದು (ಜಗತ್ಕಾರಣ) ಅಸದಾತ್ಮಕವಾಗಿರಲಿಲ್ಲ ; ಸದಾತ್ಮಕವಾಗಿಯೂ ಇರಲಿಲ್ಲ ; ಭೂಮಿ ಇರಲಿಲ್ಲ ; ಅಂತರಿಕ್ಷವೂ ಇರಲಿಲ್ಲ ; ಅದಕ್ಕೂ ಮೇಲಿನ ದ್ಯುಲೋಕಗಳೂ ಇರಲಿಲ್ಲ. ಆಗ ಆವರಣವು ತಾನೆ ಯಾವುದಿದ್ದಿತು ? ಆಧಾರವಾದ ಪ್ರದೇಶ ಯಾವುದಿದ್ದಿತು ? ದುಷ್ಪ್ರವೇಶವೂ ಅಗಾಧವೂ ಆದ ಜಲವಾದರೂ ಇದ್ದಿತೋ ?

'ಆಗ ಮೃತ್ಯುವೂ ಇರಲಿಲ್ಲ ಅಮೃತವೂ ಇರಲಿಲ್ಲ. ರಾತ್ರಿ ಹಗಲುಗಳೆಂಬ ಪ್ರಜ್ಞಾನವೂ ಇರಲಿಲ್ಲ. ಏಕಮೇವಾದ್ವಿತೀಯವಾದ ಅದು ಒಂದೇ ಪ್ರಾಣಾಪಾನ ರೂಪವನ್ನು ಹೊಂದದೆ ಸ್ವಶಕ್ತಿಯುಕ್ತವಾಗಿಯೇ ಇದ್ದಿತು. ಅದನ್ನುಳಿದು ಮತ್ತೊಂದೂ ಇರಲಿಲ್ಲ.'

'ಸೃಷ್ಟಿಗೆ ಮೊದಲು ಅಪ್ರಜ್ಞಾತವಾದ ತಮಸ್ಸಿನಿಂದ ಎಲ್ಲವೂ ಆವೃತವಾಗಿದ್ದಿತು. ಸರ್ವವೂ ಜಲಮಯವಾಗಿದ್ದಿತು. ಸೂಕ್ಷ್ಮವಾದ ಅಜ್ಞಾನದ ಹೊದಿಕೆ ಎಲ್ಲವನ್ನೂ ಕವಿದಿತ್ತು. ಏಕೈಕವಾಗಿದ್ದ ಆ ಬ್ರಹ್ಮತತ್ವ ಸೃಜಿಸಬೇಕೆಂಬ ಸಂಕಲ್ಪದ ಕಾರಣ ಅನೇಕವಾಯಿತು.'

'ಪ್ರಪಂಚಕ್ಕೆ ಬೀಜರೂಪವಾದ ವಾಸನಾಶೇಷ ಫಲೋನ್ಮುಖವಾದಾಗ ಅವನ ಮನಸ್ಸಿನಲ್ಲಿ ಸೃಜಿಸಬೇಕೆಂಬ ಆಸೆ ಹುಟ್ಟಿತು. ಕ್ರಾಂತದರ್ಶನರಾದ ಯೋಗಿಗಳು ತಮ್ಮ ಬುದ್ಧಿಯ ಬಲದಿಂದ ಚೆನ್ನಾಗಿ ಚಿಂತಿಸಿ ಅವ್ಯಾಕೃತವಾದ ಈ ಕಾರಣವಸ್ತುವಿನಲ್ಲಿ ಅನುಭವಗೋಚರವಾದ ಸರ್ವಜಗತ್ತಿನ ಆವಿರ್ಭಾವಕ್ಕೆ ಕಾರಣವನ್ನು ವಿಮರ್ಶಿಸಿ ತಿಳಿಸಿದರು.'

'ಸೃಷ್ಟಿ ಸಂಕಲ್ಪದ ಕಾರ್ಯ ಎಲ್ಲೆಲ್ಲಿಯೂ ಆವರಿಸಿತು. (ಉದಿಸಿದ ಸೂರ್ಯನ ಕಿರಣ ಒಮ್ಮೆಯೇ ಕಣ್ಮುಚ್ಚಿ ತೆಗೆಯುವುದರೊಳಗೆ ಜಗತ್ತನ್ನೆಲ್ಲಾ ವ್ಯಾಪಿಸುವಂತೆ) ಹೀಗೆ ಕಾರ್ಯಪರವಾದ ಆ ರಶ್ಮಿ (ತಿರ್ಯಗವಸ್ಥಿತವಾಗಿ) ಮಧ್ಯಭಾಗದಲ್ಲಿ ನಿಂತಿತೋ ? ಅಥವಾ ಕೆಳಭಾಗವನ್ನು ಸೇರಿ ನಿಂತಿತೋ ? ಅಥವಾ ಮೇಲ್ಗಡೆ ಹೋಗಿ ನಿಂತಿತೋ ? (ಹೀಗೆ ಹೇಳಲಾಗದಂತೆ ಅದು ಎಲ್ಲೆಡೆಯನ್ನೂ ಮುಟ್ಟಿತು.) ಸೃಷ್ಟಿಗೆ ಕಾರಣವಾದ ಕರ್ಮವನ್ನು ಮಾಡಿದವರು ಜೀವರುಗಳಾದರು. ಆಗ ಮಹಿಮಾನ್ವಿತವಾದ ಆಕಾಶಾದಿಗಳೂ ಆದುವು. ಇವುಗಳಲ್ಲಿ ಭೋಗ್ಯಪದಾರ್ಥವಾದ ಅನ್ನ 'ಸ್ವಧಾ' ಎಂದು ಹೆಸರಾಗಿ ಎಲ್ಲಕ್ಕೂ ಕನಿಷ್ಠವಾಯಿತು. ಹಾಗೆಯೇ ಭೋಕ್ತೃವಾದ ಜೀವನು ಉತ್ಕೃಷ್ಟನಾದನು.[110]

'(ಭೂತ ಭೌತಿಕ ಭೋಕ್ತೃ ಭೋಗ್ಯವರ್ಗದಿಂದ ಕೂಡಿ ಬಹು ಪ್ರಕಾರವಾಗಿರುವ) ಈ ವಿಚಿತ್ರವಾದ ಸೃಷ್ಟಿಯು ಯಾರಿಂದ ಮತ್ತು ಯಾವುದರಿಂದ ಆಯಿತೆಂಬುವುದನ್ನು ಯಾವನು ತಾನೇ ಯಥಾವತ್ತಾಗಿ ತಿಳಿಯಬಲ್ಲನು ? ಯಾರು ತಾನೇ ಇಲ್ಲಿ ಹೇಳಬಲ್ಲರು ? ಈ ಜಗತ್ತಿನ ಸೃಷ್ಟಿಯ ಅನಂತರವೇ ದೇವತೆಗಳೂ ಜನಿಸಿದರು ! ಅದರಿಂದ ಅವರೂ ಅದನ್ನರಿಯರು. ಎಲ್ಲಿಂದ ಜಗತ್ತಾಯಿತೆಂಬುದನ್ನು ಯಾರು ತಾನೇ ಹೇಳಬಲ್ಲರು ?'[111]

'ಯಾರಿಂದ ಈ ಜಗತ್ತು ಹುಟ್ಟಿತೋ ಅವನೇ ಇದನ್ನು ಧರಿಸಿದ್ದಾನೋ ಇಲ್ಲವೋ ? (ಬೇರಾರು ಇದನ್ನು ಧರಿಸಿ ನಿಯಮಿಸಿಯಾರು ?)[112] ಈ ಲೋಕದ ಅಧ್ಯಕ್ಷನು ಸ್ವಯಂ

110. ತೈ.ಆ. 8-6.

111. ಸೃಷ್ಟಿಯ ವಿಚಾರ ದುರ್ವಿಜ್ಞಾನರೂಪವಾದುದೆಂದು ಇಲ್ಲಿ ಹೇಳಿದೆ.

112. ಇದರಿಂದ ಈಶ್ವರನೇ ಜಗತ್ತಿಗೆ ಉಪಾದಾನಕಾರಣವೆಂದು ಹೇಳಿದಂತಾಯಿತು ಎಂದು ಸಾಯಣರ ಅಭಿಪ್ರಾಯ.

ಪ್ರಕಾಶವಾದ ಪರಮವ್ಯೋಮದಲ್ಲಿ ಇದ್ದಾನೆ. ಅವನಿಗ ಈ ಸೃಷ್ಟಿಯ ವಿಚಾರ ತಿಳಿದಿದ್ದಾನಷ್ಟೇ? ಅಥವಾ ಇಲ್ಲವೋ ?'[113]

ಈ ಸೂಕ್ತಗಳನ್ನು ಪರಿಶೀಲಿಸಿದರೆ ಸೃಷ್ಟಿಯ ವಿಚಾರದಲ್ಲಿ ಎರಡು ಬಗೆಯಾದ ಅಭಿಪ್ರಾಯಗಳಿರುವುದು ಗೊತ್ತಾಗುವುದು. ಒಂದು ಸೃಷ್ಟಿವಾದ ಮತ್ತೊಂದು ವಿಕಾಸವಾದ. ಇವೆರಡೂ ಒಂದರೊಡನೊಂದು ಕೂಡಿಕೊಂಡಿವೆ. ಸೃಷ್ಟಿಯ ವಿಚಾರ ಹೇಳುವಾಗ ಸೃಷ್ಟಿ ಮತ್ತು ಪ್ರಳಯಗಳ ಪರಂಪರೆಯ ವಿಚಾರವೂ ಬಂದಿದೆ. ಪ್ರಖ್ಯಾತವಾದ ವಿಶ್ವಕರ್ಮ ಸೂಕ್ತ ದಲ್ಲಿ[114] ಜಗತ್ತನ್ನೆಲ್ಲಾ ತನ್ನಲ್ಲಿಯೇ ಉಪಸಂಹರಿಸಿ ವಿಶ್ವಕರ್ಮನು ಕುಳಿತನೆಂದು ಹೇಳಿದೆ. ಅನಂತರ ತನ್ನ ಸಂಕಲ್ಪದಿಂದ ಜಗತ್ತನ್ನು ಸೃಜಿಸಿ ಅವುಗಳಲ್ಲೆಲ್ಲಾ ಅನುಪ್ರವೇಶಿಸಿದನೆಂದು ಹೇಳಿರುವ ಕಾರಣ ಪ್ರಳಯಾನಂತರದ ಸೃಷ್ಟಿಯ ವಿಚಾರ ಹೇಳಿದಂತಾಯಿತು. ಅರ್ಥಾತ್ ಸೃಷ್ಟಿ ಹಾಗೂ ಪ್ರಳಯಗಳು ಒಂದಾದ ಮೇಲೊಂದರಂತೆ ಆಗುವವೆಂದು ಸೂಚಿಸಿದಂತಾಯಿತು. 'ಸೂರ್ಯಾಚಂದ್ರಮಸೌಧಾತಾ ಯಥಾಪೂರ್ವಮಕಲ್ಪಯತ್'[115] ಎಂಬ ಮಂತ್ರ ಮೊದಲಿನ ಸೃಷ್ಟಿಯಂತೆ ಉತ್ತರ ಸೃಷ್ಟಿಯಲ್ಲಿಯೂ ಸಕಲಪದಾರ್ಥಗಳನ್ನೂ ಸೃಜಿಸಿ ನಿಲ್ಲಿಸಿದನೆಂಬ ಅರ್ಥವನ್ನೇ ಕೊಡುತ್ತದೆ.

ಸೃಷ್ಟಿಯ ವಿಚಾರ ವಿಧವಿಧವಾಗಿ ಇಲ್ಲಿ ಹೇಳಿದೆ. ದೇವತೆಗಳು ಪ್ರಪಂಚವನ್ನು ನಿರ್ಮಿಸಿದರೆಂದು ಕೆಲವು ಮಂತ್ರಗಳಲ್ಲಿ ಹೇಳಿದರೆ ಮತ್ತೆ ಕೆಲವಲ್ಲಿ ದ್ಯಾವಾ ಪೃಥಿವೀಗಳು ಜನಕರೆಂದು ಹೇಳಿದೆ. ಆದರೆ ಪ್ರಥಮತಃ ಜಲದ ಸೃಷ್ಟಿಯಾಗಿ ಅನಂತರ ಉಳಿದುದೆಲ್ಲ ಹುಟ್ಟಿತೆಂದು ಹೇಳುವುದು ಹೊಂದಿಕೆಯಾಗಿ ಬಂದಿದೆ. ಜಗತ್ಸೃಷ್ಟಿಗೆ ಕಾರಣನಾದವನು ಸರ್ವಶಕ್ತನೂ ಆದ ದೇವನೆಂಬುದು ಈ ಸೂಕ್ತಗಳ ಸಿದ್ಧಾಂತ. ಅವನನ್ನೇ ವಿಶ್ವಕರ್ಮ, ಪ್ರಜಾಪತಿ, ಪುರುಷ, ಹಿರಣ್ಯಗರ್ಭ ಎಂದು ಕರೆದಿದೆ.

ಋಗ್ವೇದ ಸಂಹಿತೆಯಲ್ಲಿ ವೇದಾಂತ ದರ್ಶನದ ಮೂಲಭೂತವಾದ ಅಂಶಗಳು ಅನೇಕವಿದ್ದರೂ ಕ್ರಮಬದ್ಧವಾದ ದರ್ಶನ ಪದ್ಧತಿ ದೊರೆಯದು. ವೇದಾಂತ ದರ್ಶನದ ಅತಿ ಮುಖ್ಯ ವಿಚಾರವಾದ ಜೀವಬ್ರಹ್ಮರ ಭೇದಾಭೇದಗಳ ವಿಚಾರ ಇಲ್ಲಿಲ್ಲ. ಪ್ರಪಂಚವು ತೋರಿಕೆಯೇ ಅಥವಾ ಸತ್ಯವೇ ಎಂಬ ಪ್ರಶ್ನೆಗೆ ಉತ್ತರ ಇಲ್ಲಿ ಬಾರದು. ಆತ್ಮ ಶಬ್ದ ಇಲ್ಲಿ ಪ್ರಯೋಗಿಸದೆ ಇದ್ದರೂ ದೇಹಕ್ಕಿಂತ ಬೇರೆಯಾದ ಚೇತನ ವಸ್ತುವೊಂದುಂಟೆಂಬುದನ್ನು ಅವರು ತಿಳಿದಿದ್ದರೆಂಬುದಕ್ಕೆ ಬೇಕಾದಷ್ಟು ನಿದರ್ಶನಗಳನ್ನು ಕೊಡಬಹುದು. ಅಮೃತ ಲೋಕವನ್ನು ಸೇರಬೇಕೆಂಬ ಆದರ್ಶವೇ ಆತ್ಮನ ನಿತ್ಯತ್ವವನ್ನು ಸೂಚಿಸುತ್ತದೆ. ದೇಹದ ನಾಶ ಆತ್ಮವಸ್ತುವನ್ನಳಿಸಲಾರದೆಂದು ಅವರು ನಂಬಿದ್ದ ಕಾರಣವೇ ಜೀವನ ಪರಲೋಕಯಾತ್ರೆಯ ವಿಚಾರ ಹೇಳಿದ್ದಾರೆ. ಮರಣವಾದಾಗ ಪಾಂಚಭೌತಿಕವಾದ ಈ ಶರೀರ ಒಡೆದು ಆಯಾಭೂತಗಳನ್ನು ಸೇರಲೆಂದೂ ಅಗ್ನಿದೇವನ ಮಾರ್ಗದರ್ಶನದಲ್ಲಿ ಜೀವನು ಅಕ್ಷತಶರೀರನಾಗಿ ದೇವತೆಗಳನ್ನು ಸೇರಲೆಂದೂ ಕೇಳಿಕೊಳ್ಳುತ್ತಾರೆ.[116] ಪಿತೃಲೋಕದಲ್ಲಿ ಶಾಖೋಪಶಾಖೆಗಳಿಂದ ಕೂಡಿದ ವಿಶಾಲವಾದ ಅಶ್ವತ್ಥವೃಕ್ಷದ ಅಡಿಯಲ್ಲಿ ಯಮದೇವನು

113. 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂದಂತೆ ಆ ಪರಮನಿಗೇ ಇದು ಗೊತ್ತಿರಬೇಕೆಂದು ಹೇಳಿದೆ.
114. ಋಗ್ವೇದ (10-81-1)
115. ಋಗ್ವೇದ (10-190-3)
116. ಋಗ್ವೇದ (10-16)

ಇತರ ದೇವತೆಗಳೊಡನೆ ಸೋಮಪಾನ ಮಾಡುತ್ತಿರುವನೆಂದೂ ಅಲ್ಲಿಗೆ ಜೀವನು ಹೋಗಿ ಸ್ವಚ್ಛಂದವಾಗಿ ಸುಖವನ್ನನುಭವಿಸುವನೆಂದೂ ಹೇಳಿದೆ.[117] ಧಾರ್ಮಿಕವಾದ ಜೀವನವನ್ನು ನಡೆಸಿದವರೂ ಸಂಗ್ರಾಮದಲ್ಲಿ ವೀರಮರಣ ಹೊಂದುವವರೂ ಈ ಲೋಕವನ್ನು ಸೇರುವರು. ಕೆಟ್ಟ ಮಾರ್ಗದಲ್ಲಿ ನಡೆದವರಿಗೇನಾಗುವುದೆಂಬುದು ಸ್ಪಷ್ಟವಾಗಿಲ್ಲ. ಅಂಥವರು ಅಂಧತಮಸ್ಸನ್ನು ಪ್ರವೇಶಿಸುವರೆಂದು ಹೇಳಿದೆ. ಪುಣ್ಯವಂತರೂ ಪಾಪಿಷ್ಠರೂ ಬೇರೆ ಬೇರೆ ಮಾರ್ಗಗಳಲ್ಲಿ ಹೋಗುವರೆಂಬುದನ್ನು 'ದೇವ ಮಾರ್ಗ', 'ಪಿತೃ ಮಾರ್ಗ' ಎಂದು ಸೂಚಿಸಿ ತಿಳಿಸುತ್ತದೆ. ಉಪನಿಷತ್ತುಗಳ ದೇವಯಾನ ಪಿತೃಯಾನಗಳ ಮೂಲವಿದು.[118]

ಇದರಿಂದ ದೇಹಾತಿರಿಕ್ತನಾದ ಆತ್ಮನುಂಟೆಂಬುದು ನಿರ್ಣಯವಾಗುತ್ತದೆ. ಋಗ್ವೇದ ನಾನಾ ನಾಮಗಳಿಂದ ದೇವನನ್ನು ಸ್ತುತಿಸುತ್ತದೆ. ಆ ಜಗತ್ಕಾರಣ ವಸ್ತುವನ್ನು ಇಲ್ಲಿ ಬ್ರಹ್ಮವೆಂದು ಕರೆದಿಲ್ಲ. ಬ್ರಹ್ಮಶಬ್ದ ಅನೇಕ ಸಲ ಇಲ್ಲಿ ಬಂದಿದ್ದರೂ 'ಮಂತ್ರ' ಎಂಬ ಅರ್ಥದಲ್ಲಿ ಬಳಸಿದೆ. ಜಗತ್ಕಾರಣವಾದ ಆ ಪರವಸ್ತು ಎಲ್ಲರಿಗೂ ಪರಮಪ್ರಾಪ್ಯವೆಂದೂ ಅದಕ್ಕಾಗಿ ಅನವರತ ಶ್ರಮಿಸಬೇಕೆಂದೂ ಇದು ತಿಳಿಸುತ್ತದೆ. ಭಗವಂತನಿಂದ ಜನರು ದೂರವಾಗಿರುವುದಕ್ಕೆ ಅವರವರ ಪಾಪ ಕಾರಣವೆಂದು ಋಗ್ವೇದದ ಸಿದ್ಧಾಂತ. ಅದಕ್ಕಾಗಿ ಪಾಪವನ್ನು ಕಳೆದು ಸಲಹಬೇಕೆಂದು ಬೇಡಿದ್ದಾರೆ. ಭಗವತ್ಸಾಕ್ಷಾತ್ಕಾರಕ್ಕೆ ಅಡ್ಡಿಯಾದುದು ಈ ಪಾಪವೆಂದೂ ಇದು ತೊಲಗಿಹೋದ ಹೊರತು ಆ ದೇವದೇವನ ಸಂಶ್ಲೇಷಕ್ಕೆ ಅರ್ಹತೆ ಬಾರದೆಂದೂ ಇದು ತಿಳಿಸುತ್ತದೆ. ಆ ಭಗವಂತನನ್ನು ಹೊಂದಲು ಅರ್ಹರಾಗುವಂತೆ ನಾವು ನಡೆದುಕೊಳ್ಳಬೇಕೆಂದೂ ಇಂಥ ನಿರ್ಮಲಚಾರಿತ್ರ ಆ ದೇವನ ದಯೆಯಿಂದಲೇ ಸಿದ್ಧಿಸಬೇಕೆಂದೂ ಇದು ಸಾರಿ ಹೇಳುತ್ತಿದೆ.

ಭಗವದ್ಗೀತೆಯಲ್ಲಿ ಸುಂದರವಾಗಿ ಮೈದೋರಿರುವ ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗಗಳ ಅಂಕುರಗಳು ಋಗ್ವೇದದಲ್ಲಿ ಗಮನಾರ್ಹವಾಗಿವೆ. ಭಗವಂತನನ್ನು ಬಿಟ್ಟು ಮತ್ತೊಂದನ್ನೂ ಬಯಸದ ಅನನ್ಯತೆಯನ್ನು ಇದು ಅದ್ಭುತವಾಗಿ ಪ್ರಕಾಶಪಡಿಸುತ್ತದೆ. ಐಹಿಕ ಜೀವನದಲ್ಲಿ ಪರಿಶುದ್ಧತೆ ಗುರಿಯಾಗಿರಬೇಕೆಂದು ಇದರ ಆದೇಶ. ದೈನ್ಯವನ್ನು ಬಿಟ್ಟು ಸ್ವತಂತ್ರವೂ ಮಾನ್ಯವೂ ಆದ ಜೀವನವನ್ನು ನಡೆಸಬೇಕು. ನಮ್ಮ ಜೀವನ ಭಗವತ್ಪರವಾಗಬೇಕು. ಮಾಡುವ ಸಕಲ ಕಾರ್ಯಗಳೂ ಅವನು ಒಪ್ಪುವಂತೆ ಇರಬೇಕು. ಐಹಿಕ ಜೀವನದ ಸೌಕರ್ಯಗಳಿಗೂ ಅಮೃತತ್ವಪ್ರಾಪ್ತಿಗೂ ಆ ದೇವನನ್ನೇ ಬೇಡಬೇಕು. ಹೀಗೆ ದಿನದಿನದ ವ್ಯವಹಾರ ಸರಳವಾಗಿ ಶುದ್ಧವಾಗಿ ನಮ್ಮ ಮತ್ತು ನಮ್ಮ ಜೊತೆಯವರ ಸುಖಕ್ಕೆ ಆಗುವಂತೆ ನಡೆಯಬೇಕೆಂಬ ಆದರ್ಶವಿಲ್ಲಿದೆ. ಇವೆಲ್ಲದರ ಸಿದ್ಧಿಯೂ ಭಗವಂತನ ಕೃಪೆಯಿಂದಲೇ ಆಗಬೇಕೆಂಬ ಅಚಲವಾದ ನಿಷ್ಠೆಯನ್ನು ಭಗವಂತನಲ್ಲಿ ತೋರಿ ಋಗ್ವೇದ ಅನನ್ಯ ಸಾಧಾರಣವಾದ ಭಗವತ್ಪರತೆಯನ್ನು ಸ್ಥಾಪಿಸಿದೆ. ಮುಂದೆ ನಮ್ಮ ದೇಶದಲ್ಲಿ ಬೆಳೆದ ಭಕ್ತಿಪಂಥಗಳೆಲ್ಲಕ್ಕೂ ಈ ಉದ್ದೀಪ್ತವಾದ ಅನುಭವಗಳು ಆಧಾರವಾಗಿವೆ.

ಐಹಿಕ ಜೀವನದಲ್ಲಿ ಸಮೃದ್ಧಿಯನ್ನು ಋಗ್ವೇದ ಬೇಡುತ್ತದೆ. ಭಗವಂತನಲ್ಲಿ ಪಶುಗಳು, ದ್ರವ್ಯ, ಸಂತಾನ, ದೀರ್ಘಾಯುಸ್ಸು ಮೊದಲಾದ ಅನೇಕ ಸೌಕರ್ಯಗಳಿಗಾಗಿ ಬೇಡಿಕೆ ಬಂದಿದೆ. ಆಧ್ಯಾತ್ಮಿಕ ಜೀವನವನ್ನೇ ಗುರಿಯಾಗಿ ಉಳ್ಳವರಿಗೆ ಐಹಿಕ ಸಮೃದ್ಧಿ ಅಡ್ಡಿಯಲ್ಲವೇ ?

117. ಋಗ್ವೇದ (10-14)
118. ಋಗ್ವೇದ (1-72-7), (10-2-7), (10-88-15)

ಇದು ವೈರಾಗ್ಯದ ಅಭಾವವಲ್ಲವೇ ? ಈ ಪ್ರಶ್ನೆಗಳಿಗೆ ಉತ್ತರವಿಷ್ಟೆ. ನಮ್ಮ ದೇಶದಲ್ಲಿ ಪ್ರವೃತ್ತಿಮಾರ್ಗ ಹಾಗೂ ನಿವೃತ್ತಿಮಾರ್ಗ ಎಂಬ ಎರಡು ಮಾರ್ಗಗಳಿವೆ. ಇವುಗಳಲ್ಲಿ ನಿವೃತ್ತಿಮಾರ್ಗ ಐಹಿಕ ಸುಖವನ್ನು ತೆಗಳಿ ಇದರಲ್ಲಿ ಜಿಹಾಸೆಯನ್ನು ಬೆಳೆಸುತ್ತದೆ. ಆದರೆ ಋಗ್ವೇದದಲ್ಲಿ ನಾವು ಕಾಣುವುದು ಪ್ರವೃತ್ತಿ ನಿವೃತ್ತಿಗಳ ಸಮನ್ವಯವನ್ನು. ಐಹಿಕಜೀವನವನ್ನು ತೆಗಳಕೂಡದು. ಆದರೆ ಇದೇ ಸರ್ವಸ್ವವೂ ಎಂದು ಭಾವಿಸಕೂಡದು. ಇದು ಮುಂದಿನ ಪಾರಲೌಕಿಕ ಶ್ರೇಯಸ್ಸಿಗೆ ಅತ್ಯಾವಶ್ಯಕವಾದ ಮೊದಲನೆ ಹಂತ. ಇಲ್ಲಿರುವಾಗ ಇಲ್ಲಿಯ ಸಕಲಸೌಖ್ಯಗಳೂ ಬೇಕು. ಆದರೆ ಅದರೊಡನೆ ಅನವರತವೂ ಉದ್ದೀಪ್ತವಾದ ಭಗವತ್ಪರತೆ ಮಸುಕಾಗದಿರಬೇಕು. ಸ್ವತಂತ್ರವಾಗಿ ನಾವು ಸಂಪಾದಿಸಿ ನಾವು ಬಳಸುತ್ತಿದ್ದೇವೆಂಬ ಅಹಂಕಾರಭಾವನೆ ಅಳಿಯಬೇಕು. ಲೋಕದಲ್ಲಿರುವುದೆಲ್ಲಾ ಭಗವಂತನಿಗೆ ಸೇರಿದುದೆಂದೂ ಅವನು ಕರುಣಿಸಿ ಕೊಟ್ಟುದನ್ನು ಎಲ್ಲರೊಡನೆ ನಾವು ಕೂಡಿ ಅನುಭವಿಸಬೇಕೆಂದೂ, ದ್ರವ್ಯಾರ್ಜನೆ ಮತ್ತು ವಿನಿಯೋಗದಲ್ಲಿ ಸ್ವಾರ್ಥಿಕ ಬುದ್ಧಿ ಮಾಯವಾಗಬೇಕೆಂದೂ, ಆತನು ಪ್ರೀತಿಯಿಂದ ಕರುಣಿಸಿದುದನ್ನು ನಾವು ಭಕ್ತಿಯಿಂದ ಸೇವಿಸಿ ತನ್ಮೂಲಕ ಆತನ ಸೇವೆಯನ್ನೇ ಮಾಡಬೇಕೆಂದೂ ಋಗ್ವೇದ ಹೇಳುತ್ತದೆ. ಈ ಆದರ್ಶಗಳಿಗನುಗುಣವಾಗಿ ನಡೆದರೆ ಆಗ ಪ್ರವೃತ್ತಿಮಾರ್ಗವೂ ನಿವೃತ್ತಿಮಾರ್ಗದಲ್ಲಿಯೇ ಸಂಗಮಿಸುವುದು. ಇಂಥ ಅದ್ಭುತವಾದ ಸಮನ್ವಯ ಇಲ್ಲಿದೆ.[119]

ಋಗ್ವೇದ ಸಂಹಿತೆಯನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಹಿಂದೂ ದರ್ಶನದ ಸರ್ವಸ್ವವನ್ನೂ ಅಲ್ಲಿ ನಾವು ಕಾಣುತ್ತೇವೆ. ಪರಬ್ರಹ್ಮಸ್ವರೂಪದ ಉಜ್ವಲ ನಿರೂಪಣೆ ಅಲ್ಲಿದೆ. ಬ್ರಹ್ಮಸಾಕ್ಷಾತ್ಕಾರ ಗಳಿಸಿಕೊಳ್ಳಬೇಕೆಂಬ ಧ್ಯೇಯವನ್ನದು ರೂಪಿಸಿಕೊಡುತ್ತದೆ. ಅನನ್ಯವಾದ ಭಕ್ತಿಯ ಹೊನಲೇ ಅಲ್ಲಿ ಹರಿದಿದೆ. ಶುದ್ಧವಾದ ಚಾರಿತ್ರವಿಲ್ಲದೆ ಸಿದ್ಧಿಯಾಗದೆಂಬ ಎಚ್ಚರಿಕೆ ಇದೆ. ಐಹಿಕ ಜೀವನ ಸರ್ವಜನ ಹಿತಕರವಾಗಬೇಕೆಂಬ ಉಪದೇಶವಿದೆ. ಸತ್ಕರ್ಮನಿರತರು ಭಗವತ್ಪ್ರೀತಿಗೆ ಪಾತ್ರರಾಗುವರೆಂಬ ಭರವಸೆ ಇದೆ. ನಿತ್ಯಜೀವನದಲ್ಲಿ ನಿಂದೆ, ದ್ರೋಹ, ಅಸತ್ಯ, ನಿದ್ರೆ, ಆಲಸ್ಯ ಮುಂತಾದುವುಗಳನ್ನು ವರ್ಜಿಸಿ ಸತ್ಯೋನ್ಮೇಷ ಹೊಂದಿ ಯಾವಾಗಲೂ ಭಗವದ್ವಿಷಯದಲ್ಲಿ ಪ್ರಬುದ್ಧರಾಗಿರಬೇಕೆಂಬ ಆದರ್ಶವಿದೆ. ಸುಖಮಯವಾದ ಐಹಿಕ ಜೀವನಕ್ಕೇ ಮಾರುಹೋಗದೆ ಇದಕ್ಕಿಂತ ನೂರುಮಡಿ ಆನಂದಕರವಾದ ಅಮೃತತ್ವ ಪ್ರಾಪ್ತಿಗೆ ಹಾತೊರೆಯುವಂತೆ ಇದು ಮಾಡುತ್ತದೆ. ಹೀಗೆ ಋಗ್ವೇದ ಸಂಹಿತೆ ವೇದಾಂತ ದರ್ಶನಕ್ಕೆ ಪರಮಾಧಾರವಾಗಿ ಬೆಳಗಿದೆ.

### ಋಗ್ವೇದದ ಕಾಲ ವಿಚಾರ

ಇದುವರೆಗೆ ಋಕ್ಸಂಹಿತೆಯಲ್ಲಿ ಪ್ರತಿಪಾದಿತವಾಗಿರುವ ವಿಚಾರಗಳನ್ನೆಲ್ಲಾ ವಿವೇಚಿಸಲಾಯಿತು. ಈಗ ಇದರ ಕಾಲವಿಚಾರಗಳನ್ನು ನಾವು ವಿಮರ್ಶಿಸಬೇಕಾಗಿದೆ. ಇಲ್ಲಿ ಎರಡು ಮುಖ್ಯವಾದ ಅಭಿಪ್ರಾಯಗಳಿವೆ. ಒಂದು ಪ್ರಾಚೀನರದು. ಮತ್ತೊಂದು ಆಧುನಿಕ ವಿಮರ್ಶಕರದು. ಪ್ರಾಚೀನರ ಅಭಿಪ್ರಾಯದಂತೆ ವೇದಕ್ಕೆ ಕಾಲವೆಂಬುದೊಂದಿಲ್ಲ. ಅದು ಅಪೌರುಷೇಯ. ಭಗವಂತನು ಅದನ್ನು ಮೊದಲು ಉಪದೇಶಿಸಿದನು. ಹಿಂದಿನ ಕಲ್ಪದಲ್ಲಿ ಇದ್ದಂತೆಯೇ ಅದನ್ನು ಈಶ್ವರನು ಉಪದೇಶಿಸಿದ್ದಾನೆ. ಸಂಹಿತೆಗಳೂ, ಬ್ರಾಹ್ಮಣಗಳೂ,

119. ವಿವರಗಳಿಗೆ ಇದೇ ಲೇಖಕನ 'ಋಗ್ವೇದದ ಅಮೋಘ ಸೂಕ್ತಿ ರತ್ನಗಳು' ಪುಸ್ತಕ ನೋಡಿ.

ಆರಣ್ಯಕಗಳೂ ಮತ್ತು ಉಪನಿಷತ್ತುಗಳೂ ಸೇರಿ ಶ್ರುತಿಗಳೆನಿಸುವುವು. ಇವು ಪರಮಪ್ರಮಾಣ. ಹೀಗೆ ನಮ್ಮ ಜನ ಶ್ರದ್ಧೆಯನ್ನು ಹೊಂದಿದ್ದಾರೆ. ಈ ದೃಷ್ಟಿಯಲ್ಲಿ ಕಾಲವಿಚಾರವೆಂಬುದು ಇಲ್ಲವೇ ಇಲ್ಲ.

ಆಧುನಿಕ ವಿಮರ್ಶಕರ ದೃಷ್ಟಿಯಲ್ಲಿ ವೇದ ಅಪೌರುಷೇಯವಲ್ಲ. ಈ ಅಭಿಪ್ರಾಯವನ್ನು ಕ್ರಿಸ್ತಪೂರ್ವಶತಮಾನಗಳಲ್ಲಿಯೇ ಬೌದ್ಧ ಜೈನ ಪಂಥದವರೂ ಹೊಂದಿದ್ದರು. ವೇದಗಳ ಕಾಲದಲ್ಲಿಯೇ ಅದನ್ನು ನಂಬದವರೂ ಇದ್ದರೆನ್ನಬಹುದು. ಈ ದೃಷ್ಟಿಯಲ್ಲಿ ಋಗ್ವೇದ ಸಂಹಿತೆಯ ಕಾಲವಿಚಾರಕ್ಕೆ ಔಚಿತ್ಯವಿದೆ, ಅವಕಾಶವಿದೆ. ಪಾಶ್ಚಾತ್ಯ ವಿದ್ವಾಂಸರು ಭಾರತ ದೇಶದ ಸಂಸ್ಕೃತಿಯ ಪರಿಚಯವನ್ನು ಪಡೆದನಂತರ ಇದರ ಬಗೆಗೆ ಆಳವಾದ ಅಧ್ಯಯನವನ್ನೂ ವಿಮರ್ಶೆಯನ್ನೂ ಮಾಡಿದ್ದಾರೆ. ಇವರು ಉಪಲಬ್ಧವಾದ ಪ್ರಮಾಣಗಳ ಆಧಾರದಿಂದ ಇಂಥ ಊಹೆಗಳನ್ನು ಮಾಡಿದ್ದಾರೆ.

ವೇದಗಳ ಕಾಲದ ಬಗೆಗೆ ಹೇಳುವುದಾದರೆ ಆಧುನಿಕ ವಿದ್ವಾಂಸರಲ್ಲಿಯೂ ಒಮ್ಮತವಿಲ್ಲ. ಕೆಲವರು ಅತ್ಯಂತ ಹಿಂದಿನ ಕಾಲವನ್ನು ಹೇಳಿದರೆ ಇತರರು ಅತ್ಯಂತ ನವೀನ ಕಾಲವನ್ನು ಹೇಳುತ್ತಾರೆ. ಕ್ರಿ. ಪೂ. 16000, 25000 ಎಂದು ಕೆಲವರ ಮತವಾದರೆ ಕ್ರಿ. ಪೂ. 200 ಎಂದು ಹೇಳುವವರೂ ಇದ್ದಾರೆ. ಇವರ ಅಭಿಪ್ರಾಯಗಳಲ್ಲಿ ಶತಮಾನಗಳ ಅಂತರಕ್ಕೆ ಬದಲಾಗಿ ಸಹಸ್ರಮಾನಗಳ ಅಂತರವೇ ಇದೆ. ನಿರ್ಧಾರವಾಗಿ ಏನನ್ನೂ ಈ ವಿಚಾರದಲ್ಲಿ ಸಾಧಿಸುವುದಕ್ಕಾಗಿಲ್ಲ. ಮ್ಯಾಕ್ಸ್‌ಮುಲ್ಲರ್ ಮಹಾಶಯ 1889ರಲ್ಲಿ ಗಿಫರ್ಡ್ ಉಪನ್ಯಾಸದಲ್ಲಿ ಹೇಳಿದ ಮಾತುಗಳನ್ನು ನಾವು ಇಲ್ಲಿ ಉಲ್ಲೇಖಿಸಬಹುದು : "Whether the Vedic hymns were composed in 1000 or 1500 or 2000 or 3000 B.C. no power on earth will ever determine". ಇದರಿಂದಲೇ ಈ ಅಂಶ ಎಷ್ಟರಮಟ್ಟಿಗೆ ಊಹೆಯನ್ನು ಅವಲಂಬಿಸಿದೆ ಎಂದು ತಿಳಿಯಬಹುದು.

ವೇದಗಳ ಕಾಲವಿಚಾರವನ್ನು ಮ್ಯಾಕ್ಸ್‌ಮುಲ್ಲರ್ ಮೊಟ್ಟಮೊದಲಾಗಿ ಪ್ರತಿಪಾದಿಸಿದನು. ಬೌದ್ಧಧರ್ಮದ ಉದಯಕ್ಕೂ ಮೊದಲೇ ಈ ವಿರಾಟ್ ಸಾಹಿತ್ಯ ಪೂರ್ಣವಾಗಿತ್ತೆಂದೂ ಆದ್ದರಿಂದಲೇ ಏನೆಂದರೂ ಇದು ಕ್ರಿ. ಪೂ. 500 ಕ್ಕೂ ಹಿಂದಿನದೆಂದೂ ಅವನ ಅಭಿಪ್ರಾಯ. ಸೂತ್ರಗಳ ಕಾಲ 600 ರಿಂದ ಕ್ರಿ.ಪೂ. 200 ಎಂದೂ, ಬ್ರಾಹ್ಮಣ ಗ್ರಂಥಗಳ ಕಾಲ ಕ್ರಿ.ಪೂ. 800 ರಿಂದ ಕ್ರಿ. ಪೂ. 600 ಎಂದೂ ಸಂಹಿತೆಗಳು ಇವೆಲ್ಲಕ್ಕೂ ಹಿಂದಿನ ಕಾಲಕ್ಕೆ ಅಂದರೆ ಕ್ರಿ. ಪೂ. 1200 ರಿಂದ ಕ್ರಿ. ಪೂ. 1000ಕ್ಕೆ ಸೇರಿವೆ ಎಂದೂ ಮ್ಯಾಕ್ಸ್‌ಮುಲ್ಲರ್ ಸೂಚಿಸಿದನು. ಇದು ಕೇವಲ ಒಂದು ಊಹೆಯಾಗಿ ವೇದಕಾಲದ ಒಂದು ಮಿತಿಯನ್ನು ಸೂಚಿಸುವುದೆಂದೇ ಅವನು ಹೇಳಿದ್ದರೂ ಮುಂದೆ ಬಂದವರು ಇದನ್ನೇ ಸಿದ್ಧಾಂತವೆಂದು ನಂಬತೊಡಗಿದರು. ಮ್ಯಾಕ್ಸ್‌ಮುಲ್ಲರ್ ವೇದಕಾಲದ ಬಗೆಗೆ ಕ್ರಿ. ಪೂ. 1200 ಎಂದು ಸಿದ್ಧಾಂತ ಮಾಡಿದ್ದಾನೆಂದು ಮುಂದಿನವರು ಹೇಳುವ ಅಭ್ಯಾಸ ಮಾಡಿದರು. ಫ್ರೇಡರ್ ಮೊದಲಾದವರೂ ಸಹ ವೇದಗಳ ಕಾಲವನ್ನು ಕ್ರಿ. ಪೂ. 1500 ಅಥವಾ ಕ್ರಿ. ಪೂ. 2000 ಎಂದು ಬಹಳ ಅಂಜಿಕೆಯಿಂದಲೇ ಹೇಳಿದರು. ಡಾ|| ಯಾಕೋಬಿ ಮತ್ತು ಬಾಲಗಂಗಾಧರ ತಿಲಕರವರು ಖಗೋಳಶಾಸ್ತ್ರದ ಆಧಾರದಿಂದ ಋಗ್ವೇದ ಕಾಲ ಕ್ರಿ. ಪೂ. 4500 ಎಂದು ಹೇಳಿದಾಗ ಪಾಶ್ಚಾತ್ಯ ಪಂಡಿತರಿಗೆ ಗಾಬರಿಯೇ ಆಯಿತು. ಅದುವರೆಗೆ ಅವರು ಒಪ್ಪಿದ ಕಾಲ ಯಾವ ಆಧಾರದ ಮೇಲೆ ನಿಂತಿದೆ ಎಂಬುದನ್ನು ಅವರು ಮರೆತರು.

ಪ್ರಾಚೀನ ಭಾರತೀಯರು ಖಗೋಳಶಾಸ್ತ್ರದಲ್ಲಿ ಪ್ರವೀಣರಾಗಿದ್ದರು. ಇವರಿಗೆ ಸೂರ್ಯಚಂದ್ರರ ಗತಿಯ ವಿಚಾರ ತಿಳಿದಿತ್ತು. 27 ನಕ್ಷತ್ರಗಳೊಡನೆ ಚಂದ್ರನ ಯೋಗವನ್ನಿವರು ಹೇಳುತ್ತಿದ್ದರು. ಯಾಗವನ್ನು ಯಾವ ಕಾಲದಲ್ಲಿ ಮಾಡಬೇಕೆಂಬುದನ್ನು ಇವರು ನಿರ್ಧರನಾಗಿ ಸೂಚಿಸಿದ್ದಾರೆ. ಪೂರ್ಣಚಂದ್ರ ಹಾಗೂ ಪ್ರತಿಪಚ್ಚಂದ್ರನ ಸಂಬಂಧವನ್ನು ಹೊಂದಿರುವ ನಕ್ಷತ್ರಗಳನ್ನು ಇವರು ಉಲ್ಲೇಖಿಸಿದ್ದಾರೆ. ಇವುಗಳನ್ನು ಕುರಿತು ವಿಶೇಷವಾದ ಸಂಶೋಧನೆ ಮಾಡಿದ್ದಾರೆ ವಿದ್ವಾಂಸರು. 1893ರಲ್ಲಿ ಬಾನ್‌ನಗರದ ಎಚ್. ಯಾಕೋಬಿ ಮತ್ತು ಬೊಂಬಾಯಿನ ಬಾಲಗಂಗಾಧರತಿಲಕರು ಇಂಥ ಸಂಶೋಧನೆಗಳನ್ನು ಸ್ವತಂತ್ರವಾಗಿ ನಡೆಸಿ ವೇದಕಾಲವನ್ನು ಊಹಿಸಿದ್ದಾರೆ. ಬ್ರಾಹ್ಮಣ ಗ್ರಂಥಗಳಲ್ಲಿ ಕೃತ್ತಿಕಾ ನಕ್ಷತ್ರದಲ್ಲಿ ವಿಷುಸಂಪಾತ ಆಗುತ್ತಿತ್ತೆಂದು ಉಲ್ಲೇಖಿಸಿದೆ. ಋಗ್ವೇದದ ಪ್ರಾಚೀನ ಭಾಗಗಳಲ್ಲಿ ವಿಷುಸಂಪಾತ ಮೃಗಶಿರಾ ನಕ್ಷತ್ರದಲ್ಲಿ ಆಗುತ್ತಿತ್ತೆಂದು ಹೇಳಿದೆ. ಈ ಮುನ್ನಡೆಯನ್ನು ಗಣನೆ ಮಾಡಿದಾಗ ಕೃತ್ತಿಕೆಯಲ್ಲಿ ವಿಷುಸಂಪಾತವಾಗುತ್ತಿದ್ದ ಕಾಲ ಕ್ರಿ. ಪೂ. 2500 ಎಂದೂ, ಮೃಗಶಿರಸ್ಸಿನಲ್ಲಿ ವಿಷುಸಂಪಾತವಾದ ಕಾಲ ಕ್ರಿ. ಪೂ. 4500 ಎಂದೂ ಗೊತ್ತಾಗುತ್ತದೆ. ಇದರ ಆಧಾರದ ಮೇಲೆ ಯಾಕೋಬಿ ಋಗ್ವೇದ ಕಾಲವನ್ನು ಕ್ರಿ. ಪೂ. 4500 ಎಂದೂ, ತಿಲಕರು ಕ್ರಿ. ಪೂ. 6000 ಎಂದೂ ಹೇಳುತ್ತಾರೆ. ಗೃಹ್ಯಸೂತ್ರದಲ್ಲಿ ವಿವಾಹಕಾಲದಲ್ಲಿ ವರನು ವಧುವಿಗೆ ಉತ್ತರದಿಕ್ಕಿನಲ್ಲಿ ಅಚಲವಾಗಿರುವ ಉಜ್ವಲತಾರೆಯಾದ ಧ್ರುವನಕ್ಷತ್ರವನ್ನು ತೋರಿಸಬೇಕೆಂದು ವಿಧಿಸಿದೆ. ಖಗೋಳಶಾಸ್ತ್ರದ ಆಧಾರದ ಮೇಲೆ ಅಂಥ ಒಂದು ಉಜ್ವಲ ತಾರೆ ಕ್ರಿ. ಪೂ. 2780ರಲ್ಲಿ ಇದ್ದಿತೆಂದು ಯಾಕೋಬಿ ಸೂಚಿಸುತ್ತಾರೆ. ಗೃಹ್ಯಸೂತ್ರದ ಕಾಲವೇ ಇದಾದರೆ ಇದಕ್ಕೂ ಹಿಂದಿನ ಕಾಲ ಋಗ್ವೇದ ಕಾಲವಾಗುತ್ತದೆ. ಈ ವಾದಗಳನ್ನು ಅನೇಕರು ಒಪ್ಪಲು ಸಿದ್ಧರಾಗಲಿಲ್ಲ. ಆದರೆ ವೇದಗಳ ಪ್ರಾಚೀನತೆಯನ್ನು ತಳ್ಳಿ ಹಾಕಲೂ ಸಹ ಆಗಲಿಲ್ಲ.

ಪಾಶ್ಚಾತ್ಯ ವಿಮರ್ಶಕರು ಭಾರತಕ್ಕೆ ಆರ್ಯರು ವಲಸೆ ಬಂದವರೆಂಬುದನ್ನು ಇಟ್ಟುಕೊಂಡು ವೇದದ ಕಾಲವನ್ನು ಸಾಧಿಸಲು ಯತ್ನಿಸುತ್ತಾರೆ. ಕ್ರಿ. ಪೂ. 700 ರಲ್ಲಿ ಜೈನಧರ್ಮದ ಉದಯ ವಾಗಬೇಕಾದರೆ ಆರ್ಯರು ಕ್ರಿ. ಪೂ. 1500 ರಲ್ಲಿ ಭಾರತಕ್ಕೆ ಬಂದರೆಂಬ ವಾದ ಅಸಂಗತವಾಗುತ್ತದೆ. ಈ ವಿರಾಡ್ವಾಙ್ಮಯದ ಅಭಿವ್ಯಕ್ತಿ ಅಷ್ಟು ಅಲ್ಪ ಕಾಲದಲ್ಲಿ ಆಗಲು ಸಾಧ್ಯವಿಲ್ಲ. ವೇದ ಸಂಹಿತೆಯಲ್ಲಿಯೇ 'ಹಿಂದಿನ ಋಷಿಗಳು' ಎಂಬ ಉಲ್ಲೇಖವಿದೆ. ಬ್ರಾಹ್ಮಣಗಳೂ ಅನುಕ್ರಮಣಿಗಳೂ ಋಷಿಗಳನ್ನು ದ್ರಷ್ಟಾರರೆಂದು ಕರೆಯುತ್ತವೆ. ಋಗ್ವೇದಸಂಹಿತೆಯಲ್ಲಿ ಬರುವ ಅನೇಕಾನೇಕ ಪುನರುಕ್ತಿಗಳು ಅವರ ಪ್ರಾಚೀನ ಮಂತ್ರಗಳನ್ನು ಹಾಗೆಯೇ ಬಳಸಿದ್ದಾರೆಂಬುದನ್ನು ತೋರಿಸುತ್ತವೆ. ಸಂಹಿತೆಯ ಭಾಷೆಗಿಂತ ಬ್ರಾಹ್ಮಣಗಳ ಭಾಷೆ ಭಿನ್ನವಾಗಿ ಗದ್ಯಮಯವಾಗಿದೆ. ಇವುಗಳೆರಡರ ವಿಚಾರಕ್ಕಿಂತ ಅತ್ಯಂತ ವಿಲಕ್ಷಣವಾದ ವಿಚಾರವನ್ನು ಉಪನಿಷತ್ತುಗಳಲ್ಲಿ ನಾವು ನೋಡುತ್ತೇವೆ. ಉಪನಿಷತ್ತುಗಳೂ ಶ್ರುತಿಕೋಟಿಯಲ್ಲಿ ಸೇರಿವೆ. ಇವೆಲ್ಲವನ್ನೂ ನಾವು ಗಮನಿಸಿದರೆ ಈ ವಾಙ್ಮಯದ ಅಭಿವ್ಯಕ್ತಿಗೆ ಅನೇಕ ಸಹಸ್ರಮಾನಗಳಾಗಿರಬೇಕೆಂಬುದು ದೃಢವಾಗುತ್ತದೆ.

ವೇದಗಳು ಬಾಯಿಪಾಠದಿಂದ ಕಲಿಸಲ್ಪಡುತ್ತಿದ್ದವು. ಒಂದು ಜನಾಂಗದಿಂದ ಮತ್ತೊಂದು ಜನಾಂಗಕ್ಕೆ ಹೀಗೆ ಇದನ್ನು ಧಾರೆಯೆರೆಯುತ್ತಿದ್ದರು. ಸಂಹಿತೆಯ ಸಂಕಲನದ ಕಾಲಕ್ಕೇ ಅಸಂಖ್ಯಾತರಾದ ಗುರುಪರಂಪರೆಗಳ ಮೂಲಕ ಇವು ಉಳಿದು ಬಂದಿರಬೇಕು. ಇದಲ್ಲದೆ ಅನೇಕಾನೇಕ ಶಾಖೆಗಳೂ ಉದ್ಭವಿಸಿವೆ. ಇವೂ ಸಹ ಮಹತ್ತಮವಾದ ಕಾಲದ ಅಂತರವನ್ನು

ಸೂಚಿಸುತ್ತವೆ. ಋಕ್ಸಂಹಿತೆಯ ಪ್ರಾಚೀನ ಸೂಕ್ತಗಳಿಗೂ ಸಂಹಿತೆಯ ಸಂಕಲನದ ಕಾಲಕ್ಕೂ ಅನೇಕಾನೇಕ ಶತಮಾನಗಳುರುಳಿ ಹೋಗಿರಬೇಕು. ಸಂಹಿತೆಯಲ್ಲಿಯೇ ಸೂಕ್ತಕ್ಕೂ, ಸೂಕ್ತಕ್ಕೂ, ಮಂತ್ರಕ್ಕೂ, ಮಂತ್ರಕ್ಕೂ, ಅನೇಕ ಕಾಲದ ಅಂತರ ಇರುವುದು ಸಂಭವ. ಸಂಹಿತೆಗಳಿಗೂ ಬ್ರಾಹ್ಮಣಗಳಿಗೂ, ಬ್ರಾಹ್ಮಣಗಳಿಗೂ ಆರಣ್ಯಕಗಳಿಗೂ, ಅಪಾರವಾದ ಕಾಲದ ಅಂತರವಿದೆ. ಅಲ್ಲಲ್ಲಿ ಪ್ರಾಚೀನವಾದ ಆಖ್ಯಾನಗಳು ಬರುತ್ತವೆ. ಅವುಗಳಿಂದಲೂ ಈ ಅಂಶ ದೃಢವಾಗುತ್ತದೆ. ಇದನ್ನೆಲ್ಲಾ ನಾವು ಗಮನಿಸಿದರೆ ಇದರ ಕಾಲವನ್ನು ನಾವು ಊಹಿಸಲು ಶಕ್ಯವಾದೀತು.

ಆಧುನಿಕ ವಿಮರ್ಶಕರಲ್ಲಿ ಮ್ಯಾಕ್ಡೊನೆಲ್ ಮತ್ತು ಮ್ಯಾಕ್ಸ್‌ಮುಲ್ಲರ್ ಅವರ ವಾದದಂತೆ ವೇದಗಳ ಕಾಲ ಕ್ರಿ. ಪೂ. 1200 ಎಂದಾಗುತ್ತದೆ. ಮೇಲಿನ ವಿವೇಚನೆಯಂತೆ ನಾವು ಈ ಕಾಲ ಸಂಗತವಾಗುವುದಿಲ್ಲವೆಂದು ಅರಿಯಬಹುದು. ಇದಕ್ಕೂ ಬಹಳ ಪ್ರಾಚೀನವಾದ ಕಾಲದಲ್ಲಿ ವೇದ ದೇವತೆಗಳನ್ನು ಉಲ್ಲೇಖಿಸಿರುವುದನ್ನು ನಾವು ಕಾಣಬಹುದು. ಏಷ್ಯಾಮೈನರಿನ ಬೊಘಸ್ಕೋಯಿನಲ್ಲಿ 1907ರಲ್ಲಿ ಹ್ಯೂಗೋವಿಂಕ್ಲರ್ ಮಾಡಿದ ಸಂಶೋಧನೆ ವೇದದ ಪ್ರಾಚೀನತೆಯ ಮೇಲೆ ಬೆಳಕು ಚೆಲ್ಲಿದೆ ಅಲ್ಲಿ ದೊರಕಿದ ಶಿಲಾಫಲಕಗಳಲ್ಲಿ ಹಿಟ್ಟೈಟ್ ಮತ್ತು ಮಿಟಾನಿ ಪಂಗಡದವರಲ್ಲಿ ಆದ ಒಪ್ಪಂದದ ನಿರೂಪಣೆ ಇದೆ. ಅದರ ಕಾಲ ಕ್ರಿ. ಪೂ. 1400 ಎಂದು ವಿಮರ್ಶಕರು ಒಪ್ಪಿದ್ದಾರೆ. ಅಲ್ಲಿ ಮಿತ್ರ, ವರುಣ, ಇಂದ್ರ ಮತ್ತು ನಾಸತ್ಯ ಇವರನ್ನು ಮಿಟಾನಿ ದೇವತೆಗಳೆಂದು ಉಲ್ಲೇಖಿಸಿದೆ. ಏಷ್ಯಾಮೈನರಿನಲ್ಲಿದ್ದ ಮಿಟಾನಿ ಪಂಗಡದವರಿಗೆ ಈ ದೇವತೆಗಳು ಹೇಗೆ ಸಂದರು ಎಂಬುದು ಒಂದು ಪ್ರಶ್ನೆ. ಚರಿತ್ರಾಕಾರನಾದ ಎಡ್. ಮೆಯರ್ ಈ ದೇವತೆಗಳು ಆರ್ಯರ ಕಾಲದವರೆಂದು ಹೇಳುತ್ತಾನೆ. ಈ ಅಂಶ ವೇದಗಳು ಕ್ರಿ. ಪೂ. 1500ಕ್ಕಿಂತ ಪ್ರಾಚೀನವಾದುವೆಂಬುದನ್ನು ಸಾಧಿಸುವವು.

ವೇದಕ್ಕೂ ಅವೆಸ್ತಾಕ್ಕೂ ಇರುವ ಸಾಮ್ಯದ ಕಾರಣ ವೇದಕಾಲ ಕ್ರಿ. ಪೂ. 1500ಕ್ಕಿಂತ ಈಚಿನದೆಂದು ಕೆಲವರು ವಾದಿಸುತ್ತಾರೆ. ಭಾಷೆಯ ಬಗೆಗೆ ಮತ್ತು ಧಾರ್ಮಿಕ ಭಾವನೆಯ ಬಗೆಗೆ ಇರುವ ಸಾಮ್ಯಗಳನ್ನು ಎದುರಿಸುವಂತಹ ವಿಪರೀತವಾದ ಅನೇಕ ವೈಲಕ್ಷಣ್ಯಗಳೂ ಇವುಗಳಲ್ಲಿವೆ. ವೇದಪೂರ್ವಕಾಲದಲ್ಲಿ, ಅವೆಸ್ತಾ ಪೂರ್ವಕಾಲದಲ್ಲಿ ಅವರು ಒಟ್ಟಿಗೆ ವಾಸಿಸುತ್ತಿದ್ದುದು ಇದಕ್ಕೆ ಕಾರಣವಾಗಿರಬಹುದು. ಆದರೆ ಭಾಷೆಯ ಸಾಮ್ಯದಿಂದ ಕಾಲನಿರ್ಣಯ ಮಾಡಲು ಸಾಧ್ಯವಿಲ್ಲ. ಕೆಲವು ಭಾಷೆಗಳು ತ್ವರಿತಗತಿಯಲ್ಲಿ ಬದಲಾಗುತ್ತವೆ. ಮತ್ತೆ ಕೆಲವು ಬಹಳ ಕಾಲ ಬದಲಾಗುವುದೇ ಇಲ್ಲ. ಇಷ್ಟರಿಂದಲೇ ಕಾಲ ನಿರ್ಣಯ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅವೆಸ್ತಾದೊಡನೆ ಇರುವ ಸಾಮ್ಯಗಳ ಕಾರಣ ವೇದಗಳ ಕಾಲವನ್ನು ಈಚಿನದೆಂದು ಸಾಧಿಸುವುದಕ್ಕಾಗುವುದಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪ್ರಾಚೀನ ಭಾರತಕ್ಕೂ ಪಶ್ಚಿಮ ಏಷ್ಯಾಕ್ಕೂ ಕ್ರಿ. ಪೂ. ಎರಡನೆಯ ಸಹಸ್ರಮಾನದಲ್ಲಿ ಸಂಬಂಧವಿದ್ದಿರಬೇಕೆಂಬುದನ್ನು ಒಪ್ಪಬೇಕೆಂದು ಹೇಳುವ ವಿಂಟರ್‌ನಿಟ್ಸ್‌ರವರು ಋಗ್ವೇದ ಕಾಲವನ್ನು ಕ್ರಿ. ಪೂ. 2000 ಎಂದು ಸೂಚಿಸುತ್ತಾರೆ.

ಹೀಗೆ ವೇದಕಾಲದ ನಿರ್ಣಯದ ಬಗೆಗೆ ವಿಚಾರ ನಡೆದಿದೆ. ವೇದದ ಪ್ರಾಚೀನತೆಯನ್ನು ಮೊದಲು ಅನೇಕರು ಒಪ್ಪುತ್ತಿರಲಿಲ್ಲ. ಆದರೆ ವೇದಗಳ ಪ್ರಾಚೀನತೆಯ ಅರಿವು ಈಗ ಉಂಟಾಗಿದೆ. ವೇದಗಳ ಸ್ವರೂಪದಿಂದಲೇ ಅವುಗಳ ಪ್ರಾಚೀನತೆ ಸಿದ್ಧವಾಗಿದೆ. ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು–ಇವುಗಳ ನಡುವೆ ಅಪಾರವಾದ ಕಾಲ ಸಂದಿರಬೇಕು. ಇವು ದೃಷ್ಟವಾದವು ಎಂಬ ಭಾವನೆ ದೃಢವಾಗಬೇಕಾದರೂ ಅನೇಕಾನೇಕ

ಸಹಸ್ರಮಾನಗಳಾಗಿರಬೇಕು. ಋಕ್ಸಂಹಿತೆಯಲ್ಲಿಯೇ ಸೂಕ್ತಕ್ಕೂ ಸೂಕ್ತಕ್ಕೂ, ಮಂಡಲಕ್ಕೂ ಮಂಡಲಕ್ಕೂ ಅನೇಕ ಶತಮಾನಗಳ ಅಂತರವಿರಬೇಕು. ಐತರೇಯ ಬ್ರಾಹ್ಮಣದಲ್ಲಿ ಬರುವ ಶುನಶ್ಶೇಫನ ಉಪಾಖ್ಯಾನದಿಂದ ಬ್ರಾಹ್ಮಣಕ್ಕೂ ಸಂಹಿತೆಗಳಿಗೂ ಅಪಾರವಾದ ಕಾಲದ ಅಂತರವಿತ್ತೆಂಬುದು ಸೂಚಿತವಾಗಿದೆ. ಉಪನಿಷತ್ತುಗಳೂ ಸಹ ಹೀಗೆಯೇ ಅನೇಕ ಶತಮಾನಗಳ ಕಾಲಕ್ಕೆ ಸೇರಿದವು. ಇವೆಲ್ಲವೂ ಅಖಂಡವಾಗಿ ಶ್ರುತಿಕೋಟಿಗೆ ಸೇರಲು ಅದೆಷ್ಟು ದೀರ್ಘಕಾಲ ಸಂದಿದ್ದಿರಬೇಕೋ ! ಡಾ|| ಯಾಕೋಬಿ ಮತ್ತು ತಿಲಕ್‌ರವರ ಸೂಚನೆ ಈ ದೃಷ್ಟಿಯಲ್ಲಿ ಒಂದು ಗಮನಾರ್ಹವಾದ ಹೆಜ್ಜೆಯಷ್ಟೆ. ಕ್ರಿ. ಪೂ. 4500 ಮತ್ತು ಅದಕ್ಕೂ ಹಿಂದಿನ ಕಾಲಕ್ಕೆ ಈ ಸಂಹಿತೆ ಸೇರಿರಬಹುದೆಂದು ನಾವು ಸೂಚಿಸಬಹುದೇ ವಿನಾ ಅದರ ಕಾಲವನ್ನು ನಿಷ್ಕೃಷ್ಟವಾಗಿ ಸಾಧಿಸುವುದಕ್ಕಾಗುವುದಿಲ್ಲವೆಂಬುದನ್ನು ಗಮನಿಸಬೇಕು.

## ಸಾಮವೇದ ಸಂಹಿತೆ

ವೇದಸಂಹಿತೆಗಳಲ್ಲಿ ಸಾಮವೇದಕ್ಕೆ ವಿಶಿಷ್ಟವಾದ ಗೌರವಸ್ಥಾನವಿದೆ. ಸಾಮವನ್ನು ತಿಳಿದವನೇ ವೇದತತ್ತ್ವವನ್ನು ತಿಳಿದವನೆಂದು ಬೃಹದ್ದೇವತೆ ತಿಳಿಸುತ್ತದೆ. ಗೀತೆಯಲ್ಲಿನ 'ವೇದಾನಾಂ ಸಾಮವೇದೋಽಸ್ಮಿ' ಎಂಬ ವಾಣಿ ಸಾಮವೇದದ ಮಹತ್ವವನ್ನು ಸೂಚಿಸುತ್ತದೆ. ಎಲ್ಲ ವೇದಗಳಲ್ಲಿಯೂ ಪ್ರಣವಕ್ಕೆ ಶ್ರೇಷ್ಠಸ್ಥಾನವಿದೆ. ಇದೇ ಭಗವದ್ರೂಪವೆಂದೂ ಹೇಳಿದೆ. ಸಾಮವೇದದ ಸಾರವಾದ ಉದ್ಗೀಥ ಪ್ರಣವ ಸ್ವರೂಪವನ್ನೇ ಪ್ರತಿಪಾದಿಸುತ್ತದೆ. ಇದರಿಂದಲೂ ಸಾಮವೇದದ ಮಹತ್ವ ಗೊತ್ತಾಗುತ್ತದೆ. ಋಗ್ವೇದ ಸಂಹಿತೆಯಲ್ಲಿಯೂ ಅನೇಕ ಕಡೆ ಸಾಮದ ಪ್ರಶಂಸೆ ಬಂದಿದೆ.

'ಯೋ ಜಾಗಾರ ತಮು ಸಾಮಾನಿ ಯಂತಿ' (5-44-14)
'ಉದ್ಗಾತೇವ ಶಕುನೇ ಸಾಮ ಗಾಯಸಿ |'
ಬ್ರಹ್ಮ ಪುತ್ರ ಇವ ಸವನೇಷು ಶಂಸಸಿ || (2-43-2)
'ದೇವಾಃ ಅಂಗಿರಸಾಂ ಸಾಮಭಿಃ ಸ್ತೂಯಮಾನಾಃ |' (1-107-2)

ಸಾಮವೇದದ ಉಲ್ಲೇಖ ಅಥರ್ವವೇದದಲ್ಲಿಯೂ ಬಂದಿದೆ. ಉಚ್ಛಿಷ್ಟಾಖ್ಯನಾದ ಪರಮ ಪುರುಷನಿಂದ ಋಕ್ಕುಗಳೂ ಸಾಮಗಳೂ ಆವಿರ್ಭವಿಸಿದವು ಎಂದು ಅಲ್ಲಿ ಹೇಳಿದೆ–

ಋಚಃ ಸಾಮಾನಿ ಛಂದಾಂಸಿ....
.......ಉಚ್ಛಿಷ್ಟಾತ್ತು ಜಜ್ಞಿರೇ ಸರ್ವೇ' (ಅ.ವೇ. 2-7-24).

(ಅ. ವೇ. 10-7-20), (ಅ. ವೇ. 7-54-1) ರಲ್ಲಿಯೂ ಸಾಮಪ್ರಶಂಸೆ ಇದೆ. ಋಗ್ವೇದದಲ್ಲಿ ವಿಶಿಷ್ಟ ರೀತಿಯ ಸಾಮಗಳ ಹೆಸರುಗಳನ್ನೂ ಹೇಳಿದೆ. ವೈರೂಪ, ಬೃಹತ್, ರೈವತ, ಗಾಯತ್ರ, ಭದ್ರ ಮೊದಲಾದ ಹೆಸರುಗಳು ಋಗ್ವೇದದಲ್ಲಿಯೂ, ರಥಂತರ, ವೈರಾಜ, ಶಾಕ್ವರ, ವಾಮದೇವ್ಯ, ಅಭೀವರ್ತ ಮೊದಲಾದ ಹೆಸರುಗಳು ಯಜುರ್ವೇದದಲ್ಲಿಯೂ ಉಪಲಬ್ಧವಾಗಿವೆ. ಇವುಗಳಿಂದ ಸಾಮಗಾನ ಬಹಳ ಪ್ರಾಚೀನವಾದುದೆಂದೂ ಬಹಳ ಹಿಂದಿನ ಕಾಲದಿಂದಲೂ ರೂಢಿಯಾಗಿತ್ತೆಂದೂ ಗೊತ್ತಾಗುತ್ತದೆ.

ಸಾಮವೇದ ಉದ್ಗಾತೃವೇದ, ಯಾಗದಲ್ಲಿ ಉದ್ಗಾತೃವೆಂಬ ಋತ್ವಿಕ್ಕಿನ ಉಪಯೋಗಕ್ಕಾಗಿ ಈ ವೇದದ ಸಂಕಲನವಾಗಿದೆ. ಉದ್ಗಾತೃಗಣ ವಿವಿಧ ದೇವತೆಗಳ ಸ್ತೋತ್ರಗಳನ್ನು ಆಯಾ ಸಂದರ್ಭಕ್ಕನುಗುಣವಾಗಿ ವಿವಿಧ ಸ್ವರಗಳಲ್ಲಿ ಹಾಡುತ್ತಿದ್ದರು. ಹೀಗೆ ಸಾಮಕ್ಕೆ ಋಗ್ವೇದ ಮಂತ್ರಗಳೇ ಆಧಾರವಾಗಿವೆ. ಇದನ್ನು ಛಾಂದೋಗ್ಯ ಉಪನಿಷತ್ತು 'ಋಚಿ ಅಧ್ಯೂಢಂ ಸಾಮ' (ಛಾಂ. ಉ. 1-6-1) ಎಂದು ಸ್ಪಷ್ಟವಾಗಿ ತಿಳಿಸುತ್ತದೆ.

ನಿರುಕ್ತದಲ್ಲಿ ಸಾಮಶಬ್ದ ನಿರ್ವಚನವನ್ನು ಕೆಳಗೆ ಕಂಡಂತೆ ಮಾಡಿದೆ:
'ಸಾಮಾಸಮ್ಮಿತಮ್ ಋಚಾ, ಅಸ್ಯತೇಃವಾ, ಸ್ಯತೇವಾ, ಋಚಾ ಸಮಂ ಮೇನೇ ಇತಿ ನೈದಾನಾಃ' (ನಿ. 7-12-4) ಪರಿಮಾಣದಲ್ಲಿ ಋಕ್ಕಿಂದ ಕೂಡಿದುದು ಇದು ; ಋಕ್ಕಿನಲ್ಲಿ ಅದು ಪ್ರಕ್ಷಿಪ್ತವಾದುದರಿಂದ ಇದು ಸಾಮ.

'ಸಂಹಿತಾಪದ-ಸಾಮ' ಎಂಬಂತೆ ಇದು ಕೊನೆಯ ಕರ್ಮವಾದುದರಿಂದ ಋಕ್ಕಿನೊಡನೆ ತಾನು ಸಮವೆಂದು ಇದು ತಿಳಿದುಕೊಂಡಿತು ಎಂದು ನೈದಾನರು ಹೇಳುವರು.

ಋಕ್ ಮತ್ತು ಸಾಮಗಳ ನಿಕಟತಮವಾದ ಸಂಬಂಧವನ್ನು ಸೂಚಿಸುತ್ತದೆ, 'ಸಾಮಾಹಮಸ್ಮಿ ಋಕ್‌ತ್ವಂ' ಎಂಬ (ಬೃ. ಉ. 6-4-20), (ಅ. ವೇ. 14-2-71) ; ಮಾತು ಜೈಮಿನಿಯ ಸೂತ್ರಕ್ಕನುಸಾರವಾಗಿ ಗೀತಿಗೆ ಸಾಮಸಂಜ್ಞೆ ಕೊಡಲಾಗಿತ್ತು ಎಂಬುದನ್ನು 'ಗೀತಿಷು ಸಾಮಾಖ್ಯಾ' ಎಂಬುದು ಸಮರ್ಥಿಸುತ್ತದೆ. ಈ ಗಾನ ಬೇರೆ ಬೇರೆ ಸ್ವರಗಳಲ್ಲಿತ್ತೆಂಬುದೂ ಸಾಮವೆಂದರೆ ಬೇರೆ ಬೇರೆ ಸ್ವರಗಳಲ್ಲಿ ಹಾಡುವಂಥ ಋಙ್ಮಂತ್ರಗಳೆಂದೂ ಗೊತ್ತಾಗುತ್ತದೆ. 'ಕಾ ಸಾಮ್ನೋ ಗತಿರಿತಿ ಸ್ವರ ಇತಿ ಹೋವಾಚ' (ಛಾಂ. ಉ. 1-8-4). 'ತಸ್ಯ ಹ ಏತಸ್ಯ ಸಾಮ್ನೋ ಯಃ ಸ್ವಂ ವೇದ ಭವತಿ ತಸ್ಯ ಸ್ವಂ ತಸ್ಯ ವೈ ಸ್ವರ ಏವ ಸ್ವಮ್' (ಬೃ. ಉ. 1-3-25) ಎಂಬ ಸೂಕ್ತಿಗಳು ಇದನ್ನು ದೃಢಪಡಿಸುತ್ತವೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ 'ಸಾಚ ಅಮಶ್ಚೇತಿ ತತ್ಸಾಮ್ನಃ ಸಾಮತ್ವಮ್' (ಬ. ಉ. 1-3-22) ಎಂದು ಬಹಳ ಸುಂದರವಾಗಿ ಸಾಮ ಶಬ್ದದ ನಿರ್ವಚನ ಮಾಡಿದೆ. 'ಸಾ' ಎಂದರೆ ಋಕ್ಕುಗಳು. 'ಅಮ' ಶಬ್ದಕ್ಕೆ ವಿವಿಧ ಸ್ವರಗಳು ಎಂದರ್ಥ. ಆದ್ದರಿಂದ ಋಕ್ಕುಗಳ ಮತ್ತು ಸ್ವರ ಪ್ರಧಾನವಾದ ಗಾಯನದ ಸಹಯೋಗವೇ ಸಾಮವೆನಿಸುವುದು. ಇದನ್ನೇ 'ತಯಾ ತಹ ಸಂಬದ್ಧ: ಅಮೋ ನಾಮ ಸ್ವರಃ ಯತ್ರ ವರ್ತತೇ ತತ್ಸಾಮ' ಎಂದು ವಿವರಿಸಿದೆ. ಋಗ್ವೇದದ ಋಙ್ಮಂತ್ರಗಳಲ್ಲಿ ಯಾವ ಯಾವ ಋಕ್ಕುಗಳಿಗೆ ಸಾಮವನ್ನು ಹಾಡುತ್ತಿದ್ದರೋ ಆ ಮಂತ್ರಗಳ ಸಂಕಲನವೇ ಸಾಮ ಸಂಹಿತೆಯಾಗಿದೆ. ಸಾವೋಪಯೋಗಿಯಾದ ಮಂತ್ರಗಳ ಸಂಕಲನ ಹೀಗೆ ಸಾಮ ಸಂಹಿತೆಯಾಗಿದೆ. ಈ ಮಂತ್ರಗಳಿಗೆ 'ಸಾಮಯೋನಿ' ಎಂದೂ ಹೆಸರಿದೆ.

**ಸಾಮವೇದ ಶಾಖೆಗಳು**

ಸಾಮವೇದ ಸಹಸ್ರ ಶಾಖೆಗಳಲ್ಲಿದೆಯೆಂದು 'ಚರಣವ್ಯೂಹ'ದಲ್ಲಿ ಹೇಳಿದೆ. ಮಹಾಭಾಷ್ಯಕಾರರಾದ ಪತಂಜಲಿಗಳೂ 'ಸಹಸ್ರವರ್ತ್ಮಾ ಸಾಮವೇದಃ' ಎಂದು ಇದನ್ನು ಪುಷ್ಟೀಕರಿಸುತ್ತಾರೆ. ಸಹಸ್ರ ಸಂಖ್ಯೆ ಎಂದರೆ ಅನೇಕ ಸಂಖ್ಯೆ ಎಂದು ಕೆಲವರು ವಿಮರ್ಶಕರು ಅರ್ಥ ಮಾಡುತ್ತಾರೆ. ಈ ಸಹಸ್ರ ಶಾಖೆಗಳ ಹೆಸರುಗಳೂ ನಮಗೆ ಪೂರ್ಣವಾಗಿ ಎಲ್ಲಿಯೂ ಉಪಲಬ್ಧವಾಗಿಲ್ಲ. ಸಂಗೀತದ ವಿಪುಲತೆ ಮತ್ತು ಸೂಕ್ಷ್ಮತೆಯನ್ನು ನಾವು ಗಮನಿಸಿದರೆ ಸಾಮಗಳನ್ನು ಅನೇಕ ರೀತಿಯಲ್ಲಿ ಹಾಡುತ್ತಿದ್ದರೆಂದು ಊಹಿಸಬಹುದು. ಆದರಿಂದ ಸಹಸ್ರವರ್ತ್ಮಾ ಎಂಬ ಶಬ್ದಕ್ಕೆ ಶಾಖಾವಾಚಿಯಾದ ತಾತ್ಪರ್ಯಕ್ಕಿಂತ ಸಾಮಗಾಯನದ ವಿಭಿನ್ನ ಪದ್ಧತಿಗಳನ್ನು ತಿಳಿಸುವುದರಲ್ಲಿ ಹೆಚ್ಚು ಔಚಿತ್ಯವಿದೆಯೆಂದು ವಿಮರ್ಶಕರು ಹೇಳುತ್ತಾರೆ. ಸಹಸ್ರ ಶಾಖೆಗಳೂ ಒಮ್ಮೆ ಇದ್ದಿರಬಹುದು. ಈಗ ಲುಪ್ತವಾಗಿ ಹೋಗಿರಬಹುದು. ಈಗ ಪ್ರಪಂಚಹೃದಯ, ದಿವ್ಯಾವದಾನ ಮತ್ತು ಚರಣವ್ಯೂಹಗಳು ಹಾಗೂ ಜೈಮಿನಿ ಗೃಹ್ಯಸೂತ್ರ (1-14) ಇವುಗಳಲ್ಲಿ ಉಪಲಬ್ಧವಾಗಿರುವಂತೆ ಹದಿಮೂರು ಶಾಖೆಗಳ ಹೆಸರುಗಳು ದೊರೆಯುತ್ತವೆ. 'ರಾಣಾಯನ, ಸತ್ಯಮುಗ್ರ, ವ್ಯಾಸ, ಭಾಗುರಿ, ಔಲುಂಡಿ, ಗೌಲ್ಮುಲವಿ,

ಭಾನು ಮಾನೌಪಮನ್ಯವ, ಕಾರಾಟ, ಮಶಕ, ಗಾರ್ಗ್ಯ, ವಾರ್ಷಗಣ್ಯ, ಕೌಥುಮಿ, ಶಾಲಿಹೋತ್ರ ಜೈಮಿನಿ ತ್ರಯೋದಶೈತೇ ಮೇ ಸಾಮಗಾಚಾರ್ಯಾಃ ಸ್ವಸ್ತಿಕುರ್ವಂತು ತರ್ಪಿತಾಃ' ಎಂದು ತರ್ಪಣ ಪ್ರಕರಣದಲ್ಲಿ ಹೇಳಿದೆ. ಇವುಗಳಲ್ಲಿ ರಾಣಾಯನೀಯ, ಕೌಥುಮ ಮತ್ತು ಜೈಮಿನೀಯ ಶಾಖೆಗಳೆಂಬ ಮೂರು ಶಾಖೆಗಳು ಮಾತ್ರ ಉಪಲಬ್ಧವಾಗಿವೆ. ಈ ಮೂರು ಶಾಖೆಗಳಲ್ಲಿ ಕೌಥುಮಶಾಖೆ ಹೆಚ್ಚು ಪ್ರಚಾರದಲ್ಲಿದೆ. ಕೌಥುಮಶಾಖೆಗೆ ಸೇರಿದಂತೆ ತಾಂಡ್ಯಶಾಖೆಯೆಂಬುದೂ ಇತ್ತೆಂದು ಗೊತ್ತಾಗುತ್ತದೆ. ತಾಂಡ್ಯ ಬ್ರಾಹ್ಮಣ ಮತ್ತು ಛಾಂದೋಗ್ಯ ಉಪನಿಷತ್ತು ಮುಂತಾದುವು ಈ ಶಾಖೆಗೆ ಸೇರಿವೆ. ರಾಣಾಯನೀಯ ಶಾಖೆ ಕೌಥುಮ ಶಾಖೆಗಿಂತ ನೇರ ಭಿನ್ನವಾದುದಾಗಿಲ್ಲ. ಮಂತ್ರಗಣನೆಯ ವಿಚಾರದಲ್ಲಿ ಇವೆರಡೂ ಒಂದೇ ಆಗಿವೆ. ಉಚ್ಚಾರಣೆಯಲ್ಲಿ ಹಲ ಕೆಲವು ವ್ಯತ್ಯಾಸಗಳು ತಲೆದೋರಿವೆ. ಈ ಶಾಖೆಗೆ ಸೇರಿದಂತಹ ಸಾತ್ಯಮುಗ್ರಿ ಎಂಬ ಶಾಖೆ ಬಹಳ ಹಿಂದಿನಿಂದ ಪ್ರಸಿದ್ಧವಾಗಿತ್ತೆಂಬುದು ಮಹಾಭಾಷ್ಯ (1-1-4,48)ದಿಂದಲೂ ಗೊತ್ತಾಗುತ್ತದೆ. ಜೈಮಿನೀಯ ಶಾಖೆಯ ಸಂಹಿತೆ, ಬ್ರಾಹ್ಮಣಾದಿಗಳೂ ಉಪಲಬ್ಧವಾಗಿವೆ. ಇದರಲ್ಲಿ ಕೌಥುಮಶಾಖೆಗಿಂತ 182 ಮಂತ್ರಗಳು ಕಡಮೆಯಾಗಿವೆ. ಇವೆರಡರಲ್ಲಿ ಪಾಠಬೇಧಗಳೂ ಅನೇಕವಿವೆ. ಕೌಥುಮೀಯ ಸಂಹಿತೆಯ ಉತ್ತರಾರ್ಚಿಕೆಯಲ್ಲಿ ಉಪಲಬ್ಧವಾಗಿಲ್ಲದ ಅನೇಕ ಮಂತ್ರಗಳು ಇದರ ಉತ್ತರಾರ್ಚಿಕೆಯಲ್ಲಿವೆ. ಜೈಮಿನಿ ಶಾಖೆಯಲ್ಲಿನ ಸಾಮಗಾನಗಳೂ ಕೌಥುಮ ಶಾಖೆಗಿಂತ ಸುಮಾರು ಒಂದು ಸಾವಿರ ಹೆಚ್ಚಾಗಿವೆ. ಕೌಥುಮಗಾನ 2722 ಆದರೆ ಜೈಮಿನೀಯಗಾನ 3681ರಷ್ಟಿವೆ. ತಲವಕಾರಶಾಖೆಯು ಈ ಶಾಖೆಯ ಉಪಶಾಖೆ. ಈ ತಲವಕಾರರು ಜೈಮಿನಿಯ ಶಿಷ್ಯರಾಗಿದ್ದರು. ಚರಣವ್ಯೂಹದಲ್ಲಿ ಸಾಮಸಂಖ್ಯೆ ಹಾಗೂ ಗಾಯನ ಸಂಖ್ಯೆಯನ್ನು ಕೆಳಗೆ ಕೊಟ್ಟಿರುವಂತೆ ಹೇಳಿದೆ:

'ಅಷ್ಟೌ ಸಾಮ ಸಹಸ್ರಾಣಿ ಛಂದೋಗಾರ್ಚಿಕ ಸಂಹಿತಾ |
ಗಾನಾನಿ ತಸ್ಯ ವಕ್ಷ್ಯಾಮಿ ಸಹಸ್ರಾಣಿ ಚತುರ್ದಶ |
ಅಷ್ಟೌ ಶತಾನಿ ಜ್ಞೇಯಾನಿ ದಶೋತ್ತರ ದಶ್ಯೈವ ಚ |
ಬ್ರಾಹ್ಮಣಾಂ ಚೋಪನಿಷದಂ ಸಹಸ್ರಂ ತ್ರಿತಯಂ ತಥಾ '|| (ಚರಣವ್ಯೂಹೇ)

ಎಂಟು ಸಹಸ್ರ ಸಾಮಗಳೂ, 14820 ಸಾಮಗಾಯನಗಳೂ ಇದ್ದವೆಂದು ಇದರಿಂದ ಗೊತ್ತಾಗುತ್ತದೆ. ಸಾಮವೇದದ ಇತರ ಶಾಖೆಗಳ ಸಾಮಸಂಖ್ಯೆಗಳನ್ನೂ ಕೂಡಿಸಿದರೆ ಈ ಸಂಖ್ಯೆ ಆಗಬಹುದೆಂದು ತೋರುತ್ತದೆ.

## ಸಾಮಸಂಹಿತಾ ವಿಭಾಗಗಳು

ಸಾಮವೇದದಲ್ಲಿ ಆರ್ಚಿಕಾ ಮತ್ತು ಉತ್ತರಾರ್ಚಿಕಾ ಎಂಬ ಎರಡು ಭಾಗಗಳಿವೆ. ಆರ್ಚಿಕಾ ಎಂದರೆ ಋಕ್ಕುಗಳ ಸಮೂಹವೆಂದರ್ಥ. ಪೂರ್ವಾರ್ಚಿಕೆಯಲ್ಲಿ ಆರು ಪ್ರಪಾಠಗಳು ಅಥವಾ ಅಧ್ಯಾಯಗಳಿವೆ. ಒಂದೊಂದು ಖಂಡದಲ್ಲಿಯೂ ಒಂದೊಂದು 'ದಶತಿ' ಇದೆ. ಒಂದೊಂದು ದಶತಿಯಲ್ಲಿ ಅನೇಕಾನೇಕ ಋಕ್ಕುಗಳಿವೆ. ದಶತಿ ಎಂಬ ಶಬ್ದ ಸೂಚಿಸುವಂತೆ ಹತ್ತೇ ಋಕ್ಕುಗಳಿರಬೇಕೆಂಬ ನಿರ್ಬಂಧವಿಲ್ಲ. ಕೆಲವು ದಶತಿಗಳಲ್ಲಿ ಹತ್ತಕ್ಕೂ ಕಡಮೆ ಸಂಖ್ಯೆಯ ಮಂತ್ರಗಳಿವೆ. ಮತ್ತೆ ಕೆಲವಲ್ಲಿ ಹತ್ತಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಋಕ್ಕುಗಳಿವೆ. ಒಂದೊಂದು ದಶತಿಯಲ್ಲಿನ ಮಂತ್ರಗಳೆಲ್ಲಾ ಒಂದೇ ಛಂದಸ್ಸಿನಲ್ಲಿದ್ದು ಒಂದೇ ದೇವತೆಗೇ ಸಂಬಂಧಿಸಿರುತ್ತವೆ. ಭಿನ್ನಭಿನ್ನ ಋಷಿಗಳಿಂದ ದೃಷ್ಟವಾಗಿ ಋಗ್ವೇದದ ಬೇರೆ ಬೇರೆ ಮಂಡಲಗಳಲ್ಲಿರುವ ಮಂತ್ರಗಳನ್ನೂ

ಅವು ಒಂದೇ ದೇವತೆಗೆ ಅನ್ವಯಿಸಿದಂತೆ ಆರಿಸಿ ಈ ದಶತಿಗಳಲ್ಲಿ ಒಂದುಗೂಡಿಸಲಾಗಿದೆ.

ಪ್ರಥಮ ಪ್ರಪಾಠಕದಲ್ಲಿ ಅಗ್ನಿದೇವತಾಕವಾದ ಮಂತ್ರಗಳ ಸಂಕಲನವಿರುವುದರಿಂದ ಇವಕ್ಕೆ ಆಗ್ನೇಯ ಕಾಂಡವೆಂಬ ಹೆಸರು ಬಂದಿದೆ.

ಎರಡನೆಯ ಪ್ರಪಾಠಕ, ಮೂರು ಮತ್ತು ನಾಲ್ಕನೆಯ ಪ್ರಪಾಠಕಗಳು ಇಂದ್ರ ಪರವಾಗಿವೆ. ಆದ್ದರಿಂದ ಇವಕ್ಕೆ ಐಂದ್ರಪರ್ವವೆಂಬ ಹೆಸರಿದೆ.

ಪಂಚಮಾಧ್ಯಾಯಕ್ಕೆ ಪವಮಾನ ಪರ್ವವೆಂಬ ಹೆಸರಿದೆ. ಇಲ್ಲಿನ ಮಂತ್ರಗಳೆಲ್ಲಾ ಸೋಮದೇವತಾಕವಾದವು. ಋಗ್ವೇದದ ಒಂಭತ್ತನೇ ಮಂಡಲದ ಮಂತ್ರಗಳು ಇಲ್ಲಿ ಅಧಿಕವಾಗಿವೆ.

ಈ ಐದು ಅಧ್ಯಾಯಗಳ ಋಕ್ಕುಗಳಿಗೆ 'ಗ್ರಾಮಗಾನ'ವೆಂಬ ಹೆಸರುಂಟು. ಆರನೇ ಅಧ್ಯಾಯಕ್ಕೆ ಆರಣ್ಯಪರ್ವವೆಂಬ ಹೆಸರು ಕೊಡಲಾಗಿದೆ. ಅರಣ್ಯದಲ್ಲಿ ಗಾನ ಮಾಡಲೆಂದೇ ವಿಧಿಸಲ್ಪಟ್ಟಿರುವ ಆರನೆಯ ಪ್ರಪಾಠಕಕ್ಕೆ ಅರಣ್ಯಗಾನವೆಂಬ ಹೆಸರು ಬಂದಿದೆ. ಇದರ ಕೊನೆಯಲ್ಲಿ 'ಮಹಾನಾಮ್ನೀ' ಎಂಬ ಹೆಸರುಳ್ಳ 10 ಋಕ್ಕುಗಳು ಪರಿಶಿಷ್ಟವಾಗಿವೆ. ಇವುಗಳೆಲ್ಲ ಸೇರಿ ಪೂರ್ವಾರ್ಚಿಕೆಯಲ್ಲಿ 650 ಮಂತ್ರಗಳಿವೆ. ಇವುಗಳನ್ನು ಕೆಳಗೆ ಸೂಚಿಸಿದೆ :

| ಪ್ರಪಾಠಕ | ಕಾಂಡ | ದಶತಿ | ಋಕ್ಕುಗಳು |
|---|---|---|---|
| 1 ನೇ | ಆಗ್ನೇಯ ಕಾಂಡ | 10 | 96 |
| 2 ನೇ | ಐಂದ್ರಪರ್ವ | 10 | 97 |
| 3 ನೇ | " | 10 | 99 |
| 4 ನೇ | " | 10 | 98 |
| 5 ನೇ | ಪವಮಾನಪರ್ವ | 10 | 96 |
| 6 ನೇ | ಆರಣ್ಯಕಪರ್ವ | 9 | 99 |
| | ಆರಣ್ಯಕಾಂಡ | 5 | 55 |
| | ಮಹಾನಾಮ್ನೀ | | 10 |
| | ಒಟ್ಟು | 64 | 650 |

ಉತ್ತರಾರ್ಚಿಕೆಯಲ್ಲಿ 9 ಪ್ರಪಾಠಕಗಳಿವೆ. ಇವುಗಳಲ್ಲಿ ಮೊದಲಿನ ನಾಲ್ಕು ಪ್ರಪಾಠಕಗಳಲ್ಲಿ ಎರಡೆರಡು ಪ್ರಪಾಠಕಾರ್ಧಗಳಿವೆ. ಕೊನೆಯ ನಾಲ್ಕು ಪ್ರಪಾಠಕಗಳಲ್ಲಿ ಮೂರು ಮೂರು ಪ್ರಪಾಠಕಾರ್ಧಗಳಿವೆ. ಇವು ರಾಣಾಯನೀಯಾಶಾಖೆಗನುಸಾರವಾಗಿವೆ. ಉತ್ತರಾರ್ಚಿಕೆಯಲ್ಲಿ ಸಮಗ್ರವಾಗಿ 1225 ಮಂತ್ರಗಳಿವೆ. ಒಟ್ಟು 1875 ಮಂತ್ರಗಳಿವೆ ಎರಡು ಭಾಗಗಳಿಂದಲೂ ಸಾಮವೇದ ಸಂಹಿತೆಯಲ್ಲಿ ಋಕ್ಕುಗಳೇ ಇವೆ ಎಂದು ಹೇಳಲಾಯಿತಷ್ಟೆ ? ಆದರೆ ಈಗ ಉಪಲಬ್ಧವಾಗಿರುವ ಶಾಕಲ ಸಂಹಿತೆಯಲ್ಲಿಲ್ಲದ ಅನೇಕ ಮಂತ್ರಗಳಿವೆ. ಇವು ಬೇರೆ ಶಾಖೆಗಳ ಸಂಹಿತೆಗಳಿಂದ ತೆಗೆದುಕೊಂಡವಾಗಿರಬಹುದು.

ಕೌಥುಮಶಾಖೆಯ ಉತ್ತರಾರ್ಚಿಕೆಯಲ್ಲಿರುವ ಮಂತ್ರಗಳು ಹೀಗಿವೆ:

| ಪ್ರಪಾಠಕ | ಪ್ರಪಾಠಕಾರ್ಧ | ಖಂಡ | ಋಕ್ಕುಗಳು |
|---|---|---|---|
| 1 | 2 | 12 | 135 |
| 2 | 2 | 12 | 114 |
| 3 | 2 | 14 | 135 |
| 4 | 2 | 13 | 114 |
| 5 | 2 | 21 | 129 |
| 6 | 3 | 15 | 147 |
| 7 | 3 | 12 | 153 |
| 8 | 3 | 13 | 153 |
| 9 | 3 | 9 | 120 |
| | ಮಹಾನಾಮ್ನ್ಯಾರ್ಚಿಕ | | 9 |
| | | ಒಟ್ಟು | 1209 |

ಪೂರ್ವಾರ್ಚಿಕೆಯಲ್ಲಿ ಬರುವ 267 ಮಂತ್ರಗಳು ಉತ್ತರಾರ್ಚಿಕೆಯಲ್ಲಿ ಪುನರುಲ್ಲಿಖಿತವಾಗಿವೆ. ಪುನರಾವೃತ್ತವಾಗಿರುವ ಮಂತ್ರಗಳನ್ನು ಬಿಟ್ಟರೆ ಋಗ್ವೇದದ 1504 ಮಂತ್ರಗಳು ಸಾಮವೇದದಲ್ಲಿ ತೆಗೆದುಕೊಳ್ಳಲ್ಪಟ್ಟಿವೆ. 99 ಮಂತ್ರಗಳು ಹೊಸದಾಗಿವೆ ಸಾಮಸಂಹಿತೆಯಲ್ಲಿ. ಒಟ್ಟು ಮಂತ್ರ ಸಂಖ್ಯೆಯನ್ನು ಕೆಳಕಂಡಂತೆ ಗುರುತಿಸಬಹುದು:

| | | | | |
|---|---|---|---|---|
| ಋಗ್ವೇದದ ಋಕ್ಕುಗಳು — | 1504 + | ಪುನರುಕ್ತ | 267 = | 1771 |
| ನೂತನವಾದ ಋಕ್ಕುಗಳು — | 99 + | " | 5 = | 104 |
| ಒಟ್ಟು ಮಂತ್ರಗಳ ಸಂಖ್ಯೆ — | 1603 + | | 272 = | 1875 |

ರಾಣಾಯನೀಯ ಶಾಖೆಯ ಸಂಹಿತೆಯಲ್ಲಿ ಪುನರುಕ್ತಗಳನ್ನು ಬಿಟ್ಟರೆ 1549 ಮಂತ್ರಗಳಿವೆ. ಇವುಗಳಲ್ಲಿ 54 ಮಂತ್ರಗಳ ವ್ಯತ್ಯಾಸವಿದೆ.

**ಸಾಮಗಾನ ಪದ್ಧತಿ**

ಸಾಮಯೋನಿ ಮಂತ್ರಗಳನ್ನಾಶ್ರಯಿಸಿ ಗಾನಮಂತ್ರಗಳ ರಚನೆಯನ್ನು ಮಾಡಿದ್ದಾರೆ. ಇವು ನಾಲ್ಕು ಬಗೆಯಾಗಿವೆ. ಅವು ಯಾವುವೆಂದರೆ:

1. ಗ್ರಾಮಗೇಯ ಗಾನ — ಇದನ್ನೇ ಪ್ರಕೃತಿಗಾನವೆಂದೂ, ವೇಯಗಾನವೆಂದೂ ಕರೆಯುವುದುಂಟು.
2. ಆರಣ್ಯಕ ಗಾನ
3. ಊಹ ಗಾನ
4. ಊಹ್ಯಗಾನ — ಇದಕ್ಕೇ ರಹಸ್ಯಗಾನವೆಂದೂ ಹೆಸರಿದೆ.

ವೇಯಗಾನವೆಂಬುದು ಪೂರ್ವಾರ್ಚಿಕೆಯ ಮೊದಲ ಐದು ಅಧ್ಯಾಯಗಳ ಮಂತ್ರಗಳನ್ನಾಶ್ರಯಿಸಿದೆ. ಪೂರ್ವಾರ್ಚಿಕೆಯ ಆರನೇ ಅಧ್ಯಾಯವಾದ ಆರಣ್ಯಕಪರ್ವದ ಮಂತ್ರಗಳಿಗೆ ಆರಣ್ಯಕಗಾನವುಂಟು. ಉತ್ತರಾರ್ಚಿಕೆಯಲ್ಲಿನ ಮಂತ್ರಗಳಿಗೆ 'ಊಹಗಾನ' ಮತ್ತು ಊಹ್ಯ ಗಾನಗಳು ಸಂಭವಿಸುತ್ತವೆ. ಈ ಗಾನಗಳು ಅನೇಕವಿವೆ. ಈ ಗಾನ ಸಂಖ್ಯೆಗಳು ಬೇರೆ ಬೇರೆ

ಶಾಖೆಗಳಲ್ಲಿ ಬೇರೆ ಬೇರೆಯಾಗಿವೆ. ಜೈಮಿನಿಯ ಶಾಖೆಯಲ್ಲಿನ ಗಾನಸಂಖ್ಯೆಗಳು ಉಳಿದ ಶಾಖೆಗಳಿಗಿಂತ ಅಧಿಕವಾಗಿವೆ.

| | | ವೇಯ. | ಅರಣ್ಯ. | ಊಹ. | ಊಹ್ಯ. |
|---|---|---|---|---|---|
| ಕೌಥುಮೀಯಗಾನ. | 2722 = | 1197 | - 294 | - 1026 | - 205 |
| ಜೈಮಿನೀಯಗಾನ. | 3681 = | 1232 | - 291 | - 1802 | - 356 |

ಈ ನಾಲ್ಕು ಬಗೆಯ ಗಾನಗಳಲ್ಲಿ ವೇಯಗಾನ ಮತ್ತು ಅರಣ್ಯಗಾನಗಳು ಯೋನಿಗಾನಗಳು ಅಥವಾ ಪ್ರಕೃತಿಗಾನಗಳು. ಊಹಗಾನ ಮತ್ತು ಊಹ್ಯಗಾನಗಳು ವಿಕೃತಿಗಾನಗಳು. ಊಹಗಾನಕ್ಕೆ ವೇಯಗಾನ ಪ್ರಕೃತಿ ; ಊಹ್ಯಕ್ಕೆ ಅರಣ್ಯಗಾನ. ವೇಯಗಾನದಲ್ಲಿ ಪ್ರಯುಕ್ತವಾದ ಸ್ವರರಾಗಾದಿಗಳನ್ನಾಶ್ರಯಿಸಿಯೇ ಊಹಗಾನವನ್ನು ನಿರ್ಮಿಸಲಾಗಿದೆ. ಹಾಗೆಯೇ ಊಹ್ಯಗಾನದ ರಚನೆಗೆ ಅರಣ್ಯಗಾನದ ಸ್ವರರಾಗಾದಿಗಳು ಆಶ್ರಯವಾಗಿವೆ. ವೇಯಗಾನಕ್ಕೆ ಗ್ರಾಮಗೇಯಗಾನವೆಂಬ ಹೆಸರಿರುವುದೇ ಅದು ಸಮಾಜದಲ್ಲಿ ಗಾನ ಮಾಡಲ್ಪಡಬೇಕಾದುದೆಂಬುದನ್ನು ಸೂಚಿಸುವುದು. ಆದರೆ ಅರಣ್ಯಗಾನದಲ್ಲಿ ಅಂತರ್ಗತವಾದ ಸಾಮಗಳ ಗಾನ ಅರಣ್ಯದಲ್ಲಿಯೇ ಮಾಡಲ್ಪಡಬೇಕಾದವಾಗಿವೆ. ಅರಣ್ಯಗಾನದ ಸ್ತೋಮ ವಿಚಿತ್ರವೂ, ವಿಲಕ್ಷಣವೂ, ಪರಮ ಪವಿತ್ರವೂ ಆದಕಾರಣ ಅದನ್ನು ಅರಣ್ಯದ ಪವಿತ್ರವಾದ ವಾತಾವರಣದಲ್ಲಿ ಹಾಡಿದರೆ ಉಚಿತವಾದ ಪ್ರಭಾವವುಂಟಾಗುವುದು. ಗ್ರಾಮದಲ್ಲಿ ಇದನ್ನು ಹಾಡಿದರೆ ಅನರ್ಥ ಸಂಭವಿಸು ವುದೆಂದು ಹೇಳಲಾಗಿದೆ. ಊಹಗಾನ ಸೋಮಯಾಗದ ಸಂದರ್ಭಗಳಲ್ಲಿ ಹಾಡಬೇಕಾದ ಸಾಮಗಳ ಗಾನ. ಊಹ್ಯಗಾನವೆಂಬುದಕ್ಕೆ ಊಹ್ಯ ರಹಸ್ಯಗಾನವೆಂದು ಹೇಳುವಂತೆ ರಹಸ್ಯಾತ್ಮಕವಾಗಿದೆ ಅರಣ್ಯದಂತೆಯೇ. ಆದ್ದರಿಂದ ಸರ್ವ ಸಾಧಾರಣವಾದ ಸಾಮಕ್ಕೆ ಸಮನಾಗಿ ಇದನ್ನು ಹಾಡಕೂಡದೆಂದು ವಿಧಿಸಲಾಗಿದೆ.

ಸಾಮವೇದ ಭಾರತೀಯ ಸಂಗೀತ ಶಾಸ್ತ್ರಕ್ಕೆ ಮೂಲ. ಸಾಮವೇದವನ್ನು ಸಾಮಶಿಕ್ಷೆಗಳಿಗನುಸಾರವಾಗಿ ಶಾಸ್ತ್ರೀಯವಾಗಿ ಹಾಡಿದಾಗ ಅನಿರ್ವಚನೀಯವಾದ ಆನಂದವುಂಟಾಗುತ್ತದೆ. ನಾರದಶಿಕ್ಷೆ ಈ ದೃಷ್ಟಿಯಿಂದ ಬಹಳ ಮಹತ್ವಪೂರ್ಣವಾದ ಕೃತಿ. ಇದರಲ್ಲಿ ಸಾಮದ ಸ್ವರಮಂಡಲದ ವಿಚಾರವಿದೆ. ಸಪ್ತಸ್ವರಗಳೂ, ಮೂರು ಗ್ರಾಮಗಳೂ, 21 ಮೂರ್ಛನೆಗಳೂ, 49 ತಾನಗಳೂ ಇಲ್ಲಿ ಉಲ್ಲಿಖಿತವಾಗಿವೆ. ಈ ಸಪ್ತಸ್ವರಗಳನ್ನು ವೇಣುಸ್ವರದೊಡನೆ ಹೋಲಿಸಿದೆ ಕೆಳಕಂಡ ಹಾಗೆ :

| ಸಾಮಸ್ವರ | ವೇಣುಸ್ವರ | |
|---|---|---|
| 1. ಪ್ರಥಮ | ಮಧ್ಯಮ | ; ಮ |
| 2. ದ್ವಿತೀಯ | ಗಾಂಧಾರ | ; ಗ |
| 3. ತೃತೀಯ | ಋಷಭ | ; ರಿ |
| 4. ಚತುರ್ಥ | ಷಡ್ಜ | ; ಸ |
| 5. ಪಂಚಮ | ನಿಷಾದ | ; ನಿ |
| 6. ಷಷ್ಠ | ಧೈವತ | ; ಧ |
| 7. ಸಪ್ತಮ | ಪಂಚಮ | ; ಪ |

ಈ ಸಂಖ್ಯೆಗಳನ್ನು ಆಯಾಯಾಸ್ವರಗಳನ್ನು ಸೂಚಿಸಲು ಸಾಮಯೋನಿ ಮಂತ್ರಗಳ ಮೇಲ್ಭಾಗದಲ್ಲಿ ಬರೆಯುವುದುಂಟು. ಇತರ ವೇದ ಮಂತ್ರಗಳ ಉದಾತ್ತಾನುದಾತ್ತಾದಿ ಸ್ವರಗಳನ್ನು ಸೂಚಿಸುವಂತೆಯೇ ಸಾಮಯೋನಿ ಮಂತ್ರಗಳನ್ನು ಸಾಮಗಾನದ ರೂಪ

ದಲ್ಲಿಡುವಾಗ ಸಂಗೀತಕ್ಕನುಕೂಲವಾದ ಅನೇಕ ಶಾಬ್ದಿಕ ಪರಿವರ್ತನೆಗಳಾಗುತ್ತವೆ. ಇವುಗಳಿಗೆ ಸಾಮವಿಕಾರಗಳೆಂದು ಹೆಸರು. ಇವು ಆರು ಬಗೆಯಾಗಿವೆ. ಇವು ಯಾವುವೆಂದರೆ:

1. ವಿಕಾರ—ಇದು ಶಬ್ದದ ಪರಿವರ್ತನೆಯೇ. ಅಗ್ನೇ ಎನ್ನುವ ಬದಲು 'ಓಗ್ನಾಯಿ' ಎನ್ನುವುದು ಇದಕ್ಕೆ ನಿದರ್ಶನ.

2. ವಿಶ್ಲೇಷಣ—ಒಂದು ಪದವನ್ನು ಪೃಥಕ್ಕರಣ ಮಾಡುವುದೇ ವಿಶ್ಲೇಷಣ. ವೀತಯೇ ಎಂಬಲ್ಲಿ ಅದನ್ನು ಬೇರ್ಪಡಿಸಿ 'ವೋಯಿತೋಯಾ 2 ಯಿ' ಎಂದು ಹೇಳುವುದು ವಿಶ್ಲೇಷಣ.

3. ವಿಕರ್ಷಣ—ಒಂದು ಸ್ವರವನ್ನು ದೀರ್ಘಕಾಲದವರೆಗೆ ವಿಭಿನ್ನವಾಗಿ ಉಚ್ಚರಿಸುವುದು ವಿಕರ್ಷಣ. ಯೇ ಎಂಬುದನ್ನು 'ಯಾ 23ಯಿ' ಎಂದು ಹೇಳುವುದು ಇದಕ್ಕೆ ನಿದರ್ಶನ.

4. ಅಭ್ಯಾಸ—ಪದವೊಂದನ್ನು ಮತ್ತೆ ಮತ್ತೆ ಉಚ್ಚರಿಸುವುದು. 'ತೋಯಾಯಿ' ಎಂಬುದನ್ನು ಎರಡು ಬಾರಿ ಹೇಳುವುದು ಇದಕ್ಕೆ ಉದಾಹರಣೆ.

5. ವಿರಾಮ—ಯಾವುದಾದರೂ ಪದದ ಸಮೀಪದಲ್ಲಿ ನಿಲ್ಲಿಸುವುದು. 'ಗೃಣಾನೋ ಹವ್ಯದಾತಯೇ' ಎಂಬಲ್ಲಿ 'ಹ' ಎಂಬಲ್ಲಿ ವಿರಾಮವನ್ನು ತೆಗೆದುಕೊಳ್ಳುವುದು ಇದಕ್ಕೆ ನಿದರ್ಶನ.

6. ಸ್ತೋಭ—ಗಾನಾನುಕೂಲವಾದ ಪದಗಳಿಗೆ ಸ್ತೋಭವೆಂದು ಹೆಸರು. ಔ, ಹೋವಾ, ಹಾವು, ಆ ಮುಂತಾದುವು.

ಸಾಮ ಎಂಬ ಶಬ್ದ ಸಾಮಾನ್ಯವಾಗಿ ಗೀತಿ ಅಥವಾ ಗಾನ ಎಂಬ ಅರ್ಥವನ್ನು ಕೊಡುತ್ತದೆ. ಈ ಗಾನದಲ್ಲಿ ಅನೇಕ ವಿಶೇಷಗಳುಂಟು. ರಥಂತರ, ಬೃಹತ್ ಮೊದಲಾದ ಹೆಸರುಗಳು ವಿಶಿಷ್ಟವಾದ ಗಾನವಿಶೇಷಗಳನ್ನು ಸೂಚಿಸುತ್ತವೆ. ಈ ಹೆಸರುಗಳಾದರೂ ಅವುಗಳನ್ನು ಪದೇಶಿಸಿದ ಆಚಾರ್ಯರುಗಳ ಸಂಬಂಧದ ಮೂಲಕ ಬಂದಿವೆ. ಸಾಮಗಾನ ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತೀ, ತ್ರಿಷ್ಟುಪ್, ಜಗತೀ, ಶಕ್ವರೀ, ಅತಿಶಕ್ವರೀ, ಅಷ್ಟಿ ಮೊದಲಾದ ಎಲ್ಲ ಛಂದಸ್ಸುಗಳ ಮಂತ್ರಗಳಿಗೂ ಇದೆ.

ಯಜ್ಞದಲ್ಲಿ ಉದ್ಗಾತೃಗಣದವರು ಸಾಮಗಾನ ಮಾಡುವವರು. ಈ ಗಣದಲ್ಲಿ ನಾಲ್ಕು ಋತ್ವಿಕ್ಕುಗಳಿರುತ್ತಾರೆ. ಇವರು ಕೆಲವು ಭಾಗಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿಯೂ ಕೆಲವು ಭಾಗಗಳನ್ನು ಎಲ್ಲರೂ ಒಟ್ಟಾಗಿಯೂ ಹಾಡುವರು. ಶ್ರೌತಸೂತ್ರಗಳು ಈ ಗಾನ ವಿಧಾನವನ್ನು ವಿವರಿಸುತ್ತದೆ. ಸೋಮಯಾಗದಲ್ಲಿ ಭಾಗವಹಿಸುವ ಈ ಋತ್ವಿಕ್ಕುಗಳು ಈ ವಿಧಾನಗಳಿಗನು ಗುಣವಾಗಿ ಸಾಮಗಾನ ಮಾಡುವರು.

ಪೂರ್ವಾರ್ಚಿಕೆ ಮತ್ತು ಉತ್ತರಾರ್ಚಿಕೆಗಳಿಗಿರುವ ಸಂಬಂಧವನ್ನು ನಾವು ವಿಚಾರಿಸುವುದಾವಶ್ಯಕ. ಪೂರ್ವಾರ್ಚಿಕೆಯಲ್ಲಿ ಅನೇಕ ಸಾಮಗಳಿಗೆ ಯೋನಿಭೂತವಾದ ಋಕ್ಕುಗಳಿವೆ. ಈ ಪೂರ್ವಾರ್ಚಿಕೆಯ ಮಂತ್ರಗಳಲ್ಲಿ ಒಂದೊಂದೂ ಉತ್ತರಾರ್ಚಿಕೆಯ ಪ್ರಗಾಥಗಳ ಅಥವಾ ಮೂರು ನಾಲ್ಕು ಋಕ್ಕುಗಳ ಸೂಕ್ತಗಳಲ್ಲಿ ಪ್ರಾಯಃ ಮೊದಲನೆಯ ಮಂತ್ರವಾಗಿರುತ್ತದೆ. ಉತ್ತರಾರ್ಚಿಕೆಯಲ್ಲಿ ಮೂರು ಅಥವಾ ನಾಲ್ಕು ಮಂತ್ರಗಳ ಸೂಕ್ತವಿರುತ್ತದೆ. ಇದಕ್ಕೆ ತೃಚ ಮತ್ತು ಪ್ರಗಾಥ ಎಂದು ಹೆಸರು. ಈ ತೃಚದ ಅಥವಾ ಪ್ರಗಾಥದ ಮೊದಲ ಮಂತ್ರ ಪೂರ್ವಾರ್ಚಿಕೆಯ ಯಾವುದಾದರೊಂದು ಮಂತ್ರವಾಗಿರುತ್ತದೆ. ಇವೆರಡು ಭಾಗಗಳ ಸಂಬಂಧದ ವಿಚಾರದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಉತ್ತರಾರ್ಚಿಕೆಯ ನಂತರ ಪೂರ್ವಾರ್ಚಿಕೆಯೆಂದು ಪ್ರತಿಪಾದಿಸಿದರೆ ಮತ್ತೆ ಕೆಲವರು ಪೂರ್ವಾರ್ಚಿಕೆ ಪ್ರಾಚೀನತರವೆಂದೂ ಉತ್ತರಾರ್ಚಿಕೆ ಅದರ ನಂತರ ಬಂದುದೆಂದೂ ಹೇಳುತ್ತಾರೆ. ಸಾಮ ವಿಧಾನ ಬ್ರಾಹ್ಮಣದಲ್ಲಿ

ಉತ್ತರಾರ್ಚಿಕೆಯ ಮಂತ್ರಗಳ ಉದ್ಧರಣವಿಲ್ಲದಿರುವುದರಿಂದಲೂ ಪೂರ್ವಾರ್ಚಿಕೆಯ ಉಪಾಂತ್ಯ ಋಕ್ಕು ಸಾಮವೇದದ ಅಂತಿಮಋಕ್ಕೆಂದು ಅಥರ್ವಪರಿಶಿಷ್ಟದಿಂದ ತಿಳಿದುಬರುವುದರಿಂದಲೂ ಪೂರ್ವತರವೆಂದು ಡಾ. ಓಲ್ಡೆನ್‌ಬರ್ಗ್ ಮುಂತಾದವರು ಸಿದ್ಧಾಂತಿಸುತ್ತಾರೆ. ಯಾಗದಲ್ಲಿ ಪ್ರಯುಕ್ತವಾದ ಮಂತ್ರಗಳನ್ನು ಉದ್ಗಾತೃಗಣ ಋಗ್ವೇದದಿಂದಲೇ ನೇರವಾಗಿ ತೆಗೆದುಕೊಳ್ಳುತ್ತಿದ್ದರೆಂದೂ, ಕಾಲಕ್ರಮದಲ್ಲಿ ಆ ಮಂತ್ರ ಸಂಗ್ರಹ ಉತ್ತರಾರ್ಚಿಕೆಯ ರೂಪವನ್ನು ಪಡೆಯಿತೆಂದೂ ಡಾ. ಕೌಲೆಂಡರ ಅಭಿಪ್ರಾಯ. ಇವರ ಅಭಿಪ್ರಾಯದಲ್ಲಿ ಊಹಗಾನ ಮತ್ತು ಊಹ್ಯಗಾನಗಳು ಸಾಮವೇದೀಯ ಗ್ರಂಥಗಳಲ್ಲೆಲ್ಲಾ ಪ್ರಾಚೀನತಮವಾದವು. ಆಧುನಿಕ ಪರಿಶೀಲನೆಯ ರೀತಿಯಲ್ಲಿಯೂ ಪೂರ್ವಾರ್ಚಿಕೆ ಉತ್ತರಾರ್ಚಿಕೆಗಿಂತ ಪ್ರಾಚೀನವಾದುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಮೇಲೆ ಮಂತ್ರಗಳಿಗೆ ಸಾಮವುಂಟು ಎಂದು ಹೇಳಲಾಯಿತು. ಯಾವ ಯಾವ ಮಂತ್ರಗಳ ಮೇಲೆ ಸಾಮಗಳಿವೆ ? ಎಷ್ಟು ಸಾಮಗಳಿವೆ ? ಎಂಬ ಪ್ರಶ್ನೆ ಈಗ ಏಳುತ್ತದೆ. ಈ ಪ್ರಶ್ನೆಗೆ ನಿರ್ಧಾರವಾದ ಉತ್ತರವನ್ನು ಪರಂಪರೆಯಿಂದ ಅಧ್ಯಯನ ಮಾಡಿಕೊಂಡು ಬಂದಿರುವ ಸಂಪ್ರದಾಯದಿಂದ ತಿಳಿಯಬೇಕು. ಸಾಮಗಳು ನಿಯತವಾದ ಮಂತ್ರಗಳಿಗೆ ನಿಯತವಾಗಿವೆ. ಅನಿಯತವಾಗಿಲ್ಲ. ಸಾಮವೇದದಲ್ಲಿರುವ ಎಲ್ಲಾ ಮಂತ್ರಗಳಿಗೂ ಸಾಮವಿರಬೇಕೆಂಬ ನಿರ್ಬಂಧವಿಲ್ಲ. ಕೆಲವು ಮಂತ್ರಗಳಿಗೆ ಸಾಮಗಳಿಲ್ಲದೇ ಇರುವುದೂ ಉಂಟು. ಉತ್ತರಾರ್ಚಿಕೆಯಲ್ಲಿಯೇ ಇಂಥ ಮಂತ್ರಗಳು ದೊರೆಯುತ್ತವೆ. 'ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ' 'ಆಶುಃಶಿಶಾನೋ ವೃಷಭೋ ನ ಭೀಮಃ' ಮುಂತಾದ ಮಂತ್ರಗಳಿಗೆ ಯಾವ ಗಾನವನ್ನೂ ಯಾವ ಗಾನ ಗ್ರಂಥಗಳಲ್ಲಿಯೂ ಹೇಳಿಲ್ಲ. ಹೀಗೆ ಕೆಲವು ಮಂತ್ರಗಳಿಗೆ ಸಾಮಗಳಿಲ್ಲದಿರುವುದನ್ನು ಸಂಪ್ರದಾಯದಿಂದ ತಿಳಿದುಕೊಳ್ಳಬೇಕಾಗಿರುವಂತೆ ವಿಶಿಷ್ಟವಾದ ಋಕ್ಕುಗಳಿಗೆ ಎಷ್ಟೆಷ್ಟು ಸಾಮಗಳುಟೆಂಬುದನ್ನೂ ಸಂಪ್ರದಾಯದಿಂದಲೇ ತಿಳಿಯಬೇಕಾಗಿದೆ. ಕೆಲವು ಋಕ್ಕುಗಳಿಗೆ ಹಿಂದೆ ಹೇಳಿದ ನಾಲ್ಕು ಬಗೆಯ ಗಾನಗಳೂ ಸಂಭವಿಸುತ್ತವೆ. ಇವೂ ಅನೇಕ ಪ್ರಕಾರಗಳಲ್ಲಿರುವುದೂ ಉಂಟು.

'ಅಯಂ ಪೂಷಾ ರಯಿರ್ಭಗಃ' (ಸಾ. ಸಂ. 546 ಮತ್ತು 818) ಎಂಬ ಋಕ್ಕಿಗೆ ನಾಲ್ಕು ಬಗೆಯ ಗಾನಗಳೂ ಉಂಟು. ಮತ್ತು ಈ ಮಂತ್ರಕ್ಕಿರುವ ಸಮಗ್ರಸಾಮಗಳ ಸಂಖ್ಯೆ 25. 'ಪುನಾನಃ ಸೋಮ ಧಾರಯಾ' ಎಂಬ (ಸಾ. ಸಂ. 511. ಋ. ಸಂ. 9-107-4) ಋಕ್ಕಿಗೆ 61 ಸಾಮಗಾನಗಳಿವೆ. 'ಪುರೋಜಿತೀ ವೋ ಅಂಧಸಾ' (ಸಾ. ಸಂ. 545) ಎಂಬ ಮಂತ್ರಕ್ಕೆ 59 ಸಾಮಗಾನಗಳುಂಟು. 48 ಗಾನಗಳು 'ಯೋ ಧಾರಯಾ ಪಾವಕಯಾ' (ಸಾ.' ಸಂ. 698) ಎಂಬ ಮಂತ್ರಕ್ಕೆ ಪ್ರಯುಕ್ತವಾಗಿವೆ. 25 ಸಾಮಗಳುಳ್ಳ ಋಕ್ಕುಗಳು ಅಸಂಖ್ಯವಾಗಿವೆ. ಈ ಸಾಮಗಳ ಸಂಖ್ಯೆ ಮತ್ತು ಸ್ಥಿತಿಯ ನಿಯಮಗಳು ಪ್ರಾಚೀನ ಪರಂಪರೆಯಿಂದ ಬಂದಿವೆ.

## ಸ್ತೋಮ ಮತ್ತು ವಿಷ್ಟುತಿ

ಸ್ತೋಮ ಎಂಬುದು ಸ್ತುತಿಯ ಒಂದು ಪ್ರಕಾರಾಂತರ. ಶಸ್ತ್ರ ಮತ್ತು ಸ್ತೋತ್ರ ಎಂಬವು ವೇದಸಾಹಿತ್ಯದಲ್ಲಿ ಪ್ರಸಿದ್ಧವಾಗಿವೆ. ಶಸ್ತ್ರವೆಂಬುದಕ್ಕೆ 'ಅಪ್ರಗೀತ ಮಂತ್ರ ಸಾಧ್ಯಾ ಸ್ತುತಿಃ ಶಸ್ತ್ರಮ್' ಎಂದು ಲಕ್ಷಣವನ್ನು ಹೇಳುತ್ತಾರೆ. ಗಾನಮಾಡಲ್ಪಡದೇ ಇರುವ ಮಂತ್ರದ ದ್ವಾರಾ ಸಂಪಾದಿತವಾದ ಸ್ತುತಿಯು ಶಸ್ತ್ರ. ಸ್ತೋತ್ರವೆನ್ನುವುದರ ಲಕ್ಷಣವನ್ನು 'ಪ್ರಗೀತ ಮಂತ್ರ ಸಾಧ್ಯಾಸ್ತುತಿಃ' ಎಂದು ಹೇಳಿದೆ. ಗಾನಮಾಡಲ್ಪಡುವ ಮಂತ್ರದ್ವಾರಾ ಸಂಪಾದಿತವಾದ ಸ್ತುತಿಯೇ

ಸ್ತೋತ್ರ. ಋಗ್ವೇದದಲ್ಲಿ ಶಸ್ತ್ರಗಳಿವೆ ; ಸಾಮವೇದದಲ್ಲಿ ಸ್ತೋತ್ರಗಳಿವೆ. ಸ್ತೋಮಗಳೂ ಈ ಸ್ತುತಿಗಳ ಮತ್ತೊಂದು ಬಗೆ. ಯಾಗಗಳಲ್ಲಿ ಸ್ತೋಮಗಳನ್ನು ಪ್ರಯೋಗಿಸುತ್ತಿದ್ದರು. ಇವುಗಳ ವರ್ಣನೆ ತಾಂಡ್ಯ ಬ್ರಾಹ್ಮಣದಲ್ಲಿದೆ. ಸ್ತೋಮಗಳು ಒಂಭತ್ತು ಬಗೆಯಾಗಿವೆ. ಅವು ಯಾವುವೆಂದರೆ–ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ, ತ್ರಿಣವ, ತ್ರಯಸ್ತ್ರಿಂಶ, ಚತುರ್ವಿಂಶ, ಚತುಶ್ಚತ್ವಾರಿಂಶ ಮತ್ತು ಅಷ್ಟಚತ್ವಾರಿಂಶ. ಸೋಮವನ್ನು ಪ್ರಾಯಃ ತೃಚಗಳಿಗೆ ಅನ್ವಯಿಸುತ್ತಾರೆ. ನಿರುಕ್ತದಲ್ಲಿ ತ್ರಿಸ್ಥಾನ ದೇವತೆಗಳಿಗೆ ವಿಶಿಷ್ಟವಾದ ಸ್ಥಾನವ್ಯೂಹಗಳಿಗೆ ಅನ್ವಯಿಸುವಂತೆ ಋತುಭಕ್ತಿಶೇಷ, ಛಂದೋಭಕ್ತಿಶೇಷ, ಸ್ತೋಮಭಕ್ತಿಶೇಷ ಮತ್ತು ಪೃಷ್ಠಭಕ್ತಿಶೇಷಗಳನ್ನು ಹೇಳಿರುವುದನ್ನು ಗಮನಿಸಬಹುದು–(ನಿ. 7-11-4ರಿಂದ 7-11-7). ತೃಚವನ್ನು ಎಂದರೆ ಮೂರು ಋಕ್ಕುಗಳ ಸೂಕ್ತವನ್ನು ಮೂರು ಪರ್ಯಾಯದಲ್ಲಿ ಹಾಡುತ್ತಾರೆ ಮತ್ತು ಪ್ರತಿಯೊಂದು ಪರ್ಯಾಯದಲ್ಲಿಯೂ ತೃಚಗಳಿಗನ್ವಯಿಸುವ ಗಾನಗಳ ಆವೃತ್ತಿಯು ನಿಯಮಗಳಿಗನುಸಾರ ಆಗಬೇಕು. ಈ ರೀತಿಯಾಗಿ ಹಾಡುವಾಗ ಮೂರನೇ ಪರ್ಯಾಯದಲ್ಲಿ ಸ್ತೋಮ ಸ್ವರೂಪ ನಿಷ್ಪನ್ನವಾಗುತ್ತದೆ. ಈ ಆವೃತ್ತಿಯಿಂದ ಜನ್ಯವಾದ ಗಾನದ ಪ್ರಕಾರಕ್ಕೆ ವಿಷ್ಟುತಿ (ವಿಶೇಷಸ್ತುತಿ) ಎಂಬ ಸಂಜ್ಞೆ ಉಂಟು. ಮೇಲೆ ಹೇಳಿದ ಒಂಭತ್ತು ಸ್ತೋಮಗಳ ಸಮಗ್ರ ವಿಷ್ಟುತಿಗಳ ವರ್ಣನೆ ತಾಂಡ್ಯ ಬ್ರಾಹ್ಮಣದ ದ್ವಿತೀಯ ಮತ್ತು ತೃತೀಯಾಧ್ಯಾಯಗಳಲ್ಲಿದೆ.

ಸಾಮಗಾನದ ಪದ್ಧತಿ ಬಹಳ ಕಠಿಣವಾದುದು. ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ವಿಶೇಷವಾದ ಅಧ್ಯಯನ ಆವಶ್ಯಕ. ಸಾಮಾನ್ಯವಾಗಿ ಹೇಳುವುದಾದರೆ ಸಾಮಗಾನದಲ್ಲಿ ಐದು ಭಾಗಗಳಿವೆಯೆಂದು ಹೇಳಬಹುದು.

1. ಪ್ರಸ್ತಾವ—ಇದು ಮಂತ್ರದ ಆರಂಭ ಪ್ರಸ್ತೋತೃವೆಂಬುವನು ಇದನ್ನು ಆರಂಭಿಸುತ್ತಾನೆ. ಇದರ ಆರಂಭದಲ್ಲಿ ಹುಂಕಾರವಿರುತ್ತದೆ.

2. ಉದ್ಗೀಥ—ಉದ್ಗಾತೃವೆಂಬ ಪ್ರಧಾನ ಋತ್ವಿಕ್ ಇದನ್ನು ಹಾಡುತ್ತಾನೆ. ಇದರ ಆರಂಭದಲ್ಲಿ ಓಂಕಾರವಿರುತ್ತದೆ.

3. ಪ್ರತಿಹಾರ—ಇದನ್ನು ಪ್ರತಿಹರ್ತಾ ಎಂಬುವನು ಹಾಡುವನು.

4. ಉಪದ್ರವ—ಇದನ್ನು ಉದ್ಗಾತೃ ಹಾಡುತ್ತಾನೆ.

5. ನಿಧನ—ಇದು ಮಂತ್ರದ ಕೊನೆಯ ಪದಗಳನ್ನೋ ಅಥವಾ ಓಂಕಾರವನ್ನೋ ಒಳಗೊಂಡಿರುತ್ತದೆ. ಇದನ್ನು ಪ್ರಸ್ತೋತಾ, ಉದ್ಗಾತಾ ಮತ್ತು ಪ್ರತಿಹರ್ತಾಗಳು ಮೂವರೂ ಕೂಡಿಯೇ ಹಾಡುವರು.

ನಿದರ್ಶನಾರ್ಥವಾಗಿ ಮಂತ್ರವೊಂದನ್ನು ಈಗ ಉದಾಹರಿಸಬಹುದು:

> 'ಅಗ್ನ ಆಯಾಹಿ ವೀತಯೇ ಗೃಣಾನೋ ಹವ್ಯದಾತಯೇ |
> ನಿಹೋತಾ ಸತ್ಸಿ ಬರ್ಹಿಷಿ ||'

ಇದರ ಸಾಮಗಾನ ಪ್ರಕಾರ ಕೆಳಗೆ ಕಂಡಂತಿರುವುದು :

1. ಪ್ರಸ್ತಾವ—'ಹುಂ ಓಗ್ನಾ ಈ

2. ಉದ್ಗೀಥ—ಓಂ ಆಯಾ ಹಿ ವೀತಯೇ ಗೃಣಾನೋ ಹವ್ಯದಾ ತಯೇ |

3. ಪ್ರತಿಹಾರ—ನಿಹೋತಾ ಸತ್ಸಿ ಬರ್ಹಿಷಿ ಓಂ. ಇದರಲ್ಲಿ ಎರಡು ಬಗೆಗಳಿವೆ, ಎರಡು ರೀತಿಯಲ್ಲಿ ಅವುಗಳನ್ನು ಹಾಡಲಾಗುವುದು.

4. ಉಪದ್ರವ—ನಿ ಹೋತಾಸತ್ಸಿ ಬ
5. ನಿಧನ—ರ್ಹಿಷಿ ಓಂ

ಈ ಸಾಮವನ್ನು ಮೂರು ಬಾರಿ ಹಾಡಿದಾಗ ಅದಕ್ಕೆ ಸ್ತೋಮವೆನ್ನುತ್ತಾರೆ. ಸಾಮಗಾಯನ ಮಾಡುವಾಗ ಸ್ವರವನ್ನು ಹ್ರಸ್ವಗೊಳಿಸುವುದೂ, ವಿಕೃತಗೊಳಿಸುವುದೂ ಅಥವಾ ಪರಿವರ್ತನೆ ಮಾಡುವುದೂ ಉಂಟು. ಮೊದಲಿನಲ್ಲಿ 'ಓಗ್ನಾ ಈ' ಎಂದು ಹೇಳಿರುವುದು ಇದಕ್ಕೆ ನಿದರ್ಶನ. ಗಾನಪೂರಣಕ್ಕಾಗಿ ನಿರರ್ಥಕವಾದ ಹಲಕೆಲವು ಪದಗಳನ್ನೂ ಜೋಡಿಸುವುದುಂಟು. ಔ, ಹೌ, ವಾ, ಹಾ ಮೊದಲಾದವು ಇಂಥವು. ಇವಕ್ಕೆ ಸ್ತೋಭವೆಂದು ಹೆಸರು.

ಛಾಂದೋಗ್ಯ ಉಪನಿಷತ್ತಿನಲ್ಲಿ ಸಾಮ ಸಪ್ತವಿಧವಾಗಿದೆಯೆಂದು ಹೇಳಿದೆ. ಹಿಂಕಾರ, ಪ್ರಸ್ತಾವ, ಆದಿ, ಉದ್ಗೀಥ, ಪ್ರತಿಹಾರ, ಉಪದ್ರವ ಮತ್ತು ನಿಧನ ಎಂಬುವೇ ಅವು. ಮೇಲೆ ಹೇಳಿದ ಐದು ಬಗೆಯ ಸಾಮಗಳ ಅವಾಂತರ ಭೇದದಿಂದ ಇವು ಸಂಭವಿಸುತ್ತವೆ.

## ಯಜುರ್ವೇದ ಸಂಹಿತೆ

ಯಾಗದಲ್ಲಿ ಅಧ್ವರ್ಯುವಿನ ಉಪಯೋಗಕ್ಕಾಗಿ ಬೇಕಾದ ಯಜಸ್ಸುಗಳ ಸಂಗ್ರಹ ಯಜುರ್ವೇದದಲ್ಲಿದೆ. ಋಕ್ಕುಗಳು ಮತ್ತು ಸಾಮಗಳಿಗಿಂತ ಭಿನ್ನವಾದ ಗದ್ಯಾತ್ಮಕವಾದ ಮಂತ್ರಗಳಿಗೆ 'ಯಜುಸ್' ಎಂದು ಹೆಸರು. ಇದನ್ನು 'ಗದ್ಯಾತ್ಮಕೋ ಯಜುಃ', 'ಅನಿಯತಾಕ್ಷರಾವಸಾನೋ ಯಜುಃ', 'ಶೇಷೇ ಯಜುಃ ಶಬ್ದಃ' ಮುಂತಾದವು ತಿಳಿಸುತ್ತವೆ.

ಯಜುರ್ವೇದ ಎರಡು ಮುಖ್ಯವಾದ ರೂಪಗಳಲ್ಲಿದೆ. ಇವೇ ಕೃಷ್ಣಯಜುರ್ವೇದ ಮತ್ತು ಶುಕ್ಲಯಜುರ್ವೇದ ಎಂಬುವು. ಶತಪಥ ಬ್ರಾಹ್ಮಣದಲ್ಲಿ 'ಆದಿತ್ಯಾನೀಮಾನಿ ಶುಕ್ಲಾನಿ ಯಜೂಂಷಿ ವಾಜಸನೇಯೇನ ಯಾಜ್ಞವಲ್ಕ್ಯೇನ ಅಖ್ಯಾಯಂತೇ' (ಶ. ಬ್ರಾ. 14-9-5-33) ಎಂದು ಹೇಳಿರುವುದಕ್ಕನುಸಾರವಾಗಿ ಶುಕ್ಲಯಜುರ್ವೇದ ಆದಿತ್ಯ ಸಂಪ್ರದಾಯಕ್ಕೆ ಸೇರಿದುದಾಗಿ ತಿಳಿದುಬರುತ್ತದೆ. ಕೃಷ್ಣಯಜುರ್ವೇದವು ಮತ್ತೊಂದಾದ ಬ್ರಹ್ಮಸಂಪ್ರದಾಯಕ್ಕೆ ಸೇರಿದೆ. ಶುಕ್ಲಯಜುರ್ವೇದ ಸಂಹಿತೆ ದರ್ಶಪೌರ್ಣಮಾಸಾದಿ ಯಾಗಗಳಿಗಪೇಕ್ಷಿತವಾದ ಮಂತ್ರಗಳ ಸಂಕಲನವಾಗಿದೆ. ಇದರೊಡನೆ ಗದ್ಯರೂಪದಲ್ಲಿರುವ ಬ್ರಾಹ್ಮಣ ಭಾಗಗಳು ಮಿಶ್ರವಾಗಿಲ್ಲ. ಆದರೆ ಕೃಷ್ಣಯಜುರ್ವೇದ ಸಂಹಿತೆಯಲ್ಲಿ ಮಂತ್ರಗಳೊಡನೆ ತನ್ನಿಯೋಜಕವಾದ ಬ್ರಾಹ್ಮಣ ಭಾಗಗಳೂ ಕೂಡಿಕೊಂಡಿವೆ. ಮಂತ್ರಬ್ರಾಹ್ಮಣಭಾಗಗಳ ಮಿಶ್ರಣದ ಕಾರಣ ಇದನ್ನು ಕೃಷ್ಣಯಜುರ್ವೇದವೆಂದೂ ಶುದ್ಧವಾಗಿ ಮಂತ್ರಗಳ ಸಂಕಲನವೇ ಆದಕಾರಣ ಮತ್ತೊಂದು ಸಂಹಿತೆಯನ್ನು ಶುಕ್ಲಯಜುರ್ವೇದವೆಂದೂ ಕರೆದರೆಂದು ಹೇಳಲಾಗಿದೆ. ಮಂತ್ರಗಳ ವಿಶುದ್ಧವೂ ಅಮಿಶ್ರಿತವೂ ಆದ ರೂಪವನ್ನು ಶುಕ್ಲವೆಂದು ಕರೆಯಲಾಯಿತೆಂದು ವಿವರಿಸುತ್ತಾರೆ. ಇವು ಎರಡು ಸಂಪ್ರದಾಯಗಳೂ ಪ್ರಾಚೀನ ಮತ್ತು ನವೀನವೆಂಬ ಅರ್ಥದಲ್ಲಿ ಕೃಷ್ಣ ಮತ್ತು ಶುಕ್ಲ ಎಂಬ ಅಭಿಧಾನಗಳನ್ನು ಹೊಂದಿರಬೇಕೆಂದು ಕೆಲವು ವಿಮರ್ಶಕರು ಅಭಿಪ್ರಾಯಪಡುತ್ತಾರೆ. (ಸಿ. ವಿ. ವೈದ್ಯ ಪು. 125) ಆದರೆ ಇವುಗಳೆರಡರ ಹೆಸರುಗಳಲ್ಲಿ ಇರುವ ವೈಲಕ್ಷಣ್ಯವನ್ನು ಹೀಗೇ ಎಂದು ಹೇಳುವುದಕ್ಕಾಗುವುದಿಲ್ಲ.

ಕೃಷ್ಣಯಜುರ್ವೇದದಲ್ಲಿ ತೈತ್ತಿರೀಯ ಶಾಖೆ ಬಹಳ ಪ್ರಧಾನವಾದುದು. ಈ ಶಾಖೆಯ ವಿಚಾರದಲ್ಲಿ ಪ್ರಾಚೀನವಾದ ಅಖ್ಯಾನವೊಂದಿದೆ. ಗುರುವಾದ ವೈಶಂಪಾಯನರ ಶಾಪಕ್ಕೆ ಹೆದರಿ ಶಿಷ್ಯರಾದ ಯಾಜ್ಞವಲ್ಕ್ಯರು ತಾವು ಅಧ್ಯಯನ ಮಾಡಿದ್ದ ಯಜುಸ್ಸುಗಳನ್ನು ವಮನ ಮಾಡಿದರೆಂದೂ, ಗುರುವಿನ ಆದೇಶಾನುಸಾರ ಇತರ ಶಿಷ್ಯರು ತಿತ್ತಿರಿ ಪಕ್ಷಿಗಳ ರೂಪವನ್ನು

ಧರಿಸಿ ಆ ಯಜುಸ್ಸುಗಳನ್ನು ಭಕ್ಷಣ ಮಾಡಿದರೆಂದೂ ಆ ಕಾರಣ ಆ ಶಾಖೆಗೆ ತೈತ್ತಿರೀಯ ಶಾಖೆ ಎಂಬ ಹೆಸರು ಬಂತೆಂದೂ ಈ ಆಖ್ಯಾನ ತಿಳಿಸುತ್ತದೆ. ಯಾಜ್ಞವಲ್ಕ್ಯರು ಸೂರ್ಯೋಪಾಸನೆಯನ್ನು ಮಾಡಿ ಆತನ ಅನುಗ್ರಹದಿಂದ ಶುಕ್ಲಯಜುಸ್ಸನ್ನು ಪಡೆದುಕೊಂಡರೆಂದೂ ಇದು ತಿಳಿಸುತ್ತದೆ. (ಕಾಣ್ವಸಂಹಿತೆಯ ಸಾಯಣಭಾಷ್ಯ ಭೂಮಿಕೆ ನೋಡಿ. ಮಾಧ್ಯಂದಿನ ಸಂಹಿತೆಯ ಮಹೀಧರ ಭಾಷ್ಯ ಪೀಠಿಕೆ ನೋಡಿ.) ಈ ಆಖ್ಯಾನದಿಂದ ಕೃಷ್ಣಯಜುರ್ವೇದ ಇವೆರಡರಲ್ಲಿ ಪ್ರಾಚೀನವಾದುದೆಂಬ ವಿಷಯ ಸಿದ್ಧವಾಗುತ್ತದೆ.

ಋಗ್ವೇದದ ಪುರುಷಸೂಕ್ತದಲ್ಲಿ ಯಜುರ್ವೇದದ ಉಲ್ಲೇಖವಿದೆ. ಯಾಗದಲ್ಲಿ ಬಳಸುವ ಗದ್ಯಾತ್ಮಕವಾದ ಮಂತ್ರವನ್ನು ಇದು ಸೂಚಿಸುವಂತಿದೆ. ಆದ್ದರಿಂದ ಈ ಯಜಸ್ಸುಗಳೂ ಬಹಳ ಪ್ರಾಚೀನವಾಗಿ ರೂಢಿಯಲ್ಲಿದ್ದವೆಂದು ಗೊತ್ತಾಗುತ್ತದೆ. ವ್ಯಾಸರು ಈ ಗದ್ಯಾತ್ಮಕವಾದ ಮಂತ್ರಗಳನ್ನೆಲ್ಲಾ ಕೃಷ್ಣಯಜುರ್ವೇದದಲ್ಲಿ ಸಂಕಲನ ಮಾಡಿದ್ದಾರೆ. ಇವುಗಳಿಗೂ ಸ್ವರಗಳು ಋಗ್ವೇದಕ್ಕಿರುವಂತೆಯೇ ಇವೆ. ಆದರೆ ಋಗ್ವೇದದ ಸ್ವರೋಚ್ಚಾರಣೆಗಿಂತ ಇದು ಹೆಚ್ಚು ಗಾನಮಯವಾಗಿದೆ. ಕೃಷ್ಣಯಜುರ್ವೇದ ಕಿವಿಗೆ ಬಹಳ ಇಂಪಾಗಿ ಕೇಳುತ್ತದೆ. ಮುಂದಿನ ಬ್ರಾಹ್ಮಣಗ್ರಂಥಗಳ ಕಾಲಕ್ಕೆ ಸ್ವರೋಚ್ಚಾರಣೆಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬರುತ್ತದೆ.

ಹೀಗೆ ಕೃಷ್ಣಯಜುರ್ವೇದದಲ್ಲಿ ಪದ್ಯಮಯವಾದ ಮಂತ್ರಗಳೊಡನೆ ಸ್ವರ ಸಂಪತ್ತನ್ನುಳ್ಳ ಗದ್ಯಭಾಗಗಳೂ ಮಿಶ್ರಿತವಾಗಿವೆ. ಯಾಗದ ಸ್ತುತಿಗೂ, ದೇವತಾ ಮಹಿಮೆಯ ವರ್ಣನೆಗೂ ಯಾಗ ವಿಧಾನದ ವಿವರಣೆಗೂ ಇವು ಮೀಸಲಾಗಿವೆ. ಚರಣವ್ಯೂಹಕ್ಕನುಸಾರವಾಗಿ ಕೃಷ್ಣ ಯಜುರ್ವೇದದಲ್ಲಿ 85 ಶಾಖೆಗಳಿದ್ದವೆಂದು ತಿಳಿಯುತ್ತದೆ. ಆದರೆ ಇಂದು ಕೇವಲ ನಾಲ್ಕು ಶಾಖೆಗಳು ಮಾತ್ರ ಉಪಲಬ್ಧವಾಗಿವೆ. ಅವು ಯಾವುವೆಂದರೆ :

1. ತೈತ್ತರೀಯ ಶಾಖೆ.
2. ಮೈತ್ರಾಯಣೀಯ ಅಥವಾ ಕಾಲಾಪ ಶಾಖೆ.
3. ಕಠಶಾಖೆ.
4. ಕಪಿಷ್ಠಲ ಶಾಖೆ (ಕಪಿಷ್ಠಲ-ಕಠಶಾಖೆ.)

**ತೈತ್ತಿರೀಯ ಶಾಖೆ :** ಇದು ದಕ್ಷಿಣ ಭಾರತದಲ್ಲಿ ಬಹಳ ಪ್ರಸಿದ್ಧವಾಗಿದೆ. ಈ ಶಾಖೆ ತನ್ನದೇ ಆದ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು, ಶ್ರೌತ ಮತ್ತು ಗೃಹ್ಯ ಸೂತ್ರಗಳನ್ನೊಳಗೊಂಡು ಅಕ್ಷುಣ್ಣವಾಗಿ ಉಳಿದಿವೆ. ಈ ಸಂಹಿತೆಯ ಪರಿಮಾಣವೂ ಚಿಕ್ಕದಾಗಿಲ್ಲ. ಈ ಸಂಹಿತೆಯಲ್ಲಿ 7 ಕಾಂಡಗಳಿವೆ; 44 ಪ್ರಪಾಠಕಗಳಿವೆ; 651ಅನುವಾಕಗಳಿವೆ. ಇದನ್ನು ಈ ಕೆಳಗೆ ಕಂಡಂತೆ ಸೂಚಿಸಬಹುದು.

| | ಕಾಂಡ | ಅಧ್ಯಾಯ | ಅನುವಾಕಗಳು |
|---|---|---|---|
| | 1 | 8 | 146 |
| | 2 | 6 | 75 |
| | 3 | 5 | 55 |
| | 4 | 7 | 82 |
| | 5 | 7 | 120 |
| | 6 | 6 | 66 |
| | 7 | 5 | 107 |
| ಒಟ್ಟು | 7 | 44 | 651 |

| | ಕಾಂಡಗಳಲ್ಲಿ ಅನುವಾಕಗಳು | | | | | | |
|---|---|---|---|---|---|---|---|
| ಅಧ್ಯಾಯ | I | II | III | IV | V | VI | VII |
| 1 | 14 | 11 | 11 | 11 | 11 | 11 | 20 |
| 2 | 14 | 12 | 11 | 11 | 12 | 11 | 20 |
| 3 | 14 | 14 | 11 | 13 | 12 | 11 | 20 |
| 4 | 46 | 14 | 11 | 12 | 12 | 11 | 22 |
| 5 | 11 | 12 | 11 | 11 | 24 | 11 | 25 |
| 6 | 12 | 12 | – | 9 | 23 | 11 | – |
| 7 | 13 | – | | 15 | 26 | – | – |
| 8 | 22 | – | – | – | – | – | – |
| ಒಟ್ಟು | 146 | 75 | 55 | 82 | 120 | 66 | 107 |
| ಪದಸಂಖ್ಯೆ | 19165 | 16583 | 10622 | 14105 | 19406 | 16902 | 13325 |

ಒಟ್ಟು ಪದಸಂಖ್ಯೆ—110296

ಈ ಶಾಖೆಯಲ್ಲಿ ಮೈತ್ರಾಯಣೀಯ ಶಾಖೆಯಲ್ಲಿರುವುದಕ್ಕಿಂತ ಕಾಂಡ ಸಂಖ್ಯೆ ಹೆಚ್ಚಾಗಿದೆ. ಆದ್ದರಿಂದ ಇದು ಮೈತ್ರಾಯಣೀಯ ಶಾಖೆಗಿಂತ ಈಚಿನದಾಗಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಇವೆರಡು ಸಂಹಿತೆಗಳ ವಿಸ್ತಾರವೆಷ್ಟಿದ್ದಿತೆಂಬುದನ್ನು ಈಗ ನಿರ್ಧರಿಸುವುದಕ್ಕಂತೂ ಆಗುವುದಿಲ್ಲ. ಋಗ್ವೇದಕ್ಕೆ ಕಾತ್ಯಾಯನರ ಸರ್ವಾನುಕ್ರಮಣಿಯಂತೆ ಈ ವೇದಗಳಿಗೆ ಅನುಕ್ರಮಣಿಗಳಾವುವೂ ಇಲ್ಲ. ಆದ್ದರಿಂದಲೇ ಇವುಗಳ ವಿಷಯ ಸಂಗ್ರಹವೇನಿತ್ತೆಂಬುದನ್ನು ನಾವು ಪೂರ್ಣವಾಗಿ ಅರಿಯಲಾರೆವು. ಕೃಷ್ಣ ಯಜುರ್ವೇದದಲ್ಲಿ ಗದ್ಯಮಂತ್ರಗಳು ಪ್ರಧಾನವಾಗಿರುವುದರಿಂದಲೂ ಇವುಗಳನ್ನೆಣಿಸುವುದಕ್ಕಾಗಲೀ ಇವುಗಳ ಋಷಿ ದೇವತೆಗಳನ್ನು ನಿರ್ಧರಪಡಿಸುವುದಾಗಲೀ ಆಗದ ಕಾರಣ ಇಂಥ ಅನುಕ್ರಮಣಿಗಳು ಈ ವೇದಕ್ಕೆ ಆಗಲಿಲ್ಲ. ಆದರೆ ಇಲ್ಲಿ ಬರುವ ಅನೇಕಾನೇಕ ಅನುವಾಕಗಳು ಆಯಾ ಅನುವಾಕಗಳಲ್ಲಿ ಬರುವ ಪದಸಂಖ್ಯೆಗಳನ್ನು ಕೊನೆಯಲ್ಲಿ ಕೊಡುತ್ತವೆ. ಈ ಸಂಪ್ರದಾಯ ಈ ವೇದಕ್ಕೇ ವಿಶಿಷ್ಟವಾಗಿದೆ. ಉದಾಹರಣೆಗೆ ಈ ವೇದದ ಮೊಟ್ಟಮೊದಲನೆಯ ಅನುವಾಕದ ಕೊನೆಯಲ್ಲಿ 'ಇಷೇತಿ ತ್ರಿಚತ್ವಾರಿಂಶತ್' ಎಂದು ಆ ಅನುವಾಕದಲ್ಲಿ ಬರುವ ಪದಗಳು 43 ಎಂದು ಹೇಳಿದೆ. ಮಂತ್ರಗಳನ್ನು ಇಲ್ಲಿ ಎಣಿಕೆ ಮಾಡಿಲ್ಲ. ಅನುವಾಕ ಸಂಖ್ಯೆ ಮತ್ತು ಪದಗಳ ಸಂಖ್ಯೆ ಇವುಗಳನ್ನು ಮಾತ್ರ ಎಣಿಸಲಾಗಿದೆ.

ಈ ವೇದದಲ್ಲಿ ಬರುವ ವಿಷಯವಾದರೋ ಯಾಗಾನುಷ್ಠಾನದ ವರ್ಣನೆಯೇ ಆಗಿದೆ. ಪೌರೋಡಾಶ, ಯಾಜಮಾನ, ವಾಜಪೇಯ, ರಾಜಸೂಯ, ದರ್ಶಪೌರ್ಣಮಾಸ, ಸೋಮಯಾಗ ಮುಂತಾದ ಅನೇಕ ಯಾಗಾನುಷ್ಠಾನಗಳ ವಿಶದವಾದ ವರ್ಣನೆ ಇಲ್ಲಿದೆ. ಸಾಯಣಾಚಾರ್ಯರು ಈ ಶಾಖೆಯವರಾದುದರಿಂದಲೂ, ಈ ಶಾಖೆ ಯಜ್ಞದ ಮುಖ್ಯ ಸ್ವರೂಪವನ್ನು ವರ್ಣಿಸುವುದರಿಂದಲೂ ಮೊದಲು ಈ ಸಂಹಿತೆಗೆ ವಿದ್ವತ್ಪೂರ್ಣವಾದ ಭಾಷ್ಯವನ್ನು ಬರೆದರು.

ಋಗ್ವೇದಕ್ಕೆ ಸಂಬಂಧಿಸಿರುವುದಕ್ಕಿಂತಲೂ ಬೇರೆಯಾದ ಭೌಗೋಳಿಕ ಪ್ರದೇಶದ ಪರಿಚಯ

ಯಜುರ್ವೇದದಿಂದಾಗುವುದೆಂದು ವಿಮರ್ಶಕರ ಅಭಿಪ್ರಾಯ (Macdonell : *History of Sanskrit Literature*, p. 174.) ಋಗ್ವೇದದಲ್ಲಿ ಮತ್ಸ್ಯ, ಚೇದಿಗಳ ಉಲ್ಲೇಖವಿದೆ. ಸರಯೂ ತೀರದವರೆಗೆ ಆರ್ಯರು ಹರಡಿಕೊಂಡ ವಿಚಾರವನ್ನಿಲ್ಲಿ ನಾವು ಅರಿಯಬಹುದು. ಸಿಂಧೂನದೀ ತೀರದಿಂದ ಹಿಡಿದು ಯಮುನಾ ನದಿಯ ಬಯಲಿನವರೆಗೆ ಅವರು ಹರಡಿದ್ದರೆಂದು ಅಲ್ಲಿ ಗೊತ್ತಾಗುತ್ತದೆ. ಋಗ್ವೇದ ಕಾಲದ ಕೊನೆಯ ಅರ್ಧಭಾಗದಲ್ಲಿ ಅವರ ನಾಗರೀಕತೆಯ ಕೇಂದ್ರ ಸರಸ್ವತೀ ನದಿಯ ಬಯಲಾಗಿತ್ತು. ಇವೆಲ್ಲವನ್ನೂ ನಾವು ಪರಿಶೀಲಿಸಿದರೆ ಈ ಪ್ರಾಂತದಲ್ಲಿಯೇ ಋಗ್ವೇದ ಯಜುರ್ವೇದ ಮತ್ತು ಸಾಮವೇದಗಳ ಸಂಕಲನ ವ್ಯಾಸರಿಂದಾಯಿತೆಂದು ಹೇಳಬಹುದು. ಸಿ. ವಿ. ವೈದ್ಯರ ಅಭಿಪ್ರಾಯದಲ್ಲಿ ಕೃಷ್ಣಯಜುರ್ವೇದ ಸಂಕಲನವು ಸುಮಾರು ಕ್ರಿ. ಪೂ. 3100ರ ಸುಮಾರಿನಲ್ಲಿ ಆಯಿತು. (C. V. Vaidya, *History of Sanskrit Literature*, p. 128).

ಯಜುರ್ವೇದದ ಭಾಷೆ ಋಗ್ವೇದದ ಭಾಷೆಗಿಂತ ಈಚಿನದು ಎಂದು ಕೆಲವರು ಹೇಳುವರು. ಆದರೆ ಋಗ್ವೇದದ ಕೊನೆಯ ಭಾಗಗಳ ಭಾಷೆಗೂ ಯಜುರ್ವೇದ ಸಂಹಿತೆಯ ಭಾಷೆಗೂ ಅಂಥ ಗಮನಾರ್ಹವಾದ ವ್ಯತ್ಯಾಸವಿಲ್ಲವೆಂದು ಹೇಳಬಹುದು. ಒಂದೇ ಕಾಲಕ್ಕೆ ಸೇರಿದ ಗದ್ಯದ ಭಾಷೆಗಿಂತ ಪದ್ಯದ ಭಾಷೆ ಹೆಚ್ಚು ಪ್ರಾಚೀನವಾಗಿರುವುದು ಸಹಜವಾಗಿರುತ್ತದೆ. ಹೀಗಾಗಿ ಯಜುರ್ವೇದದ ಭಾಷೆಗಿಂತ ಋಗ್ವೇದದ ಭಾಷೆ ಪ್ರಾಚೀನವಾಗಿ ಕಾಣುತ್ತದೆ. ಮುಂದಿನ ಕಾವ್ಯ ಸಂಸ್ಕೃತದ ಭಾಷೆಯೇ ಯರ್ಜುವೇದದ ಭಾಷೆಯಲ್ಲ. ಯಜುರ್ವೇದದ ಭಾಷೆ ಕಾವ್ಯಭಾಷೆಗಿಂತ ಗಮನಾರ್ಹವಾಗಿ ಪ್ರಾಚೀನವಾಗಿದೆ.

ಕೃಷ್ಣಯಜುರ್ವೇದದಲ್ಲಿ ಪ್ರತಿಫಲಿತವಾಗಿರುವ ನಾಗರಿಕತೆ ಮತ್ತು ಸಾಮಾಜಿಕ ಸ್ಥಿತಿಗಳು ಋಗ್ವೇದದಲ್ಲಿ ಕಂಡುಬರುವುದಕ್ಕಿಂತ ಭಿನ್ನವಾಗಿಲ್ಲ. ವರ್ಣವ್ಯವಸ್ಥೆ ಋಗ್ವೇದದ ಕಾಲದಲ್ಲಿಯೇ ದೃಢವಾಗಿ ಬಿಟ್ಟಿದ್ದಿತು. ಋಗ್ವೇದದ ದೇವತೆಗಳು ಹಾಗೆಯೇ ಇಲ್ಲಿಯೂ ಕಂಡುಬರುತ್ತಾರೆ. ಆದರೆ ಕೆಲವು ದೇವತೆಗಳಿಗೆ ಪ್ರಾಧಾನ್ಯ ಬಂದಿದೆ. ಮತ್ತೆ ಕೆಲವು ದೇವತೆಗಳು ಹಿಂದಕ್ಕೆ ಹೋಗಿದ್ದಾರೆ. ಉಷಸ್ ದೇವತೆಗೆ ಪ್ರಾಧಾನ್ಯ ಕಡಿಮೆಯಾಗಿದೆ. ಆದರೆ ರುದ್ರನು ಹೆಚ್ಚು ಜನಪ್ರಿಯನಾಗಿದ್ದಾನೆ. ಕೃಷ್ಣಯಜುರ್ವೇದದಲ್ಲಿ ರುದ್ರಾಧ್ಯಾಯ ಎಂದು ಒಂದು ವಿಶಿಷ್ಟವಾದ ಅಧ್ಯಾಯವೇ ಇದೆ.

ಯಾಗಕ್ಕೆ ಯಜುರ್ವೇದದಲ್ಲಿ ಪರಮ ಪ್ರಾಧಾನ್ಯವಿದೆ. ಅನೇಕ ಬಗೆಯ ಯಾಗಗಳ ನಿರೂಪಣೆ ಇಲ್ಲಿ ಬಂದಿದೆ. ಆದರೆ ಇಲ್ಲೆಲ್ಲಿಯೂ ಪುರುಷಯಜ್ಞದ ಪ್ರಸ್ತಾಪವಿಲ್ಲದಿರುವುದು ಗಮನಾರ್ಹ. ಆದರೆ ಶುಕ್ಲಯಜುರ್ವೇದದಲ್ಲಿ ಈ ವಿಷಯ ಪ್ರಸ್ತುತವಾಗಿದೆ. ಕೃಷ್ಣ ಯಜುರ್ವೇದದ ಕೊನೆಗೆ ಸುಪ್ರಸಿದ್ಧವಾದ ಅಶ್ವಮೇಧದ ಸುಂದರ ರೂಪಣವಿದೆ. ಸೂರ್ಯೋದಯದ ವಿಚಾರವನ್ನೇ ಅಶ್ವಮೇಧ ಯಾಗವೆಂದೂ ಉಷೆಯನ್ನು ಯಾಗಾಶ್ವದ ಶಿರಸ್ಸೆಂದೂ ಇಲ್ಲಿ ವರ್ಣಿಸಲಾಗಿದೆ.

ಕೃಷ್ಣಯಜುರ್ವೇದಕ್ಕೆ ಪದಪಾಠವೊಂದಿದೆ. ವೇದಭಾಷೆ ಅರ್ಥವಾಗುವುದು ಕಷ್ಟವೆಂದು ಕಂಡು ಬಂದಾಗ ಇದರ ರಚನೆಯಾಗಿರಬೇಕು. ಋಗ್ವೇದ ಪದಪಾಠದ ಕಾಲದಲ್ಲಿಯೇ ಇದಕ್ಕೂ ಪದಪಾಠ ಆಗಿರಬಹುದು. ಮುಂದೆ ಕ್ರಮಪಾಠವೂ ರೂಢಿಗೆ ಬಂದಿತು. ಈ ಪದಪಾಠಕಾರರು ಯಾರೆಂಬುದು ನಿರ್ದಿಷ್ಟವಾಗಿ ತಿಳಿಯದು. ಹಿರಣ್ಯಕೇಶಿಸೂತ್ರವು ಆತ್ರೇಯನು ಪದಪಾಠಕಾರನೆಂದು ತಿಳಿಸುತ್ತದೆ.

ಯಜುರ್ವೇದ ಮಂತ್ರಗಳಿಗೆ ಋಷಿಗಳಿಲ್ಲ. ಆದರೆ ಕಾಂಡಋಷಿಗಳುಂಟು. ಆಯಾಕಾಂತ ಗಳನ್ನು ಕಂಡ ದೇವತೆಗಳ ಹೆಸರುಗಳೇ ಕಾಂಡಋಷಿಗಳ ಹೆಸರುಗಳಾಗಿವೆ. ಸಂಹಿತೆಗಳ ಏಳುಕಾಂಡಗಳೂ, ಬ್ರಾಹ್ಮಣಗಳ ಮೂರು ಕಾಂಡಗಳೂ ಸೇರಿ ಒಂಭತ್ತು ಕಾಂಡ ಋಷಿಗಳಿಂದ ದೃಷ್ಟವಾಗಿವೆ. ಇವುಗಳಿಗನುಗುಣವಾಗಿ ಕಾಂಡಋಷಿಗಳು ಹೀಗಿದ್ದಾರೆ:

1. ಪ್ರಜಾಪತಿ, 2. ಸೋಮ 3. ಅಗ್ನಿ (ಪ್ರಾಜಾಪತ್ಯಕಾಂಡ ; ಸೌಮ್ಯ ಕಾಂಡ ; ಆಗ್ನೇಯ ಕಾಂಡ) 4. ವಿಶ್ವೇದೇವಾಃ 5. ಸ್ವಯಂಭು 6. ಆರುಣೀಃ ದೇವತಾಃ (ವೈಶ್ವದೇವಕಾಂಡ ; ಸ್ವಾಯಂಭುವಕಾಂಡ ; ಆರುಣಕಾಂತ) 7. ಸಾಂಹಿತೀದೇವತಾ 8. ವಾರುಣೀದೇವತಾ 9. ಯಾಜ್ಞಿಕೀದೇವತಾ.

**ಮೈತ್ರಾಯಣೀಯ ಸಂಹಿತಾ :** ಇದೂ ಗದ್ಯಪದ್ಯಾತ್ಮಕವಾಗಿದೆ. ಮಂತ್ರ ಮತ್ತು ಬ್ರಾಹ್ಮಣಗಳ ಸಮ್ಮಿಶ್ರಣ ಇಲ್ಲಿಯೂ ಇದೆ. ಇದರ ಕಾಂಡ ವಿಭಾಗಾದಿಗಳು ಕೆಳಗೆ ಕಂಡಂತೆ ಇವೆ :

**ಪ್ರಥಮಕಾಂಡ :** ಇದಕ್ಕೆ ಆದಿಮಕಾಂಡವೆಂದೂ ಹೆಸರು. ಇದರಲ್ಲಿ 11 ಪ್ರಪಾಠಕ ಗಳಿವೆ. ಇವುಗಳಲ್ಲಿ ಕ್ರಮವಾಗಿ ದರ್ಶಪೂರ್ಣಮಾಸ, ಅಧ್ವರ, ಆಧಾನ, ಪುನರಾಧಾನ, ಚಾತುರ್ಮಾಸ್ಯ ಮತ್ತು ವಾಜಪೇಯ ಇವುಗಳ ವರ್ಣನೆ ಇದೆ.

**ದ್ವಿತೀಯ ಕಾಂಡ :** ಇದಕ್ಕೆ ಮಧ್ಯಮಕಾಂಡವೆಂದೂ ಹೆಸರುಂಟು. ಇದರಲ್ಲಿ 13 ಪ್ರಪಾಠಕ ಗಳಲ್ಲಿ ಕಾಮ್ಯಇಷ್ಟಿ, ರಾಜಸೂಯ ಮತ್ತು ಅಗ್ನಿಚಿತಿಯ ವಿವೇಚನೆ ಇದೆ.

**ತೃತೀಯಕಾಂಡ :** ಇದಕ್ಕೆ ಉಪರಿಕಾಂಡವೆಂದು ಹೆಸರು. ಇದರಲ್ಲಿ 16 ಪ್ರಪಾಠಕಗಳುಂಟು. ಅಗ್ನಿಚಿತಿ, ಅಧ್ವರವಿಧಿ, ಸೌತ್ರಾಮಣೀ ಮತ್ತು ಅಶ್ವಮೇಧಗಳ ವಿಚಾರವಿಲ್ಲಿದೆ.

**ನಾಲ್ಕನೆಯ ಕಾಂಡ :** ಇದಕ್ಕೆ 'ಖಿಲಕಾಂಡ'ವೆಂಬ ಹೆಸರುಂಟು. ಇದರಲ್ಲಿ 14 ಪ್ರಪಾಠಕ ಗಳಿವೆ. ಪೂರ್ವೋಕ್ತವಾದ ರಾಜಸೂಯಾದಿಗಳ ವಿಚಾರದಲ್ಲಿ ಇತರ ಆವಶ್ಯಕವಿಚಾರಗಳ ಸಂಗ್ರಹವಿಲ್ಲಿದೆ. ಈ ಸಂಹಿತೆಯಲ್ಲಿ ಒಟ್ಟು 2144 ಮಂತ್ರಗಳಿವೆ. ಅವುಗಳಲ್ಲಿ 1701 ಮಂತ್ರಗಳನ್ನು ಋಗ್ವೇದ ಸಂಹಿತೆಯ ಬೇರೆ ಬೇರೆ ಮಂಡಲಗಳಿಂದ ತೆಗೆದುಕೊಳ್ಳಲಾಗಿದೆ. ಈ ಶಾಖೆಯ ಮಂತ್ರಗಳು ಮತ್ತು ಬ್ರಾಹ್ಮಣ ವಾಕ್ಯಗಳು ಕಾಠಕ ಮತ್ತು ತೈತ್ತಿರೀಯ ಸಂಹಿತೆಗಳಲ್ಲಿ ಆವೃತ್ತವಾಗಿವೆ. ಈ ಶಾಖೆಗೂ ಇತರ ಶಾಖೆಗಳಿಗೂ ಇರುವ ನಿಕಟವಾದ ಸಂಪರ್ಕವನ್ನಿದು ತೋರಿಸುತ್ತದೆ.

**ಕಠ ಸಂಹಿತೆ :** ಕೃಷ್ಣಯಜುರ್ವೇದ ಶಾಖೆಗಳಲ್ಲಿ ಇದೂ ಬಹಳ ಪ್ರಧಾನವಾದ ಶಾಖೆ. ಒಂದಾನೊಂದು ಕಾಲದಲ್ಲಿ ಕಠಸಂಹಿತೆಯ ಅಧ್ಯಯನ ಗ್ರಾಮ ಗ್ರಾಮದಲ್ಲಿಯೂ ಆಗುತ್ತಿತ್ತೆಂಬುದನ್ನು ಪತಂಜಲಿಗಳು ತಮ್ಮ ಮಹಾಭಾಷ್ಯದಲ್ಲಿ 'ಗ್ರಾಮೇ ಗ್ರಾಮೇ ಕಾಠಕಂ ಕಾಲಾಪಕಂ ಚ ಪ್ರೋಚ್ಯತೇ' (4-3-101) ಎಂದು ಹೇಳಿರುವುದರಿಂದ ತಿಳಿಯಬಹುದು. ಈ ಸಂಹಿತೆಯ ಅಧ್ಯೇತೃಗಳ ಸಂಖ್ಯೆ ಈಗ ವಿರಳವಾಗಿದೆ. ಈ ಸಂಹಿತೆಯ ಪ್ರಥಮ ಸಂಸ್ಕರಣವನ್ನು ಜರ್ಮನಿಯಲ್ಲಿ ಡಾ|| ಶ್ರೋದರ್ 1910ರಲ್ಲಿ ಪ್ರಕಟಿಸಿದನು. ಔಂಧ್‌ನ ಸ್ವಾಧ್ಯಾಯ ಮಂಡಲ 1943 ರಲ್ಲಿ ಪ್ರಕಟಿಸಿದೆ.

ಈ ಸಂಹಿತೆಯಲ್ಲಿ 5 ಖಂಡಗಳಿವೆ. ಇವುಗಳಿಗೆ ಇಠಿಮಿಕಾ, ಮಧ್ಯಮಿಕಾ, ಓರಮಿಕಾ ಮತ್ತು ಯಾಜ್ಯಾನುವಾಕ್ಯಾಕಾಂಡ ಮತ್ತು ಅಶ್ವಮೇಧಾದ್ಯನುವಚನವೆಂದು ಹೆಸರು. ಈ

ಖಂಡಗಳ ತುಂಡುಗಳಿಗೆ 'ಸ್ಥಾನಕ'ಗಳೆನ್ನುತ್ತಾರೆ. ಈ ಸಂಹಿತೆಯ ವಿಭಾಗಗಳು ಹೀಗಿವೆ:

| ಕಾಂಡ | ಸ್ಥಾನಕ | ವಿಷಯ ವಿವೇಚನೆ |
|---|---|---|
| 1. ಇಠಿಮಿಕಾಕಾಂಡ | 18 | ಪುರೋಡಾಶ, ಅಧ್ವರ, ಪಶುಬಂಧ, ವಾಜಪೇಯ, ರಾಜಸೂಯ-ಮೊದಲಾದವು. |
| 2. ಮಧ್ಯಮಿಕಾ | 12 | ಸಾವಿತ್ರೀ, ಪಂಚಚೂಡ, ಸ್ವರ್ಗ, ದೀಕ್ಷಿತ, ಆಯುಷ್ಯ-ಇತ್ಯಾದಿಗಳು. |
| 3, 4, 5. ಓರಮಿಕಾ | 10 | ಪುರೋಡಾಶ ಬ್ರಾಹ್ಮಣ, ಯಜಮಾನ ಬ್ರಾಹ್ಮಣ, ಸತ್ರ, ಪ್ರಾಯಶ್ಚಿತ್ತಿ, ಚಾತುರ್ಮಾಸ್ಯ, ಸವ, ಸೌತ್ರಾಮಣೀ |
| ಒಟ್ಟು | 40 | |

ಅಂತಿಮ ಕಾಂಡದಲ್ಲಿ ಹದಿಮೂರು ಅನುವಚನಗಳಿವೆ.

ಈ ಸಂಹಿತೆಯಲ್ಲಿ ಒಟ್ಟು ಐದು ಕಾಂಡಗಳೂ, 40 ಸ್ಥಾನಕಗಳೂ, 13 ಅನುವಚನಗಳೂ, 843 ಅನುವಾಕಗಳೂ, 309 ಮಂತ್ರಗಳೂ ಇವೆ. ಮಂತ್ರ ಮತ್ತು ಬ್ರಾಹ್ಮಣಗಳ ಒಟ್ಟು ಸಂಖ್ಯೆ 18000 ಆಗುತ್ತದೆ.

ಕೃಷ್ಣಯಜುರ್ವೇದ ಸಂಹಿತೆಯ ಸಾಮಾನ್ಯ ರೀತಿಯಂತೆ ಈ ಸಂಹಿತೆಯೂ ಮಂತ್ರ ಬ್ರಾಹ್ಮಣಗಳ ಮಿಶ್ರಣವಾಗಿದೆ. ಇದರಲ್ಲಿ ದರ್ಶಪೌರ್ಣಮಾಸ, ಅಗ್ನಿಷ್ಟೋಮ, ಅಗ್ನಿಹೋತ್ರ, ಆಧಾನ, ಕಾಮ್ಯೇಷ್ಟಿ, ನಿರೂಢ, ಪಶುಬಂಧ, ವಾಜಪೇಯ, ರಾಜಸೂಯ, ಅಗ್ನಿಚಯನ, ಚಾತುರ್ಮಾಸ್ಯ, ಸೌತ್ರಾಮಣೀ ಮತ್ತು ಅಶ್ವಮೇಧಗಳ ವಿವೇಚನೆ ಪ್ರಧಾನವಾಗಿ ಮಾಡಲಾಗಿದೆ.

**ಕಪಿಷ್ಠಲ-ಕಠಸಂಹಿತೆ**: ಕಪಿಷ್ಠಲಋಷಿ ಈ ಶಾಖೆಯ ಪ್ರವರ್ತಕರೆಂದು ತೋರುತ್ತದೆ. ಈ ಶಾಖೆಯ ಸಂಹಿತೆಯ ಒಂದೇ ಒಂದು ಪ್ರತಿ ಕಾಶಿಯ ರಾಜಕೀಯ ಸಂಸ್ಕೃತ ಕಾಲೇಜಿನ ಸರಸ್ವತೀ ಭವನದ ಪುಸ್ತಕಾಲಯದಲ್ಲಿ ಉಪಲಬ್ಧವಾಗಿದೆ. ಈ ಪ್ರತಿಯ ಆಧಾರದ ಮೇಲೆ ಇದರ ಸಂಸ್ಕರಣವೊಂದನ್ನು ಲಾಹೋರಿನ ಮೆಹರ್‌ಚಂದ್ ಸಂಸ್ಕೃತ ಗ್ರಂಥಮಾಲೆಯಲ್ಲಿ ಡಾ|| ರಘುವೀರರು 1932ರಲ್ಲಿ ಪ್ರಕಾಶಪಡಿಸಿದ್ದಾರೆ. ಕಾಠಕ ಸಂಹಿತೆಗೂ ಈ ಶಾಖೆಗೂ ಅನೇಕ ವೈಲಕ್ಷಣ್ಯಗಳಿವೆ. ಇದರ ಸ್ವರಾಂಕನ ಪದ್ಧತಿ ಋಗ್ವೇದದ ಸ್ವರಾಂಕನ ಪದ್ಧತಿಯನ್ನು ಹೋಲುತ್ತದೆ. ಇದೂ ಋಗ್ವೇದದಂತೆಯೇ ಅಷ್ಟಕ ಅಧ್ಯಾಯಗಳಾಗಿ ವಿಭಕ್ತವಾಗಿದೆ. ಅಸಮಗ್ರವಾದ ಈ ಗ್ರಂಥದಲ್ಲಿ ಉಪಲಬ್ಧವಾದ ಭಾಗ ಹೀಗಿದೆ:

ಒಂದನೇ ಅಷ್ಟಕ– ಎಂಟು ಅಧ್ಯಾಯಗಳಿವೆ. ಇದು ಪೂರ್ಣವಾಗಿದೆ.

ಎರಡನೇ ಅಷ್ಟಕ, ಮೂರನೇ ಅಷ್ಟಕ– ಇದು ಮಧ್ಯ ಮಧ್ಯ ನಷ್ಟವಾಗಿ ಹೋಗಿದೆ. 9ನೇ ಅಧ್ಯಾಯದಿಂದ 24 ರವರೆಗೆ ಪೂರ್ಣವಾಗಿ ನಷ್ಟವಾಗಿದೆ.

ನಾಲ್ಕನೇ ಅಷ್ಟಕ– 25 ರಿಂದ 31ನೇ ಅಧ್ಯಾಯದವರೆಗೆ ಉಪಲಬ್ಧವಾಗಿದೆ. 32ನೇ ಅಧ್ಯಾಯ ನಷ್ಟವಾಗಿದೆ. 27ನೇ ಅಧ್ಯಾಯವೇ ರುದ್ರಾಧ್ಯಾಯವಾಗಿದೆ.

ಐದನೇ ಅಷ್ಟಕ– 33ನೇ ಅಧ್ಯಾಯ ಬಿಟ್ಟರೆ ಉಳಿದವು ಉಪಲಬ್ಧವಾಗಿವೆ.

ಆರನೇ ಅಷ್ಟಕ– 43ನೇ ಅಧ್ಯಾಯವನ್ನುಳಿದು ಇತರ ಏಳು ಅಧ್ಯಾಯಗಳು ದೊರಕಿವೆ.

ಈ ಸಂಹಿತೆ 48 ಅಧ್ಯಾಯಗಳೊಡನೆ ಸಮಾಪ್ತಿಯಾಗುತ್ತದೆ. ಈ ಸಂಹಿತೆಯಲ್ಲಿ ಉಪಲಬ್ಧವಾಗಿರುವ ಭಾಗಗಳೂ ಸಮಗ್ರವಾಗಿ ದೊರಕಿಲ್ಲ. ಅಲ್ಲಲ್ಲಿ ತ್ರುಟಿತವಾಗಿವೆ. ಇತರ ಸಂಹಿತೆಗಳೊಡನೆ ಹೋಲಿಸಿ ನೋಡುವುದಕ್ಕೆ ಈ ಸಂಹಿತಾಗ್ರಂಥ ಅಸಮಗ್ರವಾಗಿ ಖಂಡಖಂಡಗಳಲ್ಲಿದ್ದರೂ ಬಹಳ ಉಪಯುಕ್ತವಾಗಿದೆ.

ಕೃಷ್ಣಯಜುರ್ವೇದದ ನಾಲ್ಕು ಮಂತ್ರ ಸಂಹಿತೆಗಳಲ್ಲಿಯೂ ಅವುಗಳ ಸ್ವರೂಪ, ವಿಷಯ ಪ್ರತಿಪಾದನೆ ಮೊದಲಾದುವುಗಳಲ್ಲಿ ನಿಕಟವಾದ ಸಾಮ್ಯವಿದೆ. ಮೂಲಭೂತವಾದ ಒಂದೇ ವೇದದ ನಾಲ್ಕು ಶಾಖೆಗಳಾಗಿ ಇವು ಇರುವುದೇ ಇದಕ್ಕೆ ಕಾರಣವಾಗಿದೆ.

## ಶುಕ್ಲಯಜುರ್ವೇದ

ಶುಕ್ಲಯಜುರ್ವೇದ ಯಜುರ್ವೇದದ ಪಶ್ಚಾತ್ಕಾಲದ ರೂಪವೆಂಬುದು ಹಿಂದೆ ಪ್ರಸ್ತಾಪಿಸಿದ ಕಥೆಯಿಂದ ಗೊತ್ತಾಗುತ್ತದೆ. ತೈತ್ತಿರೀಯ, ವಾಜಸನೇಯಿ ಮೊದಲಾದ ಶಬ್ದಗಳ ಮೇಲೆ ಈ ಕಥೆಗಳು ಕಟ್ಟಲ್ಪಟ್ಟಿವೆ. ವೈಶಂಪಾಯನರಿಂದ ಉಪದಿಷ್ಟವಾದ ಯಜುರ್ವೇದದ ಬಗ್ಗೆ ಸಂತೃಪ್ತಿಯನ್ನು ಹೊಂದದ ಯಾಜ್ಞವಲ್ಕ್ಯರು ಅದನ್ನು ರೂಪಾಂತರಿಸಿ ಗದ್ಯಭಾಗಗಳನ್ನು ಬೇರ್ಪಡಿಸಿ, ಹೊಸಮಂತ್ರಗಳನ್ನು ಸೇರಿಸಿ ಶುದ್ಧವಾದ ಮಂತ್ರ ರಾಶಿಯನ್ನಾಗಿ ಮಾಡಿ ಶುಕ್ಲಯಜುಸ್ಸಂಹಿತೆಯನ್ನು ಸಂಪಾದಿಸಿರಬಹುದು (ನೋಡಿ. ಸಿ. ವಿ. ವೈದ್ಯ, ಪು. 135). ಈ ಹೊಸ ಸಂಹಿತೆ ಋಗ್ವೇದದ ಮಾದರಿಯಲ್ಲಿದೆ. ಕೃಷ್ಣಯಜುರ್ವೇದದ ಮೊದಲ ಮಂತ್ರವಾದ 'ಇಷೇತ್ವೋರ್ಜೇತ್ವಾ' ಎಂಬ ಮಂತ್ರದಿಂದಲೇ ಇದೂ ಆರಂಭವಾಗುತ್ತದೆ. ಈ ಮಂತ್ರದಲ್ಲೂ ಕೆಲವು ಶಬ್ದಗಳು ಈ ಸಂಹಿತೆಯಲ್ಲಿ ವ್ಯತ್ಯಾಸವಾಗಿವೆ. ಈ ವೇದಸಂಹಿತೆಗೆ ಸೇರಿದಂತೆ ಪ್ರತ್ಯೇಕವಾದ 'ಶತಪಥ ಬ್ರಾಹ್ಮಣ'ವನ್ನೂ ಯಾಜ್ಞವಲ್ಕ್ಯರು ಸಂಪಾದಿಸಿದರು. ಹೀಗೆ ಶುಕ್ಲಯಜುರ್ವೇದವನ್ನು ಪರಿಷ್ಕರಿಸಿ ಸಂಪಾದಿಸಿದವರು ವ್ಯಾಸರಲ್ಲ ; ಆದರೆ ಅವರ ಪ್ರಶಿಷ್ಯರಾದ ಯಾಜ್ಞವಲ್ಕ್ಯರು ಕ್ರಿ.ಪೂ. 3000ದ ಸುಮಾರಿನಲ್ಲಿ ಈ ಸಂಹಿತೆಯ ಸಂಕಲನವಾಯಿತೆಂದು ವಿಮರ್ಶಕರ ಅಭಿಪ್ರಾಯ. (ನೋಡಿ ಸಿ. ವಿ. ವೈದ್ಯ, ಪು. 135).

ಈ ಸಂಹಿತೆಯ ಪ್ರವರ್ತಕರಾದ ಯಾಜ್ಞವಲ್ಕ್ಯರ ವಿಚಾರ ಅನೇಕ ಪುರಾಣಗಳಲ್ಲಿ ಬಂದಿದೆ. ಮಿಥಿಲೆಯ ದೇವರಾತನು ಅಮಿತವಾಗಿ ಅನ್ನದಾನ ಮಾಡುತ್ತಿದ್ದುದರಿಂದ 'ವಾಜಸನಿ' ಎಂದು ಕರೆಯಲ್ಪಡುತ್ತಿದ್ದನು. ಯಾಜ್ಞವಲ್ಕ್ಯರು ಅವನ ಪುತ್ರರು. ವ್ಯಾಸರ ಶಿಷ್ಯರುಗಳಿಂದ ನಾಲ್ಕು ವೇದಗಳನ್ನು ಇವರು ಕಲಿತರು. ಯಜುರ್ವೇದವನ್ನು ವೈಶಂಪಾಯನರಿಂದ ಇವರು ಅಧ್ಯಯನ ಮಾಡಿದರು. ಮಿಥಿಲೆಯ ಮಹಾರಾಜ ಜನಕನ ಆಸ್ಥಾನದಲ್ಲಿ ನಡೆಯುತ್ತಿದ್ದ ವೇದಾಂತ ವಿಚಾರಗೋಷ್ಠಿಯಲ್ಲಿ ಇವರು ಪ್ರಧಾನ ಪಾತ್ರವನ್ನು ಧರಿಸುತ್ತಿದ್ದರೆಂಬುದು ಬೃಹದಾರಣ್ಯಕೋಪನಿಷತ್ತಿನಿಂದ ಗೊತ್ತಾಗುತ್ತದೆ. ಇವರು ಪ್ರವಜನಕ್ಕೆ ಹೊರಟಾಗ ತಮ್ಮ ಪತ್ನಿಯರಿಬ್ಬರಾದ ಮೈತ್ರೇಯಿ, ಕಾತ್ಯಾಯನಿಯರಲ್ಲಿ ಮೈತ್ರೇಯಿಗೆ ಬ್ರಹ್ಮವಿದ್ಯೋಪದೇಶವನ್ನು ಅವಳ ಕೋರಿಕೆಯಂತೆ ಮಾಡಿದರು. ಹೀಗೆ ಇವರು ಅತ್ಯಂತ ಪ್ರೌಢರಾದ ತತ್ವಜ್ಞರಾಗಿದ್ದರು.

ಚರಣವ್ಯೂಹವು ಶುಕ್ಲಯಜುರ್ವೇದ ಸಂಹಿತೆ 17 ಶಾಖೆಗಳಲ್ಲಿದೆಯೆಂದು ತಿಳಿಸುತ್ತದೆ. ಅವುಗಳಲ್ಲಿ ಕಾಣ್ವ ಮತ್ತು ಮಾಧ್ಯಂದಿನ ಎಂಬ ಎರಡು ಪಾಠಗಳು ಪ್ರಸಿದ್ಧವಾಗಿವೆ. ಕಾಣ್ವಶಾಖೆ ಇಂದು ದಕ್ಷಿಣ ಭಾರತದಲ್ಲಿಯೂ ಮಾಧ್ಯಂದಿನ ಪಾಠ ಉತ್ತರದಲ್ಲಿಯೂ ಪ್ರಚಾರದಲ್ಲಿದೆ.

ಕಾಣ್ವ ಶಾಖೆಯ ಸಂಹಿತೆ ಮದರಾಸಿನಲ್ಲೂ (ಆನಂದವನ) ಔಂಧ್‌ನಲ್ಲಿಯೂ ಪ್ರಕಾಶಿತವಾಗಿದೆ. ಇದರಲ್ಲಿ 40 ಅಧ್ಯಾಯಗಳು, 128 ಅಧ್ಯಾಯಗಳೂ, 2086 ಮಂತ್ರಗಳೂ ಇವೆ. ಮಾಧ್ಯಂದಿನ ಪಾಠಕ್ಕಿಂತ ಇದರಲ್ಲಿ 111 ಮಂತ್ರಗಳು ಅಧಿಕವಾಗಿವೆ. ಮಾಧ್ಯಂದಿನ ಪಾಠದ ಸಂಹಿತೆಯನ್ನು ಉವಟ ಮತ್ತು ಮಹೀಧರ ಭಾಷ್ಯಗಳೊಡನೆ ನಿರ್ಣಯ ಸಾಗರ ಪ್ರೆಸ್ಸಿನವರು ಪ್ರಕಟಿಸಿದ್ದಾರೆ. ಇದರಲ್ಲಿ 40 ಅಧ್ಯಾಯಗಳಿವೆ. ಒಟ್ಟು 1975 ಮಂತ್ರಗಳಿವೆ. ಚರಣವ್ಯೂಹದಲ್ಲಿ 1800 ಮಂತ್ರಗಳಿವೆಯೆಂದು ಹೇಳಿದೆ. ಚರಣವ್ಯೂಹದ ಕಾಲವಾದ ಮೇಲೆ ಅನೇಕ ಮಂತ್ರಗಳೂ ಈ ಸಂಹಿತೆಗೆ ಸೇರಿವೆಯೆಂದೂ ಕೆಲವರು ಹೇಳುವರು. ಆದರೆ ಚರಣವ್ಯೂಹದಲ್ಲಿ ಈ ಸಂಹಿತೆಯ ಮಂತ್ರಸಂಖ್ಯೆಯನ್ನು 'ದ್ವೇಸಹಸ್ರೇ ಶತೇ ನ್ಯೂನೇ ಮಂತ್ರೇ ವಾಜಸನೇಯಕೇ' ಎಂದು ಹೇಳಿ 1900 ಎಂದು ಹೇಳಿದೆ. ಆದ್ದರಿಂದ ಮೇಲಿನ ವಾದಕ್ಕೇ ಸಂಭವವಿಲ್ಲ.

ಈ ಸಂಹಿತೆಯ ಯೋಜನೆ ಋಗ್ವೇದ ಸಂಹಿತೆಯ ಮಾದರಿಯಲ್ಲಿದೆಯೆಂದು ಮೊದಲು ತಿಳಿಸಲಾಯಿತಷ್ಟೆ? ಆದರೆ ಇಲ್ಲಿ ಸೂಕ್ತಗಳಾವುವೂ ಇಲ್ಲ. ಅಥವಾ ಒಂದೊಂದು ಅಧ್ಯಾಯವೂ ಒಂದೊಂದು ಸೂಕ್ತವಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ಅನೇಕಾನೇಕ ಮಂತ್ರಗಳಿವೆ. ಈ ಮಂತ್ರಗಳನ್ನು ಅನುವಾಕಗಳನ್ನಾಗಿ ವಿಭಾಗ ಮಾಡಿದೆ. ಈ ವೇದದ ಸರ್ವಾನುಕ್ರಮಣಿಯಲ್ಲಿ 303 ಅನುವಾಕಗಳಿವೆಯೆಂದು ಹೇಳಿದೆ. (ನಿರ್ಣಯಸಾಗರ ಪ್ರೆಸ್ಸಿನ ಪ್ರಕಟಣೆಯ ಕೊನೆಯಲ್ಲಿ ನೋಡಿ.) ಯಾಜ್ಞವಲ್ಕ್ಯರದೆಂದು ಹೇಳಲಾದ ಶಿಕ್ಷಾಗ್ರಂಥವೊಂದನ್ನು ಇದರೊಡನೆ ಮುದ್ರಿಸಲಾಗಿದೆ.

ಈ ಸರ್ವಾನುಕ್ರಮಣಿ ಕಾತ್ಯಾಯನರದು ಎಂದು ಹೇಳಿದೆ. ಇವರು ಪ್ರಾಯಃ ಈಚಿನವರಿರ ಬೇಕು. ಸರ್ವಾನುಕ್ರಮಣಿ ಮತ್ತು ಭಾಷ್ಯದಲ್ಲಿ ಅಧ್ಯಾಯಗಳ ಋಷಿಗಳು, ಮಂತ್ರಗಳ ಛಂದಸ್ಸು, ದೇವತೆ ಮುಂತಾದವುಗಳನ್ನು ತಿಳಿಸಿದೆ. ಋಷಿಗಳ ಹೆಸರುಗಳು ಅನೇಕ ಸಲ ಕಾಲ್ಪನಿಕವಾಗಿವೆ. ಮೊದಲನೆಯ ಅಧ್ಯಾಯಕ್ಕೆ ಪ್ರಜಾಪತಿ ಋಷಿ. ಕೊನೆಯ ಅಧ್ಯಾಯವಾದ ಈಶಾವಾಸ್ಯೋಪನಿಷತ್ತಿಗೆ 'ದಧ್ಯನ್ ಆಥರ್ವಣ' ಋಷಿಯೆಂದು ಉವಟಭಾಷ್ಯವೂ, 'ಬ್ರಹ್ಮನ್' ಋಷಿಯೆಂದು ಸರ್ವಾನುಕ್ರಮಣಿಯೂ ತಿಳಿಸುತ್ತವೆ. ಒಂದೇ ಅಧ್ಯಾಯದ ಅನೇಕ ಭಾಗಗಳಿಗೆ ಬೇರೆ ಬೇರೆ ಋಷಿಗಳನ್ನು ಹೇಳಲಾಗಿದೆ. ಋಗ್ವೇದದಿಂದ ತೆಗೆದುಕೊಂಡ ಮಂತ್ರಗಳಿಗೆ ಋಗ್ವೇದ ಋಷಿಗಳನ್ನೇ ಪ್ರಾಯಿಕವಾಗಿ ಹೇಳಿದ್ದಾರೆ. ಆದರೆ ಕೆಲವು ವೇಳೆ ಇಲ್ಲಿಯೂ ಅಲ್ಲಿಗಿಂತ ಬೇರೆ ಬೇರೆ ಋಷಿಗಳ ಹೆಸರನ್ನು ಹೇಳಿರುವುದೂ ಉಂಟು. ಉದಾಹರಣೆಗೆ 30ನೇ ಅಧ್ಯಾಯದ 2ನೇ ಮಂತ್ರವಾದ ಗಾಯತ್ರೀ ಮಂತ್ರಕ್ಕೆ 'ನಾರಾಯಣ' ಋಷಿ ಎಂದು ಇಲ್ಲಿ ಹೇಳಿದೆ. ಕೃಷ್ಣಯಜುರ್ವೇದಕ್ಕೆ ಋಷಿಗಳನ್ನು ಹೇಳಿಲ್ಲದ ಕಾರಣ ಅವುಗಳನ್ನು ಕುರಿತ ವಿಭಿನ್ನ ಊಹೆಗಳ ಕಾರಣ ಋಷಿಗಳನ್ನು ಕುರಿತ ಈ ರೀತಿಯ ಭಿನ್ನಭಿನ್ನ ಉಲ್ಲೇಖಗಳು ಬಂದಿವೆಯೆಂದು ಊಹಿಸಬಹುದು.

ಇತರ ವೇದಗಳಿಗಿರುವಂತೆ ಇದಕ್ಕೂ ಪದಪಾಠವೊಂದೇನೋ ಇದೆ. ಆದರೂ ಈ ವೇದದ ಭಾಷ್ಯಗಳಲ್ಲಾಗಲೀ, ಸರ್ವಾನುಕ್ರಮಣಿಯಲ್ಲಾಗಲೀ ಈ ಸಂಹಿತೆಯ ಪದಗಳ ಸಂಖ್ಯೆಯನ್ನು ಎಣಿಸಿಲ್ಲ. ಈ ಸಂಹಿತೆಯು ಗಾತ್ರದಲ್ಲಿ ಕೃಷ್ಣಯಜುರ್ವೇದದ ಮೂರರಲ್ಲಿ ಒಂದು ಭಾಗದಷ್ಟೂ, ಋಗ್ವೇದದ ಐದನೇ ಒಂದರಷ್ಟೂ ಇದೆಯೆಂದು ಹೇಳಬಹುದು. ಮಂತ್ರಕ್ಕೆ 15 ಪದಗಳಿವೆಯೆಂದು ಎಣಿಸಿದರೂ ಒಟ್ಟು 1975 ಮಂತ್ರಗಳಿಗೆ 29625 ಪದಗಳಾಗುತ್ತವೆ.

ಈ ಸಂಹಿತೆಯ ನಲವತ್ತು ಅಧ್ಯಾಯಗಳಲ್ಲಿ ಸಂಪ್ರದಾಯ ಮತ್ತು ವಿಷಯ

ವಿವೇಚನೆಗನುಗುಣವಾಗಿ ಮೊದಲನೆಯ 25 ಅಧ್ಯಾಯಗಳು ಬಹಳ ಪ್ರಾಚೀನವಾದವು. 26 ರಿಂದ 40 ರವರೆಗಿನ 15 ಅಧ್ಯಾಯಗಳು ಖಿಲವೆಂದು ಪ್ರಸಿದ್ಧವಾಗಿವೆ. ಇವು ಅವಾಂತರಯುಗೀಯವಾದುವೆಂದು ಆದ್ದರಿಂದಲೇ ಹೇಳಲಾಗಿದೆ. ನಿರ್ಣಯಸಾಗರ ಪ್ರೆಸ್ಸಿನ ಪ್ರಕಟಣೆಯ ಕೊನೆಯಲ್ಲಿರುವ ಅನುವಾಕಾಧ್ಯಾಯದಲ್ಲಿ 26 ರಿಂದ 35 ಅಧ್ಯಾಯಗಳು ಪೂರ್ತಾ ಖಿಲವೆಂದೂ 36 ರಿಂದ 40 ರವರೆಗೆ ಐದು ಅಧ್ಯಾಯಗಳು ಶುಕ್ರಿಯವೆಂದೂ ಹೇಳಿದೆ. ಹಾಗೆಯೇ 22 ರಿಂದ 25 ಅಧ್ಯಾಯಗಳು ಅಶ್ವವೆಂದೂ, 19ರಿಂದ 21 ಅಧ್ಯಾಯಗಳು ಸೌರವೆಂದೂ ಅಲ್ಲಿ ಹೇಳಿದೆ. 11 ರಿಂದ 18 ಅಧ್ಯಾಯಗಳಿಗೆ ಚಿತ್ ಎಂಬ ಹೆಸರಿದೆ. ಮೊದಲ 10 ಅಧ್ಯಾಯಗಳಿಗೆ ಮಾತ್ರ ಹೆಸರೇನನ್ನೂ ಕೊಟ್ಟಿಲ್ಲ. ಈ ವಿವೇಚನೆಯನ್ನು ನಾವು ಪರಿಶೀಲಿಸಿದರೆ ಮೊದಲಿಂದ 25 ಅಧ್ಯಾಯಗಳು ಪ್ರಾಚೀನವಾದುವೆಂದೂ, 26 ರಿಂದ 35 ಅಧ್ಯಾಯಗಳು ಖಿಲಗಳೆಂದೂ, 36 ರಿಂದ 40 ಅಧ್ಯಾಯಗಳು ಪೂರ್ತಾ ಶುಕ್ರಿಯವೆಂದೂ ಗೊತ್ತಾಗುವುದು. ಉವಟ ಮತ್ತು ಮಹೀಧರರೂ ತಮ್ಮ ಭಾಷ್ಯಗಳಲ್ಲಿ 26 ರಿಂದ 35 ಅಧ್ಯಾಯಗಳು ಖಿಲಾಧ್ಯಾಯಗಳೆಂದೇ ಹೇಳುತ್ತಾರೆ.

ಈ ಸಂಹಿತೆಯ ಮೊದಲ 18 ಅಧ್ಯಾಯಗಳಿಗೇ ಶತಪಥಬ್ರಾಹ್ಮಣದ ಮೊದಲು ಒಂಭತ್ತು ಅಧ್ಯಾಯಗಳಲ್ಲಿ ವ್ಯಾಖ್ಯಾನ ಮಾಡಿರುವುದರಿಂದ ಈ ಭಾಗವೇ ಮೂಲ ಸಂಹಿತೆಯಾಗಿತ್ತೆಂದು ಮ್ಯಾಕ್ಡೊನೆಲ್ ಮಹಾಶಯನ ವಾದವಾಗಿದೆ. ವ್ಯಾಖ್ಯಾನ ಮಾಡಿರುವುದೇ ಗ್ರಂಥವೊಂದರ ಪ್ರಾಚೀನತೆ ಅಥವಾ ಅರ್ವಾಚೀನತೆಯನ್ನು ನಿರ್ಧರಿಸಲು ಸಾಧಕವಾಗುವುದಿಲ್ಲ. 26ರಿಂದ 35 ರವರೆಗಿನ ಅಧ್ಯಾಯಗಳು ಖಿಲಗಳೆಂದು ಕಾತ್ಯಾಯನರು ಹೇಳಿರುವುದನ್ನೂ ಅವರು ಅಂಗೀಕರಿಸಿದ್ದಾರೆ. ಅಲ್ಲದೆ ಶತಪಥ ಬ್ರಾಹ್ಮಣದಲ್ಲಿ ಉಳಿದ 17 ಅಧ್ಯಾಯಗಳನ್ನು ಕುರಿತೂ ಅಲ್ಲಲ್ಲಿ ವಿವರಣೆಗಳು ಬರುತ್ತವೆ. ಆದ್ದರಿಂದ ಕೊನೆಯ 17 ಅಧ್ಯಾಯಗಳು ಪ್ರಾಚೀನವಲ್ಲವೆನ್ನಲು ಈ ಅಂಶವನ್ನು ಆಧಾರವಾಗಿಟ್ಟುಕೊಳ್ಳುವುದು ಸರಿಹೋಗದು.

### ವಿಷಯ ವಿವೇಚನೆ

ಈ ಸಂಹಿತೆಯ ಮೊದಲ ಎರಡು ಅಧ್ಯಾಯಗಳಲ್ಲಿ ದರ್ಶ ಮತ್ತು ಪೌರ್ಣಮಾಸ ಇಷ್ಟಿಗಳಿಗೆ ಸಂಬಂಧಿಸಿದ ಮಂತ್ರಗಳೂ, ಮೂರನೇ ಅಧ್ಯಾಯದಲ್ಲಿ ಅಗ್ನಿಹೋತ್ರ ಮತ್ತು ಚಾತುರ್ಮಾಸ್ಯಗಳಿಗೆ ಉಪಯುಕ್ತವಾದ ಮಂತ್ರ ವಿವರಣೆಯೂ, ನಾಲ್ಕರಿಂದ ಎಂಟನೇ ಅಧ್ಯಾಯದ ಪೂರ್ತಾ ಸೋಮಯಾಗಕ್ಕೆ ಸಂಬಂಧಿಸಿದ ಮಂತ್ರಗಳೂ ಇವೆ. ಅಗ್ನಿಷ್ಟೋಮ ಪ್ರಕೃತಿಯಾಗವಾದ ಕಾರಣ ಇದರ ವಿಸ್ತೃತವಾದ ವಿವರಣೆ ಇಲ್ಲಿದೆ. ಒಂದೇ ದಿನದಲ್ಲಿ ಮುಗಿಸಬಹುದಾದ ಸೋಮಯಾಗದ ಬಗೆಗಳಲ್ಲೊಂದಾದ 'ವಾಜಪೇಯ'ದ ವರ್ಣನೆ ಇಲ್ಲಿದೆ. ಒಂಭತ್ತು ಮತ್ತು ಹತ್ತನೇ ಅಧ್ಯಾಯಗಳಲ್ಲಿ 'ವಾಜಪೇಯ' ಮತ್ತು 'ರಾಜಸೂಯ' ಯಾಗಗಳಿಗೆ ಸಂಬಂಧಿಸಿದ ಮಂತ್ರಗಳು ಇವೆ. 11ರಿಂದ 18 ಅಧ್ಯಾಯಗಳು ಪೂರ್ತಿಯಾಗಿ 'ಅಗ್ನಿಚಯನ'ದ ವಿಚಾರವನ್ನು ವಿವೇಚಿಸುತ್ತವೆ. ವೇದಿನಿರ್ಮಾಣದ ವರ್ಣನೆ ಇಲ್ಲಿ ವಿಸ್ತಾರವಾಗಿ ಬಂದಿದೆ. ಅಗ್ನಿವೇದಿಕೆಯನ್ನು 10800 ಇಟ್ಟಿಗೆಗಳಿಂದ ಗರಿತೆರೆದ ಹಕ್ಕಿಯ ಆಕಾರದಲ್ಲಿ ನಿರ್ಮಿಸುವ ವಿಚಾರ ಇಲ್ಲಿ ವಿವರಿಸಲಾಗಿದೆ. ಇದರಲ್ಲಿ 16ನೇ ಅಧ್ಯಾಯದಲ್ಲಿ ಶತರುದ್ರೀಯ ಹೋಮದ ಪ್ರಸಂಗವಿದೆ. 18ನೇ ಅಧ್ಯಾಯದಲ್ಲಿ 'ವಸೋರ್ಧಾರಾ' ಸಂಬಂಧಿಯಾದ ಮಂತ್ರಗಳಿವೆ.

19, 20 ಮತ್ತು 21ನೇ ಅಧ್ಯಾಯಗಳಲ್ಲಿ ಸೌತ್ರಾಮಣೀ ಯಾಗದ ವಿಚಾರವು

ಪ್ರಸ್ತುತವಾಗಿದೆ. ಅಧಿಕವಾಗಿ ಸೋಮಪಾನ ಮಾಡಿದ ಕಾರಣ ಇಂದ್ರನು ರೋಗಕ್ಕೆ ತುತ್ತಾದನೆಂದೂ ಅಶ್ವಿನೀ ದೇವತೆಗಳು ಈ ಯಾಗದ ಮೂಲಕ ಅದರ ಚಿಕಿತ್ಸೆ ನಡೆಸಿದರೆಂದೂ ಹೇಳಿದೆ. ರಾಜ್ಯಚ್ಯುತನಾದ ಅರಸನೂ, ಪಶುಕಾಮನಾದ ಯಜಮಾನನೂ, ಸೋಮರಸದ ಅನುಕೂಲತೆ ಇಲ್ಲದವನೂ ಈ ಯಾಗವನ್ನು ಅನುಷ್ಠಿಸಬಹುದಾಗಿದೆ. ಈ ಯಾಗದ ವಿವರಣೆಯನ್ನು 19ನೇ ಅಧ್ಯಾಯದ ಭಾಷ್ಯದ ಆರಂಭದಲ್ಲಿ ಮಹೀಧರರು ತಿಳಿಸುತ್ತಾರೆ. ಸೋಮರಸದೊಡನೆ ಈ ಯಾಗದಲ್ಲಿ ಸುರಾಪಾನವನ್ನೂ ಮಾಡಬೇಕೆಂಬ ವಿಧಿಯಿದೆ.

22ರಿಂದ 25 ಅಧ್ಯಾಯಗಳು ಪೂರ್ತಾ ಅಶ್ವಮೇಧ ಯಾಗಕ್ಕೆ ಸಂಬಂಧಿಸಿದ ವಿಶಿಷ್ಟ ಮಂತ್ರಗಳನ್ನು ಹೊಂದಿವೆ. ಸಾರ್ವಭೌಮಾಧಿಪತ್ಯವನ್ನು ಬಯಸುವವನು ಈ ಅಶ್ವಮೇಧವನ್ನು ಆಚರಿಸಬೇಕು. ಇದರ ವರ್ಣನೆಯನ್ನು ಶತಪಥ ಬ್ರಾಹ್ಮಣದಲ್ಲಿಯೂ (13ನೇ ಕಾಂಡ) ಕಾತ್ಯಾಯನ ಶ್ರೌತ ಸೂತ್ರದಲ್ಲಿಯೂ (20ನೇ ಅಧ್ಯಾಯ) ಕಾಣಬಹುದು. ಈ ಯಾಗವನ್ನನುಷ್ಠಿಸಿದವರ ಇತಿಹಾಸಗಳೂ, ಆಖ್ಯಾನಗಳೂ ಇಲ್ಲಿವೆ. ಮುಂದಿನ ಹದಿನೈದು ಅಧ್ಯಾಯಗಳು ಖಿಲಗಳೆಂದು ಪರಿಗಣಿಸಲ್ಪಟ್ಟಿವೆ. 26 ರಿಂದ 29 ಅಧ್ಯಾಯಗಳು ಪೂರ್ತಿಯಾಗಿ ಖಿಲಮಂತ್ರಗಳ ಸಂಕಲನಗಳಾಗಿವೆ. ಹಿಂದಿನ ವಿವರಣೆಗಳಿಗೆ ಇವು ಪರಿಶಿಷ್ಟಗಳ ರೂಪದಲ್ಲಿವೆ. 30ನೇ ಅಧ್ಯಾಯದಲ್ಲಿ ಪುರುಷಮೇಧದ ವರ್ಣನೆ ಇದೆ. 184 ಪದಾರ್ಥಗಳ ಆಲಂಭನವನ್ನಿಲ್ಲಿ ನಿರ್ದೇಶಿಸಿದೆ. ಇದು ವಾಸ್ತವವಾದ ಆಲಂಭನವಾಗಿರದೆ ಪ್ರತೀಕರೂಪವಾಗಿದೆ. ಪುರುಷಮೇಧ ವಾಸ್ತವಿಕವಾಗಿ ನಡೆಯುತ್ತಿರಲಿಲ್ಲ. ಇದು ಕೇವಲ ಕಾಲ್ಪನಿಕವಾದ ಯಜ್ಞವಾಗಿದೆ. 31ನೇ ಅಧ್ಯಾಯದಲ್ಲಿ ಪ್ರಸಿದ್ಧವಾದ ಪುರುಷಸೂಕ್ತವಿದೆ. ಋಗ್ವೇದದ ಪುರುಷಸೂಕ್ತಕ್ಕಿಂತ 6 ಮಂತ್ರಗಳು ಇಲ್ಲಿ ಅಧಿಕವಾಗಿವೆ. 32, 33 ಮತ್ತು 34ನೇ ಅಧ್ಯಾಯಗಳಲ್ಲಿ 'ಸರ್ವಮೇಧ'ದ ಮಂತ್ರಗಳಿವೆ. 32ನೇ ಅಧ್ಯಾಯ ಉಪನಿಷತ್ತಿನಂತೆಯೇ ಇದೆ. ಪ್ರಜಾಪತಿಯನ್ನು ಇಲ್ಲಿ ಪುರುಷ ಮತ್ತು ಬ್ರಹ್ಮನೊಡನೆ ಐಕ್ಯಗೊಳಿಸಿದೆ. ಯಾಜಕ ತನ್ನದೆಲ್ಲವನ್ನೂ ಯಾಗದಲ್ಲಿ ದಾನಮಾಡಿ ಉಳಿದ ಜೀವನವನ್ನು ಕಾಡಿನಲ್ಲಿ ಕಳೆಯಲು ಹೋಗುತ್ತಿದ್ದ ಈ ಯಾಗದಲ್ಲಿ. 34ನೇ ಅಧ್ಯಾಯದ ಮೊದಲಿನ ಆರು ಮಂತ್ರಗಳು ಶಿವಸಂಕಲ್ಪೋಪನಿಷತ್ತೆಂದು ಪ್ರಖ್ಯಾತವಾಗಿದೆ. 35ನೇ ಅಧ್ಯಾಯದಲ್ಲಿ ಪಿತೃಮೇಧಕ್ಕೆ ಸಂಬಂಧಿಸಿದ ಮಂತ್ರಗಳಿವೆ. 36 ರಿಂದ 39ನೇ ಅಧ್ಯಾಯ ಪೂರ್ತಾ ಪ್ರವರ್ಗ್ಯಕ್ಕೆ ಅನ್ವಯಿಸುವ ಮಂತ್ರಗಳಿವೆ. ಕೊನೆಯದಾದ 40ನೇ ಅಧ್ಯಾಯವೇ ಸುಪ್ರಸಿದ್ಧವಾದ ಈಶಾವಾಸ್ಯೋಪನಿಷತ್ತಾಗಿದೆ.

ಕೃಷ್ಣಯಜುರ್ವೇದ ಸಂಹಿತೆಯಲ್ಲಿಲ್ಲದ ಪುರುಷಮೇಧದ ವಿಚಾರವನ್ನು ವಿವೇಚಿಸಿರುವುದು ಶುಕ್ಲಯಜುಸ್ಸಂಹಿತೆಯ ವೈಶಿಷ್ಟ್ಯ. ಪುರುಷ ಮೇಧದ ವಿಚಾರ ಋಗ್ವೇದದಲ್ಲಿಯೂ ಇಲ್ಲ. ಪುರುಷಮೇಧ ಆಚರಣೆಯಲ್ಲಿತ್ತೇ ಎಂಬ ಪ್ರಶ್ನೆ ನಮ್ಮ ಮುಂದೆ ಏಳುತ್ತದೆ. ಪುರುಷಮೇಧದಲ್ಲಿ 184 ಜನರ ಆಲಂಭನ ಹೇಳಿದೆ. ಇದು ಶುದ್ಧ ಅಸಂಭವವಾದುದು. ಕೇವಲ ಕಾಲ್ಪನಿಕವಾದ ವರ್ಣನೆ ಇದು. ಐತರೇಯ ಬ್ರಾಹ್ಮಣದಲ್ಲಿ ಬರುವ ಶುನಶ್ಶೇಫನ ಕಥೆಯಿಂದಲೂ ಪುರುಷಮೇಧ ಆಚರಣೆಯಲ್ಲಿರಲಿಲ್ಲವೆಂದು ಗೊತ್ತಾಗುತ್ತದೆ. ಪುರುಷಸೂಕ್ತಕ್ಕೂ ಪುರುಷಮೇಧಕ್ಕೂ ಸಂಬಂಧವನ್ನು ಕಲ್ಪಿಸಿ ಅತಿ ಪ್ರಾಚೀನ ಕಾಲದಲ್ಲಿ ಪುರುಷಮೇಧ ರೂಢಿಯಲ್ಲಿತ್ತೆಂದೂ ಪುರುಷಸೂಕ್ತ ಅದರ ವರ್ಣನೆಯೆಂದೂ ಪ್ರೊ. ರಾಜವಾಡೆ ಮುಂತಾದ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ನೋಡಿ (ಸಿ. ವಿ. ವೈದ್ಯ, ಪು. 143.) ಆದರೆ ಇದಕ್ಕೆ ಯಾವ ಆಧಾರವೂ ಇಲ್ಲ. ಸರ್ವವ್ಯಾಪಿಯಾದ ಪರಮಪುರುಷನನ್ನು ಕುರಿತುದು ಪುರುಷಸೂಕ್ತ.

ಅದಕ್ಕೆ ತಾತ್ವಿಕ ಮಹತ್ವವುಂಟೇ ವಿನಾ ಪುರುಷಮೇಧಕ್ಕದು ಸಂಬಂಧಿಸಿಲ್ಲ. ವಿರಾಟ್‌ಪುರುಷನಿಂದಾದ ಪ್ರಪಂಚದ ಸೃಷ್ಟಿ ಈ ಸೂಕ್ತದಲ್ಲಿ ವರ್ಣಿತವಾಗಿದೆ. ಯಜ್ಞದ ರೂಪದಲ್ಲಿ ಇದನ್ನು ಇಲ್ಲಿ ರೂಪಣಮಾಡಿದೆ. ಆದ್ದರಿಂದ ಪುರುಷಸೂಕ್ತಕ್ಕೂ ಪುರುಷಮೇಧಕ್ಕೂ ಯಾವ ಸಂಬಂಧವೂ ಇಲ್ಲ.

ಈ ಕಾಲದಲ್ಲಿ ಯಜ್ಞಾನುಷ್ಠಾನಕ್ಕೆ ಬಹಳ ಪ್ರಾಧಾನ್ಯವಿತ್ತು. ಸ್ವಲ್ಪವೂ ನ್ಯೂನತೆ ಇಲ್ಲದ ಸಾಂಗೋಪಾಂಗವಾಗಿ ಸೂಕ್ಷ್ಮವಾದ ನಿಯಮಗಳನ್ನೆಲ್ಲಾ ಪಾಲಿಸಿ ಯಾಗವನ್ನು ಮಾಡುವುದೇ ಪರಮಪುರುಷಾರ್ಥವೆಂಬ ಭಾವನೆ ಈ ಕಾಲದಲ್ಲಿತ್ತು. ದೇವಾದಿಗಳು ಯಾಗದಿಂದ ಶಕ್ತಿ ಸಾಮರ್ಥ್ಯಗಳನ್ನು ಸಂಪಾದನೆ ಮಾಡಿದರೆಂದು ವರ್ಣಿಸಲಾಯಿತು. ಮಂತ್ರಗಳ ಶುದ್ಧವಾದ ಉಚ್ಚಾರಣೆಗೆ ಬಹಳ ಶಕ್ತಿ ಇದೆಯೆಂದೂ ಸ್ಖಾಲಿತ್ಯಗಳಾದರೆ ಪ್ರಮಾದ ಸಂಭವಿಸುವುದೆಂದೂ ಹೇಳಿದೆ. ಮಂತ್ರಶಕ್ತಿ ಅರ್ಥಗ್ರಹಣವನ್ನೇ ಅವಲಂಬಿಸಿರುವುದಕ್ಕೆ ಬದಲಾಗಿ ಶುದ್ಧವಾದ ಆನುಪೂರ್ವಿಯ ಉಚ್ಚಾರಣೆಯನ್ನವಲಂಬಿಸಿತ್ತು. ಈ ಸಿದ್ಧಾಂತ ಶುಕ್ಲಯಜುರ್ವೇದದ ಕಾಲದಲ್ಲಿ ಪೂರ್ಣವಾಗಿ ಪ್ರಚಾರದಲ್ಲಿತ್ತು. ಹೀಗೆ ಈ ಕಾಲದಲ್ಲಿ ಯಾಗಾನುಷ್ಠಾನದಲ್ಲಿ ಪರಿಪೂರ್ಣವಾದ ಶ್ರದ್ಧೆ ಇತ್ತು. ವಿವಿಧವಾದ ಯಾಗಗಳ ಅನುಷ್ಠಾನ ಬಹುಮುಖವಾಗಿ ದೇಶದ ಮೂಲೆ ಮೂಲೆಗಳಲ್ಲಿಯೂ ನಡೆಯುತ್ತಿತ್ತು.

## ಅಥರ್ವವೇದ ಸಂಹಿತೆ

ಅಥರ್ವವೇದಕ್ಕೆ ನಾಲ್ಕು ವೇದಗಳಲ್ಲಿ ವಿಶಿಷ್ಟವಾದ ಸ್ಥಾನವಿದೆ. ಋಗ್ಯಜುಸ್ಸಾಮ ವೇದಗಳು ಆಮುಷ್ಮಿಕಫಲಗಳನ್ನು ಕೊಡುವುದಾದರೆ ಇದು ಐಹಿಕಫಲಗಳನ್ನು ಕೊಡುವುದಾಗಿದೆ. ಐಹಿಕಜೀವನವನ್ನು ಸುಖಮಯವನ್ನಾಗಿಯೂ ದುಃಖರಹಿತವನ್ನಾಗಿಯೂ ಮಾಡಿಕೊಳ್ಳಲು ಅನುಸರಿಸಬೇಕಾದ ಸಾಧನಾನುಷ್ಠಾನಗಳ ವಿಚಾರವನ್ನಿದು ವಿವೇಚಿಸುತ್ತದೆ.

ಈ ವೇದವು ಬ್ರಹ್ಮವೇದವೆಂದು ಸಾಯಣರು ತಮ್ಮ ಅಥರ್ವವೇದ ಭಾಷ್ಯದ ಭೂಮಿಕೆಯಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ. ಯಜ್ಞಕ್ಕೆ ಅವಶ್ಯವಾಗಿ ಬೇಕಾದ ಹೋತೃ, ಉದ್ಗಾತೃ, ಅಧ್ವರ್ಯು ಮತ್ತು ಬ್ರಹ್ಮಾ ಎಂಬ ಋತ್ವಿಕ್ಕುಗಳಲ್ಲಿ ಈ ವೇದ ಬ್ರಹ್ಮಾ ಎಂಬ ಋತ್ವಿಕ್ಕಿಗೆ ಸಾಕ್ಷಾತ್ತಾಗಿ ಸಂಬಂಧಿಸಿದೆ. ಬ್ರಹ್ಮಾ ಎಂಬುವನು ಯಜ್ಞಕ್ಕೆ ಅಧ್ಯಕ್ಷನಾದವನು. ಎಲ್ಲ ಕರ್ಮಗಳನ್ನೂ ಎಚ್ಚರಿಕೆಯಿಂದ ಗಮನಿಸಿ ಸಂಭವಿಸಬಹುದಾದ ದೋಷಗಳನ್ನು ನಿವಾರಣೆ ಮಾಡುವುದು ಇವನ ಕೆಲಸ. ಈ ಬ್ರಹ್ಮಾ ಎಂಬ ಋತ್ವಿಕ್ಕಿಗೆ ಋಗ್ಯಜುಸ್ಸಾಮವೇದಗಳು ತಿಳಿದಿರಬೇಕಾಗಿತ್ತು. ಆದರೆ ಅವನ ಸ್ವಂತ ವೇದ ಅಥರ್ವವೇದ. ಋಗ್ವೇದ ಯಜುರ್ವೇದ ಸಾಮವೇದದಂತೆ ಇದು ಯಾಗಕ್ಕೆ ಅಪೇಕ್ಷಿತವಾಗಿಲ್ಲದ ಕಾರಣ ಇದು ವೇದವೂ ಅಲ್ಲ, ಆವಶ್ಯಕವೂ ಅಲ್ಲ ಎಂಬ ವಾದವನ್ನು ಸಾಯಣರು ಸೂಕ್ಷ್ಮವಾಗಿ ಪರೀಕ್ಷಿಸಿದ್ದಾರೆ. (ಐ. ಬ್ರಾ. 5–33)ದಲ್ಲಿ ಬರುವ 'ಅಥ ಕೇನ ಬ್ರಹ್ಮತ್ವಂ ಕ್ರಿಯತೇ ಇತಿ ತ್ರಯ್ಯಾವಿದ್ಯಯೇತಿ ಬ್ರೂಯಾತ್' ಮೊದಲಾದ ವಾದಗಳನ್ನು ಅವರು ಗಮನಿಸಿದ್ದಾರೆ. ಅವುಗಳಿಗೆ ಉಚಿತವಾದ ಉತ್ತರವನ್ನು ಕೊಟ್ಟು ಇದರ ಘನತೆಯನ್ನು ವಿವರಿಸಿದ್ದಾರೆ. ಸಾಯಣರ ವಾದ ಹೀಗಿದೆ :

1. ಋಗ್ಯಜುಸ್ಸಾಮ ವೇದಗಳು ಹೋತೃ, ಅಧ್ವರ್ಯು ಮತ್ತು ಉದ್ಗಾತೃವಿಗೆ ಸಂಬಂಧಿಸಿದವು ಎಂದ ಮಾತ್ರಕ್ಕೆ ಅವುಗಳಿಗೇ ಬ್ರಹ್ಮಕರ್ತವ್ಯ ಪ್ರತಿಪಾದಕತ್ವವೆಂದು ಸಾಧಿಸುವುದ

ಕ್ಕಾಗುವುದಿಲ್ಲ.

2. ವಾಕ್ಕು ಮತ್ತು ಮನಸ್ಸುಗಳಿಂದ ನಿರ್ವಹಿಸಬೇಕಾದ ಯಾಗಶರೀರದ ಅರ್ಧವನ್ನು ಮೂರು ವೇದಗಳು ಪ್ರತಿಪಾದಿಸುತ್ತವೆ. ಮತ್ತು ಅರ್ಧವು ಅಥರ್ವವೇದದಿಂದ ನಿಷ್ಪನ್ನವಾಗುತ್ತದೆ. ಇದನ್ನು ಗೋಪಥ ಬ್ರಾಹ್ಮಣವು 'ತ್ರಿಭಿರ್ವೇದೈರ್ಯಜ್ಞ ಸ್ಯಾನ್ಯತರಃ ಪಕ್ಷಃ ಸಂಸ್ಕ್ರಿಯತೇ. ಮನಸೈವ ಬ್ರಹ್ಮಾ ಯಜ್ಞಸ್ಯಾನ್ಯತರಂ ಪಕ್ಷಂ ಸಂಸ್ಕರೋತಿ' (ಗೋ. ಬ್ರಾ. 32) ಎಂದು ತಿಳಿಸುತ್ತದೆ. ಇದನ್ನೇ ಐತರೇಯ ಬ್ರಾಹ್ಮಣವೂ ಸಹ 'ಅಯಂ ವೈ ಯಜ್ಞೋ ಯೋಯಂ ಪವತೇ | ತಸ್ಯ ವಾಕ್‌ಚ ಮನಶ್ಚ ವರ್ತನ್ಯೌ | ವಾಚಾ ಚಹಿ ಮನಸಾ ಚ ಯಜ್ಞೋವರ್ತತ | ಇಯಂ ವೈ ವಾಕ್ ಅದೋ ಮನಃ | ತದ್ವಾಚಾ ತ್ರಯ್ಯಾ ವಿದ್ಯಯೈಕಂ ಪಕ್ಷಂ ಸಂಸ್ಕುರ್ವಂತಿ | ಮನಸೈವ ಬ್ರಹ್ಮಾ ಸಂಸ್ಕರೋತಿ |' (ಐ. ಬ್ರಾ. 5-33) ಎಂದು ಹೇಳುತ್ತದೆ. ಗೋಪಥ ಬ್ರಾಹ್ಮಣದಲ್ಲಿ 'ಅಥರ್ವಾಂಗಿರೋವಿದಂ ಬ್ರಹ್ಮಾಣಂ' ಎಂದು (2-24) ಅಥರ್ವಾಂಗಿ ರಸವನ್ನರಿತವನನ್ನೇ ಬ್ರಹ್ಮನನ್ನಾಗಿ ಆರಿಸಬೇಕೆಂದು ತಿಳಿಸುತ್ತದೆ.

3. 'ಸ ತ್ರಿಭಿರ್ವೇದೈರ್ವಿಧಿಯತೇ' ಎಂಬ ಸ್ಮೃತಿ ವಾಕ್ಯವಾದರೋ ಅಥರ್ವವೇದ ವನ್ನರಿತವನು ದೊರಕದಿದ್ದರೆ ಆಯಾ ಶಾಖೆಗಳಲ್ಲಿ ಹೇಳಿರುವಂಥ ಬ್ರಹ್ಮತ್ವ ಮಾತ್ರದಿಂದಲೇ ಯಾಗ ನಡೆಸಬೇಕೆಂಬುದನ್ನು ಸೂಚಿಸುತ್ತದೆ.

4. 'ತ್ರಯ್ಯಾ ವಿದ್ಯಯೇತಿ ಬ್ರೂಯಾತ್' (ಐ. ಬ್ರಾ. 5-33) ಎಂಬ ಶ್ರುತಿಯೂ ಪ್ರಕೃತವಾದ ವ್ಯಾಹೃತಿತ್ರಯಕ್ಕನುಗುಣವಾಗಿರುವುದರಿಂದ ವಿರೋಧವೇನೂ ಇಲ್ಲ. ಬೃಹದಾರಣ್ಯಕದಲ್ಲಿ ಬರುವ (4-4-10) 'ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮ್ ಏತದ್ ಯದ್ ಋಗ್ವೇದೋ ಯಜುರ್ವೇದಃ ಸಾಮವೇದೋ ಅಥರ್ವಾಂಗಿರಸಃ' ಎಂಬ ಶ್ರುತಿಗನುಸಾರವಾಗಿ ವೇದತ್ರಯದ ಉತ್ಪತ್ತಿಶ್ರುತಿಯನ್ನು ಉಪಲಕ್ಷಣವೆಂದು ವಿವರಿಸಬೇಕು.

5. ವೇದಗಳು ನಾಲ್ಕು ಎಂಬುವುದಕ್ಕೆ ಶ್ರುತಿಯಲ್ಲಿಯೇ ಅನೇಕ ಕಡೆ ಆಧಾರಗಳಿವೆ. (ಮುಂ. ಉ. 1-1).

6. 'ಯಂ ಋಷಯಃ ತ್ರಯಿವಿದಾ ವಿದುಃ | ಋಚಃ ಸಾಮಾನಿ ಯಜೂಂಷಿ |' ಎಂಬ (ತೈ. ಬ್ರಾ. 1-2-1-26)ದ ಶ್ರುತಿ ಹೇಳುವ ತ್ರೈವಿಧ್ಯ ವೇದಗಳಿಗನ್ವಯಿಸುವುದಿಲ್ಲ. ವೇದಗತವಾದ ಮಂತ್ರಗಳಿಗನ್ವಯಿಸುತ್ತದೆ. ಜೈಮಿನಿಗಳು ತಮ್ಮ ಪೂರ್ವ ಮೀಮಾಂಸಾ ಸೂತ್ರ ಗಳಲ್ಲಿ ಈ ವಿಚಾರವನ್ನು ವಿವರಿಸುತ್ತಾ 'ತಚ್ಚೋದಕೇಷು ಮಂತ್ರಾಖ್ಯಾ' (ಜೈ. 2-1-32), ತೇಷಾಂಋಗ್ ಯತ್ರಾರ್ಥವಶೇನ ಪಾದವ್ಯವಸ್ಥಾ' (2-1-35), 'ಗೀತಿಷು ಸಾಮಾಖ್ಯಾ' (2-1-36), 'ಶೇಷೇಯಜುಶ್ಶಬ್ದಃ' (2-1-37) ಎಂದು ಹೇಳುವರು. ಇವೆಲ್ಲ ಈ ವೇದದಲ್ಲಿಯೂ ಸಂಭವಿಸುವ ಕಾರಣ ನಾಲ್ಕನೆಯದಿಲ್ಲವೆನ್ನಲಾಗುವುದಿಲ್ಲ.

7. ಋಗಾದಿಲಕ್ಷಣಗಳು ಈ ವೇದಕ್ಕೆ ಅನ್ವಯಿಸುವುದಾದರೆ ಅವುಗಳಲ್ಲಿ ಯಾವುದಾದರೂ ಒಂದು ಹೆಸರಿಂದ ಇದನ್ನು ಕರೆಯದೆ ಅಥರ್ವವೇದವೆಂದು ಹೇಳಿರುವುದೂ ದೋಷವಲ್ಲ. ಅಥರ್ವ ಎಂಬ ಹೆಸರಿನ ಬ್ರಹ್ಮನಿಂದ ದೃಷ್ಟವಾದ ಕಾರಣ ಈ ವೇದಕ್ಕೆ ಆತನ ಹೆಸರೇ ಬಂದಿದೆ.

ಹೀಗೆ ಸಾಯಣಾಚಾರ್ಯರು ಈ ವೇದದ ವೇದತ್ವವನ್ನೂ, ಬ್ರಹ್ಮವೇದತ್ವವನ್ನೂ ಸಮರ್ಥಿಸುತ್ತಾರೆ. ಅಥರ್ವವೇದ ಸಾಕ್ಷಾತ್ತಾಗಿ ಯಾಗಕ್ಕೆ ಸಂಬಂಧಿಸಿಲ್ಲವೆಂಬ ಆಕ್ಷೇಪವು ಬಹಳ ಹಳೆಯದೆಂದು ಇದರಿಂದ ಗೊತ್ತಾಗುತ್ತದೆ. ಅಥರ್ವಕ್ಕೆ ವೇದತ್ವ ಬಹಳ ಹಿಂದಿನಿಂದಲೂ

ಇದ್ದಿತಾದರೂ ಅದರ ಮೇಲಿನ ಈ ಆಕ್ಷೇಪ ಪರಿಹಾರವಾಗಿರಲಿಲ್ಲ. ಯಾಗಕ್ಕೆ ಮೂರು ವೇದಗಳ ಉಪಯೋಗವೇ ಆವಶ್ಯಕವಾಗಿದ್ದರೂ ಆ ಮೂರು ವೇದಗಳನ್ನೂ ತಿಳಿದ ಅಥರ್ವವಿತ್ ಬ್ರಹ್ಮಾವಾಗಿರುತ್ತಿದ್ದನೆಂಬ ಅಂಶ ಇದರಿಂದ ಗೊತ್ತಾಗುತ್ತದೆ. ಅಥರ್ವವೇದದಲ್ಲಿ ಉಕ್ತವಾದ ಕ್ರಿಯೆಗಳನ್ನು ಮಾಡುವವನಿಗೆ ಹೆಚ್ಚಿನ ಕೌಶಲ್ಯ, ಸಾಮರ್ಥ್ಯ ಮತ್ತು ಅವಧಾನ ಬೇಕಾಗಿತ್ತು. ಯಾಗದಲ್ಲಿ ನಡೆಯಬಹುದಾದ ಲೋಪದೋಷಗಳ ನಿವಾರಣೆಗೆ ಇಂಥ ಸಮರ್ಥನ ಆವಶ್ಯಕತೆ ಇತ್ತು. ಅಲ್ಲದೆ ಅಥರ್ವವೇದಿಗೆ ಅದ್ಭುತವಾದ ಮಂತ್ರಸಿದ್ಧಿಯೂ ಇರುತ್ತಿತ್ತು. ಅಂಥವನ ರಕ್ಷಣೆಯಲ್ಲಿ ಮತ್ತು ಅಧ್ಯಕ್ಷತೆಯಲ್ಲಿ ಯಾಗಗಳು ನಡೆಯುವುದು ಕ್ಷೇಮಕರವಾದ ಕಾರಣ ಅಥರ್ವವೇದವನ್ನರಿತವನನ್ನು ಬ್ರಹ್ಮಾವಾಗಿ ಮಾಡುತ್ತಿದ್ದರೆಂದು ತೋರುತ್ತದೆ. ಸ್ವಶಾಖೆಯಾದ ಅಥರ್ವವೇದವನ್ನು ಅಧ್ಯಯನ ಮಾಡಿರುವುದರ ಜತೆಗೆ ಅವನು ಯಾಗಪ್ರಯುಕ್ತವಾದ ಇತರ ಋಗ್ಯಜುಸ್ಸಾಮ ವೇದಗಳನ್ನೂ ಅಧ್ಯಯನ ಮಾಡಿ ನಾಲ್ಕು ವೇದಗಳಲ್ಲಿಯೂ ನಿಷ್ಣಾತನಾಗಿರುತ್ತಿದ್ದನು. ಆದ್ದರಿಂದ ಸಮರ್ಥವಾದ ಅವನ ಅಧ್ಯಕ್ಷತೆಯಲ್ಲಿ ನಿರ್ವಿಘ್ನವಾಗಿ ಯಾಗಾನುಷ್ಠಾನ ನಡೆಯುತ್ತಿತ್ತು. ಅಥರ್ವವೇದವೇ ಯಾಗಕ್ಕೆ ನೇರವಾಗಿ ಸಂಬಂಧಿಸಿರಬೇಕಾದ ಆವಶ್ಯಕತೆ ಬೇಕಾಗಿರಲಿಲ್ಲ. ಸಾಯಣರು ಹೇಳುವ ಈ ಸಂಪ್ರದಾಯ ಅವಿಶ್ವಸನೀಯವಾಗಿ ತೋರುವುದಿಲ್ಲ. ಅಂಥ ಉತ್ತಮಾಧಿಕಾರಿಯ ಅಭಾವದಲ್ಲಿ ಇತರರು ಬ್ರಹ್ಮತ್ವವನ್ನಂಗಿಕರಿಸುವ ಅವಕಾಶವೂ ಇದ್ದೇ ಇತ್ತು. ಈ ರೀತಿಯಾಗಿ ಅಥರ್ವವೇದ ಬ್ರಹ್ಮವೇದವೆಂದು ಅಂಗೀಕರಿಸಲಾಗಿರೆ. ಅಥರ್ವಮಂತ್ರಸಂಪ್ರಾಪ್ತಿಯಿಂದ ಎಲ್ಲ ಬಗೆಯ ಸಿದ್ಧಿಯೂ ಉಂಟಾಗುವುದೆಂಬ ದೃಢವಿಶ್ವಾಸ ಅಥರ್ವವೇತ್ತನನ್ನು ಬ್ರಹ್ಮತ್ವಕ್ಕೆ ನಿಯಮಿಸಲು ಕಾರಣ. ಅಥರ್ವಪರಿಶಿಷ್ಟದಲ್ಲಿನ ಕೆಳಗಿನ ಮಾತು ಇದಕ್ಕೆ ಸಾಕ್ಷಿಯಾಗಿದೆ:

> 'ನ ತಿಥಿರ್ನಚ ನಕ್ಷತ್ರಂನ ಗ್ರಹೋ ನಚ ಚಂದ್ರಮಾಃ |
> ಅಥರ್ವಮಂತ್ರ ಸಂಪ್ರಾಪ್ತ್ಯಾ ಸರ್ವಸಿದ್ಧಿರ್ಭವಿಷ್ಯತಿ ||' (ಅ. ಪ. 2-5)

ಅಥರ್ವವೇದಕ್ಕೆ ಅಂಗವಾಗಿರುವ ಸರ್ಪವೇದ, ಪಿಶಾಚವೇದ, ಅಸುರವೇದ, ಇತಿಹಾಸ ವೇದ ಮತ್ತು ಪುರಾಣವೇದವೆಂಬ ಪಂಚೋಪವೇದಗಳೂ ಬ್ರಹ್ಮನಿಂದ ಸೃಜಿಸಲ್ಪಟ್ಟವೆಂದು ಗೋಪಥ ಬ್ರಾಹ್ಮಣ ತಿಳಿಸುತ್ತದೆ. (ಗೋ. ಬ್ರಾ. 1-10). ಆಮುಷ್ಮಿಕ ಫಲಗಳಿಗಾಗಿ ಆಚರಿಸುವ ದರ್ಶಪೌರ್ಣಮಾಸಾದಿ ಕರ್ಮಗಳಲ್ಲಿ ಬ್ರಹ್ಮತ್ವ ಅಥರ್ವವೇದಕ್ಕೆ ಮೀಸಲಾದಂತೆ ಐಹಿಕವಾದ ಶಾಂತಿಕ ಪೌಷ್ಟಿಕ ಕರ್ಮಗಳು, ರಾಜಕರ್ಮಗಳು, ಅಪರಿಮಿತವಾದ ಫಲವನ್ನು ಕೊಡುವ ತುಲಾಪುರುಷಾದಿ ಮಹಾದಾನಗಳು ಇವುಗಳೆಲ್ಲಾ ಅಥರ್ವವೇದ ಪ್ರತಿಪಾದಿತವಾಗಿವೆ.

ಅಥರ್ವವೇದದ ಜ್ಞಾನ ಪುರೋಹಿತನಿಗೆ ಅತ್ಯಾವಶ್ಯಕವಾಗಿದ್ದಿತು. ರಾಜರುಗಳಿಗೆ ಅಪೇಕ್ಷಿತವಾದ ಶಾಂತಿಕ ಪೌಷ್ಟಿಕ ಕರ್ಮಗಳನ್ನೂ, ರಾಜಾಭಿಷೇಕಾದಿಗಳನ್ನೂ ಅಥರ್ವವೇದೋಕ್ತವಾದ ರೀತಿಯಲ್ಲಿ ಪುರೋಹಿತರು ನಡೆಸುತ್ತಿದ್ದರು. ನೀತಿಶಾಸ್ತ್ರದಲ್ಲಿ ಪುರೋಹಿತನ ಲಕ್ಷಣವನ್ನು ಹೇಳುತ್ತಾ ಅವನು ಅಥರ್ವವಿಹಿತವಾದ ಶಾಂತಿಕ ಪೌಷ್ಟಿಕಗಳನ್ನಾಚರಿಸಬೇಕೆಂದು ಹೇಳುತ್ತದೆ:

> 'ತ್ರಯ್ಯಾಂ ಚ ದಂಡನೀತ್ಯಾಂ ಚ ಕುಶಲಃ ಸ್ಯಾತ್ ಪುರೋಹಿತಃ |
> ಅಥರ್ವವಿಹಿತಂ ಕರ್ಮ ಕುರ್ಯಾಚ್ಛಾಂತಿಕ ಪೌಷ್ಟಿಕಂ ||

**ಅಥರ್ವ ಪರಿಶಿಷ್ಟದಲ್ಲಿ –**

'ಯಸ್ಯ ರಾಜ್ಞೋ ಜನಪದೇ ಅಥರ್ವಾ ಶಾಂತಿಪಾರಗಃ |
ನಿವಸತ್ಯಪಿ ತದ್ರಾಷ್ಟ್ರಂ ವರ್ಧತೇ ನಿರುಪದ್ರವಮ್ ||
ತಸ್ಮಾದ್ರಾಜಾ ವಿಶೇಷಣ ಅಥರ್ವಾಣಂ ಜಿತೇಂದ್ರಿಯಂ |
ದಾನಸಮ್ಮಾನಸತ್ಕಾರೈಃ ನಿತ್ಯಂ ಸಮಭಿಪೂಜಯೇತ್ ||' (ಅ. ಪ. 4-6).

ಎಂದು ಹೇಳಿದೆ. ಈ ರೀತಿಯಲ್ಲಿ ಅಥರ್ವವೇದ ಐಹಿಕ ಹಾಗೂ ಆಮುಷ್ಮಿಕ ವಿಷಯಗಳನ್ನು ಪ್ರತಿಪಾದಿಸುವ ಕಾರಣ ವೇದವಾಙ್ಮಯದಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ.

ಅಥರ್ವವೇದಕ್ಕೆ ಬ್ರಹ್ಮವೇದ, ಅಂಗಿರೋವೇದ, ಭೃಗ್ವಂಗಿರಸ, ಅಥರ್ವಾಂಗಿರಸ ವೇದ ಎಂಬ ಹೆಸರುಗಳಿವೆ. ನಿರುಕ್ತದಲ್ಲಿ 'ಅಥರ್ವಾಣೋಽಥನವಂತಃ | ಥರ್ವತಿಶ್ಚರತಿ ಕರ್ಮಾ ತತ್ಪ್ರತಿಷೇಧಃ' ಎಂದು ಈ ಹೆಸರನ್ನು ವಿವರಿಸಿದೆ (ನಿ. 11-19-1). ಸ್ಥಿತ ಪ್ರಕೃತಿಗಳಾದವರು ಅಥರ್ವಾಣರೆಂದು ಯಾಸ್ಕರ ವಿವರಣೆ. ಅಕುಟಿಲವಾದ ವೃತ್ತಿಯಿಂದ ಮನಸ್ಸಿನ ಸ್ಥೈರ್ಯವನ್ನು ಪಡೆದುಕೊಂಡವರಿವರು. ಇಲ್ಲಿನ ಮಂತ್ರಗಳಿಂದ ಪರಬ್ರಹ್ಮಪ್ರಾಪ್ತಿಯೂ ಆಗುವುದೆಂಬ ಅರ್ಥದಲ್ಲಿಯೂ ಇದನ್ನು ಬ್ರಹ್ಮವೇದವೆಂದು ಕರೆಯುತ್ತಾರೆ. ಸಾಯಣಾಚಾರ್ಯರು ಅಥರ್ವಾಂಗಿರಸರಿಂದ ದೃಷ್ಟವಾದ ಮಂತ್ರಗಳಿವೆಂಬುದಕ್ಕೆ ಆಖ್ಯಾನವೊಂದನ್ನು ತಮ್ಮ ಭೂಮಿಕೆಯಲ್ಲಿ ಹೇಳಿದ್ದಾರೆ.

'ಮೊದಲು ಸೃಷ್ಟಿಗಾಗಿ ಬ್ರಹ್ಮನು ತಪಸ್ಸುಮಾಡಿದನಂತೆ. ಹಾಗೆ ತಪಸ್ಸನ್ನಾಚರಿಸಿದ ಅವನ ರೋಮಕೂಪಗಳಿಂದ ಸ್ವೇದಧಾರೆ ಪ್ರವಹಿಸಿತು. ಅದರಿಂದ ಭೃಗು ಮತ್ತು ಅಂಗಿರಸರು ಹುಟ್ಟಿದರು. ಆ ಭೃಗುವಿಗೇ ಅಥರ್ವ ಎಂದು ಹೆಸರು. ಅವರಿಂದ 20 ಮಂದಿ ಅಥರ್ವಾಣರೂ ಆಂಗಿರಸರೂ ಉತ್ಪನ್ನರಾದರು. ತಪಸ್ಸಾಚರಿಸಿದ ಆ ಋಷಿಗಳ ಮೂಲಕ ಸ್ವಯಂಭುವಾದ ಬ್ರಹ್ಮ ಯಾವ ಮಂತ್ರಗಳನ್ನು ಕಂಡನೋ ಆ ವೇದ ಅಥರ್ವಾಂಗಿರಶಬ್ದವಾಚ್ಯವಾಯಿತು.' ಅದನ್ನು ಗೋಪಥ ಬ್ರಾಹ್ಮಣ-'ಏತದ್ವೈ ಭೂಯಿಷ್ಠಂ ಬ್ರಹ್ಮ ಯದ್ ಭೃಗ್ವಂಗಿರಸಃ | ಯೇಂಗಿರಸಃ ಸರಸಃ | ಯೇಥರ್ವಾಣಸ್ತದ್ಭೇಷಜಮ್ | ಯದ್ಭೇಷಜಂ ತದಮೃತಂ | ತದ್ಬ್ರಹ್ಮ !' (ಗೋ. ಬ್ರಾ. 3-4) ಎಂದು ಹೇಳಿ ಸಾರಭೂತವಾದುದು ಇದೆಂದು ಹೇಳುತ್ತದೆ. ಅವೆಸ್ತಾದಲ್ಲಿ ಬರುವ ಅಥ್ರವನ್ ಶಬ್ದ ಅಥರ್ವನ್ ಶಬ್ದದ ಪ್ರತಿನಿಧಿಯಾಗಿದೆ. ಪ್ರಾಯಃ ಇವೆರಡು ಶಬ್ದಗಳೂ ಅಗ್ನಿಯ ಉಪಾಸನೆ ಅಥವಾ ಪೂಜೆಯನ್ನು ಮಾಡುವ ಋತ್ವಿಕ್ಕಿಗೆ ಅನ್ವಯಿಸುವುದೆಂದು ತೋರುತ್ತದೆ. ಸುಖವನ್ನುಂಟುಮಾಡುವ ಮಂತ್ರಗಳಿಗೆ ಅಥರ್ವನ್ ಎಂಬುದೂ ಮಾರಣಮೋಹನಾದಿ ಆಭಿಚಾರಕ ಮಂತ್ರಗಳಿಗೆ ಅಂಗಿರಸ್ಸೆಂಬುದೂ ಅರ್ಥವೆಂದು ಪಾಶ್ಚಾತ್ಯ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಅಥರ್ವವೇದಲ್ಲಿಯೇ

ಯಸ್ಮಾದೃಚೋ ಅಪಾತಕ್ಷನ್
ಯಜುರ್ಯಸ್ಮಾದಪಾಕಶನ್ |
ಸಾಮಾನಿಯಸ್ಯ ಲೋಮಾ-
ನ್ಯಥರ್ವಾಂಗಿರಸೋ ಮುಖಮ್ | (ಅಥರ್ವ 10-7-20)

ಮತ್ತು 'ಕಾಲೇಯಮಂಗಿರಾ ದೇವೋ ಅಥರ್ವಾಚಾಧಿತಿಷ್ಠತಃ' (ಅಥರ್ವ (19-5-5)

ಎಂಬಲ್ಲಿ ಅಥರ್ವಾಂಗಿರಸ ಎಂಬ ಹೆಸರನ್ನು ಬೇರೆ ಬೇರೆಯಾಗಿಯೂ ಒಟ್ಟಾಗಿಯೂ ಹೇಳಿದೆ. ಬ್ಲೂಮ್‌ಫೀಲ್ಡ್ ಇವರಿಬ್ಬರೂ ಬೇರೆ ಬೇರೆಯಾದವರೆಂದು ಭಾವಿಸುತ್ತಾನೆ. ಅಥರ್ವಣ

ಮಂತ್ರ ಶುಭಪ್ರಾಪ್ತಿಗೂ ಅಂಗಿರಸಮಂತ್ರಗಳು ಮಾರಣಾದಿಗಳಿಗೂ ಉಪಯುಕ್ತವಾದುವೆಂದು ಅವನು ಹೇಳುತ್ತಾನೆ. ಋಗ್ವೇದದ (10-108-10) ಮಂತ್ರದಲ್ಲಿ ಅಂಗಿರಸರು ಭಯಂಕರರೆಂದು ಹೇಳಿರುವುದನ್ನು ಇದಕ್ಕೆ ಉಪಷ್ಟಂಭಕವಾಗಿ ಹೇಳಲಾಗಿದೆ. ಮೊದಲು ಇವರಿಬ್ಬರ ಹೆಸರಿನಿಂದಲೂ ಕರೆಯಲಾದ ಇದು ಕ್ರಮೇಣ ಅಥರ್ವವೇದವೆಂದೇ ಪ್ರಸಿದ್ಧವಾಯಿತು. ಬ್ರಾಹ್ಮಣಗಳು, ಛಾಂದೋಗ್ಯ ಉಪನಿಷತ್ ಮೊದಲಾದುವೂ ಹೀಗೆ ವ್ಯವಹಾರ ಮಾಡುತ್ತವೆ. ಅಂಗಿರಸರು ಋಗ್ವೇದದಲ್ಲಿನ ಅನೇಕ ಶುಭಕರವಾದ ಸೂಕ್ತಗಳ ದ್ರಷ್ಟಾರರಾಗಿದ್ದಾರೆ. ಆ ಕಾರಣ ಕಾಲಕ್ರಮದಲ್ಲಿ ಈ ಅಭಿಚಾರಕ ಮಂತ್ರಗಳೊಡನೆ ಅವರ ಸಂಬಂಧವನ್ನು ಮರೆಸಲಾಯಿತು. ಆದರೆ ಅಥರ್ವನ್ ಇಂದ ದೃಷ್ಟವಾದ ಮಂತ್ರ ಋಗ್ವೇದದಲ್ಲಿ ಯಾವುದೂ ಇಲ್ಲ. ಇವರಿಬ್ಬರ ಹೆಸರುಗಳೊಡನೆ ಭೃಗುವಿನ ಹೆಸರೂ ಅಥರ್ವವೇದಕ್ಕೆ ಸಂಬಂಧಿಸಿದಂತೆ ಬಂದಿತ್ತು. ಆದರೆ ಅವರ ಹೆಸರೂ ಕಾಲಕ್ರಮದಲ್ಲಿ ಬಳಿಕೆ ತಪ್ಪಿತು. ಈ ಅಥರ್ವಣರು ಭಾರತದ ಹೊರಗೆ ಪ್ರಾಯಃ ಪರ್ಷಿಯಾದಲ್ಲೇ ಇದ್ದಿರಬಹುದೆಂದು ಸಿ. ವಿ. ವೈದ್ಯರು, ಶ್ರೌತಸೂತ್ರಗಳ ಗೋತ್ರಪ್ರವರಾಧ್ಯಾಯಗಳಲ್ಲಿ ಬರುವ ಹೆಸರುಗಳಲ್ಲಾಗಲೀ ಸಪ್ತಋಷಿಗಳ ಹೆಸರುಗಳಲ್ಲಾಗಲೀ ಅಥರ್ವಣರ ಹೆಸರು ಬಂದಿಲ್ಲವೆಂಬ ಕಾರಣದಿಂದ ಊಹಿಸುತ್ತಾರೆ (ಪು. 155). ಆದರೆ ಇದಕ್ಕೆ ಸಾಕಷ್ಟು ಆಧಾರಗಳಿಲ್ಲವೆಂದು ನಮ್ಮ ಅಭಿಪ್ರಾಯ. ಅಥರ್ವಣರ ವಿಚಾರ ನಮಗೆ ಹೆಚ್ಚು ತಿಳಿಯದ ಕಾರಣ ನಾವು ನಿರ್ಧರವಾಗಿ ಏನನ್ನೂ ಹೇಳುವುದಕ್ಕಾಗುವುದಿಲ್ಲ. ವಾಜಸನೇಯಿ ಸಂಹಿತೆಯ ಪ್ರಚಾರದ ನಂತರ ಪಿಪ್ಪಲಾದರು ತಮ್ಮ ಕಾಲದಲ್ಲಿ ಜನರಲ್ಲಿ ಪರಂಪರಾನುಗತವಾಗಿ ಬಂದ ಶಾಂತಿಕ ಪೌಷ್ಟಿಕ ಮಂತ್ರಗಳನ್ನೆಲ್ಲಾ ಸಂಗ್ರಹಿಸಿ ಅಥರ್ವವೇದ ಸಂಹಿತೆಯನ್ನು ಸಂಕಲನ ಮಾಡಿದರೆಂದೂ, ಈ ಕೆಲಸ ಸುಮಾರು ಕ್ರಿ.ಪೂ. 3000ದಿಂದ 2500ರ ಮಧ್ಯಕಾಲದಲ್ಲಿ ಆಗಿರಬೇಕೆಂದೂ ಆಧುನಿಕ ವಿಮರ್ಶಕರು ಅಭಿಪ್ರಾಯಪಡುತ್ತಾರೆ. (ಸಿ.ವಿ. ವೈದ್ಯ ಪು. 156).

### ಅಥರ್ವವೇದ ಶಾಖೆಗಳು

ವೇದವ್ಯಾಸರು ಸುಮಂತುವೆಂಬ ಶಿಷ್ಯನಿಗೆ ಅಥರ್ವವೇದವನ್ನುಪದೇಶಿಸಿದರೆಂದು ಪುರಾಣಗಳಲ್ಲಿ ಹೇಳಿದೆ. ಅಭಿಚಾರಕ ಪ್ರಧಾನವಾದ ಇದರ ಮುಖ್ಯ ಪ್ರಚಾರಕನಾದ ಸುಮಂತುವನ್ನು 'ದಾರುಣಮುನಿ' ಎಂದೂ ಕರೆಯಲಾಗಿದೆ. ಆದರೆ ಆಧುನಿಕ ವಿಮರ್ಶಕರು ಈ ವೇದದ ಸಂಗ್ರಹ ಉಳಿದ ಮೂರು ವೇದಗಳ ನಂತರ ಆಯಿತೆಂದು ಅಭಿಪ್ರಾಯಪಡುತ್ತಾರೆ. ಪಿಪ್ಪಲಾದರು ಇದರ ಸಂಗ್ರಹಕರ್ತರಾಗಿರಬೇಕೆಂದು ಸಿ. ವಿ. ವೈದ್ಯರ ಮತ (ಸಿ. ವಿ. ವೈದ್ಯ, ಪು. 153). ಈ ವೇದ ಒಂಭತ್ತು ಶಾಖೆಗಳಲ್ಲಿದ್ದಿತೆಂದು ಪತಂಜಲಿಗಳು ತಮ್ಮ ಮಹಾಭಾಷ್ಯದ ಪಸ್ಪಶಾಹ್ನಿಕದಲ್ಲಿ 'ನವಧಾಽಥರ್ವಣೋ ವೇದಃ' ಎಂದು ಉಲ್ಲೇಖಿಸಿದ್ದಾರೆ. ಸಾಯಣರು ತಮ್ಮ ಭಾಷ್ಯ ಪೀಠಿಕೆಯಲ್ಲಿ ಈ ವೇದದ ಒಂಭತ್ತು ಶಾಖೆಗಳನ್ನು ಪೈಪ್ಪಲಾದ, ಸ್ತೌದ, ಮೌದ, ಶೌನಕೀಯ, ಜಾಜಲ, ಜಲದ, ಬ್ರಹ್ಮವದ, ದೇಶದರ್ಶ ಮತ್ತು ಚಾರಣ ವೈದ್ಯ ಎಂದು ಹೆಸರಿಸುತ್ತಾರೆ. ಇವುಗಳಲ್ಲಿ ಪಿಪ್ಪಲಾದ ಮತ್ತು ಶೌನಕ ಶಾಖೆಗಳನ್ನು ಬಿಟ್ಟರೆ ಉಳಿದವು ಉಪಲಬ್ಧವಾಗಿಲ್ಲ.

### ಪಿಪ್ಪಲಾದ ಶಾಖೆ

ಪಿಪ್ಪಲಾದರು ಬಹಳ ದೊಡ್ಡ ಅಧ್ಯಾತ್ಮವೇತ್ತರಾಗಿದ್ದರು. ಪ್ರಶ್ನೋಪನಿಷತ್ತಿನಲ್ಲಿ ಇವರ ಬಳಿಗೆ ಸುಕೇಶಾಭಾರದ್ವಜನೇ ಆದಿಯಾಗಿ ಆರು ಜನ ಶಿಷ್ಯರು ತಮ್ಮ ಸಂಶಯ ನಿವಾರಣೆಗಾಗಿ

ಬಂದರೆಂದು ತಿಳಿಯುತ್ತೇವೆ. ಪಿಪ್ಪಲಾದ ಶಾಖೆಯ ಮಂತ್ರ ಸಂಹಿತೆಯಲ್ಲಿ 20 ಕಾಂಡಗಳಿವೆ. ಇದರ ಏಕಮಾತ್ರ ಪ್ರತಿ ಕಾಶ್ಮೀರದಲ್ಲಿ ಉಪಲಬ್ಧವಾಯಿತು. ಇದು ಶಾರದಾ ಲಿಪಿಯಲ್ಲಿದೆ. ಇದರ ಫೋಟೋ ಪ್ರತಿಯನ್ನು ಮೂರು ಸಂಪುಟಗಳಲ್ಲಿ 1901ರಲ್ಲಿ ಅಮೇರಿಕಾದಲ್ಲಿ ಪ್ರಕಟಿಸಲಾಯಿತು. ಮಹಾಭಾಷ್ಯಕ್ಕನುಸಾರವಾಗಿ ಅಥರ್ವವೇದದ ಮೊದಲಮಂತ್ರ 'ಶಂನೋದೇವಿರಭಿಷ್ಟಯೇ ಅಪೋಭವಂತುಪೀತಯೇ | ಶಂಯೋರಭಿಸ್ರವಂತು ನಃ ||' ಎಂಬುದು. ಮೇಲಿನ ಪ್ರತಿಯು ಆದಿಭಾಗದಲ್ಲಿ ತ್ರುಟಿತವಾಗಿರುವ ಕಾರಣ, ಈ ಮಂತ್ರ ಆದಿಮಂತ್ರವಾಗಿತ್ತೇ ಇಲ್ಲವೇ ಎಂಬುದು ಗೊತ್ತಾಗುವುದಿಲ್ಲ. ಆದರೆ ಶೌನಕೀಯ ಶಾಖೆಯ ಸಂಹಿತೆಯಲ್ಲಿ ಇದು ಆರನೇ ಸೂಕ್ತದ ಪ್ರಥಮ ಮಂತ್ರವಾಗಿದೆ. ಈ ಮಂತ್ರ ಪಿಪ್ಪಲಾದ ದೃಷ್ಟವೆಂದು ಛಾಂದೋಗ್ಯಮಂತ್ರ ಭಾಷ್ಯದಲ್ಲಿಯೂ ಹೇಳಿದೆ. ಮಹಾಭಾಷ್ಯಕಾರರ ಕಾಲದಲ್ಲಿ ಪಿಪ್ಪಲಾದಶಾಖೆ ಹೆಚ್ಚು ಪ್ರಚಾರದಲ್ಲಿತ್ತೆಂದು ಇದರಿಂದ ಗೊತ್ತಾಗುತ್ತದೆ.

ಮೌದವೆಂಬ ಶಾಖೆಯ ಹೆಸರೂ ಮಹಾಭಾಷ್ಯ (4-1-86) ಮತ್ತು ಶಾಬರ ಭಾಷ್ಯದಲ್ಲಿ (1-1-30) ಉಲ್ಲೇಖಿತವಾಗಿದೆ. ಅಥರ್ವ ಪರಿಶಿಷ್ಟದಲ್ಲಿ ಮೌದ ಮತ್ತು ಜಲದಶಾಖೆಯ ವಿಚಾರದಲ್ಲಿ ಒಂದು ರೀತಿಯ ನಿಂದೆ ಇರುವುದು ಸೋಜಿಗವಾಗಿದೆ.

> ಪುರೋಧಾ ಜಲದೋ ಯಸ್ಯ ಮೌದೋ ವಾಸ್ಯಾತ್ ಕದಾಚನ |
> ಅಬ್ದಾದ್ ದಶಭ್ಯೋ ಮಾಸೇಭ್ಯೋ ರಾಷ್ಟ್ರಭ್ರಂಶಂ ಸ ಗಚ್ಛತಿ || (ಅ. ಪ. 2-6)

ಮೌದಶಾಖೆಯ ಅಥವಾ ಜಲದ ಶಾಖೆಯ ಪುರೋಹಿತನನ್ನು ಹೊಂದಿದ ರಾಜನು ರಾಷ್ಟ್ರದ ನಾಶಕ್ಕೆ ಕಾರಣನಾಗುತ್ತಾನೆ ಎಂದು ಹೇಳುವ ಈ ಮಾತು ಇವೆರಡು ಶಾಖೆಗಳ ಬಗೆಗೂ ತೀವ್ರವಾದ ಅಸಹನೆಯನ್ನು ವ್ಯಕ್ತಪಡಿಸುತ್ತದೆ.

## ಶೌನಕ ಶಾಖೆ

ಇಂದು ಪ್ರಚಲಿತವಾಗಿರುವ ಅಥರ್ವಸಂಹಿತೆ ಈ ಶಾಖೆಯದೇ. ಗೋಪಥ ಬ್ರಾಹ್ಮಣವೂ ಈ ಶಾಖೆಗೇ ಸೇರಿದುದು. ಈ ಸಂಹಿತೆಯಲ್ಲಿ 20 ಕಾಂಡಗಳಿವೆ. ಇವುಗಳನ್ನು ಅನುವಾಕಗಳನ್ನಾಗಿಯೂ, ಸೂಕ್ತಗಳನ್ನಾಗಿಯೂ ವಿಭಾಗ ಮಾಡಿದೆ. ಇದರಲ್ಲಿ ಒಟ್ಟು 731 ಸೂಕ್ತಗಳಿವೆ. ಈ ಸೂಕ್ತ ಸಂಖ್ಯೆಯಲ್ಲಿ ವ್ಯತ್ಯಾಸಗಳು ಕಂಡುಬಂದಿವೆ. ಬ್ಲೂಮ್‌ಫೀಲ್ಡ್ 730 ಸೂಕ್ತಗಳಿವೆಯೆಂದೂ ಹೇಳುತ್ತಾನೆ. ಶ್ರೀಪಂಡಿತ್ ಅವರು ಪ್ರಕಟಿಸಿರುವ ಸಂಹಿತೆಯಲ್ಲಿ 759 ಸೂಕ್ತಗಳಿವೆ. ಅಜ್ಮೀರ್‌ನಲ್ಲಿ ಪ್ರಕಟವಾದ ಪ್ರತಿಯಲ್ಲಿ 731 ಸೂಕ್ತಗಳಿವೆ. ವ್ಹಿಟ್ನೆ 598 ಸೂಕ್ತಗಳನ್ನು ಕೊಡುತ್ತಾನೆ. ಸೂಕ್ತ ಸಂಖ್ಯೆಯಲ್ಲಿ ಬಂದಿರುವ ಈ ವ್ಯತ್ಯಾಸಕ್ಕೆ ಸಂಪಾದಕರು ಒಂದೊಂದು ಸೂಕ್ತವನ್ನು ವಿನಿಯೋಗಕ್ಕನುಗುಣವಾಗಿ ಪೃಥಕ್ಕರಣ ಮಾಡಿ ಎರಡು ಅಥವಾ ಮೂರು ಸೂಕ್ತಗಳನ್ನಾಗಿ ಎಣಿಸಿರುವುದು ಕಾರಣ. ಎಲ್ಲ ಪಾಠಗಳಲ್ಲೂ ಇರುವ ಮಂತ್ರರಾಶಿಯಲ್ಲಿ ವ್ಯತ್ಯಾಸವಿಲ್ಲ. ಮಂತ್ರಗಳ ಸಂಖ್ಯೆಯಲ್ಲಿಯೂ ಹೀಗೆಯೇ ವ್ಯತ್ಯಾಸವಿದೆ. ಬ್ಲೂಮ್‌ಫೀಲ್ಡ್ ಒಟ್ಟು ಮಂತ್ರಗಳು 6000 ಎಂದು ಕೊಟ್ಟರೆ ವ್ಹಿಟ್ನೆ 5038 ಮಂತ್ರಗಳನ್ನು ಕೊಡುತ್ತಾನೆ. ಅಜ್ಮೀರ್ ಪ್ರಕಟಣೆಯಲ್ಲಿ 5987 ಮಂತ್ರಗಳಿವೆ. ಪ್ರಾಯಃ ಋಕ್ಕುಗಳನ್ನು ಕೂಡಿಸಿ ಅಥವಾ ಬಿಡಿಸಿ ಎಣಿಸಿರುವುದರಿಂದ ಈ ವ್ಯತ್ಯಾಸವೂ ಬಂದಿರಬಹುದು. ಋಗ್ವೇದದ ಶಾಕಲ ಶಾಖೆಯ ಸೂಕ್ತಗಳನ್ನೂ ಮಂತ್ರಗಳನ್ನೂ ಅನುಕ್ರಮಣಿಗಳು ಎಣಿಕೆಮಾಡಿ ನಿರ್ದಿಷ್ಟವಾಗಿ 1017 ಸೂಕ್ತಗಳು 10580 1/4 ಋಕ್ಕುಗಳು ಎಂದು ಕೊಟ್ಟಂತೆ ಈ ವೇದದ ಅನುಕ್ರಮಣಿಗಳು ಸೂಕ್ತಸಂಖ್ಯೆಗಳನ್ನೂ ಮಂತ್ರ ಸಂಖ್ಯೆಗಳನ್ನೂ ಎಣಿಸಿಲ್ಲದಿರುವುದು ಇಂಥ

ವ್ಯತ್ಯಾಸಗಳಿಗೆ ಕಾರಣ. ಈ ಸಂಹಿತೆಯ 20 ಕಾಂಡಗಳನ್ನೂ ನಾಲ್ಕು ಪ್ರಪಾಠಕಗಳನ್ನಾಗಿ ವಿಭಾಗಮಾಡಿದೆ.

| | | |
|---|---|---|
| ಒಂದನೇ ಪ್ರಪಾಠಕ | — | 1 ರಿಂದ 7 ಕಾಂಡಗಳು |
| ಎರಡನೇ ಪ್ರಪಾಠಕ | — | 8 ರಿಂದ 12ನೇ ಕಾಂಡ ಪೂರ್ತಿ |
| ಮೂರನೇ ಪ್ರಪಾಠಕ | — | 13 ರಿಂದ 18ನೇ ಕಾಂಡ ಪೂರ್ತಿ |
| ನಾಲ್ಕನೇ ಪ್ರಪಾಠಕ | — | 19 ಮತ್ತು 20 ನೇ ಕಾಂಡಗಳು |

ಈ ಸಂಹಿತೆಯಲ್ಲಿ ಒಂದು ವಿಶಿಷ್ಟವಾದ ಕ್ರಮದಲ್ಲಿ ಮಂತ್ರಗಳ ಸಂಕಲನ ಮಾಡಿದೆ. ಮೊದಲನೆಯ ಏಳು ಕಾಂಡಗಳಲ್ಲಿ ಚಿಕ್ಕಚಿಕ್ಕ ಸೂಕ್ತಗಳಿವೆ. ಪ್ರಥಮ ಕಾಂಡದಲ್ಲಿ ಪ್ರತಿ ಸೂಕ್ತದಲ್ಲಿಯೂ ನಾಲ್ಕು ಮಂತ್ರಗಳಿವೆ. ಪ್ರತಿ ಸೂಕ್ತದಲ್ಲಿಯೂ 5 ಮಂತ್ರಗಳಿರುವ ಸೂಕ್ತಗಳನ್ನು ಎರಡನೇ ಕಾಂಡದಲ್ಲಿಯೂ, ಪ್ರತಿ ಸೂಕ್ತದಲ್ಲಿಯೂ 6 ಮಂತ್ರಗಳುಳ್ಳ ಸೂಕ್ತಗಳನ್ನು ನಾಲ್ಕನೆಯ ಕಾಂಡದಲ್ಲಿಯೂ, ಎಂಟು ಮಂತ್ರಗಳುಳ್ಳ ಸೂಕ್ತಗಳನ್ನು ಐದನೇ ಕಾಂಡದಲ್ಲಿಯೂ, ಸಂಗ್ರಹಿಸಲಾಗಿದೆ. ಆರನೇ ಕಾಂಡದಲ್ಲಿನ 142 ಸೂಕ್ತಗಳೂ ಹೆಚ್ಚು ಕಡಿಮೆ ಮೂರು ಮಂತ್ರಗಳನ್ನೇ ಹೊಂದಿವೆ. ಏಳನೇ ಕಾಂಡದಲ್ಲಿನ ಸೂಕ್ತಗಳಲ್ಲಿ ಒಂದು ಅಥವಾ ಎರಡು ಮಂತ್ರಗಳು ಮಾತ್ರ ಇವೆ. ಎಂಟನೇ ಕಾಂಡದಿಂದ ಹಿಡಿದು 12ನೇ ಕಾಂಡ ಪೂರ್ತಿಯಾಗಿ ವಿಭಿನ್ನವಾದ ವಿಷಯಗಳ ಮೇಲಿನ ದೊಡ್ಡ ದೊಡ್ಡ ಸೂಕ್ತಗಳಿವೆ. 13ನೇ ಕಾಂಡದಿಂದ 18ನೇ ಕಾಂಡದ ಪೂರ್ತಿಯಾಗಿ ಒಂದೊಂದೇ ವಿಷಯವನ್ನಧಿಕರಿಸುವ ದೀರ್ಘವಾದ ಸೂಕ್ತಗಳಿವೆ. ಉದಾಹರಣೆಗೆ 13ನೇ ಕಾಂಡ ಹೊಂಬಣ್ಣದ ಸೂರ್ಯದೇವತೆಯನ್ನುದ್ದೇಶಿಸಿ ರೋಹಿತಕಾಂಡವೆಂದು ಪ್ರಸಿದ್ಧವಾಗಿದೆ. 14ನೇ ಕಾಂಡ ವಿವಾಹಕಾಂಡವಾಗಿದೆ. ಈ ಕಾಂಡದಲ್ಲಿ ಎರಡು ಸೂಕ್ತಗಳು ಮಾತ್ರ ಇವೆ. ಹದಿನೈದನೆಯ ಕಾಂಡದ ಸೂಕ್ತಗಳೆಲ್ಲಾ ವ್ರಾತ್ಯದೇವತಾಕವಾಗಿವೆ. ಆದ ಕಾರಣ ಅದಕ್ಕೆ ವ್ರಾತ್ಯಕಾಂಡವೆಂಬ ಹೆಸರು ಬಂದಿದೆ. 16ನೇ ಕಾಂಡ ದುಃಸ್ವಪ್ನನಾಶಕ ಮಂತ್ರಗಳ ಸಂಗ್ರಹವಾಗಿದೆ. 17ನೇ ಕಾಂಡದಲ್ಲೆಲ್ಲಾ ಒಂದೇ ಸೂಕ್ತವಿದೆ. ಇದು ಅಭ್ಯುದಯಾರ್ಥವಾಗಿ 'ವಿಷಾಸಹಿ'ಯನ್ನುದ್ದೇಶಿಸಿದೆ. 18ನೇ ಕಾಂಡದಲ್ಲಿ ಪಿತೃಮೇಧ ಸಂಬಂಧಿಯಾದ ಮಂತ್ರಗಳ ಸಂಕಲನ ವಿರುವುದರಿಂದ ಶ್ರಾದ್ಧಕಾಂಡವೆಂಬ ಹೆಸರನ್ನು ಪಡೆದಿದೆ. ಕೊನೆಯ ಎರಡು ಕಾಂಡಗಳಾದ 19 ಮತ್ತು 20ನೇ ಕಾಂಡಗಳು 'ಖಿಲಕಾಂಡ'ಗಳೆಂದು ಪ್ರಸಿದ್ಧವಾಗಿವೆ. ಇವು ಪಶ್ಚಾತ್ಕಾಲ ಸಂಯೋಜಿತವಾದುವೆಂದು ವಿಮರ್ಶಕರಿಂದ ಎಣಿಸಲ್ಪಟ್ಟಿವೆ. 19ನೇ ಕಾಂಡದ 23ನೇ ಸೂಕ್ತ ಅಥರ್ವವೇದ ವಿಚಾರವನ್ನೂ ಆ ಋಷಿಗಳ ವಿಚಾರವನ್ನೂ ಹೇಳುತ್ತದೆ. 19ನೇ ಕಾಂಡದಲ್ಲಿ ಭೈಷಜ್ಯ, ರಾಷ್ಟ್ರವೃದ್ಧಿ ಹಾಗೂ ಅಧ್ಯಾತ್ಮ ವಿಷಯಕವಾದ ಮಂತ್ರಸಂಕಲನವಿದೆ. ಕೊನೆಯ 20ನೇ ಕಾಂಡದಲ್ಲಿ ಸೋಮಯಾಗೋಪಯುಕ್ತವಾದ ಅನೇಕ ಮಂತ್ರಗಳು ಇವೆ. ಇವು ಋಕ್ಸಂಹಿತೆಯ ಒಂದು, ಎಂಟು ಮತ್ತು ಹತ್ತನೇ ಮಂಡಲಗಳಿಂದ ಹಾಗೆಯೇ ಉದ್ಧೃತವಾಗಿವೆ. 'ಕುಂತಾಪ ಸೂಕ್ತ'ಗಳನ್ನು ಬಿಟ್ಟರೆ ಈ ಕಾಂಡದ ಉಳಿದ ಎಲ್ಲ ಮಂತ್ರಗಳೂ ಋಗ್ವೇದ ಮಂತ್ರಗಳಾಗಿವೆ. ಈ ಕಾಂಡದಲ್ಲಿನ ಮಂತ್ರಗಳೆಲ್ಲವೂ ನಿಯಮೇನ ಋಗ್ವೇದಮಂತ್ರಗಳೇ ಆಗಿರುವ ಕಾರಣ ಈ ಹತ್ತು ಕುಂತಾಪ ಸೂಕ್ತಗಳು ಋಗ್ವೇದ ಮಂತ್ರಗಳೇ ಇರಬಹುದೆಂದೂ ಉಪಲಬ್ಧವಾಗಿರುವ ಋಕ್ಸಂಹಿತೆಯಲ್ಲಿ ಈ ಮಂತ್ರಗಳಿಲ್ಲದ ಕಾರಣ ಋಗ್ವೇದದ ಮತ್ತಾವುದೋ ಶಾಖೆಯಿಂದ ಇವುಗಳನ್ನು ಆರಿಸಿಕೊಂಡಿರಬಹುದೆಂದೂ ಊಹಿಸಲಾಗಿದೆ.

ಕುಂತಾಪ ಸೂಕ್ತಗಳ ಉಪಯೋಗ ಯಜ್ಞವಿಧಾನದಲ್ಲಿ ಆವಶ್ಯಕವಾಗಿದ್ದಿತೆಂದು ಐತರೇಯ ಬ್ರಾಹ್ಮಣ (6-32) ಮತ್ತು ಕೌಷೀತಕಿ ಬ್ರಾಹ್ಮಣದಲ್ಲಿ (30-5) ಸ್ಪಷ್ಟವಾಗಿ ಹೇಳಿದೆ. ಈ ಸೂಕ್ತಗಳಲ್ಲಿ ಪರೀಕ್ಷಿತ ರಾಜನ ಹೆಸರೂ ಹಾಗೂ ಅವನ ರಾಷ್ಟ್ರದ ವರ್ಣನೆಯೂ ಇರುವುದರಿಂದ ಇದಕ್ಕೆ ಐತಿಹಾಸಿಕ ಮಹತ್ವವೂ ಉಂಟು. ಅಥರ್ವವೇದದಲ್ಲಿ ಸುಮಾರು 1200 ಮಂತ್ರಗಳು ಋಗ್ವೇದ ಮಂತ್ರಗಳಾಗಿವೆ–ಎಂದರೆ ಇದರ ಐದನೇ ಒಂದು ಭಾಗ ಋಗ್ವೇದದ ಭಾಗವೇ ಆಗಿದೆ ಎಂದಾಯಿತು.

## ಅಥರ್ವವೇದದ ಋಷಿಗಳು

ಹತ್ತೊಂಭತ್ತನೇ ಕಾಂಡದ 23ನೇ ಮಂತ್ರ ಅಥರ್ವಣಸೂಕ್ತಗಳ ವಿಚಾರವನ್ನು ತಿಳಿಸುತ್ತದೆ. ಸೂಕ್ತಗಳ ಋಷಿಗಳ ಹೆಸರನ್ನು ಇದು ತಿಳಿಸುವುದಕ್ಕೆ ಪ್ರತಿಯಾಗಿ ಈ ವೇದದ ಋಷಿಗಳಿಗೆ ಸಾಮಾನ್ಯವಾಗಿ ಬಳಸುವ 'ಆಥರ್ವಣ' ಎಂಬ ಹೆಸರನ್ನು ಬಳಸುತ್ತದೆ. ಈ ಋಷಿಗಳನ್ನೆಲ್ಲಾ ಒಟ್ಟಿಗೆ ಸಾಮೂಹಿಕವಾಗಿ ಆಥರ್ವಣರೆಂದು ಹೇಳುತ್ತದೆ. ಪಂಡಿತರವರು ಪ್ರಕಟಿಸಿದ ಸಾಯಣಭಾಷ್ಯದಲ್ಲಿ ಋಷಿಗಳ ಹೆಸರುಗಳಿಲ್ಲ. ಅಜ್ಮೀರ್‌ನಲ್ಲಿ ಪ್ರಕಟವಾದ ಪ್ರತಿಯಲ್ಲಿಯೂ ಋಷಿಗಳ ಹೆಸರುಗಳು ಉಪಲಬ್ಧವಾಗಿಲ್ಲ. ಇವರನ್ನು ಕುರಿತು ಗೋಪಥಬ್ರಾಹ್ಮಣದಲ್ಲಿ ಹೇಳಲಾಗಿರುವ ಕಥೆ ಹೀಗಿದೆ :

'ಬ್ರಹ್ಮನು ತನ್ನ ಬೆವರಿನಿಂದ ಭೃಗುವನ್ನು ಸೃಜಿಸಿದನು. ಅವನೇ ನಂತರ ಅಥರ್ವನ್ ಆದ. ಬ್ರಹ್ಮನಿಂದಲೇ ಅಂಗಿರಸ್ ಕೂಡ ಜನಿಸಿದ. ಮರಿದೆ ಅಥರ್ವನ್ ತಪಸ್ಸಾಚರಿಸಿದಾಗ 20 ಮಂದಿ ಆಥರ್ವಣರು ಉತ್ಪನ್ನರಾದರು. ಇವರು ಆಂಗಿರಸ ಮಂತ್ರಗಳ ದ್ರಷ್ಟಾರರು.' ಈ ಕಥೆ ನಿರಾಧಾರವಾದುದೆಂದು ಬ್ಲೂಮ್‌ಫೀಲ್ಡ್ ಮುಂತಾದ ಆಧುನಿಕ ವಿಮರ್ಶಕರು ಭಾವಿಸುತ್ತಾರೆ. ಇದು ಕಲ್ಪಿತವೇ ಆಗಿದ್ದರೂ ಗೋಪಥ ಬ್ರಾಹ್ಮಣದಲ್ಲಿರುವ ಕಾರಣ ಆ ಕಾಲದಲ್ಲಿ ಅಥರ್ವವೇದ ಸೂಕ್ತಗಳ ಋಷಿಗಳನ್ನು ಸಾಮಾನ್ಯವಾಗಿ ಆಥರ್ವಣರೆಂದೂ, ಅಥರ್ವನ್, ಅಂಗಿರಸರೆಂದೂ ಹೇಳುತ್ತಿದ್ದರೆಂದೂ, ಭೃಗು, ಬ್ರಹ್ಮ ಮೊದಲಾದವರ ಹೆಸರುಗಳನ್ನು ಅವರೊಡನೆ ಸೇರಿಸುತ್ತಿದ್ದರೆಂದೂ ಗೊತ್ತಾಗುತ್ತದೆ. ಸಾಯಣಭಾಷ್ಯದಲ್ಲಿ ಸೂಕ್ತಋಷಿಗಳ ಉಲ್ಲೇಖವಿಲ್ಲದಿರುವುದು ಗಮನಾರ್ಹವಾಗಿದೆ. ಸರ್ವಾನುಕ್ರಮಣಿಗಳಲ್ಲಿ ಋಷಿಗಳ ಹೆಸರುಗಳನ್ನು ಕೊಟ್ಟಿದೆ. ಈ ಸರ್ವಾನುಕ್ರಮಣಿಗಳು ಗೋಪಥ ಬ್ರಾಹ್ಮಣಕ್ಕಿಂತ, ಸಾಯಣಭಾಷ್ಯಕ್ಕಿಂತ ಈಚಿನದೆಂದು ಊಹಿಸಲಾಗಿದೆ. ಸಾಯಣಭಾಷ್ಯಕ್ಕಿಂತ ಅವು ಪ್ರಾಚೀನವಾಗಿದ್ದಿದ್ದರೆ ಅವುಗಳನ್ನು ಸಾಯಣರು ಗಮನಿಸದೆ ಇರುತ್ತಿರಲಿಲ್ಲ. ಆದರೆ ವ್ಹಿಟ್ನಿ ಮಹಾಶಯ ಅಥರ್ವವೇದದ ತನ್ನ ಅನುವಾದದಲ್ಲಿ ಸರ್ವಾನುಕ್ರಮಣಿಗಳಿಗನುಸಾರವಾಗಿ ಋಷಿಗಳ ಹೆಸರುಗಳನ್ನು ಕೊಡುತ್ತಾನೆ. ಈ ಹೆಸರುಗಳೂ ವಿಚಿತ್ರವಾಗಿವೆ. ಉಚ್ಚೋಚನ, ಉನ್ಮೋಚನ ಮೊದಲಾದ ಹೆಸರುಗಳೂ ಇವೆ. ಋಗ್ವೇದದಿಂದ ತೆಗೆದುಕೊಂಡ ಸೂಕ್ತಗಳಿಗೆ ಋಗ್ವೇದದಲ್ಲಿರುವ ಋಷಿಗಳ ಹೆಸರುಗಳೇ ಸಾಮಾನ್ಯವಾಗಿ ಹೇಳಲ್ಪಟ್ಟಿವೆ. "ಶಂ ನೋ ದೇವಿಃ" ಎಂಬ ಸೂಕ್ತಕ್ಕೆ ಸಿಂಧುದ್ವೀಪ ಋಷಿಯೆಂದೂ ಹೇಳಿರುವುದನ್ನು ಇದಕ್ಕೆ ಉದಾಹರಿಸಬಹುದು. ಅನೇಕ ವೇಳೆ ಸೂಕ್ತದ ವಿಷಯಕ್ಕನುಸಾರವಾಗಿ ಋಷಿಯ ಹೆಸರು ಹೇಳಿದೆ. ಋಕ್ಸಂಹಿತೆಯಲ್ಲಿಯೂ ಈ ಅಂಶ ಗೋಚರಿಸುವುದು. ಪುರುಷಸೂಕ್ತದ ಋಷಿ 'ನಾರಾಯಣ' ಎಂದೂ ಸೂರ್ಯಾಸೂಕ್ತಕ್ಕೆ 'ಸೂರ್ಯ' ಋಷಿಯಾಗಿರುವುದೂ ಇದಕ್ಕೆ ಉದಾಹರಣೆಗಳಾಗಿವೆ. ಸರ್ವಾನುಕ್ರಮಣಿಗಳು ಅಥರ್ವವೇದದ ಸೂಕ್ತಗಳಿಗೆ ಋಷಿಗಳನ್ನು

ಹೇಳುವಾಗ ಈ ವಿಧಾನವನ್ನು ಬಹುಶಃ ಅನುಸರಿಸುತ್ತವೆ–ಬ್ರಹ್ಮನ್, ಪ್ರಜಾಪತಿ, ಯಮ, ಅಪ್ರತಿರಥ, ಗರುತ್ಮಾನ್ ಮೊದಲಾದವರೆಲ್ಲ ಋಷಿಗಳಾಗಿದ್ದಾರೆ. ಅನುಕ್ರಮಣಿಗಳಲ್ಲಿ ಹೇಳಿರುವ ಅಥರ್ವವೇದದ ಋಷಿಗಳ ಸಂಖ್ಯೆ ಬಹಳ ಹೆಚ್ಚಾದುದೇನಲ್ಲ. ವ್ರಾತ್ಯ ಸೂಕ್ತಗಳಿಗೆ ಋಷಿಯನ್ನು ಹೇಳಿಲ್ಲ. ಪ್ರೇತಸೂಕ್ತಗಳಿಗೆ ಅಥರ್ವನ್ ಋಷಿಯಾಗಿದ್ದಾನೆ. 175 ಸೂಕ್ತಗಳಿಗೆ ಅಥರ್ವನೂ 100 ಸೂಕ್ತಗಳಿಗೆ ಬ್ರಹ್ಮನೂ ಋಷಿಗಳಾಗಿದ್ದಾರೆ. ಈ ಕಾರಣದಿಂದಲೇ ಇದಕ್ಕೆ ಅಥರ್ವವೇದ ಅಥವಾ ಬ್ರಹ್ಮವೇದ ಎಂಬ ಹೆಸರು ಬಂದಿರಬಹುದೆಂದು ತೋರುತ್ತದೆ. ಅಥರ್ವಾಂಗಿರಸರಿಗೆ 17 ಸೂಕ್ತಗಳೂ ಅಂಗಿರಸರಿಗೆ 15 ಸೂಕ್ತಗಳೂ ಇವೆ. ಈ ಸಂಹಿತೆಗೆ ಅಥರ್ವಾಂಗಿರಸವೆಂಬ ಹೆಸರು ಕ್ರಮೇಣ ತಪ್ಪಿಹೋಗುವುದಕ್ಕೆ ಈ ಅಂಶವೂ ಒಂದು ಕಾರಣವಾಗಿರಬಹುದು. ಕ್ರಿಮಿನಾಶನಕ್ಕೆ ಉದ್ಯುಕ್ತವಾದ ಮೂರು ಸೂಕ್ತಗಳನ್ನು ಕಣ್ವನು ಕಂಡನೆಂದು ಹೇಳಿರುವುದೂ, ದ್ಯೂತನಲ್ಲಿ ವಿಜಯಕ್ಕಾಗಿ ಪ್ರವೃತ್ತವಾದ ನಾಲ್ಕು ಸೂಕ್ತಗಳಿಗೆ (4-37, 38. 7-59, 109) ಬಾದರಾಯಣಿಗಳು ಋಷಿಗಳೆಂದಿರುವುದೂ ವಿಚಿತ್ರವಾಗಿದೆ. ಅಥರ್ವವೇದದ ಋಷಿಗಳಲ್ಲಿ ಋಗ್ವೇದಸೂಕ್ತದ್ರಷ್ಟಾರರೆಂಬ ಯಶಸ್ಸನ್ನು ಹೊಂದಿರುವವರ ಹೆಸರುಗಳು ವಿರಳವಾಗಿವೆ. ಗೃತ್ಸಮದ, ವಸಿಷ್ಠ ಮುಂತಾದವರ ಹೆಸರೇ ಇಲ್ಲಿಲ್ಲ. ವಿಶ್ವಾಮಿತ್ರ ಮತ್ತು ಕಶ್ಯಪರಿಗೆ ಒಂದೋ ಎರಡೋ ಸೂಕ್ತಗಳಿವೆ. ವಿಶ್ವಾಮಿತ್ರರ ಗಾಯತ್ರೀಮಂತ್ರ ಇಲ್ಲಿಲ್ಲದಿರುವುದು ಆಶ್ಚರ್ಯಕರವಾಗಿದೆ. ಈ ಸಂಹಿತೆಯ ಕೆಲವು ಋಷಿಗಳ ಹೆಸರುಗಳನ್ನು ಇಲ್ಲಿ ಸೂಚಿಸಬಹುದು. ಅಗಸ್ತ್ಯ, ಅಂಗಿರಸ್, ಅಂಗಿರಸ್ ಪ್ರಚೇತಸ, ಅಥರ್ವನ್, ಅಥರ್ವನ್, ವೀತಹವ್ಯ, ಅಥರ್ವಾಂಗಿರಸ್, ಅಥರ್ವಾಚಾರ್ಯ, ಅಪ್ರತಿರಥ, ಬಭ್ರುಪಿಂಗಳ, ಬಾದರಾಯಣಿ, ಬೃಹ್ಮನ್, ಬ್ರಹ್ಮ ಸ್ಕಂಧ, ಭಗ, ಭಾಗಲಿ, ಭಾರ್ಗವ, ಭೃಗು, ಚತನ, ದ್ರವಿಣೋದ, ದ್ರುಹ್ವಣ, ಗರುತ್ಮನ್, ಗಾರ್ಗ್ಯ, ಗೋಪಥ, ಜತಿಕಾಯನ, ಕಬಂಧ, ಕಾಂಕಾಯನ, ಕಶ್ಯಪ, ಮಾರೀಚ, ಕೌರುಪತಿ, ಮಯೋಭು, ಮೃಗರ, ಪ್ರಮೋಚನ, ಪ್ರಶೋಚನ, ಪ್ರಸ್ಕಣ್ವ, ಶುಕ್ರ, ಸಿಂತತಿ, ವಿಹವ್ಯ, ವೇನ, ಯಮ ಮುಂತಾದವರು ಇವರಲ್ಲಿ ಕೆಲವರು. 18ನೇ ಕಾಂಡದ ಮೂರನೇ ಸೂಕ್ತದಲ್ಲಿ ಋಗ್ವೇದ ಋಷಿಗಳನ್ನು ಗೌರವಪೂರ್ವಕವಾಗಿ ಸ್ಮರಿಸುವುದನ್ನು ನೋಡಬಹುದು. ಇವರುಗಳ ಹೆಸರುಗಳನ್ನೆಲ್ಲಾ ಪಿತೃಗಳ ಹೆಸರುಗಳಲ್ಲಿ ಸೇರಿಸಲಾಗಿದೆ:

> 'ಕಣ್ವಃ ಕಕ್ಷೀವಾನ್ ಪುರುಮೀಢೋ ಅಗಸ್ತ್ಯಃ ಶ್ಯಾವಾಶ್ವಃ ಸೋಭರ್ಯರ್ಚನಾನಾಃ |
> ವಿಶ್ವಾಮಿತ್ರೋಽಯಂ ಜಮದಗ್ನಿರತ್ರಿರವಂತು ನಃ ಕಶ್ಯಪೋ ವಾಮದೇವಃ ||'
> 'ವಿಶ್ವಾಮಿತ್ರ ಜಗದಗ್ನೇ ವಸಿಷ್ಠ ಭರದ್ವಾಜ ಗೋತಮ ವಾಮದೇವ |
> ಶರ್ದಿರ್ನೋ ಅತ್ರಿರಗ್ರಭೀನ್ನಮೋಭಿಃ ಸುಶಂಸಾಸಃ ಪಿತರೋ ಮೃಡತಾ ನಃ ||
> (ಅಥರ್ವ. 18-3-15,16)

ಋಗ್ವೇದ ಋಷಿಗಳನ್ನೂ ಋಗ್ವೇದ ಸಾಮವೇದ ಯಜುರ್ವೇದಗಳನ್ನೂ ಈ ಕಾಲದಲ್ಲಿ ಒಂದೇ ಸಮನಾಗಿ ಗೌರವಿಸುತ್ತಿದ್ದರೆಂಬುದನ್ನು ಇದರಿಂದ ತಿಳಿಯಬಹುದು.

### ವಿಷಯ ವಿವೇಚನೆ

ಅಥರ್ವವೇದದಲ್ಲಿ ಪ್ರತಿಪಾದಿತವಾಗಿರುವ ವಿಚಾರ ಇತರ ವೇದಗಳ ವಿಚಾರಕ್ಕಿಂತ ವಿಲಕ್ಷಣವಾಗಿದೆ. ಇಲ್ಲಿರುವ ಮಂತ್ರಾದಿಗಳು ನೇರವಾಗಿ ಯಾಗಕ್ಕೆ ಸಂಬಂಧಿಸಿಲ್ಲ. ಋಗ್ವೇದದಿಂದ ಉದ್ಧೃತವಾಗಿರುವ ದೇವತಾ ಸೂಕ್ತಗಳನ್ನು ಬಿಟ್ಟರೆ ಉಳಿದವು ಯಾವುವೂ ಯಾಜ್ಞಿಕವಾದ

ಮಹತ್ವವನ್ನು ಹೊಂದಿಲ್ಲ. ಅವು ಅಧಿಕವಾಗಿ ಆಭಿಚಾರಕಗಳಾಗಿವೆ. ಇಲ್ಲಿ ವರ್ಣಿತವಾಗಿರುವ ವಿಚಾರವನ್ನು ಆಧ್ಯಾತ್ಮಿಕ, ಅಧಿಭೌತಿಕ, ಅಧಿದೈವತವೆಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ಬ್ರಹ್ಮಪರಮಾತ್ಮ ವಿಚಾರ ಮತ್ತು ದಾರ್ಶನಿಕವಿಚಾರಗಳು ಆಧ್ಯಾತ್ಮಿಕ ವಿಚಾರಗಳಾಗಿವೆ. ನಾನಾ ದೇವತೆಗಳ ಸ್ತುತ್ಯಾದಿಗಳು ಅಧಿದೈವತವಿಚಾರವಾಗಿವೆ. ರಾಜಾ, ರಾಜ್ಯಶಾಸನ, ಸಂಗ್ರಾಮ, ಶತ್ರುಮರ್ದನ ಮುಂತಾದ ವಿಚಾರಗಳು ಅಧಿಭೂತ ಪ್ರಕರಣಕ್ಕೆ ಸೇರುತ್ತವೆ.

ಅಥರ್ವವೇದದ ಮಂತ್ರಗಳು ಅನೇಕ ಉದ್ದೇಶಗಳಿಗಾಗಿ ಪ್ರವೃತ್ತವಾಗಿವೆ. ಈ ಮಂತ್ರ ರಾಶಿಯನ್ನು ಆ ಉದ್ದೇಶಗಳಿಗನುಸಾರವಾಗಿ ಕೆಳಗೆ ಕಂಡಂತೆ ವಿಭಾಗ ಮಾಡಬಹುದು :

1. ಭೈಷಜ್ಯಾನಿ ಅಥವಾ ರೋಗ ಚಿಕಿತ್ಸೆಗೆ ಸಂಬಂಧಿಸಿದವು.
2. ಆಯುಷ್ಯಾಣಿ ಅಥವಾ ದೀರ್ಘಾಯು ಪ್ರಾಪ್ತಿಗೋಸ್ಕರ ಇರುವುವು.
3. ಪೌಷ್ಟಿಕಾನಿ — ಗೃಹನಿರ್ಮಾಣ, ವ್ಯವಸಾಯ, ವ್ಯಾಪಾರ, ಪಶುಪಾಲನೆ, ಮೊದಲಾದುವಕ್ಕೆ ಸಂಬಂಧಿಸಿದವು.
4. ಆಭಿಚಾರಕಾಣಿ — ಮಾರಣಾದಿಗಳು.
5. ಪ್ರಾಯಶ್ಚಿತ್ತಾನಿ — ಧಾರ್ಮಿಕ ವಿರೋಧ ಅಥವಾ ವಿಧಿಹೀನ ಆಚರಣೆಗಾಗಿ ಮಾಡುವ ಪ್ರಾಯಶ್ಚಿತ್ತಾದಿಗಳು.
6. ಸ್ತ್ರೀ ಕರ್ಮಾಣಿ — ಸ್ತ್ರೀವಶೀಕರಣಾದಿಗಳು.
7. ರಾಜಕರ್ಮಾಣಿ — ಪುಷ್ಯಾಭಿಷೇಕ, ಸಂಗ್ರಾಮ, ದೇಶಭಕ್ತಿ ಮೊದಲಾದುವು.
8. ಸೌಮನಸ್ಯಾನಿ — ಏಕಮನಸ್ಕತೆಯ ಸಂಪಾದನೆ ಹಾಗೂ ಸಭೆಯಲ್ಲಿ ಪ್ರಭಾವ ಬೀರುವುದು ಮುಂತಾದುವಕ್ಕೆ ಸಂಬಂಧಿಸಿದವು.
9. ಪಾಪನಿರ್ಹರಣಾನಿ — ಪಾಪಪರಿಹಾರಾರ್ಥವಾದವು.
10. ಬ್ರಹ್ಮಣ್ಯಾನಿ — ಪರಮತತ್ವವಾದ ಪರಮಾತ್ಮ ವಿವೇಚನೆ ಮಾಡುವುವು.

ಹೀಗೆ ಬೇರೆ ಬೇರೆ ಉದ್ದೇಶಗಳಿಗಾಗಿ ಇರುವ ಸೂಕ್ತಗಳು ಈ ಸಂಹಿತೆಯಲ್ಲಿ ಬೆರೆಸಿಕೊಂಡಿವೆ. ಸೂಕ್ತಗಳ ಸಂಕಲನದಲ್ಲಿ 13ನೇ ಕಾಂಡದವರೆಗೆ ವಿಶಿಷ್ಟವಾದ ಕ್ರಮ ವಿಷಯಕ್ಕನುಗುಣವಾಗಿ ಇಲ್ಲ. ಎಲ್ಲ ವಿಷಯಗಳೂ ಇಲ್ಲಿ ಹೇಗೆ ಸಂಕೀರ್ಣವಾಗಿವೆ ಎಂಬುದನ್ನು ತೋರಿಸಲು ಮೊದಲನೇ ಕಾಂಡದ 35 ಸೂಕ್ತಗಳ ವಿಷಯ ನಿರೂಪಣೆಯನ್ನು ಕೆಳಗೆ ಕೊಟ್ಟಿದೆ. ಈ ಮೂವತ್ತೈದು ಸೂಕ್ತಗಳ ವಿಚಾರ ಕ್ರಮವಾಗಿ ಕೆಳಗೆ ಕಂಡಂತೆ ಇದೆ :

ಮೇಧಾಜನನ, ಸಂಗ್ರಾಮಜಯ, ಮೂತ್ರಪುರೀಷನಿರೋಧವಾದಾಗ ಲೋಹ ಶಕಲ ಪ್ರವೇಶದಿಂದ ತತ್ಪರಿಹಾರ, ಸರ್ವರೋಗಭೈಷಜ್ಯ, ಪಶುಗಳ ರೋಗೋಪಶಮನ, ಪುಷ್ಯಾಭಿಷೇಕ, ಪಿಶಾಚಾದ್ಯುಚ್ಚಾಟನೆ, ಸರ್ವ ಸಂಪತ್ಕರ್ಮ, ಜಲೋದರ ರೋಗ ನಿವೃತ್ತಿ, ಗರ್ಭಿಣಿಗೆ (2 ಸೂಕ್ತ) ಸುಖಪ್ರಸವವಾಗಲೆಂಬ ಕರ್ಮ, ವಾತ ಪಿತ್ತಶ್ಲೇಷ್ಮ ವಿಕಾರ ರೋಗಗಳ ಪರಿಹಾರ, ಸಿಡಿಲು ಬೀಳದಂತೆ ಕಾಯುವುದು, ಅತಿವೃಷ್ಟಿನಿವಾರಣೆ, ಇತರರಿಗೆ ದೌರ್ಭಾಗ್ಯಕರಣ, ಲಕ್ಷ್ಮೀಕರಣ, ದ್ವೇಷ್ಯ ಮರಣಾರ್ಥವಾಗಿ ಅಭಿಮಂತ್ರಿಸಿ ಸೀಸಚೂರ್ಣ ಮಿಶ್ರವಾದ ಅನ್ನಪ್ರದಾನ, ಶಸ್ತ್ರಘಾತದಿಂದ ರಕ್ತಪ್ರವಾಹವನ್ನು ತಡೆಯುವುದು, ದುರ್ಲಕ್ಷಣ ಪರಿಹಾರ, ಸಾಂಗ್ರಾಮಿಕಾದಿ ಕರ್ಮಗಳಲ್ಲಿ ವಿಜಯ, ಪಿಶಾಚಾದಿ ನಿವಾರಣೆ, ಹೃದ್ರೋಗ, ಕಾಮಾಲೆ ಮುಂತಾದ ರೋಗಪರಿಹಾರ, ಶ್ವೇತಕುಷ್ಠಾಪನೋದನ, ಒಂದು ದಿನದ ಹಾಗೂ ಸಂತತವಾದ ವೇಲಾಜ್ವರಾದಿ ಶಾಂತಿ, ಖಡ್ಗಾದಿ ಶಸ್ತ್ರನಿವಾರಣ, ವಿಜಯಾರ್ಥವಾಗಿ ಆಯುಧಪ್ರದಾನ,

ಉದ್ವೇಗ ನಿವೃತ್ತಿ, ಶತ್ರುಮರ್ದಿತವಾದ ರಾಷ್ಟ್ರದ ಅಭಿವೃದ್ಧಿ, ಆಯುಷ್ಯ ಕರ್ಮ, ಸರ್ವರೋಗ ಭೈಷಜ್ಯ, ಬಂಜೆಗೆ ಪುತ್ರಪ್ರಜನನವಾಗುವಂತೆ ಮಾಡುವುದು, ಅರ್ಥೋತ್ಥಾಪನ ಕರ್ಮ, ಪರಿಷದ್ಯಯ ಕರ್ಮ, ಸರ್ವಸಂಪತ್ಕರ್ಮ—ಈ ವಿವಿಧ ಕರ್ಮಗಳಲ್ಲಿ ಬಳಸಬೇಕಾದ ಸೂಕ್ತಗಳು ಇಲ್ಲಿವೆ. ಇದರ ಪರಿಶೀಲನೆಯಿಂದ ಈ ವೇದದ ವಿಷಯ ವಿವೇಚನೆಯ ಸಾಮಾನ್ಯ ಪರಿಚಯವಾಗುವುದು. ಇನ್ನು ಮುಂದೆ ಇವುಗಳ ವಿಸ್ತಾರವಾದ ವಿವರಣೆಯನ್ನು ಕೊಡಬಹುದು.

**ಭೈಷಜ್ಯ ಸೂಕ್ತಗಳು**

ರೋಗ ಚಿಕಿತ್ಸೆಗೆ ಸಂಬಂಧಿಸಿದ ಮಂತ್ರಗಳು ಮತ್ತು ವಿಧಿವಿಶೇಷಗಳು ಇಲ್ಲಿವೆ. ಬಗೆಬಗೆಯಾಗಿ ಪೀಡಿಸುವ ರಾಕ್ಷಸಾದಿಗಳಿಂದ ರೋಗಗಳುಂಟಾಗುವುವು. ರೋಗಗಳು ದ್ವಿವಿಧವಾಗಿವೆ. ಆಹಾರ ಮೂಲವಾದವು ಪಾಪಮೂಲವಾದವು ಎಂದು. ಆಹಾರ ಮೂಲವಾದವುಗಳಿಗೆ ಆಯುರ್ವೇದಾದಿ ಚಿಕಿತ್ಸೆಯ ಮೂಲಕ ಪರಿಹಾರ, ಪಾಪ ಮೂಲವಾದ ರೋಗಗಳ ಪರಿಹಾರಕ್ಕೆ ಅಥರ್ವಣ ಕ್ರಿಯೆಗಳನ್ನು ಅನುಸರಿಸಬೇಕು. ಅನೇಕ ಮಂತ್ರಗಳಲ್ಲಿ ರೋಗಗಳನ್ನು ದೂರಮಾಡುವ ಬಗೆ ವಿವರಿಸಿದೆ. ಕೌಶಿಕ ಸೂತ್ರದಲ್ಲಿ ಈ ಮಂತ್ರಗಳಿಂದ ಮಾಡಬೇಕಾದ ಮಾಟಮಂತ್ರ ಮೊದಲಾದುವುಗಳ ವಿವರಣೆ ಇದೆ.

ಅಥರ್ವವೇದದಲ್ಲಿ ಅನೇಕಾನೇಕ ಆಯುರ್ವೇದ ಸಿದ್ಧಾಂತಗಳ ವಿಚಾರ ಅಡಗಿದೆ. ಇದರಿಂದ ಆಯುರ್ವೇದದ ಪ್ರಾಚೀನತೆ, ಪ್ರಾಮಾಣಿಕತೆ ಮತ್ತು ವ್ಯಾಪಕತೆಯ ಪರಿಚಯವಾಗುತ್ತದೆ. ರೋಗಸ್ವರೂಪ, ರೋಗದ ಪ್ರತೀಕಾರ, ವಿವಿಧವಾದ ಔಷಧಿಗಳ ಪ್ರಯೋಗ ಮೊದಲಾದುವೆಲ್ಲ ಇಲ್ಲಿ ತಿಳಿಯುತ್ತವೆ. ತಕ್ಮರೋಗದ ಸಾಮಾನ್ಯ ವರ್ಣನೆ (6-21-1, 13)ಯೂ ಜ್ವರದ ಪ್ರಭೇದಗಳಾದ ಸತಜ್ವರ, ಶಾರದ ಜ್ವರ, ಗ್ರೈಷ್ಮ ಜ್ವರ, ಶೀತ ಜ್ವರ, ವಾರ್ಷಿಕ ಜ್ವರ, ತೃತೀಯ ಜ್ವರಗಳ ಉಲ್ಲೇಖವೂ (1, 2, 4-5) ಇದೆ. ಬಲಾಸರೋಗ (ಕ್ಷಯ), ಅಸ್ಥಿ ಮತ್ತು ಹೃದಯಕ್ಕೆ ಪೀಡೆಯುಂಟುಮಾಡುವ ಅಂಶವೂ (6-14-3) ಯಕ್ಷ್ಮ. ವಿದ್ರಧ, ವಾತೀಕಾರ ಮೊದಲಾದ (6-83-1,3)ವುಗಳ ವಿಚಾರವೂ, (6-13-1, 22) ಅನೇಕ ಕಡೆ ಬಂದಿದೆ. ರೋಗಚಿಕಿತ್ಸೆಯ ವಿಚಾರವೂ ಬಹಳ ಮುಂದುವರಿದಿರುವುದು ಗೊತ್ತಾಗುತ್ತದೆ. ಇಂದಿನ ಹಾಗೆ ಅಂದೂ ಶಸ್ತ್ರ ಚಿಕಿತ್ಸೆ ನಡೆಯುತ್ತಿತ್ತೆಂಬ ಅಂಶ ವಿಸ್ಮಯವನ್ನುಂಟುಮಾಡುತ್ತದೆ. ಮೂತ್ರಬಂಧವಾದಾಗ ಶರಶಲಾಕಾದಿಗಳ ಸಹಾಯದಿಂದ ಚಿಕಿತ್ಸೆ ಮಾಡುವುದು (1-3-16) ಸುಖಪ್ರಸವಕ್ಕಾಗಿ ಯೋನಿಭೇದನ (1-11-1,6), ಜಲಧಾವನದಿಂದ ವ್ರಣವನ್ನುಪಚಾರ ಮಾಡುವುದು (5-57-1, 3) ಮೊದಲಾದುವು ಇದಕ್ಕೆ ನಿದರ್ಶನಗಳು, ನಾನಾ ಬಗೆಯ ರೋಗಗಳು ಬಗೆಬಗೆಯಾದ ಕ್ರಿಮಿಗಳ ಮೂಲಕ ಉಂಟಾಗುವುವೆಂದು ಇಲ್ಲಿ ಹೇಳಿರುವುದು ಆಧುನಿಕ ವೈದ್ಯಶಾಸ್ತ್ರದ ಸಂಶೋಧನೆಗಳನ್ನು ಇದು ಒಳಗೊಂಡಿತ್ತೆಂಬುದನ್ನು ತೋರಿಸುತ್ತದೆ. ರೋಗವನ್ನುಂಟುಮಾಡುವ ಕ್ರಿಮಿಗಳ ವರ್ಣನೆಯೂ (2-31-1, 5), ಕಣ್ಣು, ಮೂಗು ಮತ್ತು ಹಲ್ಲುಗಳನ್ನು ಪ್ರವೇಶಿಸುವ ಕ್ರಿಮಿಗಳ ಹೆಸರುಗಳೂ ಅವುಗಳ ನಿವಾರಣೋಪಾಯದ ವರ್ಣನೆಯೂ (5-23-1, 13) ಸೂರ್ಯ ಕಿರಣಗಳ ಮೂಲಕ ಕ್ರಿಮಿಗಳು ನಾಶವಾಗುವುವೆಂಬ ಅಂಶವೂ (4-37-1,12) ಇಲ್ಲಿದೆ. ಈ ನಿರ್ಣಯಗಳನ್ನು ವಿಜ್ಞಾನದ ಆಧಾರದ ಮೇಲೆ ಕಟ್ಟಲಾಗಿದೆಯೆಂಬುದನ್ನು ನಾವು ಯೋಚಿಸಿದಾಗ ಅಂದಿನ ಜನ ವಿಜ್ಞಾನದಲ್ಲಿ ಎಷ್ಟು ಮುಂದುವರಿದಿದ್ದರೆಂಬುದನ್ನರಿಯುವೆವು. ವಿಷಗಳ ಪ್ರಭಾವವನ್ನು ಹೋಗಲಾಡಿಸುವ ಔಷಧಿ ವಿಶೇಷಗಳ ವರ್ಣನೆಗಳೂ ಇಲ್ಲಿವೆ. 'ವಿಷಕ್ಕೆ ವಿಷ ಔಷಧ' ಎಂಬ ಸಿದ್ಧಾಂತವೂ ಇಲ್ಲಿದೆ

(7-88-1). ಆಯುರ್ವೇದದ ದೃಷ್ಟಿಯಲ್ಲಿ ಅಥರ್ವವೇದ ಬಹಳ ಪ್ರಧಾನವಾಗಿ ವೈಜ್ಞಾನಿಕ ಮಹತ್ವವನ್ನು ಹೊಂದಿದೆ. ಅಥರ್ವವೇದದಲ್ಲಿ ಅನೇಕಾನೇಕ ರೋಗಗಳ ಹೆಸರುಗಳು ಬಂದಿವೆ. ತಕ್ಮನ್ (ಜ್ವರ), ಶ್ವೇತ ಕುಷ್ಠ, ಕಾಸ (ಕೆಮ್ಮು), ಬಲಾಸ (ಕ್ಷಯ), ಹರಿಮಾ (ಕಾಮಾಲೆ), ವಿಲೋಹಿತ (ರಕ್ತಹೀನತೆ), ಪಾಮನ್ (ಕಜ್ಜಿ), ಶೀರ್ಷಕ್ತಿ (ತಲೆಶೂಲೆ), ಆಸ್ರಾವ (ಅತಿಸಾರ), ಯಕ್ಷ್ಮ (ಕ್ಷಯ) ಮುಂತಾದುವು ಇವುಗಳಲ್ಲಿ ಕೆಲವು. ಅಂದಿನ ಸಮಾಜವೂ ಇಂದಿನಂತೆಯೇ ರೋಗಾದ್ಯುಪದ್ರವಗಳಿಗೆ ತುತ್ತಾಗಿತ್ತೆಂದೂ, ಅವುಗಳಿಂದ ಬಿಡಿಸಿಕೊಳ್ಳಲು ಅದು ಬಹಳವಾಗಿ ಹೆಣಗುತ್ತಿತ್ತೆಂದೂ ಗೊತ್ತಾಗುತ್ತದೆ. ಅಥರ್ವವೇದದ ದೃಷ್ಟಿಯಲ್ಲಿ ದೈಹಿಕ ಹಾಗೂ ಮಾನಸಿಕವಾದ ರೋಗಗಳಿಗೆ ದೇವತೆಗಳ ಪ್ರಕೋಪ, ಗಂಧರ್ವಾಸುರ ಪಿಶಾಚಾದಿ ದುಷ್ಟಶಕ್ತಿಗಳು, ವೈರಿಗಳಮಾಟ ಹಾಗೂ 'ಯಾತು' ಕ್ರಿಮಿಕೀಟಗಳು, ಉಲೂಕ ಕಪೋತಾದಿ ದುಷ್ಟಶಕುನಗಳ ಪ್ರವೇಶ, ದೇವತೆಗಳಲ್ಲಿ ನಾವೆಸಗುವ ಪಾಪಕರ್ಮಗಳು, ದಿನದಿನವೂ ನಾವು ಮಾಡುವ ನಿಯಮೋಲ್ಲಂಘನೆ–ಇವು ಕಾರಣಗಳು. ಇಂಥ ರೋಗಗಳ ನಿವಾರಣೆ ಅಥರ್ವ ಪುರೋಹಿತನ ಭೈಷಜ್ಯಕರ್ಮದಿಂದಾಗುತ್ತದೆ. ಮಂತ್ರಗಳ ಉಚ್ಚಾರಣೆಯೊಡನೆ ಅನೇಕಾನೇಕ ವನೌಷಧಿಗಳ ಪ್ರಯೋಗವೂ ನಡೆಯುವುದು. ಮೂಲಿಕೆಗಳನ್ನು ಮಂತ್ರಿಸಿ ತಾಯಿತಗಳನ್ನು ಕಟ್ಟುವುದುಂಟು. ಕೆಲವು ವೇಳೆ ಶಸ್ತ್ರಚಿಕಿತ್ಸೆಯೂ ಆಗುವುದು. ಇದರಿಂದ ಅನೇಕಾನೇಕ ಮೂಲಿಕೆಗಳ ಮಹತ್ವವೂ ಉಪಯೋಗವೂ ಅವರಿಗೆ ತಿಳಿದಿತ್ತೆಂದು ಗೊತ್ತಾಗುತ್ತದೆ. ಇಲ್ಲಿ ಶಮೀ, ತಲಾಶ, ಅಸಕ್ನೀ, ಕಣ್ವ, ಮಧು, ಮಾಧುಲಾ, ಅರ್ಜುನಕಾಂಡ, ಸಹಸ್ರಕಾಂಡ, ಅಜಸ್ರಂಗೀ, ಸದಂಪುಷ್ಪಾ, ರೋಹಿಣೀ, ಮಾದವತೀ, ಲಾಕ್ಷಾ, ಪಿಪ್ಪಲೀ, ಅರ್ಕ, ಉತ್ತಾನಪರ್ಣ, ಶತವಾರ, ದರ್ಭ, ನ್ಯಸ್ತಿಕಾ, ಖದಿರ, ಜಂಗಿಡ ಮೊದಲಾದ ಅನೇಕಾನೇಕ ಮೂಲಿಕೆಗಳ ಉಲ್ಲೇಖ ಇದೆ. ಇವುಗಳಲ್ಲಿ 'ಜಂಗಿಡ' ಮೊದಲಾದ ಮೂಲಿಕೆಗಳಾವುವೆಂಬುದು ಗೊತ್ತಾಗುವಂತಿಲ್ಲ. ಈ ಮೂಲಿಕಾವಿಜ್ಞಾನ ಈಗ ಬಹುಪಾಲು ನಷ್ಟವಾಗಿ ಹೋಗಿರುವುದು ನಮ್ಮ ದುರ್ದೈವ.

ಜ್ವರದಿಂದ ಮನುಷ್ಯ ಹಳದೀ ಬಣ್ಣಕ್ಕೆ ತಿರುಗುವನೆಂದೂ ಬೆಂಕಿಯಂತೆ ಅವನ ಮೈಸುಡುವುದೆಂದೂ ವರ್ಣಿಸಿದೆ. ಸುದೂರಪ್ರಾಂತಕ್ಕೆ ಇದನ್ನು ಓಡಿಹೋಗಬೇಕೆಂದು ಬೇಡಿದೆ. ಬಲಾಸ, ಗಂಡಮಾಲಾ, ಯಕ್ಷ್ಮಾ ಇವುಗಳನ್ನು ಓಷಧಿಗಳ ಸೇವನೆಯಿಂದ ದೂರಮಾಡುವ ವಿಚಾರ ಹೇಳಿದೆ. ಅನೇಕ ಮಂತ್ರಗಳಲ್ಲಿ ವಿಧವಿಧವಾದ ಓಷಧಿಗಳ ಮತ್ತು ವೃಕ್ಷಗಳ ಪ್ರಶಂಸೆ ಇದೆ. ಸರ್ಪಗಳ ವಿಷವನ್ನು ಹೋಗಲಾಡಿಸುವ ಅನೇಕ ಉಪಾಯಗಳ ವರ್ಣನೆಯೂ ಇದೆ. ಐದನೇ ಕಾಂಡದ 13ನೇ ಸೂಕ್ತದಲ್ಲಿ ಬರುವ ಅಸಿತತಮಾತ, ಆಲಿಗೀ, ವಿಲಿಗೀ, ಉರೂಗೂಲಾ ಮುಂತಾದ ಸರ್ಪಗಳ ಹೆಸರುಗಳು ಇವರಿಗಿದ್ದ ವಿದೇಶ ಪರಿಚಯವನ್ನು ಸೂಚಿಸುತ್ತವೆ ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಇಲ್ಲಿ ಬದುಕಿರುವಷ್ಟು ದಿನವೂ ಆರೋಗ್ಯ ದೃಢಕಾಯರಾಗಿ ಬದುಕಿರಬೇಕೆಂಬುದು ನಮ್ಮ ಹಿಂದಿನವರ ಆಶಯವಾಗಿದ್ದಿತು. ದೀರ್ಘವಾದ ಆಯುಸ್ಸುಬೇಕು. ಅದು ರೋಗ ರುಜಿನಗಳಿಲ್ಲದೆ ಸುಖಮಯವಾಗಿರಬೇಕು. ಅದಕ್ಕಾಗಿ ಭೈಷಜ್ಯ ಸೂಕ್ತಗಳು ಉಪಯುಕ್ತ ವಾಗಿದೆ.

ಹೀಗೆ ಬೇರೆ ಬೇರೆ ಗುಣಗಳನ್ನುಳ್ಳ ಮೂಲಿಕೆಗಳ ಪ್ರಯೋಗದಿಂದಲೂ ಬಗೆ ಬಗೆಯ ಮಂತ್ರಗಳ ಪ್ರಯೋಗದಿಂದಲೂ ತಕ್ಮನ್, ಯಕ್ಷ್ಮ, ಕುಷ್ಠ, ಹೃದ್ರೋಗ, ಕಾಮಾಲೆ ಮುಂತಾದ ರೋಗಗಳ ನಿವಾರಣೆಯನ್ನು ಇಲ್ಲಿ ಹೇಳಿದೆ.

**ಆಯುಷ್ಯಾಣಿ**

ದೀರ್ಘಾಯುಷ್ಯಪ್ರಾಪ್ತಿಗಾಗಿ ಸಲ್ಲಿಸಿರುವ ಪ್ರಾರ್ಥನೆಗಳ ಸಮೂಹ ಈ ವಿಭಾಗದಲ್ಲಿ ಅಂತರ್ಗತವಾಗಿದೆ. ಚೌಲ, ಉಪನಯನ, ಗೋದಾನ ಮುಂತಾದ ಸಂದರ್ಭಗಳಲ್ಲಿ ಇಂಥ ಪ್ರಾರ್ಥನೆಗಳು ವಿಶೇಷವಾಗಿ ಪ್ರಯುಕ್ತವಾಗಿವೆ. ಈ ಬಗೆಯ ಸೂಕ್ತಗಳಲ್ಲಿ ನೂರೊಂದು ಶರತ್ಕಾಲ ಹಾಗೂ ನೂರೊಂದು ಹೇಮಂತಕಾಲ ಜೀವಿಸಿರುವುದಕ್ಕೆ ಹೇಳಬೇಕಾದ ಪ್ರಾರ್ಥನೆಗಳಿವೆ. ಹಾಗೆಯೇ ನೂರು ಬಗೆಯ ಮೃತ್ಯುವಿನಿಂದ ತನ್ನನ್ನು ಕಾಪಾಡಿಕೊಳ್ಳಲೂ, ಒಂದೊಂದು ಬಗೆಯ ರೋಗದಿಂದಲೂ ರಕ್ಷಿಸಿಕೊಳ್ಳಲೂ ಆವಶ್ಯಕವಾದ ಪ್ರಾರ್ಥನೆಗಳೂ ಇವೆ. ದೀರ್ಘಾಯು ಪ್ರಾಪ್ತಿಗಾಗಿ 'ರಕ್ಷಾಸೂತ್ರ'ವನ್ನು ಕೈಯ್ಯಲ್ಲಿ ಧರಿಸಬೇಕೆಂಬ ವಿಶೇಷ ವಿಧಾನವನ್ನು ಅಥರ್ವವೇದದಲ್ಲಿ ಹೇಳಿದೆ. ಈ ರಕ್ಷಾಸೂತ್ರವನ್ನು ಧರಿಸಿಬಿಟ್ಟರೆ ಸಾಕು, ಅವನು ಸ್ವಸ್ಥನಾಗಿ ಚಿರಂಜೀವಿಯಾಗುತ್ತಾನೆ. 17ನೇ ಕಾಂಡದ ಏಕಮಾತ್ರ ಸೂಕ್ತ ಈ ವಿಚಾರವನ್ನು ಪ್ರತಿಪಾದಿಸುವುದಾಗಿದೆ.

**ಪೌಷ್ಟಿಕಗಳು :** ಮನೆ ಕಟ್ಟುವುದಕ್ಕಾಗಿ, ಉಳುಮೆ ಮಾಡುವುದಕ್ಕಾಗಿ, ಬಿತ್ತನೆ ಕೆಲಸವನ್ನಾರಂಭಿಸುವುದಕ್ಕಾಗಿ, ಪುಷ್ಟಿಲಾಭಕ್ಕಾಗಿ, ದೇಶವಿದೇಶಗಳಲ್ಲಿ ವ್ಯಾಪಾರ ಮಾಡುವುದಕ್ಕಾಗಿ, ಆವಶ್ಯಕವಾದ ಅನೇಕಾನೇಕ ಆಶೀರ್ವಾದಗಳೂ, ಪ್ರಾರ್ಥನೆಗಳೂ ಈ ವಿಭಾಗಕ್ಕೊಳಪಡುವುವು. ಇದರಲ್ಲಿ ಸುಂದರವಾದ ವೃಷ್ಟಿಸೂಕ್ತದ ಕೆಲ ಮಂತ್ರಗಳನ್ನು ಇಲ್ಲಿ ಉದ್ಧರಿಸಬಹುದು:

ಸಮುತ್ಪತಂತು ಪ್ರದಿಶೋ ನಭಸ್ವತೀಃ
ಸಮಭ್ರಾಣಿ ವಾತ ಜೂತಾನಿ ಯಂತು |
ಮಹಋಷಭಸ್ಯ ನದತೋ ನಭಸ್ವತೋ
ವಾಶ್ರಾ ಆಪಃ ಪೃಥಿವೀಂ ತರ್ಪಯಂತು || (4-15-1)

ಪೂರ್ವವೇ ಮೊದಲಾದ ಶ್ರೇಷ್ಠವಾದ ದಿಕ್ಕುಗಳು ವಾಯುವಿನಿಂದ ಕೂಡಿದ ಮೇಘಗಳಿಂದ ತುಂಬಿ ಏಳಲಿ. ನೀರುಂಡ ಮೇಘಗಳು ವಾಯುವಿನಿಂದ ಪ್ರೇರಿತವಾಗಿ ಸೇರಲಿ. ಮಹತ್ತರವಾದ ಋಷಭವು ಗುಟುರು ಹಾಕುವಂತೆ ವಾಯುಪ್ರೇರಿತವಾದ ಮೇಘಗಳ ಜಲವು ಶಬ್ದಿಸುತ್ತಾ ಭೂಮಿಯಮೇಲೆ ವರ್ಷಿಸಿ ತೃಪ್ತಿಯನ್ನುಂಟುಮಾಡಲಿ.

ಸಮೀಕ್ಷಯಂತು ತವಿಷಾಃ ಸುದಾನವೋಪಾಂ
ರಸಾ ಓಷಧೀಭಿಃ ಸಚಂತಾಮ್ |
ವರ್ಷಸ್ಯ ಸರ್ಗಾ ಮಹಯಂತು ಭೂಮಿಂ
ಪೃಥಗ್ ಜಾಯಂತಾಮೋಷಧಯೋ ವಿಶ್ವರೂಪಾಃ || (4-15-2)

ಮಹಾತ್ಮರೂ ಶೋಭನವಾದ ದಾನಮಾಡುವವರೂ ಆದ ಮರುದ್ದೇವತೆಗಳು ವೃಷ್ಟಿಯಾಗುವಂತೆ ಅನುಗ್ರಹ ಮಾಡಲಿ. ವೃಷ್ಟ್ಯುದಕದ ರಸಗಳು ಭೂಮಿಯಲ್ಲಿ ಬಿತ್ತಿರುವ ಬೀಜಗಳೊಡನೆ ಸೇರಲಿ. ಮಳೆಯ ಧಾರೆ ಭೂಮಿಯನ್ನು ಸನ್ಮಾನಿಸಲಿ. ನಾನಾ ವಿಧವಾದ ಓಷಧಿಗಳು ಬೇರೆ ಬೇರೆಯಾದ ರೂಪದಲ್ಲಿ ಬೆಳೆಯಲಿ.

ಸಮೀಕ್ಷಯಸ್ವ ಗಾಯತೋ ನಭಾಂಸ್ಯಪಾಂ
ವೇಗಾಸಃ ಪೃಥಗುದ್ ವಿಜಂತಾಮ್ |
ವರ್ಷಸ್ಯ ಸರ್ಗೋ ಮಹಯಂತು ಭೂಮಿಂ
ಪೃಥಗ್ ಜಾಯಂತಾಂ ವೀರುಧೋ ವಿಶ್ವರೂಪಾಃ || (4-15-3)

ಎಲೈ ಮರುದ್ಗಣವೇ, ನಿನ್ನನ್ನು ಸ್ತುತಿಸುವ ನಮಗೆ ಮೋಡಗಳನ್ನು ಕಾಣಿಸು. ವೇಗದಿಂದ ಕೂಡಿದ ಜಲಪ್ರವಾಹಗಳು ಬೇರೆ ಬೇರೆಯಾಗಿ ಮೇಲೆ ಚಲಿಸಲಿ. ಮಳೆಯ ಧಾರೆ ಭೂಮಿಯನ್ನು ಸನ್ಮಾನಿಸಲಿ. ಬಗೆ ಬಗೆಯ ಗಿಡಬಳ್ಳಿಗಳು ವಿವಿಧವಾಗಿ ಬೆಳೆಯಲಿ.

ಅಭಿಕ್ರಂದ ಸ್ತನಯಾರ್ದಯೋದಧಿಂ
ಭೂಮಿಂ ಪರ್ಜನ್ಯ ಪಯಸಾ ಸಮಂಕ್ಸಮಂಗ್ಧಿ |
ತ್ವಯಾ ಸೃಷ್ಟಂ ಬಹುಲಮ್ಮೈತು ವರ್ಷ-
ಮಾಶಾ ರೈಷೀ ಕೃಶಗುರೇತ್ವಸ್ತಮ್ || (4-15-6)

ಎಲೈ ಪರ್ಜನ್ಯನೇ, ಸುತ್ತಲೂ ತುಂಬುವಂತೆ ಶಬ್ದಮಾಡು. ಮೇಘವನ್ನು ಪ್ರವೇಶಿಸಿ ಘೋಷಿಸು. ಸಮುದ್ರವನ್ನು ವರ್ಷದಿಂದ ಪೀಡಿಸು. ವರ್ಷದಿಂದ ಭೂಮಿಯನ್ನು ಚೆನ್ನಾಗಿ ನೆನೆಸು. ನಿನ್ನಿಂದ ಪ್ರೇರಿತವಾದುದೂ ಹೆಚ್ಚಾಗಿ ಮಳೆಗರೆಯುವಂಥದೂ ಆದ ಮೇಘವು ಬರಲಿ. ಧಾರಾಸಂಪಾತವನ್ನು ಬಯಸುವ ಸೂರ್ಯನು ಕೃಶವಾದ ರಶ್ಮಿಗಳುಳ್ಳವನಾಗಿ ಕಣ್ಣಿಗೆ ಕಾಣದಂತಾಗಲಿ.

ಮಹಾಂತಂ ಕೋಶಮುದಚಾಭಿಷಿಂಚ
ಸವಿದ್ಯುತಂ ಭವತು ವಾತು ವಾತಃ |
ತನ್ವತಾಂ ಯಜ್ಞಂ ಬಹುಧಾ ವಿಸೃಷ್ಟಾ
ಆನಂದಿನೀರೋಷಧಯೋ ಭವಂತು ||(4-15-16)

ಎಲೈ ಪರ್ಜನ್ಯನೇ, ಅತಿ ದೊಡ್ಡದಾದ ಮೇಘವನ್ನು ಸಮುದ್ರದಿಂದ ಮೇಲಕ್ಕೆ ನೀರೊಡನೆ ಎತ್ತಿಕೋ. ಅದರಿಂದ ಭೂಮಿಯನ್ನೆಲ್ಲಾ ಮಳೆಯಿಂದ ನೆನಸು. ಅದಕ್ಕಾಗಿ ಆ ಮೇಘವು ವಿದ್ಯುತ್ಸಹಿತವಾಗಲಿ. ಅನಂತರ ಮಳೆಯಾಗಲಿ. ವೃಷ್ಟಿಗನುಕೂಲವಾಗಿ ವಾಯು ಬೀಸಲಿ. ಬಹುಪ್ರಕಾರವಾಗಿ ವರ್ಷಿಸಲ್ಪಟ್ಟ ಮಳೆಯ ಧಾರೆಗಳು ಯಜ್ಞವನ್ನು ಬೆಳೆಸಲಿ. ಗಿಡಬಳ್ಳಿಗಳೂ ಸಸ್ಯಾದಿಗಳೂ ವೃಷ್ಟಿಜಲದಿಂದ ಹರ್ಷಯುಕ್ತವಾಗಲಿ.

**ಆಭಿಚಾರಕಾಣಿ**

ಪೌಷ್ಟಿಕಸೂಕ್ತಗಳು ಆತ್ಮರಕ್ಷಣೆಯ ಪ್ರಧಾನೋದ್ದೇಶದಿಂದ ಪ್ರವೃತ್ತವಾಗಿವೆ. ಅನೇಕ ದೇವತೆಗಳನ್ನು ಸ್ತುತಿಸಿ ಆಯುಸ್ಸು, ಐಶ್ವರ್ಯ, ಆರೋಗ್ಯ, ಪಶುಸಂಪತ್ತು, ಪುತ್ರಸಂಪತ್ತು ಮುಂತಾದ ಸಮೃದ್ಧಿಯನ್ನು ಬೇಡಿದ್ದಾರೆ. ಇವು ತಮ್ಮ ತಮ್ಮ ಅಭಿವೃದ್ಧಿಯನ್ನು ಬಯಸುವುವೇ ವಿನಾ ಇತರರಿಗೆ ಯಾವ ಬಗೆಯ ಹಾನಿಯನ್ನೂ ಬಯಸುವುದಿಲ್ಲ. ಇಂಥ ಪೌಷ್ಟಿಕ ಸೂಕ್ತಗಳನ್ನು 'ಶುಕ್ಲೇಂದ್ರಜಾಲ' ಸೂಕ್ತಗಳೆಂದು ಪಾಶ್ಚಾತ್ಯ ವಿಮರ್ಶಕರು ಹೇಳುತ್ತಾರೆ.

ಎಲ್ಲ ಪ್ರಾಣಿಗಳೂ ತಮ್ಮ ತಮ್ಮ ಸುಖವನ್ನೇ ಸಾಧಿಸಲು ಪ್ರಯತ್ನಿಸುತ್ತವೆ. ಆದರೆ ತಮ್ಮ ಸುಖಕ್ಕೆ ಇತರರು ಅಡ್ಡಿಯಾದರೆ ಅವರನ್ನು ಯಾವ ರೀತಿಯಿಂದಲಾದರೂ ನಾಶಪಡಿಸಿಬಿಡಲು ಅವು ಹವಣಿಸುತ್ತವೆ. ಹೀಗೆ ಇತರರಿಗೆ ಕೇಡನ್ನು ತರುವ ಕೆಲಸಗಳು ಆಭಿಚಾರಕಗಳಾಗುತ್ತವೆ. ಇವಕ್ಕೆ ಕೃಷ್ಣೇಂದ್ರಜಾಲವೆನ್ನುತ್ತಾರೆ. ಯಾವ ದೇವತೆಯನ್ನಾದರೂ ಸರಿ ಹೇಗಾದರೂ ಆಶ್ರಯಿಸಿ ಶತ್ರುನಾಶವನ್ನು ಸಾಧಿಸುವ ಹವಣು ಈ ಕ್ರಿಯೆಗಳದು. ಇದೇ 'ಜಾದು', 'ಮಾಟ', 'ಯಾತು'. ಅಥರ್ವವೇದದಲ್ಲಿ ಇಂಥ ಮಂತ್ರಗಳು ಬಹಳವಾಗಿವೆ. ತನ್ನ ಸಾಂಸಾರಿಕ ಜೀವನಕ್ಕೆ ಅಡ್ಡಿಯಾಗಿ ಬಂದ ಸಪತ್ನಿಯ ಮರ್ದನವನ್ನು ಬಯಸುವ ಮಂತ್ರಗಳು, ತನ್ನ ಪ್ರೇಯಸಿಯನ್ನು ಕಾಮಿಸುವ ವಿಟನ ಪುರುಷತ್ವವನ್ನು ನಾಶಪಡಿಸಲು ಪ್ರಯೋಗಿಸುವ

ಮಂತ್ರಗಳು, ತನ್ನ ಪ್ರಿಯನನ್ನು ತಾನು ಸೇರಿಕೊಳ್ಳಲನುಕೂಲಿಸುವಂತೆ ಉಳಿದವರೆಲ್ಲರಿಗೂ ನಿದ್ರೆಬರಿಸುವ ಸ್ವಾಪನ ಮಂತ್ರಗಳು, ಶತ್ರುದಮನ ಮಾಡಲು ಉಪಯೋಗಿಸುವ ಮಂತ್ರಗಳು ಇವೆಲ್ಲಾ ಬೇಕಾದಷ್ಟಿವೆ. 'ತೇನಾಹಮಿಂದ್ರಜಾಲೇನಾ ಮೂನ್ ತಮಸಾಭಿದಧಾಮಿ ಸರ್ವಾನ್' (ಅ. ವೇ. 8-8-8) ಎಂದು ಹೇಳಿ ಇಂದ್ರಜಾಲವೆಂದು ಇಂಥ ಕೃತ್ಯವನ್ನು ವರ್ಣಿಸಿದ್ದಾರೆ. ಮಾಟ, ಪ್ರತಿಮಾಟ ಮುಂತಾದುವು ಇಲ್ಲಿ ತುಂಬಿವೆ. ಇವೆಲ್ಲ ಆತ್ಮರಕ್ಷಣೆಗೆ ಅಡ್ಡಿಯಾದವರನ್ನು ಶಿಕ್ಷಿಸಲು ನಾಶಪಡಿಸಲು ಉದ್ದಿಷ್ಟವಾಗಿವೆ. ಇತರರಿಗೆ ತೊಂದರೆ ಕೊಡುತ್ತಿದ್ದ ಗಂಧರ್ವರು, ರಾಕ್ಷಸರು, ಅಪ್ಸರರು, ಪೀಡೆಪಿಶಾಚಿಗಳು, ಮೋಹಿನಿಗಳು ಮುಂತಾದ ದುಷ್ಟ ಶಕ್ತಿಗಳನ್ನು ಉಚ್ಚಾಟನೆ ಮಾಡುವುದಕ್ಕೂ ಇಲ್ಲಿನ ಮಂತ್ರಗಳು ಉಪಯುಕ್ತವಾಗಿದ್ದುವು. ಇವುಗಳೆಲ್ಲದರ ಮುಖ್ಯೋದ್ದೇಶ ಮೇಲೆ ಹೇಳಿದಂತೆ ಸುಖಜೀವನದ ಸಂಪ್ರಾಪ್ತಿಯೇ.

## ಪ್ರಾಯಶ್ಚಿತ್ತಾನಿ

ಈ ಸೂಕ್ತಗಳಲ್ಲಿ ಪ್ರಾಯಶ್ಚಿತ್ತದ ವಿಧಾನ ಹೇಳಿದೆ. ನಡತೆಯಲ್ಲಿ ಸಂಭವಿಸುವ ಲೋಪದೋಷಗಳು, ಧಾರ್ಮಿಕಾನುಷ್ಠಾನಗಳಲ್ಲಿ ಸಂಭವಿಸುವ ಪ್ರಮಾದಗಳು, ಪ್ರತಿಷಿದ್ಧವಾದುದನ್ನು ಆಚರಿಸುವುದು ಮುಂತಾದುವುಗಳಿಗೆ ಪ್ರಾಯಶ್ಚಿತ್ತಗಳಾಗಬೇಕು. ಅಪರಾಧಕ್ಕೆ ಜ್ಞಾತಾಜ್ಞಾತವಾದ ಕಾರಣಗಳುಂಟು. ಅವುಗಳ ನಿವಾರಣೆಗೆ ಪ್ರಾಯಶ್ಚಿತ್ತ ಆವಶ್ಯಕ. ಧರ್ಮಶಾಸ್ತ್ರದಲ್ಲಿ ಸೂಚಿಸಿರುವ ನಿಯಮಗಳ ಉಲ್ಲಂಘನೆ ಸಂಭವಿಸಿದಾಗ ಅದರಿಂದ ಸಂಭವಿಸುವ ಅಪಾಯದಿಂದ ರಕ್ಷಿಸಿಕೊಳ್ಳಲು ಸೂಕ್ತವಾದ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಬೇಕು. ಇದಕ್ಕೆ ಸಂಬಂಧಿಸಿದ ಮಂತ್ರಗಳು ಅನೇಕವಿವೆ. ಅಂದಿನ ಜನ ಶುಭಾಶುಭಶಕುನಗಳಲ್ಲಿ ನಂಬಿಕೆ ಇಟ್ಟಿದ್ದರು. ಪಕ್ಷಿಗಳ ಹಾರಾಟ ಅವಳಿಮಕ್ಕಳ ಜನನ ಮುಂತಾದುವನ್ನು ಕನಸಿನಲ್ಲಿ ಕಾಣುವುದು ಅಶುಭವೆಂಬ ಭಾವನೆ ಇತ್ತು. ಇಂಥ ಅಪಶಕುನಗಳಿಂದ ಸೂಚಿತವಾದ ಅಶುಭ ನಿವಾರಣೆಗೂ ಪ್ರಾಯಶ್ಚಿತ್ತಗಳನ್ನು ವಿಧಿಸಲಾಗಿತ್ತು. ಇವುಗಳಿಗೆಲ್ಲ ಸಂಬಂಧಿಸಿದ ಪ್ರಾಯಶ್ಚಿತ್ತ ಸೂಕ್ತಗಳ ಸಮೂಹ ಈ ವೇದದಲ್ಲಿದೆ.

## ಸ್ತ್ರೀಕರ್ಮಾಣಿ

ವಿವಾಹ ಮತ್ತು ಪ್ರೇಮಕ್ಕೆ ಸಂಬಂಧಿಸಿದಂತೆ ಅನೇಕ ಸೂಕ್ತಗಳಿವೆ. ಇವು ಆ ಕಾಲದ ಸಮಾಜದ ಚಿತ್ರವನ್ನು ತೋರಿಸುತ್ತವೆ. ಅನುರೂಪನಾದ ವರ ಸುಂದರಿಯಾದ ಮಗಳಿಗೆ ಸಿಗಲೆಂದು ಹಾರೈಸುತ್ತಿದ್ದರು. ಪುರುಷನು ತಾನು ಮೆಚ್ಚಿದ ಹೆಂಗಸನ್ನು ವಶಪಡಿಸಿಕೊಳ್ಳಲು ಯತ್ನಿಸುವುದು (1-34), ಹಾಗೆಯೇ ಹೆಂಗಸೂ ತನಗೆ ಪ್ರಿಯನಾದ ಪುರುಷನನ್ನು ವಶಪಡಿಸಿಕೊಳ್ಳಲು ಹವಣಿಸುವುದು (6-128)–ಮುಂತಾದುವೆಲ್ಲ ಈ ಗುಂಪಿಗೆ ಸೇರುತ್ತವೆ. ಪುತ್ರೋತ್ಪತ್ತಿಗಾಗಿಯೂ ಸದ್ಯೋಜಾತ ಶಿಶುವಿನ ರಕ್ಷೆಗಾಗಿಯೂ ಪ್ರಾರ್ಥನೆ ಸಲ್ಲಿಸಿದೆ. 14ನೇ ಕಾಂಡದಲ್ಲಿ ವಿಶೇಷತಃ ಇಂಥ ಮಂತ್ರಗಳು ಹೆಚ್ಚಾಗಿವೆ. ಕೌಶಿಕಸೂತ್ರದಲ್ಲಿ ಇಂಥ ವಶೀಕರಣ ಕೃತ್ಯಗಳ ವಿವರಣೆ ಇದೆ. ತನಗೆ ಬೇಕಾದ ಹೆಂಗಸಿನ ಪ್ರೇಮವನ್ನು ಸಂಪಾದಿಸಲು ಅವಳಂಥ ಬೊಂಬೆಯೊಂದನ್ನು ಮಣ್ಣಿನಿಂದ ಮಾಡಿ ಆ ಬೊಂಬೆಯ ಹೃದಯವನ್ನು ಬಾಣವೊಂದರಿಂದ ಇರಿಯಬೇಕಾಗಿತ್ತು. ಆ ಸಮಯದಲ್ಲಿ (3-25) ಮಂತ್ರವನ್ನು ಹೇಳಬೇಕಾಗಿತ್ತು. ಇದರಂತೆಯೇ ಪತಿಯ ವಶೀಕರಣಕ್ಕೂ ಸ್ತ್ರೀಯಾದವಳು ಬೊಂಬೆಯೊಂದನ್ನು ಮಾಡಿಕೊಂಡು ಕಾಯಿಸಿದ ಬಾಣದಿಂದ ತಲೆಯ ಮೇಲೆ ಚುಚ್ಚುತ್ತಾಳೆ. ಆಗ

ಅಸೌ ಮೇ ಸ್ಮರತಾದಿತಿ ಪ್ರಿಯೋ ಮೇ ಸ್ಮರತಾದಿತಿ |
ದೇವಾಃ ಪ್ರಹಿಣುತ ಸ್ಮರಮಸೌ ಮಾಮನುಶೋಚತು || (6-130-2)

ಎಂಬ ಮಂತ್ರವನ್ನೂ ಹಾಗೆಯೇ 6ನೇ ಮಂಡಲದ 138ನೇ ಸೂಕ್ತದ ಮಂತ್ರವನ್ನೂ ಪಠಿಸುತ್ತಾಳೆ. ತನ್ನ ವಿಷಯದಲ್ಲಿ ಪತಿಗೆ ಹುಚ್ಚು ಹಿಡಿದುಬಿಡಲೆಂದು ಈ ಸೂಕ್ತಗಳಲ್ಲಿ ದೇವತೆಗಳನ್ನು ಬೇಡಿದೆ.

ಉನ್ಮಾದಯತ ಮರುತ ಉದಂತರಿಕ್ಷಮಾದಯ |
ಅಗ್ನ ಉನ್ಮಾದಯ ತ್ವಮಸೌಮಾಮನುಶೋಚತು || (6-130-4)

ಎಲೈ ಮರುದ್ದೇವನೇ, ನನ್ನ ಪತಿಯನ್ನು ಉನ್ಮತ್ತನನ್ನಾಗಿಸು ; ಅಂತರಿಕ್ಷ ದೇವನೇ, ಹೇ ಅಗ್ನಿಯೇ, ಅವನಿಗೆ ಹುಚ್ಚು ಹಿಡಿಸಿಬಿಡಿ. ಆದರಿಂದ ಅವನು ನನ್ನನ್ನೇ ಚಿಂತಿಸುತ್ತಿರಲಿ.

ಯದ್‌ಧಾವಸಿ ತ್ರಿಯೋಜನಂ ಪಂಚಯೋಜನ ಮಾಶ್ವಿನಮ್ |
ತತಸ್ತ್ವಂ ಪುನರಾಯಸಿ ಪುತ್ರಾಣಾಂ ನೋ ಅಸಃಪಿತಾ || (6-131-3)

'ಅವನು ಮೂರು ನಾಲ್ಕು ಯೋಜನಗಳು ದೂರ ಓಡಿ ಹೋದರೂ ಅವನು ಹಿಂದಿರುಗಿ ಬರುವಂತಾಗಲಿ.' ತನ್ನ ಪ್ರತಿಸ್ಪರ್ಧಿನಿಯನ್ನು ಧ್ವಂಸ ಮಾಡಬೇಕೆಂದು ಮತ್ತೊಬ್ಬಳು ಬೇಡುತ್ತಾಳೆ. (ಅ. 1-14) ಇವುಗಳಲ್ಲನೇಕ ಮಂತ್ರಗಳು ಮಾರಣ ಮೋಹನ, ಉಚ್ಚಾಟನಾದಿಗಳಿಗಾಗಿ ಪ್ರವೃತ್ತವಾಗಿವೆ. ಪ್ರಣಯಿಗಳ ಪ್ರೇಮ ಜೀವನ ಸುಗಮವಾಗಿ ನಡೆಯುವುದನ್ನೇ ಅನೇಕ ಮಂತ್ರಗಳು ಗುರಿಯನ್ನಾಗಿ ಹೊಂದಿವೆ.

**ರಾಜಕಮಾರ್ಗ**

ರಾಜನೀತಿಗೆ ಸಂಬಂಧಿಸಿದ ಅನೇಕ ಸೂಕ್ತಗಳೂ ಇಲ್ಲಿವೆ. ಇವುಗಳ ಅಧ್ಯಯನದಿಂದ ಅಂದಿನ ರಾಜನೈತಿಕ ಪರಿಸ್ಥಿತಿಯ ಅರಿವಾಗುತ್ತದೆ. ಈ ವೇದವನ್ನು ಕ್ಷತ್ರ ವೇದವೆಂದು ಕೊಂಡಾಡಿರುವುದೂ ಸಹ ಇದರಲ್ಲಿ ರಾಜನೀತಿಗೆ ದೊರಕಿರುವ ಮಹತ್ವವನ್ನು ಸೂಚಿಸುತ್ತದೆ. ಆ ಕಾಲದಲ್ಲಿ ಪ್ರಜೆಗಳೇ ರಾಜನನ್ನು ಆರಿಸುತ್ತಿದ್ದರು. ಅಶ್ವಿನ್, ಮಿತ್ರಾವರುಣ, ಮರುತ್ ಮತ್ತು ವರುಣ-ಇವರ ದ್ವಾರಾ ರಾಜನನ್ನು ಆರಿಸುತ್ತಿದ್ದರೆಂದು ಹೇಳಿದೆ. (ಅ. ವೇ. 3-4). ದೇಶದಿಂದ ನಿರ್ವಾಸಿತನಾದ ರಾಜನನ್ನೂ ಮತ್ತೆ ಸನ್ಮಾನ ಪೂರ್ವಕವಾಗಿ ಕರೆದು ಅಭಿಷೇಕ ಮಾಡುತ್ತಿದ್ದರೆಂಬ ಅಂಶ (ಅ. ವೇ. 33) ರಿಂದ ಗೊತ್ತಾಗುತ್ತದೆ.

ಅಚಿಕ್ರದತ್ ಸ್ವಪಾ ಇಹ ಭುವದಗ್ನೇ
ವ್ಯಚಸ್ವ ರೋದಸೀ ಉರೂಚೀ |
ಯುಂಜಂತು ತ್ವಾ ಮರುತೋ ವಿಶ್ವವೇದಸ
ಆಮುಂ ನಯ ನಮಸಾ ರಾತಹವ್ಯಮ್ || (ಅ. ವೇ. 3-3-1)

"ಎಲೈ ಅಗ್ನಿಯೇ, ರಾಷ್ಟ್ರದಿಂದ ಪ್ರಚ್ಯುತನಾದ ರಾಜನು ಮತ್ತೆ ತನ್ನ ರಾಜ್ಯವನ್ನು ಪ್ರವೇಶಿಸಲು ನಿನ್ನನ್ನು ಆಹ್ವಾನಿಸುತ್ತಿದ್ದಾನೆ. ನಿನ್ನ ಅನುಗ್ರಹದಿಂದ ತನ್ನ ಪ್ರಜೆಗಳ ಪಾಲಕನಾಗಲಿ ಅವನು. ಅವನನ್ನು ರಕ್ಷಿಸಲು ದ್ಯಾವಾಪೃಥಿವಿಗಳನ್ನೆಲ್ಲಾ ನೀನು ವ್ಯಾಪಿಸು. ಸರ್ವವನ್ನೂ ತಿಳಿದ ಮರುದ್ದೇವತೆಗಳು ನಿನ್ನೊಡನೆ ಸೇರಲಿ. ಹವಿಸ್ಸಮರ್ಪಣ ಮಾಡಿದ ಇವನನ್ನು ಪುನಃ ಅವನ ರಾಷ್ಟ್ರದಲ್ಲಿ ನೆಲೆಗೊಳಿಸು."

ಜನರು ಕೊಟ್ಟ ಅಧಿಕಾರದಿಂದ ರಾಜನು 'ಏಕರಾಟ್' ಆಗುತ್ತಿದ್ದನು. ದೇಶದ ರಕ್ಷಣೆಗಾಗಿ ಸಕಲರೂ ನೆರೆದು ವಿಚಾರಮಾಡುವರು. ಸಮಿತಿಯ ಅಭಿಪ್ರಾಯಕ್ಕೆ ಮನ್ನಣೆ ಇತ್ತು.

ರಾಜಪುರೋಹಿತನ ಸ್ಥಾನವಂತೂ ಪ್ರಧಾನವಾಗಿದ್ದಿತು. (ಅ. ವೇ. 4-31). ರಾಜನ ಸಂವರಣ ಕಾಲದಲ್ಲಿ, ಪಟ್ಟಾಭಿಷೇಕ ಕಾಲದಲ್ಲಿ, ಪುರೋಹಿತನು ಹೇಗೆ ಅನಿವಾರ್ಯವೋ ಹಾಗೆಯೇ ಯುದ್ಧಕಾಲದಲ್ಲಿ ರಣಭೇರಿಯನ್ನು ಮೊಳಗಿಸುವುದರಲ್ಲಿಯೂ, ಇಂದ್ರಾದಿ ದೇವತೆಗಳ ಆಹ್ವಾನದಿಂದ ಶತ್ರು ಸೈನ್ಯವನ್ನು ವಿಮೋಹಗೊಳಿಸಿ ನಾಶಗೊಳಿಸುವುದರಲ್ಲಿಯೂ ಇವನು ಆವಶ್ಯಕ. (ಅ. ವೇ. 4-31). ತನಗೆ ಆಶ್ರಯ ಕೊಟ್ಟಿರುವ ರಾಜನ ಸರ್ವತೋಮುಖವಾದ ಅಭಿವೃದ್ಧಿಯನ್ನು ಇವನು ಸಾಧಿಸುವನು. ಅಥರ್ವವೇದಪ್ರೋಕ್ತವಾದ ವಿಧ್ಯನುಷ್ಠಾನಗಳಿಂದ ಇವನು ತನ್ನ ರಾಜನ ಶತ್ರುಗಳನ್ನೆಲ್ಲಾ ದಮನಮಾಡುವನು. ಅಥರ್ವವೇದ ಹೀಗೆ ರಾಜನೀತಿ ಶಾಸ್ತ್ರಕ್ಕೂ ಮೂಲವಾಗಿದೆ.

ಇಲ್ಲಿ ಬರುವ ದುಂದುಭಿಸೂಕ್ತ (ಅ. ವೇ. 5-21) ವೀರರಸ ಪ್ರಧಾನವಾಗಿ ಸುಂದರವಾದ ಉಪಮಾನಗಳಿಂದಲೂ ಭಾವಸೌಷ್ಠವದಿಂದಲೂ ತುಂಬಿ ತುಳುಕುತ್ತಿದೆ. ಶತ್ರುಗಳಿಗೆ ತೊಂದರೆಯುಂಟುಮಾಡಿ ಮೋಹಗೊಳ್ಳುವಂತೆ ಮಾಡಬೇಕೆಂಬ ಬೇಡಿಕೆ ಕೆಳಗಿನ ಮಂತ್ರದಲ್ಲಿದೆ-

ಯಥಾ ಶ್ಯೇನಾತ್ ಪತತ್ರಿಣಃ ಸಂವಿಜಂತೇ
ಅಹರ್ದಿವಿ ಸಿಂಹಸ್ಯ ಸ್ತನಯೋರ್ಯಥಾ |
ಏವಾ ತ್ವಂ ದುಂದುಭೇ ಮಿತ್ರಾನಭಿ ಕ್ರಂದ
ಪ್ರ ತ್ರಾಸಯಾಥೋ ಚಿತ್ತಾನಿ ಮೋಹಯ || (ಅ. ವೇ. 5-21-6)

'ಗಿಡುಗನಿಗೆ ಇತರ ಪಕ್ಷಿಗಳು ಹೇಗೆ ಭಯಪಡುವುವೋ, ಸಿಂಹ ಘರ್ಜನೆಯನ್ನು ಕೇಳಿ ಇತರ ಪ್ರಾಣಿಗಳು ಹೇಗೆ ಭಯಭೀತರಾಗುವುವೋ ಹಾಗೆ, ಎಲೌ ದುಂದುಭಿಯೇ, ನಮ್ಮ ಶತ್ರುಗಳನ್ನು ನಿನ್ನ ಭಯಂಕರನಾದದಿಂದ ಹೆದರಿಸಿಬಿಡು. ಅವರ ಚಿತ್ತಗಳು ಮೋಹಕ್ಕೊಳಗಾಗಲಿ.'

ಹನ್ನೆರಡನೇ ಮಂಡಲದಲ್ಲಿ ಬರುವ ಭೂಮಿಸೂಕ್ತ ಮಾತೃಭೂಮಿಯ ಮೇಲಿನ ಪ್ರೇಮವನ್ನು ಉಜ್ವಲವಾಗಿ ಚಿತ್ರಿಸುತ್ತದೆ. ಭಾಷೆ ಮತ್ತು ಭಾವದ ದೃಷ್ಟಿಯಿಂದ ಇದು ಬಹಳ ಉದಾತ್ತವಾಗಿದೆ. ಸ್ವಾತಂತ್ರ್ಯ ಪ್ರೇಮಿಯ ಉಜ್ವಲ ದೇಶಭಕ್ತಿ ಗೀತೆಯಾಗಿದೆ ಇದು. ಮಾತೃರೂಪಿಣಿಯಾದ ಭೂಮಿಯು ಎಲ್ಲ ಪಾರ್ಥಿವ ಪದಾರ್ಥಗಳ ಜನನಿಯಾಗಿ ಪೋಷಿಕೆಯಾಗಿದ್ದಾಳೆಂದು ಇಲ್ಲಿ ವರ್ಣಿಸಿದೆ. (ಅ. ವೇ. 12-1.)

'ಮಾತಾಭೂಮಿಃ ಪುತ್ರೋಽಹಂ ಪೃಥಿವ್ಯಾಃ' (12-1-12)

ಈ ಮಾತುಗಳು ದೇಶಪ್ರೇಮದಿಂದ ತುಂಬಿವೆ ; ರಾಷ್ಟ್ರೀಯ ಭಾವನೆಯಿಂದ ಕೂಡಿ ಇಂದಿಗೂ ನಮ್ಮಲ್ಲಿ ದೇಶಭಕ್ತಿಯನ್ನೂ ಉತ್ಸಾಹವನ್ನೂ ತುಂಬುತ್ತವೆ.

### ಬ್ರಹ್ಮಾಣ್ಯಾನಿ

ಪರಮ ತತ್ತ್ವವಾದ ಪರಬ್ರಹ್ಮ ವಸ್ತುವಿನ ಸ್ವರೂಪ ವಿವೇಚನೆಯನ್ನು ಮಾಡುವ ಸೂಕ್ತಗಳು ಬ್ರಹ್ಮಣ್ಯ ಸೂಕ್ತಗಳೆಂದು ಪ್ರಸಿದ್ಧವಾಗಿವೆ ಈ ಬ್ರಹ್ಮಣ್ಯ ಸೂಕ್ತಗಳಿಲ್ಲಿರುವುದರಿಂದಲೇ ಈ ವೇದಕ್ಕೆ 'ಬ್ರಹ್ಮವೇದ'ವೆಂದು ಹೆಸರು ಬಂದಿದೆ. ಈ ಸೂಕ್ತಗಳಲ್ಲಿ ಗಂಭೀರವಾದ ತತ್ತ್ವ ವಿಚಾರದ ವಿಶದವಾದ ಸಮೀಕ್ಷೆ ಇದೆ. ದಾರ್ಶನಿಕ ದೃಷ್ಟಿಯಿಂದ ಇವು ಅಮೂಲ್ಯವಾದುವು. ಋಗ್ವೇದದಲ್ಲಿ ಪ್ರತಿಪಾದಿಸಿರುವ ವಿಚಾರಕ್ಕೂ ಮುಂದಿನ ಉಪನಿಷತ್ತುಗಳ ವಿಚಾರಸರಣಿಗೂ ನಡುವಣ ಕೊಂಡಿಗಳಂತೆ ಇವು ಇವೆ.

ಇಲ್ಲಿ ಅನೇಕ ಹೆಸರುಗಳಿಂದಲೂ ಸಂಜ್ಞೆಗಳಿಂದಲೂ ಪರಮಾತ್ಮತತ್ತ್ವದ ನಿರೂಪಣೆ

ಮಾಡಲಾಗಿದೆ. ಋಗ್ವೇದದಲ್ಲಿ ಇಂದ್ರ, ಅಗ್ನಿ ಮುಂತಾದ ಅಭಿಧಾನಗಳೊಡನೆ ಪುರುಷ, ಹಿರಣ್ಯಗರ್ಭ, ವಿಶ್ವಕರ್ಮ ಮುಂತಾದ ಹೆಸರುಗಳನ್ನು ಕೊಟ್ಟಿರುವಂತೆ ಇಲ್ಲಿ ಅದೇ ಪರತತ್ತ್ವವನ್ನು 'ಕಾಲ', 'ಸ್ಕಂಭ', 'ಉಚ್ಛಿಷ್ಟ', 'ವ್ರಾತ್ಯ' ಎಂದು ಕರೆದಿದೆ. 'ಕಾಲ' ಎಂಬ ಹೆಸರನ್ನುಳ್ಳ ಆ ಪರಮನಿಂದ ಜಗತ್ತು ಹಾಗು ದ್ಯಾವಾಪೃಥಿವಿಗಳು ಹುಟ್ಟುತ್ತವೆ. ಸಮಸ್ತ ಪ್ರಪಂಚಕ್ಕೂ ಅವನೇ ಅಧಿಷ್ಠಾನ. ಮನಸ್ಸು, ಪ್ರಾಣ, ನಾಮ ಮುಂತಾದುವೆಲ್ಲಾ ಅಲ್ಲಿಯೇ ಸಮಾಹಿತವಾಗಿವೆ. ಅವನು ಇಲ್ಲಿರುವುದಕ್ಕೆಲ್ಲ ಈಶ್ವರ. ಪ್ರಜಾಪತಿಗೂ ಅವನೇ ಪತಿ. ಅವನ ಸಂಕಲ್ಪದಿಂದ ಜಗತ್ತಿನ ಸೃಷ್ಟಿ ಆಯಿತು. ಈ ಭಾವ ಕೆಳಗಿನ ಮಂತ್ರದಲ್ಲಿದೆ:

'ಕಾಲೇತಪಃ ಕಾಲೇಜ್ಯೇಷ್ಠಂ ಕಾಲೇ ಬ್ರಹ್ಮಸಮಾಹಿತಮ್ |
ಕಾಲೋಹ ಸರ್ವಸ್ಯೇಶ್ವರೋ ಯಃ ಪಿತಾಸೀತ್ ಪ್ರಜಾಪತೇಃ ||' (ಅ.ವೇ. 19-53-8)

ಹದಿಮೂರನೇ ಕಾಂಡದಲ್ಲಿನ ಅನೇಕ ಸೂಕ್ತಗಳಲ್ಲಿ 'ರೋಹಿತ'ನ ವರ್ಣನೆ ಇದೆ. ಇದು ಸೂರ್ಯನ ಪ್ರತೀಕ ಅಥವಾ ಅವನ ವೀರ್ಯದ ಪ್ರತೀಕ. ಜಗತ್ತಿನ ಸೃಷ್ಟಿಯೇ ಮೊದಲಾದ ಸಮಸ್ತ ವ್ಯಾಪಾರವನ್ನೂ ಅವನು ನಿರ್ವಹಿಸುತ್ತಾನೆ. ಸೂರ್ಯನ ಕುದುರೆಗಳು ಆ ರೋಹಿತನನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ನಾಲ್ಕು ದಿಕ್ಕುಗಳಿಗೂ ಕರೆದುಕೊಂಡು ಹೋಗುತ್ತವೆ. ಅವನೇ ಯಜ್ಞದ ಜನಯಿತಾ. ಸಮಗ್ರ ವಿಶ್ವಕ್ಕೂ ಅವನೇ ನಿರ್ಮಾತಾ. ಈ ಪ್ರಪಂಚವೂ ಅವನ ಆಸರೆಯಲ್ಲಿ ನಿಂತಿದೆ ಮತ್ತು ಜೀವಿಸುತ್ತಿದೆ. ಈ ವರ್ಣನೆಯಿಂದ ರೋಹಿತಶಬ್ದವಾಚ್ಯವಾದುದು ಪರಬ್ರಹ್ಮವಸ್ತುವೆಂದು ಗೊತ್ತಾಗುತ್ತದೆ.

ಹತ್ತನೇ ಕಾಂಡದ ಸೂಕ್ತದಲ್ಲಿ ಗೋಮಾತೆಯ ವರ್ಣನೆಯನ್ನು ಬಹಳ ಮಾರ್ಮಿಕವಾಗಿ ಮಾಡಿದೆ. ಗೋವುಗಳು ಬ್ರಾಹ್ಮಣರಿಗೆ ದಕ್ಷಿಣಾ ಸ್ವರೂಪವಾಗಿ ಮಹತ್ವ ಹೊಂದಿದ್ದಂತೆ ಕೃಷಿಕ ಸಮಾಜದ ಸರ್ವಸ್ವವಾಗಿ ಗೌರವ ಪಾತ್ರವಾಗಿದ್ದವು. 'ವಶಗೌ' ಜಗತ್ತಿನ ಸರ್ವಶ್ರೇಷ್ಠ ತತ್ವವೆಂದು ಇಲ್ಲಿ ಚಿತ್ರಿಸಿದೆ:

'ವಶಾಮೇವಾಮೃತಾಮಾಹುಃ ವಶಾಂ ಮೃತ್ಯುಮುಪಾಸತೇ |
ವಶೇದಂ ಸರ್ವಮಭವದ್ದೇವಾ ಮನುಷ್ಯಾ ಅಸುರಾಃ ಪಿತರಋಷಯಃ ||'
(ಅ. ವೇ. 10-10-26)

ಪರತತ್ತ್ವವನ್ನು ಸ್ಕಂಭವೆಂದು (10-7, 8)ರಲ್ಲಿಯೂ, ಉಚ್ಛಿಷ್ಟವೆಂದು (11-9)ರಲ್ಲಿಯೂ ಕೊಂಡಾಡಿದೆ. ಸಮಸ್ತ ಪದಾರ್ಥಗಳಿಗೂ ಆಶ್ರಯವೂ, ಅಧಿಷ್ಠಾನವೂ ಆಗಿರುವುದರಿಂದಲೇ ಆ ಪರಮ ತತ್ತ್ವಕ್ಕೆ 'ಸ್ಕಂಭ'ವೆಂಬ ಹೆಸರನ್ನು ಕೊಟ್ಟಿದೆ. ಅದು ವಿಶ್ವಕ್ಕೆ ಮಾತ್ರವಲ್ಲದೆ 'ಬ್ರಹ್ಮಕ್ಕೂ' ಕಾರಣವಾಗಿ 'ಜ್ಯೇಷ್ಠಬ್ರಹ್ಮ' ಎಂಬ ಹೆಸರಿಗೆ ಪಾತ್ರವಾಗಿದೆ. ಭೂಮಿ, ಅಂತರಿಕ್ಷ, ಆಕಾಶಗಳೂ ಹಾಗೂ ಅಗ್ನಿ, ಚಂದ್ರ, ವಾಯು, ಸೂರ್ಯರೂ ಸ್ಕಂಭದಲ್ಲಿ ಸಮಾಹಿತರಾಗಿದ್ದಾರೆ. (ಅ. ವೇ. 10-7-12).

ಆ ತತ್ವ ಆತ್ಮದೊಡನೆ ಏಕರಸವಾಗಿದೆ. ಉಚ್ಛಿಷ್ಟಸೂಕ್ತದಲ್ಲಿ ಅದೇ ಬ್ರಹ್ಮವಸ್ತುವನ್ನು ಉಚ್ಛಿಷ್ಟವೆಂಬ ಅಭಿಧಾನದಿಂದ ಕೊಂಡಾಡಿದೆ. ಜಗತ್ತಿನ ಸಮಸ್ತ ಪದಾರ್ಥಗಳ, ವೇದ ಪುರಾಣಾದಿಗಳ ಹಾಗೂ ಪ್ರಾಣಾಪಾನ ಚಕ್ಷುಃಶ್ರೋತ್ರಾದಿಗಳ ಉತ್ಪತ್ತಿಯು ಉಚ್ಛಿಷ್ಟನಿಂದಲೇ ಆಗುತ್ತದೆ.

ಯಚ್ಚ ಪ್ರಾಣಿತಿ ಪ್ರಾಣೇನ ಯಚ್ಚ ಪಶ್ಯತಿ ಚಕ್ಷುಷಾ |
ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿದೇವಾ ದಿವಿಶ್ರಿತಃ ||' (ಅ. ವೇ. 11-7-23).

ಈಗ ಉಪಲಬ್ಧವಾಗಿರುವ ಶೌನಕಶಾಖೆಯ ಸಂಹಿತೆಯ 15ನೇ ಕಾಂಡಕ್ಕೆ ವ್ರಾತ್ಯಕಾಂಡವೆಂಬ ಹೆಸರಿದೆ. ಈ ಕಾಂಡದಲ್ಲಿ ಸಮಗ್ರವಾಗಿ ವ್ರಾತ್ಯನ ವಿವರಣೆ ಇದೆ. ಈ ಕಾಂಡದ ಮೊದಲನೆಯ ಅನುವಾಕದ ಏಳು ಸೂಕ್ತಗಳಲ್ಲಿಯೂ ಎರಡನೆಯ ಅನುವಾಕದ ಹನ್ನೊಂದು ಸೂಕ್ತಗಳಲ್ಲಿಯೂ ವ್ರಾತ್ಯದೇವತೆಯ ಸ್ತುತಿ ಇದೆ. ವ್ರಾತ್ಯ ಶಬ್ದದ ಅರ್ಥವೇನೆಂದು ನಾವು ವಿಚಾರಿಸಬೇಕು. ಯಾರು ಉಚ್ಚಕುಲದಲ್ಲಿ ಜನಿಸಿಯೂ ವೇದೋಕ್ತಸಂಸ್ಕಾರರಹಿತರಾಗಿದ್ದರೋ ಅವರಿಗೆ ಈ ಹೆಸರು ಸಾಧಾರಣವಾಗಿ ಅನ್ವಯಿಸಿದರೂ ಈ ವ್ರಾತ್ಯಕಾಂಡದಲ್ಲಿ ಬರುವ ವ್ರಾತ್ಯಶಬ್ದಕ್ಕೆ ಈ ಅರ್ಥ ಹೊಂದುವುದಿಲ್ಲ. ಇಲ್ಲಿ ವ್ರಾತ್ಯಶಬ್ದಕ್ಕೆ ಬ್ರಹ್ಮವಸ್ತುವೆಂಬ ಅರ್ಥ ಬರುತ್ತದೆ. ಬ್ರಹ್ಮವಸ್ತುವಿನಿಂದ ಜಗತ್ತು ಹುಟ್ಟುತ್ತದೆ. ಪ್ರಪಂಚದ ಕಟ್ಟುಕಾಯಿದೆಗಳನ್ನು ಅದು ಮೀರಿ ನಿಂತಿದೆ. ಈ ಕಾಂಡದಲ್ಲಿ ವ್ರಾತ್ಯರೂಪಿಯಾದ ಬ್ರಹ್ಮವಸ್ತುವಿನಿಂದ ಆಗುವ ಪ್ರಪಂಚ ಸೃಷ್ಟಿಯ ವ್ಯವಸ್ಥಿತವರ್ಣನೆ ವಿಸ್ತಾರವಾಗಿದೆ.

ಪೈಪ್ಪಲಾದ ಶಾಖೆಯ 18ನೇ ಕಾಂಡದ 27ನೇ ಸೂಕ್ತ ವ್ರಾತ್ಯವಿಷಯಕವಾಗಿದೆ. ಇಲ್ಲಿ ಬರುವ 'ವ್ರಾತ್ಯೋ ವಾ ಇದಮಗ್ರ ಆಸೀತ್' ಎಂಬ ವಾಕ್ಯ ಮೇಲಿನ ಅರ್ಥವನ್ನು ಸಮರ್ಥಿಸುವುದು ; ವ್ರಾತ್ಯನಿಂದ ಪ್ರಜಾಪತಿಯ ಸೃಷ್ಟಿಯೂ ಮುಂದೆ ಅವನಿಂದ ಇತರ ಪದಾರ್ಥಗಳ ಸೃಷ್ಟಿಯೂ ಹೇಳಿದೆ. ಈ ರೀತಿಯಲ್ಲಿ ವ್ರಾತ್ಯಕಾಂಡವೂ ಉಚ್ಛಿಷ್ಟಸೂಕ್ತಗಳ ರೀತಿಯಂತೆ ಆಧ್ಯಾತ್ಮಿಕ ತತ್ತ್ವವನ್ನು ಪ್ರತಿಪಾದಿಸುತ್ತದೆ. ಅಥರ್ವ ವೇದದಲ್ಲಿ ಬರುವ ಆಧ್ಯಾತ್ಮಿಕ ವಿಚಾರಗಳು ಉಪನಿಷತ್ತುಗಳ ವಿಚಾರಧಾರೆಗೆ ಪೀಠಿಕೆಯಾಗಿ ಬಂದಿವೆ. ಇಂಥ ವಿಚಾರಗಳನ್ನು ಪ್ರತಿಪಾದಿಸುವ ಸೂಕ್ತಗಳು ಬ್ರಹ್ಮಣ್ಯಗಳೆಂದು ಪ್ರಸಿದ್ಧವಾಗಿವೆ.

### ಅಥರ್ವವೇದವೂ ಇತಿಹಾಸವೂ

ಅಥರ್ವವೇದದಲ್ಲಿನ ಮಂತ್ರರಾಶಿ ಅತ್ಯಧಿಕವಾಗಿ ಮಾರಣ, ಮೋಹನ ಮತ್ತು ಉಚ್ಚಾಟನಾದಿಗಳಿಗಾಗಿ ಬಳಸಲ್ಪಡುತ್ತಿದ್ದವು. ಆದ್ದರಿಂದಲೇ ಇಲ್ಲಿ ಐತಿಹಾಸಿಕ ಮಹತ್ವವನ್ನುಳ್ಳ ಮಂತ್ರಗಳು ಬಹಳ ವಿರಳ. ಇಲ್ಲಿ ಉಪಲಬ್ಧವಾಗಿರುವ ಹಲವಾರು ಭೌಗೋಳಿಕ ಮತ್ತು ಸಾಂಸ್ಕೃತಿಕ ವಿಷಯಗಳಿಂದ ಅಂದಿನ ಜನಜೀವನದ ಮತ್ತು ರಾಜಕೀಯ ಜೀವನದ ಪರಿಚಯವಾಗುತ್ತದೆ. ಅಥರ್ವವೇದದ ಕಾಲಕ್ಕೆ ಪ್ರಾಚೀನಾರ್ಯರು ಮಗಧ ಮತ್ತು ಅಂಗರಾಜ್ಯಗಳವರೆಗೆ ಮುಂದುವರಿದು ಬಂದಿದ್ದರು (ಅ. ವೇ. 5-22). ಪೂರ್ವದಲ್ಲಿ ಮಗಧ ಮತ್ತು ಅಂಗಗಳಿಗೂ ಮತ್ತು ಗಾಂಧಾರ, ಮೂಜವತ್ ಮತ್ತು ಆಚಿನ ಬಾಹ್ಲೀಕವನ್ನು ದಾಟಿ ಹೋಗಬೇಕೆಂದೂ ತಕ್ಮನ್ನಿಗೆ ಬೇಡಿಕೆ ಸಲ್ಲಿಸಿದ್ದಾರೆ. ಪಶ್ಚಿಮದಲ್ಲಿ ಗಾಂಧಾರವೂ ಪೂರ್ವದಲ್ಲಿ ಅಂಗವೂ ಆರ್ಯ ನಿವಾಸದ ಎಲ್ಲೆಯಾಗಿದ್ದಿರಬಹುದೆಂದು ಇದರಿಂದ ಗೊತ್ತಾಗುತ್ತದೆ. ಬಾಹ್ಲೀಕವೂ ಮೂಜವತ್‌ಗಿಂತ ಆಚೆ ಇದ್ದಿತೆಂದು ತಿಳಿಯುವುದಾದರೆ ಗಾಂಧಾರವು ಆರ್ಯರ ನಾಡಿನೊಳಗೆ ಇದ್ದಿರಬಹುದು. (ಅ. ವೇ. 5-22-7)ರಲ್ಲಿ

'ತಕ್ಮನ್ ಮೂಜವತೋ ಗಚ್ಛ ಬಾಲ್ಹೀಕಾನ್ ವಾಪರಸ್ತರಾನ್ |
ಶೂದ್ರಾಮಿಚ್ಛ ಪ್ರಕರ್ಫ್ಯಾಂ ತಾಂ ತಕ್ಮನ್ ವಾವ ಧೂನುಹಿ ||'

'ತುಂಬಿದ ಮೈಯುಳ್ಳ ಶೂದ್ರ ಸ್ತ್ರೀಯನ್ನು ಸೇರಿ ನಡುಗಿಸು' ಎಂದು ತಕ್ಮನ್ನನ್ನು ಕೇಳಿದ್ದಾರೆ. ಆರ್ಯರ ಜನಾಂಗಕ್ಕಿಂತ ಹೆಚ್ಚಾಗಿ ಇಂಡೋ ಆರ್ಯನ್ ಜನರು ಜ್ವರ ಬಾಧೆಗೆ ತುತ್ತಾಗಿದ್ದರೆಂಬುದು ಇದರಿಂದ ಕಾಣುತ್ತದೆ.

ಸಮಾಜದಲ್ಲಿ ಚಾತುರ್ವರ್ಣ್ಯವ್ಯವಸ್ಥೆ ಊರಿ ಹೋಗಿದ್ದಿತು ; ಮೊದಲಿನ ಮೂರು ವರ್ಣದವರಿಗೆ ಆರ್ಯರೆಂಬ ಹೆಸರೂ ಚತುರ್ಥ ವರ್ಣದವರಿಗೆ ಶೂದ್ರರೆಂಬ ಹೆಸರೂ ವ್ಯವಹಾರದಲ್ಲಿತ್ತು. ಆದರೆ ಆರ್ಯರು ಶೂದ್ರರನ್ನು ದ್ವೇಷಿಸುತ್ತಲೂ ಇರಲಿಲ್ಲ; ಕಡೆ ಗಣಿಸುತ್ತಲೂ ಇರಲಿಲ್ಲ. ಆರ್ಯ, ಶೂದ್ರರಿಬ್ಬರಿಗೂ ಪ್ರಿಯವಾಗಲೆಂದು ಹಾರೈಸುತ್ತಿದ್ದರು.

'ಪ್ರಿಯಂ ಸರ್ವಸ್ಯ ಉತ ಶೂದ್ರ ಉತ ಆರ್ಯೇ' (ಅ. ವೇ. 19-6)

ಅ. ವೇ. 4-22ರಲ್ಲಿ ಕ್ಷತ್ರಿಯರ ಮತ್ತು ವೈಶ್ಯರ ಉಲ್ಲೇಖವಿದೆ. ಅವರು ಅಭಿವೃದ್ಧಿ ಹೊಂದುವಂತೆ ಅನುಗ್ರಹಿಸಬೇಕೆಂದು ಇಂದ್ರನನ್ನು ಬೇಡಿದ್ದಾರೆ. ವ್ಯವಸಾಯಗಾರರಾದ ಆರ್ಯರಿಗೆ 'ವಿಶ್' ಎಂಬ ಹೆಸರಿತ್ತು. ಕ್ಷತ್ರಿಯನು ರಾಜನಾಗಿ ಆಳುತ್ತಿದ್ದನು. ಅನೇಕ ಮಂತ್ರಗಳಲ್ಲಿ ಬ್ರಾಹ್ಮಣರ ಉಲ್ಲೇಖವಿದೆ. 'ಬ್ರಾಹ್ಮಣರಿಗೆ ಹಿಂಸೆಮಾಡುವ ರಾಜರೂ ರಾಷ್ಟ್ರಗಳೂ ಅಭಿವೃದ್ಧಿ ಹೊಂದುವುದಿಲ್ಲ.'

ಉಗ್ರೋ ರಾಜಾ ಮನ್ಯಮಾನೋ ಬ್ರಾಹ್ಮಣಂ ಯೋ ಜಿಘತ್ಸತಿ |
ಪರಾವತ್ ಸಿಚ್ಯತ್ ರಾಷ್ಟ್ರಂ ಬ್ರಾಹ್ಮಣೋ ಯತ್ರ ಜೀಯತೇ ||' (ಅ. ವೇ. 5-9-6)

ಎಂದು ಹೇಳಿದೆ. ಬ್ರಾಹ್ಮಣರಿಗೆ ಘಾತವುಂಟುಮಾಡುವವರಿಗೆ ಅನಿಷ್ಟವೊದಗುವುದೆಂಬುದನ್ನು ಅ. ವೇ. 5-19ರಲ್ಲಿ ಹೇಳಿದೆ. ಆ ಕಾಲದಲ್ಲಿಯೇ ರಾಜರುಗಳು ಬ್ರಾಹ್ಮಣರನ್ನು ದ್ವೇಷಿಸುತ್ತಿದ್ದರೆಂದೂ, ಹಿಂಸಿಸುತ್ತಿದ್ದರೆಂದೂ ಇದರಿಂದ ಗೊತ್ತಾಗುತ್ತದೆ. ಸಮಾಜದಲ್ಲಿ ಬ್ರಾಹ್ಮಣರಿಗಿದ್ದ ಉನ್ನತವಾದ ಗೌರವಸ್ಥಾನ ಇದಕ್ಕೆ ಕಾರಣವಾಗಿರಬಹುದು.

ಗೋಧನಕ್ಕೆ ಹೆಚ್ಚಿನ ಗೌರವ ಮತ್ತು ಬೆಲೆ ಇತ್ತು. ಹನ್ನೆರಡನೇ ಕಾಂಡದ ನಾಲ್ಕನೇ ಸೂಕ್ತ ಪಶುವನ್ನು 'ವಶಾ' ಎಂದು ಕರೆದು ವಿಶೇಷವಾಗಿ ಸ್ತುತಿಸುತ್ತದೆ. ಬ್ರಾಹ್ಮಣರಿಗೆ ಗೋದಾನ ಮಾಡುವುದನ್ನೂ ಪ್ರಶಂಸೆ ಮಾಡಿದೆ. ಚತುರ್ವರ್ಣಗಳ ಉಲ್ಲೇಖ ಸ್ಪಷ್ಟವಾಗಿ ಬಂದಿರುವಂತೆ ಇಲ್ಲಿ ಅನುಲೋಮ ಪ್ರತಿಲೋಮ ವರ್ಣಗಳ ಉಲ್ಲೇಖವಿಲ್ಲ.

ಅಥರ್ವವೇದದ ಕಾಲಕ್ಕೆ ಜನರು ಹೆಚ್ಚಾಗಿ ಕೃಷಿಯನ್ನವಲಂಬಿಸಿದ್ದರು. ವ್ಯವಸಾಯದಲ್ಲಿ ಅಭಿವೃದ್ಧಿ ಆಗಬೇಕೆಂದೂ, ಪಶುಸಂಪತ್ತು ಹೆಚ್ಚಬೇಕೆಂದೂ ಅವರು ಆಶಿಸುತ್ತಿದ್ದರು. ದೇಶದಲ್ಲಿ ಚಿಕ್ಕ ಚಿಕ್ಕ ರಾಜ್ಯಗಳನೇಕವಿದ್ದವು. ಅವುಗಳಿಗೆ ರಾಷ್ಟ್ರವೆನ್ನುತ್ತಿದ್ದರು. ರಾಜರುಗಳು ಬಲಿಷ್ಠರಾಗಿದ್ದರು. ಬಲಯುತರಾಗಲೂ ತಮ್ಮ ವರ್ಚಸ್ಸನ್ನು ಇತರರ ಮೇಲೆ ಬೀರಲೂ 'ಮಣಿಬಂಧನ', 'ದರ್ಭಬಂಧನ' ಮುಂತಾದ ವಿಶೇಷೋತ್ಸವಗಳನ್ನವರು ನಡೆಸುತ್ತಿದ್ದರು. (ಅ. ವೇ. 19-27 ರಿಂದ 33).

ಇಮಂ ಬಧ್ನಾಮಿತೇ ಮಣಿಂ ದೀರ್ಘಾಯುತ್ವಾಯ ತೇಜಸೇ |
ದರ್ಭಂ ಸಪತ್ನದಂಭನಂ ದ್ವಿಷತಸ್ತಪನಂ ಹೃದಃ || (19-28-1)

ವಿಜಯವನ್ನೂ ಬಲವನ್ನೂ ಬಯಸುವವನೇ, ದರ್ಭಮಯವಾದ ಮಣಿಯನ್ನು ನಿನಗೆ ಕಟ್ಟುತ್ತೇನೆ, ದೀರ್ಘಾಯುಸ್ಸನ್ನೂ ಅತಿಶಯವಾದ ತೇಜಸ್ಸನ್ನೂ ಪಡೆಯಲೆಂದು ಶತ್ರುಗಳನ್ನು ಹಿಂಸಿಸುವುದೂ ದ್ವೇಷಿಗಳ ಹೃದಯಕ್ಕೆ ತಾಪವನ್ನುಂಟುಮಾಡುವುದೂ ಆದ ದರ್ಭನಿರ್ಮಿತವಾದ ಈ ಮಣಿಯನ್ನು ಕಟ್ಟುತ್ತೇನೆ.

ಹತ್ತೊಂಭತ್ತನೆಯ ಕಾಂಡದ ಕೊನೆಯ ಸೂಕ್ತ 'ರಾಜಸೂಯ'ವನ್ನು ಉಲ್ಲೇಖಿಸುತ್ತದೆ. ಈ ರಾಜರುಗಳಲ್ಲಿ ಪರಸ್ಪರ ಯುದ್ಧಗಳಾಗುತ್ತಿದ್ದವು. ಹಾಗೆಯೇ ಅನಾರ್ಯರೊಡನೆಯೂ ಯುದ್ಧಗಳಾಗುತ್ತಿದ್ದವು. ನೀಲಲೋಹಿತನು ನೀಲ ವರ್ಣದಿಂದ ಭ್ರಾತೃವ್ಯರನ್ನೂ

(ಆರ್ಯರಾಜರುಗಳು) ಲೋಹಿತ ವರ್ಣದಿಂದ ಶತ್ರುಗಳನ್ನೂ ಧ್ವಂಸಮಾಡುವನೆಂದು ಹೇಳಿದೆ ಕೆಳಗಿನ ಮಂತ್ರದಲ್ಲಿ:

'ನೀಲೇನೈವಾಪ್ರಿಯಂ ಭ್ರಾತೃವ್ಯಂ ಪ್ರೋರ್ಣೋತಿ
ಲೋಹಿತೇನ ದ್ವಿಷಂ ತಂ ವಿಧ್ಯತಿ |' (ಅ.ವೇ. 15-1-8)

ಸಾಮಾಜಿಕ ಪರಿಸ್ಥಿತಿಯಂತೂ ಋಗ್ವೇದಕಾಲದ ಸಾಮಾಜಿಕ ಸ್ಥಿತಿಯಂತೆಯೇ ಇದ್ದಿತೆಂದು ಗೊತ್ತಾಗುತ್ತದೆ. ವೈವಾಹಿಕ ಪದ್ಧತಿಯನ್ನು ವಿವರಿಸುವ ಎರಡು ಸೂಕ್ತಗಳು ಈ ಸಂಹಿತೆಯಲ್ಲಿ ಉಪಲಬ್ಧವಾಗಿವೆ (14 ಕಾಂಡ). 64 ಮತ್ತು 75 ಮಂತ್ರಗಳುಳ್ಳ ಈ ದೀರ್ಘ ಸೂಕ್ತಗಳು ಋಗ್ವೇದ ಸಂಹಿತೆಯ ಸೂರ್ಯಾಸೂಕ್ತದ ಮಂತ್ರಗಳನ್ನೊಳಗೊಂಡಿವೆ. ಅಲ್ಲಲ್ಲಿ ಕೆಲವು ಬದಲಾವಣೆಗಳನ್ನೂ ಇಲ್ಲಿ ಮಾಡಿಕೊಳ್ಳಲಾಗಿದೆ. ಇಲ್ಲಿಯೂ ಪಾಣಿಗ್ರಹಣಕ್ಕೇ ಪ್ರಾಧಾನ್ಯವಿದೆ. ವರನು ವಧುವಿನ ತಂದೆಯಲ್ಲಿಗೆ ಹೋಗಿ ಕನ್ಯಾವರಣವನ್ನು ಮಾಡುವನು. ಋಗ್ವೇದದಲ್ಲಿರುವ ಹತ್ತುಮಂದಿ ಪುತ್ರರನ್ನು ಬೇಡುವ ಮಂತ್ರ ಇಲ್ಲಿಲ್ಲದಿರುವುದು ಗಮನಾರ್ಹವಾಗಿವೆ. ವಧೂವರರಿಗೆ ದೀರ್ಘವಾದ ಆಯುಸ್ಸು ಮತ್ತು ಸಂತಾನ ಸಮೃದ್ಧಿಯುಂಟಾಗಲು ಹೇಳಬೇಕಾದ ಅನೇಕಾನೇಕ ಮಂತ್ರಗಳು ಇಲ್ಲಿವೆ.

ಹದಿನೆಂಟನೆಯ ಶ್ರಾದ್ಧ ಕಾಂಡದಲ್ಲಿ ಔರ್ಧ್ವ ದೈಹಿಕ ಕ್ರಿಯೆಗಳ ವಿಚಾರ ಪ್ರಸ್ತುತವಾಗಿದೆ. ಪರಲೋಕದ ಮತ್ತು ಯಮದೇವನ ಸ್ತುತಿಯಿಂದ ಈ ಸೂಕ್ತ ಆರಂಭವಾಗುತ್ತದೆ. ಪ್ರಾಚೀನರಾದ ಪಿತೃಗಳು, ಅಂಗಿರಸರು, ನವಗ್ವರು, ಅಥರ್ವಾಣರು, ಭೃಗುಗಳು ಮುಂತಾದವರನ್ನು ಸ್ಮರಿಸಲಾಗಿದೆ–ಋಗ್ವೇದದಲ್ಲಿನ ಔರ್ಧ್ವ ದೈಹಿಕ ಸೂಕ್ತಗಳಲ್ಲಿನ ಮಂತ್ರಗಳಲ್ಲದೆ ಇನ್ನೂ ಅನೇಕಾನೇಕ ಮಂತ್ರಗಳು ಇಲ್ಲಿ ಸೇರಿವೆ. ಸಾಮಾನ್ಯವಾಗಿ ಮೃತರಿಗೆ ದಹನಸಂಸ್ಕಾರವಾಗುತ್ತಿತ್ತು. ಆದರೆ 'ಅನಗ್ನಿದಗ್ಧರ' ಉಲ್ಲೇಖವೂ ಇಲ್ಲಿದೆ. ಶ್ರಾದ್ಧಕ್ರಿಯೆಗಳು ಪಿತೃಗಳ ನಮಸ್ಕಾರದೊಡನೆ ಮುಗಿಯುತ್ತವೆ ಮೆಕ್ಡನಲ್ ಮಹಾಶಯ ಅಥರ್ವವೇದವನ್ನು ಕುರಿತು ಹೇಳುವ ಮಾತುಗಳು ಹೀಗಿವೆ:

'The spirit which breathes in it is that of a pre-historic age. A few of its actual charms probably date with little modification from the Indo-European period. For, as Adalbertkuhn has shown some of its spells for curing bodily ailments agree in purpose and content as well as to some extent in form, with certain old German, Lettic and Russian charms. It contains more pre-historic matter than any of the other samhitas. For the history of civilization, it is on the whole more interesting and important than the Rigveda itself.' *(History of Sanskrit Literature*, p. 186).

## ಋಗ್ವೇದ ಮತ್ತು ಅಥರ್ವವೇದ

ಋಗ್ವೇದವು ಪ್ರಾಚೀನತಮವಾದ ಕಾವ್ಯಕ್ಕೆ ನಿದರ್ಶನ ಎಂದು ಹೇಳುವರು. ಈ ಮಾತು ಅಥರ್ವವೇದಕ್ಕೂ ಅಕ್ಷರಶಃ ಅನ್ವಯಿಸುತ್ತದೆ. ಋಗ್ವೇದ ಸೂಕ್ತಗಳು ಆಧಿದೈವಿಕ ಮತ್ತು ಅಧ್ಯಾತ್ಮಪರವಾದರೆ ಅಥರ್ವವೇದ ಸೂಕ್ತಗಳು ಆಧಿಭೌತಿಕ ವಿಷಯವಾಗಿವೆ. ಕಾವ್ಯದೃಷ್ಟಿಯಿಂದ ನೋಡಿದಾಗ ಇವೆರಡೂ ಉದಾತ್ತಭಾವನೆಗಳಿಂದ ಕೂಡಿವೆ; ಚಾರುತಮವಾದ ಗೀತ ಕಾವ್ಯಗಳ ಬೃಹತ್ ಸಂಗ್ರಹಗಳಾಗಿವೆ. ಎರಡೂ ಒಂದಕ್ಕೊಂದು ಪೂರಕವಾಗಿ

ಸಮಗ್ರವಾದ ಆರ್ಯ ಸಂಸ್ಕೃತಿಯ ಪ್ರಕಾಶ ಸ್ತಂಭಗಳಾಗಿವೆ. ಪ್ರಾಚೀನತಮವಾದ ಕಾವ್ಯಶಿಲೆಯ ಸುಂದರ ನಿದರ್ಶನಗಳಾಗಿವೆ.

ಪ್ರತಿಯೊಂದು ಸಮಾಜದಲ್ಲಿಯೂ ಎರಡು ವರ್ಗಗಳ ಜನರನ್ನು ನಾವು ನೋಡುತ್ತೇವೆ. ಉಚ್ಚತರವಾದ ಸಂಸ್ಕೃತಿಯಿಂದ ಶೋಭಿತವಾಗಿ ವಿಶಿಷ್ಟವಾದ ಶಿಕ್ಷಣ ಮತ್ತು ದೀಕ್ಷೆಯಿಂದ ರೂಪುಗೊಂಡು ವಿಶಿಷ್ಟವಾದ ರೀತಿಯಲ್ಲಿ ವಿಚಾರಧಾರೆಯನ್ನು ಹರಿಸುವ ವರ್ಗ ಒಂದು. ಸಾಧಾರಣ ಜನತೆ ಎಂಬ ಹೆಸರನ್ನು ಹೊಂದಿ ತನ್ನದೇ ಆದ ವಿಚಿತ್ರವಾದ ಆಚಾರ ವಿಚಾರಗಳನ್ನು ಹೊಂದಿರುವ ವರ್ಗ ಮತ್ತೊಂದು. ಇವೆರಡು ವರ್ಗಗಳ ರುಚಿಯೂ ಬೇರೆ ಬೇರೆ; ಅವುಗಳ ಕವಿತಾ ಪ್ರಕಾರಗಳೂ ಬೇರೆ ಬೇರೆಯಾದವು. ಆದರೂ ಇವೆರಡೂ ಒಂದಕ್ಕೊಂದು ಪೂರಕವಾಗಿಯೇ ಇರುವಂಥವು. ಅಥರ್ವ ಮತ್ತು ಋಗ್ವೇದ ಸಂಹಿತೆಗಳು ಒಂದೇ ಸಮಾಜದ ಎರಡು ಮುಖಗಳನ್ನು ತೋರತಕ್ಕವಾಗಿವೆ. ಅಥರ್ವವೇದ ಸಾಮಾನ್ಯ ಜನಜೀವನಕ್ಕನ್ವಯಿಸಿದರೆ ಋಗ್ವೇದ ವಿಶಿಷ್ಟವಾದ ಜನಜೀವನವನ್ನು ತೋರುತ್ತದೆ. ಒಂದು ವರ್ಗ ಭೂತ, ಪ್ರೇತ, ಪಿಶಾಚಿ, ಡಾಕಿನೀ, ಶಾಕಿನೀ ಮೊದಲಾದ ಅದೃಶ್ಯವಾದ ಶಕ್ತಿಗಳ ಪ್ರಭಾವಕ್ಕೊಳಗಾಗಿದೆ. ಅವರ ದೃಷ್ಟಿಯಲ್ಲಿ ಮಾನವನ ಜೀವನದ ಮೇಲೆ ಇವು ಪ್ರಭಾವ ಬೀರಿ ಒಳಿತನ್ನೂ ಹಾಗೆಯೇ ಕೆಡಕನ್ನೂ ಮಾಡುವ ಸಾಮರ್ಥ್ಯವನ್ನು ಹೊಂದಿವೆ. ಪ್ರಾಕೃತ ಜನಗಳಲ್ಲಿನ ಇಂಥ ವಿಶ್ವಾಸಗಳನ್ನೂ, ಆಚಾರಗಳನ್ನೂ ಪ್ರತಿಬಿಂಬಿಸುವ ಅಥರ್ವವೇದಕ್ಕೆ ವಿಶಿಷ್ಟವಾದ ಮಹತ್ವವಿದೆ. ಇದರ ದೃಷ್ಟಿಯಲ್ಲಿ ಅಭಿಚಾರ ಮಂಗಳಸಾಧಕವೂ ಹೌದು ; ಅಮಂಗಳ ಸಾಧಕವೂ ಹೌದು. ಪವಿತ್ರಾಭಿಚಾರದಲ್ಲಿ (ಅಥರ್ವ) ರೋಗ ಚಿಕಿತ್ಸೆಗೆ ಸಾಧಕವಾದ ಮಂತ್ರಗಳಿವೆ. ಅಮಾಂಗಳಿಕವಾದ ಅಭಿಚಾರದಲ್ಲಿ (ಅಂಗಿರಸ) ಶತ್ರುದಮನಕ್ಕೆ ಬೇಕಾದ ಅಭಿಶಾಪಗಳಿವೆ. ಈ ಬಗೆಯ ಅಭಿಚಾರಗಳಲ್ಲಿ ಬಳಸುವ ಮಂತ್ರಗಳ ಭಾಷೆಯೂ ಸರಳ ಸುಬೋಧವಾಗಿದೆ.

ಋಗ್ವೇದವಾದರೋ ಸುಸಂಸ್ಕೃತ ಜನರ ವಿಚಾರಧಾರೆಯನ್ನು ಪ್ರತಿಬಿಂಬಿಸುತ್ತದೆ. ಅದರ ಆಚಾರವಿಚಾರಗಳು ಉನ್ನತವೂ ಉದಾತ್ತವೂ ಆದವು. ಮಾನವನ ಜೀವನದ ಮೇಲೆ ಮಹತ್ತಮವಾದ ಪ್ರಭಾವವನ್ನು ಬೀರುವ ದೇವತೆಗಳನ್ನು ಸ್ತುತಿಸಿ ಅವರ ದಯೆಯನ್ನಿವರು ಬೇಡಿದ್ದಾರೆ. ಬಹುದ್ರವ್ಯಸಾಧ್ಯವಾದ ಅನೇಕಾನೇಕ ಯಾಗಗಳನ್ನು ನಡೆಸಿ ಆ ಮಹಾಮಹಿಮನನ್ನು ಸಂತೋಷಪಡಿಸುತ್ತಾರೆ. ದೇವತೆಗಳನ್ನು ಪ್ರಸನ್ನಗೊಳಿಸಿಕೊಳ್ಳಲು ಆವಶ್ಯಕವಾದ ಪ್ರಧಾನವಾದ ಉಪಕರಣವೇ ಯಜ್ಞ. ಯಜ್ಞಕ್ಕೆ ಸಂಬಂಧಪಟ್ಟಂತೆಯೇ ಇವೆ ಇಲ್ಲಿನ ಅನೇಕಾನೇಕ ಸೂಕ್ತಗಳು. ಕೆಲವು ಸೂಕ್ತಗಳು ನೇರವಾಗಿ ಯಜ್ಞಕ್ಕೆ ಸಂಬಂಧಪಡದೆ ಇರುವಂತೆ ಕಂಡುಬಂದರೂ ಹಿನ್ನೆಲೆಯಲ್ಲಿ ಯಾವುದಾದರೂ ಯಾಜ್ಞಿಕವಾದ ಉದ್ದೇಶವಿರುವುದನ್ನು ನಾವು ಕಾಣಬಹುದು. ದೇವತೆಗಳನ್ನುದ್ದೇಶಿಸಿ ಅರ್ಪಣೆಮಾಡುವ ಘೃತ, ತಿಲ, ಯವ, ಸೋಮರಸ ಮುಂತಾದುವು ಉದಾತ್ತವೂ ವಿಶುದ್ಧವೂ ಆದವು.

ಋಗ್ವೇದ ಮತ್ತು ಅಥರ್ವವೇದ—ಇವೆರಡೂ ಕೂಡಿ ಅಂದಿನ ಜನಜೀವನದ ಸಮಗ್ರ ಚಿತ್ರವನ್ನು ನಮ್ಮ ಕಣ್ಣ ಮುಂದೆ ಕೊರೆದಿಡುತ್ತವೆ. ಅಥರ್ವವೇದದಲ್ಲಿ ಸಾಂಸಾರಿಕ ಅಭ್ಯುದಯ ಮತ್ತು ಶತ್ರುಪರಾಜಯಕ್ಕೆ ಹೆಚ್ಚು ಗಮನಕೊಟ್ಟಿರುವುದರಿಂದ ಯಾಗವನ್ನು ಕಡೆಗಣಿಸಿದೆಯೆಂದು ಹೇಳುವುದಕ್ಕಾಗುವುದಿಲ್ಲ. ಯಜ್ಞದ ಭಾವನೆ ಇಲ್ಲಿ ಇನ್ನೂ ವಿಕಾಸಗೊಂಡಿದೆ. ಅಥರ್ವವೇದದ ಅನೇಕ ಮಂತ್ರಗಳು ಋಗ್ವೇದ ಮಂತ್ರಗಳಿಗಿಂತ ಪ್ರಾಚೀನವಾಗಿ ಅಂದಿನ ಜನಸಮುದಾಯದಲ್ಲಿ

ರೂಢಿಯಲ್ಲಿದ್ದ ಅನೇಕಾನೇಕ ಆಚಾರವಿಚಾರಗಳನ್ನು ತೋರುತ್ತವೆ. ಆದ್ದರಿಂದಲೇ ಋಗ್ವೇದ ಮತ್ತು ಅಥರ್ವವೇದಗಳು ಪರಸ್ಪರ ಪೂರಕಗಳಾಗಿವೆ ಎಂದು ಹೇಳಬಹುದು.

**ಅಥರ್ವವೇದದ ರಚನಾಕಾಲ**

ಅಥರ್ವವೇದದ ರಚನೆಯ ಕಾಲ ಋಗ್ವೇದ ಕಾಲಕ್ಕಿಂತ ಅವಾಂತರ ಕಾಲೀನವಾದುದೆಂದು ಪ್ರತೀತವಾಗುತ್ತದೆ. ಭಾಷೆ ಮತ್ತು ಛಂದಸ್ಸು ಮೊದಲಾದವುಗಳ ಪರಿಶೀಲನೆಯಿಂದ ಈ ಅಂಶ ಸ್ಥಿರವಾಗುತ್ತದೆ. ಋಗ್ವೇದಸಂಸ್ಕೃತಕ್ಕಿಂತ ಅಥರ್ವವೇದದ ಭಾಷೆ ಅರ್ವಾಚೀನ. ಋಗ್ವೇದದಲ್ಲಿ ಪ್ರತಿಬಿಂಬಿತವಾಗಿರುವ ಸಮಾಜಕ್ಕಿಂತ ಅಥರ್ವವೇದದ ಸಮಾಜ ಭೌಗೋಳಿಕ ಮತ್ತು ಸಾಂಸ್ಕೃತಿಕ ದೃಷ್ಟಿಗಳಿಂದ ಈಚಿನದೆಂದು ಗೊತ್ತಾಗುತ್ತದೆ. ಋಗ್ವೇದದಲ್ಲಿ ಪುರುಷ ಸೂಕ್ತದಲ್ಲಿ ಚತುರ್ವರ್ಣಗಳ ಉಲ್ಲೇಖ ಮಾತ್ರವಿದೆ. ಆದರೆ ಅಥರ್ವವೇದದಲ್ಲಿ ಬ್ರಾಹ್ಮಣನ ಅಧಿಕಾರ ರೂಢಮೂಲವಾಗಿತ್ತು. ಯಜ್ಞೀಯ ಕೌಶಲ ಹಾಗೂ ಆಭಿಚಾರಕ ನಿಪುಣತೆಯ ಬಲದಿಂದ ಬ್ರಾಹ್ಮಣನು ಸಮಾಜದಲ್ಲಿ ಪ್ರಥಮಸ್ಥಾನವನ್ನು ಪಡೆದುಕೊಂಡಿದ್ದನು.

ಅಥರ್ವವೇದದಲ್ಲಿ ನಿರ್ದಿಷ್ಟವಾಗಿರುವ ದೇವತೆಗಳಿಂದಲೂ ಇದು ಋಗ್ವೇದಕ್ಕಿಂತ ಈಚಿನದೆಂದು ಗೊತ್ತಾಗುತ್ತದೆ. ಋಗ್ವೇದದ ಇಂದ್ರ, ಅಗ್ನಿ ಮೊದಲಾದ ದೇವತೆಗಳೇ ಇಲ್ಲಿಯೂ ಬರುತ್ತಾರೆ. ಆದರೂ ಅವರ ಸ್ವರೂಪ ಮತ್ತು ಕಾರ್ಯಗಳ ವಿವರಣೆ ಇಲ್ಲಿ ಬೇರೆಯಾಗಿದೆ. ಅವರು ಇಲ್ಲಿ ಪ್ರಕೃತಿಯ ಪ್ರತೀಕಗಳಾಗಿ ತೋರುತ್ತಿಲ್ಲ. ಆದರೆ ವಿಶಿಷ್ಟವಾದ ದೇವತೆಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತಾರೆ. ಅವರ ಕೆಲಸವಾದರೋ ರಾಕ್ಷಸ ಸಂಹಾರ, ರೋಗವಿನಾಶನ, ಮತ್ತು ಶತ್ರುಧ್ವಂಸನವಾಗಿದೆ. ಅಧ್ಯಾತ್ಮವಾದ ಮತ್ತು ಸೃಷ್ಟಿವಾದಕ್ಕೆ ಸಂಬಂಧಿಸಿದಂತೆ ಇರುವ ಅನೇಕ ಸೂಕ್ತಗಳೂ ಇಲ್ಲಿ ಇವೆ. ಇಂದ್ರಜಾಲ ಪ್ರಕರಣಗಳಲ್ಲಿ ಭೂತೋಚ್ಚಾಟನೆಗಾಗಿ ಇವು ಉದ್ದಿಷ್ಟವಾದರೂ ಇವು ಉಪನಿಷತ್ತಿನ ದಾರ್ಶನಿಕ ಸಿದ್ಧಾಂತದ ಗುಂಪಿಗೆ ಸೇರುತ್ತವೆ. ಇದನ್ನೆಲ್ಲಾ ಗಮನಿಸಿದರೆ ಅಥರ್ವ ಸಂಹಿತೆಯ ನಿರ್ಮಾಣ ಋಕ್ಸಂಹಿತೆಯ ನಿರ್ಮಾಣಕಾಲದ ಅನಂತರ ಆಯಿತೆಂದು ಗೊತ್ತಾಗುವುದು.

ಅಥರ್ವವೇದ ಮೊದಲು ವೇದಗಳ ಕೋಟಿಗೆ ಸೇರಿರಲಿಲ್ಲವೆಂದೂ ಅನಂತರ ಸೇರಿತೆಂದೂ ವಿಮರ್ಶಕರ ಅಭಿಪ್ರಾಯ. ಇತರ ಸಂಹಿತೆಗಳ ನಂತರ ಇದು ಸಂಹಿತೆಯ ಪದವಿಯನ್ನು ಪಡೆಯಿತೆನ್ನುವರು. ಬ್ರಾಹ್ಮಣಗ್ರಂಥಗಳ ರಚನೆಗೆ ಪೂರ್ವ ಈ ವೇದ ಗೌರವಪಾತ್ರವಾಯಿತೆಂದು ವಿದ್ವಾಂಸರ ಅಭಿಪ್ರಾಯ. ಶ್ರೀವೈದ್ಯರು ಶತಪಥ ಬ್ರಾಹ್ಮಣದ ರಚನೆಯಾದ ಮೇಲೆ (ಕ್ರಿ. ಪೂ. 3000) ಛಾಂದೋಗ್ಯ ಉಪನಿಷತ್ತಿನ ಸಂಗ್ರಹಕ್ಕೆ ಪೂರ್ವವಾಗಿ (ಕ್ರಿ. ಪೂ. 2500) ಇದರ ಸಂಕಲನವಾಯಿತೆಂದು ಹೇಳುವರು (ನೋಡಿ ಸಿ. ವೈದ್ಯ, ಪುಟ 174). ಛಾಂದೋಗ್ಯ ಉಪನಿಷತ್ತಿನಲ್ಲಿ ನಾಲ್ಕು ವೇದಗಳ ಉಲ್ಲೇಖವೂ ಇದೆ. ಶತಪಥ ಬ್ರಾಹ್ಮಣ ಹತ್ತನೇ ಕಾಂಡದವರೆಗಿನ ಭಾಗದಲ್ಲಿ ಇತರ ಮೂರು ವೇದಗಳನ್ನು ಹೇಳಿದರೂ ಅಥರ್ವವೇದವನ್ನು ಹೇಳುವುದಿಲ್ಲ. ಬ್ಲೂಂ ಫೀಲ್ಡ್ ತನ್ನ ಅಥರ್ವವೇದದ ಅನುವಾದ ಗ್ರಂಥದಲ್ಲಿ ವೈದಿಕ ಸಾಹಿತ್ಯದಲ್ಲಿ ಅಥರ್ವವೇದದ ಉಲ್ಲೇಖಗಳೆಲ್ಲಿಲ್ಲಿ ಬರುವುದೆಂಬುದನ್ನು ತೋರಿ ಉಪಕರಿಸಿದ್ದಾರೆ. ಅಥರ್ವವೇದದ ಅನೇಕ ಮಂತ್ರಗಳು ಅಥರ್ವವೇದದ ಸಂಕಲನವಾಗುವುದಕ್ಕೂ ಬಹಳ ಕಾಲ ಹಿಂದಿನಿಂದಲೂ ಇದ್ದವೆಂಬುದು ಸುನಿಶ್ಚಿತ. ಆದರಿಂದ ಅಥರ್ವವೇದದಲ್ಲಿಯೇ ಅಥರ್ವಮಂತ್ರಗಳ ಉಲ್ಲೇಖ ಬಂದಿರುವುದು ಸೋಜಿಗವಲ್ಲ. (ಅ. ವೇ. 10-7, 20). ಋಗ್ಯಜುಸ್ಸಾಮಗಳೆಂಬ ವಿಭಾಗ ಬಹಳ ಪ್ರಾಚೀನವಾದುದು.

ಅಥರ್ವವೇದದಲ್ಲಿಯೂ ಇವು ಮೂರನ್ನೇ ಉಲ್ಲೇಖಿಸಿರುವ ಮಂತ್ರ ಭಾಗಗಳೂ ಇವೆ. ಉದಾಹರಣೆಗೆ 7-54-2 ; 11-6-14 ; 12-1-38 ; 15-3-68 ; ಇವುಗಳೆಲ್ಲಾ ನಾಲ್ಕನೆಯದಾದ ಅಥರ್ವಾಂಗಿರಸವು ಸೇರುವ ಮೊದಲು ಕೂಡಿಸಿದವಾಗಿರಬೇಕು. ಇವು ಮೂರಕ್ಕೆ ವೇದಶಬ್ದ ಅನ್ವಯಿಸುತ್ತಿತ್ತೆಂಬುದನ್ನು

> ಋಚಂಸಾಮ ಯದಪ್ರಾಕ್ಷಂ ಹವಿರೋಜೋ ಯಜುರ್ಬಲಮ್ |
> ಏವ ಮಾತಸ್ಮಾನ್ಮಾ ಹಿಂಸೀಃ ವೇದಃ ಪೃಷ್ಟಃ ಶಚೀಪತೇಃ || (ಅ. ವೇ. 7-54-2)

ಎಂಬುದು ಸೂಚಿಸುತ್ತದೆ. ವೇದ ಶಬ್ದದ ಅರ್ಥ ಬದಲಾಗುತ್ತಾ ಬಂದಿರುವುದು ಗಮನಾರ್ಹವಾಗಿದೆ–ಶತಪಥ ಬ್ರಾಹ್ಮಣದಲ್ಲಿ ಹದಿಮೂರನೆಯ ಕಾಂಡದಲ್ಲಿ ವೇದವೆಂಬುದು ಒಂದು ವಿದ್ಯಾಸ್ಥಾನವಾಗಿದೆ. ಇತರ ವಿದ್ಯಾ ಶಾಖೆಗಳಿಗೂ ಇದನ್ನನ್ವಯಿಸಿದೆ (ಶ. ಬ್ರಾ. 13-4-3). ಈ ಬ್ರಾಹ್ಮಣದಲ್ಲಿ ಸಾಮವೇದ ಶ್ರೇಷ್ಠತಮವಾದ ವಿದ್ಯಾಸ್ಥಾನವೆಂದು ಹೇಳಿದೆ. ಇಲ್ಲಿ ಬರುವ ಸರ್ಪವಿದ್ಯಾ, ದೇವಜನವಿದ್ಯಾ ಎಂಬುವು ಈಗ ಆ ಸ್ಥಾನವನ್ನು ಕಳೆದುಕೊಂಡಿವೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಇವುಗಳನ್ನು ವೇದವೆಂದು ಕರೆದಿಲ್ಲ.

ಶತಪಥಬ್ರಾಹ್ಮಣದ 10-5-2-20ರಲ್ಲಿ ಇದೇ ಅಭಿಪ್ರಾಯವಿದೆ. ಇದರಿಂದ ಗೊತ್ತಾಗುವುದೇನೆಂದರೆ:

1. ವೇದವೆಂಬ ಶಬ್ದಕ್ಕೆ ವಿಶಾಲವಾದ ಅರ್ಥವಿತ್ತು. ಕೇವಲ ನಾಲ್ಕು ವೇದಗಳೆಂಬ ಅರ್ಥವೇ ಇರಲಿಲ್ಲ.

2. ಸಾಮವೇದದ ದಶತಿ ಎಂಬ ಉಲ್ಲೇಖದಿಂದ ಸಾಮವೇದ ಬಹಳ ಹಿಂದೆಯೇ ಸಂಗೃಹೀತವಾಗಿದ್ದಿತೆಂದು ಗೊತ್ತಾಗುತ್ತದೆ.

3. ಅಥರ್ವವೇದ ಇನ್ನೂ ಸಂಕಲಿತವಾಗಿರಲಿಲ್ಲ. ಅಥರ್ವ ಮತ್ತು ಆಂಗಿರಸ್ ಎಂದು ಇವುಗಳನ್ನು ಪೃಥಕ್ಕರಿಸಿ ಹೇಳಿರುವುದು ಇದಕ್ಕೆ ಸಾಕ್ಷಿ.

ಅಥರ್ವವೇದದಲ್ಲಿ ಇಂಥ ಎರಡು ವಿಶಿಷ್ಟವಾದ ಭಾಗಗಳಿಲ್ಲ. ಅಥರ್ವಣ-ಅಥವಾ ಶುಕ್ಲೇಂದ್ರಜಾಲವು ಬೇರೆ ವಿದ್ಯಾಸ್ಥಾನವೆಂದು ಪ್ರಸಿದ್ಧವಾಗಿತ್ತು. 'ಆಂಗಿರಸೀ ಕೃತ್ಯಾ' ಎಂದು ಅಥರ್ವವೇದದಲ್ಲಿಯೂ ಉಲ್ಲೇಖವಿದೆ (8-5-9). ಈ ಎರಡು ಭಾಗಗಳೂ ಮಿಶ್ರಿತವಾಗಿ ಒಂದೇ ವೇದವಾಗಿ ಸಂಗ್ರಹಿಸಲ್ಪಟ್ಟವು. ಆದ್ದರಿಂದ ಈಗಿರುವ ಅಥರ್ವವೇದವು ಶತಪಥಬ್ರಾಹ್ಮಣದ ನಂತರ ಸಂಗೃಹೀತವಾದುದೆಂದು ಊಹಿಸುತ್ತಾರೆ. 'ಯಾತುವಿದ್ಯಾ' ಎಂದು ಕೃಷ್ಣೇಂದ್ರಜಾಲವನ್ನು ಕುರಿತ ಇಂಥ ಸೂಕ್ತಗಳ ಉಲ್ಲೇಖ (ಶ. ಬ್ರಾ. 10-55-20)ದಲ್ಲಿ ಬರುತ್ತದೆ. ಯಾತುವಿದ್ಯೆಯು ಬಹಳ ಪ್ರಾಚೀನವಾದುದರಿಂದಲೂ ಋಗ್ವೇದದಲ್ಲಿಯೇ (10-108-10) ಅದರ ಉಲ್ಲೇಖವಿರುವುದರಿಂದಲೂ ಅದು ಒಂದು ವಿದ್ಯಾಸ್ಥಾನವೆಂದು ಹಿಂದಿನಿಂದ ಎಣಿಸಿದ್ದುದರಿಂದಲೂ ಮೇಲಿನ ತೀರ್ಮಾನಕ್ಕೆ ಏನೂ ಹಾನಿಯೊದಗುವುದಿಲ್ಲ.

ಶತಪಥ 11-5-7ರಲ್ಲಿ ಸ್ವಾಧ್ಯಾಯದ ವಿಚಾರ ಪ್ರಸ್ತುತವಾಗಿದೆ. ಋಕ್, ಸಾಮ, ಯಜುಸ್, ವಾಕೋವಾಕ್ಯ, ಇತಿಹಾಸ, ಪುರಾಣ, ನಾರಾಶಂಸಿಗಳನ್ನಿಲ್ಲಿ ಹೇಳಿದೆಯೇ ವಿನಾ ಅಥರ್ವವೇದವನ್ನು ಹೇಳಿಲ್ಲ. ಆದರೆ ಇದರ ಹಿಂದಿನ ಪ್ರಕರಣದಲ್ಲಿ (11-5-6). 'ಸಾಮಾನಿ' ಆದ ಮೇಲೆ 'ಅಥರ್ವಾಂಗಿರಸ್'ನ ಉಲ್ಲೇಖ ಬಂದು ಅನಂತರ ವಾಕೋವಾಕ್ಯವನ್ನು ಹೇಳಿದೆ. 11-7-8ರಲ್ಲಿ ಪ್ರಜಾಪತಿಯು ಋಗ್ವೇದ ಯಜುರ್ವೇದ ಸಾಮವೇದಗಳನ್ನು ಸೃಜಿಸಿದನೆಂದು ಹೇಳಿದೆ. ಅಥರ್ವವೇದದ ಉಲ್ಲೇಖಮಾತ್ರ ಇಲ್ಲಿಲ್ಲ. ಇದೂ ಮೇಲಿನ ತೀರ್ಮಾನವನ್ನೇ ಪುಷ್ಟೀಕರಿಸುತ್ತದೆ

**ಅಥರ್ವ ಸಂಹಿತೆಯಲ್ಲಿ ತತ್ತ್ವ ವಿಚಾರ**

ಋಕ್ಸಂಹಿತೆಯಲ್ಲಿ ಹೇಗೋ ಹಾಗೆಯೇ ಅಥರ್ವ ಸಂಹಿತೆಯಲ್ಲಿಯೂ ಕ್ರಮವಾದ ದರ್ಶನ ಪದ್ಧತಿ ದೊರೆಯುವುದಿಲ್ಲ. ಆದರೆ ವೇದಾಂತ ದರ್ಶನದ ಅನೇಕ ಸಿದ್ಧಾಂತಗಳು ಇಲ್ಲಿ ನಿಖರವಾದ ರೂಪವನ್ನು ಮುಟ್ಟಿರುವುದನ್ನು ನಾವು ಕಾಣಬಹುದು. ವೈದಿಕ ಸಾಹಿತ್ಯದಲ್ಲಿ ಋಕ್ಸಂಹಿತೆಯ ನಂತರ ಸರ್ವತೋಮುಖವಾದ ಪ್ರಾಧಾನ್ಯ ಅಥರ್ವ ಸಂಹಿತೆಗಿದೆ. ಇದು ಅಭಿಚಾರಕ ಸೂಕ್ತಗಳನ್ನು ಹೆಚ್ಚಾಗಿ ಹೊಂದಿದ್ದರೂ ಆಯುರ್ವೇದ, ಜ್ಯೋತಿಷ ಮೊದಲಾದ ಶಾಸ್ತ್ರಗಳಿಗೆ ಪರಮಾಧಾರವಾಗಿದೆ. ಅನೇಕ ಸೂಕ್ತಗಳು ದಾರ್ಶನಿಕ ವಿಚಾರಧಾರೆಯನ್ನು ಅನುಪಮವಾಗಿ ವಿವೇಚಿಸುತ್ತವೆ.

ಋಕ್ಸಂಹಿತೆಯಲ್ಲಿ ಜಗತ್ಕಾರಣ ವಸ್ತುವನ್ನು ಇಂದ್ರ, ಮಿತ್ರ, ಅಗ್ನಿ, ವರುಣ ಮೊದಲಾದ ಹೆಸರುಗಳಿಂದಲೂ ವಿಶ್ವಕರ್ಮ, ಹಿರಣ್ಯಗರ್ಭ, ಪುರುಷ, ಪ್ರಜಾಪತಿ ಮೊದಲಾದ ಹೆಸರುಗಳಿಂದಲೂ ಸ್ತುತಿಸಿರುವುದನ್ನು ಕಂಡೆವು. ಮುಂದೆ ಪರತತ್ತ್ವವನ್ನು ಇತರ ಹೆಸರುಗಳಿಂದ ಕರೆಯದೆ ಪ್ರಜಾಪತಿ ಎಂದು ಕರೆಯುವುದು ಗಮನಾರ್ಹವಾದ ಅಂಶ. ಪ್ರಜಾಪತಿಯೇ ಲೋಕಕ್ಕೆ ಆದಿಕಾರಣನೆಂದೂ ಸರ್ವಲೋಕಕ್ಕೂ ತಂದೆಯೆಂದೂ ಸೃಷ್ಟಿಕರ್ತನೆಂದೂ ಕೊಂಡಾಡಿ ಬ್ರಾಹ್ಮಣ ಗ್ರಂಥಗಳು ಈತನಿಗೇ ಪ್ರಾಧಾನ್ಯ ಕೊಟ್ಟಿವೆ.[120]

ಆದರೆ ಈ ಅಭಿಧಾನವೂ ತಪ್ಪಿಹೋಗಿ ವೇದಾಂತ ದರ್ಶನದಲ್ಲಿ ಆ ಪರಾತ್ಪರ ವಸ್ತುವನ್ನು 'ಬ್ರಹ್ಮ'ವೆಂದು ಕರೆದಿವೆ. ಬ್ರಹ್ಮ ಮತ್ತು 'ಆತ್ಮಾ' ಎಂಬ ಪದಗಳು ಇನ್ನು ಮುಂದೆ ಅತ್ಯಧಿಕವಾಗಿ ಪ್ರಭಾವ ಬೀರಿರುವುದನ್ನು ನಾವು ಕಾಣುತ್ತೇವೆ. ಋಗ್ವೇದದಲ್ಲಿ ಸ್ತುತಿ ಎಂಬ ಅರ್ಥವನ್ನು ಕೊಡುತ್ತಿದ್ದ ಬ್ರಹ್ಮಶಬ್ದ ಸರ್ವಾತಿಶಾಯಿಯಾದ ಜಗತ್ಕಾರಣವನ್ನು ಹೇಳಲು ಪ್ರಯುಕ್ತವಾಗಿದೆ. ಆತ್ಮಶಬ್ದ ಜೀವಾತ್ಮನನ್ನು ಹೇಳುವುದು. ಹಾಗೆಯೇ ಇದನ್ನು ಉಪನಿಷತ್ತುಗಳಲ್ಲಿ ಪರಮಾತ್ಮ ಪರವಾಗಿಯೂ ಕೆಲವೆಡೆ ಉಪಯೋಗಿಸಿದೆ. ಉಪನಿಷತ್ತುಗಳಲ್ಲಿ ಬರುವ 'ಬ್ರಹ್ಮ' ಮತ್ತು 'ಆತ್ಮಾ' ಎಂಬ ಮಹತ್ತ್ವಪೂರಿತವಾದ ಇವೆರಡು ಶಬ್ದಗಳೂ[121] ಆ ಅರ್ಥಪುಷ್ಟಿಯನ್ನು ಅಥರ್ವವೇದದಿಂದ ಪಡೆದಿವೆ. ಅಥರ್ವ ಸಂಹಿತೆಯಲ್ಲಿ ಈ ಶಬ್ದಗಳ ಪ್ರಯೋಗ ನಮಗೆ ಮೊದಲಾಗಿ ದೊರಕುತ್ತದೆ.

ಬ್ರಹ್ಮ ಶಬ್ದವನ್ನು ಪರಮಾತ್ಮಪರವಾಗಿ ಅಥರ್ವ ವೇದದಲ್ಲಿ ಮೊದಲು ಪ್ರಯೋಗಿಸಿದೆ. ಕೆಳಗಿನ ಮಂತ್ರಗಳನ್ನು ನೋಡಿ :

120. ತೈ. ಬ್ರಾ. 2-3-10-1 ; 2-2-1-1 ; 2-2-4 ; ಐ. ಬ್ರಾ. 34-19

This name in striking contrast to the names of the old Vedic Gods, is evidently not of popular origin but the creation of a philosophical thinker. Deussen. Ind. Ant. 29, p. 369.

121. 'Perhaps the best name which philosophy has found in any language to designate the principle of the world is the word Atman. Thus Atman means that which remains, if we take away from our person all that is 'non-self', foreign, all that comes and passes away. It means the changeless, inseparable essence of our own self and on the other hand of the self of the whole world ; 'Brahman is the philosopical principle as realized in the Universe and Atman is the same as realized in the soul. Deussen-Ind. Ant. 29, p. 370. ಭಗವದ್ಗೀತೆ 2-20 ರಿಂದ 25 ನೋಡಿ. 'ಅಚ್ಛೇದ್ಯೋಽಯಮ್ ...' 'ಅಪ್ನೋತೀತಿ ಆತ್ಮಾ' 'ಬೃಹತ್ವಾತ್ ಬೃಂಹಣತ್ವಾಚ್ಚತದ್ಬ್ರಹ್ಮೇತ್ಯಭಿಧೀಯತೇ.'

'ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾತ್
ವಿಸೀಮತಃ ಸುರುಚೋ ವೇನ ಆವಃ |'
ಸ ಬುಧ್ನ್ಯಾ ಉಪಮಾ ಅಸ್ಯ ವಿಷ್ಠಾಃ
ಸತಶ್ಚಯೋನಿಮಸತಶ್ಚ ವಿವಃ ||'[122]

'ಸೃಷ್ಟಿಗೂ ಮೊದಲು ಸಚ್ಚಿತ್ಸುಖಾತ್ಮಕವೂ ಅಪರಿಚ್ಛಿನ್ನವೂ ಸರ್ವಜಗತ್ಕಾರಣವೂ ಆದ ಪರಬ್ರಹ್ಮವಸ್ತು ಒಂದೇ ಇದ್ದಿತು. ಅದು ತನ್ನ ತೇಜಸ್ಸಿನಿಂದ ಸಕಲ ಲೋಕವನ್ನೂ ಬೆಳಗಿ ವ್ಯಾಪಿಸಿತು. ಸುರುಚನಾದ ಅವನು ಎಲ್ಲ ಲೋಕವನ್ನೂ ಆವರಿಸಿದನು.'

ಈ ಬ್ರಹ್ಮವಸ್ತು ಎಲ್ಲರಿಗೂ ಗೋಚರಿಸದು. ಆದರೆ ಅದಿಲ್ಲವೆನ್ನಲು ಸಾಧ್ಯವೇ ? ಎಲ್ಲ ವಸ್ತುಗಳೂ ಆ ಪರವಸ್ತುವಿನ ಕಾರಣವೇ ಬದುಕಿವೆ. ಎಲ್ಲ ವಸ್ತುಗಳನ್ನೂ ಹೀಗೆ ಆ ಬ್ರಹ್ಮವಸ್ತು ಹಿರಿಮೆಯಲ್ಲಿ ಮೀರಿಸಿದೆ. ಈ ಭಾವ ಕೆಳಗಿನ ಮಂತ್ರದಲ್ಲಿದೆ:

'ಇದಂ ಜನಾಸೋ ವಿದಥ ಮಹದ್ಬ್ರಹ್ಮ ವದಿಷ್ಯತಿ |
ನ ತತ್ ಪೃಥಿವ್ಯಾಂ ನೋ ದಿವಿ ಯೇನ ಪ್ರಾಣಂ ವೀರುಧಃ ||'[123]

'ಉದಕಾತ್ಮಕವಾದ ಬ್ರಹ್ಮವಸ್ತುವಿನ ನಿಯತವಾದ ವಾಸಸ್ಥಾನ ಭೂಮಿಯಲ್ಲಿಯೂ ಇಲ್ಲ. ದ್ಯುಲೋಕದಲ್ಲಿಯೂ ಇಲ್ಲ. ಅದಿಲ್ಲವೆಂದು ಮಾತ್ರ ಹೇಳಲಾಗುವುದಿಲ್ಲ. ಏಕೆಂದರೆ ಅದರಿಂದಲೇ ಸಕಲ ವಸ್ತುಗಳೂ ಬಳ್ಳಿಗಳೂ ಗಿಡಗಳೂ ಜೀವಿಸಿವೆ.'

ಈ ಬ್ರಹ್ಮವಸ್ತುವಿನ ಶಕ್ತಿ ಅತ್ಯದ್ಭುತ. ಸಂಕಲ್ಪ ಮಾತ್ರದಿಂದಲೇ ಇದು ಕಾರ್ಯೋನ್ಮುಖವಾಗಿ ಸೃಷ್ಟಿಯೇ ಮೊದಲಾದುವನ್ನು ಮಾಡಿತು. ಜಗತ್ತನ್ನು ಸೃಜಿಸುವರೆಂದು ಹೇಳಲಾದ ಇಂದ್ರ, ಸೋಮ, ಹಿರಣ್ಯಗರ್ಭ ಮೊದಲಾದವರನ್ನೂ ಈ ಬ್ರಹ್ಮವಸ್ತು ಸೃಜಿಸಬಲ್ಲದು.[124]

ಚತುರ್ಮುಖ ಬ್ರಹ್ಮನನ್ನು ಪರಮಾತ್ಮ ಮೊದಲು ಸೃಜಿಸಿದನೆಂದು ಉಪನಿಷತ್ತು ಹೇಳುತ್ತದೆ.[125] ಈ ಅಂಶ ಅಥರ್ವವೇದದಲ್ಲಿ ಹೀಗೆ ಹೇಳಿದೆ :

'ಪ್ರಯೋ ಜಜ್ಞೆ ವಿದ್ವಾನಸ್ಯ ಬಂಧು
ರ್ವಿಶ್ವಾ ದೇವಾನಾಂ ಜನಿಮಾ ವಿವಕ್ತಿ |
ಬ್ರಹ್ಮ ಬ್ರಹ್ಮಣ ಉಜ್ಜಭಾರ ಮಧ್ಯಾ-
ನ್ನೀಚೈರುಚ್ಚೈಃ ಸ್ವಧಾ ಅಭಿಪ್ರತಸ್ಥೌ ||'[126]

'ಪ್ರಪಂಚಕ್ಕೆ ಕಾರಣಭೂತನೂ ಸರ್ವವನ್ನೂ ತಿಳಿದವನೂ ಬಂಧುವಿನಂತೆ ಹಿತಕಾರಿಯೂ ಆದ ಆ ಪ್ರಥಮಜನು ಇಂದ್ರಾದಿ ದೇವತೆಗಳೆಲ್ಲರ ಜನ್ಮವನ್ನು ಹೇಳುವನು. ಅವನು ಪರಮಕಾರಣನಾದ ಪರಬ್ರಹ್ಮನಿಂದ ಮೂರು ವೇದಗಳನ್ನು ಮಧ್ಯ, ಮೇಲು ಮತ್ತು ಕೆಳಭಾಗಗಳಿಂದ ಪಡೆದುಕೊಂಡನು.'

ಪ್ರಜಾಪತಿಯೇ ವಿರಾಟ್ಸಂಜ್ಞಕನು.[127] ಮೊದಲು ಇದ್ದವನು ಅವನೊಬ್ಬನೇ. ಕೋರಿದ ಬೇಡಿಕೆಗಳನ್ನು ನೀಡುವ ಧೇನು ಅವನಾಗಿದ್ದಾನೆ. ಈ ಭಾವ ಕೆಳಗಿನ ಮಂತ್ರದಲ್ಲಿದೆ :-

122. ಅಥರ್ವ (4-1-1)
123. ಅಥರ್ವ (1-32-1)
124. ಅಥರ್ವ (5-1-1), (5-1-3)
125. ಶ್ವೇ. ಉ. 6-18.
126. ಅಥರ್ವ (4-1-3)
127. ಅಥರ್ವ (9-10-24)

'ಏರಾಡ್ವಾ ಇದಮಗ್ರ ಆಸೀತ್ ತಸ್ಮಾಜ್ಜಾತಾಯಾಃ
ಸರ್ವಮಬಿಭೇದಿಯಮೇವೇದಂ ಭವಿಷ್ಯತೀತಿ |[128]

ಸರ್ವಜಗತ್ತಿಗೂ ಕಾರಣನಾದವನನ್ನು ಇಲ್ಲಿ ಕಾಲರೂಪನೆಂದು ಸ್ತುತಿಸಿದೆ.[129] ಈ ಭಾಗದಿಂದ ಕೆಲವು ಮಂತ್ರಗಳನ್ನಿಲ್ಲಿ ಉದಾಹರಿಸಿದೆ :

'ಕಾಲೋ ಅಶ್ವೋವಹತಿ ಸಪ್ತರಶ್ಮಿಃ
ಸಹಸ್ರಾಕ್ಷೋ ಅಜರೋ ಭೂರಿರೇತಾಃ |
ತತೋ ರೋಹಂತಿ ಕವಯೋ ವಿಪಶ್ಚಿತ-
ಸ್ತಸ್ಯ ಚಕ್ರಾ ಭುವನಾನಿ ವಿಶ್ವಾ ||'
'ಸ ಏವ ಸಂ ಭುವನಾನ್ಯಾಭರತ್
ಪಿತಾ ಸನ್ನಭವನ್ ಪುತ್ರ ಏಷಾಂ
ಸ ಏವ ಸಂ ಭುವನಾನಿ ಪರ್ಯೈತ್ |
ತಸ್ಮಾದ್ವೈ ನಾನ್ಯತ್ಪರಮಸ್ತಿ ತೇಜಃ ||'
'ಕಾಲೋಽಮೂಂ ದಿವಮಜನಯತ್
ಕಾಲ ಇಮಾಃ ಪೃಥಿವೀರುತ |
ಕಾಲೇಹ ಭೂತಂ ಭವ್ಯಂ
ಚೇಷಿತಂ ಹ ವಿತಿಷ್ಠತೇ ||'
'ಕಾಲೇ ಮನಃ ಕಾಲೇ ಪ್ರಾಣಃ
ಕಾಲೇ ನಾಮ ಸಮಾಹಿತಂ |
ಕಾಲೇನ ಸರ್ವಾನಂದಂ-
ತ್ಯಾಗತೇನ ಪ್ರಜಾ ಇಮಾಃ ||'
'ಕಾಲ ಪ್ರಜಾ ಅಸೃಜತ
ಕಾಲೋ ಅಗ್ರೇ ಪ್ರಜಾಪತಿಂ |
ಸ್ವಯಂಭೂಃ ಕಶ್ಯಪಃ ಕಾಲಾ-
ತ್ತಪಃ ಕಾಲಾದಜಾಯತ ||'[130]

'ಸಹಸ್ರಲೋಚನನೂ ಜರಾರಹಿತನೂ ನಿತ್ಯಯುವಕನೂ ಸಪ್ತರಶ್ಮಿಗಳಿಂದ ಶೋಭಿಸುವವನೂ ಆದ ಕಾಲನೆಂಬ ಅಶ್ವರೂಪಿಯಾದ ದೇವನು ತನ್ನನ್ನು ಸೇವಿಸುವವರನ್ನು ಬೇಡಿದ ಕಡೆಗೆ ಒಯ್ಯುವನು. ಸುಜ್ಞಾನಿಗಳಾದ ಕವಿಗಳು ಆ ಅಶ್ವಸ್ವರೂಪಿಯನ್ನು ಏರುವರು.[131] ಅನವಚ್ಛಿನ್ನವಾದ ಆ ಕಾಲ ರೂಪಿಯು ಸಕಲ ಭುವನಗಳನ್ನೂ ಆಶ್ರಯಿಸುವನು.'

'ಈ ಕಾಲಪುರುಷನೇ ಸಕಲ ಭೂತಜಾತಗಳನ್ನೂ ಸೃಜಿಸುತ್ತಾನೆ. ಅನಂತರ ಅವುಗಳನ್ನು ಪೋಷಿಸಿ ವ್ಯಾಪಿಸುತ್ತಾನೆ. ಅವನೇ ತಂದೆಯೂ ಆಗಿ ಇವರ ಪುತ್ರನೂ ಆಗುತ್ತಾನೆ.[132] ಸರ್ವೋತ್ಪಾದಕನೂ ಪುತ್ರ ರೂಪವನ್ನು ಪಡೆಯುವನೂ ಸರ್ವಗತನೂ ಆದ ಅವನಿಗಿಂತ ಹೆಚ್ಚಿನ ತೇಜಸ್ಸಿಲ್ಲ.'

---

128. ಅಥರ್ವ (8-10-1)

129. ಅಥರ್ವ (19-53 ; 54); ಕಲನಾತ್‌ಕಾಲಃ

130. ಅಥರ್ವ (19-53-1, 4, 5, 7, 10)

131. ಆದಿತ್ಯರೂಪಿಯೂ ಕಾಲಾತ್ಮಕನೂ ಆದ ಸೂರ್ಯನನ್ನುಪಾಸಿಸುವ ಜ್ಞಾನಿಗಳು ಆ ಸೂರ್ಯಮಂಡಲವನ್ನು ಭೇದಿಸಿಕೊಂಡು ಅವನನ್ನೇ ಪ್ರವೇಶಿಸುವರು.

132. ಕೌಷೀತಕಿ. ಉ. (2-11).

'ಬಹಳ ದೂರದ ದ್ಯುಲೋಕವನ್ನೂ ವಿಸ್ತಾರವಾದ ಈ ಭೂಮಿಯನ್ನೂ ಅವನೇ ಸೃಜಿಸುವನು. ವರ್ತಮಾನ ಭೂತ ಭವಿಷ್ಯತ್ತುಗಳೂ ಅವನನ್ನೇ ಆಶ್ರಯಿಸಿವೆ.'

'ಮನಸ್ಸು, ಪ್ರಾಣ, ಹೆಸರು ಮೊದಲಾದುವೆಲ್ಲಾ ಕಾಲನಲ್ಲಿಯೇ. ಈ ಪ್ರಜೆಗಳೆಲ್ಲ ಆ ಕಾಲಸ್ವರೂಪಿಯಿಂದಲೇ ಆನಂದವನ್ನನುಭವಿಸುವರು.'

'ಕಾಲಪುರುಷ ಪ್ರಜೆಗಳನ್ನು ಸೃಜಿಸಿದ. ಮೊದಲು ಪ್ರಜಾಪತಿಯನ್ನು ಅವನೇ ಸೃಷ್ಟಿಮಾಡಿದ. ಸ್ವಯಂಭೂಃ ಕಶ್ಯಪ, ತಪಸ್ಸು ಎಲ್ಲವೂ ಕಾಲನಿಂದಲೇ ಆದವು.'

ಜಗತ್ಕಾರಣವಾದ ಪರವಸ್ತುವನ್ನು ಕಾಲನೆಂದು ಮೇಲೆ ಕರೆದಿರುವಂತೆ ಸ್ಕಂಭರೂಪಿಯಾದ ದೇವನು ಜಗತ್ತನ್ನು ಸೃಜಿಸಿದನೆಂದೂ ಹೇಳಿದೆ.

'ಯತ್ರ ಪ್ರೇಪ್ಸಂತೀರಭಿಯಂತ್ಯಾವೃತಃ
ಸ್ಕಂಭಂ ತಂಬ್ರೂಹಿ ಕತಮಃ ಸ್ವಿದೇವಸಃ |' ಅಥರ್ವ (10-7-4)

ಎಂಬ ಮಂತ್ರ ಇದಕ್ಕೆ ಉದಾಹರಣೆ. ಬ್ರಹ್ಮವಸ್ತು ಎಲ್ಲವನ್ನೂ ಸೃಜಿಸಿ ಅನಂತರ ಅವುಗಳೊಳಗೆ ಅಂತಃಪ್ರವೇಶಿಸಿತೆಂದು ಉಪನಿಷತ್ತು ಹೇಳುತ್ತವೆ.

ಇದರ ಮೂಲವನ್ನು ಕೆಳಗಿನ ಮಂತ್ರದಲ್ಲಿಯೂ ಕಾಣಬಹುದು :

'ಯತ್ರರಮಮವಸಂ ಯಚ್ಚ ಮಧ್ಯಮಂ
ಪ್ರಜಾಪತಿಃ ಸಸೃಜೇ ವಿಶ್ವರೂಪಂ |
ಕಿಯತಾ ಸ್ಕಂಭಃ ಪ್ರವಿವೇಶ ತತ್ರ
ಯತ್ರ ಪ್ರಾವಿಶತ್ ಕಿಯತ್ತದ್ಬಭೂವ ||'[133]

ಸಕಲ ಜಗತ್ತಿಗೂ ಸ್ಕಂಭರೂಪಿಯಾದ ದೇವನು ಏಕೈಕ ಕಾರಣನೆಂಬುವುದನ್ನು 'ಸ್ಕಂಭೇ ಸರ್ವಂ ಪ್ರತಿಷ್ಠಿತಂ'[134] ಎಂದು ಹೇಳಿದೆ. ಇವನಿಗೆ ಸಮರೂ ಅಧಿಕರೂ ಇಲ್ಲವೆಂದು ಹೇಳುವುದು 'ಯಸ್ಮಾನ್ನಾನ್ಯತ್ಪರಮಸ್ತಿ ಭೂತಂ'[135] ಎಂಬ ನುಡಿ. ಅವನು ಸರ್ವಾಧಿಕನೂ ಜ್ಯೇಷ್ಠ ಶಬ್ದವಾಚ್ಯನೂ ಆದವನೆಂದು 'ತಸ್ಮೈ ಜ್ಯೇಷ್ಠಾಯ ಬ್ರಹ್ಮಣೇ ನಮಃ'[136] ಎಂಬುದು ತಿಳಿಸುತ್ತದೆ. ಇವನು ಅವಾಙ್ಮನಸಗೋಚರನಾದ ಕಾರಣ ಯಥಾವತ್ತಾಗಿ ಯಾರು ತಾನೇ ಇವನನ್ನು ತಿಳಿಯಬಲ್ಲರೆಂದು ಕೆಳಗಿನ ಮಂತ್ರದಲ್ಲಿ ಹೇಳಿದೆ :

'ಯಸ್ಯ ತ್ರಯಸ್ತ್ರಿಂಶದ್ದೇವಾಃ ನಿಧಿಂ ರಕ್ಷಂತಿ ಸರ್ವದಾ |
ನಿಧಿಂ ತಮದ್ಯ ಕೋ ವೇದ ಯಂ ದೇವಾ ಅಭಿರಕ್ಷಥ ||'[137]

ಈ ದೇವನು ಎಲ್ಲ ಪ್ರಾಣಿಗಳಿಗೂ ಆತ್ಮನಾಗಿದ್ದಾನೆಂಬುದನ್ನು 'ತಸ್ಮಿನ್ಯದ್ಯಕ್ಷಮಾತ್ಮನ್ವತ್ ತದ್ವೈ ಬ್ರಹ್ಮವಿದೋ ವಿದುಃ'[138] ಎಂಬಲ್ಲಿ ಹೇಳಿದೆ.

ಈ ಅಂಶ ಕೆಳಗಿನ ಮಂತ್ರದಲ್ಲಿಯೂ ಇದೆ :

'ಅಕಾಮೋ ಧೀರೋ ಅಮೃತಃ ಸ್ವಯಂ ಭೂ
ರಸೇನ ತೃಪ್ತೋ ನ ಕುತಶ್ಚನೋನಃ |
ತಮೇವ ವಿದ್ವಾನ್ ನ ಬಿಭಾಯ ಮೃತ್ಯೋ-

133. ಅಥರ್ವ (10-7-8)
134. ಅಥರ್ವ (10-7-30)
135. ಅಥರ್ವ (10-7-31) ; 'ಸ್ಕಂಭ ಇದಂ ವಿಶ್ವಂ ಭುವನಮಾವಿವೇಶ' ಅಥರ್ವ (10-7-35)
136. ಅಥರ್ವ (10-8-1)
137. ಅಥರ್ವ (10-7-23) 138. ಅಥರ್ವ (10-8-43)

ರಾತ್ಮಾನಂ ಧೀರಮಜರಂ ಯುವಾನಂ ||'[139]

ಸರ್ವಭೂತಜಾತಗಳಿಗೂ ಆತ್ಮನಾದ ಈ ಯಕ್ಷಸ್ವರೂಪಿಯಾದ ದೇವನು ಪ್ರಪಂಚವನ್ನೇಕೆ ಸೃಜಿಸಿದನೆಂಬ ಪ್ರಶ್ನೆಗೆ ಉತ್ತರ ಕೆಳಗಿನ ಮಂತ್ರದಲ್ಲಿದೆ. ಸರ್ವಪ್ರಾಣಿಗಳ ಅಂತಃಕರಣವೂ ವಾಸನಾವಿಶೇಷದಿಂದ ಕೂಡಿದ್ದಿತು. ಪ್ರತಿ ನಿಯತವಾದ ಪುಣ್ಯ ಪಾಪ ರೂಪವಾದ ಕರ್ಮವಾಸನೆಯ ಕಾರಣ ಈ ಬಗೆಯ ಸೃಜಿಸುವ ಇಚ್ಛೆ ಅವನಿಗುಂಟಾಯಿತು. ಸರ್ವಸಾಕ್ಷಿಯೂ ಕರ್ಮಾಧ್ಯಕ್ಷನೂ ಫಲಪ್ರದನೂ ಆದ ಇವನು ಆ ಕಾರಣ ಸೃಷ್ಟಿ ಮಾಡಿದನೆಂದು ಮುಂದೆ ಉದಾಹರಿಸಿರುವ ಮಂತ್ರದ ಭಾವ.

'ಕಾಮಸ್ತದಗ್ರೇ ಸಮವರ್ತತ
ಮನಸೋ ರೇತಃ ಪ್ರಥಮಂ ಯದಾಸೀತ್ |
ಸ ಕಾಮಕಾಮೇನ ಬೃಹತಾ ಸಯೋನೀ
ರಾಯಸ್ಪೋಷಂ ಯಜಮಾನಾಯ ಧೇಹಿ ||'[140]

ಮಾನವರಲ್ಲಿ ಅಂತಃಪ್ರವೇಶಿಸಿರುವ ಈ ಬ್ರಹ್ಮವಸ್ತುವನ್ನು ತಿಳಿದವನು ಪರಬ್ರಹ್ಮವನ್ನೂ ತಿಳಿಯುವನು. ಆದರಿಂದ ಎಲ್ಲರ ಗುರಿ ಇದೇ ಆಗಬೇಕು. ಈ ಭಾವ ಕೆಳಗಿನ ಮಂತ್ರದಲ್ಲಿದೆ:

'ಯೇಪುರುಷೇ ಬ್ರಹ್ಮವಿದುಸ್ತೇವಿದುಃ ಪರಮೇಷ್ಠಿನಮ್ |
ಯೋ ವೇದ ಪರಮೇಷ್ಠಿನಂ ಯತ್ರವೇದ ಪ್ರಜಾಪತಿಂ
ಜ್ಯೇಷ್ಠಂ ಯೋ ಬ್ರಾಹ್ಮಣಂ ವಿದುಸ್ತೇ ಸ್ಕಂಭಮನು ಸಂವಿದುಃ ||'[141]

ಈ ಅಂಶ ಉಪನಿಷತ್ತುಗಳಲ್ಲಿ ಬರುವ ಅಂತರ್ಯಾಮಿತ್ವಕ್ಕೆ ಮೂಲವಾಗಿದೆ.[142]

ಪರಬ್ರಹ್ಮ ವಸ್ತುವನ್ನು ಸಾಕ್ಷಾತ್ಕರಿಸಿಕೊಂಡವರು ಭಯವಿದೂರರಾಗುವರು. ಎಲ್ಲರಿಗೂ ಆತ್ಮನಾದ ಆ ಪರಮನನ್ನರಿತವರು ಬ್ರಹ್ಮಜ್ಞಾನಿಗಳಾಗುವರು. ಅಂಥವರು ಭಯವಿಮುಕ್ತರಾಗುವರು ಎಂದು ಕೆಳಗಿನ ಮಂತ್ರದಲ್ಲಿ ಹೇಳಿದೆ.

'ಯೋ ವಿದ್ಯಾತ್ ಸೂತ್ರಂ ವಿತತಂ ಯಸ್ಮಿನ್ನೋತಾಃ ಪ್ರಜಾ ಇಮಾಃ |
ಸೂತ್ರಂ ಸೂತ್ರಸ್ಯ ಯೋ ವಿದ್ಯಾತ್ ಸ ವಿದ್ಯಾತ್ ಬ್ರಾಹ್ಮಣಂ ಮಹತ್ ||'[143]

ಮೇಲೆ ಹೇಳಿರುವ ಅಂಶಗಳೆಲ್ಲಾ ಉಪನಿಷತ್ತುಗಳಲ್ಲಿ ಪೂರ್ಣವಾಗಿ ವಿಕಾಸಗೊಂಡಿರುವುದನ್ನು ನಾವು ನೋಡುತ್ತೇವೆ.

ಮರಣಾನಂತರ ಜೀವರುಗಳ ವಿಚಾರ ಇಲ್ಲಿ ಅನೇಕ ಕಡೆ ಪ್ರಸ್ತುತವಾಗಿದೆ.[144] ಶಾಶ್ವತ ಧರ್ಮವಾದ ಋತವನ್ನು ಪಾಲಿಸುವವರು ಸ್ವರ್ಗದಲ್ಲಿ ದೇವತೆಗಳಿಂದ ಸತ್ಕೃತರಾಗಿ ಸುಖವಾಗಿರುವರೆಂದು ಇಲ್ಲಿ ಹೇಳಿದೆ. ಇದನ್ನೇ–

'ಋತಸ್ಯ ಪಂಥಾಮನುಪಶ್ಯಸಾಧ್ವಂಗಿರಸಃ ಸುಕೃತೋ ಯೇನ ಯಂತಿ |
ತೇಭಿರ್ಯಾಹಿ ಪಥಿಭಿಃ ಸ್ವರ್ಗಂ ಯತ್ರಾದಿತ್ಯಾ ಮಧು ಭಕ್ಷಯಂತಿ
ತೃತೀಯೇ ನಾಕೇ ಅಧಿ ವಿಶ್ರಯಸ್ವ ||'[145] ಎಂಬಲ್ಲಿ ಕಾಣಬಹುದು.

139. ಅಥರ್ವ (10-8-44) 140. ಅಥರ್ವ (11-52-1)
141. ಅಥರ್ವ (10-7-17)
142. ಬೃ. ಉ. 3.7.3.ರಿಂದ 3-7-23
143. ಅಥರ್ವ (10-8-37)
144. ಅಥರ್ವ (18-4-11, 12, 37) ; (18-2-8, 12, 14, 15, 16, 17, 18, 24)
145. ಅಥರ್ವ (18-4-3)

ಸ್ವರ್ಗಗಳು ಉದನ್ವತೀ, ಪೀಲುಮತೀ ಮತ್ತು ಪ್ರದ್ಯೌ: ಎಂದು ತ್ರಿಸಂಖ್ಯಾತವಾಗಿವೆ. ಪಿತೃಗಳು ಮೂರನೆಯ ಸ್ವರ್ಗದಲ್ಲಿರುವರು. ಸ್ವರ್ಗದ ರಮಣೀಯವಾದ ಕಲ್ಪನೆ ಇರುವಂತೆ ಅಧರ್ಮವನ್ನೇ ಮಾಡುವವರಿಗೆ ಮುಂದೆ ಶಿಕ್ಷೆಯಾಗುವುದೆಂದು ಹೇಳಿದೆ. ಪಾಪಿಷ್ಠರೂ ಅಧರ್ಮ ಮಾಡಿದವರೂ ಅಧಃಸದ್ಮಕ್ಕೆ ಬೀಳುವರೆಂದೂ ಈ ಸ್ಥಾನ ಊರ್ಧ್ವಲೋಕಕ್ಕಿಂತ ಬೇರೆಯಾದುದೆಂದೂ ಇದು ಹೇಳುತ್ತದೆ.[146] ಇದನ್ನು ತಿರ್ಯಗ್ಬಿಲ[147] ಎಂದೂ ಕರಾಳವಾದ ಅಂಧಕಾರದ ಸ್ಥಾನವೆಂದೂ[148] ಹೇಳಿದೆ. ಇಲ್ಲಿ ಯಾತನೆಯುಂಟಾಗುವುದೆಂಬುದರ ಉಲ್ಲೇಖವೂ ಬಂದಿದೆ.[149]

ಮಾನವರು ಉದ್ಧಾರವಾಗಲು ಅನುಷ್ಠಿಸಬೇಕಾದ ಆರು ಶಾಶ್ವತ ಧರ್ಮಗಳ ಉಲ್ಲೇಖವೂ ಅಥರ್ವವೇದದಲ್ಲಿದೆ. ಇವು ಯಾವುವೆಂದರೆ :–

'ಸತ್ಯಂ, ಬೃಹದೃತಮುಗ್ರಂ, ದೀಕ್ಷಾ, ತಪಃ, ಬ್ರಹ್ಮ, ಯಜ್ಞ:'[150]

ಇವು ಆರೂ ಧರಿತ್ರಿಯನ್ನು ಧರಿಸಿವೆ. ಸದ್ಧರ್ಮದ ಅನುಷ್ಠಾನ ಗುರಿಯಾದಾಗ ಐಹಿಕವೂ ಚೆನ್ನಾಗಿ ನಡೆದು ಪಾರ ಲೌಕಿಕವೂ ಸಿದ್ಧಿಸಬಹುದು. ಅಥರ್ವವೇದದಲ್ಲಿಯೂ ನಿರಾಶಾವಾದದ ಛಾಯೆ ಇಲ್ಲ. 'ಅಯಂ ಲೋಕಃ ಪ್ರಿಯತಮಃ'[151] ಎಂದು ಹೇಳಿ ಐಹಿಕ ಜೀವನದ ಮಹತ್ತ್ವವನ್ನು ತಿಳಿಸಿದೆ. ಪುಣ್ಯದ ಫಲವಾದ ಈ ಜೀವನವನ್ನು ಚೆನ್ನಾಗಿ ಬಾಳಬೇಕಾದುದೇ ಎಲ್ಲರ ಆದರ್ಶವಾಗಬೇಕು. ಇಲ್ಲಿ ಸರ್ವವೂ ದುಃಖಕರ ಎಂಬ ಭಾವವಿಲ್ಲ. ಮಾನವನು ತನ್ನನ್ನು ಸುಮ್ಮನೆ ನಿಂದಿಸಿಕೊಳ್ಳಬೇಕಾದುದಿಲ್ಲ. ಕೇವಲ ಪಾಪಿಯೇ ಆಗಿ ಉದ್ಧಾರದ ಆಸೆಯೇ ಇಲ್ಲವೆಂದು ಯಾರೂ ಎದೆಗೆಡಬೇಕಾಗಿಲ್ಲ. ಮಾನವ ದೈವತ್ವಕ್ಕೇರಬಲ್ಲ. ಆತನಲ್ಲಿ ದೇವನು ಮನೆ ಮಾಡಿರುವನೆಂದಮೇಲೆ ಭಗವಂತನು ವಾಸಿಸುವ ಪುಣ್ಯ ಕ್ಷೇತ್ರವೇ ಅವನು. ಮಾನವನು ತನ್ನ ಧರ್ಮವನ್ನನುಷ್ಠಿಸಿ ಬಾಳಿದರೆ ದೇವನೇ ಆಗುವುದರಲ್ಲಿ ಸಂಶಯವಿಲ್ಲ. ಈ ವಿಧವಾದ ಯಥಾವಸ್ಥಿತವಾದ ಜೀವನದ ದೃಷ್ಟಿ ಅಥರ್ವ ವೇದದಲ್ಲಿ ಬೆಳೆದಿದೆ.[152] ಜೀವನವನ್ನು ಯಥಾರ್ಥ ದೃಷ್ಟಿಯಿಂದ ನೋಡಿ ಯೋಗದಂತೆ ನಡೆಸಿಕೊಂಡು ಹೋಗುವ ಕೌಶಲವಿಲ್ಲಿದೆ.

ಹೀಗೆ ಅಥರ್ವ ವೇದದಲ್ಲಿರುವ ವಿಚಾರಸರಣಿ ವೇದಾಂತ ದರ್ಶನದ ಬೆಳವಣಿಗೆಯಲ್ಲಿ ಗಮನಾರ್ಹವಾಗಿದೆ. ವೇದ ಧರ್ಮದ ತಿರುಳಾದ ತಪಸ್ಸು, ಯಜ್ಞ, ಋತ, ಸತ್ಯ, ದೀಕ್ಷೆ ಮೊದಲಾದುವನ್ನು ಪ್ರಸ್ತುತಪಡಿಸಿದ ಮಹತ್ವ ಅಥರ್ವವೇದದ್ದು. ಬ್ರಹ್ಮ ಮತ್ತು ಆತ್ಮ ಶಬ್ದಗಳು ಮೊಟ್ಟ ಮೊದಲಾಗಿ ಇಲ್ಲಿ ಬಂದಿವೆ. ಕ್ರಮಬದ್ಧವಾದ ದರ್ಶನ ಪದ್ಧತಿ ಇಲ್ಲಿ ಕಾಣದಿದ್ದರೂ ವೇದಾಂತ ದರ್ಶನದ ಪ್ರಮುಖತತ್ತ್ವಗಳ ವಿಚಾರಮಥನ ಇಲ್ಲಿ ಆಗಿದೆ.

---

146. ಅಥರ್ವ (11-14-3) ; (5-19-13)
147. ಅಥರ್ವ (10-8-9)
148. ಅಥರ್ವ (8-2-4) ; (5-30-11)
149. ಅಥರ್ವ (5-29)
150. ಅಥರ್ವ (12-1-1) 151. ಅಥರ್ವ (5-30-17)
152. ಅಥರ್ವ (11-8-13)

# ಎರಡನೆಯ ಪ್ರಕರಣ

## ಬ್ರಾಹ್ಮಣಗಳು

ಬ್ರಾಹ್ಮಣ ಶಬ್ದಕ್ಕೆ ಅನೇಕ ಅರ್ಥಗಳಿವೆ. ಬ್ರಾಹ್ಮಣ ಶಬ್ದ ಗ್ರಂಥವಾಚಿಯಾದಾಗ ನಪುಂಸಕಲಿಂಗದಲ್ಲಿರುತ್ತದೆ. 'ಬ್ರಾಹ್ಮಣಂ ಬ್ರಹ್ಮಸಂಘಾತೇ ವೇದ ಭಾಗೇ ನಪುಂಸಕಮ್' ಎಂಬ ಮೇದಿನೀಕೋಶದ ಮಾತಿಗನುಸಾರವಾಗಿ ಇದು ವೇದ ಭಾಗವನ್ನು ಸೂಚಿಸುವುದು. ಮಂತ್ರಗಳ ವಿವರಣಾತ್ಮಕವಾದ ವಿನಿಯೋಗವನ್ನು ತಿಳಿಸುವ ಭಾಗಗಳು ಬ್ರಾಹ್ಮಣ ಗಳೆನಿಸುತ್ತವೆ. ಈ ಅರ್ಥದಲ್ಲಿ ಪಾಣಿನಿಯ; ಅಷ್ಟಾಧ್ಯಾಯಿಯಲ್ಲಿ ಈ ಶಬ್ದ ಪ್ರಯೋಗವಿದೆ– 3-4-36. ಬ್ರಾಹ್ಮಣ ಗ್ರಂಥಗಳಲ್ಲಿಯೂ 'ಇತಿಹ ಬ್ರಾಹ್ಮಣಮ್', 'ತಸ್ಯೋಕ್ತಂ ಬ್ರಾಹ್ಮಣಂ' ಎಂಬಂತೆ ಬ್ರಾಹ್ಮಣ ಶಬ್ದಪ್ರಯೋಗ ಉಪಲಬ್ಧವಾಗುತ್ತದೆ. ನಿರುಕ್ತ ಮೊದಲಾದುವಲ್ಲಿಯೂ ಈ ಶಬ್ದದ ಉಲ್ಲೇಖವಿದೆ.[1]

ವೇದಮಂತ್ರಗಳ ವಿವರಣೆಯನ್ನು ಕೊಡುವುದರ ಜೊತೆಗೆ ಬ್ರಾಹ್ಮಣ ಗ್ರಂಥಗಳು ವೈದಿಕಯಾಗಗಳ ವೈಜ್ಞಾನಿಕ, ಆಧಿಭೌತಿಕ ಮತ್ತೂ ಆಧ್ಯಾತ್ಮಿಕ ಮೀಮಾಂಸೆಯನ್ನೂ ಬೆಳೆಸುತ್ತವೆ. ಯಾಗವಿಧಾನಗಳ ಪೂರ್ಣಪರಿಚಯ ಇವುಗಳಿಂದ ನಮಗಾಗುವುದು. ಯಜ್ಞವೂ ಒಂದು ವಿಶಿಷ್ಟವಾದ ವಿಜ್ಞಾನವೇ. ಅದರ ಧಾರ್ಮಿಕ ಮೌಲ್ಯ ಅಲ್ಪವಾದುದಲ್ಲ. ಅದರ ಆಧ್ಯಾತ್ಮಿಕ ಮಹತ್ವವನ್ನು ಮನಗಂಡವನಿಗೆ ಅದರ ಮೌಲ್ಯ ಅಪಾರ. ಯಜ್ಞದ ಉಚಿತವಾದ ಅನುಷ್ಠಾನದಿಂದಲೇ, ಪೂರ್ಣನಿರ್ವಾಹದಿಂದಲೇ, ಅನ್ಯೂನ ಅನತಿರಿಕ್ತವಾದ ಕ್ರಿಯಾಕಲಾಪ ಗಳಿಂದಲೇ ಸಮಗ್ರವಾದ ಫಲಪ್ರಾಪ್ತಿ. ಇಂಥ ಮಹತ್ವಪೂರ್ಣವಾದ ಯಜ್ಞದ ಸಮಗ್ರಪರಿಚಯ ಬ್ರಾಹ್ಮಣ ಗ್ರಂಥಗಳಿಂದಾಗುವುದು.[2]

ಬ್ರಾಹ್ಮಣ ಗ್ರಂಥಗಳು ಗದ್ಯರೂಪದಲ್ಲಿವೆ. ಇವುಗಳಲ್ಲಿ ಅನೇಕ ಪ್ರಾಚೀನ ಮತ್ತು ಅರ್ವಾಚೀನ ಆಖ್ಯಾನಗಳೂ ಅಡಗಿವೆ. ಮೀಮಾಂಸಕರು ಇವುಗಳನ್ನು ಅರ್ಥವಾದಗಳೆಂದು ಪರಿಗಣಿಸುತ್ತಾರೆ. ನಡುವೆ ಅನೇಕ ಗಾಥೆಗಳೂ ಬರುತ್ತವೆ. ಬ್ರಾಹ್ಮಣಗಳು ಸಂಹಿತೆಗಳಿಗಿಂತ ಸ್ವರೂಪದಲ್ಲಿಯೂ ವಿಷಯ ವಿವೇಚನೆಯಲ್ಲಿಯೂ ವಿಶಿಷ್ಟವಾಗಿವೆ. ಸಂಹಿತೆಗಳು ಬಹುತೇಕವಾಗಿ ಛಂದೋಬದ್ಧವಾಗಿವೆ. ಬ್ರಾಹ್ಮಣಗಳು ಮಾತ್ರ ಗದ್ಯಾತ್ಮಕವಾಗಿಯೇ ಇವೆ. ಸಂಹಿತೆಗಳಲ್ಲಿ ಬರುವ ವಿಷಯವು ವಿಶಿಷ್ಟವಾದುದು. ದೇವತಾಸ್ತುತಿಗಳು, ಐಹಿಕ ಹಾಗೂ ಪಾರಲೌಕಿಕ ಫಲಗಳಿಗಾಗಿ ಪ್ರಾರ್ಥನೆಗಳು ನಿಂದಾಪ್ರಶಂಸೆಗಳು, ರೋಗನಿವಾರಣ, ಶತ್ರುಮಾರಣ, ಸಂಗ್ರಾಮ ನಿರ್ವಹಣ, ವಿಜಯಸಂಪಾದನ ಮುಂತಾದುವುಗಳನ್ನು ಬೇಡುವ ಸೂಕ್ತಗಳು ಅಲ್ಲಿವೆ. ಯಜುರ್ವೇದ ಸಂಹಿತೆಯಲ್ಲಿ ದರ್ಶಪೌರ್ಣಮಾಸಾದಿ ಇಷ್ಟಿಗಳು ಮತ್ತು

---

1. ನಿರುಕ್ತ 3-11 ; 2-18 ನೋಡಿ. ದುರ್ಗಭಾಷ್ಯ ನೋಡಿ. ಐ. ಬ್ರಾ. 8-2 ನೋಡಿ. ಶತಪಥಬ್ರಾಹ್ಮಣ 4-6-9-20 ನೋಡಿ. ತೈ. ಸಂ. 3-7-1-1 ನೋಡಿ.
2. Wintemitz ಇವುಗಳನ್ನು 'Treatises on the Science of Sacrifice' ಎಂದು ವಿವರಿಸುವುದನ್ನು ಗಮನಿಸಬಹುದು.

ಸೋಮಯಾಗ ಇವುಗಳಲ್ಲಿ ಪ್ರಯೋಗಿಸಬೇಕಾದ ಮಂತ್ರ ಸಂಗ್ರಹಗಳಿವೆ.

ಆದರೆ ಬ್ರಾಹ್ಮಣಗಳು ವಿವೇಚಿಸುವ ವಿಷಯ ಇವುಗಳಿಗಿಂತ ಭಿನ್ನವಾದುದು. ಯಜ್ಞವಿಧಾನ ಯಾವಾಗ ಮಾಡಬೇಕು? ಹೇಗೆ ಮಾಡಬೇಕು? ಯಾವ ಸಾಧನಗಳಾಗಬೇಕು? ಅದಕ್ಕೆ ಬೇಕಾದ ಆವಶ್ಯಕತೆಗಳೇನು? ಯಜ್ಞಕ್ಕೆ ಅಧಿಕಾರಿ ಯಾರು? ಯಜ್ಞದಲ್ಲಿ ಯಾವ ಮಂತ್ರಗಳನ್ನು ಎಲ್ಲಿ ಹೇಗೆ ಬಳಸಬೇಕು? ಇತ್ಯಾದಿ ವಿಚಾರಗಳನ್ನು ಬ್ರಾಹ್ಮಣ ಗ್ರಂಥಗಳು ವಿವೇಚಿಸುತ್ತವೆ. ಬ್ರಾಹ್ಮಣಗಳ ಮುಖ್ಯ ವಿಷಯ 'ವಿಧಿ' ಎಂದು ಹೇಳಬಹುದು. 'ವಿಧಾಯಕಂ ವಾಕ್ಯಂ ಬ್ರಾಹ್ಮಣಮ್' ಎಂಬ ಸೂತ್ರ ಈ ಅಂಶವನ್ನೇ ವಿವರಿಸುತ್ತದೆ. ಯಜ್ಞ ಪ್ರಕ್ರಿಯೆಯ ಅರಿವನ್ನು ಬೋಧಿಸಲು, ವಿಧಿಸಲು ಪ್ರವೃತ್ತವಾದುದು ಈ ಮಹಾಗ್ರಂಥರಾಶಿ. ಯಜ್ಞದ ಮಹತ್ವವನ್ನು ಸ್ಥಾಪಿಸಿ ಅದಕ್ಕೊದಗಬಹುದಾದ ವಿರೋಧವನ್ನೂ ಇದು ಪರಿಹರಿಸುತ್ತದೆ. ಸಂಹಿತೆಗಳಂತೆ 'ಸ್ತುತಿ'ಗೆ ಪ್ರಾಧಾನ್ಯ ಕೊಡುವ ಬದಲು ವಿಧಿಗೆ ಪ್ರಾಧಾನ್ಯ ಕೊಟ್ಟಿರುವುದು ಬ್ರಾಹ್ಮಣ ಗ್ರಂಥಗಳ ವೈಶಿಷ್ಟ್ಯ.

ಮೀಮಾಂಸಕರ ಅಭಿಪ್ರಾಯದಂತೆ ವೇದದಲ್ಲಿ ವಿಧಿವಾಕ್ಯಗಳಿಗೇ ಪ್ರಾಧಾನ್ಯ. ಅಲ್ಲಿ ಉಪಲಬ್ಧವಾಗುವ ಇತರ ಎಲ್ಲ ವಿಚಾರಗಳೂ ಅವಾಂತರ ವಿಷಯಗಳಾಗಿ ಆ ವಿಧಿವಾಕ್ಯಗಳನ್ನು ಪೋಷಿಸುತ್ತವೆ; ನಿರ್ವಹಿಸುತ್ತವೆ. ಇವುಗಳನ್ನು ಅರ್ಥವಾದಗಳೆಂದು ಅವರು ನಿರೂಪಿಸುತ್ತಾರೆ. ಯಾಗನಿಷಿದ್ಧವಾದ ವಸ್ತುಗಳ ನಿಂದೆಯೂ ಯಾಗ ಪ್ರಯುಕ್ತವಾದ ವಸ್ತುಗಳ ಪ್ರಶಂಸೆಯೂ ಅರ್ಥವಾದಗಳಲ್ಲಿ ಬರುತ್ತವೆ. ವಿಧಿವಿಧಾನವೂ ಸಹ ಯುಕ್ತಿಬದ್ಧವಾಗಿದೆ. ಕೇವಲ ಕಲ್ಪನಾ ಮಾತ್ರ ನಿರ್ಮಿತವಲ್ಲ. ತರ್ಕದ ಆಧಾರ ಅದಕ್ಕೆ ಇರುತ್ತದೆ. ಆದ್ದರಿಂದಲೇ ಬ್ರಾಹ್ಮಣ ಗ್ರಂಥಗಳು 'ಹೇತು' ಅಥವಾ ಕಾರಣದ ನಿರ್ದೇಶವನ್ನು ಮಾಡುತ್ತವೆ. ಅನುಷ್ಠಾನ ಮಾಡಬೇಕಾದ ಅಂಶಗಳನ್ನು ಪುಷ್ಟೀಕರಿಸಲು ಅಲ್ಲಲ್ಲಿ ಸೂಕ್ತವಾದ ಪ್ರಾಚೀನೇತಿಹಾಸಗಳನ್ನೂ ಆಖ್ಯಾನಗಳನ್ನೂ ನಿರೂಪಿಸುತ್ತವೆ. ಇವುಗಳಿಂದ ಯಾಜ್ಞಿಕವಾದ ಶ್ರದ್ಧೆಯು ದೃಢವಾಗುತ್ತದೆ. ಈ ವಿಧಿವಾಕ್ಯಗಳಲ್ಲಿ ಬರುವ ಶಬ್ದಗಳ ವ್ಯುತ್ಪತ್ತಿಯನ್ನು ವಿವರಿಸುವ ಸಂದರ್ಭದಲ್ಲಿ 'ನಿರ್ವಚನ'ದ ಉಗಮವೂ ಉಂಟಾಗುತ್ತದೆ. ಹೀಗೆ ಬ್ರಾಹ್ಮಣಗಳ ಕೇಂದ್ರವಾದ ಬಿಂದು ವಿಧಿವಾಕ್ಯ—ಇದನ್ನು ನಿರುಕ್ತಿ, ಸ್ತುತಿ, ಆಖ್ಯಾನ ಮತ್ತು ಹೇತು ವಚನಗಳು ದೃಢಪಡಿಸುತ್ತವೆ ಹಾಗೂ ಪೋಷಿಸುತ್ತವೆ. ಬ್ರಾಹ್ಮಣ ಪ್ರತಿಪಾದ್ಯವಾದ ವಿಷಯಗಳಲ್ಲಿ ಹತ್ತು ಅಂಶಗಳ ನಿರ್ದೇಶವಿದೆಯೆಂಬುದನ್ನು ಕೆಳಗಿನ ಶ್ಲೋಕದಿಂದ ತಿಳಿಯಬಹುದು:

ಹೇತು ನಿರ್ವಚನಂ ನಿಂದಾ ಪ್ರಶಂಸಾ ಸಂಶಯೋ ವಿಧಿಃ |
ಪರಕ್ರಿಯಾ ಪುರಾಕಲ್ಪೋ ವ್ಯವಧಾರಣ ಕಲ್ಪನಾ |
ಉಪಮಾನಂ ದಶೈತೇ ತು ವಿಧಯೋ ಬ್ರಾಹ್ಮಣಸ್ಯ ತು || ಶಾಬರಭಾಷ್ಯ. 2-1-8

ಬ್ರಾಹ್ಮಣ ಗ್ರಂಥಗಳು ಅಸಂಖ್ಯವಾಗಿವೆ. ಇಂದು ನಮಗೆ ಉಪಲಬ್ಧವಾಗಿರುವ ಬ್ರಾಹ್ಮಣ ಗ್ರಂಥಗಳ ಸಂಖ್ಯೆ ಅಲ್ಪ. ಇವುಗಳಲ್ಲದೆ ಇನ್ನೂ ಅನೇಕಾನೇಕ ಬ್ರಾಹ್ಮಣಗಳು ಇದ್ದವೆಂಬುದನ್ನು ಇವುಗಳಲ್ಲಿಯೂ, ಗೃಹ್ಯ ಸೂತ್ರಗಳಲ್ಲಿಯೂ ಉಲ್ಲೇಖಿತವಾಗಿರುವ ಅನೇಕಾನೇಕ ಬ್ರಾಹ್ಮಣ ದ್ರಷ್ಟಾರರುಗಳ ಹೆಸರುಗಳಿಂದ ಊಹಿಸಬಹುದು. ಬೇರೆ ಬೇರೆ ವೇದ ಶಾಖೆಗಳಿಗೂ ಸೂತ್ರಗಳಿಗೂ ಸಂಬಂಧಿಸಿದಂತೆ ಇವೆ, ಇಂದು ಉಪಲಬ್ಧವಾಗಿರುವ ಬ್ರಾಹ್ಮಣಗಳು, ಆಶ್ವಲಾಯನ ಗೃಹ್ಯ ಸೂತ್ರದಲ್ಲಿ (ಆ. ಗೃ. 3 ಅಧ್ಯಾಯ, 3 ಖಂಡ) ಋಷಿಗಳು ಮತ್ತು ಆಚಾರ್ಯರುಗಳಿಗೆ ಇರುವ ವೈಲಕ್ಷಣ್ಯವನ್ನು ಸೂಚಿಸಿದೆ. ಮಂತ್ರ ದ್ರಷ್ಟಾರರನ್ನು

ಋಷಿಗಳೆಂದೂ ಬ್ರಾಹ್ಮಣ ದ್ರಷ್ಟಾರರನ್ನು ಆಚಾರ್ಯರೆಂದೂ ಆಶ್ವಲಾಯನರು ಹೇಳುತ್ತಾರೆ. ಆಚಾರ್ಯತರ್ಪಣ ಪ್ರಕರಣದಲ್ಲಿ ಆಚಾರ್ಯರುಗಳ ಮೂರು ಗಣಗಳನ್ನು ಹೇಳುತ್ತಾರೆ. 1. ಮಾಂಡೂಕೇಯ ಗಣ, 2. ಶಾಂಖಾಯನ ಗಣ, 3. ಆಶ್ವಲಾಯನ ಗಣ ಎಂದು. ಈ ಆಚಾರ್ಯರುಗಳ ಹೆಸರುಗಳು ಹೀಗಿವೆ–ಕಹೋಲ, ಕೌಷೀಥಕ, ಮಹಾಕೌಷೀಥಕ, ಭರದ್ವಾಜ, ಪೈಂಗ್ಯ, ಮಹಾಪೈಂಗ್ಯ, ಸುಯಜ್ಞ, ಶಾಂಖಾಯನ, ಐತರೇಯ, ಬಾಷ್ಕಲ, ಶಾಕಲ, ಗಾರ್ಗ್ಯ, ಸುಜಾತವರ್ಕ, ಔದವಾಹಿ, ಸೌಜಾಮಿ, ಶೌನಕ, ಆಶ್ವಲಾಯನ. ಈ ಹೆಸರುಗಳು ನವೀನವೂ ಅನ್ಯತ್ರ ಅಜ್ಞಾತವೂ ಆದವು. ಸಾಮಾನ್ಯವಾಗಿ ಶಾಂಖಾಯನ ಬ್ರಾಹ್ಮಣಕ್ಕೇ ಕೌಷೀಥಕ ಬ್ರಾಹ್ಮಣವೆಂಬ ಹೆಸರಿದೆ. ಆದರೆ ಈ ನಾಮ ಸೂಚಿಯಲ್ಲಿ ಶಾಂಖಾಯನ, ಕೌಷೀಥಕ ಎಂದು ಬೇರೆ ಬೇರೆಯಾಗಿ ಹೇಳಿರುವ ಕಾರಣ ಇವರಿಬ್ಬರೂ ಭಿನ್ನಭಿನ್ನರಾದ ಆಚಾರ್ಯರುಗಳಾಗಿರಬೇಕು. ಈ ಆಚಾರ್ಯರುಗಳೆಲ್ಲರೂ ಬ್ರಾಹ್ಮಣ ಗ್ರಂಥಗಳನ್ನು ನಿರ್ಮಾಣ ಮಾಡಿದರೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ. ಆದರೆ ಶಾಂಖಾಯನ ಮತ್ತು ಐತರೇಯರು ಬ್ರಾಹ್ಮಣಗಳ ದ್ರಷ್ಟಾರರಾಗಿದ್ದಾರೆ.

ಋಗ್ವೇದಕ್ಕೆ ಸೇರಿದ ಶಾಂಖಾಯನ ಗೃಹ್ಯಸೂತ್ರದ ತರ್ಪಣ ಪ್ರಕರಣದಲ್ಲಿ ಈ ಆಚಾರ್ಯರ ಹೆಸರುಗಳೊಡನೆ ಜಾತೂಕರ್ಣ್ಯ, ಶಾಕಪೂಣಿ, ಮತ್ತು ಗೌತಮ ಇವರ ಹೆಸರುಗಳೂ ಇವೆ. ಈ ಆಚಾರ್ಯರ ಉಲ್ಲೇಖಾನಂತರ 'ಯೇ ಚಾನ್ಯೇಪ್ಯಾ ಚಾರ್ಯಾಸ್ತೇ ಸರ್ವೇ ತೃಪ್ಯಂತು' ಎಂಬ ಉಲ್ಲೇಖವೂ ಇದೆ. ಇದರಿಂದಲೂ, ಹಳೆಯ ಮತ್ತು ಹೊಸ ಬ್ರಾಹ್ಮಣಗಳನ್ನು ಉಲ್ಲೇಖಿಸುವ ಪಾಣಿನಿ ಸೂತ್ರದ ಆಧಾರದಿಂದಲೂ ಅನೇಕ ಬ್ರಾಹ್ಮಣ ಗ್ರಂಥಗಳು ನಷ್ಟವಾಗಿ ಹೋಗಿವೆ ಎಂದು ಊಹಿಸಬಹುದು. ಇತರ ವೇದಗಳಿಗೆ ಸಂಬಂಧಿಸಿದ ಬ್ರಾಹ್ಮಣ ದ್ರಷ್ಟಾರರುಗಳ ಹೆಸರುಗಳನ್ನು ಅರಿಯುವುದೂ ಕಷ್ಟವಾಗಿದೆ. ಅವರವರ ಗೃಹ್ಯ ಸೂತ್ರಗಳಲ್ಲಿ ಬೇರೆ ಬೇರೆ ಹೆಸರಿನಲ್ಲಿ ಋಷಿ ತರ್ಪಣ ಹೇಳಿಲ್ಲ. ಆಚಾರ್ಯ ತರ್ಪಣವೂ ಅಲ್ಲಿಲ್ಲ. ಗೋಭಿಲ ಸೂತ್ರದಲ್ಲಿ ಆಚಾರ್ಯ ತರ್ಪಣ–ಋಷಿ ತರ್ಪಣದ ಉಲ್ಲೇಖವಿದ್ದರೂ ಹೆಸರುಗಳನ್ನು ವಿವರಿಸಿಲ್ಲ. ಇಲ್ಲಿ ಸಾಮವೇದದ ಎಲ್ಲ ಋಷಿಗಳನ್ನೂ ಆಚಾರ್ಯರುಗಳನ್ನೂ ಒಟ್ಟಿಗೆ ಹೇಳಲಾಗಿದೆ. ಶುಕ್ಲ ಯಜುರ್ವೇದದ ಪಾರಸ್ಕರ ಸೂತ್ರ ಹಾಗೂ ಆಪಸ್ತಂಬ ಸೂತ್ರಗಳು ಆಚಾರ್ಯರನ್ನೂ ಮತ್ತು ಋಷಿಗಳನ್ನೂ ಸಾಮಾನ್ಯ ಶಬ್ದದಲ್ಲಿ ಉಲ್ಲೇಖಿಸುತ್ತವೆ. ಹಿರಣ್ಯಕೇಶಿಸೂತ್ರ ಋಷಿಪೂಜೆಯನ್ನು ವಿಧಿಸುತ್ತದೆ. ಸಪ್ತಋಷಿಗಳೊಡನೆ ಅಗಸ್ತ್ಯರನ್ನೂ ಕೆಲವರು ಆಚಾರ್ಯರುಗಳನ್ನೂ ಇದು ಸೇರಿಸುತ್ತದೆ. ಆ ಅನೇಕ ಹೆಸರುಗಳಲ್ಲಿ ಕೃಷ್ಣದ್ವೈಪಾಯನ, ಜಾತೂಕರ್ಣ್ಯ, ಗೌತಮ, ವಾಮದೇವ ಮತ್ತು ಪರಾಶರರೂ ಇದ್ದಾರೆ. ವೈಶಂಪಾಯನ, ಪಲಿಂಗು, ತಿತ್ತಿರಿ, ಉಖ, ಆತ್ರೇಯ (ತೈತ್ತಿರೀಯ ಸಂಹಿತಾ ಪದ ಪಾಠಕಾರರು), ಕೌಂಡಿನ್ಯ (ಭಾಷ್ಯಕಾರರು) ಮೊದಲಾದವರಿಗೂ ಬೇರೆಯ ಜಾಗದಲ್ಲಿ ಆಸನಗಳನ್ನು ಕಲ್ಪಿಸಬೇಕೆಂದು ಇದು ಹೇಳುತ್ತದೆ. ಇವರನ್ನೆಲ್ಲಾ ಈಗ ಋಷಿಗಳೆಂದೇ ಕರೆಯುತ್ತಾರೆ.

ಬ್ರಾಹ್ಮಣ ಗ್ರಂಥಗಳ ಪ್ರಧಾನ ವಿಚಾರ 'ವಿಧಿ' ಎಂದು ಮೇಲೆ ಹೇಳಿದ್ದೇವೆ. ಈ ವಿಧಿಯ ವಿಧಾನಕ್ಕೆ ಒಂದು ಉದಾಹರಣೆ ಕೊಡಬಹುದು. ತಾಂಡ್ಯಬ್ರಾಹ್ಮಣದಲ್ಲಿ (6-7) ಅನೇಕ ವಿಧಿವಿಧಾನಗಳಿವೆ. ಇವುಗಳಲ್ಲಿ ಬಹಿಷ್ಪವಮಾನದಲ್ಲಿ ಅಧ್ವರ್ಯು, ಪ್ರಸ್ತೋತಾ, ಉದ್ಗಾತಾ, ಪ್ರತಿಹರ್ತಾ, ಹಾಗೂ ಬ್ರಹ್ಮ ಈ ಐದು ಜನ ಋತ್ವಿಕ್ಕುಗಳು ಕ್ರಮವಾಗಿ ಒಬ್ಬರ ಹಿಂದೆ ಒಬ್ಬರಂತೆ ಕೈಹಿಡಿದುಕೊಂಡು ಪ್ರಸರ್ಪಣ ಮಾಡುವ ವಿಧಾನ ಇದೆ. ಇವರಲ್ಲಿ

ಯಾರಾದರೂ ಕೈಬಿಟ್ಟು ಬಿಟ್ಟರೆ ಅನರ್ಥ ಸಂಭವಿಸುತ್ತದೆ. ಅದಕ್ಕಾಗಿ ಪ್ರಾಯಶ್ಚಿತ್ತಾದಿಗಳೂ ಉಂಟು. ಶತಪಥ ಬ್ರಾಹ್ಮಣದಲ್ಲಿ ಅನೇಕ ವಿಧಿಗಳ ಸಂಗ್ರಹವಿದೆ. ದರ್ಶಪೌರ್ಣಮಾಸೇಷ್ಟಿಗಳ ಮುಖ್ಯಾನುಷ್ಠಾನದ ಮತ್ತು ಅವಾಂತರಾನುಷ್ಠಾನದ ವರ್ಣನೆ ಯಾಗಕ್ರಮಕ್ಕನುಸಾರವಾಗಿ ಇಲ್ಲಿ ಉಪಲಬ್ಧವಾಗಿದೆ. ಮೊದಲನೆಯ ಕಾಂತದಲ್ಲೇ, ಆಧಾನ, ಪುನರಾಧಾನ, ಅಗ್ನಿಹೋತ್ರ, ಉಪಸ್ಥಾನ, ಆಗ್ರಯಣ ಮತ್ತು ದಾಕ್ಷಾಯಣ ಯಜ್ಞಗಳ ವರ್ಣನೆಯೂ ವಿಸ್ತಾರವಾಗಿ ಬಂದಿದೆ. ಐತರೇಯ ಮತ್ತು ಕೌಷೀತಕಿ ಬ್ರಾಹ್ಮಣಗಳಲ್ಲಿ ದರ್ಶಪೌರ್ಣಮಾಸೇಷ್ಟಿಗಳ ಮತ್ತು ಸೋಮಯಾಗದ ವಿಧಿ ನಿರೂಪಣೆ ಇದೆ. ಈ ವಿಧಿಗಳನ್ನು ವಿಧಿಸುವಾಗ ಸಹೇತುಕವಾಗಿ ಇವುಗಳ ನಿರ್ದೇಶವನ್ನು ಮಾಡಿದ್ದಾರೆ. 'ಪೌರ್ಣಮಾಸೇಷ್ಟಿಯಲ್ಲಿ ದೀಕ್ಷಿತನು ಆಹವನೀಯ ಮತ್ತು ಗಾರ್ಹಪತ್ಯಾಗ್ನಿಗಳ ಸಮೀಪದಲ್ಲಿ ಪೂರ್ವಾಭಿಮುಖವಾಗಿ ನಿಂತು ಜಲವನ್ನು ಸ್ಪರ್ಶಿಸುತ್ತಾನೆ. ಇದಕ್ಕೆ ಕಾರಣವೇನು ? ಜಲ ಪವಿತ್ರವಾದದ್ದು ಹಾಗೂ ಯಜ್ಞದಲ್ಲಿ ಉಪಯುಕ್ತವಾದ ಪದಾರ್ಥವಾದುದು. ಅನೃತವಾದಿಯಾದವನು ಯಾಗ ಮಾಡಲು ಅನರ್ಹ. ಆದ್ದರಿಂದ ಪವಿತ್ರವಾದ ಜಲವನ್ನು ಮುಟ್ಟುವುದರಿಂದ ಅವನು ಪಾಪಮುಕ್ತನಾಗಿ ಪವಿತ್ರನಾಗುತ್ತಾನೆ. ದೀಕ್ಷಿತನಾಗಲರ್ಹನಾಗುತ್ತಾನೆ' ಹೀಗೆ ಹೇತು ನಿರೂಪಣಕ್ಕೆ ಇದು ಒಂದು ಉದಾಹರಣೆ.

'ಅಮೇಧ್ಯೋ ವೈಪುರುಷೋ ಯದನೃತಂವದತಿ, ತೇನಪೂತಿರನ್ತರತಃ |
ಮೇಧ್ಯಾ ವಾ ಆಪಃ | ಮೇಧ್ಯೋ ಭೂತ್ವಾ ವ್ರತಮುಪಾಯಾನೀತಿ |
ಪವಿತ್ರಂ ವಾ ಆಪಃ | ಪವಿತ್ರಪೂತೋ ವ್ರತಮುಪಾಯಾನೀತಿ |
ತಸ್ಮಾದ್ವಾ ಅಪ ಉಪಸ್ಪೃಶತಿ |' ಶತ. ಬ್ರಾ. 1-1-1-1.

## ವಿನಿಯೋಗ

ಬ್ರಾಹ್ಮಣ ಗ್ರಂಥಗಳು ಮಂತ್ರಗಳ ವಿನಿಯೋಗವನ್ನು ಹೇಳುತ್ತವೆ. ಯಾವ ಮಂತ್ರವನ್ನು ಯಾವ ಉದ್ದೇಶಕ್ಕಾಗಿ ಎಲ್ಲಿ ಬಳಸಬೇಕು ? ಇದರ ಸಯುಕ್ತಿಕವಾದ ವ್ಯವಸ್ಥೆ ಬ್ರಾಹ್ಮಣಗಳಲ್ಲಿ ಸರ್ವತ್ರ ಆಗಿರುವುದನ್ನು ಕಾಣುತ್ತೇವೆ. ಮಂತ್ರಗಳ ಪದಗಳಿಂದಲೇ ವಿನಿಯೋಗದ ಯುಕ್ತಾಯುಕ್ತತೆಯನ್ನು ಬ್ರಾಹ್ಮಣಗಳು ಸ್ಥಾಪಿಸುತ್ತವೆ. ಬ್ರಾಹ್ಮಣಗಳು ಮಂತ್ರಗಳ ಅಂತರಂಗ ಮತ್ತು ಆಧ್ಯಾತ್ಮಿಕವ್ಯಾಖ್ಯೆಯನ್ನು ಕೊಡುತ್ತವೆ; ಹಾಗೂ ಯಜ್ಞದಲ್ಲಿ ಅವುಗಳ ಪ್ರಯೋಗವನ್ನು ವಿಧಿಸುತ್ತವೆ. 'ಆ ನೋ ಮಿತ್ರಾವರುಣಾ' (ಋಗ್ವೇ 3-62-16) ಎಂಬ ಮಂತ್ರದ ಗಾಯನವನ್ನು ದೀರ್ಘ ರೋಗಿಯ ರೋಗನಿವೃತ್ತಿಗಾಗಿ ಮಾಡಬೇಕೆಂಬ ವಿಧಿ ಇದೆ. ದಿನದ ದೇವತೆಯಾದ ಮಿತ್ರನು ಪ್ರಾಣದ ಪ್ರತಿನಿಧಿಯಾಗಿಯೂ ರಾತ್ರಿ ದೇವತೆಯಾದ ವರುಣನು 'ಅಪಾನ'ದ ಪ್ರತೀಕವಾಗಿಯೂ ಇರುವುದರಿಂದ ದೀರ್ಘರೋಗಿಯ ಶರೀರದಲ್ಲಿ ಪ್ರಾಣ ಮತ್ತು ಅಪಾನಗಳ ಧಾರಣೆಯನ್ನು ಮಾಡಬೇಕೆಂಬ ಪ್ರಾರ್ಥನೆ ಸಯುಕ್ತಿಕವಾಗಿದೆ ಎಂದು ಬ್ರಾಹ್ಮಣಗ್ರಂಥ ವಿವರಿಸುತ್ತದೆ (ತಾಂಡ್ಯ. 6-9-6-9). ವಿನಿಯೋಗಗಳು ಕೇವಲ ಕಲ್ಪನಾವಿಲಸಿತವಾಗಿರದೆ ಯುಕ್ತಾಯುಕ್ತವಾಗಿವೆಯೆಂಬ ಅಂಶ ಇದರಿಂದ ಗೊತ್ತಾಗುತ್ತದೆ.

ಬ್ರಾಹ್ಮಣ ಗ್ರಂಥಗಳ ಪ್ರಧಾನಪ್ರತಿಪಾದ್ಯವಾದ 'ವಿಧಿ'ಯನ್ನು ಹೇತು, ನಿರುಕ್ತಿ, ಸ್ತುತಿ ಮತ್ತು ಆಖ್ಯಾನಗಳು ವಿಶದಪಡಿಸಿ ಪೋಷಿಸುತ್ತವೆ ಎಂದು ಹೇಳಲಾಯಿತು. ಇವುಗಳೊಂದೊಂದರ ವಿಚಾರವನ್ನೂ ಈಗ ಸಂಗ್ರಹವಾಗಿ ವಿಚಾರಿಸೋಣ.

**ಹೇತು**

ಕರ್ಮಕಾಂಡದ ವಿಶೇಷವಿಧಿಗಾಗಿ ಉಪಯುಕ್ತವಾದ ಕಾರಣನಿರ್ದೇಶವೇ ಹೇತುವೆನಿಸುವುದು. ಬ್ರಾಹ್ಮಣ ಗ್ರಂಥಗಳಲ್ಲಿ ಯಾಗದ ವಿಧಿವಿಧಾನವನ್ನು ಕುರಿತ ಯೋಗ್ಯವಾದ ಕಾರಣದ ನಿರ್ದೇಶವನ್ನು ವಿಸ್ತಾರವಾಗಿ ಮಾಡಿದೆ. ಅಗ್ನಿಷ್ಟೋಮ ಯಾಗದಲ್ಲಿ ಉದ್ಗಾತೃವು ಸದಸ್ಸಿನಲ್ಲಿ ಔದುಂಬರ ವೃಕ್ಷದ ಶಾಖೆಯ ಉಚ್ಛ್ರಯಣ ಮಾಡುತ್ತಾನೆ. ತಾಂಡ್ಯ ಬ್ರಾಹ್ಮಣದಲ್ಲಿ ಈ ವಿಧಿಯ ಕಾರಣವನ್ನು ಹೀಗೆ ಹೇಳಿದೆ–'ದೇವತೆಗಳಿಗಾಗಿ ಪ್ರಜಾಪತಿ 'ಊರ್ಜ'ದ ವಿಭಾಗ ಮಾಡಿದ. ಅದರಿಂದ ಉದುಂಬರ ವೃಕ್ಷ ಉತ್ಪನ್ನವಾಯಿತು. ಉದುಂಬರ ವೃಕ್ಷಕ್ಕೆ ದೇವತೆ ಪ್ರಜಾಪತಿ. ಉದ್ಗಾತೃವಿಗೂ ಪ್ರಜಾಪತಿ ದೇವತೆಯೊಡನೆ ಸಂಬಂಧವಿದೆ. ಆದ್ದರಿಂದ ಉದ್ಗಾತೃ ಉದುಂಬರ ಶಾಖೆಯ ಉಚ್ಛ್ರಯಣವನ್ನು ಮಾಡುತ್ತಾನೆ. (ತಾಂ. ಬ್ರಾ. 6-4-1). ಬಹಿಷ್ಪವಮಾನ ಸ್ತೋತ್ರದಲ್ಲಿ ಐದು ಜನ ಋತ್ವಿಕ್ಕುಗಳೂ ಪ್ರದಕ್ಷಿಣೆ ಮಾಡುವರು. ಆಗ ಮೊದಲು ಚಲಿಸುವ ಅಧ್ವರ್ಯು ಕೈಯಲ್ಲಿ ದರ್ಭದ ಪ್ರಸ್ತರವನ್ನು ಹಿಡಿದುಕೊಂಡು ಹೋಗುತ್ತಾನೆ. ಇದಕ್ಕೆ ಕಾರಣವನ್ನು ತಾಂಡ್ಯ ಬ್ರಾಹ್ಮಣ ಹೇಳುತ್ತದೆ. 'ಯಜ್ಞವು ಅಶ್ವರೂಪವನ್ನು ಧರಿಸಿ ಓಡತೊಡಗಿತು ; ಆಗ ದರ್ಭಪ್ರಸ್ತರವನ್ನು ತೋರಿಸಿ ಅದನ್ನು ಹಿಂತಿರುಗಿಸಲಾಯಿತು. ಆದ್ದರಿಂದ ದರ್ಭಪ್ರಸ್ತರವನ್ನು ಹಿಡಿಯಬೇಕು' (ತಾಂ. ಬ್ರಾ. 6-7-16, 20). ಇಂಥ ಹೇತುವಚನಗಳ ಉಲ್ಲೇಖದಿಂದ ವಿವಿಧವಾದ ಅನುಷ್ಠಾನಗಳ ಕಾರಣ ಗೊತ್ತಾಗುವುದಲ್ಲದೆ ಶ್ರದ್ಧೆಯೂ ದೃಢವಾಗುತ್ತದೆ.

**ಅರ್ಥವಾದಗಳು**

ಯಾಗದಲ್ಲಿ ನಿಷಿದ್ಧವಾದ ಪದಾರ್ಥಗಳ ನಿಂದೆಯೂ ವಿಹಿತವಾದವುಗಳ ಪ್ರಶಂಸೆಯೂ ಬಹುತರವಾಗಿ ಬ್ರಾಹ್ಮಣಗಳಲ್ಲಿ ಉಪಲಬ್ಧವಾಗುತ್ತದೆ. 'ಅಮೇಧ್ಯಾ ವೈ ಮಾಷಾ' ಎಂಬ ವಚನ (ತೈ. ಸಂ. 5-1-8-1) ಉದ್ದು ನಿಷಿದ್ಧವಾದುದೆಂಬುದನ್ನು ಸೂಚಿಸುತ್ತದೆ. ಯಾಗಾನುಷ್ಠಾನಗಳನ್ನೂ, ಹೋಮನೀಯ ದ್ರವ್ಯಗಳನ್ನೂ, ದೇವತೆಗಳನ್ನೂ ವಿಶೇಷವಾಗಿ ಪ್ರಶಂಸೆಮಾಡಿದೆ. ಅಗ್ನಿಷ್ಟೋಮಯಾಗದ ಬಹುತರವಾದ ಪ್ರಶಂಸೆ ತಾಂಡ್ಯಬ್ರಾಹ್ಮಣದಲ್ಲಿದೆ–(ತಾಂ. ಬ್ರಾ. 6-3). ವಿಧಿವಚನವನ್ನು ಪುಷ್ಟೀಕರಿಸುವುದು ಅರ್ಥವಾದದ ಅಭಿಪ್ರಾಯ.

**ನಿರುಕ್ತಿ**

ಭಾಷಾಶಾಸ್ತ್ರದ ದೃಷ್ಟಿಯಿಂದ ಬ್ರಾಹ್ಮಣ ಗ್ರಂಥಗಳು ಬಹಳ ಮಹತ್ವಪೂರ್ಣವಾದವು. ಅನೇಕ ಶಬ್ದಗಳ ವ್ಯುತ್ಪತ್ತಿಯನ್ನು ಹೇಳಿ ಅವುಗಳ ಅರ್ಥವಿವರಣೆಯನ್ನು ಇವು ಮಾಡುತ್ತವೆ. ಭಾಷಾವಿಜ್ಞಾನದ ದೃಷ್ಟಿಯಿಂದ ಈ ನಿರ್ವಚನಗಳು ಬಹಳ ಉಪಯುಕ್ತವಾಗಿವೆ. ಸಂಹಿತೆಗಳೂ ಅಲ್ಲಲ್ಲಿ ಶಬ್ದನಿರ್ವಚನ ಮಾಡುತ್ತವೆ. 'ಉದಾನಿಷುರ್ಮಹೀರಿತಿ ತಸ್ಮಾದುದಕಮುಚ್ಯತೇ'–(ಅಥ. ವೇ. 3-13-1). ಶತಪಥ ಬ್ರಾಹ್ಮಣ ಮತ್ತು ತಾಂಡ್ಯ ಮಹಾಬ್ರಾಹ್ಮಣಗಳು ಇಂಥ ನಿರ್ವಚನಗಳ ಭಂಡಾರಗಳಾಗಿವೆ.

ಆಜ್ಯಸ್ತೋತ್ರದ ವ್ಯಾಖ್ಯೆಯನ್ನು–'ಯದಾಜಿಮಾಯನ್ ತದಾಽಽಜ್ಯಾನಾಂ ಆಜ್ಯತ್ವಮ್'–(ತಾಂಡ್ಯ. 7-2-1) ಎಂದೂ ರಥಂತರದ ನಿರುಕ್ತಿಯನ್ನು–'ರಥಂಮರ್ಯಾ ಕ್ಷೇಪ್ಲಾತಾರೀತ್ ಇತಿತದ್ ರಥಂತರಸ್ಯ ರಥಂತರತ್ವಂ' (ತಾಂಡ್ಯ 7-6-4) ಎಂದೂ, ಬೃಹತ್ ಸಾಮವನ್ನು–'ತತೋ ಬೃಹದನು ಪ್ರಜಾಯುತ ಬೃಹನ್ ಮರ್ಯಾಇದಂ ಸ ಜ್ಯೋಗಂತರಭೂದಿತಿ

ತದ್‌ಬೃಹತೋ ಬೃಹತ್ತ್ವಮ್' (ತಾಂಡ್ಯ. 7-6-5) ಎಂದೂ ಮಾಡುತ್ತದೆ. ರಥಂತರ ಸಾಮ ಆದಮೇಲೆ ಬೃಹತ್ಸಾಮದ ಉತ್ಪತ್ತಿ. ಪ್ರಜಾಪತಿಯ ಮನಸ್ಸಿನಲ್ಲಿ ಈ ಸಾಮ ಬೃಹತ್ಕಾಲದವರೆಗೆ ನಿವಾಸ ಮಾಡುತ್ತಿತ್ತು. ಆದ್ದರಿಂದ ಅದಕ್ಕೆ ಆ ಹೆಸರು ಬಂತು. ಇಂಥ ನಿರುಕ್ತಿಗಳು ಬ್ರಾಹ್ಮಣ ಗ್ರಂಥಗಳಲ್ಲಿ ತುಂಬಿವೆ.

## ಆಖ್ಯಾನಗಳು

ವಿಧ್ಯರ್ಥವಾದಗಳ ವರ್ಣನೆಯ ನಡುವೆ ಅಲ್ಲಲ್ಲಿ ಮೈದೋರುವ ಸುಂದರವಾದ ಆಖ್ಯಾನಗಳು ಬಹಳ ಆಕರ್ಷಕವಾಗಿವೆ. ಯಜ್ಞವಿಧಾನದ ವಿಸ್ತಾರವಾದ ಬಣ್ಣನೆಯ ಬೇಸರವನ್ನು ಕ್ಷಣ ಮಾತ್ರದಲ್ಲಿ ಪರಿಹರಿಸುತ್ತವೆ. ಇವು ವರ್ಣನಾಮಯವಾಗಿ ರೋಚಕವಾಗಿ ಉತ್ತಮವಾದ ಸಾಹಿತ್ಯದ ಕೋಟಿಗೆ ಸೇರುತ್ತವೆ. ಆಖ್ಯಾನಗಳಲ್ಲಿ ಕೆಲವು ಚಿಕ್ಕವು ಮತ್ತೆ ಕೆಲವು ದೊಡ್ಡವು. ಯಜ್ಞವಿಧಿಯ ಸಯುಕ್ತಿಕತೆಯನ್ನು ಪ್ರದರ್ಶಿಸಲು ಈ ಆಖ್ಯಾನಗಳು ಪ್ರವೃತ್ತವಾಗಿವೆ. ಇಂಥ ಚಿಕ್ಕ ಆಖ್ಯಾನಗಳಲ್ಲಿ ಕೆಲವನ್ನು ಉಲ್ಲೇಖಿಸಬಹುದು—ದೇವತೆಗಳನ್ನು ಪರಿತ್ಯಾಗಮಾಡಿ ವಾಕ್ಕು ಜಲವನ್ನೂ ವನಸ್ಪತಿಯನ್ನೂ ಪ್ರವೇಶಿಸಿದುದು–(ತಾಂಡ್ಯ.6-5-10-12). ಯಜ್ಞವು ಅಶರೂಪವನ್ನು ಧರಿಸಿ ದೇವತೆಗಳಿಂದ ಅಪಾಕ್ರಮಣ ಮಾಡಿದುದು ಮತ್ತು ದರ್ಭಮುಷ್ಟಿಯನ್ನು ತೋರಿಸಿ ಅದನ್ನು ಹಿಂತಿರುಗಿಸಿದುದು–(ತಾಂ. ಬ್ರಾ. 6-7-18). ಅಗ್ನಿಮಂಥನ ಸಮಯದಲ್ಲಿ ಕುದುರೆಯನ್ನು ಮುಂದೆ ನಿಲ್ಲಿಸುವ ಸಂಪ್ರದಾಯದ ಪ್ರಾಚೀನೇತಿಹಾಸ–(ಶತ. 1-6-4-15). ದೇವಾಸುರರ ಯುದ್ಧಗಳು–(ಶತ. 2-1-6-8,18 ; (ಐತ. 1-4-23 ; 6-2-1).

ಈ ಆಖ್ಯಾನಗಳು ಮಹತ್ತ್ವಪೂರ್ಣವಾದುವು. ಗಂಭೀರವಾದ ತಾತ್ವಿಕ ವಿಚಾರ ಇದರಲ್ಲಿ ಅಡಗಿರುವುದುಂಟು. ಗೂಢಾರ್ಥಗಳನ್ನೂ ಇವು ಒಳಗೊಂಡಿರುವುದುಂಟು. ಶತ. ಬ್ರಾ. 1-4-5-8, 12 ರಲ್ಲಿ ಮನಸ್ಸು ಮತ್ತು ವಾಕ್ಕು ಇವುಗಳ ಕಲಹದ ಕಥೆ ಪ್ರಸ್ತುತವಾಗಿದೆ. ಈ ಕಥೆಯಲ್ಲಿ ಮನೋ ವೈಜ್ಞಾನಿಕ ವಿಚಾರ ಅಡಗಿದೆ. ವಾಕ್ಸಂಬಂಧವಾದ ಅನೇಕ ಆಖ್ಯಾನಗಳು ಹೀಗೆಯೇ ರೋಚಕವಾಗಿವೆ. ಬ್ರಾಹ್ಮಣ ಗ್ರಂಥಗಳಲ್ಲಿ ಸೃಷ್ಟಿವಿಷಯಕವಾದ ಆಖ್ಯಾನಗಳೂ ಅನೇಕವಿದೆ. ಪ್ರಜಾಪತಿಯ ಅಂಗ ವಿಶೇಷಗಳಿಂದ ವರ್ಣಗಳ ಉತ್ಪತ್ತಿಯನ್ನು ತಾಂಡ್ಯ ಬ್ರಾಹ್ಮಣ ಹೇಳುತ್ತದೆ. ರಜನಿಯ ಉದಯಕ್ಕೆ ಸಂಬಂಧಿಸಿದ ಕಥೆ ಮೈತ್ರಾಯಣೀಯ ಸಂಹಿತೆಯಲ್ಲಿದೆ–(ಮೈ. ಸಂ. 1-5-12).

ದೊಡ್ಡ ಆಖ್ಯಾನಗಳಲ್ಲಿ ಪುರೂರವ ಮತ್ತು ಉರ್ವಶೀ–ಇವರ ಆಖ್ಯಾನ ಪ್ರಸಿದ್ಧವಾದುದು–(ಶತ. ಬ್ರಾ. 21-5-1). ಪ್ರಾಚೀನ ಜಲಪ್ರಳಯದ ಇತಿಹಾಸ (ಶತ. ಬ್ರಾ. 1-81)ವೂ ಶುನಶ್ಶೇಫನ ಆಖ್ಯಾನವೂ (ಐ. ಬ್ರಾ. 7-2) ಮುಖ್ಯವಾದವು.

## ಬ್ರಾಹ್ಮಣಗಳ ಮಹತ್ತ್ವ

ವೈದಿಕಯುಗದ ಕಾರ್ಯಕಲಾಪಗಳ ಭವ್ಯಚಿತ್ರ ಬ್ರಾಹ್ಮಣ ಗ್ರಂಥಗಳಲ್ಲಿ ಉಪಲಬ್ಧವಾಗುತ್ತದೆ. ಧಾರ್ಮಿಕ ದೃಷ್ಟಿಯಿಂದ ಇವು ಬಹಳ ಮಹತ್ತ್ವಪೂರ್ಣವಾದವು. ಶ್ರದ್ಧಾ ಭಕ್ತಿಗಳಿಂದ ಕೂಡಿ ಭಗವತ್ಪೂಜೆಯನ್ನೇ ಜೀವನದ ಪರಮ ಧ್ಯೇಯವನ್ನಾಗಿ ಉಳ್ಳ ಸಾತ್ತ್ವಿಕರು ಆಚರಿಸುತ್ತಿದ್ದ ಅನುಷ್ಠಾನಗಳ ವಿವರಣೆ ಇಲ್ಲಿದೆ. ಯಾಗಾದ್ಯನುಷ್ಠಾನಗಳಿಂದ ಇಂದ್ರಾದಿ ದೇವತೆಗಳನ್ನು ಸಂತುಷ್ಟಗೊಳಿಸಿ ಅವರಿಂದ ತಮಗೆ ಬೇಕಾದ ಇಷ್ಟಾರ್ಥಗಳನ್ನು ಪಡೆಯುಕೊಳ್ಳುವ

ವಿಧಾನವಿಲ್ಲಿದೆ. ಯಜ್ಞ ವಿಧಿಯ ವಿವರಗಳನ್ನೆಲ್ಲಾ ಬಹಳ ಸೂಕ್ಷ್ಮವಾಗಿ ತಿಳಿದುಕೊಂಡು ಚಾಚೂ ತಪ್ಪದಂತೆ ಅವುಗಳನ್ನನುಸರಿಸಬೇಕಾಗಿದ್ದ ಕಾರಣ ಅವುಗಳ ವಿಶದವಾದ ವಿವರಣೆ ಅತ್ಯಾವಶ್ಯಕವಾಗಿದ್ದಿತು. ಈ ಕೆಲಸವನ್ನು ಬ್ರಾಹ್ಮಣ ಗ್ರಂಥಗಳು ಯಶಸ್ವಿಯಾಗಿ ಮಾಡುತ್ತವೆ. ಭಾರತೀಯ ಧರ್ಮದ ಉಗಮ ಮತ್ತು ಬೆಳವಣಿಗೆಯನ್ನು ಅರಿಯಲು ಇವುಗಳ ಅಧ್ಯಯನ ಅನಿವಾರ್ಯ. ಆದ್ದರಿಂದಲೇ ಇವು ಉಪಾದೇಯವೂ, ಮನನೀಯವೂ, ಸಂಗ್ರಹಣೀಯವೂ ಆಗಿವೆ. ಒಂದು ಕಾಲದಲ್ಲಿ ಯಾಗಾದ್ಯನುಷ್ಠಾನಗಳಿಗೆ ಪರಮ ಪ್ರಾಧಾನ್ಯವಿತ್ತು. ಆ ಕಾಲದ ಆಸೆ ಆಕಾಂಕ್ಷೆಗಳನ್ನೂ ಜೀವನ ಧ್ಯೇಯಗಳನ್ನೂ, ಕರ್ಮಾದ್ಯನುಷ್ಠಾನಗಳನ್ನೂ ಧಾರ್ಮಿಕ ಭಾವನೆಗಳನ್ನೂ ತಿಳಿಯಲು ಬ್ರಾಹ್ಮಣ ಗ್ರಂಥಗಳೇ ನಮಗೆ ಆಧಾರವಾಗಿದೆ. ಈ ಯಾಗಾದ್ಯಾಚರಣೆಗಳು ಕರ್ಮಕಾಂಡವೆನಿಸಿವೆ.

ಮುಂದಿನ ಕಾಲದಲ್ಲಿ ಭಾರತೀಯ ಧಾರ್ಮಿಕ ಜೀವನದಲ್ಲಿ ಮಹತ್ತರವಾದ ಪರಿವರ್ತನೆಯುಂಟಾಯಿತು. ಕರ್ಮ ಕಾಂಡದಲ್ಲಿ ಆಸಕ್ತಿ ಕಡಿಮೆಯಾಗಿ ಜ್ಞಾನಕಾಂಡದ ಕಡೆ ಜನತೆಯ ಗಮನ ತಿರುಗಿತು. ವೈದಿಕ ಕರ್ಮಕಾಂಡದ ಅನುಷ್ಠಾನಗಳು ಇಂದು ಪೂರ್ಣವಾಗಿ ಕಣ್ಮರೆಯಾಗಿವೆ. ಹೀಗಾಗಿ ಇಂದು ಬ್ರಾಹ್ಮಣ ಗ್ರಂಥಗಳ ಹೃದಯವನ್ನರಿತು ಮೆಚ್ಚುವುದು ಸುಲಭವಲ್ಲ. ಬ್ರಾಹ್ಮಣ ಗ್ರಂಥಗಳು ಕೇವಲ ಯಜ್ಞ ಸಂಬಂಧವಾದ ವಿಚಾರವನ್ನೇ ಮಾಡುವುವೆಂಬುದು ತಪ್ಪು ಭಾವನೆ. ಪರಮ ಸತ್ಯವನ್ನು ಅನ್ವೇಷಿಸುವ ಒಂದು ಅಂತರಂಗದೃಷ್ಟಿ ಅಲ್ಲಿದೆ ; ಶ್ರದ್ಧಾಮಯವಾದ ಅನುಶೀಲನ ಅಲ್ಲಿದೆ. ಸ್ವರ್ಗಾದಿ ಫಲ ಪ್ರಾಪ್ತಿಗಾಗಿ ಯಾಗಾದಿಗಳ ಅನುಷ್ಠಾನವೆಂಬ ಭಾವನೆಯನ್ನು ಬದಲಾಯಿಸಿ ಭಗವಂತನನ್ನು ಒಲಿಸುವ ಅನೇಕಾನೇಕ ವಿಧಾನಗಳು ಇವು ಎಂಬ ನಂಬಿಕೆ ಮುಂದೆ ಬೆಳೆಯಿತು.

ಬ್ರಾಹ್ಮಣಗಳ ಕಾಲದಲ್ಲಿ ಯಾಗಾನುಷ್ಠಾನಗಳ ವಿಧಾನ ವಿಚಾರದಲ್ಲಿ ಅನೇಕ ಚರ್ಚೆಗಳಾಗುತ್ತಿದ್ದವು. ಯಜ್ಞೀಯ ವಿಷಯಗಳ ವಿಚಾರವನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸುವ 'ಮೀಮಾಂಸಾ' ಶಾಸ್ತ್ರದ ಉದಯಕ್ಕೆ ಇವು ಎಡೆಮಾಡಿಕೊಟ್ಟವು. ನಮ್ಮ ದರ್ಶನಗಳಲ್ಲಿ ಮೀಮಾಂಸಾದರ್ಶನ ಮೊದಲನೆಯದು. ಈ ಮೀಮಾಂಸೆಯ ಪ್ರತಿಪಾದನೆಗೆ ಅನೇಕಾನೇಕ 'ನ್ಯಾಯ'ಗಳನ್ನು ಬಳಸಲಾಯಿತು. ಯಾಗಗಳ ಸಮುಚಿತವಾದ ವ್ಯವಸ್ಥೆಗಾಗಿ ಆಪಾತತಃ ತೋರುವ ಅನೇಕ ವಿರೋಧಗಳನ್ನು ಹೋಗಲಾಡಿಸಬೇಕಾಗಿತ್ತು. ಇಂಥ ಮೀಮಾಂಸೆ ಬ್ರಾಹ್ಮಣಗಳಲ್ಲಿ ಆರಂಭವಾಗಿರುವುದನ್ನು ಕಾಣಬಹುದು. 'ಏವಂ ಬ್ರಹ್ಮವಾದಿನೋ ವದಂತಿ' ಎಂದು ಹೇಳಿ ಅನೇಕ ಯಾಜ್ಞಿಕ ಸಮಸ್ಯೆಗಳನ್ನು ಬ್ರಾಹ್ಮಣಗಳಲ್ಲಿ ಪರಿಹರಿಸಲಾಗಿದೆ.[3] 'ಮೀಮಾಂಸಂತೇ' ಎಂಬ ಪದ ಪ್ರಯೋಗವೂ ಬ್ರಾಹ್ಮಣ ಗ್ರಂಥಗಳಲ್ಲಿ ದೊರೆಯುತ್ತದೆ. 'ಉದಿತೇ ಹೋತವ್ಯಮನುದಿತೇಹೋತವ್ಯಮಿತಿ ಮೀಮಾಂಸಂತೇ' (ಕೌಷೀ. ಬ್ರಾ. 2-9) ಎಂಬುದು ಇದಕ್ಕೆ ಉದಾಹರಣೆ.

ಹೀಗೆ ಬ್ರಾಹ್ಮಣ ಗ್ರಂಥಗಳು ಬಹುಮುಖವಾದ ಮಹತ್ತ್ವವನ್ನು ಹೊಂದಿವೆ.

1. ಯಜ್ಞದ ನಾನಾ ರೂಪಗಳು ಹಾಗೂ ವಿವಿಧವಾದ ಅನುಷ್ಠಾನಗಳ ಪೂರ್ಣ ಪರಿಚಯ ಇವುಗಳಿಂದಾಗುತ್ತದೆ.

2. ಇಲ್ಲಿ ಬರುವ ನಿರ್ವಚನಗಳು ಬೋಧಪ್ರದವಾಗಿ ಮುಂದಿನ ನಿರುಕ್ತಕ್ಕೆ ಆಧಾರಗಳಾಗಿವೆ

---

3. ತಾಂ. ಬ್ರಾ. 6-4-15 ; ಶತ. ಬ್ರಾ. 1-1-1-7-10 ನೋಡಿ.

3. ಇಲ್ಲಿ ಬರುವ ಸುಂದರವಾದ ಆಖ್ಯಾನಗಳು ಹೃದಯಂಗಮವಾಗಿವೆ.

4. ಕರ್ಮ ಮೀಮಾಂಸೆಯ ಉದ್ಗಮ ಮತ್ತು ಬೆಳವಣಿಗೆಯನ್ನರಿಯಲು ಇವು ಪೂರ್ವ ಪೀಠಿಕೆಗಳಾಗಿವೆ.

## ಬ್ರಾಹ್ಮಣ ಗ್ರಂಥಗಳ ಕಾಲ

ಬ್ರಾಹ್ಮಣ ಗ್ರಂಥಗಳ ಕಾಲವಿಚಾರಕ್ಕೀಗ ನಾವು ಬರೋಣ. ಈ ಪ್ರಶ್ನೆ ಬಹಳ ಜಟಿಲವಾದುದೂ ವಿವಾದಾಸ್ಪದವಾದುದೂ ಆಗಿದೆ. ಬ್ರಾಹ್ಮಣ ಗ್ರಂಥಗಳಲ್ಲಿ ಕುರು, ಪಾಂಚಾಲ, ಸರಸ್ವತೀನದೀತೀರ ಇವುಗಳ ಉಲ್ಲೇಖ ವಿಶೇಷವಾಗಿದೆ. ತಾಂಡ್ಯ ಬ್ರಾಹ್ಮಣದಲ್ಲಿ ಸರಸ್ವತೀನದೀತೀರದ ಉಲ್ಲೇಖ ಹೆಚ್ಚಾಗಿ ಬರುತ್ತದೆ. ಯಮುನಾ ನದಿ ಹರಿಯುವ ಪ್ರದೇಶ ಹಾಗೂ ಸರಸ್ವತೀ ದೃಷದ್ವತೀಗಳ ಸಂಗಮ ಪ್ರದೇಶ–ಇವುಗಳನ್ನೂ ಅದು ಹೇಳುತ್ತದೆ. ಕುರುಕ್ಷೇತ್ರದ ಹೆಸರೂ ಇಲ್ಲಿದೆ. ಇವುಗಳೆಲ್ಲದರಿಂದ ಈ ಬ್ರಾಹ್ಮಣ ಗ್ರಂಥಗಳ ಉದಯಸ್ಥಾನ ಕುರು ಪಾಂಚಾಲ ದೇಶಗಳೆಂದೂ ಸರಸ್ವತೀನದಿಯ ತೀರಪ್ರದೇಶವೆಂದೂ ವಿದ್ವಾಂಸರು ನಿರ್ಧರಿಸುತ್ತಾರೆ.

ಅಸಂಖ್ಯವಾದ ಈ ಬ್ರಾಹ್ಮಣ ಗ್ರಂಥಗಳ ಉದಯಕ್ಕೂ ಹಾಗೂ ಸಂಕಲನಕ್ಕೂ ಒಂದು ಸಹಸ್ರ ವರ್ಷಗಳಿಗಿಂತ ಅಧಿಕವಾದ ಕಾಲ ಬೇಕೆಂಬುದನ್ನು ಪ್ರಾಯಃ ಎಲ್ಲ ವಿದ್ವಾಂಸರೂ ಒಪ್ಪುತ್ತಾರೆ. ಆದರೆ ಈ ಕಾಲದ ಆರಂಭ ಮತ್ತು ಮುಕ್ತಾಯದ ಬಗ್ಗೆ ಒಮ್ಮತವಿಲ್ಲದೆ ಇದೆ. ಪಾಶ್ಚಾತ್ಯ ವಿದ್ವಾಂಸರು ಈ ಬ್ರಾಹ್ಮಣಗಳ ಕಾಲವನ್ನು ಕ್ರಿ. ಪೂ. 1200 ರಿಂದ ಕ್ರಿ. ಪೂ. 200 ರವರೆಗೆ ನಿಗದಿ ಮಾಡುತ್ತಾರೆ. ಆದರೆ ಭಾರತೀಯ ವಿಮರ್ಶಕರು ಇವುಗಳಿಗೆ ಕ್ರಿ. ಪೂ. 3000ದಿಂದ ಕ್ರಿ. ಪೂ. 2000ದ ವರೆಗಿನ ಕಾಲವನ್ನು ಹೇಳುತ್ತಾರೆ.

ಬ್ರಾಹ್ಮಣ ಸಾಹಿತ್ಯಕ್ಕೂ ಉಪನಿಷತ್ತುಗಳಿಗೂ ನಡುವೆ ಸಹಸ್ರಾರು ವರ್ಷಗಳ ಅಂತರವನ್ನು ಹೇಳಬೇಕಾಗುತ್ತದೆ. ಇವುಗಳೆರಡರ ಧ್ಯೇಯ ದೃಷ್ಟಿಗಳೇ ಬೇರೆ ಬೇರೆಯಾಗಿವೆ. ಬ್ರಾಹ್ಮಣ ಗ್ರಂಥಗಳು ಕರ್ಮ ಪ್ರತಿಪಾದಕಗಳಾದರೆ ಇದಕ್ಕೆ ಪ್ರತಿಯಾಗಿ ಜ್ಞಾನಪ್ರತಿಪಾದಕವಾದುದು ಉಪನಿಷತ್ತು. ಈ ದೃಷ್ಟಿಯಿಂದ ನಾವು ವಿಮರ್ಶಿಸಿದಾಗ ಪಾಶ್ಚಾತ್ಯರ ಕಾಲನಿರ್ಣಯ ವಿಚಾರ ಅಸಮರ್ಪಕವೆನಿಸುತ್ತದೆ. ಕ್ರಿ. ಪೂ. 500ಕ್ಕೂ ಹಿಂದೆ ಈ ವಿರಾಟ್ ಸಾಹಿತ್ಯ ಬೆಳೆದಿದ್ದಿತೆಂಬುದನ್ನು ನಾವು ಒಪ್ಪಬೇಕು. ಆ ಕಾಲದಲ್ಲಿ ಆದ ಅವೈದಿಕ ಧರ್ಮಗಳಾದ ಜೈನ ಬೌದ್ಧ ಧರ್ಮಗಳ ಉದಯ ಈ ಅಂಶವನ್ನು ಸ್ಥಿರಪಡಿಸುತ್ತದೆ. ಬ್ರಾಹ್ಮಣ ಗ್ರಂಥಗಳ ಕಾಲನಿರ್ಣಯಕ್ಕೆ ಜ್ಯೋತಿಷಸಂಬಂಧಿಯಾದ ಉಲ್ಲೇಖಗಳು ಸಾಧಕವಾಗಿವೆ. ಬ್ರಾಹ್ಮಣ ಗ್ರಂಥಗಳಲ್ಲೆಲ್ಲಾ ಬಹಳ ಪ್ರಾಚೀನವಾದುದು ಶತಪಥ. ಇದರ ಕಾಲ ಕ್ರಿ. ಪೂ. 3000 ಎಂದು ಎಸ್. ಬಿ. ದೀಕ್ಷಿತ್ ಅವರು ನಿರ್ಣಯಿಸಿದ್ದಾರೆ. ಈ ಬ್ರಾಹ್ಮಣದ ದ್ವಿತೀಯ ಕಾಂಡದಲ್ಲಿ ಮಹತ್ವಶಾಲಿಯಾದ ಜ್ಯೋತಿಷ ಘಟನೆಯ ಉಲ್ಲೇಖವೊಂದು ಉಪಲಬ್ಧವಾಗುತ್ತದೆ. ಪೂರ್ವ ದಿಕ್ಕಿನಲ್ಲಿ ಕೃತ್ತಿಕೆಯು ಉದಯಿಸುವುದೆಂದೂ ಅಲ್ಲಿಂದ ಅದು ಪ್ರಚ್ಯುತವಾಗುವುದಿಲ್ಲವೆಂದೂ ಅಲ್ಲಿ ಹೇಳಿದೆ. ಎಸ್. ಬಿ. ದೀಕ್ಷಿತರ ಗಣನಾನುಸಾರ ಈ ಘಟನೆಯು ಕ್ರಿ. ಪೂ. 3000 ದಲ್ಲಿ ಸಂಭವಿಸಿತು. ಈ ವಾದವನ್ನು ಪಾಶ್ಚಾತ್ಯ ವಿದ್ವಾಂಸರಾರೂ ಗಮನಿಸಿರಲಿಲ್ಲ. ಡಾ. ವಿಂಟರ್ ನಿಟ್ಜರವರು ಜರ್ಮನ್ ಜ್ಯೋತಿಷಿ ಪ್ರೊ. ಎ. ಪ್ರೇ ಅವರ ಗಣನಾನುಸಾರ ಈ ಗ್ರಹಸ್ಥಿತಿ ಕ್ರಿ. ಪೂ. 1100ಕ್ಕೆ ಸಂಬಂಧಿಸಿದೆಯೆಂದು ತಿಳಿಸುತ್ತಾರೆ. ಕೃತ್ತಿಕೆಗಳು ಉದಯಿಸಿದ ಮೇಲೆ ಅನೇಕ ಗಂಟೆಗಳ ಕಾಲ ಪೂರ್ವದಲ್ಲಿ ದೃಷ್ಟಿ

ಗೋಚರವಾಗುತ್ತವೆಂದು ಇವರು ವ್ಯಾಖ್ಯಾನ ಮಾಡುತ್ತಾರೆ. 'ಏತಾ ಹ ವೈ ಪ್ರಾಚ್ಯೈದಿಶೋ ನ ಚ್ಯವಂತೇ' ಎಂಬ ಮಾತಿನ ಅರ್ಥ ನಿರ್ದಿಷ್ಟವಾಗಿದೆ. ಈ ವಿಚಾರದಲ್ಲಿ ಬರುವ ಮತ್ತೊಂದು ತೊಡಕು ಶತಪಥ ಬ್ರಾಹ್ಮಣಕ್ಕೂ ವೇದಾಂಗ ಜ್ಯೋತಿಷಕ್ಕೂ ಇರುವ ಸಂಬಂಧ ವಿಚಾರದ್ದು. ವೇದಾಂಗ ಜ್ಯೋತಿಷ ಶತಪಥ ಬ್ರಾಹ್ಮಣಕ್ಕಿಂತ ಅನೇಕ ಶತಮಾನಗಳ ಕಾಲ ಈಚಿನದು ಎಂಬುದು ಸರ್ವಸಮ್ಮತವಾಗಿದೆ. ವೇದಾಂಗ ಜ್ಯೋತಿಷದಲ್ಲಿ ವ್ಯಕ್ತವಾಗುವ ಜ್ಯೋತಿಷ ಸಂಬಂಧವಾದ ಉಲ್ಲೇಖಗಳಿಂದ ಅದರ ಕಾಲ ಕ್ರಿ. ಪೂ. 1400 ಎಂದು ನಿರ್ಣಯಿಸಲಾಗಿದೆ. ಕ್ರಿ. ಪೂ. 1181 ಕ್ಕಿಂತ ಅದು ಈಚಿನದಲ್ಲವೆಂದು ಮ್ಯಾಕ್ಸ್‌ಮುಲ್ಲರ್ ಮಹಾಶಯನೂ ಅಭಿಪ್ರಾಯಪಡುತ್ತಾನೆ. ಶತಪಥ ಬ್ರಾಹ್ಮಣಕ್ಕೆ ಮೇಲೆ ಹೇಳಿದಂತೆ ಕ್ರಿ. ಪೂ. 1100ನ್ನು ಒಪ್ಪುವುದಾದರೆ ವೇದಾಂಗಜ್ಯೋತಿಷವು ಅದಕ್ಕಿಂತ ಹಿಂದಿನದೆಂದು ಒಪ್ಪಬೇಕಾಗುತ್ತದೆ. ಆಧಾರ ಪೂರ್ಣವಾದ ವಾದಗಳಿಂದ ವೇದಾಂಗ ಜ್ಯೋತಿಷದ ಕಾಲವನ್ನು ಬದಲಾಯಿಸಿದ ಹೊರತು ಈ ನಿರ್ಣಯ ಸಾಧ್ಯವಾಗುವುದಿಲ್ಲ. ಆದ್ದರಿಂದ ಶತಪಥ ಬ್ರಾಹ್ಮಣದ ಕಾಲ ಕ್ರಿ. ಪೂ. 3000 ಎಂಬುದು ಸಿದ್ಧವಾಗುತ್ತದೆ. ಮೈತ್ರಾಯಣೀಯ ಉಪನಿಷತ್ತಿನಲ್ಲಿ ಬರುವ ಜ್ಯೋತಿಷ ಘಟನೆಯ ಆಧಾರದಿಂದ ಅದರ ಕಾಲ ಕ್ರಿ. ಪೂ. 1900 ಎಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಈ ಕಾಲವನ್ನು ಗಣನೆಗೆ ತೆಗೆದುಕೊಂಡರೆ ಬ್ರಾಹ್ಮಣಗಳ ಕಾಲ ಕ್ರಿ. ಪೂ. 3000ದಿಂದ ಕ್ರಿ. ಪೂ. 2000ದ ವರೆಗೆ ಹರಡುತ್ತದೆಂದು ಊಹಿಸಬಹುದು.

## ಬ್ರಾಹ್ಮಣ ಗ್ರಂಥಗಳ ಭಾಷೆ ಮತ್ತು ಶೈಲಿ

ಬ್ರಾಹ್ಮಣ ಗ್ರಂಥಗಳೆಲ್ಲ ಗದ್ಯಮಯವಾಗಿವೆ. ಸಂಸ್ಕೃತದ ಅತ್ಯಂತ ಪ್ರಾಚೀನವಾದ ಗದ್ಯಭಾಗಗಳು ಇವು. ಬ್ರಾಹ್ಮಣ ಗ್ರಂಥಗಳ ಶೈಲಿ ಪ್ರಸನ್ನವೂ ಉದಾತ್ತವೂ ಆದುದು. ಇಲ್ಲಿ ದೀರ್ಘವಾದ ಸಮಾಸಗಳ ತೊಡಕಿಲ್ಲ, ಕ್ಲಿಷ್ಟವಾದ ಯೋಜನೆಗಳಿಲ್ಲ. ಆದ್ದರಿಂದ ನೇರವಾಗಿ, ಸರಳವಾಗಿ ಅರ್ಥವುಂಟಾಗುತ್ತದೆ. ತಿಳಿಯಾದ ಗಂಗಾಪ್ರವಾಹದಂತೆ ಇದೂ ಪ್ರಸನ್ನಗಂಭೀರವಾಗಿದೆ. ಇಲ್ಲಿನ ಭಾಷೆ ಮಂತ್ರಗಳ ಭಾಷೆಯೇ ಆಗಿದ್ದರೂ ಸ್ವಲ್ಪ ಬದಲಾವಣೆ ಹೊಂದಿದೆ. ಅನೇಕ ಹಳೆಯ ಶಬ್ದಗಳು ಮತ್ತು ಧಾತುಗಳು ಬಳಕೆತಪ್ಪಿವೆ. ಹೊಸ ಹೊಸ ಶಬ್ದಗಳೂ, ಶಬ್ದರೂಪಗಳೂ ರೂಢಿಗೆ ಬಂದಿವೆ. ಪಾಣಿನಿಯ ಸಂಸ್ಕೃತಕ್ಕೂ ಸಂಹಿತೆಗಳ ಸಂಸ್ಕೃತಕ್ಕೂ ನಡುವಣ ಕೊಂಡಿಯಂತೆ ಇದೆ ಬ್ರಾಹ್ಮಣಗಳ ಭಾಷೆ. ಇವುಗಳ ವಾಕ್ಯವಿನ್ಯಾಸ ಸರಳವಾಗಿದೆ ; ಸರಸವಾಗಿದೆ. ಯಜ್ಞೀಯ ವಿಧಾನಗಳ ವರ್ಣನೆ ಬೇಸರಪಡಿಸತಕ್ಕದ್ದೇ. ಆದರೂ ಚಿಕ್ಕ ಚಿಕ್ಕ ವಾಕ್ಯಗಳ ಪ್ರಯೋಗದಿಂದ ಈ ವರ್ಣನೆಯನ್ನು ಸಾಕಷ್ಟು ಆಕರ್ಷಕ ವಾಗಿಯೂ ರೋಚಕವಾಗಿಯೂ ಇಲ್ಲಿ ಮಾಡಿದೆ. ಆಖ್ಯಾನಗಳು ಬಂದಾಗಲಂತೂ ಬಹಳ ಹೃದಯಂಗಮವಾಗುತ್ತದೆ ಇದರ ಶೈಲಿ. ಒಂದು ಉದಾಹರಣೆಯನ್ನು ಇಲ್ಲಿ ಕೊಡ ಬಹುದು.

> "ಸತ್ಯಂ ವೈ ಚಕ್ಷುಃ ಸತ್ಯಂ ಹಿ ವೈ ಚಕ್ಷುಸ್ತಸ್ಮಾತ್‌ಯದಿದಾನೀಂ
> ದ್ವೌ ವಿವದಮಾನಾವೇಯಾತಮ್-'ಅಹಮದರ್ಶಂ', ಅಹಮ
> ಶ್ರೌಷಂ ಇತಿ | ಯ ಏವ ಬ್ರೂಯಾತ್ ಅಹಮದರ್ಶಮಿತಿ
> ತಸ್ಮಾ ಏವ ಶ್ರದ್ದಧ್ಯಾಮ | ತತ್ ಸತ್ಯೇನೈವೈತತ್ ಸಮರ್ಧಯತಿ |"

(ಶತ. ಬ್ರಾ. 1-3-2-27)

## ಬ್ರಾಹ್ಮಣ ಕಾಲದ ಸಾಮಾಜಿಕ ಜೀವನ

ಬ್ರಾಹ್ಮಣ ಗ್ರಂಥಗಳ ಕಾಲದ ಪ್ರಧಾನಧರ್ಮ ಯಾಗಾದ್ಯನುಷ್ಠಾನವೇ. ಯಾಗಗಳ ಸೂಕ್ಷ್ಮಾತಿಸೂಕ್ಷ್ಮ ವಿವರಣೆಗಳನ್ನು ಈ ಗ್ರಂಥಗಳು ವಿಸ್ತಾರವಾಗಿ ಕೊಡುತ್ತವೆ. ಯಾಗಾದ್ಯನುಷ್ಠಾನಗಳನ್ನು ತಪ್ಪದೆ ಮಾಡಬೇಕೆಂಬುದೇ ಬ್ರಾಹ್ಮಣಗಳ ಸಂದೇಶ. ಅಗ್ನೀಂಧನವೇ ಮೊದಲಾದ ಕರ್ಮಗಳ ಅತಿಸೂಕ್ಷ್ಮವಾದ ವಿವರಣೆಯೂ ಇಲ್ಲಿದೆ. 'ಯಜ್ಞೋ ವೈ ಶ್ರೇಷ್ಠತಮಂ ಕರ್ಮ' (ಶತಪಥ. ಬ್ರಾ. 1-7-3-5) ಎಂದು ಹೇಳಿ ಇಲ್ಲಿ ಯಜ್ಞದ ಪ್ರಶಂಸೆಮಾಡಿದ್ದಾರೆ. ಸರ್ವದೇವತೆಗಳಲ್ಲಿ ಅತ್ಯಂತ ಶ್ರೇಷ್ಠನಾದ ಪ್ರಜಾಪತಿ, ವಿಷ್ಣು, ಆದಿತ್ಯ ಮುಂತಾದ ದೇವತೆಗಳು ಯಜ್ಞರೂಪಿಗಳೆಂದು ಹೇಳಿದೆ.

'ಏಷ ವೈ ಪ್ರತ್ಯಕ್ಷಂ ಯಜ್ಞೋಯತ್ ಪ್ರಜಾಪತಿಃ' (ಶ. ಬ್ರಾ. 4-3-43) 'ಯಜ್ಞೋ ವೈ ವಿಷ್ಣುಃ' 'ಸ ಯಃ ಯಜ್ಞೋಽಸೌ ಆದಿತ್ಯಃ' (ಶ. ಬ್ರಾ. 14-1-1-16) ಮುಂತಾದ ಮಾತುಗಳು ಇದನ್ನು ಸಮರ್ಥಿಸುತ್ತವೆ. ಈ ವಿಶ್ವದಲ್ಲಿ ಯಜ್ಞವು ಪರಮಾರಾಧ್ಯವಾದುದು. ಪುರುಷಸೂಕ್ತದಲ್ಲಿ ಪ್ರತಿಪಾದಿಸಿರುವಂತೆ ಯಜ್ಞದಿಂದಲೇ ಸಕಲ ಸೃಷ್ಟಿಯೂ ಆಯಿತು. ಅಗ್ನಿಹೋತ್ರಾದಿ ಕರ್ಮನಿರತರು ಆಯಾ ಕರ್ಮಗಳ ಅನುಷ್ಠಾನದಿಂದ ಸಕಲ ಪಾಪಗಳನ್ನೂ ಕಳೆದುಕೊಳ್ಳುತ್ತಾರೆ- "ಸರ್ವಸ್ಮಾತ್ ಪಾಪ್ಮನೋ ನಿರ್ಮುಚ್ಯತೇ ಯ ಏವಂ ವಿದ್ವಾನಗ್ನಿಹೋತ್ರಂ ಜು ಹೋತಿ" (ಶ. ಬಾ. 2-3-1-6). ಅಶ್ವಮೇಧ ಯಜ್ಞವನ್ನಾಚರಿಸುವವನು ತನ್ನ ಸಮಸ್ತ ಪಾಪಗಳಿಂದಲೂ ಬ್ರಹ್ಮಹತ್ಯಾದಿ ದೋಷಗಳಿಂದಲೂ ಬಿಡುಗಡೆ ಹೊಂದುತ್ತಾನೆ (ಶ. ಬ್ರಾ. 13-5-4-1) ಯಜ್ಞಾದ್ಯನುಷ್ಠಾನಗಳಲ್ಲಿ ಜನರಿಗೆ ಅಪಾರವಾದ ಶ್ರದ್ಧೆ ಮತ್ತು ವಿಶ್ವಾಸವಿದ್ದ ಕಾಲವದು. ಭರತಖಂಡದ ಮೂಲೆ ಮೂಲೆಗಳಲ್ಲಿಯೂ ಜನ ಶ್ರದ್ಧಾಪೂರ್ಣರಾಗಿ ದಿನದಿನವೂ ಬಗೆಬಗೆಯಾದ ಯಾಗಾದ್ಯನುಷ್ಠಾನಗಳಲ್ಲಿ ನಿರತರಾಗಿದ್ದ ಕಾಲವದು. ಯಾಗಾಚರಣೆಯಿಂದ ಪಾಪನಿರ್ಮೋಚನವಾಗುವುದೆಂಬ ನಂಬಿಕೆ ಹರಡಿದ್ದ ಕಾಲವದು. ಹಾವು ತನ್ನ ಪೊರೆಯನ್ನು ಕಳಚಿಬಿಸುಡುವಂತೆ ಪಾಪದ ಪೊರೆಯನ್ನು ಕಳಚಿ ಬಿಸುಡುತ್ತಾನೆ ಶಾಕಲಾಹವನ ಮಾಡುವವನು ಎಂದು ಗೋಪಥ ಬ್ರಾಹ್ಮಣ ಹೇಳುತ್ತದೆ.

ತದ್ಯಥಾ ಅಹಿಃ ಜೀರ್ಣಾಯಾಸ್ತ್ವಚೋ ನಿರ್ಮುಚ್ಯೇತ, ಇಷೀಕಾ ವಾಮುಂಜಾತ್ |
ಏವಂ ಹೈವೈತೇ ಸರ್ವಸ್ಮಾತ್ ಪಾಪ್ಮನಃ ಸಂಪ್ರಮುಚ್ಯಂತೇಯೇ ಶಾಕಲಾಂ ಜುಹ್ವತಿ ||
(ಗೋ. ಬ್ರಾ. ಉತ್ತರ 4-6)

ಯಾಗ ಸಂಸ್ಥೆ ಸಂಹಿತೆಗಳ ಕಾಲಕ್ಕೂ ಹಿಂದಿನಿಂದಲೂ ಸುಪ್ರತಿಷ್ಠಿತವಾಗಿತ್ತು. ಇದು ಬ್ರಾಹ್ಮಣಗಳ ಕಾಲದಲ್ಲಿ ಇನ್ನೂ ವಿಸ್ತಾರವಾಗಿ ಹರಡಿತು. ದೇಶಾದ್ಯಂತ ಯಾಗಾದ್ಯನುಷ್ಠಾನಗಳಲ್ಲಿ ವಿಶ್ವಾಸಮೂಡಿತು. ಎಲ್ಲ ನದಿಗಳ ತೀರದಲ್ಲಿಯೂ ಎಲ್ಲ ಪುಣ್ಯಕ್ಷೇತ್ರಗಳಲ್ಲಿಯೂ ಶ್ರದ್ಧಾಳುಗಳಾದ ಜನರು ಕರ್ಮನಿರತರಾಗಿರುತ್ತಿದ್ದರು.

ಸಂಹಿತೆಗಳ ಕಾಲದಲ್ಲಿ ಪ್ರಾಧಾನ್ಯ ಹೊಂದಿದ್ದ ಅನೇಕ ದೇವತೆಗಳು ಬ್ರಾಹ್ಮಣಗಳ ಕಾಲದಲ್ಲಿ ಹಿನ್ನೆಲೆಗೆ ಹೋದರು. ಅವರ ಬದಲು ಅನೇಕ ಹೊಸ ಹೊಸ ದೇವತೆಗಳು ಮೂಡಿ ಬಂದರು. ಋಗ್ವೇದದಲ್ಲಿ ಇಂದ್ರ, ಅಗ್ನಿ, ವರುಣ ಮುಂತಾದ ದೇವತೆಗಳು ಪ್ರಧಾನರಾಗಿದ್ದರು. ವಿಷ್ಣು, ರುದ್ರ ಮುಂತಾದ ದೇವತೆಗಳು ಅಪ್ರಧಾನರಾಗಿದ್ದರು. ಬ್ರಾಹ್ಮಣ ಗ್ರಂಥಗಳ ಕಾಲದಲ್ಲಿ ವಿಷ್ಣು, ರುದ್ರ ಇವರಿಗೆ ಪರಮಪ್ರಾಧಾನ್ಯ ದೊರಕಿತು. ಪ್ರಜಾಪತಿದೇವತೆಗೆ ಅಗ್ರಸ್ಥಾನ ಲಭಿಸಿತು.

'ಅಗ್ನಿರ್ವೈ ದೇವಾನಾಂ ಅವಮಃ ವಿಷ್ಣುಃ ಪರಮಃ' ಎಂದು ಐತರೇಯ ಬ್ರಾಹ್ಮಣದ ಆರಂಭದಲ್ಲಿಯೇ ವಿಷ್ಣುವಿನ ಪಾರಮ್ಯವನ್ನು ಹೇಳಿದೆ. ರುದ್ರನಿಗೆ 'ಮಹಾದೇವ' ಎಂಬ ಅಭಿಧಾನ ಕೊಡಲ್ಪಟ್ಟಿದೆ. ಪ್ರಜಾಪತಿಯನ್ನು ಜಗತ್ತಿನ ಸೃಷ್ಟಿಕರ್ತನೆಂದು ಕೊಂಡಾಡಿದೆ. ದೇವತೆಗಳನ್ನೂ, ಭೂತಕಾಲದ ಪದಾರ್ಥಗಳನ್ನೂ ಸೃಜಿಸಿದವನವನು.

ಬ್ರಾಹ್ಮಣ ಯುಗದ ಸಮಾಜದಲ್ಲಿ ಚತುರ್ವರ್ಣಗಳ ವ್ಯವಸ್ಥೆ ಸುಪ್ರತಿಷ್ಠಿತವಾಗಿತ್ತು. ವೈದಿಕವಾದ ಯಾಗಾದಿಗಳನ್ನು ನಿರ್ವಹಿಸುತ್ತಿದ್ದ ಬ್ರಾಹ್ಮಣನಿಗೆ ಅಗ್ರತಮವಾದ ಸ್ಥಾನವಿತ್ತು. ಬ್ರಾಹ್ಮಣರಲ್ಲಿಯೂ ವೇದಶಾಸ್ತ್ರಗಳ ಅಭ್ಯಾಸ ಮಾಡಿದವನಿಗೆ ಹೆಚ್ಚಿನ ಗೌರವವಿತ್ತು. 'ಯೇ ಬ್ರಾಹ್ಮಣಾಃ ಶುಶ್ರುವಾಂಸೋಽನೂಚಾನಾಸ್ತೇ ಮನುಷ್ಯದೇವಾಃ' (ಶ. ಬ್ರಾ. 2-2-2-6) 'ವಿದ್ವಾಂಸೋ ಹಿ ದೇವಾಃ' (ಶ. ಬ್ರಾ. 3-7-3-10) ಎಂಬುವು ಇದನ್ನು ಸೂಚಿಸುತ್ತವೆ. 'ಏತೇ ದೇವಾಃ ಪ್ರತ್ಯಕ್ಷಂ ಯದ್ ಬ್ರಾಹ್ಮಣಾಃ' ಎಂದು ತೈತ್ತಿರೀಯ ಸಂಹಿತೆಯಲ್ಲಿ ಬ್ರಾಹ್ಮಣನ ಅಗ್ರಸ್ಥಾನದ ವಿವರಣೆ ಇದೆ.

ಶತಪಥ ಬ್ರಾಹ್ಮಣದಲ್ಲಿ ದೇವತೆಗಳು ಎರಡು ಬಗೆಯವರೆಂದು ಹೇಳಿದೆ. ಹವಿಸ್ಸನ್ನು ಭುಂಜಿಸುವ ಅಗ್ನಿ ಮುಂತಾದವರು ಒಂದು ಬಗೆ. ಮತ್ತೊಂದು ಬಗೆಯ ದೇವತೆ ಮನುಷ್ಯದೇವ. ಯಜ್ಞದಲ್ಲಿ ಇವರಿಬ್ಬರಿಗೂ ವಿಭಾಗವಿದೆ. ದೇವತೆಗಳಿಗೆ ಆಹುತಿಗಳ ಸಮರ್ಪಣೆ. ಮನುಷ್ಯದೇವರಿಗೆ ದಕ್ಷಿಣೆ. ಯಜಮಾನನು ಇವರಿಬ್ಬರನ್ನೂ ಹೀಗೆ ತೃಪ್ತಿಪಡಿಸಿದರೆ ಕಲ್ಯಾಣ ಪ್ರಾಪ್ತಿಯುಂಟು. ರಾಜನು ತನ್ನ ಸಮಸ್ತ ರಾಜ್ಯವನ್ನೂ ದಕ್ಷಿಣೆಯ ರೂಪದಲ್ಲಿ ದಾನ ಮಾಡಬಹುದು. ಆದರೆ ಬ್ರಾಹ್ಮಣನ ಸಂಪತ್ತಿಯನ್ನು ಮಾತ್ರ ಅವನು ಬಿಡಬೇಕು. ಬ್ರಾಹ್ಮಣನು ಭೂಲೋಕದ ರಾಜರುಗಳಿಗೆ ಪ್ರಜೆಯಾಗನು. ಅವನು ಸೋಮರಾಜನ ಪ್ರಜೆ. 'ಸೋಮೋಽಸ್ಮಾಕಂ ಬ್ರಾಹ್ಮಣಾನಾಂ ರಾಜಾ' ಎಂಬುವುದು ಇದನ್ನು ಸಮರ್ಥಿಸುತ್ತದೆ. (ಶತ. ಬ್ರಾ. 13-3-5-3) ಬ್ರಾಹ್ಮಣನ ಆದರ್ಶ ಯಾವುದಾಗಬೇಕು ? ಇದಕ್ಕೆ ಬ್ರಾಹ್ಮಣಗಳ ಉತ್ತರ ಹೀಗಿದೆ : 'ತ ದ್ವೈವ ಬ್ರಾಹ್ಮಣೇನೈಷ್ಟವ್ಯಂ ಯದ್ ಬ್ರಹ್ಮವರ್ಚಸೀ ಸ್ಯಾದಿತಿ' (ಶತ. ಬ್ರಾ. 1-9-3-16). 'ಯೋವೈ ಬ್ರಾಹ್ಮಣಾನಾಂ ಅನೂಚಾನತಮಃ ಸ ಏಷಾಂ ವೀರ್ಯವತ್ತಮಃ' (ಶತ. ಬ್ರಾ. 4-6-6-5).ಬ್ರಾಹ್ಮಣನು ಬ್ರಹ್ಮವರ್ಚಸೀ ಆಗಬೇಕು. ವೇದಾಧ್ಯಯನದಿಂದ ಮಂತ್ರಸಿದ್ಧಿಯಿಂದ ತೇಜಸ್ವಿ ಆಗಬೇಕು. ಹೀಗೆ ಸರ್ವಶ್ರೇಷ್ಠನಾಗಿ ವೀರ್ಯವತ್ತಮನಾಗಬೇಕು. ಬ್ರಾಹ್ಮಣನ ಬಲ ಅವನ ವಾಕ್ಶಕ್ತಿಯಲ್ಲಾಗಬೇಕು. ಅವನು 'ಪುರುಷನ' ಮುಖದಿಂದ ಸೃಷ್ಟನಾದವನಲ್ಲವೆ? 'ತಸ್ಮಾತ್ ಬ್ರಾಹ್ಮಣೋ ಮುಖೇನ ವೀರ್ಯಂ ಕರೋತಿ | ಮುಖತೋ ಹಿ ಸೃಷ್ಟಃ |' (ತಾಂ. ಬ್ರಾ. 6-1-6).

ಇಂಥ ಮಂತ್ರಸಿದ್ಧನೂ ಬ್ರಹ್ಮವರ್ಚಸಿಯೂ ಆದ ಬ್ರಾಹ್ಮಣನ ಅಧೀನದಲ್ಲಿ ಕ್ಷತ್ರಿಯನಿದ್ದರೆ ಆ ರಾಷ್ಟ್ರದ ಮಂಗಳವಾಗುತ್ತದೆ.

> 'ತದ್ಯತ್ರ ಬ್ರಾಹ್ಮಣಃ ಕ್ಷತ್ರಂ ವಶಮೇತಿ ತದ್ರಾಷ್ಟ್ರಂ ಸಮೃದ್ಧಂ
> ತದ್ವೀರವದಾಹಾಸ್ಮಿನ್ ವೀರೋ ಜಾಯತೇ |' (ಐತ. ಬ್ರಾ.-8-9)

ರಾಷ್ಟ್ರದ ರಕ್ಷಕನು ಕ್ಷತ್ರಿಯ. ರಾಷ್ಟ್ರದ ಅಭಿವೃದ್ಧಿ ವೈಶ್ಯನಿಂದ. ಚತುರ್ಥವರ್ಣದವರು ಸೇವಾಧರ್ಮದೀಕ್ಷಿತರಾಗಿದ್ದರು. ಹೀಗೆ ಬ್ರಾಹ್ಮಣಯುಗದಲ್ಲಿ ಚತುರ್ವರ್ಣಗಳ ವ್ಯವಸ್ಥೆ ನೆಲಸಿತ್ತು.

ಬ್ರಾಹ್ಮಣಗಳ ಕಾಲದಲ್ಲಿಯೂ ನೈತಿಕ ಹಾಗೂ ಧಾರ್ಮಿಕವಾದ ಆಚರಣೆಗೆ ಬಹಳ

ಮಹತ್ವವಿತ್ತು. ನೀತಿನಿಯಮಗಳ ಪಾಲನೆಗೆ ಉನ್ನತವಾದ ಸ್ಥಾನವನ್ನು ಕೊಡಲಾಗಿತ್ತು. ಸಮಾಜದ ಸರ್ವತೋಮುಖವಾದ ಕಲ್ಯಾಣಕ್ಕಾಗಿ ವ್ಯಕ್ತಿಗಳು ಪರಿಶುದ್ಧವಾದ ನೈತಿಕ ಜೀವನವನ್ನು ಬಾಳಬೇಕೆಂಬ ಆದರ್ಶವನ್ನು ಮುಂದಿಟ್ಟಿದ್ದಿತು. ವ್ಯಕ್ತಿಜೀವನ ಹಸನಾಗಿ ವಿಕಸಿಸಬೇಕಾದರೆ ಸತ್ಯ ಮತ್ತು ಧರ್ಮಗಳ ಪಾಲನೆ ಆವಶ್ಯಕವೆಂದು ಸಾರಿತು. ಯಾಗಗಳಿಗೆ ಪ್ರಾಧಾನ್ಯ ಕೊಟ್ಟ ಮಾತ್ರಕ್ಕೆ ಇತರ ವಿಚಾರಗಳನ್ನು ಅದು ಉದಾಸೀನಮಾಡಿತೆಂದು ಹೇಳುವುದು ಸರಿಯಾಗದು. ಪ್ರತಿಯೊಬ್ಬ ವ್ಯಕ್ತಿಯೂ ಸತ್ಯವನ್ನೇ ನುಡಿಯಬೇಕೆಂಬುದು ಅದರ ಆದೇಶ. ಶತಪಥ ಬ್ರಾಹ್ಮಣ 'ಅಮೇಧ್ಯೋ ವೈ ಪುರುಷೋ ಯದನೃತಂ ವದತಿ' (ಶ. ಬ್ರಾ. 3-1-3-18) ಎಂದು ಹೇಳಿ ಸುಳ್ಳು ಹೇಳುವವನು ಯಜ್ಞಕ್ಕೆ ಅರ್ಹನಲ್ಲವೆಂದು ತಿಳಿಸುತ್ತದೆ. ಸುಳ್ಳು ಹೇಳುವುದೆಂದರೆ ಅಗ್ನಿಗೆ ಜಲಸೇಚನೆ ಮಾಡಿದಂತೆ. ಸತ್ಯಭಾಷಣ ಅಗ್ನಿಗೆ ಆಜ್ಯಾಹುತಿ ಮಾಡಿದಂತೆ.[4]

ಪಾಪಾಚರಣೆಯ ಪ್ರಭಾವವನ್ನು ಮಾರ್ಮಿಕವಾಗಿ ಬ್ರಾಹ್ಮಣ ಗ್ರಂಥ ತಿಳಿಸುತ್ತದೆ. ಅದೊಂದು ವಿಷವ್ಯೂಹವಿದ್ದಂತೆ. ಒಮ್ಮೆ ಪಾಪಾಚರಣೆಗೆ ಬಿದ್ದರೆ ಅದು ಮುಂದೆ ಮತ್ತೊಂದಕ್ಕೆ ಹಾಗೂ ಮಗುದೊಂದಕ್ಕೆ ಒಯ್ಯುತ್ತದೆ.

'ಯಃ ಸಕೃತ್ ಪಾಪಕಂ ಕುರ್ಯಾತ್ ಕುರ್ಯಾದೇನಸ್ತತೋ
ಅಪರಮ್' (ಐ. ಬ್ರಾ.-7-17) ಎಂದು ಎಚ್ಚರಿಸುತ್ತದೆ.

ವಾಗ್ದೇವಿಗೆ ಸತ್ಯ ಮತ್ತು ಅನೃತ ಎರಡು ಸ್ತನಗಳು. ಸತ್ಯ ಉಪಾಸಕರನ್ನು ಕಾಪಾಡುತ್ತದೆ; ಅನೃತ ನಾಶಪಡಿಸುತ್ತದೆ ಎಂದು 'ವಾಚೋ ವಾವ ತೌ ಸ್ತನೌ ಸತ್ಯಾನೃತೇ ವಾವ ತೇ | ಅವತ್ಯೇನಂ ಸತ್ಯಂ ನೈತಮನೃತಂ ಹಿನಸ್ತಿ ಯ ಏವಂ ವೇದ |' (ಐ. ಬ್ರಾ. -4-1) ತಿಳಿಸುತ್ತದೆ.

ಐತರೇಯ ಬ್ರಾಹ್ಮಣದಲ್ಲಿ ಸತ್ಯ ಮತ್ತು ಶ್ರದ್ಧೆಗಳು ಒಂದಾಗಿ ಕೂಡಿ ಸ್ವರ್ಗ ಪ್ರಾಪ್ತಿಯನ್ನುಂಟುಮಾಡುತ್ತವೆ ಎಂದು ಮನೋಜ್ಞವಾಗಿ ವರ್ಣಿಸಿದೆ.

'ಶ್ರದ್ಧಾ ಪತ್ನೀ ಸತ್ಯಂ ಯಜಮಾನಃ | ಶ್ರದ್ಧಾ ಸತ್ಯಂ ತದಿತ್ಯುತ್ತಮಂ ಮಿಥುನಮ್ | ಶ್ರದ್ಧಯಾ ಸತ್ಯೇನ ಮಿಥುನೇನ ಸ್ವರ್ಗಾನ್ ಲೋಕಾನ್ ಜಯತೀತಿ |' (ಐ. ಬ್ರಾ. 7-10).

ದಾನ ಮಾಡದವನು 'ಅನೃತ'ನೆಂದು ಕರೆಯಲ್ಪಡುವನು. ದಾನ ಮಾಡುವುದು ಉತ್ತಮಧರ್ಮ. ಅದನ್ನು ಪಾಲಿಸಬೇಕಾದುದು ಎಲ್ಲರ ಕರ್ತವ್ಯ. 'ಕೋಽನದ್ಧಾ ಪುರುಷ ಇತಿ ? ನ ದೇವಾನ್ ನ ಪಿತೄನ್ ನ ಮನುಷ್ಯಾನ್ ಇತಿ |' (ಐ. ಬ್ರಾ. 7-9).

ಸಾಯಂಕಾಲದಲ್ಲಿ ಬರುವ ಅತಿಥಿಯನ್ನು ಯಾವ ರೀತಿಯಲ್ಲಿಯೂ ನಿರಾಕರಣ ಮಾಡಬಾರದು. 'ತಸ್ಮಾದಾಹುರ್ನ ಸಾಯಂ ಅತಿಥಿರಪರುಧ್ಯಃ' (ಐ. ಬ್ರಾ. 5-30). ಅತಿಥಿ ಸೇವೆ ಮಾಡುವವನು ಪುಷ್ಟನಾಗಿ ಕಾಣುತ್ತಾನೆ-'ಯದಾ ವಾ ಅತಿಥಿಂ ಪರಿವೇಷತ್ಯಾಪೀನ ಇವ ವೈ ಸ ತರ್ಹಿ ಭವತಿ.' (ಐ. ಬ್ರಾ. 1-17). ಅತಿಥಿ ಪೂಜೆ ಯಜ್ಞಕ್ಕೆ ಮುಕುಟಪ್ರಾಯವಾದು

---

4. 'ಸ ಯಃ ಸತ್ಯಂವದತಿ ಯಥಾ ಅಗ್ನಿಂ ಸಮಿದ್ಧಂ ತಂ ಘೃತೇನಾಭಿಷಿಂಚೇತ್ ಏವಂ ಹೈನಂ ಸ ಉದ್ದೀಪಯತಿ ತಸ್ಯ ಭೂಯೋ ಭೂಯ ಏವ ತೇಜೋ ಭವತಿ | ಶ್ವಃ ಶ್ವಃ ಶ್ರೇಯಾನ್ ಭವತಿ | ಅಥ ಯೋ ಅನೃತಂವದತಿ ಯಥಾ ಅಗ್ನಿಂ ಸಮಿದ್ಧಂ ತಮುದಕೇನಾಭಿಷಿಂಚೇತ, ಏವಂ ಹೈನಂ ಜಾಸಯತಿ ತಸ್ಯ ಕನೀಯಃ ಕನೀಯ ಏವ ತೇಜೋಭವತಿ ಶ್ವಃ ಶ್ವಃ ಪಾಪೀಯಾನ್ ಭವತಿ | ತಸ್ಮಾನ್ ಸತ್ಯಮೇವ ವದೇತ್ |' (ಶ. ಬ್ರಾ. 2-2-2-19)

'ತಸ್ಮಾದಾಹಿತಾಗ್ನಿರ್ನಾನೃತಂ ವದೇತ್ |' (ತೈ. ಬ್ರಾ-1-1)

ದೆಂದು-'ಶಿರೋವಾ ಏತದ್ಯಜ್ಞಸ್ಯ ಯದ್ ಅತಿಥ್ಯಮ್' (ಐ. ಬ್ರಾ. 1-25) ಸಾರಿ ಹೇಳಲಾಗಿದೆ. ಸಮಾಜದಲ್ಲಿ ಸ್ತ್ರೀಯರಿಗೆ ಉನ್ನತ ಸ್ಥಾನವಿತ್ತು. ಯಾಗದೀಕ್ಷಿತನ ಪತ್ನಿಗೆ ಯಾಗದಲ್ಲಿ ಸಮಸಮವಾದ ಸ್ಥಾನವಿತ್ತು. ಪತ್ನಿಯಿಲ್ಲದವನು ಯಾಗಮಾಡಲು ಅನಧಿಕಾರಿಯಾಗಿದ್ದನು. 'ಅಯಜ್ಞೋ ವಾ ಏಷ ಯೋಽಪತ್ನೀಕಃ' (ತೈ. ಬ್ರಾ. 2-2-2-6). ಸಮಾಜದಲ್ಲಿ ವೀರ ಸಂತಾನಕ್ಕೆ, ಗುಣಶಾಲಿಯಾದ ಪುತ್ರಲಾಭಕ್ಕೆ ಜನ ಹಾತೊರೆಯುತ್ತಿದ್ದರು. ಇಂಥ ಪುತ್ರನಿಂದ ಸ್ವರ್ಗಪ್ರಾಪ್ತಿಯೆಂಬ ನಂಬಿಕೆ ಬೆಳೆದಿತ್ತು. ಪತಿವ್ರತಾ ಸ್ತ್ರೀಗೆ ಬಹಳ ಗೌರವವಿತ್ತು. ಇವುಗಳೆಲ್ಲದರಿಂದ ಆ ಕಾಲದಲ್ಲಿ ಉನ್ನತ ಮಟ್ಟದ ನೈತಿಕ ಜೀವನವನ್ನು ಜನ ಬಾಳುತ್ತಿದ್ದರೆಂದೂ, ಬಾಳಲು ಆಶಿಸುತ್ತಿದ್ದರೆಂದೂ ತಿಳಿಯಬಹುದು. ಭರತಖಂಡದ ಉನ್ನತಾದರ್ಶಗಳಾದ ಸತ್ಯ, ದಾನ, ಧರ್ಮ, ಅತಿಥಿಸತ್ಕಾರ ಮುಂತಾದುವುಗಳಿಗೆ ಪ್ರಥಮಸ್ಥಾನವನ್ನು ಎಂದಿನಿಂದಲೂ ಕಲ್ಪಿಸಿಕೊಂಡು ಬರುತ್ತಿದ್ದರೆಂಬುದರ ಅರಿವೂ ಉಂಟಾಗುತ್ತದೆ. ವ್ಯಕ್ತಿಜೀವನ ಪರಿಶುದ್ಧವಾಗಿ, ತ್ಯಾಗಮಯವಾಗಿ, ಧರ್ಮಯುಕ್ತವಾಗಿ ಕಲ್ಯಾಣತಮವಾಗಿತ್ತು. ಸಮಾಜದ ಮಂಗಳ ಇಂಥ ಶುದ್ಧ ಜೀವನದಿಂದ ಸಿದ್ಧವಾಗುತ್ತಿತ್ತು. ಯಾಗದ ಆದರ್ಶವಾದರೂ ಶುದ್ಧಭಾವದಿಂದ ತನ್ನನ್ನೂ ತನ್ನದನ್ನೂ ತನ್ನ ಇಷ್ಟ ದೇವತೆಗಳಿಗೆ ಅನನ್ಯಭಾವದಿಂದ ಸಮರ್ಪಣೆಮಾಡುವುದೇ ಆಗಿದೆ. ಆ ಕಾರಣ ಜನರ ಜೀವನ ಧಾರ್ಮಿಕವಾಗಿ, ನಿಃಸ್ವಾರ್ಥವಾಗಿ, ಕಲ್ಯಾಣತಮವಾಗಿ, ದೇವತಾಪರವಾಗಿ ಮುಂದುವರಿಯುತ್ತಿತ್ತು. ಇಂದ್ರಾಗ್ನೀ ಯಮವರುಣ ಮುಂತಾದ ದೇವತೆಗಳಲ್ಲಿ ಅನನ್ಯ ಭಕ್ತಿಶ್ರದ್ಧೆಗಳಿಂದ ತಮ್ಮ ಸರ್ವಸ್ವವನ್ನೂ ವಿನಿಯೋಗಿಸಿ ಯಜ್ಞವಿಧಾನಗಳನ್ನು ಜನತೆ ಅನುಷ್ಠಿಸುತ್ತಿದ್ದ ಕಾಲವದು. ಹೀಗೆ ಪ್ರಚಂಡವಾದ ಕ್ರಿಯಾಶಕ್ತಿ ಜ್ಞಾನಶಕ್ತಿಗಳ ಅಪೂರ್ವ ಸಂಗಮ ಕಾಲ ಬ್ರಾಹ್ಮಣಗಳ ಕಾಲ.

## ಋಗ್ವೇದ ಬ್ರಾಹ್ಮಣಗಳು

### ಐತರೇಯ ಬ್ರಾಹ್ಮಣ

ಋಗ್ವೇದಕ್ಕೆ ಸೇರಿದ ಬ್ರಾಹ್ಮಣಗಳಲ್ಲಿ ಮೊದಲು ಉಲ್ಲೇಖಿಸಬೇಕಾದುದು ಐತರೇಯ ಬ್ರಾಹ್ಮಣವನ್ನು. ಇದರ ರಚಯಿತಾ ಮಹಿದಾಸ ಐತರೇಯ. ಈ ಹೆಸರು ಛಾಂದೋಗ್ಯ ಉಪನಿಷತ್ತಿನಲ್ಲಿ ಬರುತ್ತದೆ. ಇದು ಆ ಉಪನಿಷತ್ತಿಗಿಂತ ಪ್ರಾಚೀನವೆಂಬುದು ಸಹಜವಾಗಿ ಗೊತ್ತಾಗುತ್ತದೆ. ಸಾಯಣರು ತಮ್ಮ ಭಾಷ್ಯದಲ್ಲಿ ಆ ಹೆಸರನ್ನು ಕುರಿತ ಕಥಾನಕವೊಂದನ್ನು ಕೊಡುತ್ತಾರೆ. ಜಾಣನಲ್ಲದ ಕಾರಣ ಇವನನ್ನು ಇವನ ತಂದೆ ಮೆಚ್ಚಲಿಲ್ಲವೆಂದೂ ಇವನ ತಾಯಿಯಾದ 'ಇತರಾ' ಭೂಮಿತಾಯಿಯನ್ನು ಬೇಡಿಕೊಳ್ಳಲು ಆ ಮಹಿಯ ದಯೆಯಿಂದ ಇವನು ವಿದ್ವಾಂಸನೂ ಬ್ರಾಹ್ಮಣ ದ್ರಷ್ಟೃವೂ ಆದನೆಂದೂ ಆ ಕಥೆ ತಿಳಿಸುತ್ತದೆ. 'ಇತರಾ' ಶೂದ್ರ ಸ್ತ್ರೀಯಾಗಿರಬಹುದೆಂದೂ 'ಮಹೀದಾಸ'ನೆಂಬ ಹೆಸರೂ ಅದನ್ನೇ ಸೂಚಿಸುವುದೆಂದೂ ಹೇಳಲಾಗಿದೆ. ಆದರೆ ಈ ಕಥೆಯಲ್ಲಿ ಐತಿಹಾಸಿಕ ತಥ್ಯವೇನೂ ಇಲ್ಲ. ಇತರಾ, ಮಹೀದಾಸ ಎಂಬ ಹೆಸರುಗಳ ಮೇಲೆ ಕಟ್ಟಲ್ಪಟ್ಟ ಕಥೆ ಇದಾಗಿರಬೇಕೆಂದು ಊಹಿಸಬಹುದು.

ಐತರೇಯ ಬ್ರಾಹ್ಮಣದಲ್ಲಿ 40 ಅಧ್ಯಾಯಗಳಿವೆ. ಐದು ಐದು ಅಧ್ಯಾಯಗಳನ್ನೊಳಗೊಂಡ ಎಂಟು ಪಂಚಿಕೆಗಳನ್ನಾಗಿ ಇದನ್ನು ವಿಭಾಗ ಮಾಡಿದ್ದಾರೆ. ಒಂದೊಂದು ಪಂಚಿಕೆಯಲ್ಲಿಯೂ ಅನೇಕ ಕಂಡಿಕೆಗಳಿವೆ.

| | | |
|---|---|---|
| ಮೊದಲನೆ ಪಂಚಿಕೆ | — | 30 ಕಂಡಿಕೆಗಳು |
| ಎರಡನೆಯದು | — | 41 |
| ಮೂರನೆಯದು | — | 50 |
| ನಾಲ್ಕನೆಯದು | — | 32 |
| ಐದನೆಯದು | — | 34 |
| ಆರನೆಯದು | — | 36 |
| ಏಳನೆಯದು | — | 34 |
| ಎಂಟನೆಯದು | — | 28 |
| ಒಟ್ಟು ಎಂಟು ಪಂಚಿಕೆಗಳು | — | 285 ಕಂಡಿಕೆಗಳು — 40 ಅಧ್ಯಾಯಗಳು |

ಈ ಬ್ರಾಹ್ಮಣದ ಶೈಲಿ ಸಂಹಿತೆಯ ಭಾಷೆಗಿಂತ ಬಹಳ ದೂರವಾದದ್ದಲ್ಲ. ಇದರಲ್ಲೊಂದು ಬಗೆಯ 'ಸಮಾನತೆ' ಇದೆ. ಅನೇಕ ಪದಸಮುಚ್ಚಯಗಳು ಮತ್ತೆ ಮತ್ತೆ ಆವೃತ್ತವಾಗುತ್ತವೆ. ಶುದ್ಧವಾದ ವೈದಿಕ ಭಾಷಾರೂಪಗಳು ಹೇರಳವಾಗಿವೆ. ಈ ಬ್ರಾಹ್ಮಣದಲ್ಲಿ ಹೋತೃಗಣದ ಋತ್ವಿಕ್ಕುಗಳು ನಡೆಸುವ ಕಾರ್ಯಕಲಾಪಗಳ ವಿವರಣೆ ಇದೆ. ಈ ಬ್ರಾಹ್ಮಣದ ಬಹುಭಾಗ ಏಕವಿರಚಿತವೆಂದು ಹೇಳಬಹುದು. ಅಲ್ಲಲ್ಲಿ ಒಂದೆರಡು ಕಂಡಿಕೆಗಳನ್ನು ಮಾತ್ರ ಇತರರು ಸೇರಿಸಿದ್ದರೂ ಸೇರಿಸಿರಬಹುದು. ಆಶ್ವಲಾಯನ ತರ್ಪಣವಿಧಿಯಲ್ಲಿ 'ಮಹೈತರೇಯ' ವೆಂಬ ಹೆಸರು ಬಂದಿರುವುದನ್ನು ನೋಡಿದರೆ ಇದರ ವಿಸ್ತೃತವಾದ ಪಾಠವೊಂದಿದ್ದಿರಬೇಕೆಂದು ತೋರುತ್ತದೆ. ಸೋಮಯಾಗ ಮತ್ತು ರಾಜಸೂಯಯಾಗಗಳಲ್ಲಿ ಹೋತೃಗಳು ನಡೆಸಬೇಕಾದ ಕಾರ್ಯಕಲಾಪಗಳನ್ನು ಇದು ಪ್ರಧಾನವಾಗಿ ತಿಳಿಸುತ್ತದೆ. ಯಜುರ್ವೇದದಲ್ಲಿ ಪ್ರಸ್ತಾಪಿಸಿರುವಂತೆ ಎಲ್ಲ ಯಾಗಗಳನ್ನು, ಇಷ್ಟಿಗಳನ್ನು ಕುರಿತು ಇದು ವಿವೇಚಿಸುವುದಿಲ್ಲ. ಅಧ್ವರ್ಯು ಅಥವಾ ಉದ್ಗಾತೃವಿನ ಕಾರ್ಯಭಾರವನ್ನು ಇದು ಚರ್ಚಿಸುವುದಿಲ್ಲ. ಇತರ ಇಷ್ಟಿಗಳಲ್ಲಿಯೂ ಯಾಗಗಳಲ್ಲಿಯೂ ಹೋತೃಗಳಿಗೆ ಕೆಲಸವಿದ್ದಾಗ್ಯೂ ಅದು ಅಷ್ಟು ಪ್ರಧಾನವಾಗಿಲ್ಲದ ಕಾರಣ ಅವುಗಳನ್ನೆಲ್ಲಾ ಇಲ್ಲಿ ವಿಚಾರ ಮಾಡಿಲ್ಲ.

ಮೊದಲ ಎರಡು ಪಂಚಿಕೆಗಳಲ್ಲಿಯೂ ಮೂರನೆಯ ಪಂಚಿಕೆಯ ಮೊದಲ ಮೂರು ಅಧ್ಯಾಯಗಳಲ್ಲಿಯೂ (ಅಧ್ಯಾಯ 1 ರಿಂದ 13) ಅಗ್ನಿಷ್ಟೋಮ ಯಾಗದಲ್ಲಿ ಹೋತೃವಿನ ವಿಧಿವಿಧಾನಗಳನ್ನೂ ಕರ್ತವ್ಯಗಳನ್ನೂ ಕುರಿತ ವಿವರವಾದ ವರ್ಣನೆ ಇದೆ. ಈ ಅಗ್ನಿಷ್ಟೋಮ ಸಮಸ್ತ ಸೋಮಯಾಗಗಳಿಗೂ 'ಪ್ರಕೃತಿ'ಯಾದುದು. ಇತರ ಯಾಗಗಳು ಇದರ 'ವಿಕೃತಿಗಳು'. ಆದ್ದರಿಂದಲೇ ಇಲ್ಲಿ ಅಗ್ನಿಷ್ಟೋಮದ ವಿವರಣೆ ವಿಸ್ತಾರವಾಗಿ ಕೊಟ್ಟಿದೆ. ಎರಡನೇ ಪಂಚಿಕೆಯ ಐದನೇ ಅಧ್ಯಾಯದಲ್ಲಿಯೂ ಮೂರನೆಯ ಪಂಚಿಕೆಯ ಮೊದಲ ಮೂರು ಅಧ್ಯಾಯಗಳಲ್ಲಿಯೂ ಪ್ರಾತಃಸವನ, ಮಾಧ್ಯಂದಿನ ಸವನ ಮತ್ತು ಸಾಯಂ ಸವನಗಳಲ್ಲಿ ಉಪಯೋಗಿಸಬೇಕಾದ ಶಸ್ತ್ರ (ಸ್ತೋತ್ರಗಳ) ವರ್ಣನೆ ಇದೆ. ಮೂರನೆಯ ಪಂಚಿಕೆಯ ಕೊನೆಯ ಅಧ್ಯಾಯದಲ್ಲಿ (15ನೇ ಅಧ್ಯಾಯ) ಮತ್ತು ನಾಲ್ಕನೆಯ ಪಂಚಿಕೆಯ ಮೊದಲಿನ ಎರಡು (16-17) ಅಧ್ಯಾಯಗಳಲ್ಲಿಯೂ ಅಗ್ನಿಷ್ಟೋಮದ ವಿಕೃತಿಗಳಾದ ಉಕ್ಥ್ಯ, ಅತಿರಾತ್ರ ಮತ್ತು ಷೋಡಶೀ ಯಾಗಗಳ ವಿವೇಚನ ಇದೆ. ಅಲ್ಲಿಂದ ಮುಂದೆ (18ನೇ ಅಧ್ಯಾಯದಲ್ಲಿ) ಅದೇ ಪಂಚಿಕೆಯ ಮೂರನೇ ಅಧ್ಯಾಯದಲ್ಲಿ ವರ್ಷಪೂರ್ತಿ ನಡೆಯುವ ಸತ್ರಗಳ ಹಾಗೂ ಅವುಗಳಲ್ಲಿ

ಹೋತೃಗಳ ಕಾರ್ಯಭಾರದ ವಿವರಣೆ ಇದೆ. ನಾಲ್ಕನೇ ಪಂಚಿಕೆಯ 4–5ನೇ ಅಧ್ಯಾಯಗಳಲ್ಲಿ ಮತ್ತು ಐದನೇ ಪಂಚಿಕೆಯ ಮೊದಲನೆಯ ನಾಲ್ಕು ಅಧ್ಯಾಯಗಳಲ್ಲಿ (ಅಧ್ಯಾಯಗಳು 19 ರಿಂದ 24 ಪೂರ್ತಿ) 'ದ್ವಾದಶಾಹ'ದಲ್ಲಿ ಹೋತೃಗಳ ಕರ್ತವ್ಯದ ವಿವರಗಳಿವೆ. ಆರನೆಯ ಪಂಚಿಕೆಯಲ್ಲಿ ಕನಿಷ್ಠ ಒಂದು ವಾರದಿಂದ ಹಿಡಿದು ಅನೇಕ ವಾರಗಳವರೆಗೆ (ವಾರವೆಂದರೆ ಆರು ದಿನಗಳ ವಾರ. ಇದನ್ನೇ ಷಡಹ ಎಂದು ವೇದ ವಾಙ್ಮಯದಲ್ಲಿ ಹೇಳಿದೆ) ನಡೆಯುವ ಸೋಮ ಯಾಗಗಳಲ್ಲಿ ಹೋತೃಗಳ ಮತ್ತು ಅವರ ಸಹಾಯಕರ ಕರ್ತವ್ಯಗಳ ವಿವರಣೆ ಇದೆ. ಏಳು ಮತ್ತು ಎಂಟನೇ ಪಂಚಿಕೆಗಳು ಐತಿಹಾಸಿಕವಾಗಿ ಮುಖ್ಯವಾದವು. ಕ್ಷತ್ರಿಯರು ನಡೆಸುವ ಅನೇಕಾನೇಕ ಯಾಗಗಳ ವಿವರಣೆ ಇಲ್ಲಿದೆ. ಏಳನೇ ಪಂಚಿಕೆಯ ಪ್ರಧಾನ ವಿಚಾರ 'ರಾಜಸೂಯ.' ಶುನಶ್ಶೇಫನ ಉಪಾಖ್ಯಾನ ಈ ಪ್ರಕರಣದಲ್ಲಿಯೇ ಬರುತ್ತದೆ. ಎಂಟನೆಯ ಪಂಚಿಕೆಯಲ್ಲಿ 'ಐಂದ್ರಮಹಾಭಿಷೇಕ'ದ ಹಾಗೂ ತದನಂತರ ಅದರ ಆಧಾರದಿಂದ ಬಂದಿರುವ ಚಕ್ರವರ್ತಿಗಳ ಮಹಾಭಿಷೇಕದ ಸುಂದರವರ್ಣನೆ ಇದೆ. ಇಂಥ ಮಹಾಭಿಷೇಕವನ್ನು ಮಾಡಿಸಿಕೊಂಡ ಮಹಾರಾಜರುಗಳ ಹೆಸರುಗಳನ್ನೂ ಇಲ್ಲಿ ಕಂಡಿಕೆಯೊಂದರಲ್ಲಿ ಹೇಳಿದೆ. ಕೊನೆಯ ಅಧ್ಯಾಯದಲ್ಲಿ ಪುರೋಹಿತನ ಧಾರ್ಮಿಕ ಮತ್ತು ರಾಜನೀತಿಕ ಮಹತ್ವವನ್ನು ಪ್ರತಿಪಾದಿಸಿದೆ.

ಐತರೇಯ ಬ್ರಾಹ್ಮಣ ಅನೇಕ ನವೀನ ವಿಚಾರಗಳನ್ನು ಪ್ರತಿಪಾದಿಸುವ ಕಾರಣ ಮಹತ್ತ್ವಪೂರ್ಣವಾಗಿದೆ. ವೈದಿಕ ಸಮಾಜದಲ್ಲಿ ವಿಷ್ಣುವಿಗೆ ಉನ್ನತ ಸ್ಥಾನವಿದ್ದುದನ್ನು ಇದು ತೋರಿಸುತ್ತದೆ. ಇದಕ್ಕೆ ಆಧಾರವಾಗಿ ಇದರ ಹಿನ್ನೆಲೆಯಲ್ಲಿ ಅನೇಕ ಪವಿತ್ರ ಗ್ರಂಥಗಳೂ, ಮಂತ್ರಗಳೂ, ನಿವಿದಗಳೂ, ಗಾಥೆಗಳೂ, ಇತಿಹಾಸಗಳೂ, ಆಧ್ಯಾತ್ಮಿಕ ವಾಕ್ಯಗಳೂ ಇತರ ಬ್ರಾಹ್ಮಣ ಗ್ರಂಥಗಳೂ ಇದ್ದಿರಲೇಬೇಕೆಂದು ಇಲ್ಲಿನ ಉಲ್ಲೇಖಗಳಿಂದ ಗೊತ್ತಾಗುತ್ತದೆ. ಹಿಂದಿನಿಂದ ಬಂದ ವಿವರಣೆಗಳನ್ನೂ, ಸೂಕ್ತಿಗಳನ್ನೂ ಉದಾಹರಿಸುವಂತೆಯೇ ತಮ್ಮ ಟೀಕೆ ಟಿಪ್ಪಣಿಗಳನ್ನೂ ಈ ಬ್ರಾಹ್ಮಣಕಾರರು ಉಲ್ಲೇಖಿಸುತ್ತಾರೆ. ಇಲ್ಲಿ ಉದಾಹರಿಸಿರುವ ಮಂತ್ರಗಳಲ್ಲಿ ಬಹು ಭಾಗ ಈಗ ಉಪಲಬ್ಧವಾಗಿರುವ ಋಕ್ಸಂಹಿತೆಯಲ್ಲಿದೆ. ಆದರೆ ಈ ಸಂಹಿತೆಯಲ್ಲಿ ನಮಗೆ ದೊರೆಯದ ಅನೇಕ ಮಂತ್ರಗಳನ್ನು ಬ್ರಾಹ್ಮಣದಲ್ಲಿ ಉಲ್ಲೇಖಿಸಿದೆ. ಐತರೇಯ ಬ್ರಾಹ್ಮಣಕ್ಕೆ ಆಧಾರವಾಗಿರುವ ಸಂಹಿತೆ ಶಾಕಲ ಸಂಹಿತೆಗಿಂತ ಭಿನ್ನವಾದ ಶಾಖೆಯಾಗಿರಬಹುದೆಂದು ಇದರಿಂದ ಊಹಿಸಬಹುದು. ಬ್ರಾಹ್ಮಣದಲ್ಲಿ ಕೊಟ್ಟಿರುವ ಮಂತ್ರ ಪ್ರತೀಕಗಳನ್ನು ಆಶ್ವಲಾಯನರು ಪೂರ್ಣವಾಗಿ ಉದಾಹರಿಸುತ್ತಾರೆ.

ಈ ಬ್ರಾಹ್ಮಣಕ್ಕೆ ಕೇವಲ ಯಾಜ್ಞಿಕವಾದ ಪ್ರಾಧಾನ್ಯವಿದೆ. ಆಧ್ಯಾತ್ಮಶಾಸ್ತ್ರದ ವಿಚಾರ ಇಲ್ಲಿ ಪ್ರಸ್ತುತವಾಗಿಲ್ಲ. ಇಲ್ಲಿ ಪ್ರಸ್ತುತವಾದ ವಿವಿಧವಾದ ಯಾಗಗಳ ಅನುಷ್ಠಾನದಿಂದ ಸ್ವರ್ಗಪ್ರಾಪ್ತಿಯೆನ್ನಲಾಗಿದೆ. ಸಾಯುಜ್ಯತಾ ಮತ್ತು ಸಲೋಕತಾ ಎಂಬ ಶಬ್ದಗಳು ಇಲ್ಲಿ ಬಂದರೂ ಅವು ಸ್ವರ್ಗಫಲಕ್ಕೆ ಸಂಬಂಧಿಸಿವೆ. ಬ್ರಹ್ಮ ಶಬ್ದವನ್ನು ಪರತತ್ತ್ವವೆಂಬ ಅರ್ಥದಲ್ಲಿ ಎಲ್ಲಿಯೂ ಪ್ರಯೋಗಿಸಿಲ್ಲ. ಈ ಬ್ರಾಹ್ಮಣದ ಮೊದಲನೆಯ ವಾಕ್ಯದಿಂದಲೇ ಪ್ರಾಚೀನವಾದ ವೇದಭಾವನೆ ಬದಲಾಗುತ್ತಿತ್ತೆಂದು ಗೊತ್ತಾಗುತ್ತದೆ. ವಿಷ್ಣು ಪರಮನೆಂದೂ ಅಗ್ನಿಯು ಅವಮನೆಂದೂ ಈ ವಾಕ್ಯ ತಿಳಿಸುತ್ತದೆ. ಆದರೆ ಇಲ್ಲಿ ನಿರೂಪಿಸುವ ರೀತಿಯಲ್ಲಿ ವಿಷ್ಣು ದೇವತೆಗೆ ಉಪನಿಷತ್ಕಾಲದಲ್ಲಿ ದೊರತ ಪಾರಮ್ಯ ಇನ್ನೂ ದೊರಕಿರುವುದಿಲ್ಲ.

ಈ ಬ್ರಾಹ್ಮಣದ ಕಾಲ ಛಾಂದೋಗ್ಯ ಉಪನಿಷತ್ತಿಗಿಂತಲೂ ಹಿಂದಿನದಾದ ಕಾರಣ

ಸುಮಾರು ಕ್ರಿ. ಪೂ. 2500 ಇದ್ದಿರಬೇಕೆಂದು ಭಾರತೀಯ ವಿದ್ವಾಂಸರ ಅಭಿಪ್ರಾಯ. (ಸಿ.ವಿ.ವೈದ್ಯ, ಪು. ಪು. 80) 'ಧ್ರುವಾಯಾಂ ಮಧ್ಯಮಾಯಾಂ ಪ್ರತಿಷ್ಠಾಯಾಂ ದಿಶಿ' ಎಂದು ಮಧ್ಯದೇಶದ ಪ್ರಶಂಸೆ ಇಲ್ಲಿರುವ ಕಾರಣ ಈ ಬ್ರಾಹ್ಮಣ ಮಧ್ಯದೇಶಕ್ಕೆ ಸಂಬಂಧಿಸಿರಬೇಕೆಂದು ಊಹಿಸುತ್ತಾರೆ. ಈಗ ಈ ಬ್ರಾಹ್ಮಣ ದಕ್ಷಿಣದೇಶದಲ್ಲಿ ಹೆಚ್ಚು ಪ್ರಚಾರದಲ್ಲಿದೆ.

ಐತರೇಯ ಬ್ರಾಹ್ಮಣದಲ್ಲಿ ಅನೇಕ ಐತಿಹಾಸಿಕ ಮತ್ತು ಸಾಮಾಜಿಕ ಅಂಶಗಳು ಉಪಲಬ್ಧವಾಗುತ್ತವೆ. ಶುನಶ್ಶೇಫನ ಉಪಾಖ್ಯಾನದಿಂದ ಆಂಧ್ರ, ಪೌಂಡ್ರ, ಪುಳಿಂದ, ಶಬರ ಮೂತಿವ ಮತ್ತಿತರ ಉದಂತ್ಯ ವಿಚಾರ ಗೊತ್ತಾಗುತ್ತದೆ. ವಿಶ್ವಾಮಿತ್ರನ ಮಕ್ಕಳು ಶಾಪದಿಂದ ಶಪ್ತರಾಗಿ ಈ ಜನರಾದರಂತೆ. ಈ ಕಾಲದಲ್ಲಿ ಭಾರತ ದೇಶದ ಪೂರ್ವಭಾಗದ ಬಂಗಾಳ, ಒರಿಸ್ಸಾ ಪ್ರದೇಶಗಳಿಗೂ ಆರ್ಯ ಸಂಸ್ಕೃತಿ ಹರಡಿತ್ತೆಂದು ಗೊತ್ತಾಗುತ್ತದೆ. ಮಧ್ಯದೇಶವೇ ಆರ್ಯ ಸಂಸ್ಕೃತಿಯ ಕೇಂದ್ರವಾಗಿತ್ತು. 'ತಸ್ಮಾದಸ್ಯಾಂ ಧ್ರುವಾಯಾಂ ಮಧ್ಯಮಾಯಾಂ ಪ್ರತಿಷ್ಠಾಯಾಂ ಯೇ ಕೇ ಚ ಕುರು ಪಾಂಚಾಲಾನಾಂ ರಾಜಾನಃ ಸವಶೋಶೀನರಾಣಾಂ ರಾಜ್ಯಾಯೈವ ತೇ ಅಭಿಷಿಚ್ಯಂತೇ' (8-14) ಎಂದು ಹೇಳಿದಂತೆ ಈ ಮಧ್ಯ ಪ್ರದೇಶದಲ್ಲಿ ಕುರು ಪಾಂಚಾಲಾದಿ ರಾಜರುಗಳಾಳುತ್ತಿದ್ದರು. ಪೂರ್ವ ದಿಕ್ಕಿನ ರಾಜರುಗಳನ್ನು ಸಾಮ್ರಾಟ್ ಎಂದೂ, ದಕ್ಷಿಣದ ರಾಜರುಗಳನ್ನು 'ಭೋಜ'ರೆಂದೂ ಕರೆಯುತ್ತಿದ್ದರು. ಇವರನ್ನೆಲ್ಲ ಗೆದ್ದ ರಾಜರುಗಳಿಗೆ 'ಏಕರಾಟ್', 'ಸಾರ್ವಭೌಮ', 'ಸಮ್ರಾಟ್', 'ವಿರಾಟ್', 'ಭೋಜ', 'ಪರಮೇಷ್ಠಿನ್', 'ಮಹಾರಾಜ' ಮುಂತಾದ ಬಿರುದುಗಳಿರುತ್ತಿದ್ದವು. ಈ ಶಕ್ತಿ 'ಮಹಾಭಿಷೇಕ'ದಿಂದ ರಾಜರಲ್ಲಿ ಉಂಟಾಗುತ್ತಿತ್ತು (8-15).

ದೀರ್ಘವಾದ ಯಾಗಗಳನ್ನು ರಾಜರುಗಳು ಆಚರಿಸುತ್ತಿದ್ದರು. ಕ್ಷತ್ರಿಯರ ಮತ್ತು ಬ್ರಾಹ್ಮಣರ ಶಕ್ತಿ ಇವುಗಳಿಂದ ಬೆಳೆಯುತ್ತಿತ್ತು. 'ರಾಷ್ಟ್ರ'ವು ಕ್ಷತ್ರಿಯರು ಮತ್ತು ವೈಶ್ಯರನ್ನು ಪ್ರತಿನಿಧಿಸುತ್ತಿತ್ತು. ಬ್ರಾಹ್ಮಣರು ಅದನ್ನು ಮೀರಿದ್ದರು. ವೈಶ್ಯರು ವ್ಯವಸಾಯಗಾರರಾಗಿ ತೆರಿಗೆಗಳನ್ನು ಕೊಡುತ್ತಿದ್ದರು. ಶೂದ್ರರು ಕೇವಲ ಕೂಲಿಕಾರರಾಗಿದ್ದರು (7-29). ಎಲ್ಲ ರಾಜರನ್ನೂ ಗೆದ್ದುಕೊಂಡ ಸಮ್ರಾಟನಾಗಿದ್ದನೆಂದು ಜನಮೇಜಯ ಪಾರಿಕ್ಷಿತನನ್ನು ಕೊಂಡಾಡಿದೆ. (8-11).

ಮಹಾಭಿಷೇಕದಲ್ಲಿ ದಧಿ, ಮಧು, ಘೃತ ಮತ್ತು ಜಲದಿಂದ ಅಭಿಷೇಕ ಮಾಡುತ್ತಿದ್ದರು (8-20). ಹೀಗೆ ಅಭಿಷಿಕ್ತರಾದ ರಾಜರುಗಳ ಹೆಸರುಗಳನ್ನೂ ಇಲ್ಲಿ ಕೊಡಲಾಗಿದೆ. ಈ ಪಟ್ಟಿಯಲ್ಲಿ ಕ್ರಮವಾಗಿ ಜನಮೇಜಯ ಪಾರಿಕ್ಷಿತ, (2) ಶಾರ್ಯಾತಮಾನವ, (3) ಶತಾನೀಕ ಸತ್ರಾಜಿತ, (4) ಆಂಬಷ್ಠ್ಯ (5) ಯುಧಾಂಶ್ರೌಷ್ಠಿ ಉಗ್ರಸೈನ್ಯ (6) ವಿಶ್ವಕರ್ಮನ್ ಭೌವನ (7) ಸುದಾಸಪೈಜವನ (8) ಮರುತ್ತ ಆವಿಕ್ಷಿತ (9) ಅಂಗ (8-21). (10) ಭರತದೌಷ್ಯಂತಿ (11) ದುರ್ಮುಖ ಪಾಂಚಾಲ (12) ಅತ್ಯಾರಾತಿ ಜಾನಂತಪಿ (8-22) ಮುಂತಾದ ಹೆಸರುಗಳಿವೆ. ಇವರಲ್ಲಿ ಸುದಾಸ ಪೈಜವನನ ಹೆಸರು ಋಗ್ವೇದದಲ್ಲಿ ಪ್ರಸಿದ್ಧವಾಗಿದೆ. ಭರತ ದೌಷ್ಯಂತಿಯ ಹೆಸರು ಮಹಾಭಾರತದಲ್ಲಿ ಬರುತ್ತದೆ. ಉಳಿದ ಅನೇಕ ಹೆಸರುಗಳು ಅಪೂರ್ವವಾದವು.

ಈ ಕಾಲದ ಸಾಮಾಜಿಕ ಸ್ಥಿತಿ ಸಮೃದ್ಧವಾಗಿದ್ದಿತೆಂದು ಗೊತ್ತಾಗುತ್ತದೆ. ಆರ್ಯರ ಗಮನವೆಲ್ಲ ಯಾಗಾನುಷ್ಠಾನಗಳಲ್ಲಿ ಕೇಂದ್ರೀಕೃತವಾಗಿತ್ತು. ಇದರಲ್ಲಿಯೇ ಅಧ್ಯಾತ್ಮ ವಿಚಾರ, ವಾಣಿಜ್ಯ, ವ್ಯವಸಾಯ ಮುಂತಾದುವೆಲ್ಲ ಒಡಗೂಡಿದ್ದವು. ವೈಭವಪೂರ್ಣವೂ ಸಂಪತ್ಸಮೃದ್ಧವೂ ಆದ ಯಜ್ಞವಿಧಾನಗಳಲ್ಲಿ ಬ್ರಾಹ್ಮಣರ ಅಸಾಧಾರಣವಾದ ಪಾಂಡಿತ್ಯವೂ

ಕ್ಷತ್ರಿಯರ ಅನುಪಮ ಶಕ್ತ್ಯೈಶ್ವರ್ಯಗಳೂ ಪ್ರಕಾಶಿಸುತ್ತಿದ್ದವು. ಸಾಮಾನ್ಯ ಜನರಲ್ಲಿ ಭಯಮಿಶ್ರಿತವಾದ ವಿಸ್ಮಯವನ್ನುಂಟುಮಾಡುತ್ತಿದ್ದವು. ಆನೆಗಳಿಗೆ ಹೊದಿಸುತ್ತಿದ್ದ ಸ್ವರ್ಣಾಂಬರಗಳು, ಚಿತ್ರ ವಿಚಿತ್ರವಾದ ರಥಗಳು, ಬೆಳ್ಳಿಯ ರಥಗಳು ಮುಂತಾದುವುಗಳ ಉಲ್ಲೇಖ (6-27 ; 4-6 ; 7-18) ಅಂದಿನ ನಾಗರಿಕತೆಯ ಮಟ್ಟವನ್ನು ತೋರಿಸುತ್ತದೆ. ಸೌತ್ರಾಮಣಿ ಯಾಗದಲ್ಲಿ ಸುರಾಪಾನ ವಿಹಿತವಾಗಿತ್ತು (8-8). ಇಲ್ಲಿ ಸುರೆಯನ್ನು ಕ್ಷತ್ರವೆಂದು ಪ್ರಶಂಸೆ ಮಾಡಿದೆ, ಕ್ಷತ್ರಿಯರು ಅದನ್ನು ಪಾನಮಾಡುತ್ತಿದ್ದರು. ಇತರ ಕಾಲದಲ್ಲಿಲ್ಲದಿದ್ದರೂ ಬ್ರಾಹ್ಮಣರು ಯಾಗ ಸಂದರ್ಭಗಳಲ್ಲಿ ಅದನ್ನು ಪಾನ ಮಾಡುತ್ತಿದ್ದರು. ಚಾತುರ್ವರ್ಣ್ಯ ವ್ಯವಸ್ಥೆ ದೇವತೆಗಳನ್ನೂ ಆಕ್ರಮಿಸಿತ್ತು. ಮರುತ್ತುಗಳು, ರುದ್ರರು, ವಸುಗಳು, ವೈಶ್ಯರೆಂದೂ ಪೂಷ ಶೂದ್ರನೆಂದೂ ತಿಳಿಯಲಾಗಿತ್ತು (1-9).

ಯಶಸ್ಸು, ಪದವಿ, ಕೀರ್ತಿ ಮುಂತಾದುವುಗಳ ಪ್ರಾಪ್ತಿಗಾಗಿಯೂ ಶತ್ರು ಪರಿಹಾರಕ್ಕಾಗಿಯೂ ಯಾಗಗಳನ್ನು ಮಾಡುತ್ತಿದ್ದರು. ಸೋಮಯಾಗವನ್ನು ಎಲ್ಲರೂ ಮಾಡುವುದಕ್ಕವಕಾಶವಿರಲಿಲ್ಲ. ಸೋಮಯಾಗವನ್ನಾರಂಭಿಸಲು ಯಾಜಕ ಕೊನೆಯ ಪಕ್ಷ ಆರು ಹಸುಗಳನ್ನಾದರೂ ಹೊಂದಿರಬೇಕಾಗಿತ್ತು. ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ 'ಅನೂಚಾನ'ನೆಂಬ ಹೆಸರಿತ್ತು. ಯಶಸ್ಸಂಪಾದನೆಗೆ ಇವರು ವನದಲ್ಲಿ 'ಚಾತುರ್ಹೋತ್ರ ಮಂತ್ರ'ವನ್ನು ಜಪಿಸಬೇಕಾಗಿತ್ತು (5-23). ಗುರುಕುಲವೃತ್ತಿ ರೂಢಿಯಲ್ಲಿತ್ತು. ನಾಭಾನೇದಿಷ್ಠನಂತೆ ವಿದ್ಯಾರ್ಥಿಗಳು ಬಹಳ ಕಠಿಣವಾದ ನಿಯಮಗಳನ್ನು ಪಾಲಿಸುತ್ತಿದ್ದರು (2-15). ಹೀಗೆ ಅಂದಿನ ಸಮಾಜ ಸಂಪತ್ಸಮೃದ್ಧವಾಗಿತ್ತು.

ಈ ಬ್ರಾಹ್ಮಣದಲ್ಲಿಯೇ ಸುಪ್ರಸಿದ್ಧವಾದ ಶುನಶ್ಶೇಪೋಪಾಖ್ಯಾನವಿದೆ (7-18). ಹರಿಶ್ಚಂದ್ರ ಐಕ್ಷ್ವಾಕುವಿಗೆ ಮಕ್ಕಳಿರಲಿಲ್ಲ. ವರುಣನನ್ನವನು ಉಪಾಸಿಸಿದ. ತನಗೆ ಮಗನಾದರೆ ಅವನನ್ನೇ ಪಶುವಾಗಿಟ್ಟು ವರುಣನಿಗೆ ಯಾಗ ಮಾಡುವುದಾಗಿ ಹರಕೆಹೊತ್ತನು. ರೋಹಿತ ಜನಿಸಿದ ಮೇಲೆ ಒಂದಲ್ಲ ಒಂದು ನೆಪ ಹೇಳಿ ಯಾಗ ಮಾಡುವುದನ್ನು ಮುಂದುವರಿಸುತ್ತಾ ಬಂದ. ರೋಹಿತ ಶಸ್ತ್ರಾಸ್ತ್ರ ಶಿಕ್ಷಿತನಾಗಿ ಯುವಕನಾದ. ಆಗ ಹರಿಶ್ಚಂದ್ರ ರೋಹಿತನಿಗೆ ಈ ವಿಚಾರ ತಿಳಿಸಲು ಅವನು ಇದನ್ನೊಪ್ಪದೆ ಕಾಡಿಗೆ ಹೊರಟುಹೋದ. ಹರಿಶ್ಚಂದ್ರ ಜಲೋದರದಿಂದ ನರಳಬೇಕಾಯಿತು. ಆರು ವರ್ಷಗಳು ಕಾಡಿನಲ್ಲಿ ಸಂಚರಿಸಿದ ನಂತರ ರೋಹಿತ ಬಡತನದಲ್ಲಿ ಬೇಯುತ್ತಿದ್ದ ಅಜೀಗರ್ತನನ್ನು ಕಂಡನು. ಅವನ ಎರಡನೇ ಮಗನಾದ ಶುನಶ್ಶೇಫನನ್ನು ತನಗೆ ಪ್ರತಿನಿಧಿಯಾಗಿ, ಯಾಗ ಪಶುವಾಗಿ ಮಾಡಲು ಉದ್ದೇಶಿಸಿ ಅಜೀಗರ್ತನನ್ನು ಬೇಡಿದ. ಅವನಾದರೂ ನೂರಾರು ಹಸುಗಳನ್ನು ತೆಗೆದುಕೊಂಡು ಶುನಶ್ಶೇಫನನ್ನು ರೋಹಿತನಿಗೆ ಕೊಟ್ಟುಬಿಟ್ಟನು. ವರುಣನು 'ಕ್ಷತ್ರಿಯನಿಗಿಂತ ಬ್ರಾಹ್ಮಣ ಲೇಸು' ಎಂದು ಆ ಪಶುವನ್ನು ಒಪ್ಪಿದ. ಯೂಪಸ್ತಂಭಕ್ಕೆ ಕಟ್ಟಲ್ಪಟ್ಟ ಶುನಶ್ಶೇಫ ಬೇರೆ ಗತಿ ಕಾಣದೆ ವರುಣನನ್ನೇ ಬೇಡಿ, ಸ್ತುತಿಸಿ ಅವನ ದಯೆಯಿಂದ ಮುಕ್ತನಾದ. ಅವನು ತಂದೆಯೊಡನೆ ಇರಲಿಚ್ಛಿಸದೆ ವಿಶ್ವಾಮಿತ್ರನನ್ನು ತಂದೆಯನ್ನಾಗಿ ಅಂಗೀಕರಿಸಿದ. ವಿಶ್ವಾಮಿತ್ರನೂ ಅವನನ್ನಂಗೀಕರಿಸಿದ. ಮುಂದೆ ಅವನು ದೇವರಾತ ವಿಶ್ವಾಮಿತ್ರನಾದನು.

ರಾಜನ ಅಭಿಷೇಕೋತ್ಸವ ಸಂದರ್ಭದಲ್ಲಿ ಈ ಕಥೆಯನ್ನು ರಾಜನಿಗೆ ಸ್ವರ್ಣಾಸನದಲ್ಲಿ ಕುಳಿತ ಹೋತೃವು ಹೇಳಬೇಕೆಂದು ವಿಧಿಸಿದೆ. ಆ ಸಮಯದಲ್ಲಿ ರಾಜನೊಡನೆ ಅವನ ಮಕ್ಕಳೂ ಮಂತ್ರಿಗಳೂ ಇರಬೇಕೆಂದು ಸೂತ್ರಗಳು ತಿಳಿಸುತ್ತವೆ. ಈ ಕಥೆಯಿಂದ ರಾಜನ ಅಭಿಷೇಕ

ಕಾಲದಲ್ಲಿ ಪುರುಷಮೇಧದ ಅಭ್ಯಾಸವಿತ್ತೆಂದೂ ಭಾರತದಲ್ಲಿ ಪುರುಷಮೇಧ ರೂಢಿಯಲ್ಲಿತ್ತೆಂದೂ ಕೆಲವರು ವಿಮರ್ಶಕರು ಊಹಿಸುತ್ತಾರೆ.[5] ಆದರೆ ಈ ಊಹೆ ಸರಿಯಲ್ಲ. ನಮ್ಮ ದೇಶದಲ್ಲಿ ನರಮೇಧ ಎಂದೂ ಆಚರಣೆಯಲ್ಲಿರಲಿಲ್ಲ. ಪುರುಷಸೂಕ್ತದಲ್ಲಿಯೂ ಪುರುಷಮೇಧದ ಸಮರ್ಥನೆ ಇಲ್ಲ.

ಶುನಶ್ಶೇಫನನ್ನು ಯೂಪಸ್ತಂಭಕ್ಕೆ ಕಟ್ಟಲೇ ಎಲ್ಲರೂ ಹಿಂಜರಿದರೆಂಬ ಉಕ್ತಿಯೂ, ಕೊನೆಗೆ ವರುಣನ ದಯೆಯಿಂದ ಅವನು ಪಾಶಮುಕ್ತನಾದನೆಂಬುದೂ ಪುರುಷಮೇಧವು ನಿಜವಾಗಿ ನಡೆಯಲಿಲ್ಲವೆಂಬುದನ್ನು ಸೂಚಿಸುತ್ತದೆ. ಶಾಂಖಾಯನ ಶ್ರೌತಸೂತ್ರದಲ್ಲಿಯೂ ವೈತಾನದಲ್ಲಿಯೂ ವರ್ಣಿಸಿರುವ ಪುರುಷಮೇಧ ಕೇವಲ ತಾತ್ವಿಕವಾದುದೇ ವಿನಾ ಪ್ರಾಯೋಗಿಕವಾದುದಲ್ಲ. ಭರತ ದೇಶದಲ್ಲಿ ಆರ್ಯ ಧರ್ಮದಲ್ಲಿ ಮನುಷ್ಯನನ್ನು ಬಲಿಕೊಡುವ ವಿಧಾನ ಎಲ್ಲಿಯೂ ಯಾವಾಗಲೂ ಇರಲಿಲ್ಲ. ಶುನ್ಯಶೇಫನು ಋಗ್ವೇದ ಋಷಿ. ಪ್ರಥಮಮಂಡಲದ ಅನೇಕ ಸೂಕ್ತಗಳ ದ್ರಷ್ಟಾ ಇವನು (24 ರಿಂದ 27). ಐತರೇಯದ ಕಥಾನುಸಾರವಾಗಿ 'ಋಕ್‌ಶತಗಾಥಂ ಶೌನಃಶೇಪಮಾಖ್ಯಾನಮ್' ಎಂದು ನೂರು ಋಕ್ಕುಗಳ ದ್ರಷ್ಟಾ ಎಂದು ಹೇಳಿದೆ. ಆದರೆ ಶುನಶ್ಶೇಫನ ಋಕ್ಕುಗಳ ಸಂಖ್ಯೆ 97 ಮಾತ್ರ. ಇಲ್ಲಿ ನೂರು ಎಂಬ ಸಂಖ್ಯೆ ಕರಾರುವಕ್ಕಾಗಿ ನೂರನ್ನು ಸೂಚಿಸುವುದಿಲ್ಲ. ಪ್ರಾಯೋಗಿಕವಾಗಿದೆ ಇದು. ಆದುದರಿಂದ ಈ ಉಲ್ಲೇಖ ಪ್ರಾಮಾಣಿಕವಾಗಿ ಋಗ್ವೇದದ ಶುನಶ್ಶೇಫನಿಗೇ ಅನ್ವಯಿಸುತ್ತದೆಂದು ಹೇಳಬಹುದು.

ಐತರೇಯ ಬ್ರಾಹ್ಮಣಕ್ಕೆ ಸಾಯಣರೂ, ಷಡ್ಗುರು ಶಿಷ್ಯರೂ ಮತ್ತು ಗೋವಿಂದಸ್ವಾಮಿಗಳೂ ವ್ಯಾಖ್ಯಾನ ಮಾಡಿದ್ದಾರೆ.

### ಕೌಷೀತಕಿ ಬ್ರಾಹ್ಮಣ

ಋಗ್ವೇದಕ್ಕೆ ಸಂಬಂಧಪಟ್ಟಂತೆ ಉಪಲಬ್ಧವಾಗಿರುವ ಮತ್ತೊಂದು ಬ್ರಾಹ್ಮಣವೇ ಕೌಷೀತಕಿ ಬ್ರಾಹ್ಮಣ. ಈ ವೇದಕ್ಕೆ ಅನೇಕ ಬ್ರಾಹ್ಮಣಗಳಿದ್ದವೆಂಬ ಅಂಶವನ್ನು ಆಶ್ವಲಾಯನ ಗೃಹ್ಯ ಸೂತ್ರದ ತರ್ಪಣ ವಿಧಿಪ್ರಕರಣದಿಂದ ತಿಳಿಯಬಹುದು. ಕೌಷೀತಕಿ ಬ್ರಾಹ್ಮಣಕ್ಕೆ ಶಾಂಖಾಯನ ಬ್ರಾಹ್ಮಣವೆಂಬ ಹೆಸರೂ ಇದೆ. ತರ್ಪಣ ಪ್ರಕರಣದಲ್ಲಿ ಶಾಂಖಾಯನರೊಡನೆ ಕೌಷೀತಕರನ್ನೂ ಪ್ರತ್ಯೇಕವಾಗಿ ಹೇಳಿರುವುದನ್ನು ನೋಡಿದರೆ, ಬೇರೊಂದು ಕೌಷೀತಕ ಬ್ರಾಹ್ಮಣ ಇದ್ದಿರಬಹುದೆಂದು ಊಹಿಸಬೇಕಾಗುತ್ತದೆ. ಈಗ ಉಪಲಬ್ಧವಾಗಿರುವುದರಲ್ಲಿ ಕೌಷೀತಕಿಯ ಹೆಸರಿನ ಸೂತ್ರವಿಲ್ಲ. ಅದರ ಬದಲು ಶಾಂಖಾಯನ ಸೂತ್ರ ಉಪಲಬ್ಧವಾಗಿದೆ. ಆದ್ದರಿಂದ ಈಗ ಉಪಲಬ್ಧವಾಗಿರುವ ಕೌಷೀತಕಿ ಬ್ರಾಹ್ಮಣ ಶಾಂಖಾಯನ ಬ್ರಾಹ್ಮಣವೇ ಇರಬಹುದೆಂದು ವಿದ್ವಾಂಸರು ಊಹಿಸುತ್ತಾರೆ.

ಕೌಷೀತಕಿ ಬ್ರಾಹ್ಮಣದ ಉಲ್ಲೇಖ ಪಾಣಿನಿಯಿಂದ ಮಾಡಲಾಗಿದೆ. 'ಪುರಾಣ ಪ್ರೋಕ್ತೇಷು ಬ್ರಾಹ್ಮಣಕಲ್ಪೇಷು' ಎಂಬುದರಲ್ಲಿ ಶಾಟ್ಯಾಯನಿ, ಭಾಲ್ಲವಿ ಮುಂತಾದ ಶಬ್ದಗಳಂತೆ ಕೌಷೀತಕ ಬ್ರಾಹ್ಮಣಕ್ಕೆ ಕೌಷೀತಕಿ ಎಂಬ ಹೆಸರು ನಿಷ್ಪನ್ನವಾಗುತ್ತದೆ. ಆದರೆ ಶಾಂಖಾಯನವೆಂಬ ಹೆಸರಿಗೆ ಇಂಥ ಪ್ರತ್ಯಯ ಸೇರುವುದಿಲ್ಲ. ಈಗ ಉಪಲಬ್ಧವಾಗಿರುವ ಶಾಂಖಾಯನ ಬ್ರಾಹ್ಮಣ

5. ಜರ್ಮನ್ ವಿದ್ವಾಂಸ ಹಿಲ್‌ಬ್ರಾಂಟನ ಈ ಅಭಿಪ್ರಾಯವನ್ನು ಕೀತ್ ಮಹಾಶಯ ಸಪ್ರಮಾಣವಾಗಿ ಖಂಡಿಸಿರುವುದನ್ನು ನೋಡಬಹುದು. (Intro., p. 62.)

ಕೌಷೀತಕಿ ಬ್ರಾಹ್ಮಣಕ್ಕಿಂತ ಈಚಿನದಿರಬೇಕೆಂಬುದಕ್ಕೆ ಮತ್ತೊಂದು ಕಾರಣವನ್ನು ಹೇಳುವುದುಂಟು. ಅದಾದರೂ ತಿಂಗಳುಗಳಿಗೆ ಚೈತ್ರ ಮುಂತಾದ ಹೆಸರುಗಳನ್ನು ಇಲ್ಲಿ (19-2-3) ಕೊಟ್ಟಿರುವುದಾಗಿದೆ. ಶಿವನಿಗೆ ಈಶಾನ, ಮಹಾದೇವ ಮುಂತಾದ ಹೆಸರುಗಳನ್ನು ಹೇಳಿರುವ ಕಾರಣ ಇದು ಶುಕ್ಲಯಜುರ್ವೇದ, ಅಥರ್ವವೇದ, ಶತಪಥ ಬ್ರಾಹ್ಮಣ ಇವುಗಳ ಇತ್ತೀಚಿನ ಭಾಗಗಳ ಕಾಲಕ್ಕೆ ಸೇರಿದೆಯೆಂಬ ಊಹೆಯನ್ನು ವೆಬರ್ ಮಾಡುತ್ತಾರೆ. ಇದಕ್ಕೆ ಸಾಕಷ್ಟು ಆಧಾರಗಳಿಲ್ಲದ ಕಾರಣ ಈ ವಾದವನ್ನು ಒಪ್ಪುವುದಕ್ಕಾಗುವುದಿಲ್ಲ.

ಕೌಶೀತಕಿ ಬ್ರಾಹ್ಮಣದಲ್ಲಿ 30 ಅಧ್ಯಾಯಗಳಿವೆ. ಐತರೇಯ ಬ್ರಾಹ್ಮಣದಲ್ಲಿ 40 ಅಧ್ಯಾಯಗಳಿರುವ ಕಾರಣ ಐತರೇಯ ಬ್ರಾಹ್ಮಣವು ಕೌಷೀತಕಿ ಬ್ರಾಹ್ಮಣಕ್ಕಿಂತ ಈಚಿನದೆಂದು ಊಹಿಸುತ್ತಾರೆ. ಒಂದೊಂದು ಅಧ್ಯಾಯದಲ್ಲಿಯೂ ಅನೇಕಾನೇಕ ಖಂಡಗಳಿವೆ. ಒಟ್ಟು ಇದರಲ್ಲಿ 226 ಖಂಡಗಳಿವೆ. ಒಂದೊಂದು ಖಂಡದಲ್ಲಿಯೂ ಸುದೀರ್ಘವಾದ ಗದ್ಯಭಾಗಗಳಿವೆ. ಇವೆರಡೂ ಪಾಣಿನಿಗಳಿಗೆ ಪರಿಚಿತವಾಗಿದ್ದವೆಂಬುದಕ್ಕೆ 'ತ್ರಿಂಶಚ್ಚತ್ವಾರಿಂಶತೋರ್ಬ್ರಾಹ್ಮಣೇ ಸಂಜ್ಞಾಯಾಂ ಡಣ್' (5-1-62) ಎಂಬ ಸೂತ್ರವೇ ಸಾಕ್ಷಿಯಾಗಿದೆ. ಈ 30 ಅಧ್ಯಾಯಗಳಲ್ಲಿ ಅಗ್ನ್ಯಾಧಾನ, ಅಗ್ನಿಹೋತ್ರ, ದರ್ಶಪೂರ್ಣಮಾಸ, ಚಾತುರ್ಮಾಸ್ಯ ಮತ್ತು ಸೋಮಯಾಗ ಇವುಗಳ ವಿಚಾರ ಪ್ರಸ್ತುತವಾಗಿದೆ. ಯಜ್ಞವಿಧಿಯನ್ನು ಇಲ್ಲಿ ಸಕ್ರಮವಾಗಿಯೂ ಹೆಚ್ಚು ವಿಶದವಾಗಿಯೂ ಪ್ರತಿಪಾದಿಸಿದೆ. ಹಾಗೆಂದಮಾತ್ರಕ್ಕೆ ಇದು ಐತರೇಯದ ಮೊದಲಿನ ಐದು ಅಧ್ಯಾಯಗಳಿಗಿಂತ ಅರ್ವಾಚೀನವಾದುದಲ್ಲವೆಂಬ ಅಭಿಪ್ರಾಯವನ್ನು ಮೆಕ್ಡಾನಲ್ ಹೇಳುತ್ತಾರೆ.[6] ಐತರೇಯಕ್ಕಿಂತ ಕೌಷೀತಕಿ ಬ್ರಾಹ್ಮಣ ಹಿಂದಿನದೆಂಬುದು ಮೆಕ್ಡಾನಲ್ಲನ ಅಭಿಪ್ರಾಯ. ಕೌಷೀತಕಿ ಅಥವಾ ಶಾಂಖಾಯನ ಬ್ರಾಹ್ಮಣ ಐತರೇಯಕ್ಕಿಂತ ಪ್ರಾಚೀನವಾದುದೆಂದು ಕೀತ್ ಮಹಾಶಯನ ಅಭಿಪ್ರಾಯ. ಐತರೇಯ ಬ್ರಾಹ್ಮಣದಲ್ಲಿ (7-11) ಬರುವ ಕೌಷೀತಕೀಯ ಉಲ್ಲೇಖವನ್ನು ಅವರು ಪ್ರಕ್ಷಿಪ್ತವೆಂದು ಭಾವಿಸುತ್ತಾರೆ. ಕೌಷೀತಕಿ ಬ್ರಾಹ್ಮಣದ ಕಾಲ ಕ್ರಿ. ಪೂ. 2500 ಎಂದು ಸಿ. ವಿ. ವೈದ್ಯರು ಅಭಿಪ್ರಾಯಪಡುತ್ತಾರೆ. ಸುಮಾರು ಕ್ರಿ. ಪೂ. 800ರ ಕಾಲವೆಂದು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯ. (Keith., Intro ; p. 49 ).

ಈ ಬ್ರಾಹ್ಮಣದ ಕೆಲವು ವೈಶಿಷ್ಟ್ಯಗಳನ್ನು ಕೆಳಗೆ ಕೊಡಲಾಗಿದೆ:

(1) ಹೆಜ್ಜೆ ಹೆಜ್ಜೆಗೂ ಇದು ಕೌಷೀತಕಿಯ ಪ್ರಮಾಣವನ್ನು ಉಲ್ಲೇಖಿಸುತ್ತದೆ ಹಾಗೂ ಪೈಂಗ್ಯ ಆಚಾರ್ಯರಿಗೆ ವಿರೋಧವನ್ನು ಪ್ರಕಟಿಸುತ್ತದೆ. ಕೌಷೀತಕಿ ಆಚಾರ್ಯರ ಮತವೇ ಮಾನ್ಯವಾದುದೆಂದೂ ಸೂಚಿಸುತ್ತದೆ.

(2) (2-2) ರಲ್ಲಿ ಬರುವ ಸರ್ಪದೇವಜನ, ರಕ್ಷೋದೇವಜನ ಎಂಬ ಉಲ್ಲೇಖಗಳಿಂದ ದೇವಜನವೆಂದರೆ ಶ್ರೇಷ್ಠರಾದವರೆಂಬ ಅರ್ಥ ಗೊತ್ತಾಗುತ್ತದೆ.

(3) 'ಯಜಮಾನಸ್ಯಾರ್ಷೇಯಮಾಹ' (3) ಎಂಬುದರಿಂದ ಆ ಕಾಲದಲ್ಲಿಯೇ ಗೋತ್ರಪ್ರವರಗಳ ಪದ್ಧತಿ ಬೇರೂರಿತ್ತೆಂದು ತಿಳಿಯುತ್ತದೆ.

(4) 'ಋತುಸಂಧಿಷು ವ್ಯಾಧಿರ್ಜಾಯತೇ' (6) ಎಂಬುದರಿಂದ ಅವರಿಗೆ ರೋಗ ವಿಜ್ಞಾನದ ಪರಿಚಯವಿತ್ತೆಂದು ತಿಳಿಯಬಹುದು.

---

6. Macdonell, p. 206

(5) ರಾಜನ ಮುಂದೆ ಸೈನ್ಯವು ನಡೆಯುತ್ತಾ ಮಾರ್ಗರಕ್ಷಣೆ ಮಾಡುತ್ತಿತ್ತೆಂಬ ಅಂಶ 'ಯಥಾ ಮಹಾರಾಜಃ ಪುರಸ್ತಾತ್ ಸೇನಾನ್ಯನೀಕಾನಿ ಪ್ರತ್ಯುಹ್ಯಾಭಯಂ ಪಂಥಾನಮನ್ವಿಯಾತ್' ಎಂಬುದರಿಂದ ತಿಳಿಯುವುದು (5-5).

(6) ಅಪರಾಹ್ನದಲ್ಲಿ ಪಿತೃಯಜ್ಞವನ್ನು ಆಚರಿಸುತ್ತಿದ್ದರೆಂಬುದು 'ತಸ್ಮಾದ ಪರಾಹ್ಣೇ ಪಿತೃಯಜ್ಞೇನ ಯಜತೇ ಅಗ್ನಿಂ ಕವ್ಯವಾಹನಂ' (5-6) ಎಂಬುದರಿಂದ ತಿಳಿಯುವುದು.

(7) 'ಉದಂಚ ಏವ ಯಂತಿ ವಾಚಂಶಿಕ್ಷಿತುಂ ಯೋ ವೈ ತತ ಆಗಚ್ಛತಿ ತಂ ಶುಶ್ರೂಷಂತೇ' (7-6) ಎಂಬುದರಿಂದ ಔತ್ತರೇಯರು ಭಾಷೆಯಲ್ಲಿಯೂ ವ್ಯಾಕರಣದಲ್ಲಿಯೂ ನಿಷ್ಣಾತರಾಗಿದ್ದರೆಂದು ಗೊತ್ತಾಗುವುದು.

(8) ದೇವತೆಗಳಲ್ಲಿ ವಿಷ್ಣು ಶ್ರೇಷ್ಠನೆಂದೂ ಅಗ್ನಿಯು ಕನಿಷ್ಠನೆಂದೂ ತಿಳಿಸುವ 'ಅಗ್ನಿರವರಾರ್ಧ್ಯಃ ವಿಷ್ಣುಃ ಪರಾರ್ಧ್ಯಃ' (7) ಎಂಬುದರಿಂದ ಐತರೇಯ ಬ್ರಾಹ್ಮಣದಲ್ಲಿ ಸೂಚಿಸಿರುವ ವಿಷ್ಣು ಪಾರಮ್ಯ ಹರಡುತ್ತಿತ್ತೆಂಬುದು ಗೊತ್ತಾಗುತ್ತದೆ.

(9) ದೇವತೆಗಳಲ್ಲಿ ಪರಮನಾದವನು ವಿಷ್ಣುವೋ ಅಥವಾ ರುದ್ರನೋ ಎಂಬ ವಿವಾದ ಬಹಳ ಹಿಂದಿನ ಕಾಲದಲ್ಲಿಯೇ ಆರಂಭವಾಯಿತೆಂಬುದನ್ನು ತೋರಿಸುವಂತೆ ಇದೆ ಇಲ್ಲಿ ಬರುವ 'ರುದ್ರೋವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ ದೇವನಾಮ್' (25-13) ಎಂಬ ಮಾತು. ಆರನೇ ಅಧ್ಯಾಯದಲ್ಲಿ ಶಿವನ ಎಂಟು ನಾಮಗಳಾದ ಭವ, ಶಿವ, ಪಶುಪತಿ, ಉಗ್ರ, ಮಹಾದೇವ, ರುದ್ರ, ಈಶಾನ ಮತ್ತು ಅಶನಿ ಎಂಬುವುಗಳ ಉತ್ಪತ್ತಿಕ್ರಮವನ್ನೂ ಒಬ್ಬೊಬ್ಬರಿಗೂ ಸಂಬಂಧಿಸಿದ ವಿಶಿಷ್ಟವಾದ ವ್ರತಗಳನ್ನೂ ತಿಳಿಸಿದೆ.

(10) ಹನ್ನೊಂದನೇ ಅಧ್ಯಾಯದಲ್ಲಿ (1-1) ಬರುವ 'ಉಚ್ಚೈಃ ನಿರುಕ್ತ ಮನುಬ್ರೂಯಾತ್' ಎಂಬ ನುಡಿ ಆ ಕಾಲದಲ್ಲಿಯೂ ಯಾವುದೋ ನಿರುಕ್ತ ಉಪಲಬ್ಧವಾಗಿತ್ತೆಂಬುದನ್ನು ಸೂಚಿಸುತ್ತದೆ. ಈ ನಿರುಕ್ತ ಯಾಸ್ಕರ ನಿರುಕ್ತವಂತೂ ಅಲ್ಲ.

(11) ಯಾಗದಲ್ಲಿ ಪಶುಹಿಂಸೆ ಹಾಗೂ ಮಾಂಸ ಭಕ್ಷಣದ ವಿಚಾರದಲ್ಲಿ ಜನರಲ್ಲಿ ಆಕ್ಷೇಪಣೆಗಳೂ ಅಸಮಾಧಾನವೂ ಇತ್ತೆಂಬುದನ್ನು 'ಅಮುಷ್ಮಿನ್‌ಲೋಕೇ ಪಶವೋ ಮನುಷ್ಯಾನಶ್ನಂತಿ' ಎಂದರೆ 'ಮತ್ತೊಂದು ಲೋಕದಲ್ಲಿ ಯಾಜಕರನ್ನು ಬಲಿಕೊಡಲ್ಪಟ್ಟ ಪಶುಗಳು ತಿನ್ನುತ್ತವೆ' ಎಂಬುದು ಸೂಚಿಸುತ್ತದೆ.

(12) 'ಶಕ್ವರೀ' ನಾಮದ ನಿರ್ವಚನ ಇಲ್ಲಿ ಹೀಗಿದೆ:

'ಇಂದ್ರೋ ವೃತ್ರಮಶಕತ್ ಹಂತುಂ ಆಭಿಃ ತಸ್ಮಾಚ್ಛಕ್ವರ್ಯಃ' (23-2) ಎಂದು. ಇವುಗಳ ದ್ವಾರಾ ಇಂದ್ರನು ವೃತ್ರನನ್ನು ಕೊಲ್ಲಲು ಸಮರ್ಥನಾದನು. ಮಹಾನಾಮ್ನೀ ಸಾಮದಲ್ಲಿ ಶಕ್ವರೀ ಛಂದಸ್ಸಿನ ಋಕ್ಕುಗಳಿರುವುದನ್ನೂ ಅವುಗಳು ಇಂದ್ರನನ್ನೇ ಉದ್ದೇಶಿಸಿರುವುದನ್ನು ಗಮನಿಸಬಹುದು.

ಹೀಗೆ ಅನೇಕಾನೇಕ ಸ್ವಾರಸ್ಯಾಂಶಗಳು ಇಲ್ಲಿರುವುದನ್ನು ನಾವು ಕಾಣುತ್ತೇವೆ.

## ಸಾಮವೇದ ಬ್ರಾಹ್ಮಣಗಳು

### ತಾಂಡ್ಯ ಮಹಾಬ್ರಾಹ್ಮಣ

ತಾಂಡ್ಯಬ್ರಾಹ್ಮಣ ಸಾಮವೇದೀಯ ಬ್ರಾಹ್ಮಣಗಳಲ್ಲಿ ಮುಖ್ಯವಾದುದು. ತಾಂಡಿ ಶಾಖೆಗೆ ಸೇರಿರುವ ಕಾರಣ ಇದಕ್ಕೆ ಈ ಹೆಸರು ಬಂದಿದೆ. ಇದರಲ್ಲಿ ಇಪ್ಪತ್ತೈದು ಅಧ್ಯಾಯಗಳಿರುವ ಕಾರಣ ಇದಕ್ಕೆ 'ಪಂಚವಿಂಶ ಬ್ರಾಹ್ಮಣ' ಎಂಬ ಹೆಸರೂ ಉಂಟು. ಇದು ಬಹಳ ದೊಡ್ಡದಾಗಿರುವುದರಿಂದ 'ಮಹಾಬ್ರಾಹ್ಮಣ' ಎಂಬ ಹೆಸರೂ ಬಂದಿದೆ. ಕುರುಕ್ಷೇತ್ರದ ಎರಡು ಗಡಿಗಳಾಗಿದ್ದ ಸರಸ್ವತೀ ಮತ್ತು ದೃಷದ್ವತೀ ನದಿಗಳ ತೀರದಲ್ಲಿ ನಡೆದ ಯಜ್ಞಗಳ ವರ್ಣನೆಯನ್ನು ಹೊಂದಿರುವ ಇದು ಐತಿಹಾಸಿಕವಾದ ಪ್ರಾಧಾನ್ಯವನ್ನು ಹೊಂದಿದೆ.

ತಾಂಡ್ಯ ಮಹಾಬ್ರಾಹ್ಮಣ ತೈತ್ತಿರೀಯ ಬ್ರಾಹ್ಮಣಕ್ಕಿಂತ ಈಚಿನದೆಂದು ವಿದ್ವಾಂಸರ ಮತ. ವಿಶಾಲಕಾಯವಾದ ಈ ಬ್ರಾಹ್ಮಣದಲ್ಲಿ ಯಜ್ಞಸಂಸ್ಥೆಯ ಅನೇಕ ವಿವರಗಳು ವಿಸ್ತೃತವಾಗಿವೆ. ಅಗ್ನಿಷ್ಟೋಮ ಯಾಗದಲ್ಲಿ ಋತ್ವಿಕ್ಕುಗಳನ್ನು ವರಣ ಮಾಡುವ ವಿಧಾನದಿಂದ ಇದು ಆರಂಭವಾಗುತ್ತದೆ. ಹೋತೃವಿಗೆ ಕೊಡಬೇಕಾದ ದಕ್ಷಿಣೆ 125 ಹಸುಗಳೆಂದು ತಿಳಿಸುತ್ತದೆ ಇದು.

ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿಲ್ಲದ ಚೈತ್ರಾದಿ ಮಾಸಗಳ ಹೆಸರುಗಳನ್ನು ಇದು ಹೇಳುವುದರಿಂದಲೂ, ಮಾಘದ ಆದಿಯಲ್ಲಿ ಉದಗಯನವನ್ನು ತಿಳಿಸುವುದರಿಂದಲೂ ಇದರ ಕಾಲ ವೇದಾಂಗಕ್ಕಿಂತ ಸ್ವಲ್ಪ ಹಿಂದಿನ ಕಾಲವಾದ ಕ್ರಿ. ಪೂ. 1400 ಇರಬೇಕೆಂದು ಎಸ್. ಬಿ. ದೀಕ್ಷಿತರು ಹೇಳುತ್ತಾರೆ.

ಯಜ್ಞಾನುಷ್ಠಾನಗಳಲ್ಲಿ ಉದ್ಗಾತೃವಿನ ಕಾರ್ಯದ ವಿಸ್ತೃತವಾದ ವಿವರಣೆಯನ್ನು ಈ ಬ್ರಾಹ್ಮಣ ಕೊಡುತ್ತದೆ. ಒಂದು ದಿನದ ಯಾಗದಿಂದ ಹಿಡಿದು ಸಹಸ್ರ ಸಂವತ್ಸರಗಳವರೆಗೆ ನಡೆಯುವ ಯಾಗಗಳ ವಿವಿಧ ರೂಪಗಳನ್ನು ಈ ಬ್ರಾಹ್ಮಣ ಪ್ರತಿಪಾದಿಸುತ್ತದೆ. ಈ ಯಾಗಗಳಲ್ಲಿ ಗಾನಮಾಡಬೇಕಾದ 'ಸ್ತೋಮ'ಗಳ ವಿಶದ ವರ್ಣನೆ ಇಲ್ಲಿದೆ.

ಇದರ ಎರಡು ಮೂರನೇ ಅಧ್ಯಾಯಗಳಲ್ಲಿ ತ್ರಿವೃತ್, ಪಂಚದಶ, ಸಪ್ತದಶ ಮುಂತಾದ ಸ್ತೋಮಗಳ ವರ್ಣನೆಯೂ ನಾಲ್ಕು ಮತ್ತು ಐದನೇ ಅಧ್ಯಾಯಗಳಲ್ಲಿ 'ಗವಾಮಯನ'ದ ವರ್ಣನೆಯೂ ಇದೆ. ಗವಾಮಯನವೆಂಬುದು ಒಂದು ವರ್ಷ ಕಾಲ ನಡೆಯುವ ಯಾಗ. ಇದು ಸಮಸ್ತ ಸತ್ರಗಳಿಗೂ ಪ್ರಕೃತಿಭೂತವಾದುದು. ಆರನೇ ಅಧ್ಯಾಯದಲ್ಲಿ ಜ್ಯೋತಿಷ್ಟೋಮ ಉಕ್ಥ್ಯ ಮತ್ತು ಅತಿರಾತ್ರಗಳ ವರ್ಣನೆ ಇದೆ. ಇವು ಏಕಾಹ ಯಜ್ಞಗಳು ಮತ್ತು ಅಹೀನ ಯಜ್ಞಗಳಿಗೆ ಪ್ರಕೃತಿಗಳಾಗಿವೆ. ಇದೇ ಅಧ್ಯಾಯದ ಆರನೇ ಖಂಡದಲ್ಲಿ ಜ್ಯೋತಿಷ್ಟೋಮದ ಉತ್ಪತ್ತಿ, ಉದ್ಗಾತೃವಿನ ಮೂಲಕ ಔದುಂಬರೀ ಶಾಖೆಯ ಸ್ಥಾಪನೆ ಹಾಗೂ ದ್ರೋಣಕಲಶದ ಸ್ಥಾಪನೆಯ ವಿಚಾರವಿದೆ. ಏಳನೇ ಅಧ್ಯಾಯದಲ್ಲಿ ಪ್ರಾತಃ ಸವನ, ಮಾಧ್ಯಂದಿನ ಸವನಗಳ ವರ್ಣನೆ ಇದೆ. ರಥಂತರ, ಬೃಹತ್, ನೌಧಸ, ಕಾಲೇಯ ಸಾಮಗಳ ವರ್ಣನೆಯೂ ಇದೆ. ಎಂಟು ಒಂಭತ್ತನೇ ಅಧ್ಯಾಯಗಳಲ್ಲಿ ಸಾಯಂ ಸವನದ ವಿಚಾರವೂ ಹತ್ತರಿಂದ ಹಿಡಿದು ಹದಿನೈದನೇ ಅಧ್ಯಾಯಗಳಲ್ಲಿ ದ್ವಾದಶಾಹಯಾಗದ ವಿಧಾನದ ವರ್ಣನೆ ಇದೆ. 16 ಮತ್ತು

17ನೇ ಅಧ್ಯಾಯಗಳಲ್ಲಿ ನಾನಾ ಪ್ರಕಾರಗಳಾದ ಏಕಾಹ ಯಾಗಗಳ ವರ್ಣನೆ ಇದೆ. 20 ರಿಂದ 22 ರಲ್ಲಿ ಅಹೀನ ಯಾಗಗಳ ವರ್ಣನೆ ಇದೆ. ಅಹೀನವೆನ್ನುವುದರ ಲಕ್ಷಣ– 'ತ್ರೈವರ್ಣಿಕಾಧಿಕಾರಿಕಃ ಸದಕ್ಷಿಣಃ ಅತಿರಾತ್ರ ಸಂಸ್ಥಾಕಃ ಏಕದ್ವಿತ್ರಿಚತುರಾದ್ಯನೇಕ ಯಜಮಾನ ಕರ್ತೃಕಃ ಸೋಮಯಾಗಃ ಅಹೀನಃ' ಎಂದು ಹೇಳಿದೆ. ಈ ಯಾಗದಲ್ಲಿ ಮೊದಲ ಮೂರು ವರ್ಣದವರಿಗೂ ಅಧಿಕಾರವುಂಟು; ದಕ್ಷಿಣೆಯೂ ಉಂಟು ; ಕೊನೆಯಲ್ಲಿ ಅತಿರಾತ್ರ ಸಂಸ್ಥೆಯ ಅನುಷ್ಠಾನ ಉಂಟು ; ಒಬ್ಬರು, ಇಬ್ಬರು, ಮೂವರು ಅಥವಾ ನಾಲ್ಕು ಮಂದಿ ಯಜಮಾನರುಗಳಾಗಬಹುದು. 23ರಿಂದ 25ನೇ ಅಧ್ಯಾಯದಲ್ಲಿ ಸತ್ರಗಳ ವರ್ಣನೆ ಇದೆ. ಸತ್ರವೆಂದರೇನು ? 'ಬ್ರಾಹ್ಮಣಕರ್ತೃಕಃ ಅದಕ್ಷಿಣಃ ಉಭಯತಃ ಅತಿರಾತ್ರಸಂಸ್ಥಾಕಃ ಸೋಮಯಾಗ ವಿಶೇಷಃ ಸತ್ರಮ್' ಎಂದು ಇದನ್ನು ತಿಳಿಸಿದ್ದಾರೆ. ಸತ್ರದಲ್ಲಿ ಆಹಿತಾಗ್ನಿ ಅಗ್ನಿಷ್ಟೋಮ ಸಂಸ್ಥೆಯ ಯಜಮಾನರುಗಳು ಕಡಮೆಯೆಂದರೆ 17 ಮಂದಿಯೂ ಅತ್ಯಧಿಕವೆಂದರೆ 24 ಮಂದಿ ಅಧಿಕಾರಿಗಳೂ ಆಗುತ್ತಾರೆ. ಇವರೆಲ್ಲರೂ ಯಜಮಾನರುಗಳೇ. ಸತ್ರಜನ್ಯವಾದ ಫಲ ಇವರೆಲ್ಲರಿಗೂ ಸಮಾನವಾಗಿರುವುದು. ಯಾರಿಗೂ ದಕ್ಷಿಣೆ ಇಲ್ಲ. 17 ಜನ ನಿರತರಾದಾಗ ಒಬ್ಬನನ್ನು ಗೃಹಪತಿ ಎನ್ನುತ್ತಾರೆ. ಉಳಿದ 16 ಮಂದಿ ಬ್ರಹ್ಮಾದಿಗಳ ಕೆಲಸವನ್ನು ನಿರ್ವಹಿಸುತ್ತಾರೆ. 24 ಜನ ಅಧಿಕಾರಿಗಳಾದಾಗ ಎಂಟು ಜನ ಗೃಹಪತಿಗಳಾಗಿ ಉಳಿದ 16 ಜನ ಋತ್ವಿಕ್ಕುಗಳ ಕೆಲಸವನ್ನು ನಡೆಸುತ್ತಾರೆ. ಈ ಅಧ್ಯಾಯದಲ್ಲಿಯೇ 13 ದಿನದಲ್ಲಿ ಸಮಾಪ್ತಿಯಾಗುವ ತ್ರಯೋದಶಾಹ ಯಜ್ಞದಿಂದ ಹಿಡಿದು ಸಹಸ್ರ ಸಂವತ್ಸರ ಸತ್ರಗಳವರೆಗೆ ವಿವಿಧವಾದ ಯಜ್ಞಗಳ ವರ್ಣನೆ ಮೂಡಿ ಬಂದಿದೆ. ಸ್ಥೂಲವಾದ ಈ ವಿವೇಚನೆಯಿಂದ ಸಾಮ ಮತ್ತು ಸೋಮಯಾಗದ ವರ್ಣನೆಯೇ ಈ ಬ್ರಾಹ್ಮಣದ ಮುಖ್ಯವಾದ ಉದ್ದೇಶವೆಂದು ತಿಳಿಯಬಹುದು.

ಸಾಮಗಳ ಹೆಸರುಗಳನ್ನೂ ಅವುಗಳ ಉದಯವನ್ನೂ ವಿವರಿಸುವುದು ಸಾಮವೇದಕ್ಕೆ ಸೇರಿದ ಈ ಬ್ರಾಹ್ಮಣಕ್ಕೆ ಉಚಿತವಾಗಿಯೇ ಇದೆ. 'ಸಾಮನ್' ಶಬ್ದ ಬಹಳ ಪ್ರಾಚೀನವಾದುದು. ಸಾಮಗಳ ಹೆಸರುಗಳು ಅವುಗಳ ದ್ರಷ್ಟಾರರ ಹೆಸರುಗಳ ಮೂಲಕ ಬಂದವು. ದ್ಯುತ್ಯಾನ ಋಷಿಯಿಂದ ದೃಷ್ಟವಾದುದು 'ದ್ಯೌತಾನ.' ಶರ್ಕರ ದೃಷ್ಟವಾದ ಸಾಮವೇ 'ಶಾರ್ಕರ'. ವೈಖಾನಸ ಋಷಿಗಳಿಂದ ದೃಷ್ಟವಾದುದು 'ವೈಖಾನಸ'. ರಥಂತರ, 'ಯಜ್ಞಾಯಜ್ಞೀಯ', ವಾರವಂತೀಯ ಮುಂತಾದ ಸಾಮಗಳು ಇನ್ನೂ ಪ್ರಾಚೀನವಾದವು. ಅವುಗಳ ಉತ್ಪತ್ತಿಯನ್ನು ಈ ಬ್ರಾಹ್ಮಣದಲ್ಲಿಯೂ ಹೇಳಿಲ್ಲದಿರುವುದು ಗಮನಾರ್ಹ. ಸಾಮಗಳ ಸ್ತುತಿ ಮತ್ತು ಮಹತ್ತ್ವವನ್ನು ಪ್ರದರ್ಶಿಸುವುದಕ್ಕಾಗಿ ಅನೇಕ ಪ್ರಾಚೀನವಾದ ಆಖ್ಯಾಯಿಕೆಗಳನ್ನೂ ಅಲ್ಲಲ್ಲಿ ನಿರೂಪಿಸಲಾಗಿದೆ.

ಯಾಜ್ಞಿಕವಾದ ವಿಷಯಗಳ ವಿವೇಚನೆಯಲ್ಲಿ ವಿಭಿನ್ನ ಬ್ರಹ್ಮವಾದಿಗಳ ಅಭಿಪ್ರಾಯವನ್ನು ಉದಾಹರಿಸುತ್ತಾ ಭಾಲ್ಲವಿಗಳು ಸರಿಯಾದ ರೀತಿ ಆಚರಿಸುತ್ತಿದ್ದರೆಂದು ಸಮರ್ಥಿಸಿ ಇತರರ ಖಂಡನೆಯನ್ನು ಮಾಡಿದೆ. (ತಾಂ. ಬ್ರಾ. 17, 4, 3) ಕೌಷೀತಕರ ಆಚರಣೆಯ ಖಂಡನೆ ವಿಶಿಷ್ಟವಾಗಿದೆ. ತ್ರಿಖರ್ವಶಾಖೀಯರ ಉಲ್ಲೇಖ (2, 8, 3) ಬಂದಿರುವುದರಿಂದ ಶಾಖೆಗಳು ಬಹಳ ಪ್ರಾಚೀನವಾಗಿದ್ದವೆಂದು ತಿಳಿಯಬಹುದು.

ಯಜ್ಞಸಂಸ್ಥೆಗೆ ಪರಮಪ್ರಾಧಾನ್ಯವಿತ್ತು. ಇಂದ್ರನೇ ಪ್ರಧಾನನಾದ ದೇವತೆ. ಅವನೂ ಯಾಗಮಾಡಿ ಸ್ವರ್ಗವನ್ನು ಪಡೆಯುವನು. ಪ್ರಜಾಪತಿಯೂ ಯಾಗವನ್ನಾಚರಿಸುವುದರಿಂದಲೂ

ಹಲವಾರು ಸಾಮಗಳ ಸಹಾಯದಿಂದಲೂ ಪ್ರಪಂಚವನ್ನು ಸೃಜಿಸುತ್ತಾನೆ. ಹೀಗೆ 'ಯಾಗ' ಮತ್ತು 'ಸಾಮ' ಇವುಗಳು ಸರ್ವಶ್ರೇಷ್ಠವಾಗಿವೆ. ವಿಷ್ಣುವಿಗೂ ಯಜ್ಞಕ್ಕೂ ತಾದಾತ್ಮ್ಯವನ್ನು ಇಲ್ಲಿ ಹೇಳಿದೆ. (ತಾಂ. ಬ್ರಾ. 9-6). ಸಾಧ್ಯದೇವತೆಗಳು ದೇವತೆಗಳ ಪುರಾತನರೆಂದೂ ವಿಶಿಷ್ಟವಾದ ಯಾಗವನ್ನಾಚರಿಸಿದುದರ ಕಾರಣ ಇವರು ಸ್ವರ್ಗವನ್ನು ಪಡೆದರೆಂದೂ ವರ್ಣಿಸಿದೆ. (ತಾಂ. ಬ್ರಾ. 25-7). ಹೀಗೆ ತಾಂಡ್ಯ ಬ್ರಾಹ್ಮಣದ ಕಾಲ ಯಜ್ಞದ ಉತ್ಕರ್ಷದ ಕಾಲವಾಗಿದೆ. ಯಜ್ಞವೇ ಸಕಲಾರ್ಥ ಪ್ರಾಪ್ತಿಗೂ ಸಾಧನವೆಂಬ ನಂಬಿಕೆ ಇದ್ದ ಕಾಲವದು. ಯಜ್ಞವನ್ನಾಚರಿಸದ ಯತಿಗಳನ್ನು ಇಂದ್ರನು ನರಿಗಳಿಗೆ ಭಕ್ಷಣಾರ್ಥವಾಗಿ ಕೊಟ್ಟನೆಂದು ಉಲ್ಲೇಖಿಸಲಾಗಿದೆ. (ತಾಂ. ಬ್ರಾ. 18-1-6).

ಒಂದೊಂದು ಯಾಗದಲ್ಲಿಯೂ ಕೊಡಬೇಕಾದ ದಕ್ಷಿಣೆಯನ್ನು ಈ ಬ್ರಾಹ್ಮಣ ವಿಧಿಸುತ್ತದೆ. ದಕ್ಷಿಣೆ ಪ್ರಾಯಃ ಹಸುಗಳ ರೂಪದಲ್ಲಿತ್ತು. ಒಂದು ಕಡೆ 1000 ಹಸುಗಳ ದಕ್ಷಿಣೆ ವಿಧಿಸಿದೆ. ಬ್ರಹ್ಮನಿಗೆ ಕರಿಯ ಬಣ್ಣದ ಕುದುರೆಯನ್ನೂ (18-1), ಸಗೋತ್ರ ಬ್ರಾಹ್ಮಣನಿಗೆ ಸೋಮಚಮಸವನ್ನೂ, ಸುಬ್ರಹ್ಮಣ್ಯನಿಗೆ ಗಂಡಾಡನ್ನೂ, (18-8), ಗ್ರಾವಸ್ತುತನಿಗೆ ಹೆಂಗರುವನ್ನೂ ಕೊಡಬೇಕಾಗಿತ್ತು. ಚಿನ್ನ ಬೆಳ್ಳಿಯ ದಕ್ಷಿಣೆಗಳೂ ಇದ್ದವು. 'ನಿಷ್ಕ' ಎಂಬುದು ನಾಣ್ಯವಾಗಿತ್ತು. ಕನಿಷ್ಠ ದಕ್ಷಿಣೆ 12 ಮಾನಗಳಾಗಿ (ನಾಣ್ಯ ಅಥವಾ ನಿರ್ದಿಷ್ಟ ರೂಪದ ಚಿನ್ನದ ಪುಡಿ) (18-1) 1000 ಮಾನಗಳು ಬಹಳ ಹೆಚ್ಚಿನ ದಕ್ಷಿಣೆಯಾಗಿತ್ತು.

ಚಾತುರ್ವರ್ಣ್ಯ ವ್ಯವಸ್ಥೆ ರೂಢಮೂಲವಾಗಿತ್ತು. ರಾಜನಿಗೆ ವೈಶ್ಯರೆಲ್ಲಾ ಪ್ರಜೆಗಳಾಗಿದ್ದರು. ಬ್ರಾಹ್ಮಣರು ಕ್ಷತ್ರಿಯರ ಅಧಿಕಾರಕ್ಕೊಳಪಟ್ಟರಲಿಲ್ಲ. ವಿಶ್ ಎಂದರೆ ಪ್ರಜೆಗಳು ಎಂಬ ಅರ್ಥವೇ ಇಲ್ಲಿದೆ. ವೈಶ್ಯರೂ ಕೆಲವು ಸಲ ರಾಷ್ಟ್ರವಾಗಿ ರಾಜನನ್ನು ಅಧಿಕಾರದಿಂದ ಕಿತ್ತೊಗೆಯುತ್ತಿದ್ದರು. ವೈಶ್ಯರೂ ಯಾಗಮಾಡಲು ಅಧಿಕಾರಿಗಳಾಗಿದ್ದರು. 'ವಾತ್ಸ' ಸಾಮದ ವಿಷಯದ ಆಖ್ಯಾಯಿಕೆಯಿಂದ ಶೂದ್ರಾಪುತ್ರನೂ ಬ್ರಹ್ಮಿಷ್ಠನಾಗುತ್ತಿದ್ದನು ತನ್ನ ಸ್ವಂತ ಶಕ್ತಿಸಾಮರ್ಥ್ಯಗಳಿಂದ. ಕಾಣ್ವಋಷಿಗಳಾಗಿದ್ದರು ವತ್ಸ ಮತ್ತು ಮೇಧಾತಿಥಿ ಎಂಬುವರು. ಮೇಧಾತಿಥಿ ವತ್ಸನನ್ನು 'ಶೂದ್ರಾಪುತ್ರ' 'ಅಬ್ರಾಹ್ಮಣ' ಎಂದು ನಿಂದಿಸಿದನು. ಆಗ ತಾವಿಬ್ಬರೂ ತಮ್ಮ ತಮ್ಮ ಸಾಮಗಳೊಡನೆ ಅಗ್ನಿಯ ಬಳಿಗೆ ಹೋಗಿ ತಮ್ಮಿಬ್ಬರಲ್ಲಿ ಯಾರು ಶ್ರೇಷ್ಠರಾದ ಬ್ರಾಹ್ಮಣರೆಂಬುದನ್ನು ನಿರ್ಣಯಿಸಬೇಕೆಂದು ವತ್ಸನು ಹೇಳಿದನು. ಆಗ ವತ್ಸನು ತನ್ನ ಸಾಮವನ್ನು ಹಾಡುತ್ತಾ ಅಗ್ನಿಯಲ್ಲಿ ಪ್ರವೇಶಿಸಿಬಿಟ್ಟನು. ಅಗ್ನಿ ಅವನ ಕೂದಲೊಂದನ್ನೂ ದಹಿಸಲಿಲ್ಲ–'ತಸ್ಯ ಲೋಮ ಚ ನೌಷತ್' (ತಾಂ. ಬ್ರಾ. 14-6-6). ಅಲ್ಲಿಂದ ವಾತ್ಸಸಾಮ ಇಷ್ಟಾರ್ಥಪೂರಕವಾದುದಾಗಿ 'ಕಾಮಸನಿ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು.

ಈ ಬ್ರಾಹ್ಮಣದಲ್ಲಿ ಮೊಟ್ಟಮೊದಲಾಗಿ 'ವ್ರಾತ್ಯ'ರ ಉಲ್ಲೇಖವಿದೆ. ಇವರು ಯಾರು? ಆರ್ಯರ ಗುಂಪಿಗೇ ಸೇರಿದ್ದರೂ ವೈದಿಕ ಕರ್ಮಾನುಷ್ಠಾನ ಮಾಡದವರೇ ? ಅಥವಾ ಅನಾರ್ಯರೇ ? ವೈದಿಕ ಕರ್ಮಾನುಷ್ಠಾನವನ್ನಾಚರಿಸದ ಆರ್ಯ ಜನಾಂಗದವರನ್ನೇ ವ್ರಾತ್ಯರೆನ್ನುತ್ತಿದ್ದರೆಂದು ಗೊತ್ತಾಗುವುದು. ಆರ್ಯರೊಡನೆ ಸಮಸಮವಾದ ಸ್ಥಾನವನ್ನು ಪಡೆಯಲು ಆಚರಿಸಬೇಕಾದ ವ್ರಾತ್ಯಯಜ್ಞದ ವರ್ಣನೆ 17ನೇ ಅಧ್ಯಾಯದಲ್ಲಿದೆ. ವ್ರಾತ್ಯರನ್ನು ಹೀನರೆಂದು ಕರೆದಿದೆ. 'ಹೀನಾವಾ ಏತೇ ಹೀಯಂತೇ ಯೇ ವ್ರಾತ್ಯಂ ಪ್ರವಸಂತಿ ನಹಿ ಬ್ರಹ್ಮಚರ್ಯಂ ಚರಂತಿ ನ ಕೃಷಿಂ ನ ವಾಣಿಜ್ಯಂ' ಎಂದು ಹೇಳಿ ಬ್ರಾಹ್ಮಣನ ಜೀವನವನ್ನಾಗಲೀ ಕೃಷಿವಾಣಿಜ್ಯವನ್ನಾಗಲೀ ಮಾಡದವನು ವ್ರಾತ್ಯನೆಂದು ಹೇಳುತ್ತದೆ.

ದೀಕ್ಷಿತರಾಗದಿದ್ದರೂ ದೀಕ್ಷಿತರಂತೆ ಇವರು ಮಾತಾಡುತ್ತಿದ್ದರಂತೆ. ಇವರು ಕೆಂಪು ರುಮಾಲುಗಳನ್ನು ಧರಿಸುತ್ತಿದ್ದರಂತೆ. ಇಷ್ಟರಿಂದ ವ್ರಾತ್ಯರು ಆರ್ಯಸಮುದಾಯದವರೇ ಅನಾರ್ಯರೇ ಎಂದು ನಿರ್ಧರಿಸುವುದು ಕಷ್ಟ. ನಿರ್ದಿಷ್ಟವಾದ ವಯಸ್ಸಿನೊಳಗೆ ಉಪನಯನವಾಗದವರನ್ನು ವ್ರಾತ್ಯರೆಂದು ಸ್ಮೃತಿಗಳು ಹೇಳುವುದನ್ನಿಲ್ಲಿ ನಾವು ಗಮನಿಸಬಹುದು. (17-1) ರಲ್ಲಿ ದೊರೆಯುವ ವ್ರಾತ್ಯರ ವೇಷಭೂಷಣಗಳೂ ಆಚಾರ ವಿಚಾರಗಳೂ ಮಹತ್ವಪೂರ್ಣವಾಗಿವೆ. ಆಚಾರ ಹೀನರಾಗಿ ಪ್ರವಾಸಮಾಡುವ ಆರ್ಯ ಜನರನ್ನೇ ವ್ರಾತ್ಯರೆಂದು ಕರೆಯುತ್ತಿದ್ದರು. ಸಾಯಣಭಾಷ್ಯದಲ್ಲಿ ಈ ವ್ರಾತ್ಯರಲ್ಲಿನ ನಾಲ್ಕು ಭೇದಗಳನ್ನು ಹೇಳಿದೆ. (ತಾ. 17-1-1). ಇವರ ದೋಷನಿವಾರಣೆಗೆ ವಿವಿಧವಾದ ಮಾರ್ಗಗಳನ್ನು ವಿಧಿಸಿದೆ. ಇವುಗಳಲ್ಲಿ ಕೊಡಬೇಕಾದ ದಕ್ಷಿಣೆಗಳ ವಿವರಗಳೂ ವಿಚಿತ್ರವಾಗಿವೆ. ವ್ರಾತ್ಯರ ಗೃಹಪತಿಗೆ ಉಷ್ಣೀಷ, ಪ್ರತೋದ, ಧನುರ್ದಂಡ, ಫಲಕಾಸ್ತೀರ್ಣವಿಪಥ, ಕರಿಯಂಚಿನ ಧೋತಿ, ಕೃಷ್ಣ ಮತ್ತು ಶ್ವೇತವರ್ಣದ ಜಿಂಕೆಯ ಚರ್ಮ, ರಜತನಿಷ್ಕ–ಇವುಗಳನ್ನು ಕೊಡಬೇಕೆಂದಿದೆ. (17-1-14 ; 17-1-15). ದೇವತೆಗಳಲ್ಲಿಯೂ ವ್ರಾತ್ಯರಿದ್ದರಂತೆ (24-18-1), ಅವರು ವರುಣನನ್ನು ಸಲಹೆ ಕೇಳದೆ ಯಾಗ ಮಾಡಿದರೆಂದೂ ಆ ಯಾಗದಲ್ಲಿ ಬುಧನು ಸ್ಥಪತಿಯಾಗಿದ್ದನೆಂದೂ, ಅವನು ಸೋಮಾಯನಿಯೆಂದು ಹೇಳುತ್ತದೆ.

ಸರ್ಪಗಳೂ ಸರ್ಪಸತ್ರವನ್ನಾಚರಿಸಿದರು. (ತಾಂ. ಬ್ರಾ. 25, 15, 4), ಈ ಸತ್ರದಲ್ಲಿ ಜರ್ವರ ಗೃಹಪತಿಯಾಗಿದ್ದನು. ಅಪಮೃತ್ಯುವನ್ನವರು ಗೆದ್ದರಂತೆ. ಋತ್ವಿಕ್ಕುಗಳಾಗಿ ತಕ್ಷಕ, ಧೃತರಾಷ್ಟ್ರ, ಐರಾವತ, ಅರಿಮೇಜಯ, ಜನಮೇಜಯ ಮತ್ತು ಅರ್ಬುದ ಇವರಿದ್ದರು. ಈ ಸರ್ಪಗಳು ಯಾರೆಂಬುದೂ ಒಂದು ಸಮಸ್ಯೆಯಾಗಿದೆ. ಸರ್ಪಪೂಜಕರಾಗಿದ್ದ ಅನಾರ್ಯ ಸಮೂಹವನ್ನು ಇವರು ಪ್ರತಿನಿಧಿಸುವರೆಂದು ಕೆಲವು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ವಿಶ್ವಾಮಿತ್ರ ಮತ್ತು ಭರತರು ರೋಹಿತ ದೇಶವನ್ನು ತಮ್ಮ ರಾಜನ ನಾಯಕತ್ವದಲ್ಲಿ ಗೆದ್ದು ಬಂದರೆಂದು ತಿಳಿಸುವ ಉಲ್ಲೇಖ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಈ ಕಥೆ 14-3-13 ರಲ್ಲಿ ಬರುತ್ತದೆ. 'ರೋಹಿತ ಕೂಲೀಯ'ವೆಂಬ ಸಾಮವನ್ನು ವಿಶ್ವಾಮಿತ್ರನು ಕಂಡನೆಂದೂ ಇಲ್ಲಿ ಹೇಳಿದೆ. ಈ ದೇಶ ಯಮುನಾ ಸಮೀಪ ದೇಶವೆಂದು ಹೇಳುತ್ತಾರೆ. ಋಗ್ವೇದದ ರಾಜರುಗಳಿಂದ ತ್ರಸದಸ್ಯು, ಪುರುಕುತ್ಸ, ವೀತಹವ್ಯ ಮುಂತಾದವರೂ ಇಲ್ಲಿ ಉದಾಹರಿಸಲ್ಪಟ್ಟಿದ್ದಾರೆ.

ಬ್ರಾಹ್ಮಣಯುಗೀಯ ಭೌಗೋಳಿಕ ಜ್ಞಾನವೂ ನಮಗೆ ಇಲ್ಲಿ ಉಂಟಾಗುತ್ತದೆ. ಸರಸ್ವತೀ ಮಂಡಲ ಮತ್ತು ಕುರುಕ್ಷೇತ್ರವನ್ನು ಸ್ವರ್ಗಸಮಾನವೆಂದು ಕೊಂಡಾಡುತ್ತದೆ. (25 ಅ.) ಯಮುನಾನದಿಯಲ್ಲಿ ಅವಭೃಥ ಸ್ನಾನಮಾಡಬೇಕೆಂದು ವಿಧಿಸಿದೆ. ನೈಮಿಷಾರಣ್ಯದಲ್ಲಿ ನಡೆದ ಹನ್ನೆರಡು ವರ್ಷಗಳ ಸತ್ರದ ವರ್ಣನೆ 25-6-4ರಲ್ಲಿದೆ, ವಿನಶನ (25-10-1). ಪ್ಲಕ್ಷಪ್ರಾಸ್ರವಣ 25-10-16 ಮುಂತಾದ ಭೌಗೋಳಿಕ ಸ್ಥಾನಗಳ ನಿರ್ದೇಶವೂ ಇಲ್ಲಿದೆ. 17-14-2ರಲ್ಲಿ ಅಯುತ (ಹತ್ತು ಸಾವಿರ). ಪ್ರಯುತ (ಲಕ್ಷ), ನಿಯುತ (ದಶಲಕ್ಷ), ಅರ್ಬುದ (ಕೋಟಿ), ನ್ಯರ್ಬುದ (ದಶಕೋಟಿ), ನಿಖರ್ವ (ಅಬ್ಜ) ಮತ್ತು ಬದ್ವ (ಹತ್ತು ಅಬ್ಜ) ಮುಂತಾದ ಸಂಖ್ಯಾವಾಚಕಗಳ ಉಲ್ಲೇಖವಿದೆ. 10-8-1ರಲ್ಲಿ ಇಂದ್ರ ಶಬ್ದದ ಬೇರೆ ಬೇರೆ ವಿಭಕ್ತಿ ರೂಪಗಳ ಪ್ರಯೋಗವಿದೆ. 4-47ರಲ್ಲಿ ವೈದಿಕ ಛಂದಸ್ಸು ನಾಲ್ಕು ನಾಲ್ಕು ಅಕ್ಷರಗಳಿಂದಧಿಕವಾಗುತ್ತದೆಂಬ ನಿಯಮವನ್ನು ಹೇಳಿ ಗಾಯತ್ರಿಯಿಂದ ಮೊದಲಾಗಿ ಜಗತೀ

ಛಂದಸ್ಸಿನವರೆಗೆ ಬೇರೆ ಬೇರೆ ಛಂದಸ್ಸುಗಳ ಹೆಸರುಗಳನ್ನೂ ಆಯಾ ಛಂದಸ್ಸುಗಳ ಅಧಿದೇವತೆಗಳನ್ನೂ ತಿಳಿಸಿದೆ.

24-4-5ರಲ್ಲಿ ಯಾಗದಲ್ಲಿ ನಿಯುಕ್ತರಾದ ಬೇರೆ ಬೇರೆ ಋತ್ವಿಕ್ಕುಗಳ ಹೆಸರುಗಳನ್ನು ಕೊಡಲಾಗಿದೆ. ಹೀಗೆ ಈ ಬ್ರಾಹ್ಮಣದಲ್ಲಿ ಅನೇಕ ಮಹತ್ವಪೂರ್ಣವಾದ ವಿಚಾರಗಳಡಗಿವೆ.

## ಷಡ್ವಿಂಶ ಬ್ರಾಹ್ಮಣ

ಇದರ ಹೆಸರೇ ಸೂಚಿಸುವಂತೆ ಇದು 'ಪಂಚವಿಂಶ' ಬ್ರಾಹ್ಮಣದ ಪರಿಶಿಷ್ಟ ಭಾಗವಾಗಿದೆ. ಇದರಲ್ಲಿ ಐದು ಪ್ರಪಾಠಕಗಳಿವೆ. ಒಂದೊಂದು ಪ್ರಪಾಠಕದಲ್ಲಿಯೂ ಅನೇಕ ಖಂಡಗಳಿವೆ. ಇದರ ಐದನೆಯ ಪ್ರಪಾಠಕಕ್ಕೆ ಅದ್ಭುತ ಬ್ರಾಹ್ಮಣವೆಂಬ ಹೆಸರಿದೆ. ಭೂಕಂಪಗಳು, ಅಕಾಲದಲ್ಲಿ ಪುಷ್ಪಫಲಗಳ ಆವಿರ್ಭಾವ ಮೊದಲಾದ ಉತ್ಪಾತಗಳ ಶಾಂತಿಗಾಗಿ ಆಚರಿಸಬೇಕಾದ ಶಾಂತಿ ವಿಧಾನಗಳಿವೆ. ದೇವತಾವಿಗ್ರಹಗಳು ನಗುವುದು, ಅಳುವುದು, ಬೆವರುವುದು, ಚಲಿಸುವುದು ಮುಂತಾದ ಉತ್ಪಾತಗಳಿಗೂ ಪರಿಹಾರವನ್ನು ಇಲ್ಲಿ ಹೇಳಿವೆ. ಆ ಕಾಲದಲ್ಲಿ ರೂಢಿಯಲ್ಲಿದ್ದ ವಿಚಿತ್ರಭಾವನೆಗಳ ಪರಿಚಯ ಇದರಿಂದಾಗುವುದು. ಮಹಾಭಾರತದಲ್ಲಿ ಇಂತಹ ಉತ್ಪಾತಗಳ ಉಲ್ಲೇಖ ಬರುತ್ತದೆ. ದೇವತಾವಿಗ್ರಹಗಳ ಉಲ್ಲೇಖ ಬಂದಿರುವುದರಿಂದ ಇದು ಬ್ರಾಹ್ಮಣಗಳ ಕಾಲದ ನಂತರ ಸೇರಿರಬೇಕೆಂದು ವಿಮರ್ಶಕರ ಊಹೆ.

'ಸುಬ್ರಹ್ಮಣ್ಯ'ಋಕ್ಕುಗಳ ವಿಶೇಷ ವ್ಯಾಖ್ಯಾನ ಪ್ರಥಮಕಾಂಡದ ಆರಂಭದಲ್ಲಿದೆ. ಅಹೋರಾತ್ರಗಳ ಸಂಧಿಕಾಲ ಸಂಧ್ಯಾವಂದನದ ಕಾಲವೆಂದು 'ತಸ್ಮಾತ್ ಬ್ರಾಹ್ಮಣೋ ಅಹೋರಾತ್ರಸ್ಯ ಸಂಯೋಗೇ ಸಂಧ್ಯಾಮುಪಾಸ್ತೇ' (4-5-4) ಎಂಬಲ್ಲಿ ಹೇಳಿದೆ. ಹೀಗೆ ಅನೇಕ ಉಪಾದೇಯವಾದ ಅಂಶಗಳು ಇಲ್ಲಿ ದೊರೆಯುತ್ತವೆ.

## ಸಾಮವಿಧಾನ ಬ್ರಾಹ್ಮಣ

ಈ ಬ್ರಾಹ್ಮಣವೂ ಸಾಮವೇದಕ್ಕೆ ಸೇರಿದೆ. ಇದರ ವಿಷಯ ವಿವೇಚನೆ ಇತರ ಬ್ರಾಹ್ಮಣಗಳಿಗಿಂತ ಬೇರೆಯಾಗಿದೆ. ಶತ್ರುಧ್ವಂಸಕ್ಕಾಗಿ, ಧನಪ್ರಾಪ್ತಿಗಾಗಿ, ಅನೇಕ ಬಗೆಯ ಉಪದ್ರವಗಳ ಶಾಂತಿಗಾಗಿ ಮಾಡಬೇಕಾದ ಸಾಮಗಾಯನ ಹಾಗೂ ಅನುಷ್ಠಾನಗಳ ವಿವರಣೆ ಇಲ್ಲಿದೆ. ಅಥರ್ವವೇದದಲ್ಲಿ ವಿಶೇಷವಾಗಿ ಇಂದ್ರಜಾಲ ಮಾಟ ಮುಂತಾದ ಆಭಿಚಾರಕ ಕ್ರಿಯೆಗಳ ವಿವರಣೆ ಇದ್ದರೂ ಇತರ ವೇದಗಳಲ್ಲಿಯೂ ಆಭಿಚಾರಕಗಳ ವಿಷಯ ಇದೆ. ವೇದವೊಂದೊಂದೂ ಇತರ ವೇದಗಳನ್ನವಲಂಬಿಸದೆ ಸ್ವತಂತ್ರವಾಗಿರಲೆಂದು ಈ ಬಗೆಯ ಎಲ್ಲ ವಿಚಾರಗಳನ್ನೂ ಒಳಗೊಂಡಿದೆ. ಹೀಗಾಗಿ ಈ ಬ್ರಾಹ್ಮಣ ಅನೇಕ ಬಗೆಯ ಕಾಮ್ಯಕರ್ಮಗಳಿಗೆ ಬಳಸಬೇಕಾದ ಸಾಮಗಳನ್ನು ವಿಧಿಸುತ್ತದೆ. 'ಋಗ್ವಿಧಾನ' ಮತ್ತು 'ಯಜುರ್ವಿಧಾನ'ಗಳಲ್ಲಿ ಋಗ್ವೇದದ ಮತ್ತು ಯಜುರ್ವೇದದ ಮಂತ್ರಗಳ ಪ್ರಯೋಗವನ್ನು ವಿವರಿಸಿದೆ.

ಈ ಬ್ರಾಹ್ಮಣದಲ್ಲಿ ಮೂರು ಪ್ರಕರಣಗಳಿವೆ. ಕೃಚ್ಛ್ರ, ಅತಿಕೃಚ್ಛ್ರ ಮತ್ತು ಕೃಚ್ಛ್ರಾತಿಕೃಚ್ಛ್ರ ಎಂಬುವೇ ಅವು. ಸ್ಮೃತಿಗಳಲ್ಲಿ ಪಾಪಗಳಿಗೂ ಅಪರಾಧಗಳಿಗೂ ಪ್ರಾಯಶ್ಚಿತ್ತಗಳಾಗಿ ಇವುಗಳನ್ನು ವಿಸ್ತಾರವಾಗಿ ವಿಧಿಸಿರುವುದನ್ನು ನಾವು ಕಾಣುತ್ತೇವೆ. ಧರ್ಮಸೂತ್ರಗಳೂ ಧರ್ಮಶಾಸ್ತ್ರಗಳೂ ಈ ವಿಚಾರ ವಿವೇಚನೆ ಮಾಡಿವೆ. ಪುರಾಣಗಳಲ್ಲಿ ವರ್ಣಿತವಾದ ವ್ರತಗಳ ಮೂಲವನ್ನು ಈ ಬ್ರಾಹ್ಮಣದಲ್ಲಿ ಕಾಣಬಹುದು. ಸ್ವಾಧ್ಯಾಯವೂ ಆತ್ಮಶುದ್ಧಿಯನ್ನುಂಟು ಮಾಡಿ ಕಾಮಿತಾರ್ಥಗಳನ್ನು ದೊರಕಿಸಿಕೊಡುವುದೆಂಬುದನ್ನು ಇದು ಸಾರುತ್ತದೆ.

ಮಂತ್ರವೊಂದನ್ನು ಜಲದಲ್ಲಿ ನಿಂತು ಜಪಿಸುವುದರಿಂದಾಗುವ ಬಗೆ ಬಗೆಯ ಮಂತ್ರಸಿದ್ಧಿಯ ಮತ್ತು ಫಲಗಳ ವಿಚಾರವನ್ನರುಹುವ ಪುರಾಣ ವಚನಗಳಿಗೆ ಇದು ಮೂಲವಾಗಿದೆ. ಹೀಗೆ ಇಲ್ಲಿ ಕಾಮ್ಯಪ್ರಯೋಗ ಮತ್ತು ಪ್ರಾಯಶ್ಚಿತ್ತವಿಧಾನ ಮುಖ್ಯವಾದ ವಿಷಯವಾಗಿದೆ. ಈ ಬಗೆಯ ವಿಚಾರ ಇತರ ಬ್ರಾಹ್ಮಣ ಭಾಗಗಳಲ್ಲಿಯೂ ಅಲ್ಲಲ್ಲಿ ಕಂಡುಬರುತ್ತದೆ.

(ಐತರೇಯ ಬ್ರಾಹ್ಮಣ 8-28 ಬ್ರಾಹ್ಮಣ ಪರಿಮರಕ್ರಿಯೆ ; ಐತರೇಯ ಆರಣ್ಯಕದ ಆದಿಮಭಾಗ ನೋಡಿ.)

ಶತ್ರುವನ್ನು ಗ್ರಾಮದಿಂದ ಉಚ್ಚಾಟನೆ ಮಾಡಿಸಲು ವಿಧಿಸಿರುವ ಕ್ರಿಯೆ ಹೀಗಿದೆ ; ಚಿತೆಯಿಂದ ಬೆಂಕಿಯನ್ನು ತಂದು ನಾಲ್ಕು ರಸ್ತೆಗಳು ಸೇರುವಕಡೆ ಇಟ್ಟು, ನಿರ್ದಿಷ್ಟವಾದ ಸಾಮಗಳನ್ನು ಹಾಡಬೇಕು ; ಹಾಗೂ ಶತ್ರುವಿನ ಮನೆಯಲ್ಲಿ ಹಾಸುಗೆಯ ಮೇಲೆ ಆ ಭಸ್ಮವನ್ನು ಎರಚಬೇಕು (2-6-14 ; 3-6-12). ಒಂದು ಮಣ ಚಿನ್ನವನ್ನು ಪಡೆಯಲು ಮಣಿಭದ್ರನೆಂಬ ಯಕ್ಷನಿಗೆ ಮಾಂಸ ಬಲಿಯನ್ನು ಕೊಡುವ ಹಾಗೂ ಸಾಮಗಾಯನದೊಡನೆ ಪೂಜೆಸಲ್ಲಿಸುವ ವಿಧಾನವನ್ನು ವಿಧಿಸಿದೆ–'ಅಷ್ಟರಾತ್ರೋಪೋಷಿತಃ ಅಮಾವಾಸ್ಯಾಯಾಂ ನಿಶ್ಯೇಕವೃಕ್ಷೇ ಕ್ಷೀರಿಣ್ಯರಣ್ಯೇ ಮಾಂಸಂ ಸುಸಂಸ್ಕೃತಂ ಏಕತ್ರಪ್ತ್ಯವರಾರ್ಧ್ಯಂ ಮಣಿಭದ್ರಾಯೋಪಹರೇತ್ ವಿಷಸ್ಪತೇ ಮಧುಮಾನ್ ಇಂದ್ರ ಸೋಮ ಇತ್ಯೇತೇನ ಹಿರಣ್ಯದ್ರೋಣಂ ಲಭತೇ |' (3-3-3). ಪುರಾಣಪ್ರಸಿದ್ಧರಾದ ರುದ್ರಾನುಚರರ ಶಾಂತಿಗಾಗಿಯೂ ಸಾಮಗಳನ್ನು ವಿಧಿಸಿದೆ. ರುದ್ರ ಮತ್ತು ವಿಷ್ಣುಗಳ ಶಾಂತಿಗಾಗಿಯೂ ವಿನಾಯಕ ಮತ್ತು ಸ್ಕಂದರ ಶಾಂತಿಗಾಗಿಯೂ ಎರಡೆರಡು ಸಾಮಗಳಿವೆ (1-4-6-19). ಶತ್ರುವನ್ನು ಕೊಲ್ಲುವ ವಿಚಿತ್ರವಿಧಿಯೊಂದು ಹೀಗಿದೆ : ನಾದಿದ ಹಿಟ್ಟಿನಿಂದ ಪ್ರತಿಮೆಯೊಂದನ್ನು ಮಾಡಿ ಅದನ್ನು ಚೂರಿಯಿಂದ ಕತ್ತರಿಸಿ ಒಂದೊಂದು ಭಾಗವನ್ನೂ ಬೆಂಕಿಯಲ್ಲಿ ಎಸೆಯಬೇಕು ; ಉಳಿದ ಭಾಗವನ್ನು ತಿನ್ನಬೇಕು-(2-5-4). ರಾಜಯಕ್ಷ್ಮವನ್ನು ದೂರಮಾಡುವ ವಿಧಿಯ ವರ್ಣನೆ (2-4-9)ರಲ್ಲಿದೆ. ರೋಗ ಪರಿಹಾರಕ್ಕಾಗಿ ಆವಶ್ಯಕವಾದ ವಿಧಾನಗಳನ್ನು ಹೀಗೆ ಹೇಳಿದೆ.

ಮೂರನೇ ಪರಿಚ್ಛೇದದಲ್ಲಿ ಐಶ್ವರ್ಯಪ್ರಾಪ್ತಿಗೂ, ಆಯುಷ್ಯಪ್ರಾಪ್ತಿಗೂ, ನೂತನ ಗೃಹಪ್ರವೇಶಕ್ಕೂ ಸಂಬಂಧಿಸಿದ ಅನೇಕಾನೇಕ ಅನುಷ್ಠಾನಗಳ ವರ್ಣನೆ ಇದೆ. ಅಭಿಷೇಕ ಸಮಯದಲ್ಲಿ 'ಏಕವೃಷ' ಸಾಮದಿಂದ ಅಭಿಷೇಕ ನಡೆಸಿದರೆ ಅವನು ಸಮ್ರಾಟ್ ಆಗುತ್ತಿದ್ದನಂತೆ. ಧನಧಾನ್ಯ ಸಮೃದ್ಧಿ, ಪಶುಸಂಪತ್ತು, ಸೇವಕ ಸಂಪತ್ತು ಮುಂತಾದವುಗಳ ಪ್ರಾಪ್ತಿಗಾಗಿ ಅನುಷ್ಠಿಸಬೇಕಾದ ಸಾಮಗಳ ಮತ್ತು ಅನುಷ್ಠಾನಗಳ ವಿವರ ಇಲ್ಲಿದೆ. ಯುದ್ಧದಲ್ಲಿ ಜಯಪ್ರಾಪ್ತಿಗಾಗಿ ವಿಶೇಷ ವಿಧಾನಗಳಿವೆ. ಭೂತಪ್ರೇತಗಳು, ಗಂಧರ್ವರು, ಅಪ್ಸರರು ಮುಂತಾದವರನ್ನು ನೇರವಾಗಿ ನೋಡುವುದಕ್ಕಾಗಿ ಎರಡು ಸಾಮಗಳನ್ನು ವಿಧಿಸಿದೆ. ಈ ಅನುಷ್ಠಾನವನ್ನೆರಡು ಬಾರಿ ಅನುಷ್ಠಿಸಿದರೆ ದೇವತೆಗಳೂ ಪ್ರತ್ಯಕ್ಷರಾಗುವರು (3-7-6). ಗುಪ್ತನಿಧಿಯನ್ನು ಕಂಡುಹಿಡಿಯಲೂ, ಸರ್ವಾಭೀಷ್ಟ ಸಂಪ್ರಾಪ್ತಿಗೂ ಅನೇಕ ವಿಧಾನಗಳಿವೆ. ಒಮ್ಮೆ ಕೇಳಿದ ಮಂತ್ರವನ್ನು ಹಾಗೆಯೇ ಧಾರಣ ಮಾಡಿ ಪಾಠ ಮಾಡುವವರಿಗೆ 'ಶ್ರುತಿನಿಗಾದಿನ್' ಎಂಬ ಹೆಸರಿದೆ. ಇಂಥ ಸಿದ್ಧಿಯನ್ನು ಪಡೆಯಲು ಅನುಸರಿಸಬೇಕಾದ ವಿಧಾನವೂ ಇಲ್ಲಿದೆ.

ಈ ವಿವೇಚನೆಯಿಂದ ಈ ಬ್ರಾಹ್ಮಣ ಧರ್ಮಸೂತ್ರಗಳಿಗೆ ಪೂರ್ವ ಪೀಠಿಕೆಯಂತಿದೆ ಎಂಬುದನ್ನರಿಯಬಹುದು. ವೈದಿಕ ಯಾಗಗಳಿಗಿಂತ ಹೆಚ್ಚಾಗಿ ವೇದಾನುವಚನ, ಸಾಮಗಾಯನ,

ತಪ್ಪು, ಕಾಯಶೋಷಣ ಮುಂತಾದುವು ಆಚರಣೆಗೆ ಬಂದಿದ್ದವು ಈ ಕಾಲದಲ್ಲಿ. ಸ್ಮೃತಿಗಳಲ್ಲಿ ಹೇಳಿರುವಂತೆಯೇ ಪ್ರಾಯಶ್ಚಿತ್ತಗಳನ್ನು ವಿಧಿಸಿದೆ ಇಲ್ಲಿಯೂ. ಶೂದ್ರರಿಗೆ ವೇದ ಕಲಿಸುವುದು ಮತ್ತು ಯಜ್ಞ ಮಾಡಿಸುವುದು, ಅಶೋಭನ ಶಬ್ದಗಳನ್ನು ಹೇಳುವುದು, ಸುರೆಯನ್ನು ಕುಡಿಯು ವುದು, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರ ಹತ್ಯೆ, ಗೋಹತ್ಯೆ, ಜ್ಯೇಷ್ಠನಿಗೆ ಪೂರ್ವ ಕನಿಷ್ಠನು ವಿವಾಹ ಮಾಡಿಕೊಳ್ಳುವುದು, ಶೂದ್ರ ಸ್ತ್ರೀಯೊಡನೆ ವ್ಯಭಿಚಾರ, ಕ್ಷೀರ, ಮಧು ಮುಂತಾದ ರಸಪದಾರ್ಥಗಳನ್ನು ಬ್ರಾಹ್ಮಣ ವಿಕ್ರಯಿಸುವುದು–ಇವುಗಳೆಲ್ಲಕ್ಕೂ ಪ್ರಾಯಶ್ಚಿತ್ತವನ್ನಲ್ಲಿ ವಿಧಿಸಿದೆ. ಹೀಗೆ ಈ ಬ್ರಾಹ್ಮಣದಲ್ಲಿ ವಿಚಿತ್ರವಾದ ವಿಧಿವಿಧಾನಗಳ ಪರಿಚಯವಾಗುತ್ತದೆ.

### ಆರ್ಷೇಯ ಬ್ರಾಹ್ಮಣ

ಈ ಬ್ರಾಹ್ಮಣದಲ್ಲಿ ಮೂರು ಪ್ರಪಾಠಕಗಳಿವೆ. 82 ಖಂಡಗಳಿವೆ. (28, 25, 29). ಒಂದೊಂದು ಖಂಡದಲ್ಲಿಯೂ ಪ್ರಾಯಃ ದೀರ್ಘವಾದ ವಾಕ್ಯವೊಂದೊಂದಿದೆ. ಮೊದಲ ಭಾಗ ಸೂತ್ರ ಶೈಲಿಯಲ್ಲಿದೆ. ಉತ್ತರಾರ್ಧ ಹೆಚ್ಚು ಸಹಜವಾದ ಶೈಲಿಯಲ್ಲಿದೆ. ಈ ಬ್ರಾಹ್ಮಣದ ಕರ್ತೃ ಯಾರೆಂಬುದು ಎಲ್ಲಿಯೂ ಹೇಳಿಲ್ಲ. ಬೇರೆ ಕಡೆಯಿಂದ ಗೊತ್ತಾಗುವುದೂ ಇಲ್ಲ. ಈ ಬ್ರಾಹ್ಮಣದ ಹೆಸರೇ ಸೂಚಿಸುವಂತೆ ಸಾಮಗಾನಗಳ ಋಷಿಗಳ ಹೆಸರುಗಳನ್ನಿದು ಕೊಡುತ್ತದೆ. ಆದರೆ ಇಲ್ಲಿ ಕೊಟ್ಟಿರುವ ಋಷಿಗಳ ಹೆಸರುಗಳು ಸಾಮವೇದ ಗ್ರಂಥಗಳಲ್ಲಿ ಕೊಟ್ಟಿರುವ ಋಷಿನಾಮಗಳಿಗಿಂತ ಭಿನ್ನವಾಗಿವೆ. 'ಅಗ್ನ ಆಯಾಹಿ ವೀತಯೇ' ಎಂಬ ಮೊದಲ ಮಂತ್ರದ ಋಷಿ ಭರದ್ವಾಜರೆಂದು ಸಾಮವೇದ ಸಂಹಿತಾಗ್ರಂಥದಲ್ಲಿ ಗೊತ್ತಾಗುತ್ತದೆ. ಈ ಮಂತ್ರ ಋಗ್ವೇದ ಮಂತ್ರವಾಗಿದೆ. ಅಲ್ಲಿಯೂ (6-16-10) ಭರದ್ವಾಜರೇ ಈ ಮಂತ್ರದ ಋಷಿಗಳು. ಆದರೆ ಈ ಬ್ರಾಹ್ಮಣದಲ್ಲಿ ಮೊದಲನೆಯ ಮತ್ತು ಮೂರನೆಯ ಸಾಮಗಳಿಗೆ ಗೋತಮ ಪರ್ಕ ಋಷಿಯೆಂದು ಎರಡನೆಯ ಮಧ್ಯಮಸಾಮಕ್ಕೆ ಕಾಶ್ಯಪಬರ್ಹಿಷ ಋಷಿ ಎಂದೂ ತಿಳಿಸಿದೆ. ಸಾಮವು ಮಂತ್ರಕ್ಕಿಂತ ಭಿನ್ನವಾದುದೆಂದು ತಿಳಿಯಬೇಕು. ಮಂತ್ರದ ಮೂರು ಭಾಗಗಳಿಂದ ಬೇರೆ ಬೇರೆ ಕಾಲಗಳಲ್ಲಿ ಸಾಮಗಳು ಉದಿಸುತ್ತವೆ ಎಂದು ಸಾಯಣರು ತಿಳಿಸುತ್ತಾರೆ. ಹೀಗೆ ಉದಿಸುವ ಮೂರು ಸಾಮಗಳನ್ನು ಮೊದಲು ಗಾನ ಮಾಡಿದ ಋಷಿಗಳು ಯಾರೆಂಬುದನ್ನು ಈ ಬ್ರಾಹ್ಮಣದಿಂದ ತಿಳಿಯುತ್ತೇವೆ. ಸಾಮಗಾಯನದ ವೈಜ್ಞಾನಿಕವಾದ ಅನುಶೀಲನೆಗೆ ಈ ಬ್ರಾಹ್ಮಣ ಹೀಗೆ ಅಪಾರವಾದ ಸಹಾಯ ಮಾಡುತ್ತದೆ.

ತಾಂಡ್ಯಬ್ರಾಹ್ಮಣದಲ್ಲಿ ಗೋಚರಿಸುವುದಕ್ಕಿಂತಲೂ ಇಲ್ಲಿ ಸಾಮಗಾಯನ ವಿಧಾನ ಬೆಳೆದಿತ್ತೆಂಬುದು ಗೋಚರಿಸುತ್ತದೆ. ಒಂದೇ ಸಾಮಯೋನಿ ಋಕ್ಕು ಅನೇಕ ಸಾಮಗಾನಗಳನ್ನು ಹೊಂದಿತ್ತು. ಬೇರೆ ಬೇರೆ ಋಷಿಗಳು ಈ ಬೇರೆ ಬೇರೆ ಸಾಮಗಳ ದ್ರಷ್ಟಾರರೆಂದು ಹೇಳಿದೆ. ಮಂತ್ರದ ಋಷಿ, ದೇವತೆ ಮತ್ತು ಛಂದಸ್ಸನ್ನು ಹೇಳಬೇಕೆಂಬ ವಿಧಿಯನ್ನು ಮೊದಲನೆಯ ಖಂಡದಲ್ಲಿ ಹೇಳಿದೆ. ಇದರ ಆಧಾರದ ಮೇಲೆ ಇತರ ಸುಪ್ರಸಿದ್ಧ ಬ್ರಾಹ್ಮಣಗಳಿಗಿಂತ ಇದು ಈಚಿನದೆಂದೂ ಕ್ರಿ. ಪೂ. 2000ಕ್ಕಿಂತ ಈಚಿನ ಕಾಲವನ್ನು ಇದಕ್ಕೆ ಹೇಳಬೇಕೆಂದೂ ಶ್ರೀ ಸಿ. ವಿ. ವೈದ್ಯರು ಅಭಿಪ್ರಾಯಪಡುತ್ತಾರೆ.

### ದೈವತ ಬ್ರಾಹ್ಮಣ

ಸಾಮವೇದೀಯ ಬ್ರಾಹ್ಮಣಗಳಲ್ಲೆಲ್ಲಾ ಇದು ಬಹಳ ಚಿಕ್ಕದು. ಇದರಲ್ಲಿ ಮೂರು ಖಂಡಗಳಿವೆ. ಮೊದಲ ಖಂಡದಲ್ಲಿ 26 ಕಂಡಿಕೆಗಳೂ ದ್ವಿತೀಯ ಖಂಡದಲ್ಲಿ 11 ಕಂಡಿಕೆಗಳೂ,

ಮೂರನೆಯ ಖಂಡದಲ್ಲಿ 25 ಕಂಡಿಕೆಗಳೂ ಇವೆ. ಮೊದಲ ಖಂಡದಲ್ಲಿ ದೇವತೆಗಳ ವರ್ಣನೆ ಇದೆ. ಸಾಮದೇವತೆಗಳನ್ನು ಕ್ರಮವಾಗಿ ಅಗ್ನಿ, ಇಂದ್ರ, ಪ್ರಜಾಪತಿ, ಸೋಮ, ವರುಣ, ತ್ವಷ್ಟ್ರಾ, ಅಂಗಿರಸ, ಪೂಷಾ, ಸರಸ್ವತೀ ಎಂಬುದಾಗಿ ನಿರೂಪಿಸಿದೆ. ಈ ದೇವತೆಗಳನ್ನು ಸ್ತುತಿಸುವ ಸಾಮಗಳ ವಿಶಿಷ್ಟವಾದ ಹೆಸರುಗಳನ್ನು ಕೊಡಲಾಗಿದೆ. ಎರಡನೆಯ ಖಂಡದಲ್ಲಿ ಛಂದಸ್ಸುಗಳ ದೇವತೆಗಳ ವರ್ಣನೆ ಇದೆ. ಛಂದಸ್ಸುಗಳ ವರ್ಣವಿಶೇಷಗಳ ವಿವರಣೆಯೂ ಇದೆ. ಮೂರನೇ ಖಂಡದಲ್ಲಿ ಛಂದಸ್ಸುಗಳ ನಿರುಕ್ತಿ ಇದೆ. ಇವುಗಳಲ್ಲಿ ಅನೇಕ ನಿರುಕ್ತಿಗಳನ್ನು ಯಾಸ್ಕರೂ ಹಾಗೆಯೇ ತೆಗೆದುಕೊಂಡಿದ್ದಾರೆ (7-12-13). ಭಾಷಾಶಾಸ್ತ್ರದ ದೃಷ್ಟಿಯಿಂದ ಈ ಖಂಡ ಬಹಳ ಮಹತ್ವಪೂರ್ಣವಾದುದು.

### ಉಪನಿಷದ್ಬ್ರಾಹ್ಮಣ

ಈ ಬ್ರಾಹ್ಮಣದಲ್ಲಿ ಹತ್ತು ಪ್ರಪಾಠಕಗಳಿವೆ. ಮೊದಲೆರಡು ಪ್ರಪಾಠಕಗಳು 'ಮಂತ್ರ ಬ್ರಾಹ್ಮಣ' ಎಂದೂ ಪ್ರಸಿದ್ಧವಾಗಿವೆ. ಕೊನೆಯ ಎಂಟು ಪ್ರಪಾಠಕಗಳೇ ಛಾಂದೋಗ್ಯ ಉಪನಿಷತ್ ಎಂದು ಪ್ರಸಿದ್ಧವಾಗಿವೆ. ಈ ಮಂತ್ರ ಬ್ರಾಹ್ಮಣದಲ್ಲಿ ಎರಡು ಪ್ರಪಾಠಕಗಳಿವೆ. ಒಂದೊಂದು ಪ್ರಪಾಠಕದಲ್ಲಿಯೂ ಎಂಟೆಂಟು ಖಂಡಗಳಿವೆ. ಗೃಹ್ಯಸಂಸ್ಕಾರದಲ್ಲಿ ಉಪಯೋಗಿಸುವ ಮಂತ್ರಗಳ ಸುಂದರ ಸಂಗ್ರಹ ಇಲ್ಲಿದೆ. ಗೋಭಿಲಗೃಹ್ಯಸೂತ್ರದಲ್ಲಿ ಇಲ್ಲಿನ ಮಂತ್ರಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಿರುವುದನ್ನು ನೋಡಬಹುದು. ಮಂತ್ರ ಬ್ರಾಹ್ಮಣ ಮತ್ತು ಛಾಂದೋಗ್ಯೋಪನಿಷತ್ತಿನಿಂದ ಉದಾಹರಿಸುವಾಗ ಶಂಕರಾಚಾರ್ಯರು 'ತಾಂಡಿನಾಂ ಶ್ರುತಿಃ' 'ತಾಂಡಿನಾಮುಪ ನಿಷದಿ' ಎಂದು ಹೇಳುವುದರಿಂದ, ಇವು ತಾಂಡ್ಯ ಶಾಖೆಗೆ ಸೇರಿದವೆಂದೂ, ತಾಂಡ್ಯ ಶಾಖೆ ಸಾಮವೇದೀಯ ಶಾಖೆಗಳಲ್ಲಿ ಪ್ರಧಾನವಾದುದೆಂದೂ ಗೊತ್ತಾಗುತ್ತದೆ.

### ಸಂಹಿತೋಪನಿಷದ್ಬ್ರಾಹ್ಮಣ

ಇದೂ ಬಹಳ ಚಿಕ್ಕ ಬ್ರಾಹ್ಮಣ. ಇದರಲ್ಲಿ 5 ಖಂಡಗಳಿವೆ. ಸಾಮಗಾಯನದಿಂದ ಉತ್ಪನ್ನವಾಗುವ ಪ್ರಭಾವದ ವರ್ಣನೆ ಇದರಲ್ಲಿದೆ ಸಾಮಯೋನಿ ಮಂತ್ರಗಳ ಮತ್ತು ಸಾಮಗಳ ಪರಸ್ಪರ ಸಂಬಂಧದ ವಿವೇಚನೆಯೂ ಇಲ್ಲಿದೆ. ಅದು ಎಂದಿನಿಂದಲೂ ಬಹಳ ಪ್ರಸಿದ್ಧವಾಗಿತ್ತೆಂಬುದಕ್ಕೆ ನಿರುಕ್ತಕಾರರು 'ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ' ಮುಂತಾದ ಮಂತ್ರಗಳನ್ನು ಇದರಿಂದ ಉದ್ಧರಿಸಿ ತಮ್ಮ ನಿರುಕ್ತದಲ್ಲಿ (2-4) ಹೇಳಿರುವುದೇ ಸಾಕ್ಷಿ.

### ವಂಶ ಬ್ರಾಹ್ಮಣ

ಗಾತ್ರದಲ್ಲಿ ಇದೂ ಬಹಳ ಚಿಕ್ಕದು. ಇದರಲ್ಲಿ 3 ಖಂಡಗಳಿವೆ. ಸಾಮವೇದದ ಆಚಾರ್ಯ ಪರಂಪರೆಯ ವಂಶವರ್ಣನೆ ಇಲ್ಲಿದೆ. ಪ್ರಾಚೀನ ಋಷಿಗಳ ಇತಿಹಾಸವನ್ನರಿಯಲು ಇದು ಸಹಾಯಕವಾಗಿದೆ.

### ಜೈಮಿನೀಯ ಬ್ರಾಹ್ಮಣ

ಜೈಮಿನಿಶಾಖೆಗೆ ಸೇರಿದ ಈ ಬ್ರಾಹ್ಮಣ ಪೂರ್ಣವಾಗಿ ಉಪಲಬ್ಧವಾಗಿಲ್ಲ. ಇದರ ಹಲಕೆಲವು ಭಾಗಗಳು ಮಾತ್ರ ಉಪಲಬ್ಧವಾಗಿವೆ. ಶತಪಥಬ್ರಾಹ್ಮಣದಂತೆ ಇದೂ ವಿಪುಲ ಕಾಯವಾದ ಬ್ರಾಹ್ಮಣ. ಇದೂ ಬಹಳ ಮಹತ್ವವನ್ನು ಹೊಂದಿರುವ ಬ್ರಾಹ್ಮಣ. 'ಜೈಮಿನೀಯ ಉಪನಿಷದ್ಬ್ರಾಹ್ಮಣ' ಈ ಬ್ರಾಹ್ಮಣದ ಒಂದು ಭಾಗ.

ಜೈಮಿನೀಯ ಉಪನಿಷದ್ಬ್ರಾಹ್ಮಣದಲ್ಲಿ ನಾಲ್ಕು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದಲ್ಲಿಯೂ ಅನೇಕ ಅನುವಾಕಗಳಿವೆ. ಅನುವಾಕಗಳಲ್ಲಿ ಅನೇಕ ಖಂಡಗಳಿವೆ. ಇವುಗಳ ವಿವರಗಳು ಹೀಗಿವೆ:

| ಅಧ್ಯಾಯ | – | ಅನುವಾಕ | | ಖಂಡ |
|---|---|---|---|---|
| 1 | – | 18 | – | 60 |
| 2 | – | 5 | – | 15 |
| 3 | – | 7 | – | 42 |
| 4 | – | 12 | – | 28 |
| ಒಟ್ಟು 4 ಅಧ್ಯಾಯಗಳು | – | 42 ಅನುವಾಕಗಳು | – | 145 ಖಂಡಗಳು |

ಈ ಬ್ರಾಹ್ಮಣದ ಶೈಲಿಯೂ ಇತರ ಬ್ರಾಹ್ಮಣಗಳ ಶೈಲಿಯಂತೆ ಪುನರುಕ್ತಿಗಳಿಂದಲೂ ವಿಚಿತ್ರವಾದ ವಿವರಣೆಗಳಿಂದಲೂ ಕೂಡಿದೆ. ಕಾಲ್ಪನಿಕವಾದ ಆಖ್ಯಾಯಿಕೆಗಳಿದ್ದರೂ ಅವು ಆಧ್ಯಾತ್ಮಿಕವಾದ ಶೈಲಿಯಲ್ಲಿವೆ. ಜೈಮಿನಿಗಳು ಸುಪ್ರಸಿದ್ಧ ಸಾಮವೇದಾಚಾರ್ಯರು. ತಲವಕಾರರು ಅವರ ಶಿಷ್ಯರು. ಈ ಬ್ರಾಹ್ಮಣದಲ್ಲಿ ಸಾಮಗಳ ವಿಚಾರವಿವೇಚನೆ ಇರುವುದು ಸಹಜವಾಗಿಯೇ ಇದೆ. ಛಾಂದೋಗ್ಯ ಉಪನಿಷತ್ತಿನಿಂದಲೂ ಅನೇಕಾನೇಕ ಆಖ್ಯಾನಗಳನ್ನು ಇಲ್ಲಿ ತೆಗೆದುಕೊಂಡಿದೆ ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. 1-17 ರಲ್ಲಿ ಗಾಥಾನಾರಾಶಂಸೀಃ ಮತ್ತು ಇತಿಹಾಸ ಪುರಾಣಗಳ ಉಲ್ಲೇಖವಿದೆ. ಆದರೆ ಇದರೊಡನೆ 'ಕುಂಬ್ಯ'ಮತ್ತು 'ರೈಭೀ' ಎಂಬುವುದನ್ನು ಸೇರಿಸಿದೆ. ಇದು ಛಾಂದೋಗ್ಯ ಉಪನಿಷತ್ತಿಗಿಂತ ಈಚಿನದೆಂದು ಆ ಕಾರಣ ವಿಮರ್ಶಕರು ಭಾವಿಸುತ್ತಾರೆ.

ಶಾಟ್ಯಾಯನಿಗಳು ಸಾಮವೇದ ಬ್ರಾಹ್ಮಣಕಾರರೆಂದು ಪ್ರಸಿದ್ಧರಾಗಿದ್ದಾರೆ. ವಂಶದಲ್ಲಿ (3-7-3) 'ಶಂಖ ಶಾಟ್ಯಾಯನೀ ಆತ್ರೇಯ' ಎಂದು ಇವರ ಉಲ್ಲೇಖವಿದೆ. ಇವರ ಹೆಸರನ್ನು ಈ ಉಪನಿಷತ್ತು ಗೌರವಪೂರ್ವಕ ಉಲ್ಲೇಖಿಸುತ್ತದೆ.

ಈ ಬ್ರಾಹ್ಮಣದಿಂದ ಗೊತ್ತಾಗುವ ಮುಖ್ಯ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು:

(1) ಸಾಮಗಳಿಗೆ ಸೇರಿಸುತ್ತಿದ್ದ 'ಹೂಂ' 'ಓಂ' ಮುಂತಾದ ಸ್ತೋಭಗಳ ಜೊತೆಗೆ 'ಒವಾ', 'ಹುಂಭಾ' ಮುಂತಾದವನ್ನೂ ಇಲ್ಲಿ ಸೇರಿಸಿದೆ.

'ಹುಂಬಾ ಇತಿ ಬ್ರಹ್ಮವರ್ಚಸ ಕಾಮಸ್ಯ ಹುಂವೋ ಇತಿ
ಪಶುಕಾಮಸ್ಯ ಹುಂಬಕ್ ಇತಿ ಶ್ರೀಕಾಮಸ್ಯ' (3-3)

(2) ಉಕ್ಥದ ಏಳು ಭಾಗಗಳನ್ನು ಸ್ತೋತ್ರಿಯ, ಅನುರೂಪ, ಧಾಯ್ಯಾ, ಪ್ರಗಾಥ ಸೂಕ್ತ, ನಿವಿದ್ ಮತ್ತು ಪರಿಧಾನೀಯಾ ಎಂದು ಹೇಳಿ ಇವುಗಳನ್ನು ಸಾಂಕೇತಿಕವಾಗಿ ವಿವರಿಸಿದೆ. (3-1-4)

(3) ಸ್ವರ್ಗಕ್ಕೆ ಪ್ರತಿಯಾದ 'ನರಕ' ಎಂಬ ಶಬ್ದ ಇಲ್ಲಿ ಮೊತ್ತ ಮೊದಲಿಗೆ ಬಂದಿದೆ. (4-4-25)

(4) ನಿಖರ್ವ, ಪದ್ಮ, ಕ್ಷಿತಿ ಮತ್ತು ವ್ಯೋಮ ಎಂಬ ಸಂಖ್ಯಾವಾಚಕಗಳ ಪ್ರಯೋಗ ಇಲ್ಲಿದೆ (1-1-11).

ಹೀಗೆ ಈ ಬ್ರಾಹ್ಮಣ ಅನೇಕ ಸ್ವಾರಸ್ಯವಾದ ಅಂಶಗಳನ್ನೊಳಗೊಂಡಿದೆ.

## ಯಜುರ್ವೇದ ಬ್ರಾಹ್ಮಣಗಳು

**ತೈತ್ತಿರೀಯ ಬ್ರಾಹ್ಮಣ**

ಕೃಷ್ಣಯಜುರ್ವೇದಕ್ಕೆ ಸೇರಿದ ಬ್ರಾಹ್ಮಣಗಳಲ್ಲಿ ಉಪಲಬ್ಧವಾಗಿರುವುದು ಇದೊಂದೇ ಬ್ರಾಹ್ಮಣ. ಕಾಠಕಬ್ರಾಹ್ಮಣವೆಂಬ ಹೆಸರು ಶ್ರುತವಾಗಿದೆಯೇ ವಿನಾ ದೊರಕಿಲ್ಲ. ಈ ಬ್ರಾಹ್ಮಣವೂ ಸ್ವರಸಹಿತವಾಗಿದೆ. ಶತಪಥಬ್ರಾಹ್ಮಣದಂತೆಯೇ ಇದೂ ಬಹಳ ಪ್ರಾಚೀನವಾದ ಬ್ರಾಹ್ಮಣ. ತೈತ್ತಿರೀಯ ಬ್ರಾಹ್ಮಣದ ಶೈಲಿ ಶತಪಥ ಬ್ರಾಹ್ಮಣಕ್ಕಿಂತ ಪ್ರಾಚೀನವಾಗಿ ಕಂಡುಬರುತ್ತದೆ. ಕೃಷ್ಣಯಜುರ್ವೇದ ಸಂಹಿತೆಯಲ್ಲಿನ ಮಂತ್ರಬ್ರಾಹ್ಮಣ ಮಿಶ್ರಿತವಾದ ಶೈಲಿಯ ಪ್ರಭಾವ ಇದರ ಮೇಲೆ ಬಿದ್ದಿರುವುದು ಇದಕ್ಕೆ ಕಾರಣ. ಸಂಹಿತಾಭಾಗದಲ್ಲಿ ಸೇರಿರುವ ಬ್ರಾಹ್ಮಣ ಭಾಗದ ಮುಂದುವರಿದ ಭಾಗವಾಗಿದೆ ಈ ಬ್ರಾಹ್ಮಣ. ಅದೇ ರೀತಿಯ ಪುನರುಕ್ತಿಗಳು, ವಿಚಿತ್ರ ವಿವರಣೆಗಳು ಮತ್ತು ನಿರುಕ್ತಿಗಳು ಇಲ್ಲಿಯೂ ಇವೆ. ಇದರಲ್ಲಿಯೂ ಕೆಲವು ಭಾಗಗಳು ನಂತರ ಸೇರಿದವಾಗಿರಬೇಕು. ಮೂರನೆಯ ಕಾಂಡದಲ್ಲಿ ಬರುವ ಪುರುಷಮೇಧ ಪ್ರಕರಣ ಇಂಥದೊಂದು. ವಾಜಸನೇಯೀ ಸಂಹಿತೆಗೆ ಹೇಗೆ ಅದು ಕಾಲಾನಂತರದಲ್ಲಿ ಸೇರಿತೋ, ಅದರ ಕೆಲವಿವರಣೆಗಳು ಹೇಗೆ ಶತಪಥಕ್ಕೆ ಸೇರಿದವೋ ಹಾಗೆಯೇ ಈ ಭಾಗಗಳೂ ಈ ಬ್ರಾಹ್ಮಣಕ್ಕೆ ಅನಂತರ ಸೇರಿರಬೇಕೆಂದು ಊಹಿಸಲಾಗಿದೆ. ಮೂರನೇ ಕಾಂಡ ಉಳಿದೆರಡು ಕಾಂಡಗಳಿಗಿಂತ ಆ ಕಾರಣವೇ ಪ್ರಾಚೀನವಾದುದೆಂದು ವಿದ್ವಾಂಸರ ಮತ.

ಈ ಬ್ರಾಹ್ಮಣದಲ್ಲಿ 3 ಕಾಂಡಗಳಿವೆ. ಇವುಗಳನ್ನೇ ಅಷ್ಟಕಗಳೆಂದೂ ಕರೆದಿದ್ದಾರೆ. ಮೊದಲನೆಯ ಮತ್ತು ಎರಡನೆಯ ಕಾಂಡದಲ್ಲಿ ಎಂಟೆಂಟು ಪ್ರಪಾಠಕಗಳೂ ಕೊನೆಯ ಮೂರನೆಯ ಕಾಂಡದಲ್ಲಿ 12 ಪ್ರಪಾಠಕಗಳೂ ಇವೆ. ಒಂದೊಂದು ಪ್ರಪಾಠಕದಲ್ಲಿಯೂ ಅನೇಕಾನೇಕ ಅನುವಾಕಗಳಿವೆ. ಅನುವಾಕವೆಂಬ ಹೆಸರು ಬಹಳ ಪ್ರಾಚೀನವಾದುದು. 'ಏತಾವನುವಾಕಾವಪರ ಪಕ್ಷಸ್ಯಾಹೋರಾತ್ರಾಣಾಂ ನಾಮಧೇಯಾನಿ' (3-10-10) ಎಂದು ಈ ಬ್ರಾಹ್ಮಣದಲ್ಲಿಯೇ ಈ ಶಬ್ದದ ಪ್ರಯೋಗವಿದೆ. ಒಂದೊಂದು ಅನುವಾಕದಲ್ಲಿಯೂ ಹಲವಾರು ವಾಕ್ಯಗಳಿವೆ. ಅಧ್ಯಾಯ ಅಥವಾ ಪ್ರಪಾಠಕದ ಕೊನೆಯಲ್ಲಿ ಈ ವಾಕ್ಯಗಳ ಸಂಖ್ಯೆಯನ್ನು ಎಣಿಸಿ ಕೊಡಲಾಗಿದೆ. ಸಂಹಿತೆಯಲ್ಲಿ ಮಾಡಿರುವಂತೆ ಪದ ಸಂಖ್ಯೆಯನ್ನು ಎಣಿಸಿಕೊಟ್ಟಿಲ್ಲ. ಮೂರು ಕಾಂಡಗಳ ಒಟ್ಟು 28 ಪ್ರಪಾಠಕಗಳಿಂದ 17,480 ವಾಕ್ಯಗಳಿವೆಯೆಂದು ಕೊಡಲಾಗಿದೆ.

ಈ ಬ್ರಾಹ್ಮಣದ ಮೊದಲನೆಯ ಕಾಂಡದಲ್ಲಿ ಅಗ್ನ್ಯಾಧಾನ, ಗವಾಮಯನ, ವಾಜಪೇಯ, ಸೋಮ, ನಕ್ಷತ್ರೇಷ್ಟಿ ಮತ್ತು ರಾಜಸೂಯಗಳ ವರ್ಣನೆ ಇದೆ. ಎರಡನೆಯ ಕಾಂಡದಲ್ಲಿ ಅಗ್ನಿಹೋತ್ರ, ಉಪಹೋಮ, ಸೌತ್ರಾಮಣಿ, ಬೃಹಸ್ಪತಿಸವ, ವೈಶ್ಯಸವ ಮುಂತಾದ ಬಗೆಬಗೆಯ ಸವಗಳ ವರ್ಣನೆ ಇದೆ. ಇವೊಂದೊಂದರಲ್ಲಿಯೂ ಉಪಯೋಗಿಸಬೇಕಾದ ಮಂತ್ರಗಳಲ್ಲಿವೆ. ಇವುಗಳಲ್ಲಿ ಅನೇಕ ಋಗ್ವೇದಮಂತ್ರಗಳಾಗಿವೆ. ರಾಜನ ರಾಜ್ಯಾಭಿಷೇಕ ಸಂದರ್ಭದಲ್ಲಿ ರಥಾರೋಹಣ, ವಪನ ಮುಂತಾದ ಸಂದರ್ಭಗಳಲ್ಲಿ ಬಳಸಬೇಕಾದ ಮಂತ್ರಗಳಲ್ಲಿವೆ. ಋಗ್ವೇದದ ನಾಸದೀಯ ಸೂಕ್ತ (10-129) ಈ ಬ್ರಾಹ್ಮಣದ ಎರಡನೇ ಕಾಂಡದ ಎಂಟನೇ

ಪ್ರಪಾಠಕದಲ್ಲಿ ಉಪಹೋಮ ಪ್ರಕರಣದಲ್ಲಿ ಉದ್ಧೃತವಾಗಿದೆ. ಋಗ್ವೇದದ ಹತ್ತನೇ ಮಂಡಲದ 81ನೇ ಸೂಕ್ತದಲ್ಲಿ ಬರುವ 'ಕಿಂಸ್ವಿದ್ವನಂ ಕ ಉಸವೃಕ್ಷ ಆಸೀತ್' ಎಂಬುದಕ್ಕೆ ಉತ್ತರರೂಪವಾದ 'ಬ್ರಹ್ಮವನಂ ಬ್ರಹ್ಮ ಸ ವೃಕ್ಷ ಆಸೀತ್' ಎಂಬ ಮಂತ್ರ ಇಲ್ಲಿ ಬರುತ್ತದೆ. ಬ್ರಾಹ್ಮಣಗಳ ಕಾಲದಲ್ಲಿ ಯಜ್ಞದ ಭಾವನೆಯೇ ಪ್ರಧಾನವಾಗಿದ್ದರೂ ಉಪನಿಷತ್ತುಗಳ ಬ್ರಹ್ಮತತ್ತ್ವದ ಅರಿವು ಅವರಿಗಿತ್ತೆಂಬುದನ್ನು ಇದು ಸೂಚಿಸುತ್ತದೆ.

ಮೂರನೇ ಕಾಂಡದಲ್ಲಿ 'ನಕ್ಷತ್ರೇಷ್ಟಿ'ಯ ವಿಸ್ತೃತವರ್ಣನೆ ಇದೆ. ಒಂದೊಂದು ನಕ್ಷತ್ರಕ್ಕೂ ಪ್ರತ್ಯೇಕವಾದ 'ಪುರೋನುವಾಕ್ಯಾ' ಮತ್ತು 'ಯಾಜ್ಯಾ' ಮಂತ್ರಗಳು ಕೊಡಲ್ಪಟ್ಟಿವೆ. ಕೃತ್ತಿಕೆಗಳಿಂದ ಆರಂಭವಾಗುವ 14 ದೇವ ನಕ್ಷತ್ರಗಳನ್ನು ಮೊದಲು ಕೊಟ್ಟಿದೆ. ನಂತರ 'ಅನೂರಾಧಾ' ನಕ್ಷತ್ರದಿಂದ ಆರಂಭವಾಗುವ 14 ಯಮ ನಕ್ಷತ್ರಗಳನ್ನು ಹೇಳಿದೆ. ಮುಂದಿನ ಪ್ರಪಾಠಕಗಳಲ್ಲಿ ಇತರ ಇಷ್ಟಿಗಳ ವಿಚಾರ ಪ್ರಸ್ತುತವಾಗಿದೆ. 4ನೇ ಪ್ರಪಾಠಕದಲ್ಲಿ ಪುರುಷಮೇಧದ ಪಶುಗಳ ವಿಚಾರ ಬಂದಿದೆ. ಮುಂದಿನ ನಾಲ್ಕು ಪ್ರಪಾಠಕಗಳಲ್ಲಿ (5-8) ಯೂಪ ಸಂಸ್ಕೃತಿ, ಯಜ್ಞಚ್ಛಿದ್ರ, ಹಾಗೂ ಅಶ್ವಮೇಧಯಾಗಾನುಷ್ಠಾನದ ಇತರ ವಿವರಗಳು ವರ್ಣಿತವಾಗಿವೆ. ಅಶ್ವಮೇಧದ ಅವಭೃಥದಲ್ಲಿ ಮಾಡಬೇಕಾದ ಹೋಮಾದಿಗಳ ವಿಚಾರ ಒಂಭತ್ತನೇ ಪ್ರಪಾಠಕದಲ್ಲಿ ಪ್ರಸ್ತುತವಾಗಿದೆ. ಈ ಬ್ರಾಹ್ಮಣದ 10, 11 ಮತ್ತು 12ನೇ ಪ್ರಪಾಠಕಗಳನ್ನು ಕಾಠಕಗಳೆನ್ನುತ್ತಾರೆ. ಇವು ಪ್ರಾಯಃ ಕಠಶಾಖೆಗೆ ಸೇರಿದ ಬ್ರಾಹ್ಮಣವಾಗಿ ಯಾವುದೋ ಉದ್ದೇಶದಿಂದ ಇಲ್ಲಿ ಸೇರಿಸಲ್ಪಟ್ಟಿರಬೇಕು. ಇವುಗಳಲ್ಲಿ ಹತ್ತನೆಯ ಪ್ರಪಾಠಕ 'ಸಾವಿತ್ರಚಯನ'ವನ್ನು ವಿವೇಚಿಸುತ್ತದೆ. ಈ ಪ್ರಪಾಠಕದಲ್ಲಿ ಅನೇಕ ಜ್ಯೋತಿಷಶಾಸ್ತ್ರ ವಿಚಾರಗಳು ದೊರೆಯುತ್ತವೆ. ಸಂವತ್ಸರ, ಪರಿವತ್ಸರ, ಇಡಾವತ್ಸರ ಇದುವತ್ಸರ ಮತ್ತು ವತ್ಸರ ಎಂಬ ಹೆಸರುಗಳ ಪಾಂಚವಾರ್ಷಿಕ ಚಕ್ರವನ್ನಿದು ಹೇಳುತ್ತದೆ. ಭರದ್ವಾಜಋಷಿ ಬ್ರಹ್ಮಚರ್ಯವನ್ನಾಚರಿಸಿ ಅನಂತವಾದ ವೇದಗಳಲ್ಲಿ (ತ್ರಯೀ ವಿದ್ಯಾ) ಮೂರು ಹಿಡಿಗಳಷ್ಟನ್ನು ಮಾತ್ರ ಪಡೆದನೆಂಬುದನ್ನು ಇಲ್ಲಿ ವರ್ಣಿಸಿದೆ.[7] ಇಲ್ಲಿ ಮೂರು ವೇದಗಳನ್ನು ಮಾತ್ರ ಹೇಳಿರುವುದರಿಂದ ನಾಲ್ಕನೆಯ ಅಥರ್ವವೇದ ಗೊತ್ತಿರಲಿಲ್ಲವೆಂದು ಊಹಿಸಲಾಗಿದೆ. ಹನ್ನೊಂದನೆಯ ಪ್ರಪಾಠಕದಲ್ಲಿ ನಾಚಿಕೇತಾಗ್ನಿಚಯನದ ವಿಶೇಷವಾದ ವರ್ಣನೆ ಇದೆ. ಅಗ್ನಿ ವಿದ್ಯೆಯಿಂದ ಮೋಕ್ಷಪ್ರಾಪ್ತಿಯನ್ನಿದು ಹೇಳುತ್ತದೆ. ಕೊನೆಯದಾದ 12ನೆಯ ಪ್ರಪಾಠಕದಲ್ಲಿ 'ಚಾತುರ್ಹೋತ್ರ' ಮತ್ತು 'ವೈಶ್ವಸೃಜ' ಯಾಗದ ವರ್ಣನೆ ಇದೆ. ವೇದಾಂತ ದರ್ಶನದ ಪ್ರಭಾವ ಇಲ್ಲಿ ಬಿದ್ದಿರುವುದನ್ನು ನಾವು ನೋಡಬಹುದು. ಸಮಸ್ತ ಪದಾರ್ಥಗಳ ತ್ಯಾಗವೇ ಈ ಯಾಗದ ರಹಸ್ಯ. ದಾರ್ಶನಿಕ ಅದನ್ನು ಯಾಗದ ರೂಪಣ ಮಾಡಿ ಚಿತ್ರಿಸುತ್ತಾನೆ. ಇಲ್ಲಿ ವಿಶ್ವದಲ್ಲಿನ ಸಮಸ್ತ ಪದಾರ್ಥಗಳೂ ಆಹುತಿಗಳಾಗಿವೆ. ಈ ಯಾಗವನ್ನನುಷ್ಠಿಸುವವರು

---

7. 'ಭರದ್ವಾಜೋ ಹ ತ್ರಿಭಿರಾಯುರ್ಭಿಃ ಬ್ರಹ್ಮಚರ್ಯಂ ಉವಾಸ | ತಗಂಹ ಜೀರ್ಣಗ್ಂ ಸ್ಥವಿರಂ ಶಯಾನಂ | ಇಂದ್ರ ಉಪವ್ರಜ್ಯೋವಾಚ | ಭರದ್ವಾಜ | ಯತ್ತೇಚತುರ್ಥಂ ಆಯುರ್ದದ್ಯಾಂ | ಕಿಮೇನೇನ ಕುರ್ಯಾ ಇತಿ | ಬ್ರಹ್ಮಚರ್ಯಮೇವೈನೇನ ಚರೇಯಮಿತಿ ಹೋವಾಚ | ತಗಂ ಹ ತ್ರೀನ್ ಗಿರಿರೂಪಾನವಿಜ್ಞಾತಾನಿವ ದರ್ಶಯಾಂಚಕಾರ | ತೇಷಾಗಂ ಹೈಕೈಕಸ್ಮಾನ್ಮುಷ್ಟಿನಾದದೇ | ಸಹೋವಾಚ | ಭರದ್ವಾಜೇತ್ಯಾಮಂತ್ರ್ಯ | ವೇದಾ ವಾ ಏತೇ | ಅನಂತಾ ವೈವೇದಾಃ | ಏತ್ವೈಸ್ತ್ರಿಭಿರಾಯುರ್ಭಿರನ್ವವೋಚಥಾಃ | ಅಥ ಇತರದನನೂಕ್ತ ಮೇವ | ಏಹೀಮಂ ವಿದ್ಧಿ | ಅಯಂ ವೈ ಸರ್ವವಿದ್ಯೇತಿ |...... ಏಷಾ ಏವ ತ್ರಯೀವಿದ್ಯಾ |'
(ತೈ. ಬ್ರಾ. 3-11-46, 47)

ಬ್ರಹ್ಮನೊಡನೆ ಸಾಯುಜ್ಯ, ಸಾರ್ಷ್ಟಿತಾ ಮತ್ತು ಸಮಾನಲೋಕತಾ–ಇವುಗಳನ್ನು ಪಡೆಯುವರೆಂದು ವರ್ಣಿಸಿದೆ ಕೊನೆಯಲ್ಲಿ. ಸಹಸ್ರ ವರ್ಷಗಳ ಕಾಲ ನಡೆಯುವ ಈ ಯಾಗವನ್ನು ದೇವತೆಗಳು ಅನುಷ್ಠಿಸಿದರು. ಅದರಿಂದಲೇ ವಿಶ್ವದ ಸೃಷ್ಟಿ ಆಯಿತು. ಇದರ ಅನುಷ್ಠಾನದಿಂದ ಬ್ರಹ್ಮಸಾಯುಜ್ಯಾದಿಗಳನ್ನು ಪಡೆದರು.

'ವಿಶ್ವಸೃಜಾಗಂ ಸಹಸ್ರ ಸಂವತ್ಸರಮ್ | ಏತೇನ ವೈ ವಿಶ್ವಸೃಜ ಇದಂ ವಿಶ್ವಮ ಸೃಜಂತ | ಯದ್ವಿಶ್ವಮಸೃಜಂತ | ತಸ್ಮಾದ್ವಿಶ್ವಸೃಜಃ | ವಿಶ್ವಮೇನಾನನುಪ್ರಜಾಯತೇ | ಬ್ರಹ್ಮಣ ಸ್ಸಾಯುಜ್ಯಗಂ ಸಲೋಕತಾಂಯಂತಿ | ಏತಾಸಾಮೇವ ದೇವತಾನಾಗಂ ಸಾಯುಜ್ಯಮ್ | ಸಾರ್ಷ್ಟಿತಾಗಂ ಸಮಾನಲೋಕತಾಂ ಯಂತಿ | ಯ ಏತುದುಪಯಂತಿ |' (3-12-9)

ತೈತ್ತಿರೀಯ ಬ್ರಾಹ್ಮಣದ ಮೊದಲನೆಯ ಎರಡು ಕಾಂಡಗಳು ಬಹಳ ಪ್ರಾಚೀನ ವಾದವೆಂದೂ ಮೂರನೆಯ ಕಾಂಡ ಅನಂತರ ಕಾಲದ್ದೆಂದೂ ವಿಮರ್ಶಕರ ಅಭಿಪ್ರಾಯ. ಮೂರನೇ ಕಾಂಡದ ಕೊನೆಯ ಮೂರು ಪ್ರಪಾಠಕಗಳು ಕೊನೆಯಲ್ಲಿ ಸೇರಿಸಲಾದವು ಎನ್ನ ಲಾಗಿದೆ. ಈ ಬ್ರಾಹ್ಮಣದಲ್ಲಿ ಪ್ರಾಚೀನ ಕಾಲಕ್ಕೆ ಸೇರಿದವೆಂಬ ಭಾಗಗಳು ಶತಪಥ ಬ್ರಾಹ್ಮಣ ಕ್ಕಿಂತ ಈಚಿನವಾಗಿ ಕ್ರಿ. ಪೂ. 2800ರ ಸುಮಾರಿಗೆ ಸಂಬಂಧಿಸಿವೆ ಎನ್ನಲಾಗಿದೆ. ಪಶ್ಚಾತ್ಕಾಲ ಯೋಜಿತವಾದ ಭಾಗಗಳ ಕಾಲವನ್ನು ನಿರ್ಣಯಿಸಲು ಕೆಲವು ಸೂಚನೆಗಳು ಅಲ್ಲಿಯೇ ಉಪಲಬ್ಧವಾಗುತ್ತವೆ. ಮೂರನೇ ಕಾಂಡದ 12 ನೇ ಪ್ರಪಾಠಕದಲ್ಲಿ "ಋಚೋ ಯಜೂಗಂಷಿ ಸಾಮಾನಿ | ಅಥರ್ವಾಂಗಿರಸಶ್ಚಯೇ | ಸರ್ವಾಸ್ತಾ: | ಇತಿಹಾಸ ಪುರಾಣಂಚ |" ಎಂದು ಅಥರ್ವಾಂಗಿರಸದ ಉಲ್ಲೇಖವಿದೆ. ಮುಂದಿನ ಅನುವಾಕದಲ್ಲಿ ವೇದಗಳ ಹೆಸರುಗಳನ್ನು ಹೇಳುವಾಗ ಅಥರ್ವವೇದದ ಉಲ್ಲೇಖವಿಲ್ಲದಿರುವುದು ಗಮನಾರ್ಹವಾಗಿದೆ. ಋಗ್ವೇದ, ಯಜುರ್ವೇದ ಮತ್ತು ಸಾಮವೇದ ಎಂಬ ಶಬ್ದಗಳನ್ನು ಮಾತ್ರ ಬಳಸಿದೆ. ಈ ಭಾಗ ಛಾಂದೋಗ್ಯ ಉಪನಿಷತ್ತಿಗಿಂತ ಪ್ರಾಚೀನವಾದ ಭಾಗವೆನ್ನಬಹುದು. ಅಥರ್ವಾಂಗಿರಸ್ ಎಂಬ ಶಬ್ದಕ್ಕೆ ಪ್ರತಿಯಾಗಿ ಅಥರ್ವವೇದ ಎಂಬ ಶಬ್ದದ ಪ್ರಯೋಗ ಉಪನಿಷತ್ತಿನಲ್ಲಿ ಬಂದಿದೆ. ಸಾಮವೇದ ಇತರ ವೇದಗಳಿಗಿಂತ ಶ್ರೇಷ್ಠವಾದುದೆಂಬ ಭಾವನೆ ಇಲ್ಲಿದೆ. ಋಕ್ಕುಗಳಿಂದ ಮೂರ್ತಿಯೂ, ಯಜುಸ್ಸಿನಿಂದ ಗತಿಯೂ ಸಾಮದಿಂದ ತೇಜಸ್ಸೂ ಬರುವುದೆಂದು ಹೇಳಿದೆ. 'ಋಗ್ಭ್ಯೋಜಾತಂ ವೈಶ್ಯಂವರ್ಣಮಾಹುಃ |ಯಜುರ್ವೇದಂ ಕ್ಷತ್ರಿಯ ಸ್ಯಾಹುರ್ಯೋನಿಮ್ | ಸಾಮವೇದೋ ಬ್ರಾಹ್ಮಣಾನಾಂ ಪ್ರಸೂತಿಃ |' ಎಂದು ಹೇಳಿ ಬ್ರಾಹ್ಮಣರು ಸಾಮವೇದದಿಂದ ಹುಟ್ಟಿದರೆಂದು ತಿಳಿಸಿದೆ. ತಿಂಗಳುಗಳ ಹೆಸರುಗಳು ಮಧು, ಮಾಧವ ಎಂಬುದಾಗಿಯೇ ಇವೆ ಇಲ್ಲಿ. ಚೈತ್ರ, ವೈಶಾಖ ಎಂಬ ಹೆಸರುಗಳಿಲ್ಲ ಆದ್ದರಿಂದ ಈ ಭಾಗಗಳೂ ಕೂಡ ಕ್ರಿ. ಪೂ. 2000ಕ್ಕಿಂತ ಹಿಂದಿನವೆಂದು ನಿರ್ಧರಿಸಲಾಗಿದೆ.[8]

ಈ ಕಾಲದ ಸಾಮಾಜಿಕ ಪರಿಸ್ಥಿತಿಯ ವಿಚಾರ ಎರಡು ಮಾತನ್ನು ಹೇಳಬಹುದು. ಈ ಬ್ರಾಹ್ಮಣದಲ್ಲಿ ಪ್ರಸ್ತುತವಾಗಿರುವ ಅಸಂಖ್ಯವಾದ ಯಾಗಗಳ ವೈವಿಧ್ಯ ಹಾಗೂ ಮಂತ್ರಗಳ ಸಮೃದ್ಧಿ ನಮ್ಮನ್ನು ಬೆರಗುಗೊಳಿಸುವುದು. ಈ ಕಾಲದಲ್ಲಿ ಅಸಂಖ್ಯವಾದ ಯಾಗಗಳ ಅನುಷ್ಠಾನ ಚಿರಪರಿಚಿತವಾಗಿಯೇ ಇತ್ತು. ಆಹಿತಾಗ್ನಿಯನ್ನು ಇಟ್ಟುಕೊಳ್ಳದೆ ಇದ್ದವರೇ ಇರಲಿಲ್ಲ. ಯಜ್ಞಸಂಸ್ಥೆ ಚಿರಪರಿಚಿತವಾದುದಾಗಿತ್ತು. ದಕ್ಷಿಣೆಗಳಿಗಾಗಿ ಹಸುಗಳನ್ನು ಕೊಡುತ್ತಿದ್ದರು. ದೇಶದಲ್ಲಿ ಪಶುಪಾಲನೆಗೆ ಎಲ್ಲ ಅನುಕೂಲಗಳೂ ಇದ್ದವು. ಪಶು ಸಮೃದ್ಧಿ

8. ಸಿ.ವಿ. ವೈದ್ಯ, ಪುಟ 38.

ಇದ್ದ ಕಾಲವದು. ನಾಲ್ಕು ವರ್ಷದ ತೆನೆಯಾದ ಹಸು ಉತ್ತಮವಾದ ದಕ್ಷಿಣೆಯಾಗಿತ್ತು.

'ಷಷ್ಠೌಹೀಂ ತ್ರಂತರ್ವತೀಂದದ್ಯಾತ್ | ಸಾ ಹಿ ಸರ್ವಾಣಿ
'ಪ್ರಯಾಗಂಸಿ |ಸರ್ವಸ್ಯಾಪ್ತ್ಯೈ | ಸರ್ವಸ್ಯಾವರುದ್ಧ್ಯೈ |' (3-12-5)

ಹಿರಣ್ಯ ಮತ್ತು ವಸ್ತ್ರಗಳನ್ನು ದಕ್ಷಿಣೆಯಾಗಿ ಕೊಡುತ್ತಿದ್ದರು.

'ಹಿರಣ್ಯಂದದಾತಿ | ಹಿರಣ್ಯಜ್ಯೋತಿರೇವ ಸ್ವರ್ಗಂ ಲೋಕಮೇತಿ |
ವಾಸೋದದಾತಿ | ತೇನಾಯುः| ಪ್ರತೀರತೇ |' (3-12-6) ಎಂದು ಹೇಳಿದೆ.

ಚಾತುರ್ವರ್ಣ್ಯ ವ್ಯವಸ್ಥೆ ಭದ್ರವಾಗಿ ಊರಿತ್ತು. ರಾಜಸೂಯ ಯಾಗಕ್ಕೆ ಕ್ಷತ್ರಿಯರನೇಕರು ಒಟ್ಟಾಗಿ ಸೇರುತ್ತಿದ್ದರು. ರಾಷ್ಟ್ರದ ಸ್ವಾತಂತ್ರ್ಯದ ಸಂಕೇತವಾಗಿತ್ತು ಅದು. ಅಶ್ವಮೇಧದ ಕುದುರೆಯನ್ನು ರಕ್ಷಿಸಲು ಅದರ ನಾಲ್ಕು ಕಡೆಯೂ ಹೋತೃ, ಅಧ್ವರ್ಯು, ಬ್ರಹ್ಮ, ಉದ್ಗಾತೃಗಳು ಇತರ ಕ್ಷತ್ರಿಯರೊಡನೆ ನಿಲ್ಲುತ್ತಿದ್ದರೆಂಬುದನ್ನು ವರ್ಣಿಸಿದೆ. ಅಶ್ವಮೇಧ ರಾಷ್ಟ್ರಸವವಾಗಿತ್ತೆಂಬುದನ್ನು ಇದು ತಿಳಿಸುತ್ತದೆ. ಕ್ಷತ್ರಿಯರು ಈ ಯಾಗವನ್ನು ಆಚರಿಸುತ್ತಿದ್ದವರು. ಚತುರ್ಥವರ್ಣದವರಿಗೆ ಯಾಗಾಧಿಕಾರವಿರಲಿಲ್ಲ. ಪುರುಷಮೇಧದ ಪಶುಗಳ ವಿಚಾರವನ್ನು ಪರಿಶೀಲಿಸಿದರೆ ಅನೇಕ ಸಂಕರ ಜಾತಿಗಳು ಉತ್ಪನ್ನವಾಗಿದ್ದವೆಂಬುದು ಗೊತ್ತಾಗುತ್ತದೆ. ಸಮಾಜದಲ್ಲಿ ಸ್ತ್ರೀಯರಿಗೆ ಆದರದ ಸ್ಥಾನವಿತ್ತು. ಯಾಗಸಂದರ್ಭದಲ್ಲಿ ಯಾಜ್ಞಿಕ ವಿಚಾರಗಳು ಮತ್ತು ಅಧ್ಯಾತ್ಮ ವಿಚಾರಗಳನ್ನು ಕುರಿತು ಬ್ರಹ್ಮವಾದಿಗಳು ಸಮಾಲೋಚನೆ ನಡೆಸುತ್ತಿದ್ದರು. ಅನೇಕ ಪೌರಾಣಿಕ ಕಥಾನಕಗಳ ಮೂಲ ಇಲ್ಲಿ ದೊರೆಯುತ್ತದೆ. ಮೊದಲನೇ ಕಾಂಡದಲ್ಲಿ ಕಾಲಕಂಜ ಅಸುರರ ಉಲ್ಲೇಖವಿದೆ. ಪ್ರಜಾಪತಿಯು ವರಾಹ ರೂಪವನ್ನು ಧರಿಸಿ ಭೂಮಿಯನ್ನು ಮೇಲಕ್ಕೆತ್ತಿ ತಂದ ಕಥೆ ಮೊದಲ ಕಾಂಡದಲ್ಲಿದೆ (1-2). ವೈದಿಕಯುಗದ ಅನೇಕ ಜ್ಯೋತಿಶ್ಶಾಸ್ತ್ರ ವಿಚಾರಗಳೂ ಇಲ್ಲಿ ಪ್ರಸ್ತುತವಾಗಿವೆ. ಹೀಗೆ ಆ ಕಾಲದ ಸಾಮಾಜಿಕ ಪರಿಸ್ಥಿತಿಗಳ ಮೇಲೆ ಈ ಬ್ರಾಹ್ಮಣ ಬೆಳಕು ಚೆಲ್ಲುತ್ತದೆ.

**ಶತಪಥ ಬ್ರಾಹ್ಮಣ**

ಬ್ರಾಹ್ಮಣ ಗ್ರಂಥಗಳಲ್ಲೆಲ್ಲಾ ಬಹಳ ದೊಡ್ಡದೂ ಮಹತ್ತ್ವವುಳ್ಳದ್ದೂ ಆದುದು ಈ ಬ್ರಾಹ್ಮಣ. ಯಾಗಾನುಷ್ಠಾನಗಳನ್ನು ಇದು ಬಹಳ ಉತ್ತಮವಾಗಿ ಪ್ರತಿಪಾದಿಸುತ್ತದೆ. ಶುಕ್ಲಯಜುರ್ವೇದದ ಕಾಣ್ವ ಮತ್ತು ಮಾಧ್ಯಂದಿನವೆಂಬ ಎರಡು ಪಾಠಗಳಲ್ಲಿಯೂ ಇದು ಉಪಲಬ್ಧವಾಗಿದೆ. ವರ್ಣನ ಕ್ರಮ ಹಾಗೂ ಅಧ್ಯಾಯ ಸಂಖ್ಯೆಗಳಲ್ಲಿ ಈ ಎರಡು ಪಾಠಗಳಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಇವು ಹೀಗಿವೆ :

| | ಕಾಂಡ | ಅಧ್ಯಾಯ | ಪ್ರಪಾಠಕ | ಬ್ರಾಹ್ಮಣ | ಕಂಡಿಕೆ |
|---|---|---|---|---|---|
| ಮಾಧ್ಯಂದಿನ ಶಾಖೆಯಲ್ಲಿ | 14 | 100 | 68 | 438 | 7624 |
| ಕಾಣ್ವಶಾಖೆಯಲ್ಲಿ | 17 | 104 | | 435 | 6806 |

ಕಾಣ್ವಶಾಖೆಯಲ್ಲಿ ಪ್ರಪಾಠಕಗಳೆಂಬ ಉಪಖಂಡಗಳಿಲ್ಲ.

ಮಾಧ್ಯಂದಿನ ಶಾಖೆಯ ಬ್ರಾಹ್ಮಣದ ಮೊದಲ ಒಂಭತ್ತು ಖಂಡಗಳು ಅದೇ ಶಾಖೆಯ ಸಂಹಿತೆಗನುಸಾರವಾಗಿಯೇ ಇವೆ. ಪಿಂಡ ಪಿತೃಯಜ್ಞದ ವರ್ಣನೆ ಮಾತ್ರ ಸಂಹಿತೆಯಲ್ಲಿ ದರ್ಶಪೌರ್ಣಮಾಸದ ನಂತರ ಬರುವುದು. ಬ್ರಾಹ್ಮಣದಲ್ಲಿ ಆಧಾನದ ನಂತರ ಬರುತ್ತದೆ.

ಇತರ ಕಾಂಡಗಳಲ್ಲಿಯೂ ಸಂಹಿತಾಕ್ರಮವೇ ಪ್ರಾಯಃ ಅನುಸರಿಸಲ್ಪಟ್ಟಿದೆ. ಎರಡು ಪಾಠಗಳಲ್ಲಿನ ಬ್ರಾಹ್ಮಣಗಳಲ್ಲಿ ಹೆಚ್ಚಿನ ವ್ಯತ್ಯಾಸವೇನಿಲ್ಲ. ವಿಷಯ ನಿರೂಪಣೆಯ ಕ್ರಮದಲ್ಲಿ ಮಾತ್ರ ವ್ಯತ್ಯಾಸವಿದೆ.

ಶತಪಥ ಬ್ರಾಹ್ಮಣದ ಮಾಧ್ಯಂದಿನ ಪಾಠದಲ್ಲಿ ಒಂದನೇ ಕಾಂಡದಲ್ಲಿ ದರ್ಶಪೂರ್ಣಮಾಸೇಷ್ಟಿಗಳ ವರ್ಣನೆಯೂ, ಎರಡನೆಯದರಲ್ಲಿ ಆಧಾನ, ಅಗ್ನಿಹೋತ್ರ, ಪಿಂಡಪಿತೃಯಜ್ಞ, ಆಗ್ರಯಣ ಮತ್ತು ಚಾತುರ್ಮಾಸ್ಯಗಳ ವರ್ಣನೆಯೂ ಇದೆ. ಮೂರು ಮತ್ತು ನಾಲ್ಕನೆ ಖಂಡಗಳಲ್ಲಿ ಸೋಮಯಾಗದ ವಿಚಾರ ಪ್ರಸ್ತುತವಾಗಿದೆ. ಐದನೇ ಕಾಂಡದಲ್ಲಿ ವಾಜಪೇಯ ಯಾಗ ಹಾಗೂ ರಾಜಸೂಯದ ವಿವೇಚನೆಯೂ, ಆರರಿಂದ ಹತ್ತರ ಪೂರ್ತಾ ಉಷಾಸಂಭರಣ, ವಿಷ್ಣುಕ್ರಮ, ವನೀವಾಹನಕರ್ಮ, ಚಯನ, ಶತರುದ್ರೀಯಹೋಮ, ಚಿತ್ತಿಸಂಪತ್ತಿ, ಅಗ್ನ್ಯುಪಾಸನೆ ಮುಂತಾದ ವಿಚಾರಗಳೂ ಇವೆ. ಹನ್ನೊಂದರಿಂದ ಹದಿನಾಲ್ಕನೇ ಕಾಂಡಗಳಲ್ಲಿ ಅನೇಕ ನವೀನ ವಿಷಯಗಳ ವಿವೇಚನೆ ಇದೆ. ಉಪನಯನ, ಬ್ರಹ್ಮಯಜ್ಞ, ಔರ್ಧ್ವದೈಹಿಕ ಕ್ರಿಯಾನುಷ್ಠಾನ ಅಶ್ವಮೇಧ, ಪುರುಷಮೇಧ, ಸರ್ವಮೇಧ, ಪ್ರವರ್ಗ್ಯಯಾಗ ಮುಂತಾದವುಗಳು ಇಲ್ಲಿ ಉಪವರ್ಣಿತವಾಗಿವೆ.

ಶತಪಥ ಬ್ರಾಹ್ಮಣದ ಮೊದಲ ಐದು ಕಾಂಡಗಳು ಯಾಜ್ಞವಲ್ಕ್ಯ ಕಾಂಡವಾಗಿವೆ. ದ್ವಿತೀಯಕಾಂಡಪಂಚಕದಲ್ಲಿ ಯಾಜ್ಞವಲ್ಕ್ಯರ ನಾಮ ನಿರ್ದೇಶವೂ ಇಲ್ಲ. ಶಾಂಡಿಲ್ಯ ಋಷಿಗಳ ಹಿರಿಮೆ ಇಲ್ಲಿ ಉಕ್ತವಾಗಿದೆ. ಹತ್ತನೇ ಅಧ್ಯಾಯದಲ್ಲಿ ಬರುವ ಅಗ್ನಿರಹಸ್ಯದ ಪ್ರವಕ್ತಾರರೂ ಶಾಂಡಿಲ್ಯರೇ ಆಗಿದ್ದಾರೆ. ಈ ಬ್ರಾಹ್ಮಣದ ಮೊದಲ ಒಂಭತ್ತು ಕಾಂಡಗಳು ವಾಜಸನೇಯೀ ಸಂಹಿತೆಯ ಮೊದಲ 18 ಅಧ್ಯಾಯಗಳ ಕ್ರಮಬದ್ಧ ವ್ಯಾಖ್ಯಾನವಾಗಿವೆ. ಮಧ್ಯೆ ಮಧ್ಯೆ ಸಮಯೋಚಿತವಾಗಿ ಬರುವ ಆಖ್ಯಾಯಿಕೆಗಳು ಶುಷ್ಕವಾದ ಹಾಗೂ ನೀರಸವಾದ ಯಾಜ್ಞಿಕ ವರ್ಣನೆಗಳನ್ನೂ ರೋಚಕವನ್ನಾಗಿ ಮಾಡುತ್ತವೆ. ಇಷ್ಟಿಗಳೆಲ್ಲೆಲ್ಲಾ ದರ್ಶಪೌರ್ಣಮಾಸೇಷ್ಟಿಯು ಪ್ರಧಾನವಾದುದೂ ಪ್ರಕೃತಿಯಾದುದೂ ಆಗಿದೆ. ದರ್ಶ ಇಷ್ಟಿಯು ಅಮಾವಾಸ್ಯೆಯ ಮರುದಿನದ ಪ್ರತಿಪತ್ತಿನಲ್ಲಿ ಸಂಪನ್ನವಾಗುತ್ತದೆ. ಪೂರ್ಣಿಮೆಯ ಮರುದಿನದ ಪ್ರತಿಪತ್ತಿನಲ್ಲಿ ಪೌರ್ಣಮಾಸೇಷ್ಟಿ ಬರುತ್ತದೆ. ಇವುಗಳ ಸಾಂಗೋಪಾಂಗ ವರ್ಣನೆ ಪ್ರಥಮ ಕಾಂಡದಲ್ಲಿರುವುದು ಯುಕ್ತವೇ ಆಗಿದೆ. ಇವುಗಳಿಗೆ ಉಪಯುಕ್ತವಾದ ಮಂತ್ರಗಳನ್ನು ಇಲ್ಲಿ ನಿರ್ದೇಶಿಸಿದೆ. ಎರಡನೆಯ ಕಾಂಡದಲ್ಲಿ ಬರುವ ಅಗ್ನಿಹೋತ್ರವೂ ಮುಖ್ಯವಾದುದು. ಅಗ್ನ್ಯಾಧಾನ ಮಾಡಿ ಪ್ರಾತಃ ಸವನ ಮತ್ತು ಸಾಯಂಸವನಗಳನ್ನು ನಡೆಸಬೇಕೆಂಬ ವಿಧಿ ಇದೆ. ಪಿತೃಗಳ ತೃಪ್ತಿಗಾಗಿ ಮಾಡುವ ಕ್ರಿಯೆಯೇ ಪಿಂಡಪಿತೃ ಯಜ್ಞ. 'ಚಾತುರ್ಮಾಸ್ಯ' ಮತ್ತು 'ನವಾಸ್ಯೇಷ್ಟಿ'ಗಳ ವಿವರಣೆಯೂ ಈ ಕಾಂತರದಲ್ಲಿದೆ. ಸೋಮಯಾಗದಲ್ಲಿ ಸೋಮಲತೆಯನ್ನು ಕುಟ್ಟಿ ಅದರ ರಸವನ್ನು ತೆರೆಯುತ್ತಾರೆ. ಅದರೊಡನೆ ಗೋಕ್ಷೀರವನ್ನು ಸೇರಿಸಿ ಉಚಿತ ಸಮಯಗಳಲ್ಲಿ ದೇವತೆಗಳನ್ನುದ್ದೇಶಿಸಿ ಹವನ ಮಾಡುತ್ತಾರೆ. 'ಅಗ್ನಿಷ್ಟೋಮ' ಎಂಬುದು ಸೋಮಯಾಗಗಳಿಗೆಲ್ಲ ಪ್ರಕೃತಿಭೂತವಾದುದು. ಮೂರು ಮತ್ತು ನಾಲ್ಕನೇ ಕಾಂಡಗಳಲ್ಲಿ ಇದರ ವರ್ಣನೆ ಇದೆ. ಮೂರ್ಧಾಭಿಷಿಕ್ತನಾದ ಕ್ಷತ್ರಿಯ ರಾಜನು ರಾಜಸೂಯಕ್ಕೆ ಅಧಿಕಾರಿ. ಹಿಂದಿನ ಕಾಲದಲ್ಲಿ ಅಭಿಷೇಕಕ್ಕೆ ಬಹಳ ಮಹತ್ವವಿತ್ತು. ರಾಜನೈತಿಕವಾದ ಆಧಿಪತ್ಯ ಇದರ ಸಂಕೇತವಾಗಿತ್ತು. ಐದನೇ ಅಧ್ಯಾಯದಲ್ಲಿ ಈ ವಿಚಾರ ಪ್ರಸ್ತುತವಾಗಿದೆ. 'ಅಗ್ನಿಚಯನ'ದ ವಿಸ್ತಾರವೂ ವೈಶಿಷ್ಟ್ಯಪೂರ್ಣವೂ ಆದ ವರ್ಣನೆ ಆರನೇ ಕಾಂಡದಿಂದ ಆರಂಭವಾಗುತ್ತದೆ.

ಶಾಂಡಿಲ್ಯರ ಅಭಿಪ್ರಾಯಕ್ಕೆ ಹೆಚ್ಚಿನ ಪ್ರಾಮಾಣ್ಯ ಮತ್ತು ಆದರವನ್ನು ಇಲ್ಲಿ ತೋರಿದೆ. ಈ ಕಾಂಡಗಳಲ್ಲಿ (ಶಾಂಡಿಲ್ಯ ಕಾಂಡದಲ್ಲಿ) ಗಾಂಧಾರ, ಕೇಕಯ, ಶಾಲ್ವ ಮುಂತಾದ ಜನಪದಗಳ ಉಲ್ಲೇಖವಿದೆ. ಇತರ ಭಾಗಗಳಲ್ಲಿ ಆರ್ಯಾವರ್ತದ ಮಧ್ಯಭಾಗ ಮತ್ತು ಪೂರ್ವಭಾಗದವರ ಉಲ್ಲೇಖವಿದೆ. ಕುರುಪಾಂಚಾಲ, ಕೋಸಲ ವಿದೇಹ, ಸೃಂಜಯ ಮುಂತಾದವರ ಉಲ್ಲೇಖ ಇಲ್ಲಿಯೇ ಬರುತ್ತದೆ. ಇದರ ಆಧಾರದಿಂದಲೇ ಮೆಕ್ಡಾನಲ್ ಮಹಾಶಯ ಶಾಂಡಿಲ್ಯ ಕಾಂಡದ ರಚಯಿತಾ ಯಾಜ್ಞವಲ್ಕ್ಯರಲ್ಲವೆಂದೂ ಅದರ ಕರ್ತೃಗಳು ಶಾಂಡಿಲ್ಯರೆಂದೂ ನಿಶ್ಚಯಿಸುತ್ತಾರೆ. ಆದರೆ ಈ ಉಲ್ಲೇಖ ಮಾತ್ರದಿಂದ ಇಂಥ ನಿರ್ಣಯಕ್ಕೆ ಬರಲಾಗುವುದಿಲ್ಲ. ಯಾಜ್ಞವಲ್ಕ್ಯರು ವಿದೇಹನಿವಾಸಿಗಳಾಗಿ ಜನಕರಾಜನ ಗುರುಗಳಾಗಿದ್ದರೆಂಬುದು ಸಂಭವನೀಯ. ಪ್ರಾಯಃ ಶಾಂಡಿಲ್ಯರು ವಾಯವ್ಯ ಪ್ರಾಂತಗಳಿಗೆ ಸಂಬಂಧಿಸಿದ್ದಿರಬೇಕು. ಆದ್ದರಿಂದಲೇ ವಾಯವ್ಯ ಜನಪದಗಳ ಉಲ್ಲೇಖ ಅವರ ಹೆಸರಿಗೆ ಸಂಬಂಧಿಸಿದೆ. ಈ ವಿಭಿನ್ನ ಭಾಗಗಳಲ್ಲಿ ಪರಸ್ಪರ ಸಂಬಂಧವಿದ್ದಿರಬೇಕು. ಆದ್ದರಿಂದ ಶಾಂಡಿಲ್ಯರ ಪ್ರಮಾಣ್ಯವನ್ನು ಅಂಗೀಕರಿಸಿರುವ ಈ ಭಾಗಗಳೂ ಯಾಜ್ಞವಲ್ಕ್ಯ ಕೃತಗಳೇ ಆಗಿರಬೇಕೆಂದು ಊಹಿಸಬಹುದು. ಶತಪಥದ ಕೊನೆಯ ನಾಲ್ಕು ಕಾಂಡಗಳು ಮೂಲಸಂಹಿತೆಯ ಕ್ರಮಕ್ಕನುಸಾರವಾಗಿವೆ. ಹನ್ನೊಂದನೇ ಕಾಂಡ ಭೂತಯಜ್ಞ, ಮನುಷ್ಯಯಜ್ಞ, ಪಿತೃಯಜ್ಞ, ದೇವಯಜ್ಞ ಮತ್ತು ಬ್ರಹ್ಮಯಜ್ಞ ಎಂದು ಪ್ರಸಿದ್ಧವಾದ ಪಂಚ ಮಹಾಯಜ್ಞಗಳ ವಿಚಾರವನ್ನು ಬಣ್ಣಿಸುತ್ತದೆ. ಸ್ವಾಧ್ಯಾಯವು ಎಂದರೆ ವೇದಾಧ್ಯಯನವು ಬ್ರಹ್ಮಯಜ್ಞದ ರೂಪಾಂತರವೆಂದೇ ಇಲ್ಲಿ ಹೇಳಿದೆ–(11-5-7). "ಋಕ್ಕುಗಳ ಅಧ್ಯಯನ ದೇವತೆಗಳಿಗೆ ಹಾಲಿನ ಆಹುತಿಯಂತೆ ; ಯಜಸ್ಸುಗಳ ಅಧ್ಯಯನ ಆಜ್ಯಾಹುತಿಯಂತೆ. ಸಾಮವೇದಾಧ್ಯಯನ ಸೋಮಾಹುತಿಯಂತೆ. ಅಥರ್ವಾಂಗಿರಸಗಳ ಅಧ್ಯಯನ ಮೇದಸ್ಸಿನ ಆಹುತಿಯಂತೆ; ಅನುಶಾಸನವಿದ್ಯೆ, ವಾಕೋವಾಕ್ಯ, ಇತಿಹಾಸ, ಪುರಾಣ, ನಾರಾಶಂಸಿ, ಗಾಥೆಗಳು ಇವುಗಳ ಅಧ್ಯಯನ ಮಧುವಿನ ಆಹುತಿಯಂತೆ." 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬುದನ್ನು ಪ್ರಮಾಣಪುರಸ್ಸರವಾಗಿ ಇಲ್ಲಿ ಸಮರ್ಥಿಸಿದೆ.

ಆರಂಭದ ದಿನದಿಂದ ಹಿಡಿದು ಹನ್ನೆರಡು ದಿನಗಳು ಪೂರ್ತಾ ನಡೆಯುವ ಯಾಗಕ್ಕೆ 'ಕ್ರತು' ಎನ್ನುತ್ತಾರೆ. ಹನ್ನೆರಡು ದಿನಕ್ಕಿಂತ ಹೆಚ್ಚಾಗಿ ಆರು ತಿಂಗಳುಗಳೋ ಅಥವಾ ಇನ್ನೂ ಹೆಚ್ಚು ತಿಂಗಳುಗಳು ಬೆಳೆಯುವ ಯಾಗಕ್ಕೆ 'ಸತ್ರ'ವೆಂದು ಹೆಸರು. ಇವುಗಳೆಲ್ಲದರ ವಿವರಣೆ ಹನ್ನೆರಡನೇ ಕಾಂಡದಲ್ಲಿದೆ. "ಸೌತ್ರಾಮಣೀ" ಎಂಬ ಪ್ರಖ್ಯಾತವಾದ ಯಾಗದ ವರ್ಣನೆಯೂ ಇಲ್ಲಿಯೇ ಇದೆ.

ಮೂರ್ಧಾಭಿಷಿಕ್ತನಾದ ರಾಜನ್ಯನೇ ಅಶ್ವಮೇಧಕ್ಕೆ ಅಧಿಕಾರಿ. ಈ ಯಾಗದ ವಿಸ್ತೃತವಾದ ವಿವರಣೆ ಹದಿಮೂರನೇ ಕಾಂಡದಲ್ಲಿದೆ. ಹದಿನಾಲ್ಕನೇ ಕಾಂಡದಲ್ಲಿ 'ಪ್ರವರ್ಗ್ಯಯಾಗ' ಮುಖ್ಯವಾದ ವಿಚಾರವಾಗಿದೆ.

ಈ ಬ್ರಾಹ್ಮಣದಲ್ಲಿ ನೂರು ಅಧ್ಯಾಯಗಳಿರುವುದರಿಂದ 'ಶತಪಥ'ವೆಂಬ ಹೆಸರು ಅನ್ವರ್ಥವಾಗಿ ಬಂದಿರುವಂತಿದೆ. ಇದು ಬಹಳ ಪ್ರಾಚೀನವಾದ ಬ್ರಾಹ್ಮಣವೆಂಬುದನ್ನು ಇದಕ್ಕೆ ಸ್ವರಸಂಪತ್ತಿ ಇರುವುದೇ ಸೂಚಿಸುತ್ತದೆ. ಇದರ ಸ್ವರಪಾಠ ಇತರ ವೇದಗಳ ಸ್ವರಕ್ರಮಕ್ಕಿಂತ ವಿಲಕ್ಷಣವಾಗಿದೆ. ವಾಜಸನೇಯೀ ಸಂಹಿತೆಯ ಸ್ವರ ಇತರ ವೇದಗಳ ಸ್ವರವಿಧಾನಕ್ಕಿಂತ ವಿಲಕ್ಷಣವಾಗಿರುವುದೇ ಇದಕ್ಕೆ ಕಾರಣ. ಈ ವ್ಯತ್ಯಾಸವನ್ನು ಯಾಜ್ಞವಲ್ಕ್ಯರೋ ಅಥವಾ ಅವರ ಶಿಷ್ಯರೋ ರೂಢಿಗೆ ತಂದಿರಬೇಕೆಂದು ತೋರುತ್ತದೆ.

ಉಚ್ಚಾರಣೆಯಲ್ಲಿ ವ್ಯತ್ಯಾಸವಿರುವುದಾದರೂ ಅವುಗಳ ವಿಧಾನದಲ್ಲಿ ವ್ಯತ್ಯಾಸವಿಲ್ಲ. ಪಾಣಿನಿಯ ವೈದಿಕಪ್ರಕ್ರಿಯೆಯ ಸೂತ್ರಗಳು ಎಲ್ಲ ವೇದಗಳಿಗೂ ಸಮಾನವಾಗಿವೆ.

ಈ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯರು ಮೊದಲ ಐದು ಕಾಂಡಗಳಲ್ಲಿ ತಮ್ಮ ಹೆಸರನ್ನು ಅನೇಕ ಕಡೆಗಳಲ್ಲಿ ಹೇಳಿಕೊಂಡಿದ್ದಾರೆ. ಇದರಿಂದ ಇವು ಬೇರೆಯವರಿಂದ ರಚಿತವಾದವೆಂದು ಹೇಳಬೇಕಾಗಿಲ್ಲ. ಪ್ರಖ್ಯಾತರಾದ ಜೈಮಿನಿ, ಬಾದರಾಯಣ, ಕೌಟಿಲ್ಯ ಮುಂತಾದವರು ತಮ್ಮ ಕೃತಿರತ್ನಗಳಲ್ಲಿ ತಮ್ಮ ತಮ್ಮ ಹೆಸರುಗಳನ್ನನೇಕ ಕಡೆ ಹೇಳಿಕೊಂಡಿದ್ದಾರೆ. ಋಗ್ವೇದ ಸೂಕ್ತಗಳಲ್ಲಿಯೂ ಕೆಲವೆಡೆ ಋಷಿಗಳ ಹೆಸರುಗಳು ಉಕ್ತವಾಗಿವೆ. ಮುಖ್ಯವಾದ ವಿಚಾರಗಳ ಮೇಲೆ ತಮ್ಮ ತಮ್ಮ ಸಿದ್ಧಾಂತವನ್ನು ತಮ್ಮ ಹೆಸರುಗಳೊಡನೆ ಹೇಳುವುದು ಹಿಂದಿನ ಕಾಲದಲ್ಲಿ ಬಳಕೆಯಲ್ಲಿತ್ತು. ಆದ್ದರಿಂದ ಯಾಜ್ಞವಲ್ಕ್ಯರು ಮೊದಲ ಹತ್ತು ಕಾಂಡಗಳ ಕರ್ತೃಗಳೆಂಬುದು ನಿರ್ವಿವಾದ. ವಾಜಸನೇಯೀ ಸಂಹಿತೆಯ 26ರಿಂದ 35 ಅಧ್ಯಾಯಗಳವರೆಗಿನ ಭಾಗವನ್ನು ಖಿಲಗಳೆಂದು ಪರಿಗಣಿಸಿದ್ದಾರೆಂದು ಹಿಂದೆಯೇ ತಿಳಿಸಿದೆ. ಪುರುಷ ಮೇಧದ ವಿಚಾರ ಬರುವುದು ಇಲ್ಲಿಯೇ. ಈ ವಿಷಯವನ್ನೂ ಉಪನಯನ, ಸ್ವಾಧ್ಯಾಯ, ಸರ್ವಮೇಧ ಮುಂತಾದುವನ್ನೂ ವಿವೇಚಿಸುವ ಮುಂದಿನ ನಾಲ್ಕು ಕಾಂಡಗಳನ್ನೂ ಬ್ರಾಹ್ಮಣಕ್ಕೆ ಮುಂದೆ ಸೇರಿಸಲಾಯಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಹತ್ತನೆಯ ಕಾಂಡವೂ ಈಚಿನದೆಂದು ಕೆಲವರ ಅಭಿಪ್ರಾಯ. ಹನ್ನೆರಡನೇ ಕಾಂಡವನ್ನು ಮಧ್ಯಮ ಕಾಂಡವೆಂದು ನಿರ್ದೇಶಿಸುವುದರಿಂದ ಹತ್ತರಿಂದ ಹದಿನೈದು ಕಾಂಡಗಳು ಪೂರ್ತಿಯಾಗಿ ಅರ್ವಾಚೀನವಾದವೆಂದು ವಿಮರ್ಶಕರು ಭಾವಿಸುತ್ತಾರೆ. ಈ ಬ್ರಾಹ್ಮಣದ ಕಾಲ ಕ್ರಿ. ಪೂ. 3000ವೆಂದು ಎಸ್. ಬಿ. ದೀಕ್ಷಿತ್ ಅವರು ಪ್ರತಿಪಾದಿಸಿದ್ದಾರೆ. 'ಏತಾ ವೈ ಕೃತಿಕಾ ಪ್ರಾಚ್ಯೈದಿಶೋ ನ ಚ್ಯವಂತೇ' ಎಂಬ ಜ್ಯೌತಿಷಿಕ ಆಧಾರದಿಂದ ಈ ನಿರ್ಣಯಕ್ಕೆ ಅವರು ಬರುತ್ತಾರೆ.[9]

ಶತಪಥ ಬ್ರಾಹ್ಮಣವು ಪ್ರಾಚೀನವಾದ ಬ್ರಾಹ್ಮಣವೆಂದು ಮೇಲೆ ಹೇಳಲಾಯಿತು. ಆದರೆ 'ಪುರಾಣಪ್ರೋಕ್ತೇಷು ಬ್ರಾಹ್ಮಣ ಕಲ್ಪೇಷು' ಎಂಬ ಪಾಣಿನಿಯ ಸೂತ್ರಕ್ಕೆ ವ್ಯಾಖ್ಯಾನಮಾಡುವಾಗ ಭಟ್ಟೋಜಿ ದೀಕ್ಷಿತರು ತಮ್ಮ ಸಿದ್ಧಾಂತಕೌಮುದಿಯಲ್ಲಿ ಯಾಜ್ಞವಲ್ಕ್ಯರ ಬ್ರಾಹ್ಮಣಗಳು ಪ್ರಾಚೀನವಲ್ಲದ ಕಾರಣ 'ಣಿನ್' ಪ್ರತ್ಯಯ ಯಾಜ್ಞವಲ್ಕ್ಯಾದಿ ಶಬ್ದಗಳಿಗೆ ಬರುವುದಿಲ್ಲವೆಂದು ಬರೆಯುತ್ತಾರೆ. ಭಟ್ಟೋಜಿ ದೀಕ್ಷಿತರ ಈ ಮಾತು ಪ್ರಾಚೀನ ವೈಯ್ಯಾಕರಣರ ಮಾತುಗಳಿಗೆ ವಿರುದ್ಧವಾದ ಕಾರಣ ಉಪೇಕ್ಷಣೀಯವೇ ಆಗಿದೆ. 'ಯಾಜ್ಞವಲ್ಕ್ಯಾದಿಭ್ಯಃ ಪ್ರತಿಷೇಧಃ ತುಲ್ಯಕಾಲತ್ವಾತ್' ಎಂಬ ವಾರ್ತಿಕವನ್ನು ಭಟ್ಟೋಜಿ ದೀಕ್ಷಿತರು ಉಪೇಕ್ಷಿಸಿದ್ದಾರೆ. ಪತಂಜಲಿಗಳು ಈ ವಾರ್ತಿಕವನ್ನು ಅಂಗೀಕರಿಸಿದ್ದಾರೆ (4-3-105 ಮಹಾಭಾಷ್ಯ). ನಾಗೋಜಿಭಟ್ಟನು ತನ್ನ 'ಲಘುಶಬ್ದೇಂದು ಶೇಖರ'ದಲ್ಲಿ ಭಟ್ಟೋಜಿ ದೀಕ್ಷಿತರ ಅಭಿಪ್ರಾಯ ಸರಿಯಲ್ಲವೆಂದು ಹೇಳುತ್ತಾನೆ.

'ಯಾಜ್ಞವಲ್ಕ್ಯಾನೀತಿ | ಕಣ್ವಾದಿಭ್ಯ ಇತ್ಯಣ್ | ತೇ ಹಿ ಪಾಣಿನ್ಯಪೇಕ್ಷಯಾ ಆಧುನಿಕಾ ಇತ್ಯಭಿಮಾನಃ | ಭಾಷ್ಯೇತು ಶಾಠ್ಯಾಯನಾದಿ ತುಲ್ಯಕಾಲತ್ವಾತ್ ಯಾಜ್ಞವಲ್ಕ್ಯಾದಿಭ್ಯಃ ಪ್ರತಿಷೇಧಸ್ತದ್ವಿಷಯತಾಚ ನೇತಿ ವಚನಮೇವಾರಬ್ಧಮ್ |' ಎಂದು ನಾಗೇಶರ ಸ್ಪಷ್ಟೋಕ್ತಿಯೇ ಇದೆ. ಆದುದರಿಂದ ದೀಕ್ಷಿತರಿಗೆ ಹಿಂದಿನ ಮತ್ತು ಮುಂದಿನ ವೈಯ್ಯಾಕರಣರ ಅಭಿಪ್ರಾಯದಂತೆ ಶತಪಥ ಪ್ರಾಚೀನತೆ ಸಿದ್ಧವಾಗುತ್ತದೆ.

9. ವಿವರಗಳಿಗೆ ನೋಡಿ, ಸಿ.ವಿ. ವೈದ್ಯ, ಪುಟ 18-24

ಈ ಬ್ರಾಹ್ಮಣ ಅನೇಕ ದೃಷ್ಟಿಗಳಿಂದ ಮಹತ್ವಪೂರ್ಣವಾಗಿದೆ. ಯಜ್ಞ ವಿದ್ಯೆಯ ಪರಿಪೂರ್ಣವಾದ ವೈಭವ ಇಲ್ಲಿ ದೃಗ್ಗೋಚರವಾಗುತ್ತದೆ. ಯಜ್ಞದ ಅನುಷ್ಠಾನಗಳನ್ನು ಸಾಂಗೋಪಾಂಗವಾಗಿ ಇಲ್ಲಿ ವರ್ಣಿಸಿದೆ. ಬಹಳ ಸಣ್ಣ ಸಣ್ಣ ವಿಧಿ ವಿಧಾನಗಳನ್ನೂ ಇಲ್ಲಿ ವಿಶದವಾಗಿ ವರ್ಣಿಸಿದೆ. ಈ ಕ್ರಿಯೆಗಳ ಹೇತು ನಿರ್ದೇಶವನ್ನೂ ಮಾಡಿದೆ. ಜೊತೆಗೆ ಪ್ರಾಚೀನವಾದ ಅನೇಕಾನೇಕ ಆಖ್ಯಾನಗಳನ್ನೂ ರಸಮಯವಾಗಿ ಚಿತ್ರಿಸಿದೆ. ಅಷ್ಟೇ ಅಲ್ಲ; ಯಜ್ಞದ ಆಧ್ಯಾತ್ಮಿಕ ರಹಸ್ಯದ ವಿವೇಚನೆಯೂ ಇಲ್ಲಿದೆ. ಯಜ್ಞದ ಅನೇಕಾನೇಕ ಅನುಷ್ಠಾನಗಳು ಪ್ರಜಾಪತಿ ದೇವತೆಯ ಪ್ರತೀಕವೆಂದೂ, ವಿಷ್ಣುವಿನ ಪ್ರತೀಕವೆಂದೂ ಅಲ್ಲಲ್ಲಿ ವರ್ಣಿತವಾಗಿದೆ. ಭೌತಿಕವಾದ ಯಾಗ ಒಂದು ಆಧ್ಯಾತ್ಮಿಕಭಾವನೆಯ ಪ್ರತೀಕ. ಯಾಗ ಎರಡು ಬಗೆ ಅಂತರ್ಯಾಗ ಮತ್ತು ಬಹಿರ್ಯಾಗ ಎಂದು. ಇವೆರಡಕ್ಕೂ ಪೂರ್ಣವಾದ ಸಾಮಂಜಸ್ಯವಿಲ್ಲಿದೆ. ಅಗ್ನೀಂಧನವನ್ನು ಮಾಡಿದಮೇಲೆ ಮೊಟ್ಟಮೊದಲಾಗಿ ಎರಡು ಆಹುತಿಗಳನ್ನು ಸಮರ್ಪಿಸಬೇಕು. ಮೊದಲ ಆಹುತಿ ಪೂರ್ವಾಧಾರ ಆಹುತಿ ; ಇದು ಮನಸ್ಸಿಗಾಗಿ. ಎರಡನೆಯದು ಉತ್ತರಾಧಾರ ಆಹುತಿ ; ಇದು ವಾಕ್ಕಿಗಾಗಿ. ರಥವನ್ನೆಳೆಯಲು ಎರಡು ಅಶ್ವಗಳು ಬೇಕಾಗುವಂತೆ ಯಜ್ಞಚಕ್ರವನ್ನು ನಡೆಸಿಕೊಂಡು ಹೋಗಲು ಮನಸ್ಸು ಮತ್ತು ವಾಕ್ಕು ಆವಶ್ಯಕ. ಮೊದಲು ಸಂಕಲ್ಪಿಸುವುದು ಮನಸ್ಸು. ಆ ಸಂಕಲ್ಪವನ್ನು ಮಾತಿನ ಮೂಲಕ ಪ್ರತಿಪಾದಿಸುವುದು ವಾಕ್ಕು. ಇವುಗಳೆರಡರ ಸಂಯೋಗವಿಲ್ಲದೆ ಯಾವ ಕರ್ಮವೂ ನಡೆಯಲಾರದು. ಈ ಎರಡು ಆಹುತಿಗಳ ನಿಷ್ಪತ್ತಿ ಕ್ರಮಕ್ಕಾಗಿ 'ಸ್ರುವ' ಮತ್ತು 'ಸ್ರುಕ್' ಎಂಬ ಪಾತ್ರೆಗಳ ದ್ವಾರಾ ಆಗುತ್ತದೆ. 'ಅಗ್ನಿ ಸೋಮಾತ್ಮಕಂ ಜಗತ್' ಎಂಬಂತೆ ವಿಶ್ವದಲ್ಲಿರುವುವು ಅಗ್ನಿ ಮತ್ತು ಸೋಮ ಎಂಬ ಎರಡು ತತ್ತ್ವಗಳೇ. ಅಗ್ನಿ ಅನ್ನಾದ ; ಸೋಮ ಅನ್ನ. ಅಗ್ನಿ ಪುರುಷತತ್ತ್ವ, ಸೋಮ ಸ್ತ್ರೀತತ್ತ್ವ. ಈ ಎರಡು ತತ್ತ್ವಗಳ ಸಾಮಂಜಸ್ಯದಿಂದ ವಿಶ್ವಕಲ್ಯಾಣವಾಗುತ್ತದೆ. ಅಗ್ನಿಯಲ್ಲಿ ಸೋಮರಸದ ಆಹುತಿಯನ್ನರ್ಪಿಸುವ ರಹಸ್ಯವಾದರೂ ಇವುಗಳಿಂದ ಜಗನ್ಮಂಗಳವಾಗಲೆಂಬುದೇ. ಉಪನಿಷತ್ತುಗಳಲ್ಲಿ ಇವುಗಳನ್ನೇ ರಯಿ, ಪ್ರಾಣ ಎಂದು ವರ್ಣಿಸಿದೆ. ಹೀಗೆ ಈ ಬ್ರಾಹ್ಮಣದಲ್ಲಿ ಯಜ್ಞದ ಸಣ್ಣ ಸಣ್ಣ ಕ್ರಿಯಾ ಕಲಾಪಗಳಿಗೂ ಸ್ವಾರಸ್ಯವಾದ ತಾತ್ವಿಕ ವಿವೇಚನೆಯನ್ನು ಮಾಡಿರುವುದು ಇದರ ವೈಶಿಷ್ಟ್ಯ. ಮೇಲೆ ಹೇಳಿದ ಪೂರ್ವಾಧಾರ ಆಹುತಿಯನ್ನು ಕುಳಿತುಕೊಂಡೇ ಅರ್ಪಿಸುವರು. ಆದರೆ ಉತ್ತರಾಧಾರ ಆಹುತಿಯನ್ನು ನಿಂತುಕೊಂಡು ಸಮರ್ಪಿಸುವರು. ಇದರ ಕಾರಣದ ವಿವರಣೆಯನ್ನು ಈ ಬ್ರಾಹ್ಮಣದಲ್ಲಿ (1-4-5) ಕಾಣಬಹುದು. ಸಾಧಾರಣರ ದೃಷ್ಟಿಯಲ್ಲಿ ಯಜ್ಞದ ವಿಧಾನಗಳು ಆಡಂಬರಯುತವಾಗಿರುವಂತೆಯೂ ಬೇಸರಗೊಳಿಸುವ ವಿಧಿವಿಧಾನಗಳ ಸಮೂಹಗಳನ್ನು ಹೊಂದಿರುವಂತೆಯೂ ತೋರುವುದು. ಆದರೆ ಈ ಬ್ರಾಹ್ಮಣದ ವ್ಯಾಖ್ಯಾನದ ಅನುಶೀಲನದಿಂದ ಯಜ್ಞವಿಧಿಯಲ್ಲಡಗಿರುವ ತತ್ತ್ವಾರ್ಥದ ಪರಿಚಯವಾಗುತ್ತದೆ.

ಈ ಬ್ರಾಹ್ಮಣಕ್ಕೆ ಐತಿಹಾಸಿಕವಾದ ಮಹತ್ವವೂ ಅಪಾರವಾಗಿದೆ. ಇಲ್ಲಿ ಬರುವ ಅನೇಕಾನೇಕ ಆಖ್ಯಾನಗಳಿಂದ ಅಂದಿನ ಕಾಲದ ಐತಿಹಾಸಿಕ ವಿಚಾರಗಳು ಸೂಚಿತವಾಗುತ್ತವೆ. ನಾಲ್ಕನೇ ಅಧ್ಯಾಯದ ಬ್ರಾಹ್ಮಣ ಒಂದು-ಕಂಡಿಕೆ ಹತ್ತು-ಹದಿನೇಳರಲ್ಲಿ ಬರುವ 'ಮಾಥವ ವಿದೇಘ'ನ ಆಖ್ಯಾನ ಬಹಳ ಸ್ವಾರಸ್ಯವಾಗಿದೆ. ಮಾಥವ ವಿದೇಘನು ಸರಸ್ವತೀ ನದೀ ತೀರದಲ್ಲಿದ್ದನು. ಅಲ್ಲಿಂದ ವೈಶ್ವಾನರಾಗ್ನಿಯು ಎಲ್ಲ ಸ್ಥಾನಗಳನ್ನೂ ದಹಿಸುತ್ತಾ ಪೂರ್ವಾಭಿಮುಖವಾಗಿ ಹೊರಟು ಉತ್ತರಗಿರಿಯಿಂದ ಪ್ರವಹಿಸುವ 'ಸದಾನೀರಾ' ನದಿಯವರೆಗೆ

ಬಂದು ಸೇರಿದನು. ರಾಜನೂ ಅವನ ಪುರೋಹಿತನಾದ 'ಗೋತಮರಾಹೂಗಣಋಷಿಯೂ' ಅಗ್ನಿಯನ್ನು ಹಿಂಬಾಲಿಸುತ್ತಾ ಬಂದರು. ರಾಜನು ತಮ್ಮ ವಾಸಸ್ಥಾನವನ್ನು ಕುರಿತು ಪ್ರಶ್ನಿಸಿದಾಗ ಅಗ್ನಿ ಹೇಳಿದನು–"ಸದಾ ನೀರಾ ನದಿಯ ಪೂರ್ವಭಾಗದಲ್ಲಿ ನಿಮ್ಮ ವಾಸಸ್ಥಾನವಾಗಲಿ" ಎಂದು. ಆಗ ಆ ಪ್ರದೇಶವು ರಾಜನಿಂದ ಆಕ್ರಮಿಸಲ್ಪಟ್ಟಿತು. 'ಈ ನದಿಯು ಈಗಲೂ ಕೋಸಲ ಮತ್ತು ವಿದೇಹಗಳ ನಡುವಣ ಎಲ್ಲೆಯಾಗಿದೆ' ಎಂದು ಈ ಬ್ರಾಹ್ಮಣ ಹೇಳುತ್ತದೆ (1-4-1). ವೈದಿಕಧರ್ಮ ಸಾರಸ್ವತಮಂಡಲದಿಂದ ಪೂರ್ವ ದಿಕ್ಕಿಗೆ ಹರಡಿದ ಐತಿಹಾಸಿಕ ಘಟನೆಯ ಸಂಕೇತವಿದು. ಋಗ್ವೇದದಲ್ಲಿಯೇ ಸರಯೂ ನದಿಯ ಉಲ್ಲೇಖವಿದೆ. ಆದ್ದರಿಂದ ಆರ್ಯಧರ್ಮ ಆ ಕಾಲದಲ್ಲಿ ಕೋಸಲದೇಶದವರೆಗೂ ಹರಡಿತ್ತೆಂದು ಹೇಳಬಹುದು. ಅಲ್ಲಿಂದ ಮುಂದಿನ ಮಿಥಿಲಾ ಪ್ರದೇಶಕ್ಕೂ ವೈದಿಕಧರ್ಮ ಹರಡಿದ ವಿಷಯ ಇಲ್ಲಿ ಸೂಚಿತವಾಗಿದೆ. ರಾಮಾಯಣದಲ್ಲಿ ಜನಕ ರಾಜನ ಪುರೋಹಿತರು ಗೌತಮವಂಶದವರೆಂದು ಹೇಳಿರುವುದನ್ನು ಗಮನಿಸಬಹುದು. ಈ ಪ್ರಾಂತ್ಯ ಮುಂದೆ ಬೌದ್ಧ ಜೈನ ಧರ್ಮಗಳ ಹುಟ್ಟುನಾಡಾಯಿತು. ಈ ಬ್ರಾಹ್ಮಣದಲ್ಲಿ ಉಪಯೋಗಿಸಿರುವ ಅರ್ಹತ್, ಶ್ರಮಣ, ಪ್ರತಿಬುದ್ಧ ಮುಂತಾದ ಶಬ್ದಗಳನ್ನು ವಿಶಿಷ್ಟವಾದ ಅರ್ಥದಲ್ಲಿ ಆ ಧರ್ಮಗಳವರು ಮುಂದೆ ಬಳಸಿದರು.

ಮಿಥಿಲೆಯ ಜನಕನ ಉಲ್ಲೇಖ ಈ ಬ್ರಾಹ್ಮಣದಲ್ಲಿದೆ. ಅವನ ಪ್ರಧಾನ ಗುರುಗಳಾಗಿದ್ದವರು ಯಾಜ್ಞವಲ್ಕ್ಯರು. ಅಶ್ವಮೇಧ ಪ್ರಸಂಗದಲ್ಲಿ ಅನೇಕ ಪ್ರಾಚೀನ ರಾಜರುಗಳ ಹೆಸರುಗಳನ್ನು ಇಲ್ಲಿ ಹೇಳಿದೆ. ಅಶ್ವಮೇಧಯಾಗವನ್ನು ನಿರ್ವಹಿಸಿದರೆಂದು ದುಷ್ಯಂತ, ಭರತ ಇವರ ಹೆಸರುಗಳನ್ನು ಹೇಳಿದೆ (ಶತ. 13-5-4). ಮಹಾರಾಜ ಜನಮೇಜಯನ ಉಲ್ಲೇಖವೂ ಇಲ್ಲಿ ಬರುತ್ತದೆ. ಮಿಥಿಲೆಯ ರಾಜರುಗಳಿಗೆಲ್ಲ ಜನಕ ಎಂಬ ಹೆಸರಿರುತ್ತಿದ್ದಿತು. ಶಾಂತಿಪರ್ವದಲ್ಲಿ ಅನೇಕ ಜನಕರನ್ನು ಹೇಳಿರುವುದು ಇದಕ್ಕೆ ಸಾಕ್ಷಿ. ಆದ್ದರಿಂದ ಇದರಿಂದಲೇ ರಾಮಾಯಣದ ಜನಕರ ಉಲ್ಲೇಖವಿದೆಯೆಂದು ಹೇಳುವುದಕ್ಕಾಗುವುದಿಲ್ಲ. ಯಾಜ್ಞವಲ್ಕ್ಯರ ಗುರುಗಳಾದ 'ಉದ್ದಾಲಕ ಅರುಣಿ'ಗಳ ವ್ಯಕ್ತಿತ್ವದ ಮತ್ತು ಪಾಂಡಿತ್ಯದ ವರ್ಣನೆ ಸುಮನೋಹರವಾಗಿದೆ. ಇಲ್ಲಿ ಬರುವ ಅನೇಕಾನೇಕ ಆಖ್ಯಾನಕಗಳಲ್ಲಿ ಮನುವಿನ ಕಥೆ ಪ್ರಧಾನವಾದುದು. ಮಹಾಪ್ರಳಯದ ವರ್ಣನೆ ಇಲ್ಲಿದೆ. ಪುರಾಣಗಳಲ್ಲಿ ಉಲ್ಲೇಖಿತವಾದ ಮತ್ಸ್ಯಾವತಾರದ ಬೀಜ ಈ ಕಥೆಯಲ್ಲಿದೆ. (ಶತ. 1-8-1). ಅಪೂರ್ವವಾದ ಮತ್ಸ್ಯದ ಸಹಾಯದಿಂದ ಮನು ಪ್ರಚಂಡವಾದ ಜಲಪ್ರಳಯದಿಂದ ಮಾನವ ಸೃಷ್ಟಿಯ ರಕ್ಷಣೆಯನ್ನು ಮಾಡುತ್ತಾನೆ. ಮಾನವರು ನಷ್ಟರಾದ ಮೇಲೆ ಸಂಚಿತವಾದ ಬೀಜಗಳ ದ್ವಾರಾ ಯಜ್ಞದ ಮೂಲಕ ಈ ಭೂತಲದಲ್ಲಿ ಮಾನವನ ಆವಿರ್ಭಾವ ಅವನ ಮೂಲಕ ಆಗುತ್ತದೆ. ಮನುವಿನ ದೋಣಿ ಹಿಮಾಲಯದ ಶಿಖರಕ್ಕೆ ಕಟ್ಟಲ್ಪಟ್ಟು ಕಾಪಾಡಲ್ಪಡುತ್ತದೆ. ಹಿಮಾಲಯದ ಮೇಲೆ ಈ ಘಟನೆ ನಡೆಯಿತು. ಮನುವಿನ ನಾವೆಯು ಕಟ್ಟಲ್ಪಟ್ಟ ಸ್ಥಾನ 'ಮನೋರವಸರ್ಪಣ' ಎಂದು ಪ್ರಸಿದ್ಧವಾಯಿತು. ಈ ಜಲಪ್ರಳಯದ ಕಥೆ ಬೈಬಲ್ಲಿನಲ್ಲಿಯೂ ಉಪಲಬ್ಧವಾಗುತ್ತದೆ. ನೋವಾ ಎಂಬುವನು ಆ ಪ್ರವಾಹದಿಂದ ರಕ್ಷಿಸಲ್ಪಟ್ಟವನು. ಮೌಂಟ್ ಸಿನೈ (Mount Sinai) ಶಿಖರದಲ್ಲಿ ಅವರ ರಕ್ಷಣೆ ಆಯಿತೆಂದಿದೆ. ಶತಪಥ ಬ್ರಾಹ್ಮಣದ ಈ ಮನುವಿನ ಕಥೆಯಿಂದ ಈ ಕಥೆ ಪ್ರೇರಿತವಾಯಿತೋ ಅಥವಾ ಸ್ವತಂತ್ರವಾದುದೋ ಎಂಬುದನ್ನು ನಿರ್ಣಯಿಸುವುದಕ್ಕೆ ಸಾಕಷ್ಟು ಪ್ರಮಾಣಗಳಿಲ್ಲದುದರಿಂದ ಸಾಧ್ಯವಿಲ್ಲವಾಗಿದೆ. ಹೀಗೆ ಶತಪಥ ಬ್ರಾಹ್ಮಣ ವೈದಿಕ ವಾಙ್ಮಯದಲ್ಲಿ ಋಗ್ವೇದಸಂಹಿತೆ ಅಥರ್ವಸಂಹಿತೆಯ ನಂತರ ಬಹುಮುಖವಾದ ಪ್ರಾಧಾನ್ಯಹೊಂದಿ ಅನೇಕ ದೃಷ್ಟಿಗಳಿಂದ ಮಹತ್ವಪೂರ್ಣವಾಗಿದೆ.

# ಅಥರ್ವವೇದ ಬ್ರಾಹ್ಮಣ

**ಗೋಪಥ ಬ್ರಾಹ್ಮಣ**

ಅಥರ್ವವೇದಕ್ಕೆ ಸೇರಿರುವ ಬ್ರಾಹ್ಮಣಗಳಲ್ಲಿ ಉಪಲಬ್ಧವಾಗಿರುವುದು ಒಂದೇ ಒಂದು ಬ್ರಾಹ್ಮಣ. ಇದರ ಹೆಸರು ಗೋಪಥ ಬ್ರಾಹ್ಮಣ. ಬ್ರಾಹ್ಮಣ ಸಾಹಿತ್ಯದಲ್ಲಿ ಈ ಗ್ರಂಥ ಬಹಳ ಅರ್ವಾಚೀನವಾದುದೆಂದು ಎಣಿಸಲ್ಪಟ್ಟಿದೆ. ಎಲ್ಲ ಬ್ರಾಹ್ಮಣಗಳನ್ನೂ ಸೂತ್ರಗಳು ಅನುಸರಿಸುತ್ತವೆ. ಆದರೆ ಈ ಬ್ರಾಹ್ಮಣ ವೈತಾನಸೂತ್ರವನ್ನನುಸರಿಸುತ್ತದೆ ತನ್ನ ಉತ್ತರಾರ್ಧದಲ್ಲಿ. ಆದ್ದರಿಂದ ವೈತಾನಸೂತ್ರದ ರಚನೆಯ ನಂತರ ಇದರ ರಚನೆ ಆಗಿರಬೇಕು. ಐತರೇಯ, ಕೌಷೀತಕಿ, ಶತಪಥ ಮತ್ತು ಷಡ್ವಿಂಶ ಬ್ರಾಹ್ಮಣಗಳಿಂದ ಅನೇಕ ವಾಕ್ಯಗಳನ್ನು ಇದು ಉದಾಹರಿಸುತ್ತದೆ. ಹೀಗಾಗಿ ಕ್ರಿ. ಪೂ. 3000ರಿಂದ 2000ದ ವರೆಗಿನ ಬ್ರಾಹ್ಮಣಗಳ ಕಾಲಕ್ಕಿಂತ ಈಚಿನದಾಗಿ ಇದು ಕಂಡುಬರುತ್ತದೆ.

ಈ ಬ್ರಾಹ್ಮಣದಲ್ಲಿ ಪೂರ್ವ ಗೋಪಥ ಮತ್ತು ಉತ್ತರ ಗೋಪಥ ಎಂದು ಎರಡು ಭಾಗಗಳಿವೆ. ಪೂರ್ವಗೋಪಥದಲ್ಲಿ ಐದು ಪ್ರಪಾಠಕಗಳೂ ಉತ್ತರ ಗೋಪಥದಲ್ಲಿ ಆರು ಪ್ರಪಾಠಕಗಳೂ ಇವೆ. ಪೂರ್ವಾರ್ಧದಲ್ಲಿ 135 ಕಂಡಿಕೆಗಳೂ ಉತ್ತರಾರ್ಧದಲ್ಲಿ 123 ಕಂಡಿಕೆಗಳೂ ಇವೆ. ಒಂದೊಂದು ಕಂಡಿಕೆಯೂ ಐದಾರು ದೀರ್ಘವಾದ ವಾಕ್ಯಗಳನ್ನೊಳಗೊಂಡಿದೆ.

ಈ ಬ್ರಾಹ್ಮಣದ ಶೈಲಿ ಇತರ ಬ್ರಾಹ್ಮಣಗಳ ಶೈಲಿಯಂತೆಯೇ ಇದೆ. ಆದರೆ ಭಾಷೆ ಇತರ ಬ್ರಾಹ್ಮಣಗಳ ಭಾಷೆಯಂತೆ ಇರದೆ ಅರ್ವಾಚೀನವಾಗಿದೆ. ವಿಷಯ ವಿವೇಚನೆಯೂ ಸಹ ಸೂತ್ರಗಳಲ್ಲಿರುವಂತೆ ವಿಶದವಾಗಿಯೂ ಕ್ರಮಬದ್ಧವಾಗಿಯೂ ಇರದೆ ಅನೇಕ ಕಾಲ್ಪನಿಕ ಆಖ್ಯಾನಕಗಳಿಂದ ತುಂಬಿಕೊಂಡಿದೆ. ಅನೇಕ ವೇಳೆ ಉಪನಿಷತ್ತುಗಳ ಮಾತುಗಳನ್ನೂ ಇದು ಉದಾಹರಿಸುತ್ತದೆ.

ಅಥರ್ವವೇದ ವೇದ ಪದವಿಯನ್ನು ದೃಢವಾಗಿ ಪಡೆದು ವೇದಗಳಲ್ಲಿ ಪ್ರಥಮ ಸ್ಥಾನವನ್ನು ಪಡೆದ ಕಾಲದಲ್ಲಿ ಈ ಬ್ರಾಹ್ಮಣದ ರಚನೆ ಆಯಿತೆಂದು ಕಾಣುತ್ತದೆ. ಅಥರ್ವವೇದದ ಮಹಿಮೆಯನ್ನು ವಿಸ್ತಾರವಾಗಿ ಇಲ್ಲಿ ವರ್ಣಿಸಿದೆ. ಅಥರ್ವವೇದದಿಂದಲೇ ಮೂರು ವೇದಗಳ ಹಾಗೂ ಓಂಕಾರಗಳ ಉತ್ಪತ್ತಿಯನ್ನೂ ಮತ್ತು ಓಂಕಾರದಿಂದ ಸಮಸ್ತ ಸಂಸಾರದ ಉತ್ಪತ್ತಿಯನ್ನೂ ಇದು ಹೇಳುತ್ತದೆ.

'ಬ್ರಹ್ಮ ವಾ ಇದಮಗ್ರ ಆಸೀತ್...ತದ್ಯೆಕ್ಷತ...ಮಹದ್ವೈಯಕ್ಷಮ್' ಎಂದು ಆರಂಭವಾಗುತ್ತದೆ. ಬ್ರಹ್ಮ ತನ್ನ ಬೆವರಿನಿಂದ ಮೊದಲು ಜಲವನ್ನೂ ಆ ಜಲದಲ್ಲಿಟ್ಟ ವೀರ್ಯದಿಂದ ಭೃಗುವನ್ನೂ ಸೃಜಿಸಿದನು. ಭೃಗು ಕೆಳಗೆ ನೋಡಿದಾಗ ಅಥರ್ವನ್ ಆದನು. ಆ ಅಥರ್ವನ್ ಕ್ರಮವಾಗಿ ಒಂದು ಋಕ್ಕಿನ, ಎರಡು ಋಕ್ಕುಗಳ ಹೀಗೆಯೇ ಹತ್ತು ಋಕ್ಕುಗಳವರೆಗಿನ ಹತ್ತು ಮಂದಿ ಅಥರ್ವಣ ಋಷಿಗಳನ್ನು ಸೃಜಿಸಿದನು. ಹನ್ನೊಂದು ಋಕ್ಕುಗಳಿಂದ ಹಿಡಿದು 20 ಋಕ್ಕುಗಳವರೆಗಿನ ಹತ್ತು ಅಥರ್ವಣ ಆರ್ಷೇಯರುಗಳು ಇವರುಗಳಿಂದ ಸೃಷ್ಟರಾದರು. ಈ ಇಪ್ಪತ್ತು ಋಷಿಗಳು ಅಥರ್ವವೇದ ಮಂತ್ರಗಳನ್ನು ಕಂಡರು. ಅಥರ್ವವೇದದಿಂದ

ಓಂಕಾರವೂ ಅದರಿಂದ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳೂ ಅವುಗಳಿಂದ ಅಗ್ನಿ ವಾಯು ಸೂರ್ಯರೂ, ಅವರುಗಳಿಂದ ಋಗ್ಯಜುಸ್ಸಾಮಗಳೂ, ಅವುಗಳಿಂದ ಸಮುದ್ರವೂ, ಅದರಿಂದ ವರುಣನೂ ವರುಣ ಅಥವಾ ಮೃತ್ಯುವಿನಿಂದ ಅಂಗಿರಸನೂ, ಅವನಿಂದ ಇಪ್ಪತ್ತು ಮಂದಿ ಆಂಗಿರಸರೂ ಅವರಿಂದ ಹತ್ತು ಮಂದಿ ಅಂಗಿರಸ ಆರ್ಷೇಯರೂ ಅವರಿಂದ ಆಂಗಿರಸ ವೇದವೂ ಉತ್ಪನ್ನವಾದವು. (ಆಂಗಿರಸವೇದ ಅಥರ್ವವೇದಕ್ಕಿಂತ ಭಿನ್ನವಾದುದೆಂದು ಗಮನಿಸಿರುವುದನ್ನು ನೋಡಿ.) ಅದರಿಂದ 'ಜನತ್' ಎಂಬ ಶಬ್ದ ಹುಟ್ಟಿತು. ಅದು ಎದ್ದು ನಿಂತಿತು. ಆದ್ದರಿಂದಲೇ ಆಂಗಿರಸರು ವೇದವನ್ನು ಪಠಿಸುವಾಗ ಎದ್ದು ನಿಲ್ಲುತ್ತಾರೆ. ಅದು ಐದು ದಿಕ್ಕಿನಲ್ಲಿಯೂ ನೋಡಿದಾಗ ಪೂರ್ವದಿಕ್ಕಿನಿಂದ ಸರ್ಪವೇದವೂ, ದಕ್ಷಿಣದಿಂದ ಪಿಶಾಚವೇದವೂ, ಪಶ್ಚಿಮದಿಂದ ಅಸುರವೇದವೂ, ಉತ್ತರದಿಂದ ಇತಿಹಾಸ ವೇದವೂ ಮೇಲಿನ ಧ್ರುವಾದಿಶೆಯಿಂದ ಪುರಾಣವೇದವೂ ಉದ್ಭವಿಸಿತು.

ಈ ಆಖ್ಯಾನಕ ಸ್ವಾರಸ್ಯಕರವಾಗಿದೆ. ವೇದಗಳಲ್ಲೆಲ್ಲಾ ಅಥರ್ವವೇದ ಪ್ರಥಮ ಸ್ಥಾನವನ್ನು ಜನತೆಯಲ್ಲಿ ಪಡೆದ ನಂತರ ಈ ಬ್ರಾಹ್ಮಣದ ರಚನೆ ಆಯಿತೆಂಬುದು ಮೊದಲು ಗೋಚರಿಸುತ್ತದೆ. ಎರಡನೆಯದಾಗಿ ಅಥರ್ವವೇದವೇ ಮೊಟ್ಟಮೊದಲನೆಯ ವೇದವಾಗಿ ಇತರ ವೇದಗಳೆಲ್ಲಾ ಅದರಿಂದ ಹುಟ್ಟಿದವೆಂದು ಇಲ್ಲಿ ಹೇಳಿದೆ. ಇತರ ವೇದಗಳನ್ನು ಕಲಿಯುವುದಕ್ಕೆ ಮುಂಚೆ ಅಥರ್ವವೇದವನ್ನು ಅಧ್ಯಯನ ಮಾಡಬೇಕೆಂಬ ಅನುಶಾಸನ ಇಲ್ಲಿ ಬಂದಿದೆ. ಋಗ್ವೇದ ಯಜುರ್ವೇದ ಸಾಮವೇದಗಳ ಸಹಾಯದಿಂದ ಬ್ರಹ್ಮನು ಕೆಲಸ ನಿರ್ವಹಿಸುತ್ತಿದ್ದವನು ಇನ್ನು ಮುಂದೆ ಅಥರ್ವವೇದೀಯನಾಗಬೇಕಾಯಿತು.

ಈಗ ಈ ಬ್ರಾಹ್ಮಣದಲ್ಲಿ ಬರುವ ವಿಷಯ ವಿವೇಚನೆಯನ್ನು ಮಾಡೋಣ. ಪೂರ್ವಗೋಪಥದ ಪ್ರಥಮಪ್ರಪಾಠಕದಲ್ಲಿ ಓಂಕಾರದ ಮತ್ತು ಗಾಯತ್ರಿಯ ಮಹಿಮೆಯ ಸುಂದರ ವರ್ಣನೆ ಇದೆ. ಎರಡನೆಯ ಪ್ರಪಾಠಕದಲ್ಲಿ ಬ್ರಹ್ಮಚರ್ಯದ ನಿಯಮಗಳ ವಿಶೇಷ ವರ್ಣನೆ ಇದೆ. ಒಂದೊಂದು ವೇದದ ಅಧ್ಯಯನಕ್ಕೂ ಹನ್ನೆರಡು ವರ್ಷಗಳ ಕಾಲವನ್ನು ಇಲ್ಲಿ ವಿಧಿಸಿದೆ. ಆದರೆ ವ್ಯಕ್ತಿಯ ಶಕ್ತಿ ಸಾಮರ್ಥ್ಯಗಳಿಗನುಗುಣವಾಗಿ ಈ ಕಾಲವನ್ನು ಹೆಚ್ಚುಕಡಿಮೆ ಮಾಡಿಕೊಳ್ಳಬಹುದೆಂದಿದೆ. ಮೂರನೆಯ ಪ್ರಪಾಠಕದಲ್ಲಿ ಯಾಗದಲ್ಲಿ ನಾಲ್ವರು ಋತ್ವಿಕ್ಕುಗಳ ಕಾರ್ಯಕಲಾಪದ ವರ್ಣನೆ ಮಾಡಿದೆ. ಋತ್ವಿಕ್ಕುಗಳಿಗೆ ಸಂಬಂಧಿಸಿದಂತೆ ಅನೇಕಾನೇಕ ಕಾಲ್ಪನಿಕ ಕಥೆಗಳೂ ಇಲ್ಲಿವೆ. ನಾಲ್ಕನೆಯ ಪ್ರಪಾಠಕದಲ್ಲಿ ಋತ್ವಿಕ್ಕುಗಳ ದೀಕ್ಷಾವಿಶೇಷಗಳ ವರ್ಣನೆ ಇದೆ. ಪಂಚಮ ಪ್ರಪಾಠಕದಲ್ಲಿ ಮೊದಲು ಸಂವತ್ಸರ ಸತ್ರದ ವರ್ಣನೆಯೂ ಅನಂತರ ಅಗ್ನ್ಯಾಧೇಯ, ಪೂರ್ಣಾಹುತಿ, ಅಗ್ನಿಹೋತ್ರ, ದರ್ಶಪೂರ್ಣಮಾಸ, ಆಗ್ರಯಣಂ, ಚಾತುರ್ಮಾಸ್ಯ, ಪಶುಬಂಧ, ಅಗ್ನಿಷ್ಟೋಮ, ರಾಜಸೂಯ, ವಾಜಪೇಯ, ಅಶ್ವಮೇಧ, ಪುರುಷಮೇಧ ಮತ್ತು ಸರ್ವಮೇಧಗಳ ವಿವರಣೆಯೂ ಇದೆ. ಉತ್ತರ ಗೋಪಥದ ವಿಷಯ ವರ್ಣನೆ ಇಷ್ಟು ಸುವ್ಯವಸ್ಥಿತವಾಗಿಲ್ಲ. ಇಲ್ಲಿ ಬರುವ, ನಾನಾ ಪ್ರಕಾರಗಳಾದ ಯಜ್ಞದ ವರ್ಣನೆಯೂ ಅವುಗಳಿಗೆ ಸಂಬಂಧಿಸಿದ ಆಖ್ಯಾಯಿಕೆಗಳ ಉಲ್ಲೇಖವೂ ರಮಣೀಯವಾಗಿವೆ. ಉತ್ತರ ಗೋಪಥದ ಮೊದಲ ಪ್ರಪಾಠಕದಲ್ಲಿ ಯಾಗದಲ್ಲಿ ಹವಿರ್ಭಾಗಕ್ಕಾಗಿ ರುದ್ರನು ನಡೆಸಿದ ಹೋರಾಟದ ಕಥೆ ಬರುತ್ತದೆ. ಅನೇಕಾನೇಕ ದೇವತೆಗಳಿಗೆ ಯಾಗಗಳಲ್ಲಿ ಕೊಡಬೇಕಾದ ಮಾಂಸಾಹುತಿಗಳ ವಿಚಾರ ಎರಡನೇ ಪ್ರಪಾಠಕದಲ್ಲಿಯೂ 'ವಷಟ್', 'ಹಿಂಕಾರ'ಗಳ ವಿವೇಚನೆ ಮೂರನೇ ಪ್ರಪಾಠಕದಲ್ಲಿಯೂ ಬರುತ್ತದೆ. ಕೊನೆಯ ಮೂರು ಪ್ರಪಾಠಕಗಳು ಏಕಾಹ,

ಉಕ್ಥ ಮತ್ತು ಏಕಾಷ್ಟಕ ಮುಂತಾದುವುಗಳಲ್ಲಿ ನಡೆಸಬೇಕಾದ ಪ್ರಾತಃಕಾಲದ ಮಧ್ಯಾಹ್ನದ ಹಾಗೂ ಸಾಯಂಕಾಲದ ಕಾರ್ಯಕಲಾಪಗಳ ವಿವರಣೆಯನ್ನು ಕೊಡುತ್ತವೆ.

ಈ ಬ್ರಾಹ್ಮಣದ ರಚಯಿತಾ ಗೋಪಥ ಋಷಿ. ಅಥರ್ವವೇದೀಯ ಋಷಿಗಳ ಹೆಸರುಗಳಲ್ಲಿ ಈ ಹೆಸರೂ ಬರುತ್ತದೆ. ಗೋಪಥ ಬ್ರಾಹ್ಮಣ ಯಾಸ್ಕರಿಗೆ ಪರಿಚಿತವಾಗಿದ್ದಿತೆಂದು ಡಾ|| ಗುಣೇ ಅವರು ಪ್ರತಿಪಾದಿಸಿದ್ದಾರೆ.[10] ಅದರಿಂದ ಈ ಬ್ರಾಹ್ಮಣ ಕ್ರಿ. ಪೂ. 1000 ಕ್ಕಿಂತ ಹಿಂದಿನ ಕಾಲಕ್ಕೆ ಸೇರುವುದು. ದಶೋಪನಿಷತ್ತುಗಳಿಂದ ಅನೇಕ ವಾಕ್ಯಗಳನ್ನು ಇದು ಉದ್ಧರಿಸುವುದರಿಂದ ಇದು ಆ ಉಪನಿಷತ್ತುಗಳಿಗಿಂತ ಈಚಿನದೆಂದು ತಿಳಿಯಬಹುದು. ಒಂದೊಂದು ವೇದಕ್ಕೂ ಸೇರಿದ ಕಲ್ಪಗಳ ವಿಚಾರವನ್ನೂ ಇದು 'ಸಂತಿ ಚೈಷಾಂ ಸಮಾನಾ ಮಂತ್ರಾ ಕಲ್ಪಾಶ್ಚ ಬ್ರಾಹ್ಮಣಾನಿ ಚ | ವ್ಯವಸ್ಥಾನಂ ತು ತತ್ಸರ್ವಂ ಪೃಥಗ್ವೇದೇಷು ತತ್ಸ್ಮೃತಮ್ ||' ಎಂದು (ಪೂ. ಗೋ. 5-25) ಹೇಳುತ್ತದೆ.

ಈ ಬ್ರಾಹ್ಮಣದಲ್ಲಿ ಕುರುಪಾಂಚಾಲ, ಅಂಗಮಗಧ, ಕಾಶಿ-ಕೌಶಲ ಸಾಲ್ವ ಮತ್ಸ್ಯ ಹಾಗೂ ವಶ ಉಶೀನರಗಳ ಉಲ್ಲೇಖವಿದೆ. ಈ ಕಾರಣದಿಂದ ಇದರ ರಚಯಿತಾ ಮಧ್ಯ ದೇಶದವರಾಗಿರಬಹುದೆಂದು ಊಹಿಸುತ್ತಾರೆ. ಈ ಬ್ರಾಹ್ಮಣದಲ್ಲಿ 'ಶಂನೋದೇವೀರಭೀಷ್ಟಯೇ' ಎಂಬುದನ್ನು ಅಥರ್ವವೇದದ ಪ್ರಥಮ ಮಂತ್ರವೆಂದು ಹೇಳಿರುವುದರಿಂದ ಈ ಬ್ರಾಹ್ಮಣಕಾರರು ಪಿಪ್ಪಲಾದ ಶಾಖೆಯವರೆಂದು ಊಹಿಸಬಹುದು.

ಈ ಬ್ರಾಹ್ಮಣದಲ್ಲಿ ಅನೇಕ ನವೀನ ವಿಚಾರಗಳಿವೆ. 'ಬ್ರಹ್ಮ ಹ ವೈ ಬ್ರಹ್ಮಾಣಂ ಪುಷ್ಕರೇ ಸಸೃಜೇ' (ಪೂ. 1-6) ಎಂಬುದು ಇಂಥದೇ ಒಂದಾಗಿದೆ. ಬ್ರಾಹ್ಮಣನು ಹಾಡಬಾರದು. ನರ್ತಿಸಬಾರದು, ಆಗ್ಲಾಗೃಧನೆಂದು ಕರೆಯಲ್ಪಡಬಾರದು—'ತಸ್ಮಾದ್ಬ್ರಾಹ್ಮಣೋ ನೈವ ಗಾಯೇನ್ನ ನೃತ್ಯೇತ್ ಮಾಗ್ಲಾಗೃಧಃ' (2-21) ದೇವತೆಗಳು ಸತ್ರವನ್ನಾರಂಭಿಸಿದರು. ಅಸುರರೂ ರಾಕ್ಷಸರೂ ಅದನ್ನು ನಾಶಪಡಿಸಲಿಚ್ಛಿಸಿದರು ; ಯಾವ ಕ್ರಿಯೆಯನ್ನು ಮಾಡುವುದಕ್ಕೂ ಮೊದಲು ಆಚಮನ ಮಾಡಬೇಕು–'ನಿರಂಗುಷ್ಠಂ ಪಾಣಾವಮೃತಮಸಿ ಅಮೃತೋಪಸ್ತರಣಮಸಿ ಅಮೃತಾಯೋಪ ಸೃಣಾಮೀತಿ ಪಾಣಾವುದಕಮಾನೀಯ ಜೀವಾಸ್ಮೇತಿ ಸೂಕ್ತೇನ ತ್ರಿರಾಚಾಮತಿ.' (ಪೂ. 1-39). ಮೂರು ವೇದಗಳನ್ನು ಅನುಸರಿಸುವವರು ತ್ರಿವಿಷ್ಟಪ, ತ್ರಿದಿವ ಅಥವಾ ನಾಕಕ್ಕೆ ಹೋಗುವರು ; ಆದರೆ ಅಥರ್ವವೇದೀಯರು ಅವುಗಳನ್ನೂ ಮೀರಿದ ಬ್ರಹ್ಮಲೋಕಕ್ಕೆ ಹೋಗುವರು.

ಈ ಬ್ರಾಹ್ಮಣದಲ್ಲಿ ಋಗ್ವೇದದಿಂದ ಅನೇಕಾನೇಕ ಮಂತ್ರಗಳನ್ನೂ ಉದ್ಧರಿಸಲಾಗಿದೆ. 'ತದೇತದೃಚಾಭ್ಯುಕ್ತಮ್' ಎಂದು ಹೇಳಿ ಇವುಗಳನ್ನು ಸೂಚಿಸಿದೆ. ಇದಲ್ಲದೆ ಅನೇಕಾನೇಕ ಶ್ಲೋಕಗಳನ್ನೂ ಉಲ್ಲೇಖಿಸಲಾಗಿದೆ.

ಯಾಗದಲ್ಲಿ ಕೊಡಬೇಕಾದ ದಕ್ಷಿಣೆಯ ವಿಚಾರದಲ್ಲಿ ಇಲ್ಲಿ ಹೆಚ್ಚಾಗಿ ಹೇಳದೆ ಇರುವುದು ಸೋಜಿಗವಾಗಿದೆ. ಪ್ರಾಚೀನವಾದ ಬ್ರಾಹ್ಮಣಗಳ ಕಾಲದ ನಂತರ ಇವು ಅಷ್ಟು ಪ್ರಧಾನವಾಗಿರಲಿಲ್ಲವೇನೋ. ಉತ್ತರ ಗೋಪಥದಲ್ಲಿ (6-14) ದಕ್ಷಿಣೆ ತೆಗೆದುಕೊಳ್ಳುವುದು ಅಯುಕ್ತವೆಂದೂ ಹೇಳಿದೆ.

---

10. 'ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಮ್'. ನೋಡಿ (ನಿ. 1-16)
(ಗೋ. ಬ್ರಾ. 2-2-6 ; 2-4-2)

ಭಾಷಾಶಾಸ್ತ್ರದ ದೃಷ್ಟಿಯಿಂದ ಗೋಪಥ ಬ್ರಾಹ್ಮಣ ಮಹತ್ವಪೂರ್ಣವಾಗಿದೆ. ಅನೇಕ ಶಬ್ದಗಳ ನಿರ್ವಚನ ಇಲ್ಲಿ ರಮಣೀಯವಾಗಿ ಬಂದಿದೆ. ಉದಾಹರಣೆಗಾಗಿ ವರುಣ ಶಬ್ದಕ್ಕೆ 'ತಂ ವಾ ಏತಂ ವರಣ ಸಂತಂ ವರುಣ ಇತ್ಯಾಚಕ್ಷತೇ' (ಪೂ. ಗೋ. 1-6) ಎಂಬುದನ್ನು ಗಮನಿಸಬಹುದು. ಅಂಗಿರಾ ಶಬ್ದದ ವ್ಯುತ್ಪತ್ತಿಯನ್ನು 'ಅಂಗರಸ' ಶಬ್ದದಿಂದಲೂ, ದೀಕ್ಷಿತ ಶಬ್ದದ ವ್ಯುತ್ಪತ್ತಿಯನ್ನು 'ಧೀಕ್ಷಿತ' ಶಬ್ದದಿಂದಲೂ ಹೇಳಿದೆ. 'ಶ್ರೇಷ್ಠಾಂ ಧಿಯಂ ಕ್ಷಿಯತೀತಿ ತಂ ವಾ ಏತಂ ಧೀಕ್ಷಿತಂ ಸಂತಂ ದೀಕ್ಷಿತ ಇತ್ಯಾಚಕ್ಷತೇ' (ಪೂ. ಗೋ. 3-19).

ಹೀಗೆ ಈ ಬ್ರಾಹ್ಮಣವು ಅನೇಕ ದೃಷ್ಟಿಗಳಿಂದ ಮಹತ್ವಪೂರ್ಣವಾದುದು.

# ಆರಣ್ಯಕಗಳು

ಆರಣ್ಯಕೋಪನಿಷತ್ತುಗಳು ಬ್ರಾಹ್ಮಣ ಗ್ರಂಥಗಳ ಪರಿಶಿಷ್ಟಗಳಾಗಿವೆ. ಇವುಗಳಲ್ಲಿ ಪ್ರತಿಪಾದಿತವಾಗಿರುವ ವಿಷಯ ಬ್ರಾಹ್ಮಣ ಗ್ರಂಥಗಳ ವಿಷಯಕ್ಕಿಂತ ಬೇರೆಯಾಗಿದೆ. ಇವುಗಳನ್ನು ಅರಣ್ಯದಲ್ಲಿ ಬೋಧಿಸುತ್ತಿದ್ದುದರಿಂದ, ಅಧ್ಯಯನ ಮಾಡುತ್ತಿದ್ದುದರಿಂದ ಇವುಗಳಿಗೆ ಆರಣ್ಯಕವೆಂಬ ಹೆಸರು ಬಂದಿತೆಂದು ಸಾಯಣರು ಹೇಳುತ್ತಾರೆ.

ಅರಣ್ಯಾಧ್ಯಯನಾದೇತತ್ ಆರಣ್ಯಕಮಿತೀರ್ಯತೇ |
ಅರಣ್ಯೇ ತದಧೀಯೀತೇತ್ಯೇವಂ ವಾಕ್ಯಂ ಪ್ರವಕ್ಷ್ಯತೇ || (ತೈ. ಆ. ಭಾ. ಶ್ಲೋ. 6)

ಅರಣ್ಯದ ಶಾಂತ ವಾತಾವರಣದಲ್ಲಿ ಈ ಗ್ರಂಥದ ಮನನ ನಡೆಯುತ್ತಿತ್ತು. ಆರಣ್ಯಕವೆಂಬ ಶಬ್ದಕ್ಕೆ ಬೇರೆ ಅರ್ಥವನ್ನು ಕೊಟ್ಟು ಪಾಣಿನಿ ವಿವರಿಸುತ್ತಾರೆ. ಕಾಡಿನಲ್ಲಿ ವಾಸಿಸುವವನು ಎಂಬ ಅರ್ಥವನ್ನು ಅವರು ಹೇಳುವರು. ಬ್ರಾಹ್ಮಣವನ್ನು ಗ್ರಂಥವೆಂಬ ಅರ್ಥದಲ್ಲಿ ಬಳಸಿರುವಂತೆ ಆರಣ್ಯವನ್ನು ಗ್ರಂಥಪರವಾಗಿ ಅವರು ಬಳಸಿಲ್ಲ. ಆರಣ್ಯಕ ಶಬ್ದ ಆರಣ್ಯಕ ಗಳಲ್ಲಿಯೂ ಪ್ರಯುಕ್ತವಾಗಿಲ್ಲ. ವರರುಚಿ ತಮ್ಮ ವಾರ್ತಿಕದಲ್ಲಿ ಆರಣ್ಯಕ ಶಬ್ದಕ್ಕೆ ಗ್ರಂಥ, ವನ್ಯಮಾರ್ಗ, ಗಜ ಎಂಬ ಅರ್ಥಗಳುಂಟೆಂದು ಹೇಳುತ್ತಾರೆ. ಈ ಪದ ಪಾಣಿನಿಗಳ ಕಾಲದ ನಂತರ ವರರುಚಿಗಳ ಕಾಲಕ್ಕೆ ಮೊದಲು ಪ್ರಚಾರಕ್ಕೆ ಬಂತೆಂದು ತೋರುತ್ತದೆ.

ಶ್ರಾವಣಿಯಂದು ಆರಣ್ಯಕಗಳ ಆದಿಭಾಗಗಳನ್ನು ಇತರ ವೇದಭಾಗಗಳ ಮೊದಲ ಭಾಗಗಳಂತೆ ಹೇಳುವ ಸಂಪ್ರದಾಯವಿದೆ. ಇದರಿಂದ ಆರಣ್ಯಕಗಳು ಆ ವೇದ ಭಾಗಗಳಿಗಿಂತ ಬೇರೆ ಬೇರೆ ಭಾಗಗಳೆಂಬ ಭಾವನೆ ಹಿಂದಿನಿಂದ ಇತ್ತೆಂದು ಊಹಿಸಬಹುದು. ಆರಣ್ಯಕವನ್ನು 'ಅರಣ' ಎಂದೂ ಕರೆಯುವುದುಂಟು. ತೈ. ಆರಣ್ಯಕದಲ್ಲಿ 'ಬ್ರಹ್ಮಣಃ ಉದರಣಮಸಿ' (1-12) ಎಂದು ಹೇಳಿದೆ. 'ಋ' ಎಂಬ ಗತ್ಯರ್ಥಕವಾದ ಧಾತುವಿನಿಂದ ಈ ಶಬ್ದ ಬಂದಿದೆ. ಗತ್ಯರ್ಥಕವಾದುದು ಜ್ಞಾನಾರ್ಥಕವೂ ಆದಕಾರಣ ಅರಣ ಶಬ್ದಕ್ಕೆ ಜ್ಞಾನಪ್ರತಿ ಪಾದಕತ್ವವೆಂಬ ಅರ್ಥ ಬರುತ್ತದೆ. ಹೀಗೆ ಆಧ್ಯಾತ್ಮಿಕ ತತ್ತ್ವಗಳನ್ನು ಪ್ರತಿಪಾದಿಸುವ ಗ್ರಂಥಭಾಗಗಳಾಗಿವೆ ಇವು. ಅರಣ್ಯದಲ್ಲಿ ಅಧ್ಯಯನ ಮಾಡಬೇಕಾದವು ಎಂಬ ಅಂಶ ಗ್ರಂಥ ಪರಿಶೀಲನೆಯಿಂದ ಗೋಚರಿಸುವುದಿಲ್ಲ. ಸ್ವಾಧ್ಯಾಯ ಗ್ರಾಮದಲ್ಲಿಯೇ ನಡೆಯಬೇಕೆಂದು 'ಶೌಚ ಆನ್ವೇಯ'ರು ವಿಧಿಸಿದ್ದಾರೆ–'ಗ್ರಾಮೇ ಮನಸಾ ಸ್ವಾಧ್ಯಾಯ ಮಧೀಯೀತ ದಿವಾನಕ್ತಂ ವಾ ಇತಿ ಹಸ್ಮಾಹ ಶೌಚ ಆನ್ವೇಯಃ' (ತೈ. ಆ. 2-12). ಆರಣ್ಯಕದ ಮೂರನೆಯ ಅಧ್ಯಾಯದ 'ಚಿತ್ತಿ'ಯಲ್ಲಿ ಬರುವುದು ಪುರುಷಸೂಕ್ತ. ಇದನ್ನು ಕಾಡಿನಲ್ಲಿ ಅಧ್ಯಯನ ಮಾಡಬೇಕೆಂಬ ಸೂಚನೆ ಎಲ್ಲಿಯೂ ಇಲ್ಲ. ಆದರೆ ಇವುಗಳನ್ನು ಅರಣ್ಯದಲ್ಲಿ ಕಲಿಯಬೇಕು ಹಾಗೂ ಹೇಳಬೇಕು ಎಂಬ ಭಾವನೆ ಈಗ ಜನರಲ್ಲಿ ಬೇರೂರಿದೆ.

ಆರಣ್ಯಕದ ಮುಖ್ಯ ವಿಷಯ ಯಜ್ಞವಲ್ಲ ; ಆದರೆ ಯಜ್ಞಾಂತರ್ಗತವಾದ ಆಧ್ಯಾತ್ಮಿಕ ತತ್ತ್ವವಿಚಾರ. ಯಜ್ಞೀಯವಾದ ಅನುಷ್ಠಾನಗಳಿಗೆ ಪ್ರತಿಯಾಗಿ ಅವುಗಳಲ್ಲಡಗಿರುವ ದಾರ್ಶನಿಕ ವಿಚಾರವನ್ನು ಇವು ವಿವೇಚಿಸುತ್ತವೆ. ಆರಣ್ಯಕಗಳಲ್ಲೆಲ್ಲಾ ತೈತ್ತಿರೀಯ ಆರಣ್ಯಕ ಬಹಳ ಪ್ರಾಚೀನವಾದುದು. ಉಳಿದವು ಇದರ ಮಾದರಿಯಲ್ಲಿ ವಿಕಾಸಗೊಂಡಿವೆ. ಈ ಆರಣ್ಯಕಗಳಲ್ಲಿ

ಬರುವ ವಿಚಾರಗಳನ್ನು ಕೆಳಗೆ ವಿವೇಚಿಸಲಾಗಿದೆ. ಆರಣ್ಯಕೋಪನಿಷತ್ತುಗಳು ಕೂಡಿಕೊಂಡಿದ್ದರೂ ವಿಷಯ ಭೇದಕ್ಕನುಸಾರವಾಗಿ ಇವುಗಳನ್ನು ಪ್ರತ್ಯೇಕವಾಗಿ ವಿವರಿಸಲಾಗಿದೆ.

### ತೈತ್ತಿರೀಯ ಆರಣ್ಯಕ

ಇದರಲ್ಲಿ ಹತ್ತು ಪ್ರಪಾಠಕಗಳಿವೆ. ಇವುಗಳನ್ನು ಅರಣಾಗಳೆಂದು ಕರೆಯುತ್ತಾರೆ. ಇವುಗಳು ಆರಂಭವಾಗುವ ಪದಗಳಿಗನುಸಾರ ಇವುಗಳಿಗೆ ಹೆಸರುಗಳನ್ನು ಕೊಟ್ಟಿದ್ದಾರೆ. ಇವು ಕ್ರಮವಾಗಿ ಭದ್ರ, ಸಹವ್ಯೆ, ಚಿತ್ತಿ, ಯುಂಜತೇ, ದೇವ ವೈ, ಪರೇಶೀಕ್ಷಾ, ಬ್ರಹ್ಮವಿದಾ, ಭೃಗು ಮತ್ತು ನಾರಾಯಣೀಯ ಎಂದಿವೆ. ಇವುಗಳಲ್ಲಿ ಶೀಕ್ಷಾ, ಬ್ರಹ್ಮವಿದಾ, ಭೃಗು ಇವು ಮೂರು ಪ್ರಪಾಠಕಗಳು ತೈತ್ತಿರೀಯ ಉಪನಿಷತ್ತೆಂದು ಪ್ರಸಿದ್ಧವಾಗಿವೆ. ನಾರಾಯಣೀಯವೆಂಬುದು ಮಹಾನಾರಾಯಣೋಪನಿಷತ್ತೆಂದು ಪ್ರಸಿದ್ಧವಾಗಿ ಆರಣ್ಯಕಗಳ ಪರಿಶಿಷ್ಟವೆಂದು ಎಣಿಸಲಾಗಿದೆ. ಈ ಪ್ರಪಾಠಕಗಳನ್ನು ಅನುವಾಕಗಳನ್ನಾಗಿ ವಿಭಾಗಮಾಡಿದೆ. ಒಂಭತ್ತು ಪ್ರಪಾಠಕಗಳಿಂದ ಒಟ್ಟು 170 ಅನುವಾಕಗಳಿವೆ. ತೈತ್ತಿರೀಯ ಬ್ರಾಹ್ಮಣದಂತೆಯೇ ಅನುವಾಕಗಳಲ್ಲಿನ ವಾಕ್ಯಗಳನ್ನು ದಶಕಗಳನ್ನಾಗಿ ಜೋಡಿಸಿ ಒಂದೊಂದು ದಶಕದ ಅಂತಿಮಪದಗಳನ್ನೂ ಅನುವಾಕಾಂತ್ಯದಲ್ಲಿ ಎಣಿಕೆಮಾಡಿ ಕೊಡಲಾಗಿದೆ. ಸ್ವರಸಹಿತವಾದ ಅನೇಕ ಮಂತ್ರಗಳೂ ಗದ್ಯವಾಕ್ಯಗಳೂ ಇಲ್ಲಿವೆ. ಅನೇಕ ಮಂತ್ರಗಳು ಋಗ್ವೇದದಿಂದ ಉದ್ಧೃತವಾಗಿವೆ.

ಮೊದಲನೆಯ ಪ್ರಪಾಠಕ ಆರುಣಕೇತುಕಾಗ್ನಿಯ ಉಪಾಸನೆಯನ್ನೂ ಅದಕ್ಕೆ ಸಂಬಂಧಿಸಿದಂತೆ ಮಾಡಬೇಕಾದ ಇಷ್ಟಕಾಚಯನವನ್ನೂ ವರ್ಣಿಸುತ್ತದೆ. ಎರಡನೆಯ ಪ್ರಪಾಠಕದಲ್ಲಿ ಸ್ವಾಧ್ಯಾಯ ಹಾಗೂ ಪಂಚಮಹಾಯಜ್ಞಗಳ ವರ್ಣನೆ ಇದೆ. ಗಂಗಾ ಯಮುನೆಯರ ಮಧ್ಯದೇಶ ಅತ್ಯಂತ ಪವಿತ್ರವಾದುದೆಂದೂ ಮುನಿಗಳ ನಿವಾಸ ಸ್ಥಾನವೆಂದೂ ಇಲ್ಲಿ ಹೇಳಿದೆ. ಕೃಷ್ಣಯಜುರ್ವೇದದಲ್ಲಿ ಎಲ್ಲಿಯೂ ಗೋಚರಿಸದ ಳಕಾರ ಪ್ರಯೋಗ ಇಲ್ಲಿದೆ– 'ಯದ್ದೇವಾ ದೇವಹೇಳನಮ್' ಎಂಬಲ್ಲಿ (11-7). ಚಾತುರ್ಹೋತ್ರ ಚಿತ್ತಿಗೆ ಉಪಯುಕ್ತವಾದ ಮಂತ್ರಗಳ ವರ್ಣನೆ ಮೂರನೆಯ ಪ್ರಪಾಠಕದಲ್ಲಿದೆ. ವಿಶ್ವಕ್ಕೆಲ್ಲಾ ಸೂರ್ಯನು ಆಧಾರವಾಗಿರುವನೆಂಬುದನ್ನು ಹೇಳಿದೆ 'ಸಪ್ತ ಯುಂಜಂತಿ ರಥಮೇಕಚಕ್ರಂ ಏಕೋ ಅಶ್ವೋ ವಹತಿ ಸಪ್ತನಾಮಾ | ತ್ರಿನಾಭಿ ಚಕ್ರಂ ಅಜರಮನರ್ವಂ ಯೇನೇಮಾ ವಿಶ್ವಾ ಭುವನಾನಿ ತಸ್ಥುಃ ||' ಎಂದು. ಪ್ರವರ್ಗ್ಯಕ್ಕೆ ಉಪಯುಕ್ತವಾದ ಮಂತ್ರಗಳು ನಾಲ್ಕನೆಯ ಪ್ರಪಾಠಕದಲ್ಲಿವೆ. 'ಕುರುಕ್ಷೇತ್ರಂ ವೇದಿರಾಸೀತ್, ತಸ್ಯೈಖಾಂಡವೋ ದಕ್ಷಿಣಾರ್ಧ ಆಸೀತ್ ತೂರ್ಘ ಉತ್ತರಾರ್ಧಃ ||' ಎಂದು ಕುರುಕ್ಷೇತ್ರ, ಖಾಂಡವ ಮುಂತಾದುವುಗಳನ್ನು ಇದು ವರ್ಣಿಸುತ್ತದೆ. ಅಭಿಚಾರ ಪ್ರಯುಕ್ತವಾದ ಅನೇಕ ಮಂತ್ರಗಳೂ ಇಲ್ಲಿವೆ. 'ಖಟ್ ಫಟ್ ಜಹಿ | ಛಿಂಧಿ ಭಿಂಧಿ' 'ಇತಿಕ್ರರಾವಾಚಃ' 'ಖಣ್‌ಫಣ್ ಮ್ರಸಿ' ಮುಂತಾದವುಗಳಿರುವ ಮಂತ್ರಗಳಿವೆ. ಭೃಗು ಮತ್ತು ಅಂಗಿರಸ್ ಇವರ ರೌದ್ರ ಪ್ರಯೋಗಗಳ ಉಲ್ಲೇಖವೂ 'ಘೋರೇಣ ತ್ವಾ ಭೃಗೂಣಾಂ ಚಕ್ಷುಷಾ ಪ್ರೇಕ್ಷೇ | ರೌದ್ರೇಣ ತ್ವಾ ಅಂಗಿರಸಾಂ ಮನಸಾ ಧ್ಯಾಯಾಮಿ ||' ಎಂಬಲ್ಲಿದೆ. ಅನೇಕ ದುಶ್ಶಕುನಗಳ ಪರಿಹಾರಾರ್ಥವಾದ ಮಂತ್ರಗಳ ಸಂಗ್ರಹವೂ ಇಲ್ಲಿದೆ. ಐದನೆಯ ಪ್ರಪಾಠಕದಲ್ಲಿ ಅನೇಕಾನೇಕ ಯಜ್ಞೀಯ ಸಂಕೇತಗಳಿವೆ. ಆರನೆಯ ಪ್ರಪಾಠಕದಲ್ಲಿ ಪಿತೃಮೇಧಸಂಬಂಧಿಯಾದ ಮಂತ್ರಗಳಿವೆ ಇವುಗಳಲ್ಲಿ ಅನೇಕ ಮಂತ್ರಗಳು ಋಗ್ವೇದದಿಂದ ತೆಗೆದುಕೊಂಡವೇ ಆಗಿವೆ.

ಈ ಆರಣ್ಯಕದಲ್ಲಿ ಬರುವ ಅನೇಕಾನೇಕ ವಿಶಿಷ್ಟ ವಿಚಾರಗಳನ್ನು ಸಂಗ್ರಹವಾಗಿ ಈಗ ಸೂಚಿಸಬಹುದು.

ಮೊದಲ ಅರಣದಲ್ಲಿ 'ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮ್ | ಅನುಮಾನಃ ಚತುಷ್ಟಯಂ ಏತೈರಾದಿತ್ಯ ಮಂಡಲಮ್ ಸರ್ವೈರೇವ ವಿಧಾಸ್ಯತೇ||' ಎಂಬುದಿದೆ. ಇಲ್ಲಿ ಬರುವ ಅನುಮಾನ, ಪ್ರತ್ಯಕ್ಷ ಮುಂತಾದ ಶಬ್ದಗಳಿಂದ ಇದು ಬಹಳ ಪ್ರಾಚೀನವಾದುದಲ್ಲವೆಂಬ ಊಹೆಗೆ ವಿದ್ವಾಂಸರು ಬಂದಿದ್ದಾರೆ. ಕಾಲವನ್ನು ಕುರಿತ ಬಹಳ ಉದಾತ್ತವಾದ ಆಧ್ಯಾತ್ಮಿಕವರ್ಣನೆ ಇಲ್ಲಿದೆ. ಸೂರ್ಯನಿಗೆ ಆರೋಗ, ಭ್ರಾಜ, ಪಟರ, ಪತಂಗ, ಸ್ವರ್ಣರ, ಜ್ಯೋತಿಷೀಮತ್, ವಿಭಾಸ ಮತ್ತು ಕಾಶ್ಯಪ ಎಂಬ ಎಂಟು ಹೆಸರುಗಳನ್ನು ಹೇಳಿದೆ. ಕಾಶ್ಯಪರೂಪೀ ಸೂರ್ಯನು ಮಹಾಮೇರುವಿನಲ್ಲಿದ್ದಾನೆ. ಸಪ್ತಸೂರ್ಯರುಗಳು ಶಿರಸ್ಸಿನಲ್ಲಿರುವ ಸಪ್ತಪ್ರಾಣಗಳೆಂದು ಆಚಾರ್ಯರು ಭಾವಿಸುತ್ತಾರೆ. 'ಪಂಚಕರ್ಣ ವಾತ್ಸ್ಯಾಯನ' ಮತ್ತು 'ಸಪ್ತಕರ್ಣಪ್ಲಾಕ್ಷಿ'ಗಳು ಸಪ್ತಸೂರ್ಯರುಗಳನ್ನು ನೋಡಿದ್ದಾರೆ. ಆದರೆ ಮಹಾಮೇರುವಿಗೆ ಹೋಗಲಾಗದ ಕಾರಣ ಎಂಟನೆಯ ಕಾಶ್ಯಪನನ್ನು ನೋಡಿಲ್ಲ. ಆಧ್ಯಾತ್ಮಿಕ ಪ್ರಶ್ನೆಗಳೂ ಇಲ್ಲಿ ಬರುತ್ತವೆ. ಲೋಕಕ್ಕೆಲ್ಲಾ ಯಾರು ಆಧಾರವಾಗಿದ್ದಾರೆಂಬುವುದಕ್ಕೆ ವತ್ಸಋಷಿಯ ತಿಳಿವಳಿಕೆಯಂತೆ ವಿಷ್ಣು ಆಧಾರವಾಗಿದ್ದಾನೆ–'ವಿಷ್ಣುನಾ ವಿಧೃತೇ ಭೂಮೀ ಇತಿ ವತ್ಸಸ್ಯ ವೇದನಾ'. ಯಾವ ಬಲದಿಂದ ಮತ್ತು ಹೇಗೆ ಅವನು ಧರಿಸಿದ್ದಾನೆ ಎನ್ನುವುದಕ್ಕೆ 'ವಾತಾದ್ವಿಷ್ಣೋರ್ಬಲಮಾಹುಃ' ಎಂಬ ಉತ್ತರವಿದೆ. ವಿದ್ಯುತ್ತಿನ ಹನ್ನೊಂದು ರೂಪಗಳನ್ನು ಇಲ್ಲಿ ಹೇಳಿದೆ. ಇವುಗಳನ್ನು ತಿಳಿದವನಿಗೆ ಇದರಿಂದ ಸಾವಿನ ಭಯವಿಲ್ಲ. ಆದರೆ ಪಾರಾಶರ್ಯ ವ್ಯಾಸರು ವಿದ್ಯುತ್ತಿನಿಂದಲೇ ಮೃತ್ಯುವನ್ನಿಚ್ಛಿಸಿದರು–'ವಿದ್ಯುದ್ವಧಮೇವಾಹಂ ಮೃತ್ಯುಮೈಚ್ಛಮ್ |' (1-9). ಆರಣ್ಯಕಾಚಾರ್ಯರು ಬ್ರಹ್ಮತತ್ವವಿಚಾರದಲ್ಲಿ ಮುಳುಗಿದ್ದಾರೆ. ಇಲ್ಲಿ ಬರುವ 'ಅಸತಃ ಸದ್ಯೇ ತತಕ್ಷುಃ | ಋಷಯಃ ಸಪ್ತಾತ್ರಿಶ್ಚಯತ್ |', 'ನಾಮ ನಾಮೈವ ನಾಮಮೇ', 'ಅಂಧೋ ಮಣಿರವಿಂದತ್ ತಮನಂಗುಲಿರಾವಯತ್' 'ಊರ್ಧ್ವಮೂಲಮವಾಕ್ ಶಾಖಂ' ಮುಂತಾದುವು ಉಪನಿಷತ್ತು, ಗೀತೆ, ಇವುಗಳ ವಾಕ್ಯಗಳಿಗೆ ಸಂವಾದಿಯಾಗಿವೆ. ಪುರಾಣದ ಕಥೆಗೆ ಸಂಬಂಧಿಸಿದಂತೆ ಬರುವ 'ಕೌಶಿಕ ಬ್ರಾಹ್ಮಣ ಗೌತಮ ಬ್ರುವಾಣ ಇಂದ್ರ' (1-12) ಎಂಬುದೂ 'ಅಂತರತಃ ಕೂರ್ಮಭೂತಂ ಸರ್ಪಂತಮ್', 'ಯೋ ಅಪಾಂ ಪುಷ್ಪಂ ವೇದ ಪುಷ್ಪವಾನ್ ಭವತಿ' (1-22), 'ಆಪೋ ವಾ ಇದಮಾಸನ್ ಸಲಿಲಮೇವ ಸ ಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್ (1-23), ಮುಂತಾದುವೂ ಸ್ವಾರಸ್ಯವಾಗಿವೆ. 'ವರ್ಷತಿ ನ ಧಾವೇತ್ | ನಾಪ್ಸುಮೂತ್ರಪುರೀಷಂ ಕುರ್ಯಾತ್ | ನ ನಿಷ್ಠೀವೇತ್ | ನ ವಿವಸನಃ ಸ್ನಾಯಾತ್ | ನ ಪುಷ್ಕರಪರ್ಣಾನಿ ಹಿರಣ್ಯಂ ಚಾಧಿತಿಷ್ಠೇತ್ | ನ ಕೂರ್ಮಸ್ಯಾಶ್ನೀಯಾತ್ | ನೋದಕಸ್ಯ' (1-26) ಮುಂತಾದುವು ಮುಂದಿನ ಗೃಹ್ಯಸೂತ್ರ ಮತ್ತು ಸ್ಮೃತಿಗಳ ಅನುಶಾಸನಗಳನ್ನು ನೆನಪಿಗೆ ತರುತ್ತವೆ. ಮೊದಲನೆಯ ಪ್ರಪಾಠಕದ ಕೊನೆಯಲ್ಲಿ ತ್ರಿಕಾಲಸ್ನಾನ, ಎರಡು ದಿನಗಳ ಉಪವಾಸ ಮೊದಲಾದುವುಗಳನ್ನು ಹೇಳಿದೆ. ಮುಂದಿನ ಪ್ರಾಯಶ್ಚಿತ್ತಗಳಿಗೆ ಇವು ಪೂರ್ವಸೂಚನೆಯಾಗಿವೆ.

ಎರಡನೆ ಅರಣದಲ್ಲಿ ಬರುವ ಮೊದಲ ವಾಕ್ಯವಾದ 'ಸಹವೈ ದೇವಾನಾಂ ಚಾಸುರಾಣಾಂ ಯಜ್ಞೌ ಪ್ರತ ತಾವಾಸ್ತಾಮ್' ಎಂಬುದರಿಂದ ಅಸುರರೂ ಯಾಗ ಮಾಡಿದರೆಂದು ಹೇಳಿದೆ. ಬ್ರಾಹ್ಮಣರು, ದೇವತೆಗಳು, ಅಸುರರು ಇವರನ್ನೆಲ್ಲಾ ಒಂದುಗೂಡಿಸಿದೆ. ಅಸುರರು ರಾಕ್ಷಸರಿಗಿಂತ ಭಿನ್ನರು. ರಾಕ್ಷಸರು ಯಜ್ಞಕ್ಕೆ ವಿಘ್ನ ಮಾಡುತ್ತಿದ್ದರು; ಯಾಗ ಮಾಡುತ್ತಿರಲಿಲ್ಲ. ರಾಕ್ಷಸರು ಸೂರ್ಯಪೂಜೆಯನ್ನೂ ವಿರೋಧಿಸುತ್ತಿದ್ದರು–'ರಕ್ಷಾಂಸಿ ಪುರೋಽನುವಾಕೇ ತಪೋಗ್ರಮತಿಷ್ಠಂತ–ಆದಿತ್ಯ ನೋ ಯೋದ್ಧಾ–ಇತಿ ತಸ್ಮಾದುತ್ತಿಷ್ಠಂತಂ ಆದಿತ್ಯಂ ರಕ್ಷಾಂಸಿ

ಯೋಧಯಂತಿ ಯಾವದಸ್ತಮ ನ್ಯಗಾತ್‌ತಾನಿಹ ವಾ ಗಾಯತ್ರ್ಯಾಭಿಮಂತ್ರಿತೇನಾಂಭಸಾ ಶಾಮ್ಯಂತಿ ।' ಎಂದು (2-2-2) ಹೇಳಿದೆ. ಈ ರಾಕ್ಷಸರು 'ಮಂದೇಹಾರುಣ ದ್ವೀಪಕ್ಕೆ' ದೂಡಲ್ಪಡುತ್ತಾರೆ, ಮೇಲಕ್ಕೆಸೆದ ಅಭಿಮಂತ್ರಿತ ಜಲದಿಂದ.

ಸೂರ್ಯನು ಬ್ರಹ್ಮ. ಆದ್ದರಿಂದ ಬೆಳಗ್ಗೆ ಮತ್ತು ಸಾಯಂಕಾಲ ಆದಿತ್ಯನನ್ನು ಉಪಾಸನೆ ಮಾಡಬೇಕೆಂದು ವಿಧಿಸಿದೆ—'ಉದ್ಯಂತಂ ಅಸ್ತಂಯಂತಂ ಆದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇSಸಾವಾದಿತ್ಯೋ ಬ್ರಹ್ಮೇತಿ' (2-2). ಕೂಷ್ಮಾಂಡ ಹೋಮದಲ್ಲಿ ವಿಧಿಸಲ್ಪಟ್ಟಿರುವ ಮಂತ್ರಗಳು ಋಗ್ವೇದದಿಂದ ತೆಗೆದುಕೊಂಡವಾಗಿವೆ ಎಂದು ಕಾಣುತ್ತದೆ. ಜೂಜಿನಲ್ಲಿ ಸೋತು ಕೊಡಬೇಕಾದ ಸಾಲವನ್ನು ಅವಶ್ಯವಾಗಿ ಕೊಟ್ಟೇತೀರಬೇಕೆಂದೂ ಹಾಗೆ ಕೊಡದಿದ್ದರೆ ನರಕಪ್ರಾಪ್ತಿಯೆಂದೂ ಹೇಳಿದೆ. ಉಗ್ರಂಪಶ್ಯಾ ಮತ್ತು ರಾಷ್ಟ್ರಭೃತ್ ಎಂಬ ಅಪ್ಸರೆಯರು ಆ ಸಾಲವನ್ನು ತೀರಿಸಬೇಕೆಂದು ಅವರನ್ನು ಬೇಡಿದೆ ಇಲ್ಲಿ (2-4). ಸ್ವಾಧ್ಯಾಯಕ್ಕೆ ನಾಲ್ಕು ವೇದಗಳೂ ವಿಷಯವಾಗಿವೆ. ಅಥರ್ವವೇದ ಇದರೊಳಗೆ ಪೂರ್ಣವಾಗಿ ಸಂಕಲಿತವಾಗಿದ್ದಿತೆಂದು ಗೊತ್ತಾಗುವುದು. ಸ್ವಾಧ್ಯಾಯವಿಧಿ ಇಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ.

ಮೂರನೆಯ ಅರಣವಾದ 'ಚಿತ್ತಿ'ಯಲ್ಲಿ ತೈತ್ತಿರೀಯ ಬ್ರಾಹ್ಮಣದ 3-12 ರಲ್ಲಿ ಉಪವರ್ಣಿತವಾಗಿರುವ ಚಾತುರ್ಹೋತ್ರ ಯಾಗಕ್ಕೆ ಬೇಕಾದ ಮಂತ್ರಗಳ ವರ್ಣನೆ ಇದೆ. ಈ ಯಾಗ ಸಾಂಕೇತಿಕವಾದುದು. ಚಿತ್ತಿ (ಮನಸ್ಸು) ಇಲ್ಲಿ ಸ್ರುಕ್ ಆಗಿದೆ. ಇಲ್ಲಿನ ಮಂತ್ರಗಳು ಪ್ರಾಯಃ ಹೊಸವು. 'ದಕ್ಷಿಣೆಯೇ, ಉತ್ತಾನ ಆಂಗಿರಸನು ನಿನ್ನನ್ನು ತೆಗೆದುಕೊಳ್ಳಲಿ' ಎಂದು ಹೇಳುವ—'ಉತ್ತಾನಸ್ತ್ವಾಂಗಿರಸಃ ಪ್ರತಿಗೃಹ್ಣಾತು' ಎಂಬುದರಿಂದ ದಕ್ಷಿಣೆಯನ್ನು ಅನಾಕವಾಡುತ್ತಿದ್ದರೆಂದು ಕಾಣುತ್ತದೆ. ಆದರೂ ಈ ಯಾಗದಲ್ಲಿ ಬೇರೆ ಬೇರೆ ದೇವತೆಗಳಿಗಾಗಿ ವಿಚಿತ್ರವಾದ ದಕ್ಷಿಣೆಗಳನ್ನು ವಿಧಿಸಿರುವುದನ್ನು ನೋಡುತ್ತೇವೆ. ಪ್ರಜಾಪತಿದೇವನಿಗೆ ಗುಲಾಮನನ್ನೂ ಹಿಮಾಲಯಕ್ಕಾಗಿ ಆನೆಯನ್ನೂ ಕೊಡಬೇಕೆಂದು ಹೇಳಿದೆ. ಈ ಅರಣದಲ್ಲಿ ಪುರುಷಸೂಕ್ತವು ಬರುತ್ತದೆ.

ನಾಲ್ಕನೆಯ ಅರಣದ ಮೇಲೆ ವ್ಯಾಖ್ಯಾನ ಮಾಡುತ್ತಾ ಸಾಯಣರು ಪ್ರವರ್ಗ್ಯ ಮಂತ್ರಗಳನ್ನು ಇಲ್ಲಿ ಕೊಡಲಾಗಿದೆ ಎಂದು ಹೇಳುತ್ತಾರೆ. ಸಾಮಾನ್ಯವಾಗಿ ಇವೆಲ್ಲಾ ಹೊಸ ಹೊಸ ಮಂತ್ರಗಳು. ಅನುಪ್ರಾಸಾದಿಗಳು ಇಲ್ಲಿ ಹೇರಳವಾಗಿವೆ. 'ಪ್ರಮಾಲಸಿ ಪ್ರತಿಮಾಲಸಿ ಸಮಾಲಸಿ ವಿಮಾಲಸಿ ಉನ್ಮಾಲಸಿ ' ಎಂಬುದು ಇದಕ್ಕೆ ಒಂದು ಉದಾಹರಣೆ. ಅದಿತಿ ಮತ್ತು ಸರಸ್ವತೀ ಎಂಬುವು ಇಲ್ಲಿ ಹಸುವಿನ ಹೆಸರುಗಳಾಗಿವೆ. (4-10)ರಲ್ಲಿ 'ಅಮುಷ್ಯತ್ವಾ ಪ್ರಾಣೇ ಸಾದಯಾಮಿ' ಮುಂತಾದ ಅಭಿಚಾರ ಮಂತ್ರಗಳಿವೆ. 'ಸಂವತ್ಸರಂ ಮಾಂಸಂ ನಾಶ್ನೀಯಾತ್ | ನ ರಾಮಾಮುಪೇಯಾತ್ | ನ ಮೃಣ್ಮಯೇನ ಪಿಬೇತ್' ಮುಂತಾದ ವ್ರತಗಳೂ ನಿಯಮಗಳೂ ಸ್ವಾರಸ್ಯವಾಗಿವೆ. ಪಾಂಚವಾರ್ಷಿಕ ಚಕ್ರದ ವರ್ಷಗಳ ಹೆಸರುಗಳು, ಸಂವತ್ಸರ, ಇದಾವತ್ಸರ, ಪಾರೀವತ್ಸರ, ಇದ್ವತ್ಸರ ಮತ್ತು ವತ್ಸರ ಎಂದು ಹೇಳಿದೆ. ಆಧ್ಯಾತ್ಮಿಕಮಹತ್ವವುಳ್ಳ ಅರಣದಲ್ಲಿ ಅಭಿಚಾರ ಪ್ರಯುಕ್ತವಾದ ವಿಷಯಗಳಿರುವುದು ಸೋಜಿಗವಾಗಿದೆ. 4-26, 35, 36, 37 ರಲ್ಲಿ ಇವುಗಳನ್ನು ನೋಡಬಹುದು. ಹೀಗೆ ಈ ಆರಣ್ಯಕದ ವಿಷಯಗಳನ್ನು ವಿವೇಚಿಸಿದಲ್ಲಿ ಇವುಗಳೆಲ್ಲಾ ಅರಣ್ಯದಲ್ಲಿ ನೆಲೆಸಿದವರಿಗಾಗಿಯೇ ಅಲ್ಲವೆಂಬುದು ಸ್ಪಷ್ಟವಾಗುತ್ತದೆ.

**ಐತರೇಯ ಆರಣ್ಯಕ**

ಋಗ್ವೇದಕ್ಕೆ ಸೇರಿದ ಆರಣ್ಯಕಗಳು ಎರಡು. ಐತರೇಯ ಮತ್ತು ಶಾಂಖಾಯನ ಆರಣ್ಯಕಗಳು. ತೈತ್ತಿರೀಯ ಆರಣ್ಯಕದ ಒಂದೊಂದು ಆರಣ್ಯಕವನ್ನು ಬೇರೆ ಬೇರೆಯಾಗಿ ವಿವೇಚಿಸಿರುವಂತೆ ಈ ಆರಣ್ಯಕದ ಅವಾಂತರ್ಗವಾದ ಐದು ಅಧ್ಯಾಯಗಳನ್ನೂ ಬೇರೆ ಬೇರೆ ಆರಣ್ಯಕಗಳಾಗಿ ಎಣಿಸಲಾಗಿದೆ. ಋಕ್-ಶ್ರಾವಣೆಯಂದು ಈ ಒಂದೊಂದು ಅಧ್ಯಾಯದ ಮೊದಲ ಭಾಗಗಳನ್ನು ಬೇರೆ ಬೇರೆಯಾಗಿ ಹೇಳುವ ಸಂಪ್ರದಾಯವಿದೆ. ಆದರೆ ಐತರೇಯ ಬ್ರಾಹ್ಮಣಕ್ಕೆ ಸಂಬಂಧಿಸಿದಂತೆ 'ಅಗ್ನಿರ್ವೈದೇವಾನಾಂ ಅವಮೋ ವಿಷ್ಣುಃ ಪರಮಃ' ಎಂಬ ಪ್ರಥಮ ವಾಕ್ಯವನ್ನು ಮಾತ್ರ ಹೇಳುವ ಸಂಪ್ರದಾಯವಿದೆ. ಐತರೇಯ ಆರಣ್ಯಕದ ಐದು ಅಧ್ಯಾಯಗಳನ್ನೂ ಬೇರೆ ಬೇರೆ ಭಾಗಗಳನ್ನಾಗಿ ಎಣಿಸಿದ್ದರೆಂಬುದನ್ನು ಇದು ಸೂಚಿಸುತ್ತದೆ. ಈ ಐದು ಅಧ್ಯಾಯಗಳು ಕ್ರಮವಾಗಿ 'ಅಥ ಮಹಾವ್ರತಮ್', 'ಏಷ ಪಂಥಾಏತತ್ಕರ್ಮ', 'ಅಥಾತಃ ಸಂಹಿತಾಯಾ ಉಪನಿಷತ್', 'ವಿದಾ ಮಘವನ್‌ವಿದಾ' ಮತ್ತು 'ಅಥ ಮಹಾವ್ರತಸ್ಯ ಪಂಚವಿಂಶತಿಂ ಸಾಮಿಧೇನ್ಯಃ' ಎಂಬ ಮಾತುಗಳಿಂದ ಆರಂಭವಾಗುತ್ತವೆ. ಇವುಗಳೆಲ್ಲಾ ಗದ್ಯಮಯವಾಗಿವೆ. ನಾಲ್ಕನೆಯ ಅಧ್ಯಾಯ ಮಾತ್ರ ಸ್ವರಯುಕ್ತವಾಗಿದೆ. 'ತದುಕ್ತಂ ಋಷಿಣಾ' ಎಂದು ಸೂಚಿಸಿ ಋಗ್ವೇದ ಮಂತ್ರಗಳನ್ನು ಉದಾಹರಿಸಲಾಗಿದೆ. ಹೊಸ ಮಂತ್ರಗಳನ್ನೂ ಸಹ 'ತದೇತೇ ಶ್ಲೋಕಾಃ' ಎಂಬ ಮಾತುಗಳಿಂದ ಅಲ್ಲಲ್ಲಿ ಕೊಡಲಾಗಿದೆ.

ಈ ಐದು ಆರಣ್ಯಕಗಳಿಂದ ಒಟ್ಟು ಹದಿನೆಂಟು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದಲ್ಲಿಯೂ ಅನೇಕಾನೇಕ ಖಂಡಗಳಿವೆ. ಮೊದಲನೆಯ ಆರಣ್ಯಕ ಗವಾಮಯನದ ಅಂಗವಾದ ಮಹಾವ್ರತವನ್ನು ವರ್ಣಿಸುತ್ತದೆ. ಎರಡನೆಯ ಆರಣ್ಯಕದ ಮೊದಲ ಮೂರು ಅಧ್ಯಾಯಗಳು ಉಕ್ಥ ಅಥವಾ ನಿಷ್ಕೇವಲ್ಯಶಸ್ತ್ರವನ್ನೂ, ಮಾಧ್ಯಂದಿನ ಶಸ್ತ್ರವನ್ನೂ ವಿವೇಚಿಸಿ ಪ್ರಾಣ ಮತ್ತು ಪುರುಷರ ವಿಚಾರವನ್ನು ಪ್ರತಿಪಾದಿಸುತ್ತವೆ. ಇದೇ ಆರಣ್ಯಕದ ನಾಲ್ಕು, ಐದು ಮತ್ತು ಆರನೇ ಅಧ್ಯಾಯಗಳೇ ಐತರೇಯ ಉಪನಿಷತ್ ಎಂದು ಪ್ರಸಿದ್ಧವಾಗಿವೆ.

ಮೂರನೆಯ ಆರಣ್ಯಕ ಸಂಹಿತಾ, ಪದ ಮತ್ತು ಕ್ರಮ ಪಾಠಗಳ ವಿಚಾರವನ್ನೂ, ಸ್ವರಾರ್ಧಸ್ವರಗಳ ವಿಚಾರವನ್ನೂ ವಿವೇಚಿಸುತ್ತದೆ. ಈ ವಿವೇಚನೆ ಯಾಸ್ಕಾಚಾರ್ಯರಿಗೂ ಹಾಗೆಯೇ ಪ್ರಾತಿಶಾಖ್ಯಗಳಿಗೂ ಪ್ರಾಚೀನವಾದುದು. ಶಾಕಲ್ಯ ಮತ್ತು ಮಾಂಡೂಕೇಯರ ಉಲ್ಲೇಖ ಇಲ್ಲಿ ಉಪಲಬ್ಧವಾಗಿದೆ. ಯಾಸ್ಕರ ಕಾಲವೇ ಕ್ರಿ. ಪೂ. 800 ಎಂದು ಒಪ್ಪಬೇಕಾದ ಕಾರಣ ಇದು ಇನ್ನೂ ಹಿಂದಿನ ಕಾಲಕ್ಕೆ ಸೇರುತ್ತದೆ.

ನಾಲ್ಕನೆಯ ಆರಣ್ಯಕ ಗಾತ್ರದಲ್ಲಿ ಬಹಳ ಚಿಕ್ಕದು. ಮಹಾವ್ರತದ ಐದನೆಯ ದಿನ ಹೇಳಬೇಕಾದ ಮಹಾನಾಮ್ನೀ ಮಂತ್ರಗಳನ್ನು ಇಲ್ಲಿ ಕೊಡಲಾಗಿದೆ.

ಮಹಾವ್ರತದಲ್ಲಿ, ಮಧ್ಯಾಹ್ನದಲ್ಲಿ ಹೇಳಬೇಕಾದ ನಿಷ್ಕೇವಲ್ಯ ಶಸ್ತ್ರದ ಹೆಚ್ಚಿನ ವಿವರಗಳನ್ನು ಐದನೆಯ ಆರಣ್ಯಕದಲ್ಲಿ ಕಾಣುತ್ತೇವೆ.

ಈ ಐದು ಆರಣ್ಯಕಗಳಲ್ಲಿ ಮೊದಲನೆಯ ಮೂರು ಆರಣ್ಯಕಗಳು ಐತರೇಯ ಪ್ರಣೀತವೆಂದೂ, ನಾಲ್ಕನೆಯದು ಆಶ್ವಲಾಯನ ಪ್ರಣೀತವೆಂದೂ ಕೊನೆಯದು ಆಶ್ವಲಾಯನರ ಗುರುಗಳಾದ ಶೌನಕರಿಂದ ಹೇಳಲ್ಪಟ್ಟುದೆಂದೂ ಸಂಪ್ರದಾಯವಿದೆ. ಈ ಶೌನಕರು ಯಾಸ್ಕರಿಗಿಂತ ಈಚಿನವರೆಂದೂ ಪಾಣಿನಿಗಳಿಗಿಂತ ಹಿಂದಿನವರೆಂದೂ ಕೀತ್ ಮಹಾಶಯನ ಅಭಿಪ್ರಾಯ. ಈ ಶೌನಕರು ಬೃಹದ್ದೇವತೆಯ ಕರ್ತೃಗಳೆಂದು ಹೇಳುವುದಕ್ಕಾಗುವುದಿಲ್ಲ. ಶೌನಕ,

ಆಶ್ವಲಾಯನ ಮುಂತಾದ ಹೆಸರುಗಳು ಗೋತ್ರ ನಾಮಗಳಾದ ಕಾರಣ ಒಂದೇ ವ್ಯಕ್ತಿಯನ್ನು ಸೂಚಿಸುವುದಿಲ್ಲ. ಎರಡನೆಯ ಆರಣ್ಯಕದಲ್ಲಿ 'ಏತದ್ಧಸ್ಮ ತದ್ವಿದ್ವಾನಾಹ ಮಹೀದಾಸ ಐತರೇಯಃ' ಎಂಬ ಉಲ್ಲೇಖದಲ್ಲಿ 'ವಿದ್ವಾನ್' ಎಂದು ಹೇಳಿರುವುದರಿಂದ ಇದನ್ನು ಇತರರು ಹೇಳಿರಬೇಕು. ಹಾಗೂ ಈ ಆರಣ್ಯಕ ಮಹೀದಾಸ ಐತರೇಯನದಿರಲಾರದು ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಮೂರನೆಯ ಆರಣ್ಯಕದಲ್ಲಿ ಸಂಹಿತಾ, ಪದ ಮತ್ತು ಕ್ರಮ ಪಾಠಗಳನ್ನು 'ನಿರ್ಭುಜ, ಪ್ರತೃಣ, ಉಭಯ, ಮಂತರೇಣ' ಎಂದು ಹೇಳಿದೆ. ಶಾಕಲ್ಯ, ಮಾಂಡೂಕೇಯ ಮುಂತಾದ ವೈಯ್ಯಾಕರಣರ ಹೆಸರನ್ನು ಇಲ್ಲಿ ಉಲ್ಲೇಖಿಸಿದೆ. ಣಕಾರ, ಷಕಾರ ಮುಂತಾದ ವ್ಯಾಕರಣಾಂಶಗಳನ್ನೂ ಇದು ವಿವೇಚಿಸುತ್ತದೆ. ಆದ್ದರಿಂದ ಇದು ಮಹಿದಾಸ ಐತರೇಯರ ಕೃತಿ ಆಗಿರಲಾರದೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ವೈಯ್ಯಾಕರಣ ಶಾಕಲ್ಯರು ಬಹಳ ಪ್ರಾಚೀನರು. ಋಗ್ವೇದದ ಪದಪಾಠಕಾರರೂ ಇವರೇ ಆಗಿರಬಹುದು. ಈ ಆರಣ್ಯಕದ ಕರ್ತೃಗಳೂ ಇವರೇ ಆಗಿದ್ದರೂ ಆಗಿರಬಹುದು. ಈ ಆರಣ್ಯಕದಲ್ಲಿಯೇ ವೇದಪುರುಷನ ವರ್ಣನೆ ಇದೆ. ಋಗ್ವೇದ, ಯರ್ಜುವೇದ ಸಾಮವೇದಗಳು ಆ ವೇದಪುರುಷನ ಅವಯವಗಳೆಂದು ಇಲ್ಲಿ ವರ್ಣಿಸಿದೆ. ಅಥರ್ವವೇದದ ಉಲ್ಲೇಖ ಅಲ್ಲಿ ಏಕೆ ಬರಲಿಲ್ಲವೋ ಗೊತ್ತಾಗಿಲ್ಲ. ಛಾಂದೋಗ್ಯ ಉಪನಿಷತ್ತಿನಲ್ಲಿ ಅಥರ್ವವೇದದ ಉಲ್ಲೇಖವಿದ್ದೇ ಇದೆ. ಐತರೇಯ ಆರಣ್ಯಕದ ಕಾಲ ಕ್ರಿ. ಪೂ. 600 ಎಂದು ಕೀತ್‌ರ ಅಭಿಪ್ರಾಯ. ಆದರೆ ಇದರ ಮೊದಲನೆ ಆರಣ್ಯಕ ಐತರೇಯ ಬ್ರಾಹ್ಮಣದಷ್ಟೇ ಪ್ರಾಚೀನವಾಗಿ ಕ್ರಿ. ಪೂ. 2500ರ ಸುಮಾರಿಗೆ ಸೇರಿದುದೆಂದೂ, ಅದೇ ಮಹಿದಾಸ ಐತರೇಯರಿಂದ ವಿರಚಿತವಾದುದೆಂದೂ ಸಿ. ವಿ. ವೈದ್ಯರು ಅಭಿಪ್ರಾಯಪಡುತ್ತಾರೆ.[11]

### ಶಾಂಖಾಯನ ಆರಣ್ಯಕ

ಶಾಂಖಾಯನ ಬ್ರಾಹ್ಮಣಕ್ಕೆ ಸೇರಿದುದು ಈ ಅರಣ್ಯಕ. ಈ ಬ್ರಾಹ್ಮಣಕ್ಕೇ ಕೌಷೀತಕಿ ಎಂಬ ಹೆಸರೂ ಇದೆ ಎಂದು ಹಿಂದೆಯೇ ತಿಳಿಸಿದೆ. ಆದರೆ ಈ ಆರಣ್ಯಕಕ್ಕೆ ಶಾಂಖಾಯನ ಆರಣ್ಯಕವೆಂಬ ಹೆಸರೇ ಪ್ರಸಿದ್ಧವಾಗಿದೆ. ಇದು ವಿಷಯ ವಿವೇಚನೆಯಲ್ಲಿ ಐತರೇಯ ಆರಣ್ಯಕವನ್ನೇ ಅನುಸರಿಸುತ್ತದೆ. ಇದರಲ್ಲಿ 15 ಅಧ್ಯಾಯಗಳಿವೆ ; 137 ಖಂಡಗಳಿವೆ. ಇವುಗಳಲ್ಲಿ 3, 4, 5, 6 ಅಧ್ಯಾಯಗಳು ಕೌಷೀತಕಿ ಉಪನಿಷತ್ತು ಎಂದು ಪ್ರಸಿದ್ಧವಾಗಿವೆ. ಮಹಾವ್ರತವನ್ನು ವಿವೇಚಿಸುವ ಮೊದಲಿನ ಎರಡು ಅಧ್ಯಾಯಗಳನ್ನು ಬ್ರಾಹ್ಮಣಗಳೆಂದೇ ಎಣಿಸಲಾಗಿದೆ. ಹದಿನಾಲ್ಕನೆಯ ಅಧ್ಯಾಯದಲ್ಲಿ 'ಋಚಾಂ ಮೂರ್ಧಾನಂ ಯಜುಷಾಮುತ್ತ ಮಾಂಗಂ ಸಾಮ್ನಾಂ ಶಿರೋಽಥರ್ವಣಾಂ ಮುಂಡಮುಂಡಂ' ಎಂದು ಅಥರ್ವವೇದವನ್ನು ಉಲ್ಲೇಖಿಸಿದೆ. ಆರನೆಯ ಅಧ್ಯಾಯದಲ್ಲಿ ಉಶೀನರ, ಮತ್ಸ್ಯ, ಕಾಶೀ, ವಿದೇಹ ಮತ್ತು ಕುರುಪಾಂಚಾಲಗಳ ನಿರ್ದೇಶವಿದೆ. ಇದು ಮಧ್ಯದೇಶಕ್ಕೆ ಸಂಬಂಧಿಸಿರಬಹುದೆಂಬುದನ್ನು ಇದು ಸೂಚಿಸುತ್ತದೆ. ಹದಿಮೂರನೇ ಅಧ್ಯಾಯ ಉಪನಿಷತ್ತುಗಳಿಂದ ಅದರಲ್ಲಿಯೂ ಹೆಚ್ಚಾಗಿ ಬೃಹದಾರಣ್ಯಕದಿಂದ ವಿಷಯಗಳನ್ನು ತೆಗೆದುಕೊಂಡಿದೆ. 'ಗುಣಾಖ್ಯ ಸಾಂಖಾಯನಾ ದಸ್ಮಾಭಿರಧೀತಮ್' ಎಂದು ವಂಶವಿಚಾರ ಹೇಳಿರುವುದರಿಂದ ಇದು ಶಾಂಖಾಯನರ

11. ಪುಟ 146

ಶಿಷ್ಯರದೋ ಅಥವಾ ವಂಶದವರದೋ ಆಗಿರಬೇಕೆಂದು ಗೊತ್ತಾಗುತ್ತದೆ. ಆರೋಹ ಕ್ರಮದಲ್ಲಿ ಆಚಾರ್ಯರುಗಳ ಉಲ್ಲೇಖ ಇಲ್ಲಿ ಕಹೋಳ ಕೌಷೀತಕಿ, ಉದ್ದಾಲಕ, ಆರುಣಿ, ಪ್ರಿಯವ್ರತ, ಸೋಮಾಪಿ, ಸೋಮಪ, ಸೋಮಪ್ರಾತಿ ವೇಶ್ಯ, ಪ್ರತಿವೇಶ, ಬೃಹದ್ದಿವ ಎಂದು ಕಂಡುಬರುತ್ತದೆ.

### ಇತರ ಆರಣ್ಯಕಗಳು

ಶುಕ್ಲಯಜುರ್ವೇದಕ್ಕೆ ಸೇರಿದ ಬೃಹದಾರಣ್ಯಕ ಆರಣ್ಯಕವೆಂಬ ಹೆಸರನ್ನು ಹೊಂದಿದ್ದರೂ ಉಪನಿಷತ್ತೇ ಆಗಿದೆ. ಆತ್ಮತತ್ತ್ವವನ್ನು ವಿಶೇಷವಾಗಿ ವಿವೇಚಿಸುವ ಪ್ರಾಚೀನವೂ ಮಾನ್ಯವೂ ಆದ ಉಪನಿಷತ್ತುಗಳಲ್ಲಿ ಇದೂ ಒಂದಾಗಿದೆ. ಇದರ ವಿಚಾರವನ್ನು ಉಪನಿಷತ್ತುಗಳನ್ನು ವಿವೇಚಿಸುವಾಗ ವಿವರಿಸಲಾಗುವುದು.

ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿದ ಮೈತ್ರಾಯಣೀಯ ಶಾಖೆಗೆ ಸೇರಿದಂತೆ ಮೈತ್ರಾಯಣೀಯ ಆರಣ್ಯಕವೆಂಬುದು ಒಂದಿದೆ. ಮೈತ್ರಾಯಣೀಯ ಉಪನಿಷತ್ತನ್ನು ಅದು ಒಳಗೊಂಡಿದೆ.

ಸಾಮವೇದೀಯ ತಲವಕಾರ ಬ್ರಾಹ್ಮಣಕ್ಕೆ ಸೇರಿದ ತಲವಕಾರ ಆರಣ್ಯಕದಲ್ಲಿ ನಾಲ್ಕು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದಲ್ಲಿಯೂ ಅನುವಾಕಗಳೂ, ಅನುವಾಕಗಳಲ್ಲಿ ಖಂಡಗಳೂ ಇವೆ. ನಾಲ್ಕನೇ ಅಧ್ಯಾಯದ ಹತ್ತನೆಯ ಅನುವಾಕವೇ 'ತಲವಕಾರ ಉಪನಿಷತ್ತು' ಆಗಿದೆ.

ಅಥರ್ವವೇದಕ್ಕೆ ಸಂಬಂಧಿಸಿದಂತೆ ಉಪನಿಷತ್ತುಗಳು ಹಲವಾರಿದ್ದರೂ ಪ್ರಾಯಃ ಆರಣ್ಯಕ ಯಾವುದೂ ಇಲ್ಲ. ಗೋಪಥ ಬ್ರಾಹ್ಮಣಕ್ಕಿಂತಲೂ ಈ ಉಪನಿಷತ್ತುಗಳು ಪ್ರಾಚೀನವಾದ ಕಾರಣ ಇವು ಆರಣ್ಯಕದ ಭಾಗಗಳಾಗಿರದೆ ಸ್ವತಂತ್ರವಾಗಿದ್ದವೆಂದು ಊಹಿಸಬಹುದು.

ಆರಣ್ಯಕಗಳ ಕಾಲದ ವಿಚಾರವಾಗಿ ಎರಡು ಮಾತನ್ನು ಹೇಳಬಹುದು. ಬೇರೆ ಬೇರೆ ಕಾಲಗಳಲ್ಲಿ ಇವು ವಿರಚಿತವಾಗಿರಬೇಕೆಂದು ಸಾಮಾನ್ಯವಾಗಿ ಹೇಳಬಹುದು. ಕೆಲವು ಅರಣಗಳು ಛಾಂದೋಗ್ಯ ಮತ್ತು ಬೃಹದಾರಣ್ಯಕ ಉಪನಿಷತ್ತುಗಳ ನಂತರ ರಚಿತವಾದವೆಂಬುದಂತೂ ಅವುಗಳಿಂದ ತೆಗೆದುಕೊಂಡಿರುವ ಉಲ್ಲೇಖಗಳಿಂದ ಸುಸ್ಪಷ್ಟವಾಗುತ್ತದೆ. ಆರಣ್ಯಕಗಳಲ್ಲಿ ಕೆಲವು ಬ್ರಾಹ್ಮಣಗಳ ಶೈಲಿಯಲ್ಲಿಯೇ ಇವೆ. ಇವು ಇತರ ಆರಣ್ಯಕಗಳಿಗಿಂತ ಪ್ರಾಚೀನವಾದವು. ಕ್ರಿ. ಪೂ. 2500ರಿಂದ 1500ರ ವರೆಗಿನ ಕಾಲವನ್ನು ಸಾಮಾನ್ಯವಾಗಿ ಆರಣ್ಯಕಗಳ ಕಾಲವೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಕೆಲವು ಅರಣಗಳನ್ನು ಪಾಣಿನಿಗಳ ಕಾಲದ ನಂತರ ಕೂಡಿಸಲಾಯಿತೆಂದೂ ನಾವು ಊಹಿಸಬಹುದು. ಪಾಣಿನಿಗಳು ಆರಣ್ಯಕ ಎಂಬ ಶಬ್ದವನ್ನೇ ಎಲ್ಲಿಯೂ ಹೇಳದೇ ಇರುವುದು ಈ ಊಹೆಗೆ ಕಾರಣವಾಗಿದೆ.

# ಉಪನಿಷತ್ತುಗಳು

ವೇದ ವಾಙ್ಮಯದ ಉತ್ತುಂಗ ಶಿಖರಗಳೆನಿಸಿದ ಉಪನಿಷತ್ತುಗಳು ಆರಣ್ಯಕಗಳೊಡನೆ ಸಮ್ಮಿಳಿತವಾಗಿ ಅವುಗಳ ವಿಶಿಷ್ಟವಾದ ಭಾಗಗಳಾಗಿವೆ. ವೇದಗಳ ಅಂತಿಮ ಭಾಗಗಳೂ ಆಗಿ ಅವುಗಳ ಸಾರತಮವಾದ ಸಿದ್ಧಾಂತಗಳನ್ನು ಪ್ರತಿಪಾದಿಸುವ ಈ ಭಾಗಗಳು ವೇದಾಂತ ಗಳೆಂದೂ ವಿಖ್ಯಾತವಾಗಿವೆ. ಈ ಉಪನಿಷತ್ತುಗಳು ಭಾರತೀಯ ತತ್ವಜ್ಞಾನದ ಹಾಗೂ ಧರ್ಮ ಸಿದ್ಧಾಂತಗಳ ಮೂಲಗಳಾಗಿವೆ. ವೈದಿಕ ಧರ್ಮವನ್ನು ಪ್ರತಿಪಾದಿಸುವ ಪ್ರಸ್ಥಾನತ್ರಯಗಳಲ್ಲಿ ಉಪನಿಷತ್ತುಗಳು ಮುಖ್ಯವಾಗಿವೆ. ಭಗವದ್ಗೀತೆಯೂ ಬ್ರಹ್ಮಸೂತ್ರಗಳೂ ಉಪನಿಷತ್ತುಗಳನ್ನೇ ಆಶ್ರಯಿಸಿವೆ. ಭಾರತ ದೇಶದಲ್ಲಿ ಉದಿಸಿದ ಎಲ್ಲಾ ದರ್ಶನಗಳಿಗೂ ಉಪನಿಷತ್ತುಗಳು ಪ್ರತ್ಯಕ್ಷವಾಗಿಯಾಗಲೀ ಪರೋಕ್ಷವಾಗಿಯಾಗಲೀ ಆಧಾರಗಳಾಗಿವೆ. ಹೀಗೆ ಉಪನಿಷತ್ತುಗಳು ಭಾರತೀಯ ಸಂಸ್ಕೃತಿಯ ಪ್ರಕಾಶಸ್ತಂಭಗಳಾಗಿವೆ. ತತ್ವದೃಷ್ಟಿಯಿಂದ ಹೇಗೋ ಹಾಗೆಯೇ ಸಾಹಿತ್ಯ ದೃಷ್ಟಿಯಿಂದಲೂ ಇವು ಸುಂದರವಾಗಿವೆ.

ಬ್ರಾಹ್ಮಣಗಳ ಕಾಲದಲ್ಲಿ ಯಜ್ಞಸಂಸ್ಥೆಯು ಪ್ರಧಾನವಾಗಿ ಬೆಳೆದುಕೊಂಡು ಬಂದಿತ್ತು. ಕಾಲಕಳೆದಂತೆಲ್ಲಾ ಯಾಗಗಳಲ್ಲಿ ನಡೆಯುತ್ತಿದ್ದ ಪಶುಹಿಂಸೆಯ ವಿಚಾರದಲ್ಲಿ ಜುಗುಪ್ಸೆ ಉಂಟಾಯಿತು. ಈ ಭೀಕರವಾದ ಪಶುಮಾರಣಗಳಿಲ್ಲದೆ ಮಾನವನು ಪರಮ ಪುರುಷಾರ್ಥವನ್ನು ಸಾಧಿಸುವುದಕ್ಕಾಗುವುದಿಲ್ಲವೇ ಎಂಬ ವಿಚಾರದಲ್ಲಿ ಮೀಮಾಂಸೆ ಬೆಳೆಯಿತು. ಋಗ್ವೇದದ ಸೂಕ್ತಗಳಲ್ಲಿಯೇ ಅಲ್ಲಲ್ಲಿ ಇಂಥ ವಿಚಾರ ತೋರಿ ಬರುತ್ತದೆ. ಪ್ರಕೃತಿ ಪುರುಷ ಹಾಗೂ ಭಗವಂತನ ಸ್ವರೂಪ ಸಂಬಂಧಗಳನ್ನು ವಿವೇಚಿಸುವ ಉನ್ನತ ದಾರ್ಶನಿಕ ಭಾವನೆಗಳು ಅಲ್ಲಿಯೂ ಉದ್ದೀಪ್ತವಾಗಿವೆ. ಬಹಳ ಸರಳವೂ ಮಾರ್ಮಿಕವೂ ಆದ ಶೈಲಿಯಲ್ಲಿ ಉನ್ನತವಾದ ಈ ವಿಚಾರ ಧಾರೆಯನ್ನು ಸಮಗ್ರವಾಗಿ ಪ್ರತಿಪಾದಿಸುವುದೇ ಉಪನಿಷತ್ತುಗಳ ವೈಶಿಷ್ಟ್ಯ. ಹೀಗೆ ಕರ್ಮ ವಿಚಾರಕ್ಕೆ ಪ್ರತಿಯಾಗಿ ಜ್ಞಾನಮಾರ್ಗವನ್ನು ತೋರಿ ಬೆಳೆಸಿಕೊಂಡು ಬಂದುವು ಉಪನಿಷತ್ತುಗಳು.

ಸಂಸ್ಕೃತ ಭಾಷೆಯನ್ನು ಎಷ್ಟು ವೀರ್ಯವತ್ತರವಾಗಿ ಗದ್ಯದಲ್ಲಿ ಬಳಸಬಹುದೆಂಬುದಕ್ಕೆ ಇವು ನಿದರ್ಶನಗಳಾಗಿವೆ, ಛಾಂದೋಗ್ಯ ಹಾಗೂ ಬೃಹದಾರಣ್ಯಕೋಪನಿಷತ್ತುಗಳ ಕೆಲವು ಭಾಗಗಳಂತೂ ಸಂಸ್ಕೃತ ಸಾಹಿತ್ಯದಲ್ಲೇ ಏಕೆ ವಿಶ್ವಸಾಹಿತ್ಯದಲ್ಲೇ ಅತ್ಯುತ್ತಮವಾದ ಭಾಗಗಳಾಗಿವೆ. ನಡುನಡುವೆ ಬರುವ ರೋಚಕವಾದ ಆಖ್ಯಾನಗಳು ಮತ್ತು ಸಂಭಾಷಣೆಗಳು ಆ ಉದಾತ್ತವಾದ ತತ್ತ್ವಗಳನ್ನು ವಿವರಿಸುವ ನಿದರ್ಶನಗಳಾಗಿ ಮನಮೋಹಕವಾಗಿವೆ.

ಈ ಉಪನಿಷತ್ತುಗಳು ಪ್ರತಿಪಾದಿಸುವ ತತ್ತ್ವದರ್ಶನ ಮಾನವಕೋಟಿಯು ಮುಟ್ಟಬಹುದಾದ ಅತ್ಯುನ್ನತ ಮಟ್ಟವನ್ನು ಪ್ರತಿಬಿಂಬಿಸುತ್ತದೆ. ಅನೇಕ ದೇವತೋಪಾಸನೆಯಿಂದ ಏಕದೇವತೋಪಾಸನೆಯ ಕಡೆಗೆ ಈ ವಿಚಾರಮಾರ್ಗ ಸಾಗಿರುವುದನ್ನು ಕಾಣಬಹುದು. ಪುರುಷ ಹಾಗೂ ಪ್ರಕೃತಿಗಳಿಗಿಂತ ವಿಲಕ್ಷಣವಾದ ಪರಮಾತ್ಮ ತತ್ತ್ವವನ್ನು ಈ ಉಪನಿಷತ್ತುಗಳು ಬಹಳ ಯಶಸ್ವಿಯಾಗಿ ಪ್ರತಿಪಾದಿಸುತ್ತವೆ. ಆ ಭಗವತತ್ತ್ವವನ್ನು ಬ್ರಹ್ಮವೆಂದೂ, ಆತ್ಮವೆಂದೂ, ಸತ್ಯವೆಂದೂ ಇವು ಕರೆಯುತ್ತವೆ. ವೇದಋಷಿಗೂ ಆಚಾರ್ಯರೂ ವಿಶ್ವರಹಸ್ಯವನ್ನು ವಿವರಿಸುತ್ತಾ ಈ ಬ್ರಹ್ಮತತ್ತ್ವ ಜಗತ್ತಿಗೆ ಸರ್ವಕಾರಣವಾಗಿ, ಏಕಮೇವಾ

ದ್ವಿತೀಯವಾಗಿ ಜಗತ್ತಿನಲ್ಲಿ ಓತಪ್ರೋತವಾಗಿದೆಯೆಂದು ಸಾರಿದ್ದಾರೆ. ಬಹಳ ಪ್ರಾಚೀನ ಕಾಲದಿಂದಲೂ ಈ ವೇದಾಂತ ದರ್ಶನವನ್ನು ಅಭ್ಯಸಿಸಿ, ಅನುಷ್ಠಾನದಲ್ಲಿ ತಂದು ಅನೇಕ ಅನುಭಾವಿಗಳು ಬೆಳಕು ಕಂಡಿದ್ದಾರೆ. ಬಾದರಾಯಣರ ಬ್ರಹ್ಮಸೂತ್ರಗಳು ಈ ದರ್ಶನದ ಸಮಗ್ರವಾದ ಪ್ರತಿಪಾದನೆಗೇ ಮೀಸಲಾಗಿವೆ. ಅಂದಿನಿಂದ ಇಂದಿನವರೆಗೆ ಪ್ರಾಚ್ಯ ಪಾಶ್ಚಾತ್ಯ ಪಂಡಿತರೆಲ್ಲರ ಆದರಕ್ಕೂ ಗೌರವಕ್ಕೂ ಇವು ಪಾತ್ರವಾಗಿವೆ.[12]

ಉಪನಿಷತ್ತುಗಳ ಸಂಖ್ಯೆಯ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಮುಕ್ತಿಕೋಪನಿಷತ್ತಿನಲ್ಲಿ ಇವು 108 ಎಂದು ತಿಳಿಸಿದೆ. ಬೇರೆ ಬೇರೆ ವೇದಶಾಖೆಗಳಿಗೆ ಸೇರಿದಂತೆ ಅನೇಕ ಉಪನಿಷತ್ತುಗಳು ಉಪಲಬ್ಧವಾಗಿವೆ. ಹೀಗೆ ಉಪಲಬ್ಧವಾಗಿರುವ ಉಪನಿಷತ್ತುಗಳಲ್ಲಿ ಅತ್ಯಂತ ಪ್ರಾಚೀನವೂ, ಮಹತ್ವಪೂರ್ಣವೂ ಆದ ಉಪನಿಷತ್ತುಗಳು ಹದಿಮೂರು ಅಥವಾ ಹದಿನಾಲ್ಕೆಂದು ಅಂಗೀಕರಿಸಲಾಗಿದೆ. ದಶೋಪನಿಷತ್ತುಗಳೆಂದು ವಿಖ್ಯಾತವಾದ ಈಶ, ಕೇನ, ಕಠ, ಪ್ರಶ್ನ, ಮುಂಡುಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ. ಛಾಂದೋಗ್ಯ, ಬೃಹದಾರಣ್ಯಕ ಉಪನಿಷತ್ತುಗಳೊಡನೆ ಕೌಷೀತಕಿ, ಶ್ವೇತಾಶ್ವತರ ಮತ್ತು ಮೈತ್ರಾಯಣೀಯ ಹಾಗೂ ನಾರಾಯಣೀಯ ಉಪನಿಷತ್ತುಗಳು ಈ ಗುಂಪಿಗೆ ಸೇರುತ್ತವೆ.

ಮಹಾನಾರಾಯಣೀಯವನ್ನುಳಿದು ಇತರ ಹದಿಮೂರು ಉಪನಿಷತ್ತುಗಳು ಪ್ರಾಚೀನವಾದವೆಂದು ಬೆಲ್ವಾಳ್ಕರ್ ಮತ್ತು ರಾನಡೆ ಅವರು ಪ್ರತಿಪಾದಿಸುತ್ತಾರೆ. ಡಾಯ್ಸನ್ ಮಹಾಶಯನ ಅಭಿಪ್ರಾಯವೂ ಇದೇ ಆಗಿದೆ. ವಿಂಟರ್‌ನಿಟ್ಜ ಮಹಾಶಯ ಇವು ಹದಿನಾಲ್ಕೂ ಪ್ರಾಚೀನವಾದವೆಂದು ಭಾವಿಸುತ್ತಾನೆ. ಈ ಉಪನಿಷತ್ತುಗಳಿಂದ ಭಾಷ್ಯಕಾರರುಗಳು ಪುಷ್ಕಲವಾಗಿ ಉಲ್ಲೇಖಿಸಿದ್ದಾರೆ. ಅಲ್ಲದೆ ಇವುಗಳಲ್ಲಿ ಅನೇಕ ಉಪನಿಷತ್ತುಗಳ ಮೇಲೆ ಭಾಷ್ಯವನ್ನೂ ಬರೆದಿದ್ದಾರೆ.

ಈ ಉಪನಿಷತ್ತುಗಳಲ್ಲಿ ಈಶಾವಾಸ್ಯವು ಶುಕ್ಲಯಜುರ್ವೇದ ಸಂಹಿತೆಯ ಅಂತಿಮ ಭಾಗವಾಗಿದೆ. ಸಾಮವೇದದ ತಲವಕಾರ ಬ್ರಾಹ್ಮಣದ ಭಾಗವಾಗಿದೆ ಕೇನೋಪನಿಷತ್ತು. ಕೃಷ್ಣಯಜುರ್ವೇದದ ಕಠಶಾಖೆಗೆ ಸೇರಿದೆ ಕಠೋಪನಿಷತ್ತು. ಪ್ರಶ್ನ, ಮುಂಡುಕ ಮತ್ತು ಮಾಂಡೂಕ್ಯ ಉಪನಿಷತ್ತುಗಳ ಅಥರ್ವವೇದಕ್ಕೆ ಸೇರಿದವು ಎನ್ನಲಾಗಿದೆ. ಅಥರ್ವವೇದಕ್ಕೆ ಆರಣ್ಯಕಗಳೇ ಇಲ್ಲದ ಕಾರಣ ಇವು ಆರಣ್ಯಕಗಳ ಭಾಗಗಳಲ್ಲ. ಅಥರ್ವ ಸಂಹಿತೆಯ ಅಥವಾ ಗೋಪಥ ಬ್ರಾಹ್ಮಣದ ಭಾಗಗಳಾಗಿಯೂ ಇವು ಇಲ್ಲ. ಆದ್ದರಿಂದ ಅಥರ್ವಶಾಖೆಗೆ ಸೇರಿದ್ದು ಈಗ ನಷ್ಟವಾಗಿ ಹೋಗಿರುವ ಯಾವುದೋ ಬ್ರಾಹ್ಮಣದ ಭಾಗಗಳಾಗಿ ಇವು ಇದ್ದಿರಬಹುದೆಂದು ಊಹಿಸಬೇಕಾಗಿದೆ. ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಯ ಆರಣ್ಯಕದ ಭಾಗವಾಗಿದೆ ತೈತ್ತಿರೀಯೋಪನಿಷತ್ತು. ಐತರೇಯೋನಿಷತ್ತು ಋಗ್ವೇದದ ಐತರೇಯ ಆರಣ್ಯಕದ ಭಾಗವಾಗಿದೆ. ಛಾಂದೋಗ್ಯ ಉಪನಿಷತ್ತು ಸಾಮವೇದಕ್ಕೆ ಸೇರಿದೆ. ಈಗ ಉಪಲಬ್ಧವಿರುವ ಛಾಂದೋಗ್ಯ ಬ್ರಾಹ್ಮಣಕ್ಕೆ ಇದು ಸೇರಿದ್ದಿತೆಂದು ಹೇಳಲಾಗಿದೆ. ಶುಕ್ಲಯಜುರ್ವೇದಕ್ಕೆ ಸೇರಿದ ಶತಪಥ ಬ್ರಾಹ್ಮಣದ ಭಾಗವಾಗಿದೆ ಬೃಹದಾರಣ್ಯಕೋಪನಿಷತ್ತು. ಈ ವೇದಕ್ಕೆ ಪ್ರತ್ಯೇಕವಾದ

12. Schopenhauer looked upon it as 'the fruit of human knowledge and wisdom and as containing almost superhuman conceptions whose originators could hardly be conceived as mere men.'

Deussen thought that the Upanishads gave 'If not the most scientific yet the most intimate and immediate light upon the last secret of existence.'

ಆರಣ್ಯಕವಿಲ್ಲದ ಕಾರಣ ಈ ಉಪನಿಷತ್ತನ್ನೇ ಆರಣ್ಯಕವೆಂದೂ ಕರೆಯುತ್ತಾರೆ. ಶ್ವೇತಾಶ್ವತರ ಮತ್ತು ಮೈತ್ರೀ ಉಪನಿಷತ್ತುಗಳು ಕೃಷ್ಣಯಜುರ್ವೇದಕ್ಕೆ ಸೇರಿವೆ. ಕೌಷೀತಕಿ ಉಪನಿಷತ್ತು ಋಗ್ವೇದಕ್ಕೆ ಸೇರಿದ ಶಾಂಖಾಯನ ಆರಣ್ಯಕದ ಭಾಗವಾಗಿ ಉಪಲಬ್ಧವಾಗಿದೆ.

ಈ ಉಪನಿಷತ್ತುಗಳನ್ನು ಕಾಲಕ್ರಮಕ್ಕನುಸಾರವಾಗಿ ಜೋಡಿಸುವುದು ಬಹಳ ಕಷ್ಟದ ಕೆಲಸ. ಡಾಯ್ಸನ್, ಮೆಕ್ಡಾನಲ್, ಬೆಲ್ವಾಳ್ಕರ್, ರಾನಡೆ ಮುಂತಾದ ವಿದ್ವಾಂಸರು ತಮ್ಮ ತಮ್ಮ ಅಭಿಪ್ರಾಯಗಳಿಗನುಸಾರವಾಗಿ ಇವುಗಳನ್ನು ವಿಭಾಗಿಸಿ ಜೋಡಿಸಿದ್ದಾರೆ. ಇವರ ಅಭಿಪ್ರಾಯಗಳನ್ನು ಪುಟ 354 ರಲ್ಲಿರುವ ಪಟ್ಟಿಯಲ್ಲಿ ಸೂಚಿಸಿದೆ.

ಉಪನಿಷತ್ತುಗಳ ಪ್ರಾಚೀನತೆ ಅಥವಾ ಅರ್ವಾಚೀನತೆಯನ್ನು ನಿರ್ಧರಿಸಲು ಹಲವಾರು ಸೂತ್ರಗಳನ್ನು ಈ ವಿದ್ವಾಂಸರು ಅನುಸರಿಸಿದ್ದಾರೆ. ಅವು ಹೀಗಿವೆ:

1. ಹೆಸರು: ಅರ್ವಾಚೀನವಾದ ಉಪನಿಷತ್ತುಗಳನ್ನು ಅವುಗಳು ಆರಂಭವಾಗುವ ಮಾತುಗಳಿಂದ ಹೆಸರಿಸಿದೆ. ಉದಾ : ಕೇನೋಪನಿಷತ್ತು, ಈಶಾವಾಸ್ಯ ಇತ್ಯಾದಿ.

2. ಶೈಲಿ: ಭಾಷೆಯ ಆಧಾರದಿಂದ ಹೊಸದೇ ಹಳೆಯದೇ ಎಂಬುದನ್ನು ತಿಳಿಯಬಹುದು ಎಂಬುದು.

3. ಉಪಮಾನಗಳು, ಉದಾಹರಣೆಗಳು ಮುಂತಾದವು. ಪ್ರಾಚೀನವಾದ ಉಪನಿಷತ್ತುಗಳು ಯಾಜ್ಞಿಕವಾದ ಪ್ರಕ್ರಿಯೆಯನ್ನನುಸರಿಸುತ್ತವೆ ಹಾಗೂ ಚಿತ್ರವಿಚಿತ್ರವಾದ ಶಬ್ದನಿಷ್ಪತ್ತಿಯನ್ನು ನಿರೂಪಿಸುತ್ತವೆ.

4. ಇಂದ್ರನೇ ಮುಂತಾದ ಯಾಜ್ಞಿಕವಾದ ದೇವತೆಗಳಿರುವ ಪ್ರಾಧಾನ್ಯ.

5. ಡಾಯ್ಸನ್ನನ ಅಭಿಪ್ರಾಯದಂತೆ ಗದ್ಯಮಯವಾದ ಉಪನಿಷತ್ತುಗಳು ಬ್ರಾಹ್ಮಣಗ್ರಂಥಗಳ ಸರಿಗಿಗೆ ಸೇರಿಕೊಂಡಿರುವ ಕಾರಣ ಪ್ರಾಚೀನವಾದವೆಂಬುವ ಭಾವ.

6. ಬ್ರಾಹ್ಮಣ ಗ್ರಂಥಗಳಲ್ಲಿ ಬರುವ ಯಾಗ, ವ್ರತ, ಫಲಶ್ರುತಿ ಮುಂತಾದವುಗಳನ್ನು 'ಯ ಏವಂ ವೇದ' ಎಂಬುವ ಮಾತುಗಳಿಂದ ತಿಳಿಸುವವು ಓಲ್ಡೆನ್ ಬರ್ಗ್ ಮಹಾಶಯನ ಅಭಿಪ್ರಾಯದಲ್ಲಿ ಹಳೆಯವು.

7. ನಿರ್ದಿಷ್ಟವಾದ ನದನದಿಗಳು, ಪರ್ವತಗಳು, ದೇಶಗಳು, ಜನಗಳು ಮುಂತಾದವರ ಉಲ್ಲೇಖಗಳಿಂದ ಅವುಗಳ ಕಾಲವಿಚಾರ ತಿಳಿಯುವುದು.

ಮೇಲೆ ಸೂಚಿಸಿರುವ ಈ ಸೂತ್ರಗಳು ಸಾಮಾನ್ಯವಾದ ಸೂಚನೆಗಳು ಮಾತ್ರ. ಇವು ಉಪನಿಷತ್ತುಗಳ ಕಾಲವನ್ನು ನಿರ್ಣಯಿಸುವ ನಿರ್ಧಾರಕ ಸೂತ್ರಗಳಲ್ಲ. ಉಪನಿಷತ್ತು ಗದ್ಯಮಯವಾಗಿದ್ದ ಮಾತ್ರಕ್ಕೆ, ಪದ್ಯಮಯವಾಗಿದ್ದ ಮಾತ್ರಕ್ಕೆ, ಹಳೆಯದು ಅಥವಾ ಹೊಸದು ಎಂದು ತೀರ್ಮಾನಿಸುವುದಕ್ಕಾಗುವುದಿಲ್ಲ. ಈಶಾವಾಸ್ಯ ಪದ್ಯಮಯವಾಗಿದೆ. ಗದ್ಯಮಯವಾದ ಉಪನಿಷತ್ತುಗಳಿಗಿಂತ ಇದು ಈಚಿನದೆಂದು ತೀರ್ಮಾನಿಸುವುದು ಕಷ್ಟ. ಈ ಉಪನಿಷತ್ತು ಬ್ರಾಹ್ಮಣ ಗ್ರಂಥಗಳಿಗೂ ಹಿಂದಿನದಾದ ಸಂಹಿತೆಯ ಭಾಗವಾಗಿರುವುದೇ ಇದಕ್ಕೆ ಕಾರಣವಾಗಿದೆ.

ಸಿ. ವಿ. ವೈದ್ಯರು ಉಪನಿಷತ್ತುಗಳ ಕಾಲನಿರ್ಣಯ ವಿಚಾರದಲ್ಲಿ ಎರಡು ಸೂತ್ರಗಳನ್ನು ಸೂಚಿಸುತ್ತಾರೆ.

1. ವಿಷ್ಣು ಅಥವಾ ಶಿವನನ್ನು ಪರದೈವವೆಂದು ಸಾರಿ ಬ್ರಹ್ಮ ವಸ್ತುವಿನೊಡನೆ ತಾದಾತ್ಮ್ಯವನ್ನು ಹೇಳಿರುವುದು.

| ಡಾಯಸ್ಸ್ | ಏಂಟರ್‌ನಿಟ್ಸ್ | ಮಕ್ಡಾನಲ್ | ಬೆಲ್ವಾಳ್ಕರ್ ಮತ್ತು ರಾನಡೆ | ಸಿ. ವಿ. ವೈದ್ಯ |
|---|---|---|---|---|
| 1. ಪ್ರಾಚೀನಗದ್ಯೋಪನಿಷತ್ತುಗಳು- (a) ಬೃಹದಾರಣ್ಯಕ, ಛಾಂದೋಗ್ಯ, ತೈತ್ತಿರೀಯ, ಐತರೇಯ, ಕೌಷೀತಕಿ, ಕೇನ.<br>2. ಪದ್ಯಮಯವಾದ ಉಪನಿಷತ್ತುಗಳು-ಕಠ, ಈಶ, ಶ್ವೇತಾಶ್ವತರ, ಮಹಾನಾರಾಯಣ.<br>3. ಈಚಿನ ಗದ್ಯೋಪನಿಷತ್ತುಗಳು-ಪ್ರಶ್ನ, ಮೈತ್ರಾಯಣೀಯ, ಮಾಂಡೂಕ್ಯ.<br>4. ಅಥರ್ವಣ ಮತ್ತು ಇತರ ಅಪ್ರಧಾನ ವಾದ ಉಪನಿಷತ್ತುಗಳು-ಸಂನ್ಯಾಸ, ಯೋಗ, ಶೈವ ಮುಂತಾದವು. | 1. ಐತರೇಯ, ಬೃಹದಾರಣ್ಯಕ, ಛಾಂದ್ಯೋಗ, ತೈತ್ತಿರೀಯ, ಕೌಷೀತಕಿ, ಕೇನ.<br>2. ಕಠ, ಶ್ವೇತಾಶ್ವತರ, ಮಹಾನಾರಾಯಣ, ಈಶ, ಪ್ರಶ್ನ, ಮುಂಡಕ.<br>3. ಮಾಂಡೂಕ್ಯ, ಮೈತ್ರಾಯಣೀಯ. | 1. ಬೃಹದಾರಣ್ಯಕ, ಛಾಂದೋಗ್ಯ, ತೈತ್ತಿರೀಯ, ಐತರೇಯ, ಕೌಷೀತಕಿ.<br>2. ಕೇನ<br>3. ಕಾಠಕ, ಈಶ, ಶ್ವೇತಾಶ್ವತರ, ಮುಂಡಕ, ಮಹಾನಾರಾಯಣ, ಮೈತ್ರಾಯಣೀಯ. | 1. ಛಾಂದೋಗ್ಯ, ಬೃಹದಾರಣ್ಯಕ, ಕಠ, ಈಶ, ಐತರೇಯ, ತೈತ್ತಿರೀಯ, ಮುಂಡಕ, ಕೌಷೀತಕಿ, ಕೇನ, ಪ್ರಶ್ನ.<br>2. ಶ್ವೇತಾಶ್ವತರ, ಮಾಂಡೂಕ್ಯ, ಮೈತ್ರಾಯಣೀಯ.<br>3. ಬಾಷ್ಕಲ, ಛಾಗಲೇಯ, ಆರ್ಷೇಯ, ಶೌನಕ. | ಛಾಂದೋಗ್ಯ, ಬೃಹದಾರಣ್ಯಕ, ಈಶ, ತೈತ್ತಿರೀಯ, ಐತರೇಯ, ಪ್ರಶ್ನ, ಮುಂಡಕ, ಮಾಂಡೂಕ್ಯ, ಕಠ, ಕೇನ, ಶ್ವೇತಾಶ್ವತರ ಮೈತ್ರಾಯಣೀಯ |

2. ಸಾಂಖ್ಯಸಿದ್ಧಾಂತದ ಪ್ರಕೃತಿ ಹಾಗೂ ಪುರುಷ ತತ್ತ್ವವನ್ನು ನಿರ್ದೇಶಿಸಿರುವುದು ಹಾಗೂ ಸತ್ವರಜಸ್ತಮೋಗುಣಗಳನ್ನು ಉಲ್ಲೇಖಿಸಿರುವುದು.

ಯಾವ ಯಾವ ಉಪನಿಷತ್ತುಗಳಲ್ಲಿ ವಿಷ್ಣು ಅಥವಾ ಶಿವನನ್ನು ಪರದೈವವೆಂದು ಹೇಳಿ ಬ್ರಹ್ಮವೆಂದು ಸಾರಿದೆಯೋ ಅವು ಅರ್ವಾಚೀನವಾದವು. ಛಾಂದೋಗ್ಯ ಹಾಗೂ ಬೃಹದಾರಣ್ಯಕಗಳಲ್ಲಿ ಆತ್ಮತತ್ತ್ವ ಅಥವಾ ಬ್ರಹ್ಮತತ್ತ್ವದ ನಿರೂಪಣೆಯೇ ಇರುವುದರಿಂದ ಅವು ಅತ್ಯಂತ ಪ್ರಾಚೀನವಾದವು. 'ತದ್ವಿಷ್ಣೋಃ ಪರಮ ಪದಂ' ಎಂದು ಸಾರುವ ಕಠೋಪನಿಷತ್ತು ಇವುಗಳಿಗಿಂತ ಈಚಿನದು. ರುದ್ರನಿಗೆ ಪ್ರಾಧಾನ್ಯ ಕೊಡುವ ಶ್ವೇತಾಶ್ವತರವೂ ಹಾಗೆಯೇ ಛಾಂದೋಗ್ಯ ಬೃಹದಾರಣ್ಯಕಗಳಿಗಿಂತ ಈಚಿನದು ಎಂಬುದು ಇವರ ಅಭಿಪ್ರಾಯ.

ಹಾಗೆಯೇ ಗುಣಗಳ ನಿರೂಪಣೆ ಕಠದಲ್ಲಿ ಮೊಟ್ಟಮೊದಲಾಗಿ ಬರುತ್ತದೆ. ಪ್ರಕೃತಿತತ್ತ್ವವನ್ನೂ ಗುಣಗಳನ್ನೂ ವಿಸ್ತಾರವಾಗಿ ಹೇಳುವ ಮೈತ್ರಾಯಣೀಯ ಉಪನಿಷತ್ತು ಈ ದೃಷ್ಟಿಯಿಂದ ನೋಡಿದರೆ ಇತರ ಉಪನಿಷತ್ತುಗಳಿಗಿಂತ ಈಚಿನದು.

ಹೀಗೆ ಬೇರೆ ಬೇರೆ ದೃಷ್ಟಿಗಳಿಂದ ಉಪನಿಷತ್ತುಗಳನ್ನು ಹಳೆಯ ಹಾಗೂ ಹೊಸ ಉಪನಿಷತ್ತುಗಳೆಂದು ವಿಭಾಗಿಸಿ ವಿದ್ವಾಂಸರು ಜೋಡಿಸಿದ್ದಾರೆ.

## ಉಪನಿಷತ್ತುಗಳ ಕಾಲ

ಉಪನಿಷತ್ತುಗಳ ಕಾಲ ವಿಚಾರದಲ್ಲಿ ಪ್ರಾಚ್ಯ ಪಾಶ್ಚಾತ್ಯ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ. ಅತ್ಯಂತ ಪ್ರಾಚೀನವೆನ್ನಲಾದ ಉಪನಿಷತ್ತುಗಳು ಬೌದ್ಧಧರ್ಮದ ಆರಂಭಕ್ಕೂ ಹಿಂದಿನ ಕಾಲಕ್ಕೆ ಸೇರಿದವೆಂದು ಎಲ್ಲರೂ ಒಪ್ಪುತ್ತಾರೆ. ಇವುಗಳಲ್ಲಿ ಬೌದ್ಧಧರ್ಮದ ಅಂಶಗಳಾವುವೂ ದೊರಕದೆ ಇರುವುದೇ ಇದಕ್ಕೆ ಕಾರಣವಾಗಿದೆ. ಆದ್ದರಿಂದ ಇವು ಕ್ರಿ. ಪೂ. 600ಕ್ಕಿಂತ ಹಿಂದಿನದೆಂದು ಸಿದ್ಧವಾಗುತ್ತದೆ. ಋಗ್ವೇದ ಸಂಹಿತೆಯ ಸಂಕಲನಾನಂತರ ಉಪನಿಷತ್ತುಗಳ ಕಾಲವನ್ನು ಹೇಳಬೇಕಾಗಿದೆ. ಪಾಶ್ಚಾತ್ಯ ಪಂಡಿತರು ಕ್ರಿ. ಪೂ. 1200ನ್ನು ಋಗ್ವೇದ ಸಂಕಲನ ಕಾಲವೆಂದು ಒಪ್ಪುವುದರಿಂದ ಉಪನಿಷತ್ತುಗಳು ಕ್ರಿ. ಪೂ. 1200 ಹಾಗೂ ಕ್ರಿ. ಪೂ. 600ರ ಮಧ್ಯ ಕಾಲಕ್ಕೆ ಸೇರುತ್ತವೆ. ಈ ಅಭಿಪ್ರಾಯವನ್ನೇ ಬೆಲ್ವಾಳ್ಕರ್ ಮತ್ತು ರಾನಡೇ ಅವರೂ ಅನುಮೋದಿಸುತ್ತಾರೆ. ಆದರೆ ಈ ಅಭಿಪ್ರಾಯವನ್ನು ಎಲ್ಲರೂ ಒಪ್ಪುವುದಿಲ್ಲ. ಪ್ರಾಚ್ಯ ವಿದ್ವಾಂಸರ ಅಭಿಪ್ರಾಯದಲ್ಲಿ ಋಗ್ವೇದ ಸಂಹಿತೆಯ ಸಂಕಲನ ಕ್ರಿ. ಪೂ. 4500 ಕ್ಕಿಂತ ಹಿಂದೆ ಆಯಿತು. ಜ್ಯೋತಿಶ್ಶಾಸ್ತ್ರದ ಆಧಾರದ ಮೇಲೆ ಡಾ. ಯಾಕೋಬಿ ಹಾಗೂ ಬಿ. ಜಿ. ತಿಲಕ್‌ರವರು ಋಗ್ವೇದದ ಕಾಲವನ್ನು ಕ್ರಿ. ಪೂ. 4500 ಸುಮಾರಲ್ಲಿ ನಿರ್ಧರಿಸಿದ್ದಾರೆ. ಮತ್ತೆ ಕೆಲವರು ಇನ್ನೂ ಹಿಂದಿನ ಕಾಲವನ್ನು ಹೇಳುತ್ತಾರೆ. ಆದ್ದರಿಂದ ಇವರ ದೃಷ್ಟಿಯಲ್ಲಿ ಉಪನಿಷತ್ತುಗಳ ಕಾಲ ಕ್ರಿ. ಪೂ. 4500 ರಿಂದ 600ರ ಮಧ್ಯಕಾಲಕ್ಕೆ ಸೇರುತ್ತದೆ– ಮೈತ್ರಾಯಣೀಯ ಉಪನಿಷತ್ತಿನಲ್ಲಿ ಉಪಲಬ್ಧವಾಗುವ ಜ್ಯೋತಿಶ್ಶಾಸ್ತ್ರ ಸಂಬಂಧಿಯಾದ ಉಲ್ಲೇಖದ ಆಧಾರದಿಂದ ಅದರ ಕಾಲವನ್ನು ಬಿ. ಜಿ. ತಿಲಕ್‌ರವರು ಕ್ರಿ. ಪೂ. 1900 ಎಂದು ಸಿದ್ಧಾಂತಿಸಿದ್ದಾರೆ. ಈ ಉಲ್ಲೇಖ ಈ ಉಪನಿಷತ್ತಿನ ಮಧ್ಯಭಾಗದಲ್ಲಿದೆ. ಶ್ರವಿಷ್ಠೆಯ ಮಧ್ಯಭಾಗದಲ್ಲಿ ಉತ್ತರಾಯಣವು ಸಂಭವಿಸುವುದೆಂದು ಇಲ್ಲಿ ಹೇಳಿದೆ. ಪೂರ್ವಾಷಾಢಧ ಮಧ್ಯದಲ್ಲಿ ಈಗ ಉತ್ತರಾಯಣ ಸಂಭವಿಸುವುದರಿಂದ ಈ ಉಪನಿಷತ್ತಿನ ಕಾಲ ನಿರ್ಣಯಕ್ಕೆ ಸಹಾಯಕವಾಗಿದೆ. ಮೈತ್ರಾಯಣೀಯ ಉಪನಿಷತ್ತು ಕ್ರಿ. ಪೂ. 2000ದ ಸುಮಾರಿಗೆ ಸೇರುವುದಾದರೆ ಉಪನಿಷತ್ತುಗಳ ಕಾಲ ಇನ್ನೂ ಹಿಂದಕ್ಕೆ ಹೋಗುವುದು. ಆಗ ಕ್ರಿ. ಪೂ.

2500ರಿಂದ ಕ್ರಿ. ಪೂ. 2000ದ ಕಾಲವನ್ನು ಉಪನಿಷತ್ತುಗಳ ಕಾಲವೆಂದು ಹೇಳಬಹುದು. ಅತ್ಯಂತ ಪ್ರಾಚೀನವಾದ ಛಾಂದೋಗ್ಯ ಮತ್ತು ಬೃಹದಾರಣ್ಯಕೋಪನಿಷತ್ತುಗಳು ಕ್ರಿ. ಪೂ. 2500ರ ಸುಮಾರಿಗೆ ಸೇರುತ್ತವೆ.

## ಉಪನಿಷತ್ತುಗಳ ಕಾಲದಲ್ಲಿ ಜನಜೀವನ

ಆರ್ಯಭೂಮಿ ಪಶ್ಚಿಮದಲ್ಲಿ ಗಾಂಧಾರದಿಂದ ಹಿಡಿದು ವಿದೇಹದವರೆಗೂ ವ್ಯಾಪಿಸಿತ್ತು. ಮದ್ರ, ಕುರು, ಕೇಕಯ, ಪಾಂಚಾಲ, ಕೋಸಲ, ವಿದೇಹ, ಕೌಶಾಂಬಿ, ಕಾಶಿ ಮುಂತಾದ ಅನೇಕಾನೇಕ ರಾಜ್ಯಗಳು ಏಳಿಗೆಯಲ್ಲಿದ್ದವು. ಗಾಂಧಾರವು ಅವರ ಕಾಲದಲ್ಲಿ ಆರ್ಯನಿವಾಸದ ಗಡಿಯಾಗಿದ್ದಿರಬೇಕು. ಕೇಕಯರಾಜ್ಯದ ಅಶ್ವಪತಿ ಹೇಳುವ 'ನಮೇಸ್ತೇನೋ ಜನಪದೇ' ಎಂಬ ನುಡಿ ಅಂದಿನ ಸಂಸ್ಕೃತಿಯ ಹೆಮ್ಮೆಯ ಮಾತಾಗಿದೆ. ಕಳ್ಳಕಾಕರನ್ನು ಎಚ್ಚರಿಕೆಯಿಂದ ಗಮನಿಸಿ ಹಿಡಿದು ಕಠಿಣವಾದ ಶಿಕ್ಷೆಯನ್ನು ಅಂದು ಕೊಡುವ ಪದ್ಧತಿಯಿತ್ತು. ಕಳ್ಳತನದ ಆಪಾದನೆ ಇರುವ ಮನುಷ್ಯನ ಕೈಗೆ ಕಾದ ಕಬ್ಬಿಣವನ್ನು ಕೊಡುತ್ತಿದ್ದರು. ಅವನು ಸತ್ಯವಂತನಾಗಿದ್ದರೆ ಅದು ಸುಡುತ್ತಿರಲಿಲ್ಲ. ಅವನನ್ನು ಬಿಟ್ಟುಬಿಡುತ್ತಿದ್ದರು. ಅವನು ಅಸತ್ಯವಾದಿಯಾಗಿದ್ದರೆ ಅದರಿಂದ ದಗ್ಧನಾಗುತ್ತಿದ್ದನು. ಆಗ ಅವನನ್ನು ಮರಣದಂಡನೆಗೆ ಗುರಿಪಡಿಸುತ್ತಿದ್ದರು. 'ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇ ಅಥ ಹನ್ಯತೇ' (ಛಾಂ. 6-16). ರಾಜರು ಪ್ರಜೆಗಳಿಂದ ತೆರಿಗೆಗಳನ್ನು ತೆಗೆದುಕೊಳ್ಳುತ್ತಿದ್ದರು. ದೇಶದಲ್ಲಿ ಸುಭಿಕ್ಷವಿರುವಂತೆಯೂ ನ್ಯಾಯಪಾಲನೆಯಾಗುವಂತೆಯೂ ನೋಡಿಕೊಳ್ಳುತ್ತಿದ್ದರು. ರಾಜರುಗಳು ಕ್ಷತ್ರಿಯರೇ ಆಗಿರುತ್ತಿದ್ದರು. ವೇದವೇದಾಂತಗಳಲ್ಲಿ ಅವರು ಪರಿನಿಷ್ಣಾತರಾಗಿದ್ದರು. ಆಧ್ಯಾತ್ಮಿಕ ವಿಚಾರಗಳ ಚರ್ಚೆಯಲ್ಲಿ ಅವರು ಅತ್ಯಾಸಕ್ತಿಯನ್ನು ವಹಿಸುತ್ತಿದ್ದರು. ಬ್ರಹ್ಮವಿದ್ಯೆಯಲ್ಲಿ ಪಾಂಡಿತ್ಯಹೊಂದಿದ್ದ ಬ್ರಾಹ್ಮಣರು ದೇಶದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಸಂಚರಿಸುತ್ತಾ ತಮಗೆ ಕರಗತವಾಗಿದ್ದ ವಿದ್ಯೆಯನ್ನು ಉಪದೇಶಿಸುತ್ತಾ ಇದ್ದರು. ಯಾಜ್ಞವಲ್ಕ್ಯ, ಉದ್ದಾಲಕ ಆರುಣಿ, ಆಯಾಸ್ಯ ಆಂಗಿರಸ, ಸತ್ಯಕಾಮ ಜಾಬಾಲ ಮುಂತಾದವರೆಲ್ಲಾ ನಿಜವಾಗಿ ಅಂದು ಇದ್ದವರೇ ಆಗಿರಬೇಕು. ಚಾತುರ್ವರ್ಣ್ಯವ್ಯವಸ್ಥೆ ಸುಭದ್ರವಾಗಿತ್ತು. ಕ್ಷತ್ರಿಯರು ವೇದಾಭ್ಯಾಸ ಮಾಡುತ್ತಿದ್ದರು. ಯಾಗಾದಿಗಳನ್ನು ಅನುಷ್ಠಿಸುತ್ತಿದ್ದರು ; ಪ್ರಜೆಗಳನ್ನು ಆಳುತ್ತಿದ್ದರು. ಸಾಮಾಜಿಕವಾಗಿ ಬ್ರಾಹ್ಮಣರಿಗಿಂತ ಮೇಲಿನ ಸ್ಥಾನವನ್ನು ಅವರು ಹೊಂದಿದ್ದರು–'ತಸ್ಮಾದ್ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ'. ಬ್ರಾಹ್ಮಣರು ಆಚಾರ್ಯರುಗಳಾಗಿದ್ದ ಕಾರಣ ಧಾರ್ಮಿಕವಾಗಿ ಮೇಲಿನವರಾಗಿದ್ದರು. ಬ್ರಾಹ್ಮಣರು ಕ್ಷತ್ರಿಯರಿಂದಲೂ ಬ್ರಹ್ಮವಿದ್ಯೆಯನ್ನು ಕಲಿತ ನಿದರ್ಶನಗಳು ಉಪನಿಷ್ತುಗಳಲ್ಲಿವೆ. ಶ್ವೇತಕೇತು ಆರುಣೇಯು ಅಶ್ವಪತಿಯಿಂದ ಬ್ರಹ್ಮವಿದ್ಯೆಯನ್ನು ಕಲಿತನು.

ಕೆಲವು ವಿದ್ವಾಂಸರು ಕ್ಷತ್ರಿಯರೇ ವೇದಾಂತದರ್ಶನವನ್ನು ಆರಂಭಗೊಳಿಸಿದರೆಂದೂ ಬೆಳೆಸಿದರೆಂದೂ ಅಭಿಪ್ರಾಯಪಡುತ್ತಾರೆ. ಕೆಲವು ಸಿದ್ಧಾಂತಗಳನ್ನೇನೋ ಅವರೇ ಪ್ರಚಾರಕ್ಕೆ ತಂದುದುಂಟು. ಅವುಗಳನ್ನವರು ವಂಶಪಾರಂಪರ್ಯವಾಗಿ ರಕ್ಷಿಸಿಕೊಂಡುಬರುತ್ತಿದ್ದರು– 'ಯಥೈಷಾ ವಿದ್ಯಾ ನಾಸ್ಮಾತ್ಕುಲಾದ್ಗತಾ' ಎಂದ ಹಾಗೆ. ಆದರೆ ಇತರ ಪ್ರಮುಖವಾದ ತತ್ತ್ವಗಳನ್ನು ಯಾಜ್ಞವಲ್ಕ್ಯ, ಉದ್ದಾಲಕ ಆರುಣಿ ಮುಂತಾದ ಬ್ರಹ್ಮವಾದಿಗಳು ಅವರಿಗೆ ಉಪದೇಶಿಸಿದರು. ಜನಕರಾಜನಿಗೆ ಅವರು ಇವನ್ನು ಉಪದೇಶಮಾಡಿದರು. ಕಾಶಿಯ

ಅಜಾತಶತ್ರು ಆತ್ಮಸ್ವರೂಪವನ್ನು ಬಾಲಕಿಗೆ ಉಪದೇಶಿಸಿದನು. ಬ್ರಹ್ಮವಿದ್ಯೆಯಲ್ಲಿ ಕ್ಷತ್ರಿಯರೂ ಬಹಳ ಆಸಕ್ತಿ ಹೊಂದಿದ್ದರೆಂಬುದು ಸ್ಪಷ್ಟವಾಗಿದೆ. ನಾಲ್ಕು ವರ್ಣಗಳ ಜೊತೆಗೆ ನಾಲ್ಕು ಆಶ್ರಮಗಳೂ ಉಪನಿಷತ್ತುಗಳ ಕಾಲಕ್ಕೆ ರೂಢಿಗೆ ಬಂದಿದ್ದವು. ಮೊದಲು ಆಶ್ರಮಗಳು ಬ್ರಹ್ಮಚರ್ಯ, ಗಾರ್ಹಸ್ಥ್ಯ ಮತ್ತು ವಾನಪ್ರಸ್ಥ ಎಂದು ಮೂರಾಗಿದ್ದವೆಂದು ತೋರುತ್ತದೆ. ಆಚಾರ್ಯಕುಲದಲ್ಲಿ ಬ್ರಹ್ಮಚಾರಿಗಳು ವಾಸಮಾಡುತ್ತಾ ಗುರುಶುಶ್ರೂಷೆ ಮಾಡುತ್ತಿದ್ದರು. ಬ್ರಹ್ಮವಿದ್ಯೆಯನ್ನು ಉಪದೇಶಿಸುವ ಆಚಾರ್ಯನಿಗೆ ಬಹಳ ಮುಖ್ಯವಾದ ಸ್ಥಾನವಿತ್ತು– 'ಆಚಾರ್ಯಸ್ತು ತೇ ಗತಿಂ ವಕ್ತಾ ಆಚಾರ್ಯಾದ್ಧ್ಯೆವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತಿ'. ಛಾಂದೋಗ್ಯ ಉಪನಿಷತ್ತಿನಲ್ಲಿ (7-1) ವಿವಿಧವಾದ ವಿದ್ಯೆಗಳ ಉಲ್ಲೇಖವಿದೆ. ಪಿತ್ರ್ಯಂ, ರಾಶಿಂ, ದೈವಂ, ನಿಧಿಂ, ವಾಕೋ ವಾಕ್ಯಂ, ಏಕಾಯನಂ, ದೇವವಿದ್ಯಾ, ಬ್ರಹ್ಮವಿದ್ಯಾ, ಭೂತವಿದ್ಯಾ, ಕ್ಷತ್ರಿಯವಿದ್ಯಾ ನಕ್ಷತ್ರವಿದ್ಯಾ, ಸರ್ಪದೇವಜನವಿದ್ಯಾ ಮುಂತಾದುವುಗಳನ್ನು ಹೇಳಿದೆ. ಇವುಗಳು ಕೇವಲ ಕಾಲ್ಪನಿಕವಾಗಿರದೆ ಯಥಾರ್ಥವಾಗಿ ಕಲಿಯಲ್ಪಡತಕ್ಕ ವಿದ್ಯೆಗಳಾಗಿದ್ದವು. ವೇದಾಭ್ಯಾಸಕ್ಕೆ ಪ್ರಾಮುಖ್ಯವಿತ್ತು. ವೇದಗಳನ್ನು ಕಂಠಪಾಠ ಮಾಡುತ್ತಿದ್ದುದಲ್ಲದೆ ಅದನ್ನು ಆಗಾಗ ಹೇಳುತ್ತಿದ್ದರು. ಇದಕ್ಕೇ ವೇದಾನುವಚನವೆಂಬ ಹೆಸರು ರೂಢಿಯಲ್ಲಿತ್ತು. ಎಲ್ಲ ವೇದಗಳನ್ನೂ ತಪ್ಪಿಲ್ಲದೆ ಹೇಳುತ್ತಿದ್ದವರಿಗೆ 'ಅನೂಚಾನ'ರೆಂಬ ಹೆಸರಿತ್ತು. ಬೃಹದಾರಣ್ಯಕದಲ್ಲಿ 'ಭಿಕ್ಷಾಚರ್ಯಂ ಚರಂತಿ' ಎಂಬುವುದರಿಂದ ಸೂಚಿತವಾದ ಸಂನ್ಯಾಸಾಶ್ರಮ ಪ್ರಾಯಃ ಉಪನಿಷತ್ತಿನ ಕಾಲದಲ್ಲಿ ರೂಢಿಗೆ ಬಂದಿರಬೇಕು. ಸಂನ್ಯಾಸವೆಂಬ ಶಬ್ದ ಋಗ್ವೇದದಲ್ಲಾಗಲೀ, ಬ್ರಾಹ್ಮಣಗಳಲ್ಲಾಗಲಿ ದೊರಕುವುದಿಲ್ಲ. ಉಪನಿಷತ್ತುಗಳಲ್ಲಿ ಸ್ತ್ರೀಯರು ಅಧ್ಯಾತ್ಮವಿಚಾರಕ್ಕೆ ಇಳಿಯಲು ಅವಕಾಶವಿತ್ತು. ಸುಲಭಾ, ಗಾರ್ಗಿ ಮುಂತಾದ ಬ್ರಹ್ಮವಾದಿನಿಗಳು ಆ ಕಾಲದಲ್ಲಿದ್ದರು.

ಪರಿಶುದ್ಧವಾದ ವ್ಯಕ್ತಿಜೀವನಕ್ಕೆ ಬಹಳ ಗೌರವವಿತ್ತು. ಪಾಪದೂರವಾದ ಜೀವನವನ್ನು ನಡೆಸಬೇಕೆಂಬುದು ಜನರ ಪರಮಾದರ್ಶವಾಗಿತ್ತು. ಛಾಂದೋಗ್ಯದಲ್ಲಿ ಪಂಚಮಹಾಪಾತಕಗಳ ಉಲ್ಲೇಖವಿದೆ. ಸುರಾಪಾನವೂ ಪಂಚಪಾತಕಗಳಲ್ಲಿ ಒಂದೆಂದು ಇಲ್ಲಿ ಉದಾಹರಿಸಿದೆ. ಅನೇಕ ಪತ್ನಿಯರನ್ನು ವಿವಾಹವಾಗುವ ಪದ್ಧತಿಯೂ ಸಮಾಜದಲ್ಲಿತ್ತು. ದ್ಯೂತಪಣಬಂಧಾದಿಗಳು ರೂಢಿಯಲ್ಲಿದ್ದವು. ಸತ್ಯಕಾಮ ಜಾಬಾಲನ ಕಥೆಯಿಂದ ಗೊತ್ತಾಗುವಂತೆ ಜನರಲ್ಲಿ ಸತ್ಯವಾದಿತ್ವಕ್ಕೆ ಬಹಳ ಬೆಲೆಯಿತ್ತು. ಜನರು ಸತ್ಯಸಂಧರೆಂಬ ಅಂಶವನ್ನು ಕ್ರಿ. ಪೂ. 300ರಲ್ಲಿ ಅಲೆಕ್ಸಾಂಡರನ ಜೊತೆಯಲ್ಲಿ ಬಂದಿದ್ದ ಇತಿಹಾಸಕಾರರೂ ಕ್ರಿ. ಶ. 900ರ ಕಾಲದ ಅರಬ್ಬಿ ಪ್ರಯಾಣಿಕರೂ, ಕ್ರಿ. ಶ. 1400ರ ಕಾಲದ ಮಾರ್ಕೋಪೋಲೋ ಮುಂತಾದವರೂ ಹೇಳಿರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ಜನರು ನಾಗರಿಕತೆಯಲ್ಲಿ ಮುಂದುವರಿದಿದ್ದರು. ಅನೇಕ ಲೋಹಗಳ ಪರಿಚಯ ಅವರಿಗಿತ್ತು. 'ಯಥಾ ಲವಣೇನ ಸುವರ್ಣಂ ಸಂದಧ್ಯಾತ್' ಮುಂತಾದ ಮಾತುಗಳು ಅಲ್ಲಲ್ಲಿ ಬರುತ್ತವೆ. ಯಜ್ಞಸಂಸ್ಥೆ ಇನ್ನೂ ಪ್ರಚಾರದಲ್ಲಿತ್ತು. ಪ್ರತಿಯೊಬ್ಬ ಗೃಹಸ್ಥನೂ ಅಗ್ನಿಹೋತ್ರಾದಿಗಳನ್ನು ಇಟ್ಟುಕೊಂಡಿದ್ದನು. 'ನ ಅನಾಹಿತಾಗ್ನಿಃ' ಎಂಬುವು ಇವುಗಳನ್ನು ಸೂಚಿಸುತ್ತವೆ. ಯಾಗಾದ್ಯನುಷ್ಠಾನಗಳೂ ವೇದಾನುವಚನಗಳೂ ಸ್ವರ್ಗಪ್ರಾಪ್ತಿಗೋಸ್ಕರವೇ ಆಗಿರದೆ ಬ್ರಹ್ಮಪ್ರಾಪ್ತಿಯನ್ನು ಗುರಿಯಾಗಿ ಉದ್ದೇಶಿಸಿದ್ದವು. 'ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽ ನಾಶಕೇನ' ಎಂಬ ಬೃಹದಾರಣ್ಯಕದ ನುಡಿ ಇದನ್ನು

ಸಮರ್ಥಿಸುತ್ತದೆ. ಯಾಗಾದ್ಯನುಷ್ಠಾನಗಳಿಂದ ಪಡೆಯುವ ಸ್ವರ್ಗಫಲಾದಿಗಳು ಅಲ್ಪವೂ ಅಸ್ಥಿರವೂ ಆದಕಾರಣ ಅನಂತವೂ ಅಕ್ಷಯವೂ ಆದ ಬ್ರಹ್ಮಪ್ರಾಪ್ತಿಯೇ ಜನರ ಧ್ಯೇಯವಾಗಬೇಕೆಂದು ಉಪನಿಷತ್ತುಗಳು ಬೋಧಿಸಿದವು–'ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾಃ ಅಷ್ಟಾದಶೋಕ್ತಮವರಂ ಯೇಷು ಕರ್ಮ |' ಎಂದೂ 'ತದ್ವಿಜ್ಞಾನಾರ್ಥಂ ಸುಗುರುಮೇ ವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ||' ಎಂದು. ವಿದ್ಯೆ ಪರಾ, ಅಪರಾ ಎಂದು ಎರಡು ; ಸ್ವರ್ಗಕ್ಕೆ ದಾರಿಯಾದ ಋಗ್ವೇದಾದಿಗಳೂ ಯಾಗಾನುಷ್ಠಾನಗಳೂ ಅಪಾರವಿದ್ಯೆ, ಅಕ್ಷಯವಾದ ಬ್ರಹ್ಮವನ್ನು ಸಾಧಿಸುವ ವಿದ್ಯೆ ಪರಾವಿದ್ಯೆ, ಬ್ರಹ್ಮವಿದ್ಯೆ ಎಂದು ಉಪನಿಷತ್ತು ಸಾರಿತು–'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'. ತಪಸ್ಸು, ಬ್ರಹ್ಮಚರ್ಯಗಳಿಗೆ ಪ್ರಾಧಾನ್ಯವಿದ್ದಿತು. ಅನಶನವ್ರತ ಮನಶ್ಶುದ್ಧಿಗೂ ಕಾಯಶುದ್ಧಿಗೂ ಸಾಧಕವೆಂದು ತಿಳಿಯಲಾಗಿತ್ತು. ಇದನ್ನು ಮುಂದೆ ಜೈನಧರ್ಮ ಹೆಚ್ಚಾಗಿ ಆಚರಣೆಗೆ ತಂದಿತು.

ಜನತೆಯಲ್ಲಿ ನಿರಾಶಾವಾದಕ್ಕೆ ಆಸ್ಪದವಿರಲಿಲ್ಲ. ಸಮಾಜಜೀವನ ತಕ್ಕಮಟ್ಟಿಗೆ ಸುಖಮಯವಾಗಿಯೇ ಇತ್ತು. ಮಾನವನ ಅತೃಪ್ತಿ ಹಾಗೂ ಅಸುಖಗಳಿಗೆ ಮತ್ತೊಬ್ಬ ಮಾನವನು ಹೊಣೆಗಾರನೆಂದು ಯಾರೂ ತಿಳಿದಿರಲಿಲ್ಲ. ಒಬ್ಬನು ಮತ್ತೊಬ್ಬನನ್ನು ಹಿಂಸೆಗೊಳಪಡಿಸುತ್ತಿರಲಿಲ್ಲ. ಜನ್ಮ, ಮೃತ್ಯು, ಜರಾ, ವ್ಯಾಧಿ, ದುಃಖ ಮುಂತಾದವುಗಳಿಂದ ತೋರಿದ ದೋಷದರ್ಶನ ವೈರಾಗ್ಯಕ್ಕೆ ಕಾರಣವಾಗಿತ್ತು. ಬುದ್ಧನು ವೈರಾಗ್ಯವನ್ನವಲಂಬಿಸಿದುದಕ್ಕೂ ಈ ದೋಷ ದರ್ಶನವೇ ಕಾರಣ. ಐಹಿಕವಾದ ಸುಖ ಅಲ್ಪವಾದ ಕಾರಣ ಮಹತ್ತಮವಾದ ಬ್ರಹ್ಮಾನಂದವನ್ನು ಪಡೆಯುವುದು ಮಾನವನ ಗುರಿಯಾಗಬೇಕೆಂದು ಉಪನಿಷತ್ತು ಸಾರಿತು. 'ಅಮೃತತ್ವಸ್ಯ ತು ನಾಶಾಸ್ತಿವಿತ್ತೇನ' 'ನ ವಿತ್ತೇನ ತರ್ಪಣೀಯೋ ಮನುಷ್ಯಃ' ಎಂದು ಮತ್ತೆ ಮತ್ತೆ ಸಾರಿಯುವ ರೀತಿಯಲ್ಲಿ ಕೇವಲ ಐಹಿಕ ಸಂಪದಭ್ಯುದಯಗಳಿಂದ ಪರಮ ಪುರುಷಾರ್ಥದ ಪ್ರಾಪ್ತಿಯಾಗದ ಕಾರಣ ಇದನ್ನು ತ್ಯಾಗಮಾಡಬೇಕೆಂದು ಘೋಷಿಸಿತು 'ಅನತಿ ದೀರ್ಘವಾದ ಜೀವಿತ'ದಲ್ಲಿಯೇ ರಮಿಸಬಾರದೆಂದು ಎಚ್ಚರಿಕೆ ನೀಡಿತು. ಪ್ರೇಯವನ್ನು ತ್ಯಜಿಸಿ ಶ್ರೇಯವನ್ನು ಸಾಧಿಸಬೇಕೆಂದು ಉಪದೇಶಿಸಿತು. ಆದರೆ ಐಹಿಕವನ್ನಿದು ತೆಗಳದೆ ಅದರ ಅಡಿಮಣೆಯ ಮೇಲೆ ಪಾರಮಾರ್ಥಿಕವನ್ನು ಸಾಧಿಸಬೇಕೆಂದು ಉದ್ಘೋಷಿಸಿತು.

ಈ ಲೋಕದಲ್ಲಿ ಜನ ವಿವಿಧವಾಗಿ ವಿಚಿತ್ರವಾಗಿ ಜೀವನವನ್ನು ನಡೆಸಿಕೊಂಡು ಬರುತ್ತಿರುವುದಕ್ಕೆ ಅವರವರ 'ಕರ್ಮ' ಕಾರಣವೆಂಬುದು ಉಪನಿಷತ್ತಿನ ಸಿದ್ಧಾಂತ. ಛಾಂದೋಗ್ಯ ಹಾಗೂ ಬೃಹದಾರಣ್ಯಕಗಳಲ್ಲಿ ಕರ್ಮಸಿದ್ಧಾಂತದ ವಿಸ್ತೃತ ವಿವೇಚನೆ ಇದೆ. 'ಪುಣ್ಯಃ ಪುಣ್ಯೇನ ಭವತಿ ಪಾಪಃ ಪಾಪೇನ' ಎಂಬುದು ಇದರ ಸಿದ್ಧಾಂತ. ಪುನರ್ಜನ್ಮದಲ್ಲಿ ಪೂರ್ಣವಾದ ನಂಬಿಕೆ ಇತ್ತು. ಮೃತರು 'ದೇವಯಾನ' ಮತ್ತು 'ಪಿತೃಯಾನ'ದ ಮಾರ್ಗವಾಗಿ ಸಾರುವರೆಂದೂ ದೇವಯಾನದಲ್ಲಿ ಸಾರಿದವನು ಪುನರ್ಜನ್ಮ ದೂರನಾಗಿ ಬ್ರಹ್ಮವನ್ನು ಸೇರುವನೆಂದು ಹೇಳುತ್ತದೆ. ಹೀಗೆ ಉಪನಿಷತ್ತುಗಳ ಕಾಲದಲ್ಲಿ ಜನತೆಯ ಆಧ್ಯಾತ್ಮಿಕ ಜೀವನ ಉನ್ನತ ಮಟ್ಟವನ್ನೇರಿತ್ತು.

ಮೇಲೆ ಹೇಳಿದ ಉಪನಿಷತ್ತುಗಳಲ್ಲಿ ಬರುವ ವಿಚಾರಗಳನ್ನು ಈಗ ವಿವೇಚಿಸೋಣ.

### ಈಶಾವಾಸ್ಯೋಪನಿಷತ್

ಇದನ್ನು ಈಶೋಪನಿಷತ್ತು ಎಂದೂ ಕರೆಯುತ್ತಾರೆ. ಶುಕ್ಲ ಯಜುಸ್ಸಂಹಿತೆಯ

ನಲವತ್ತನೆಯ ಅಧ್ಯಾಯ ಇದು. ಆ ಸಂಹಿತೆಯ ಖಿಲಭಾಗವೆಂದು ಇದನ್ನು ಎಣಿಸುತ್ತಾರೆ. ಇದು ಬಹಳ ಪ್ರಾಚೀನವಾದ ಉಪನಿಷತ್ತು. ಮೊದಲಿನ ಮಂತ್ರವು ಆರಂಭವಾಗುವ 'ಈಶಾವಾಸ್ಯಮಿದಂ ಸರ್ವಂ' ಎಂಬ ಮಾತುಗಳಿಂದ ಇದಕ್ಕೆ ಈ ಹೆಸರು ಬಂದಿದೆ. ಇದರಲ್ಲಿ ಹದಿನೆಂಟು ಮಂತ್ರಗಳಿವೆ. ಗೀತೆಯ ಹದಿನೆಂಟು ಅಧ್ಯಾಯಗಳಿಗೆ ಈ ಮಂತ್ರ ಸಂಖ್ಯೆ ಸಂವಾದಿಯಾಗಿದೆಯೆಂದು ವಿಮರ್ಶಕರು ಭಾವಿಸುತ್ತಾರೆ. ವೇದಾಂತದರ್ಶನದ ಸಾರಸರ್ವಸ್ವವನ್ನೂ ಈ ಉಪನಿಷತ್ತು ವಿವೇಚಿಸುತ್ತದೆ. ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳ ನಿರೂಪಣೆ ಇಲ್ಲಿದೆ. ಈ ಉಪನಿಷತ್ತಿಗೆ ಆಚಾರ್ಯರುಗಳ ಭಾಷ್ಯಗಳಾಗಿವೆ. 'ತೇನ ತ್ಯಕ್ತೇನ ಭುಂಜೀಥಾಃ' ಎಂಬ ಪ್ರಥಮ ಮಂತ್ರದ ವಾಕ್ಯಕ್ಕೆ ಸಂನ್ಯಾಸಪರವಾಗಿ ಶಂಕರಾಚಾರ್ಯರು ಅರ್ಥ ಮಾಡಿದ್ದಾರೆ. ನಿಷ್ಠೆಗಳು ಎರಡು–ಜ್ಞಾನನಿಷ್ಠೆ ಮತ್ತು ಕರ್ಮನಿಷ್ಠೆ ಎಂದು. ಉತ್ತಮಾಧಿಕಾರಿಯಾದವನು ಸಂನ್ಯಾಸದಿಂದ ಜ್ಞಾನನಿಷ್ಠನಾಗುವನು. ಅಶಕ್ತಾಧಿಕಾರಿಗಳಿಗೆ ಕರ್ಮನಿಷ್ಠೆಯನ್ನು ಎರಡನೆಯ ಮಂತ್ರದಲ್ಲಿ 'ಕುರ್ವನ್ನೇವೇಹ ಕರ್ಮಾಣಿ' ಎಂಬುದರಿಂದ ಹೇಳಿದೆ–ಎಂದು ಅವರು ವಿವರಿಸುತ್ತಾರೆ. ಇತರ ದಾರ್ಶನಿಕರೂ ಸಹ ಅನಾಸಕ್ತಿಯನ್ನೂ, ವೈರಾಗ್ಯಪರವಾದ ಜೀವನವನ್ನೂ ಈ ಮಂತ್ರಗಳ ಅರ್ಥವೆಂದು ವಿವರಿಸುತ್ತಾರೆ. ಬ್ರಹ್ಮತತ್ತ್ವಸ್ವರೂಪವನ್ನೂ, ಅದರ ವಿಚಿತ್ರ ಶಕ್ತಿಯೋಗವನ್ನೂ ಪರಸ್ಪರ ವಿರುದ್ಧವಾದ ವಿಶೇಷಣಗಳಿಂದ ಈ ಉಪನಿಷತ್ತಿನಲ್ಲಿ 'ಅನೇಜದೇಕಂ ಮನಸೋಜವೀಯಃ' ಮುಂತಾದ ಮಾತುಗಳಿಂದ ವರ್ಣಿಸಿದೆ.

ಏಳನೆಯ ಮಂತ್ರದಲ್ಲಿ 'ಸರ್ವಭೂತಗಳೂ ಆತ್ಮವೇ' ಎಂದು ತಿಳಿದವನಿಗೆ ಶೋಕ ಮೋಹಾದಿಗಳು ಸಂಭವಿಸುವುದಿಲ್ಲವೆಂದು ಹೇಳಿದೆ. ವಿದ್ಯೆ ಮತ್ತು ಅವಿದ್ಯೆಗಳ ಸಮುಚ್ಚಯದಿಂದ ಮೃತ್ಯುತರಣವಾಗಿ ಅಮೃತಪ್ರಾಪ್ತಿಯಾಗುವುದೆಂದು

'ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ |
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಅಮೃತಮಶ್ನುತೇ ||

ಎಂದು ಘೋಷಿಸಿದೆ. ಇಲ್ಲಿ ಬರುವ 'ಅವಿದ್ಯೆ' ಎಂಬ ಶಬ್ದಕ್ಕೆ 'ವಿದ್ಯೇತರತ್ ಕರ್ಮ'–ದೇವತಾ ಜ್ಞಾನಾಂತರ್ಗತವಾದ ಕರ್ಮ ಎಂಬ ಅರ್ಥವನ್ನೇ ಶಂಕರರೂ ಹೇಳುವುದು ಗಮನಾರ್ಹವಾಗಿದೆ. ಇಲ್ಲಿ ಈ ಶಬ್ದ ಮಾಯೆ, ಅಜ್ಞಾನ ಎಂಬ ಅರ್ಥ ಹೊಂದಿಲ್ಲ. 12ನೇ ಮಂತ್ರದಲ್ಲಿ ಬರುವ ಸಂಭೂತಿ ಮತ್ತು ಅಸಂಭೂತಿ ಎಂಬ ಶಬ್ದಗಳಿಗೆ ವಿವಿಧವಾಗಿ ವಿವರಣೆ ಕೊಡಲಾಗಿದೆ. ವ್ಯಾಕೃತೋಪಾಸನೆ, ಅವ್ಯಾಕೃತೋಪಾಸನೆ ಎಂದು ಶಂಕರರೂ, ಸೃಷ್ಟಿಪ್ರಳಯಪರವಾಗಿ ಮಧ್ವಾಚಾರ್ಯರೂ ಅರ್ಥ ಮಾಡಿದ್ದಾರೆ. ಈ ಉಪನಿಷತ್ತಿನ ಹದಿನೆಂಟನೇ ಮಂತ್ರದಲ್ಲಿ ಮೋಕ್ಷೋಪಾಯ ನಿರೂಪಣೆ ಇದೆ. ಭಗವಂತನೇ ಉಪೇಯನೂ ಉಪಾಯನೂ ಆಗಿದ್ದಾನೆಂದು ಇದನ್ನು ವಿವರಿಸಲಾಗಿದೆ.

ಕೇವಲ ಹದಿನೆಂಟು ಮಂತ್ರಗಳನ್ನೊಳಗೊಂಡಿರುವ ಈ ಉಪನಿಷತ್ತು ಗಾತ್ರದಲ್ಲಿ ಚಿಕ್ಕದಾದರೂ ಮಹತ್ತ್ವದಲ್ಲಿ ಬಹಳ ದೊಡ್ಡದಾಗಿದೆ.

**ಕೇನೋಪನಿಷತ್ತು**

ಸಾಮವೇದಕ್ಕೆ ಸೇರಿದುದು ಈ ಉಪನಿಷತ್ತು. ಇದಕ್ಕೆ 'ಕೇನ'ವೆಂಬ ಹೆಸರು ಇದರ ಮೊದಲನೆಯ ಮಾತಿನಿಂದ ಬಂದಿದೆ. ತಲವಕಾರ ಶಾಖೆಗೆ ಇದು ಸೇರಿರುವುದರಿಂದ ಇದಕ್ಕೆ ತಲವಕಾರೋಪನಿಷತ್ತು ಎಂದೂ ಹೆಸರಿದೆ. ಇದರಲ್ಲಿ ನಾಲ್ಕು ಖಂಡಗಳಿವೆ. ಮೊದಲೆರಡು

ಖಂಡಗಳು ಪದ್ಯಮಯವಾಗಿಯೂ ಕೊನೆಯ ಎರಡು ಖಂಡಗಳು ಗದ್ಯಮಯವಾಗಿಯೂ ಇವೆ. ಇದರಲ್ಲಿ ಒಟ್ಟು 34 ಮಂತ್ರಗಳಿವೆ. 'ಮನಸ್ಸನ್ನು ಪ್ರೇರಿಸುವವರಾರು ? ಪ್ರಾಣಕ್ಕೆ ಪ್ರಥಮ ಪ್ರವೃತ್ತಿಯನ್ನೀಯುವವರಾರು ?'–ಎಂಬ ಪ್ರಶ್ನೆಗಳಿಂದ ಇದು ಆರಂಭವಾಗುತ್ತದೆ. ಬಹಳ ಚಿಕ್ಕ ಚಿಕ್ಕ ಮಂತ್ರಗಳಿಂದ ಬ್ರಹ್ಮ ಸ್ವರೂಪವನ್ನು ಬಹಳ ಮಾರ್ಮಿಕವಾಗಿ ಇದು ವರ್ಣಿಸುತ್ತದೆ: 'ಯಾವುದನ್ನು ಕಣ್ಣಿನಿಂದ ಕಾಣಲಾಗುವುದಿಲ್ಲವೋ ಯಾವುದರಿಂದ ಕಣ್ಣುಗಳನ್ನು ಕಾಣುವನೋ ಅದು ಬ್ರಹ್ಮವೆಂದು ತಿಳಿ.' ಇಂಥ ಸೂಕ್ಷ್ಮವಾದ ವಾಕ್ಯಗಳಿಂದ ಬಹಳ ಪ್ರಭಾವಶಾಲಿಯಾಗಿ ವರ್ಣಿಸಿದೆ ಬ್ರಹ್ಮಸ್ವರೂಪವನ್ನು. ಮೂರನೆಯ ಖಂಡದಲ್ಲಿ ಆಖ್ಯಾನವೊಂದು ಬಂದಿದೆ. ದೇವತೆಗಳಿಗೆ ವಿಜಯವನ್ನು ಬ್ರಹ್ಮ ಉಂಟುಮಾಡಿತು. ಆ ದೇವತೆಗಳು ಆ ವಿಜಯ ಬ್ರಹ್ಮವಸ್ತುವಿನದೆಂದು ತಿಳಿಯಲಿಲ್ಲ. ತಮ್ಮದೇ ಮಹಿಮೆ ಅದೆಂದು ಅವರು ಭಾವಿಸಿದರು. ಆಗ ಅವರ ಮುಂದೆ ಬ್ರಹ್ಮ ಯಕ್ಷರೂಪದಲ್ಲಿ ಕಾಣಿಸಿಕೊಂಡಿತು. ಅಗ್ನಿ ವಾಯು ಇಂದ್ರರು ಆ ಯಕ್ಷವನ್ನರಿಯಲು ಯತ್ನಿಸಿದರು. ಯಕ್ಷನು ಮುಂದಿಟ್ಟ ಒಂದು ಹುಲ್ಲುಕಡ್ಡಿಯನ್ನು ಅಗ್ನಿ ದಹಿಸಲಾಗಲಿಲ್ಲ; ವಾಯು ಚಲಿಸಲಾಗಲಿಲ್ಲ. ಇಂದ್ರನು ಸಮೀಪಿಸಿದಾಗ ಆ ಯಕ್ಷ ಅಂತರ್ಧಾನವಾಯಿತು. ಆಗ ಬಹುಶೋಭಮಾನಳಾದ ಹೈಮವತೀ ಉಮಾ ಆಕಾಶದಲ್ಲಿ ತಲೆದೋರಿ ಇಂದ್ರನಿಗೆ ಆ ಯಕ್ಷನೇ ಬ್ರಹ್ಮವೆಂದು ತಿಳಿಸಿದಳು. ಈ ಆಖ್ಯಾನ ಮೂರನೇ ಮತ್ತು ನಾಲ್ಕನೇ ಖಂಡದಲ್ಲಿವೆ.

ಈ ಉಪನಿಷತ್ತಿನಲ್ಲಿ ಇಂದ್ರನು ಎಲ್ಲ ದೇವತೆಗಳಿಗಿಂತ ಶ್ರೇಷ್ಠನಾಗಿದ್ದಾನೆ. ಆದರೆ ಅವನೇ ಪರಬ್ರಹ್ಮವಲ್ಲ. ಇಲ್ಲಿ ಬರುವ ಉಮಾದೇವಿಯ ಉಲ್ಲೇಖ ಗಮನಾರ್ಹವಾಗಿದೆ.

### ಕಠೋಪನಿಷತ್ತು

ಇದು ಕೃಷ್ಣಯಜುರ್ವೇದದ ಕಠಶಾಖೆಗೆ ಸೇರಿದೆ. 'ಸಹನಾವವತು' ಎಂಬುದು ಇದರ ಶಾಂತಿಮಂತ್ರವಾಗಿದೆ. ಇದರಲ್ಲಿ ಎರಡು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದಲ್ಲಿಯೂ ಮೂರು ಮೂರು ವಲ್ಲಿಗಳಿವೆ. ಮೊದಲನೆಯ ವಲ್ಲಿಯಲ್ಲಿ ನಚಿಕೇತಸ್ಸಿನ ಕಥೆಯನ್ನು ನಿರೂಪಿಸಿದೆ. ಕಠಸಂಹಿತೆಯಲ್ಲಿ ಬಂದಿರುವ ಕಥೆಯ ವಿಸ್ತೃತರೂಪವಿದು. ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಬೇಕಾದ ಯಾಗವೊಂದನ್ನು ವಾಜಶ್ರವಸನು ಆರಂಭಿಸಿದನು. ಯಾಗದಲ್ಲಿ ದಾನವಾಗಿ ಅವನು ಕೊಡಲಿದ್ದ ಪಶುಗಳೆಲ್ಲ ಮುದಿಯಾಗಿ ನಿರುಪಯುಕ್ತವಾಗಿದ್ದವು. ಅವನ ಮಗನಾದ ನಚಿಕೇತನು 'ಕಸ್ಮೈಮಾಂ ದಾಸ್ಯಸಿ' ನನ್ನನ್ನು ಯಾರಿಗೆ ಕೊಡುತ್ತೀಯೆಂದು ಕೇಳಿದನು. ಕುಪಿತನಾದ ತಂದೆ 'ಮೃತ್ಯವೇ ತ್ವಾ ದದಾಮಿ' ಎಂದುಬಿಟ್ಟ. ನಚಿಕೇತನು ಯಮನಲ್ಲಿಗೆ ಹೋಗಿಬಿಟ್ಟ. ಆಗ ಯಮ ಅಲ್ಲಿರಲಿಲ್ಲ. ಅವನು ಬರುವವರೆಗೆ ಮೂರು ರಾತ್ರಿಗಳು ಉಪವಾಸವಿದ್ದ ಇವನಿಗೆ ಯಮದೇವ ಮೂರು ವರಗಳನ್ನು ಕೊಡುತ್ತಾನೆ. ಅವುಗಳಲ್ಲಿ ಮೊದಲ ವರದಿಂದ ತಂದೆಯು ಪ್ರಸನ್ನನಾಗಲೆಂದೂ ಎರಡನೆಯ ವರದಿಂದ ಸ್ವರ್ಗಪ್ರಾಪಕವಾದ ಅಗ್ನಿವಿದ್ಯೆಯನ್ನೂ ಬೇಡಿ, ನಚಿಕೇತನು ಮೂರನೆಯ ವರದಿಂದ ಮರಣೋತ್ತರ ಕಾಲದಲ್ಲಿ ಆತ್ಮನ ಗತಿಯನ್ನು ಕೇಳಿದನು. ಬ್ರಹ್ಮವಿದ್ಯೆಯನ್ನು ಬೇಡಿದ ನಚಿಕೇತನಿಗೆ ಯಮದೇವ ಅನೇಕ ಪ್ರಲೋಭನೆಗಳನ್ನು ಒಡ್ಡಿದರೂ ಅವುಗಳೊಂದನ್ನೂ ಬಯಸದೆ ಅವನು ಬ್ರಹ್ಮವಿದ್ಯೆಯನ್ನೇ ಉಪದೇಶಿಸಬೇಕೆಂದು ಬೇಡುವ ರೋಮಾಂಚಕಾರಿಯಾದ ಸನ್ನಿವೇಶದ ನಿರೂಪಣೆ ಇಲ್ಲಿದೆ. ಎರಡನೆಯ ವಲ್ಲಿಯಲ್ಲಿ ಪ್ರಸನ್ನನಾದ ಯಮದೇವ ನಚಿಕೇತನನ್ನು ಅಭಿನಂದಿಸಿ ಪ್ರೇಯ ಮತ್ತು ಶ್ರೇಯಗಳ ವಿಚಾರವನ್ನು ತಿಳಿಸುತ್ತಾನೆ. ಸಂಗ್ರಹವಾಗಿ

ಬ್ರಹ್ಮಸ್ವರೂಪವನ್ನು ಪ್ರಣವದಿಂದ ಯಮ ಉಪದೇಶಿಸುತ್ತಾನೆ–'ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್' ಎಂದು. ಭಗವತ್ ಸ್ವರೂಪವನ್ನೂ ಆತ್ಮಸ್ವರೂಪವನ್ನೂ ವಿವರಿಸುವ ಉತ್ತಮವಾದ ಮಂತ್ರಗಳು ಈ ವಲ್ಲಿಯಲ್ಲಿವೆ. "ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ ನ ಬಹುನಾ ಶ್ರುತೇನ | ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ||" ಎಂದು ಹೇಳಿರುವುದು ಇಲ್ಲಿಯೇ. ಮೂರನೆಯ ವಲ್ಲಿಯಲ್ಲಿ 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ' ಎಂದು ಆರಂಭಿಸಿ ಆತ್ಮಪರಮಾತ್ಮರು ಹೃದಯಗುಹೆಯಲ್ಲಿದ್ದಾರೆಂದು ಹೇಳಿ ಪರಮಾತ್ಮಪ್ರಾಪ್ತಿಗೆ ಇಂದ್ರಿಯಗಳ ಸಂಯಮ ಮುಖ್ಯವೆಂದು ಹೇಳಿದೆ–'ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ | ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ||' ಎಂದು. ನಾಚಿಕೇತೋಪಾಖ್ಯಾನವನ್ನು ಹೇಳಿದರೂ ಕೇಳಿದರೂ ಬ್ರಹ್ಮಲೋಕ ಪ್ರಾಪ್ತಿಯೆಂಬ ಫಲಶ್ರುತಿ ಇಲ್ಲಿರುವುದನ್ನು ಕಾಣುತ್ತೇವೆ. ಎರಡನೇ ಅಧ್ಯಾಯದ ಪ್ರಥಮ ವಲ್ಲಿಯಲ್ಲಿ ಧೀರನಾದವನು ಆತ್ಮವನ್ನು ಕಾಣುವನೆಂದು ಹೇಳಿದೆ. 'ಮೃತ್ಯೋಃ ಸಮ್ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ' ಎಂಬ ಅದ್ವೈತದ ಉಪದೇಶ ಇಲ್ಲಿದೆ. ಎರಡನೆಯ ವಲ್ಲಿಯಲ್ಲಿ ಏಕನಾದ ಪರಮಾತ್ಮನು ಅನೇಕನಾಗಿ ಕಾಣುತ್ತಿದ್ದಾನೆಂಬುವುದನ್ನು 'ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಭೂವ' ಎಂದು ತಿಳಿಸಿ ಸಮಸ್ತಕ್ಕೂ ಅವನೇ ಏಕೈಕ ಕಾರಣನೆಂದು ತಿಳಿಸಿದೆ. ನಿತ್ಯರಲ್ಲಿ ನಿತ್ಯನೂ ಚೇತನರಲ್ಲಿ ಚೇತನನೂ ಆದವನವನು. ಯಾವ ಧೀರರು ಆತ್ಮಸ್ಥನಾದ ಅವನನ್ನು ಕಾಣುವರೋ ಅವರಿಗೇ ಸುಖ ಹಾಗೂ ಶಾಶ್ವತವಾದ ಶಾಂತಿ ; ಇತರರಿಗಲ್ಲ. ಅವನಿಂದ ಮತ್ತೆಲ್ಲ ತೇಜೋರಾಶಿಗಳು ಬೆಳಗುತ್ತವೆ, ಅವನನ್ನು ಯಾವುದೂ ಬೆಳಗಲಾರದು ಎಂಬುದನ್ನು ಬಹಳ ಸುಂದರವಾಗಿ 'ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ| ತಮೇವಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂದು ವರ್ಣಿಸಿದೆ. ಮೂರನೆಯ ವಲ್ಲಿಯಲ್ಲಿ 'ಊರ್ಧ್ವ ಮೂಲೋ ಅವಾಕ್ ಶಾಖಃ ಏಷೋಽಶ್ವತ್ಥಃ ಸನಾತನಃ' ಎಂದು ಆರಂಭಿಸಿ ಭಗವಂತನ ಮಹಾಮಹಿಮತ್ವವನ್ನು ಹೇಳಿದೆ. ಅವನಿಗೆ ಭಯಪಟ್ಟು ಲೋಕದ ಕಾರ್ಯಗಳೆಲ್ಲ ನಡೆಯುತ್ತಿವೆ ಎಂದು ಹೇಳಿದೆ. ಆತನನ್ನು ತಿಳಿದವನು ಅಮೃತತ್ವವನ್ನು ಹೊಂದುತ್ತಾನೆ–'ಯಂ ಜ್ಞಾತ್ವಾ ಮುಚ್ಯತೇ ಜಂತುಃ ಅಮೃತತ್ವಂ ಚ ಗಚ್ಛತಿ' ಎಂದು ಬ್ರಹ್ಮಜ್ಞಾನದ ಮಹತ್ವವನ್ನು ಸಾರಿದೆ. ಕೊನೆಗೆ ಫಲಶ್ರುತಿಯೊಡನೆ ಈ ಉಪನಿಷತ್ತು ಪೂರ್ಣವಾಗುತ್ತದೆ.

ಈ ಉಪನಿಷತ್ತಿನಿಂದ ತಿಳಿದುಬರುವ ಕೆಲವು ಸ್ವಾರಸ್ಯವಾದ ಅಂಶಗಳನ್ನು ಹೀಗೆ ಸೂಚಿಸಬಹುದು :

1. 'ಅಯಂ ಲೋಕೋ ನಾಸ್ತಿ ಪರ ಇತಿಮಾನೀ' ಎಂಬುವುದರಿಂದ ಪರಲೋಕದಲ್ಲಿ ನಂಬಿಕೆ ಇಲ್ಲದವರು ಅಂದೂ ಇದ್ದರೆಂದು ಗೊತ್ತಾಗುತ್ತದೆ.

2. 'ಆಶ್ಚರ್ಯೋ ವಕ್ತಾ', 'ಅಣೋರಣೀಯಾನ್', 'ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ' ಮುಂತಾದುವುಗಳನ್ನು ಇಲ್ಲಿಂದ ಗೀತೆಯಲ್ಲಿ ತೆಗೆದುಕೊಂಡಿದೆ.

3. 'ನೈಷಾ ತರ್ಕೇಣ ಮತಿರಾಪನೇಯಾ' ಎಂಬುದರಿಂದ ಆ ಕಾಲದಲ್ಲೇ ತರ್ಕಶಾಸ್ತ್ರದ ಉದಯವಾಗಿತ್ತೆಂಬುದು ಸೂಚಿತವಾಗುತ್ತದೆ.

4. 'ತದ್ವಿಷ್ಣೋಃ ಪರಮಂ ಪದಮ್' ಎಂಬುದರಿಂದ ವಿಷ್ಣುವೇ ಪರಬ್ರಹ್ಮನೆಂದು

ಈ ಉಪನಿಷತ್ತಿನ ನಿರ್ಣಯವೆಂದು ತಿಳಿಯುತ್ತದೆ.

5. ಸಾಂಖ್ಯಯೋಗ ದರ್ಶನಗಳಿಗಿಂತ ಇದು ಹಿಂದಿನದೆಂಬುದನ್ನು ಇಲ್ಲಿ ಬರುವ ಮಹತ್, ಅವ್ಯಕ್ತ, ಪುರುಷ ಮುಂತಾದುವೂ 'ತಾಂ ಯೋಗಮಿತಿ ಮನ್ಯಂತೇ' ಮುಂತಾದ ವಾಕ್ಯಗಳೂ ಸೂಚಿಸುತ್ತವೆ.

## ಪ್ರಶ್ನೋಪನಿಷತ್ತು

ಇದು ಅಥರ್ವವೇದಕ್ಕೆ ಸೇರಿದ ಉಪನಿಷತ್ತು. 'ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ' ಎಂಬುದು ಇದರ ಶಾಂತಿ ಮಂತ್ರ. ಇದರಲ್ಲಿ ಆರು ಪ್ರಶ್ನೆಗಳಿವೆ. ಆರು ಮಂದಿ ಬ್ರಹ್ಮಾನ್ವೇಷಕರು ಭಗವಂತನಾದ ಪಿಪ್ಪಲಾದ ಋಷಿಯೊಡನೆ ನಡೆಸಿದ ಸಂವಾದಗಳೇ ಈ ಆರು ಪ್ರಶ್ನೆಗಳಾಗಿವೆ. ಇದು ಗದ್ಯಮಯವಾಗಿದೆ. 'ತದೇಷ ಶ್ಲೋಕಃ' ಎಂಬ ಸೂಚನೆಯೊಡನೆ ಅಲ್ಲಲ್ಲಿ ಪ್ರಾಚೀನವಾದ ಮಂತ್ರಗಳನ್ನೂ ಉದಾಹರಿಸಲಾಗಿದೆ. ಕಬಂಧೀ ಕಾತ್ಯಾಯನನು ನಡೆಸಿದ ಸಂವಾದ ಮೊದಲನೆಯ ಪ್ರಶ್ನೆಯಾಗಿದೆ. ಈ ಲೋಕದಲ್ಲಿ ಪ್ರಜೆಗಳು ಹೇಗೆ ಎಲ್ಲಿಂದ ಜನಿಸುತ್ತಾರೆ? ಎಂಬುದು ಅವನ ಪ್ರಶ್ನೆ. ಪ್ರಜಾಕಾಮನಾದ ಪ್ರಜಾಪತಿಯು ತಪಸ್ಸಾಚರಿಸಿ ರಯಿ ಮತ್ತು ಪ್ರಾಣ ಎಂಬ ಮಿಥುನವನ್ನು ಉತ್ಪಾದಿಸಿದನು. ಅವರಿಂದ ಪ್ರಜಾಸೃಷ್ಟಿ ಎಂದು ಹೇಳಿ ಆದಿತ್ಯನು ಪ್ರಾಣ, ಚಂದ್ರಮನು ರಯಿ ಎಂದು ಮುಂತಾಗಿ ವರ್ಣಿಸಿದ್ದಾರೆ ಪಿಪ್ಪಲಾದರು. ಇಲ್ಲಿ ದೇವಯಾನ ಪಿತೃಯಾಣಗಳ ವಿಚಾರ ಬಂದಿದೆ.

ಎರಡನೆಯ ಪ್ರಶ್ನೆ ಭಾರ್ಗವ ವೈದರ್ಭಿಯದು. ದೇವತೆಗಳೆಷ್ಟು ಮಂದಿ ಪ್ರಜೆಗಳಿಗೆ ಆಧಾರಭೂತರಾಗಿದ್ದಾರೆ? ಇದನ್ನು ಪ್ರಕಾಶಪಡಿಸುವುದು ಯಾವುದು? ಇವರಲ್ಲಿ ವರಿಷ್ಠನು ಯಾರು? ಎಂಬುದು ಅವನ ಪ್ರಶ್ನೆ. ಪಿಪ್ಪಲಾದರ ಉತ್ತರವಿದು–'ಆಕಾಶ, ವಾಯು, ಅಗ್ನಿ, ಆಪಃ. ಪೃಥಿವೀ, ವಾಕ್, ಮನಸ್ಸು, ಚಕ್ಷುಸ್ಸು, ಶ್ರೋತ್ರ'. ಇವುಗಳಲ್ಲಿ ವರಿಷ್ಠ ಪ್ರಾಣ. ಅವನು ಉತ್ಕ್ರಮಿಸಲಾರಂಭಿಸಿದರೆ ಎಲ್ಲರೂ ಉತ್ಕ್ರಮಿಸಿ ಬಿಡುವರು. ಅವನು ಪ್ರತಿಷ್ಠಿತನಾದರೆ ಎಲ್ಲರೂ ಪ್ರತಿಷ್ಠಿತರಾಗುವರು—'ತದ್ಯಥಾ ಮಕ್ಷಿಕಾ ಮಧುಕರ ರಾಜಾನಂ ಉತ್ಕ್ರಾಮಂತಂ ಸರ್ವಾ ಏವೋತ್ಕ್ರಾಮಂತೇ' ಎಂಬ ಸುಂದರವಾದ ಉಪಮಾನ ಇದಕ್ಕೆ ಕೊಡಲಾಗಿದೆ. ಇಲ್ಲಿ ಪ್ರಾಣವನ್ನೇ ಎಲ್ಲಾ ದೇವತೆಗಳೆಂದು ಕೊಂಡಾಡಿದೆ. ಪ್ರಾಣವೇ ಇಂದ್ರ, ರುದ್ರ, ಸೂರ್ಯ. 'ವ್ರಾತ್ಯಸ್ತ್ವಂ ಪ್ರಾಣ' ಎಂದು ಅವನೇ ವ್ರಾತ್ಯನೆಂದು ಹೇಳಿದೆ. ವ್ರಾತ್ಯ ಶಬ್ದ ಇಲ್ಲಿ ಪರಬ್ರಹ್ಮ ವಾಚಕವಾಗಿದೆ. ಹೀಗೆ ಈ ಪ್ರಶ್ನದಲ್ಲಿ ಪ್ರಾಣರೂಪಿಯಾದ ಪರಬ್ರಹ್ಮನ ಸ್ತುತಿ ಇದೆ.

ಮೂರನೆಯ ಪ್ರಶ್ನೆ ಕೌಸಲ್ಯ ಆಶ್ವಲಾಯನನದು. ಈ ಪ್ರಾಣ ಎಲ್ಲಿಂದ ಹುಟ್ಟುತ್ತದೆ? ಈ ಶರೀರಕ್ಕೆ ಹೇಗೆ ಬರುತ್ತದೆ? ತನ್ನನ್ನೇ ವಿಭಾಗ ಮಾಡಿಕೊಂಡು ಹೇಗೆ ಪ್ರತಿಷ್ಠಿತವಾಗುತ್ತದೆ? ಹೇಗೆ ಉತ್ಕ್ರಮಿಸುತ್ತದೆ? ಪಿಪ್ಪಲಾದರು ಬ್ರಹ್ಮಿಷ್ಠನು ಕೇಳಿರುವನೆಂದು ಗಮನಿಸಿ ಈ ಅತಿ ಪ್ರಶ್ನೆಗಳಿಗೆ ಉತ್ತರವಿತ್ತರು–'ಆತ್ಮನ ಏಷ ಪ್ರಾಣೋ ಜಾಯತೇ' ಎಂದು. ಪುರುಷನನ್ನು ನೆರಳು ಹಿಂಬಾಲಿಸುವಂತೆ ಈ ಶರೀರದಲ್ಲಿ ಆತ್ಮನಿಂದ ಇದೂ ಜನಿಸುತ್ತದೆ ಕರ್ಮನಿಮಿತ್ತವಾಗಿ. ಸಮ್ರಾಟನು ತನ್ನ ಅಧಿಕಾರಿಗಳನ್ನು ಹೇಗೆ ಬೇರೆ ಬೇರೆ ಗ್ರಾಮಗಳಲ್ಲಿ ನೆಲೆನಿಲ್ಲಿಸುವನೋ ಹಾಗೆ ಇದೂ ಸಹ ಇತರ ಪ್ರಾಣಗಳನ್ನು ಬೇರೆ ಬೇರೆಯಾಗಿ ನಿಯೋಜಿಸುತ್ತದೆ. 'ಯಥಾ ಸಮ್ರಾ ಡೇವಾಧಿಕೃತಾನ್ ವಿನಿಯುಂಕ್ತೇ ಏತಾನ್‌ಗ್ರಾಮಾನ್ ಏತಾನ್‌ಗ್ರಾಮಾನ್ ಅಧಿತಿಷ್ಠಸ್ವೇತಿ ಏವಮೇವೈಷ ಪ್ರಾಣಃ ಇತರಾನ್ಪ್ರಾಣಾನ್ ಪೃಥಕ್ ಪೃಥಗೇವ ಸಂನಿಧತ್ತೇ' ಯಾವ ಮಾರ್ಗವಾಗಿ ಉತ್ಕ್ರಮಿಸುತ್ತದೆ ಎಂಬುದರ ಉತ್ತರವಿದು–'ಮೇಲ್ಮುಖವಾದ ನಾಡಿಯಿಂದ ಉತ್ಕ್ರಮಿಸಿ

ಪುಣ್ಯಾಧಿಕ್ಯವಾದರೆ ದೇವಲೋಕಕ್ಕೂ ಪಾಪಾಧಿಕ್ಯವಾದರೆ ನರಲೋಕಕ್ಕೂ ಕರೆದೊಯ್ಯುತ್ತದೆ.'

'ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಲೋಕಂ ನಯತಿ
ಪಾಪೇನ ಪಾಪಮುಭಾಭ್ಯಾಂ ಮನುಷ್ಯಲೋಕಮ್ ।'

ಮನಸ್ಸಿನೊಡನೆ ಕೂಡುವ ಇಂದ್ರಿಯಗಳೊಡನೆ ಮತ್ತೆ ಇದು ಹುಟ್ಟುತ್ತದೆ–'ಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ'; 'ಯಚ್ಚಿತ್ತಸ್ತೇನೈಷ ಪ್ರಾಣ ಮಾಯಾತಿ ಪ್ರಾಣಸ್ತೇಜಸಾಯುಕ್ತಃ ಸಹಾತ್ಮನಾ ಯಥಾ ಸಂಕಲ್ಪಿತಂ ಲೋಕಂ ನಯತಿ.'

ನಾಲ್ಕನೆಯ ಪ್ರಶ್ನದಲ್ಲಿ ಸೌರ್ಯಾಯಣಿ ಗಾರ್ಗ್ಯರ ಮತ್ತು ಪಿಪ್ಪಲಾದರ ಸಂವಾದವಿದೆ. 'ಈ ಪುರುಷನಲ್ಲಿ ನಿದ್ರಿಸುವವರು ಯಾರು ? ಜಾಗ್ರತರಾಗಿರುವವರು ಯಾರು ? ಯಾವ ದೇವನು ಸ್ವಪ್ನಗಳನ್ನು ನೋಡುತ್ತಾನೆ? ಈ ಸುಖ ಯಾರಿಗುಂಟಾಗುತ್ತದೆ? ಯಾರಲ್ಲಿ ಎಲ್ಲರೂ ಸಂಪ್ರತಿಷ್ಠಿತರಾಗುತ್ತಾರೆ' ಎಂಬುವು ಆ ಗಾರ್ಗ್ಯನ ಪ್ರಶ್ನೆಗಳು. ಸೂರ್ಯನು ಅಸ್ತಂಗತನಾದಾಗ ಹೇಗೆ ಎಲ್ಲ ಕಿರಣಗಳೂ ಅವನ ತೇಜೋಮಂಡಲದಲ್ಲಿ ಏಕೀಭವಿಸುವುವೋ, ಮತ್ತೆ ಅವನು ಉದಯಿಸಿದಾಗ ಹೇಗೆ ಅವನಿಂದ ಎಲ್ಲವೂ ಪ್ರಸರಿಸುವುವೋ ಹಾಗೆ ಶ್ರೋತ್ರಾದಿಗಳೆಲ್ಲವೂ ನಿದ್ರಿಸುವವನ ಮನಸ್ಸಿನಲ್ಲಿ ಏಕೀಭವಿಸುವುವು. ಶ್ರೋತ್ರಾದಿ ಇಂದ್ರಿಯಗಳು ಹೀಗೆ ನಿದ್ರಿಸಿರಲು ಪ್ರಾಣಾದಿಪಂಚವಾಯುಗಳು ಎಚ್ಚರವಾಗಿರುವುವು. ಆಗ ಮನಸ್ಸೆಂಬ ದೇವನು (ಜೀವನು?) ಸ್ವಪ್ನಗಳನ್ನು ಕಾಣುವನು. ಅವನಿಗೆ ಪ್ರಸನ್ನತೆ ಉಂಟಾಗುತ್ತದೆ. ಪಕ್ಷಿಗಳು ಹೇಗೆ ನಿವಾಸ ವೃಕ್ಷದಲ್ಲಿ ಸಂಪ್ರತಿಷ್ಠಿತರಾಗುತ್ತವೋ ಹಾಗೆ ಎಲ್ಲರೂ ಅಕ್ಷರ ರೂಪಿಯಾದ ಪರಮಾತ್ಮನಲ್ಲಿ ಸಂಪ್ರತಿಷ್ಠಿತರಾಗುತ್ತಾರೆ' ಎಂದು ಪಿಪ್ಪಲಾದರು ಉತ್ತರಿಸಿದರು.

ಐದನೆಯ ಪ್ರಶ್ನದಲ್ಲಿ ಶೈಬ್ಯಸತ್ಯಕಾಮನು 'ಪ್ರಣವೋಪಾಸಕನು ಯಾವ ಲೋಕವನ್ನು ಜಯಿಸುತ್ತಾನೆಂದು' ಪ್ರಶ್ನಿಸುತ್ತಾನೆ. 'ಯಃ ಪುನರೇತಂ ತ್ರಿಮಾತ್ರೇಣ ಓಮಿತ್ಯೇತೇನೈವ ಅಕ್ಷರೇಣಪರಂ ಪುರುಷಮಭಿಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನಃ ।'–ಯಾವಾತನು ಮೂರು ಮಾತ್ರೆಗಳುಳ್ಳ ಪ್ರಣವಾಕ್ಷರದಿಂದ ಪರಮ ಪುರುಷನನ್ನು ಧ್ಯಾನಿಸುವನೋ ಅವನು ಸೂರ್ಯನಲ್ಲಿ ಸಂಗತನಾಗಿ ಪಾಪ ವಿಮುಕ್ತನಾಗಿ ಬ್ರಹ್ಮ ಲೋಕವನ್ನು ಸೇರುತ್ತಾನೆ ಎಂದು ಉತ್ತರಿಸಿದರು ಆಚಾರ್ಯರು.

ಸುಕೇಶ ಭಾರದ್ವಾಜನ ಪ್ರಶ್ನೆಯಾದ ಷೋಡಶಕಲ ಪುರುಷನ ವಿಚಾರ ಆರನೆಯ ಪ್ರಶ್ನದಲ್ಲಿದೆ. ಪ್ರಾಣಾದಿ ಷೋಡಶ ಕಲೆಗಳು ಹೃದಯ ಪುಂಡರೀಕಾಕಾಶ ಮಧ್ಯದಲ್ಲಿ ಸಂಭವಿಸುವುದರಿಂದ ಆ ಪುರುಷನು ಶರೀರದೊಳಗಿದ್ದಾನೆಂದು ಪಿಪ್ಪಲಾದರು ಉತ್ತರಿಸಿದರು.

ಆರು ಮಂದಿ ಶಿಷ್ಯರುಗಳೂ ಆಚಾರ್ಯನನ್ನು ಅರ್ಚಿಸಿ 'ಅವಿದ್ಯೆಯಿಂದ ಪಾರುಮಾಡಿದ ನೀನೇ ನಮಗೆ ತಂದೆ' ಎಂದು ಕೊಂಡಾಡುತ್ತಾ ಹೊರಟರು.

## ಮುಂಡಕೋಪನಿಷತ್ತು

ಇದು ಪೂರ್ಣವಾಗಿ ಪದ್ಯಮಯವಾಗಿದೆ. ಮುಂಡಕಗಳೆಂದು ಕರೆಯಲಾದ ಮೂರು ಭಾಗಗಳು ಇದರಲ್ಲಿವೆ. ಒಂದೊಂದು ಮುಂಡಕದಲ್ಲಿಯೂ ಎರಡೆರಡು ಖಂಡಗಳಿವೆ. ಮೊದಲ ಖಂಡದಲ್ಲಿ 9, ಎರಡರಲ್ಲಿ 13, ದ್ವಿತೀಯ ಮುಂಡಕದ ಮೊದಲ ಖಂಡದಲ್ಲಿ 10, ಎರಡರಲ್ಲಿ 11, ಮೂರನೆಯ ಮುಂಡಕದ ಮೊದಲ ಖಂಡದಲ್ಲಿ 10 ಮತ್ತು ಎರಡರಲ್ಲಿ 11 ಮಂತ್ರಗಳೂ ಸೇರಿ ಒಟ್ಟು ಈ ಉಪನಿಷತ್ತಿನಲ್ಲಿ 64 ಮಂತ್ರಗಳಿವೆ. ಪ್ರಥಮ ಮುಂಡಕದ ಮೊದಲ ಖಂಡದಲ್ಲಿ ಅಥರ್ವಣಾಚಾರ್ಯರ ಪರಂಪರೆಯ ವಿವರಣೆಯೂ ಪರಾಪರವಿದ್ಯೆಗಳ ವಿಭಾಗವೂ

ಇವೆ. ಯಾವುದರಿಂದ ಅಕ್ಷರವು ಲಭ್ಯವಾಗುವುದೋ ಅದು ಪರವಿದ್ಯೆ. ಋಗ್ವೇದ ಯಜುರ್ವೇದಾದಿಗಳು ಅಪರಾವಿದ್ಯೆ ಎನಿಸುವುವು. ಇಲ್ಲಿ ಇತಿಹಾಸ ಪುರಾಣಗಳನ್ನು ಹೇಳದಿರುವುದು ಗಮನಾರ್ಹ. ವೇದಾಂಗಗಳ ಸಂಖ್ಯೆಯನ್ನೂ ಹೆಸರುಗಳನ್ನೂ ಕ್ರಮವಾಗಿ ಇಲ್ಲಿ ಕೊಡಲಾಗಿದೆ. ಋಗ್ವೇದಾದಿಗಳಿಗೆ ಅಪರಾವಿದ್ಯೆಯ ಸ್ಥಾನವನ್ನು ಉಪನಿಷತ್ತು ಕೊಡುತ್ತಿರುವುದು ಇದೇ ಮೊದಲು. ಯಜ್ಞಸಂಸ್ಥೆಯು ಶಿಥಿಲವಾಗಿ ಕರ್ಮಕಾಂಡಕ್ಕೆ ಬದಲಾಗಿ ಜ್ಞಾನಕಾಂಡಕ್ಕೆ ಪರಮಪ್ರಾಧಾನ್ಯ ದೊರಕಲಾರಂಭವಾಗಿದ್ದಿತೆಂಬುದನ್ನು ಇದು ಸೂಚಿಸುತ್ತದೆ. ಪ್ರಥಮ ಮುಂಡಕದ ದ್ವಿತೀಯ ಖಂಡದಲ್ಲಿ ಇದನ್ನು ಸ್ಪಷ್ಟವಾಗಿಯೇ ಹೇಳಿದೆ. 'ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾಃ' ಎಂದು. ಯಾಗಾದಿ ಕರ್ಮಗಳಿಂದ ಲಭಿಸುವ ಫಲವು ಅಲ್ಪವೂ ನಾಶಹೊಂದುವುದೂ ಆದಕಾರಣ ಅನಂತವೂ ಅಕ್ಷಯವೂ ಆದ ಬ್ರಹ್ಮಪ್ರಾಪ್ತಿಯೇ ಮಾನವರ ಗುರಿಯಾಗಬೇಕೆಂದೂ ಅದನ್ನು ತಿಳಿಯಲು ಆಚಾರ್ಯನನ್ನು ಹೊಂದಬೇಕೆಂದೂ ಹೇಳುತ್ತದೆ. ಸಂನ್ಯಾಸದ ಶ್ರೇಷ್ಠತೆಯನ್ನು ಇಲ್ಲಿ ಹೇಳಿದೆ.

ದ್ವಿತೀಯ ಮುಂಡಕದ ಮೊದಲ ಖಂಡದಲ್ಲಿ ಬ್ರಹ್ಮಸ್ವರೂಪ ನಿರೂಪಣೆ ಇದೆ. ಜಗತ್ತಿನ ಸೃಷ್ಟಿ ಸ್ಥಿತಿ ನಾಶಗಳು ಬ್ರಹ್ಮವಸ್ತುವಿನಿಂದಲೇ. ಬ್ರಹ್ಮವಸ್ತು ಸರ್ವಭೂತಾಂತರಾತ್ಮವಾಗಿದೆ. ಲೋಕದ ಎಲ್ಲ ವಸ್ತುಗಳೂ, ಋಗ್ಯಜುಸ್ಸಾಮಾದಿಗಳೂ, ಸಾಧ್ಯದೇವ ಮನುಷ್ಯಾದಿಗಳೂ, ಸಪ್ತಪ್ರಾಣಾದಿಗಳೂ, ಗಿರಿಸಮುದ್ರಾದಿಗಳೂ ಅವನಿಂದಲೇ. ಆ ಪರಮ ಪುರುಷನೇ ಇದೆಲ್ಲವೂ ಆಗಿದ್ದಾನೆ–'ಪುರುಷ ಏವೇದಂ ವಿಶ್ವಂ'. ಹೀಗೆ ಇಲ್ಲಿ ಬ್ರಹ್ಮವಸ್ತುವಿನ ಸರ್ವ ಕಾರಣತ್ವ ಪ್ರತಿಪಾದನೆ ಇದೆ.

ಅದೇ ಎರಡನೆಯ ಮುಂಡಕದ ದ್ವಿತೀಯ ಖಂಡದಲ್ಲಿ ಆ ಪರವಸ್ತುವನ್ನರಿಯಬೇಕೆಂದು 'ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ' ಎಂದು ಸಾರಿ ಹೇಳಿದೆ. 'ತಮೇವೈಕಂ ಜಾನಥ ಆತ್ಮಾನಂ ಅನ್ಯವಾಚೋ ವಿಮುಂಚಥ" ಎಂದು ಹೇಳಿ ಅಮೃತತ್ವಕ್ಕೆ ಸೇತುವಾದ ಪರಮಾತ್ಮನೊಬ್ಬನನ್ನೇ ತಿಳಿಯಬೇಕೆಂದೂ ಇತರ ವಿಷಯದಲ್ಲಿ ವಿರಕ್ತನಾಗಬೇಕೆಂದೂ ಹೇಳುತ್ತದೆ. ಬ್ರಹ್ಮವಸ್ತುವಿನ ಸರ್ವಾವಭಾಸಕತ್ವವನ್ನೂ, ಸರ್ವತ್ರ ವ್ಯಾಪ್ತಿಯನ್ನೂ ಬೋಧಿಸಿ ಅವನಲ್ಲಿ ಆತ್ಮವನ್ನು ಅನನ್ಯಭಾವದಿಂದ ನೆಡಬೇಕೆಂದು 'ಪ್ರಣವೋ ಧನುಶ್ಶರೋ ಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯ ಮುಚ್ಯತೇ | ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ||' ಎಂಬ ಧಾನುಷ್ಕನ ದೃಷ್ಟಾಂತದಿಂದ ವಿವರಿಸಿದೆ.

ಮೂರನೇ ಮುಂಡಕದ ಪ್ರಥಮ ಖಂಡದಲ್ಲಿ ವೇದಾಂತ ದರ್ಶನದ ಮುಖ್ಯ ವಿಚಾರವಾದ ಜೀವಾತ್ಮ ಪರಮಾತ್ಮರ ಸೂಚನೆ ಬಂದಿದೆ. 'ಎರಡು ಹಕ್ಕಿಗಳು ಒಂದೇ ವೃಕ್ಷವನ್ನಾಶ್ರಯಿಸಿವೆ. ಅವುಗಳಲ್ಲಿ ಒಂದು ಆ ವೃಕ್ಷದ ಸ್ವಾದುಫಲಗಳನ್ನು ಭುಂಜಿಸುತ್ತದೆ. ಮತ್ತೊಂದು ಅದನ್ನು ಭುಂಜಿಸದೆ ಪ್ರಕಾಶಿಸುತ್ತದೆ' ಎಂದು ಜೀವಾತ್ಮ ಪರಮಾತ್ಮರ ಉಲ್ಲೇಖವಿಲ್ಲಿ ಬಂದಿದೆ. ದ್ವೈತಾದ್ವೈತಪಂಥಗಳು ಈ ವಾಕ್ಯವನ್ನು ಬಗೆಬಗೆಯಾಗಿ ವಿವರಿಸುತ್ತವೆ. ಸರ್ವಕರ್ತನೂ, ತೇಜೋಯುಕ್ತನೂ, ರುಕ್ಮವರ್ಣನೂ ಆದ ಪರಮಾತ್ಮನನ್ನು ಕಂಡವನು ಪುಣ್ಯಪಾಪಗಳನ್ನು ಕೊಡಹಿಕೊಂಡು ನಿರಂಜನನಾಗಿ ಅವನ ಪರಮಸಾಮ್ಯವನ್ನು ಹೊಂದುತ್ತಾನೆ. ಪರಮಾತ್ಮನನ್ನು ಜ್ಞಾನಪ್ರಸಾದದಿಂದ ಮಾತ್ರವೇ ಪಡೆಯಬಹುದೆಂಬುದನ್ನು 'ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ | ಜ್ಞಾನಪ್ರಸಾದೇನ ವಿಶುದ್ಧಸತ್ವಃ ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ ||' ಎಂಬುದಾಗಿ ತಿಳಿಸಿದೆ.

ಮೂರನೇ ಮುಂಡಕದ ದ್ವಿತೀಯ ಖಂಡದಲ್ಲಿ ಕಾಮಗಳನ್ನು ಜಯಿಸಿದವನು ಕೃತಾತ್ಮನಾಗಿ ಬ್ರಹ್ಮಪ್ರಾಪ್ತಿಗೆ ಅರ್ಹನಾಗುವನೆಂದು ತಿಳಿಸಿದೆ. ಪರಮಾತ್ಮಪ್ರಾಪ್ತಿಗೆ ಭಗವದ್ದಯೆಯೇ ಕಾರಣವೆಂದೂ ಭಗವದ್ವರಣೀಯತೆ ಮುಖ್ಯವೆಂದೂ–'ಯಮೇ ವೈಷವೃಣುತೇ ತೇನ ಲಭ್ಯ: ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ' ಎಂಬಲ್ಲಿ ಹೇಳಿದೆ. ಮುಕ್ತಸ್ವರೂಪವನ್ನು 'ನಾಮರೂಪಾದ್ವಿಮುಕ್ತ: ಪರಾತ್ಪರಂ ಪುರುಷ ಮುಪೈತಿ ದಿವ್ಯಮ್' ಎಂದು ತಿಳಿಸಿದೆ. ವೇದಾಂತಶಬ್ದದ ಪ್ರಯೋಗ ಇಲ್ಲಿ ಮೊದಲಾಗಿ ಬಂದಿದೆ.

## ಮಾಂಡೂಕ್ಯೋಪನಿಷತ್ತು

ಇದು ಉಪನಿಷತ್ತುಗಳೆಲ್ಲೆಲ್ಲಾ ಬಹಳ ಚಿಕ್ಕದು. ಇದರಲ್ಲಿ ಕೇವಲ ಹನ್ನೆರಡು ಮಂತ್ರಗಳು ಮಾತ್ರ ಇವೆ. ಓಂಕಾರವೇ ಸಮಸ್ತ ವಿಶ್ವವೂ ಭೂತಭವಿಷ್ಯದ್ವರ್ತಮಾನವೂ ಎಂದು ಇದು ಪ್ರತಿಪಾದಿಸುತ್ತದೆ–'ಓಮಿತ್ಯೇತದಕ್ಷರಂ ಇದಂ ಸರ್ವಂ ತಸ್ಯೋಪವ್ಯಾಖ್ಯಾನಂ ಭೂತಂ ಭವದ್ಭವಿಷ್ಯದಿತಿ ಸರ್ವಂ ಓಂಕಾರ ಏವ'. ಇವೆಲ್ಲಾ ಆತ್ಮನೇ. 'ಸರ್ವಂ ಹ್ಯೇತದಬ್ರಹ್ಮಾಯ ಮಾತ್ಮಾ ಬ್ರಹ್ಮ ಸೋಯಮಾತ್ಮಾ ಚತುಷ್ಪಾತ್'. ಜಾಗರಿತಸ್ಥಾನ, ಸ್ವಪ್ನಸ್ಥಾನ, ಸುಷುಪ್ತಸ್ಥಾನ ಮತ್ತು ತದತೀತವಾದ ಚತುರ್ಥಸ್ಥಾನಗಳೇ ಆ ನಾಲ್ಕು ಸ್ಥಾನಗಳು. ಓಂಕಾರದಲ್ಲಿಯೂ ನಾಲ್ಕು ಭಾಗಗಳಿವೆ–ಆಕಾರ, ಉಕಾರ, ಮಕಾರ ಮತ್ತು ನಾಲ್ಕನೆಯ ಅಮಾತ್ರ. ಅದ್ವೈತ, ಪ್ರಪಂಚ ಮುಂತಾದ ಶಬ್ದಗಳು ಇಲ್ಲಿ ಮೊದಲಾಗಿ ಬಳಸಲ್ಪಟ್ಟಿವೆ. ಓಂಕಾರದ ಮೇಲೆ ಕಟ್ಟಲಾಗಿರುವ ಈ ಉಪನಿಷತ್ತಿನ ದರ್ಶನವನ್ನು ಗೌಡಪಾದರು ತಮ್ಮ ಕಾರಿಕೆಗಳಲ್ಲಿ ವರ್ಣಿಸಿದ್ದಾರೆ.

## ತೈತ್ತಿರೀಯೋಪನಿಷತ್ತು

ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಗೆ ಸೇರಿದುದು ಇದು, 'ಶಂ ನೋ ಮಿತ್ರ: ಶಂ ವರುಣ:' ಎಂಬುದು ಇದರ ಶಾಂತಿ ಮಂತ್ರ. ಇದೂ ಕೂಡ ತೈತ್ತಿರೀಯ ಶಾಖೆಗೆ ಸಂಹಿತೆ ಬ್ರಾಹ್ಮಣಗಳಂತೆಯೇ ಅನುವಾಕಗಳಾಗಿ ವಿಭಾಗಿಸಲ್ಪಟ್ಟಿದೆ. ವಲ್ಲೀಶಬ್ದದ ಪ್ರಯೋಗವೂ ಅದರ ಜೊತೆಗೇ ಸೇರಿದೆ. ಇದರಲ್ಲಿ ಮೂರು ವಲ್ಲಿಗಳಿವೆ. ಶಿಕ್ಷಾಧ್ಯಾಯ, ಬ್ರಹ್ಮವಲ್ಯಧ್ಯಾಯ, ಭೃಗುವಲ್ಯಧ್ಯಾಯ ಎಂದು ಅವುಗಳಿಗೆ ಹೆಸರುಗಳಿವೆ. ಒಂದೊಂದು ವಲ್ಲಿಯೂ ಆರಂಭವಾಗುವ ಮಾತಿನಿಂದ ಈ ಹೆಸರು ಬಂದಿದೆ. ಮೊದಲ ವಲ್ಲಿಯಲ್ಲಿ ಹನ್ನೆರಡು ಅನುವಾಕಗಳೂ, ಎರಡನೆಯದರಲ್ಲಿ 9 ಅನುವಾಕಗಳೂ, ಮೂರನೆಯದರಲ್ಲಿ ಹತ್ತು ಅನುವಾಕಗಳೂ ಇವೆ. ಒಂದೊಂದು ಅನುವಾಕದಲ್ಲಿಯೂ ಚಿಕ್ಕ ಚಿಕ್ಕ ಗದ್ಯ ವಾಕ್ಯಗಳಿವೆ. ತೈತ್ತಿರೀಯ ಆರಣ್ಯಕದಲ್ಲಿ ಹೇಗೋ ಹಾಗೆಯೇ ಇಲ್ಲಿಯೂ ಪ್ರತಿಯೊಂದು ವಲ್ಲಿಯ ಕೊನೆಯಲ್ಲಿ ಅಲ್ಲಿನ ವಾಕ್ಯಗಳನ್ನು ದಶತಿಗಳನ್ನಾಗಿ ಎಣಿಸಿಕೊಟ್ಟಿದೆ.

ಶಿಕ್ಷಾಧ್ಯಾಯದಲ್ಲಿ ಬಹಳ ಅಮೂಲ್ಯವಾದ ಅನೇಕ ಅಂಶಗಳಿವೆ. ಅಧ್ಯಯನದ ಪರಿಸಮಾಪ್ತಿಯಾದ ಮೇಲೆ ಶಿಷ್ಯನಿಗೆ ಮಾಡಿರುವ ಉಪದೇಶ ಬಹಳ ಉಪಯುಕ್ತವಾಗಿದೆ. ಇದು ಎಲ್ಲ ಕಾಲ ದೇಶಗಳಿಗೂ ಅನ್ವಯಿಸುತ್ತದೆ. ಸಾರ್ವತ್ರಿಕವಾದ ಧರ್ಮದ ನಿರೂಪಣೆ ಇಲ್ಲಿದೆ.

ಬ್ರಹ್ಮವಲ್ಯಧ್ಯಾಯದಲ್ಲಿ ಬ್ರಹ್ಮವಸ್ತುವಿನ ಲಕ್ಷಣವನ್ನು 'ಸತ್ಯಂ ಜ್ಞಾನ ಮನಂತಂ ಬ್ರಹ್ಮ' ಎಂದು ಮಾಡಿದೆ. ಸೃಷ್ಟಿಕ್ರಮದ ವಿವೇಚನೆಯೂ ಇಲ್ಲಿದೆ. ವಾಕ್ಕುಮನಸ್ಸುಗಳಿಗೆ ಬ್ರಹ್ಮವಸ್ತು ದೂರವಾದುದೆಂದು ಸಾರಿ ಹೇಳಿ ಆ ಬ್ರಹ್ಮದಲ್ಲಿ ನೆಲೆನಿಂತವನು ಭಯವಿದೂರನಾಗುವನೆಂದು ಉಪದೇಶಿಸಿದೆ

ಭೃಗುವಲ್ಲ್ಯಧ್ಯಾಯದಲ್ಲಿ ಬ್ರಹ್ಮವಸ್ತು ಜಗತ್ತಿನ ಹುಟ್ಟು, ಸ್ಥಿತಿ ಮತ್ತು ನಾಶಗಳಿಗೆ ಕಾರಣವೆಂದು ಹೇಳಿದೆ. ಪಂಚಕೋಶಗಳ ನಿರೂಪಣೆ ಇಲ್ಲಿದೆ. ಬ್ರಹ್ಮವೇ ಆನಂದವೆಂದು ಇಲ್ಲಿ ವರ್ಣಿಸಿದೆ. 'ಆನಂದೋ ಬ್ರಹ್ಮೇತಿ ವ್ಯಜಾನಾತ್'. ಬ್ರಹ್ಮಾನಂದವನ್ನು ಪಡೆದವನು ಹಾಡುವ ಸಾಮವೊಂದು ಈ ವಲ್ಲಿಯ ಕೊನೆಯಲ್ಲಿ ಇದೆ.

ಈ ಉಪನಿಷತ್ತಿನಲ್ಲಿ ಬರುವ ಕೆಲವು ಸ್ವಾರಸ್ಯಕರವಾದ ಅಂಶಗಳು ಇವು.

(1) 'ಅಥಾತಃ ಸಂಹಿತಾಯಾ ಉಪನಿಷತ್' ಎಂದು ಉಪನಿಷತ್ತಿಗೆ ಬೇರೆ ಅರ್ಥವನ್ನು ಸೂಚಿಸುತ್ತದೆ. (2) ಪ್ರಾಚೀನಯೋಗ್ಯ, ರಾಥೀತರ, ಪೌರುಶಿಷ್ಟಿ, ನಾಕಮೌದ್ಗಲ್ಯ ಮುಂತಾದ ಪ್ರಾಚೀನಾಚಾರ್ಯರುಗಳ ಉಲ್ಲೇಖ ಇಲ್ಲಿದೆ. (3) ಪಂಚಭೂತಗಳ ನಿರೂಪಣೆ ಸ್ಪಷ್ಟವಾಗಿರುವುದಲ್ಲದೆ ಅವು ಒಂದರಿಂದ ಮತ್ತೊಂದು ಹುಟ್ಟುತ್ತವೆ ಎಂಬ ಸಿದ್ಧಾಂತದ ನಿರೂಪಣೆ ಇದೆ. ಆಕಾಶ ಆತ್ಮನಿಂದ ಹುಟ್ಟಿತು. ಸಾಂಖ್ಯರ ತತ್ವದ ಬೆಳವಣಿಗೆಗೆ ಇದು ಸಹಾಯಕವಾಯಿತು. (4) ಪಂಚಕೋಶಗಳ ನಿರೂಪಣೆ ಸ್ಪಷ್ಟವಾಗಿದೆ. (5) ಆದೇಶ ಆತ್ಮಾ ಎಂಬುದು ಋಗ್ಯಜುಸ್ಸಾಮಾದಿಗಳಿಗೆ ಅನ್ವಯಿಸದೆ ಉಪನಿಷತ್ತಿಗೇ ಅನ್ವಯಿಸುವುದು. (6) ದೇವತೆಗಳನ್ನು ಆಜಾನಜ, ಕರ್ಮಜ ಎಂದು ವಿಭಾಗ ಮಾಡಿದೆ. (7) ದೇವತೆಗಳಿಗಿಂತ ಇಂದ್ರನೂ, ಅವನಿಗಿಂತ ಬೃಹಸ್ಪತಿಯೂ ಅವನಿಗಿಂತ ಪ್ರಜಾಪತಿಯೂ ಅವನಿಗಿಂತ ಬ್ರಹ್ಮವೂ ಅಧಿಕವಾದುದು.

ಹೀಗೆ ಬ್ರಹ್ಮಸ್ವರೂಪನಿರೂಪಣೆಯನ್ನು ಈ ಉಪನಿಷತ್ತು ಯಶಸ್ವಿಯಾಗಿ ಮಾಡುತ್ತದೆ.

### ಐತರೇಯೋಪನಿಷತ್ತು

ಇದು ಋಗ್ವೇದಕ್ಕೆ ಸೇರಿದುದು. ಈ ವೇದದ ಉಪನಿಷತ್ತುಗಳಲ್ಲಿ ಉಪಲಬ್ಧವಾಗಿರುವುದು ಇದು ಒಂದೇ. 'ವಾಙ್ಮೇಮನಸಿ ಪ್ರತಿಷ್ಠಿತಾ' ಎಂಬುದು ಇದರ ಶಾಂತಿ ಮಂತ್ರ. ಗಾತ್ರದಲ್ಲಿ ಇದೂ ಬಹಳ ಚಿಕ್ಕದು. ಇದರಲ್ಲಿ ಮೂರು ಚಿಕ್ಕ ಚಿಕ್ಕ ಅಧ್ಯಾಯಗಳಿವೆ. ಮೊದಲ ಅಧ್ಯಾಯದಲ್ಲಿ ಮೂರು ಖಂಡಗಳಿವೆ. ಈ ಮೂರು ಅಧ್ಯಾಯಗಳೂ ಐತರೇಯ ಆರಣ್ಯಕದ ನಾಲ್ಕು, ಐದು ಮತ್ತು ಆರನೇ ಅಧ್ಯಾಯಗಳಾಗಿವೆ. ಮೊದಲನೆಯ ಅಧ್ಯಾಯದಲ್ಲಿ 23 ಗದ್ಯ ಮಂತ್ರಗಳಿವೆ.

ಸೃಷ್ಟಿಗೆ ಮೊದಲು ಇದ್ದುದು ಆತ್ಮವೊಂದೇ ಎಂದೂ ಅದು ಲೋಕವನ್ನು ಸೃಜಿಸಲಿಚ್ಛಿಸಿ ನೋಡಿತೆಂದೂ ಈ ಉಪನಿಷತ್ತು ಆರಂಭವಾಗುತ್ತದೆ–'ಆತ್ಮಾವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್ ಸ ಈಕ್ಷತ ಲೋಕಾನ್ನು ಸೃಜಾ ಇತಿ.' ಆತ್ಮನಿಂದ ಲೋಕಗಳೆಲ್ಲದರ ಸೃಷ್ಟಿ ಆಯಿತು. ಎರಡನೆಯ ಖಂಡದಲ್ಲಿ ಅಶನಾಪಿಪಾಸೆಗಳ ವಿಷಯ ಪ್ರಸ್ತುತವಾಗಿದೆ.

ಅಶನಾಪಿಪಾಸಗಳು ಆಶ್ರಯವನ್ನು ಬೇಡಿದವು. ಗೋವು ಅಶ್ವಗಳನ್ನು ಅವು ಮೆಚ್ಚದೆ ಪುರುಷನನ್ನು ನೋಡಿ ಇವನು ನಮಗೆ ತಕ್ಕ ಆಶ್ರಯವೆಂದು ಮೆಚ್ಚಿದವು. ಅಶನಾಪಿಪಾಸೆಗಳಿಗೆ ಹವಿಸ್ಸಿನಲ್ಲಿ ಭಾಗವೂ ದೊರಕಿತು. ಈ ನಿರೂಪಣೆ ಮೊದಲ ಖಂಡದಲ್ಲಿದೆ.

ಮೂರನೆಯ ಖಂಡದಲ್ಲಿ ಲೋಕಗಳಿಗೂ ಲೋಕಪಾಲರಿಗೂ ಅನ್ನವನ್ನು ಸೃಜಿಸಲು ಅವನು ಸಂಕಲ್ಪಿಸಿದ ನಿರೂಪಣೆ ಇದೆ. ಇಂದ್ರಶಬ್ದದ ಅರ್ಥವಿವರಣೆಯನ್ನು ಇಲ್ಲಿ 'ಇದಂದ್ರಂ ಸಂತಂ ಇಂದ್ರ ಇತ್ಯಾಚಕ್ಷತೇ' ಎಂದು ಮಾಡಿದೆ. 'ಪರೋಕ್ಷಪ್ರಿಯಾಹಿ ದೇವಾಃ' ಎಂಬ ಅಂಶದ ನಿರೂಪಣೆಯನ್ನು ಇಲ್ಲಿಯೂ ಮಾಡಿದೆ. ನಾಲ್ಕನೆಯ ಖಂಡದಲ್ಲಿ ಪುರುಷನ ಮೂರು ಜನ್ಮಗಳ ವಿಚಾರನಿರೂಪಣೆ ಇದೆ. ಈ ಜನ್ಮಭೇದಗಳನ್ನು ತಿಳಿದವನು ಸರ್ವಕಾಮಗಳನ್ನೂ

ಪಡೆದುಕೊಂಡು ಅಮೃತನಾಗುವನು ಎಂದು ಹೇಳಿದೆ.

ಐದನೆಯ ಖಂಡದಲ್ಲಿ ಮನೋವ್ಯಾಪಾರಗಳ ವಿಶ್ಲೇಷಣೆ ಇದೆ. 'ಕೋಽಯಮಾತ್ಮಾ' ಎಂಬ ಪ್ರಶ್ನೆಯನ್ನಿಲ್ಲಿ ಮಾಡಲಾಗಿದೆ. 'ಪ್ರಜ್ಞಾನಂ ಬ್ರಹ್ಮ' ಎಂಬ ಉಪದೇಶ ಈ ಖಂಡದ ಕೊನೆಯಲ್ಲಿ ಬಂದಿದೆ. ಈ ಪ್ರಜ್ಞೆಯಿಂದ ಅಮೃತತ್ವವನ್ನು ಪಡೆವನೆಂಬುದನ್ನು 'ಸ ಏತೇನ ಪ್ರಜ್ಞೇನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾ ಮುಷ್ಮಿನ್ ಸ್ವರ್ಗೇಲೋಕೇ ಸರ್ವಾನ್ ಕಾಮಾನಾಪ್ತ್ವಾ ಅಮೃತಃ ಸಮಭವತ್ ಸಮಭವತ್' ಎಂಬಲ್ಲಿ ತಿಳಿಸಿದೆ.

## ಛಾಂದೋಗ್ಯೋಪನಿಷತ್ತು

ಇದು ಅತ್ಯಂತ ಪ್ರಾಚೀನವಾದುದೆಂದೂ ಎಲ್ಲರೂ ಒಪ್ಪುತ್ತಾರೆ. ಇದು ಸಾಮವೇದಕ್ಕೆ ಸೇರಿದೆ. ಪ್ರಾಚೀನತೆ, ಗಂಭೀರತೆ, ಬ್ರಹ್ಮಜ್ಞಾನ ಪ್ರತಿಪಾದನೆ ಈ ದೃಷ್ಟಿಗಳಿಂದ ಈ ಉಪನಿಷತ್ತು ಬಹಳ ಪ್ರೌಢವೂ ಪ್ರಮೇಯಬಹುಲವೂ ಆಗಿದೆ.

ಇದರಲ್ಲಿ ಎಂಟು ಅಧ್ಯಾಯಗಳು ಅಥವಾ ಪ್ರಪಾಠಕಗಳಿವೆ. ಕೊನೆಯ ಮೂರು ಪ್ರಪಾಠಕಗಳಂತೂ ಆಧ್ಯಾತ್ಮಿಕ ದೃಷ್ಟಿಯಿಂದ ಬಹಳ ಮಹತ್ವಪೂರ್ಣವಾಗಿವೆ. ಒಂದೊಂದು ಪ್ರಪಾಠಕದಲ್ಲಿಯೂ ಅನೇಕಾನೇಕ ಖಂಡಗಳಿವೆ. ಮೊದಲನೆಯ ಪ್ರಪಾಠಕದಲ್ಲಿ 13, ಎರಡನೆಯದರಲ್ಲಿ 24, ಹಾಗೆಯೇ ಮುಂದಿನ ಪ್ರಪಾಠಕಗಳಲ್ಲಿ ಕ್ರಮವಾಗಿ 19, 17, 24, 16, 26 ಮತ್ತು 15 ಖಂಡಗಳೂ ಇದ್ದು ಒಟ್ಟಿನಲ್ಲಿ 154 ಖಂಡಗಳಿವೆ. ಈ ಒಂದೊಂದು ಖಂಡದಲ್ಲಿಯೂ ಹಲವಾರು ಗದ್ಯ ಮಂತ್ರಗಳಿವೆ. ಈ ಖಂಡಗಳು ಬೇರೆ ಬೇರೆ ವಿಚಾರಗಳನ್ನು ವಿವೇಚಿಸುವುದರಿಂದ ಇವು ಬೇರೆ ಬೇರೆ ಕಾಲಕ್ಕೆ ಸೇರಿರಬಹುದೆಂದು ವಿಮರ್ಶಕರು ಭಾವಿಸುತ್ತಾರೆ. ಯಾಗಾದಿಗಳಿಗೆ ಪ್ರಾಧಾನ್ಯ ತಪ್ಪುವುದಕ್ಕೂ ಮುಂಚಿನ ಕಾಲದಲ್ಲೇ ಇದೆಲ್ಲವೂ ಸಂಕಲಿತವಾಗಿರಬೇಕೆಂಬುವುದಕ್ಕೆ ಈ ಉಪನಿಷತ್ತಿನ ಕೊನೆಯ ಖಂಡದಲ್ಲಿ ಗೃಹಸ್ಥನಾಗಿ ಕೌಟುಂಬಿಕ ಜೀವನವನ್ನು ನಡೆಸುತ್ತಾ ವಿಹಿತವಾದ ಧಾರ್ಮಿಕ ಕ್ರಿಯೆಗಳನ್ನಾಚರಿಸುವವನು ಬ್ರಹ್ಮಲೋಕವನ್ನು ಸೇರುವನೆಂದು ಸಾರಿರುವುದು ನಿದರ್ಶನವಾಗಿದೆ. ಆಶ್ರಮವಿಹಿತವಾದ ಕರ್ಮಗಳನ್ನು ಆಚರಿಸಬೇಕೆಂಬುದನ್ನು ಈಶಾವಾಸ್ಯವೂ ಸಾರಿ ಹೇಳುತ್ತದೆ. 'ತ್ರಯೋಧರ್ಮ ಸ್ಕಂಧಾಃ' ಎಂಬಲ್ಲಿ ಮೂರು ಆಶ್ರಮಗಳ ಉಲ್ಲೇಖವಿರುವುದೂ, ' ಅಹಿಂಸನ್ ಸರ್ವಾಣಿ ಭೂತಾನಿ ಅನ್ಯತ್ರ ತೀರ್ಥೇಭ್ಯಃ' ಎಂಬಲ್ಲಿ ಯಾಗದಲ್ಲಿ ಪಶು ಹಿಂಸೆ ಅನುಮೋದಿತ ವಾಗಿರುವುದೂ ಇದನ್ನು ಪೋಷಿಸುತ್ತದೆ. ಇಲ್ಲಿ ಕೊಡಲಾಗಿರುವ ಆಚಾರ್ಯ ಪರಂಪರೆಯೂ ಅತ್ಯಂತ ಸಂಗ್ರಹವಾಗಿದೆ. ಇವುಗಳೆಲ್ಲಾ ಈ ಉಪನಿಷತ್ತಿನ ಪ್ರಾಚೀನತೆಯನ್ನು ಸೂಚಿಸುತ್ತವೆ ಎಂದು ಹೇಳಲಾಗಿದೆ.

ಈ ಉಪನಿಷತ್ತಿನ ಮೊದಲನೆಯ ಪ್ರಪಾಠಕವು ಉದ್ಗೀಥೋಪಾಸನೆಯಿಂದ ಆರಂಭವಾಗುತ್ತದೆ. ಉದ್ಗೀಥವಿದ್ಯೆಯ ಮಹತ್ವದ ನಿರೂಪಣೆ ವಿಸ್ತಾರವಾಗಿ ಬಂದಿದೆ. ಉದ್ಗೀಥ ಮತ್ತು ಪ್ರಣವಗಳಿಗೆ ತಾದಾತ್ಮ್ಯವನ್ನು 'ಅಥಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥಃ ಇತ್ಯಸೌ ವಾ ಆದಿತ್ಯ ಉದ್ಗೀಥ ಏಷ ಪ್ರಣವ ಓಮಿತಿ ಹ್ಯೇಷ ಸ್ವರನ್ನೇತಿ' ಎಂದು ಹೇಳಿದೆ. ಪ್ರಣವ ಸ್ವರೂಪವನ್ನೂ ಸಾಮಗಾನದ ಗೂಢಸ್ವರೂಪವನ್ನೂ ಇಲ್ಲಿ ಮಾರ್ಮಿಕವಾಗಿ ತಿಳಿಸಿದೆ. ಬಕದಾಲ್ಭ್ಯ ಉಷಸ್ತಿ ಚಾಕ್ರಾಯಣ ಮತ್ತಿತರ ಸಾಮೋಪಾಸಕರ ವಿಚಾರವೂ ಪ್ರಸ್ತುತವಾಗಿದೆ.

ಎರಡನೆಯ ಅಧ್ಯಾಯದಲ್ಲಿ ವಿಶ್ವವೇ ಸಾಮವೆಂದು ಬೋಧಿಸಿದೆ. ಲೋಕದಲ್ಲಿ,

ವೃಷ್ಟಿಯಲ್ಲಿ, ಜಲದಲ್ಲಿ, ಋತುಗಳಲ್ಲಿ, ಪಶುಗಳಲ್ಲಿ, ಪ್ರಾಣಗಳಲ್ಲಿ, ಪಂಚವಿಧವಾದ ಸಾಮೋಪಾಸನೆಯ ವಿಧಾನವನ್ನು ಇಲ್ಲಿ ಬೋಧಿಸಿದೆ. ಹಾಗೆಯೇ ಸಪ್ತವಿಧ ಸಾಮೋಪಾಸನೆಯ ವಿಚಾರವೂ ಬಂದಿದೆ. ಕೊನೆಯಲ್ಲಿ ಕೆಲವಾರು ಸಾಮಗಾನಗಳೂ ಇವೆ.

ಮೂರನೆಯ ಅಧ್ಯಾಯದಲ್ಲಿ ಮಧುವಿದ್ಯೆಯ ನಿರೂಪಣೆ ಇದೆ. ಆದಿತ್ಯನನ್ನು ದೇವಮಧು ಎಂದು ಹೇಳಿದೆ–'ಅಸೌ ವಾ ಆದಿತ್ಯೋ ದೇವಮಧು' ಎಂದು ನಾಲ್ಕು ದಿಕ್ಕುಗಳಲ್ಲಿಯೂ ಹರಡಿದ ರಶ್ಮಿಗಳನ್ನುಳ್ಳ ಆದಿತ್ಯನೇ ಆತ್ಮನೆಂದು ಸಾರಿದೆ. 'ಗಾಯತ್ರಿಯೇ ಇದೆಲ್ಲವೂ' ಎಂಬುವ ಅಂಶ ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ' ಎಂಬಲ್ಲಿ ಸ್ಥಾಪಿತವಾಗಿದೆ. ಶಾಂಡಿಲ್ಯ ವಿದ್ಯೆಯ ನಿರೂಪಣೆ ಇಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ' ಎಂದು ಉಪವರ್ಣಿತವಾಗಿದೆ. ಹೃದಯಾಕಾಶದಲ್ಲಿ ನಿಗೂಢನಾಗಿರುವ ಆತ್ಮನು ಹೇಗೆ ಅಣುವಿಗಿಂತ ಅಣುವಾಗಿದ್ದಾನೋ ಹಾಗೆಯೇ ಈ ಲೋಕಗಳೆಲ್ಲದಕ್ಕಿಂತ ಹಿರಿಯನಾಗಿದ್ದಾನೆಂಬ ಉಪದೇಶ ಇಲ್ಲಿದೆ. ಮಹಿದಾಸ ಐತರೇಯನ ಉಲ್ಲೇಖ 18ನೇ ಖಂಡದಲ್ಲಿ ಬಂದಿದೆ. ದೇವಕೀ ಪುತ್ರ ಕೃಷ್ಣನಿಗೆ ಘೋರ ಆಂಗಿರಸನು ಮಾಡಿದ ಆಧ್ಯಾತ್ಮಿಕೋಪದೇಶದ ನಿರೂಪಣೆ 17ನೇ ಖಂಡದಲ್ಲಿದೆ.

'ಆದಿತ್ಯನೇ ಬ್ರಹ್ಮ' ಎಂಬ ಉಪದೇಶವನ್ನು ವ್ಯಾಖ್ಯಾನ ಮಾಡುತ್ತಾ ಬ್ರಹ್ಮಾಂಡದಿಂದ ಆದಿತ್ಯನು ಹುಟ್ಟಿದನೆಂದು ವರ್ಣಿಸಿದೆ ಕೊನೆಯ ಖಂಡದಲ್ಲಿ. ವಿಶ್ವದ ಒಂದೊಂದು ಪದಾರ್ಥವೂ ಆ ಅಂಡದ ಒಂದೊಂದು ಅಂಶವೆಂದು ರೂಪಣ ಮಾಡಿ ವರ್ಣಿಸಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಜಾನಶ್ರುತಿ ಪೌತ್ರಾಯಣನ ಕಥೆ ಮೊದಲಾಗಿ ಬರುತ್ತದೆ. ರೈಕ್ವನೆಂಬ ಬ್ರಹ್ಮಜ್ಞನಿಂದ ಇವನು ಬ್ರಹ್ಮೋಪದೇಶವನ್ನು ಪಡೆದ ನಿರೂಪಣೆ ಇಲ್ಲಿದೆ. ಸಂವರ್ಗ ವಿದ್ಯೆಯ ಉಲ್ಲೇಖ ಈ ಸಂದರ್ಭದಲ್ಲಿ ಬರುತ್ತದೆ. ನಾಲ್ಕನೆಯ ಖಂಡದಿಂದ ಸತ್ಯಕಾಮ ಜಾಬಾಲನ ವೃತ್ತಾಂತವಿದೆ. ಹತ್ತನೆಯ ಖಂಡದಲ್ಲಿ ಸತ್ಯಕಾಮಜಾಬಾಲನ ಶಿಷ್ಯ ಉಪಕೋಸಲ ಕಾಮಲಾಯನನ ವಿಚಾರ ಪ್ರಸ್ತುತವಾಗಿದೆ. ಉಪಕೋಸಲ ವಿದ್ಯೆಯ ಉಪದೇಶ ಇಲ್ಲಿದೆ. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ', 'ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮಾ' ಎಂಬ ಉಪದೇಶ ಇಲ್ಲಿ ಬರುತ್ತದೆ. ಕೊನೆಯಲ್ಲಿ ದೇವಯಾನದ ಮುಖಾಂತರ ಆತ್ಮನು ಬ್ರಹ್ಮಲೋಕವನ್ನು ಸೇರುವ ಕ್ರಮದ ವರ್ಣನೆ ಬರುತ್ತದೆ. ಅರ್ಚಿಸ್, ಅಹಸ್ಸು, ಪಕ್ಷ, ಮಾಸ, ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್ ಮುಂತಾದ ಅಭಿಮಾನಿ ದೇವತೆಗಳನ್ನು ಕ್ರಮವಾಗಿ ಸೇರಿ ಕೊನೆಯಲ್ಲಿ 'ಅಮಾನವ'ನಿಂದ ಬ್ರಹ್ಮದೆಡೆಗೆ ಸೇರುವನು ಅವನು. ಇದು ದೇವಪಥ ಅಥವಾ ಬ್ರಹ್ಮಪಥ. ಈ ಮಾರ್ಗದಲ್ಲಿ ಸಾರಿದವರು ಮತ್ತೆ ಈ ಲೋಕಕ್ಕೆ ಹಿಂದಿರುಗರು–'ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ'

ಐದನೆಯ ಅಧ್ಯಾಯದಲ್ಲಿ ಆರಂಭದಲ್ಲಿಯೇ ಇಂದ್ರಿಯಗಳೆಲ್ಲೆಲ್ಲಾ ಪ್ರಾಣವು ಶ್ರೇಷ್ಠವೆಂಬ ವಿಚಾರದ ನಿರೂಪಣೆ ಇದೆ. ಕಣ್ಣು, ಕಿವಿ, ಮನಸ್ಸು, ವಾಕ್ಕು ಮುಂತಾದುವು ದೇಹವನ್ನು ಬಿಟ್ಟು ವರ್ಷವಾದ ಮೇಲೆ ಬಂದು ನೋಡಿದರೂ ಶರೀರವು ತನ್ನ ಕೆಲಸವನ್ನು ನಡೆಸಿಕೊಂಡು ಹೋಗುತ್ತಿತ್ತು. ಆದರೆ ಪ್ರಾಣವು ಹೊರ ಹೊರಡಲು ಉಜ್ಜುಗಿಸುತ್ತಿದ್ದಂತೆಯೇ ಉಳಿದುವೆಲ್ಲಾ ತಲ್ಲಣಿಸಿದವು. ಆಗ 'ತ್ವಂ ನಃ ಶ್ರೇಷ್ಠೋಽಸಿ' ಎಂದು ಅವು ಪ್ರಾಣದ ಶ್ರೇಷ್ಠತೆಯನ್ನು ಒಪ್ಪಿದವು.

ಆರುಣೇಯ ಶ್ವೇತಕೇತು ಮತ್ತು ಪ್ರವಾಹಣ ಜೈವಲಿಗಳ ಸಂವಾದದಲ್ಲಿ ಪಂಚಾಗ್ನಿ

ವಿದ್ಯೆಯು ಪ್ರಸ್ತುತವಾಗಿದೆ. ಜೈವಲಿ ಈ ವಿದ್ಯೆಯನ್ನು ಉಪದೇಶಿಸುತ್ತಾನೆ. ಹನ್ನೊಂದನೆಯ ಖಂಡದಲ್ಲಿ ಐದು ಜನ ಜಿಜ್ಞಾಸುಗಳು–ಪ್ರಾಚೀನ ಶಾಲ ಔಪಮನ್ಯವ, ಸತ್ಯಯಜ್ಞ ಪೌಲುಷಿ, ಇಂದ್ರದ್ಯುಮ್ನೋಭಾಲ್ಲವೇಯಃ, ಜನಃ ಶಾರ್ಕರಾಕ್ಷ್ಯ ಬುಡಿಲ ಅಶ್ವತರಾಶ್ವಿಃ ಇವರು ಆತ್ಮನು ಯಾರು ? ಬ್ರಹ್ಮ ಯಾವುದು ಎಂದು ನಡೆಸಿದ ಸಂವಾದದ ನಿರೂಪಣೆ ಇದೆ—'ಮಹಾಶಾಲಾ ಮಹಾಶ್ರೋತ್ರಿಯಾಃ ಸಮೇತ್ಯ ಮೀಮಾಂಸಾಂ ಚಕ್ರುಃ ಕೋ ನು ಆತ್ಮಾ ಕಿಂಬ್ರಹ್ಮೇತಿ'. ಅವರು ಕೇಕಯ ಅಶ್ವಪತಿಯ ಬಳಿಗೆ ಹೋದರು. ಅವರಿಗೆ ಆ ರಾಜನು ವೈಶ್ವಾನರ ವಿದ್ಯೆಯನ್ನುಪದೇಶಿಸಿದನು. ಆರನೆಯ ಅಧ್ಯಾಯದಲ್ಲಿ ಪ್ರಖ್ಯಾತವಾದ ಶ್ವೇತಕೇತು ಮತ್ತು ಉದ್ದಾಲಕ ಆರುಣಿಗಳ ಸುಂದರವಾದ ಸಂವಾದವಿದೆ. ಬಹಳ ಸುಂದರವಾದ ಅನೇಕಾನೇಕ ಉಪಮಾನಗಳಿಂದ ಆತ್ಮವಿದ್ಯೆಯನ್ನು ತಂದೆ ಆರುಣಿ ಮಗನಾದ ಶ್ವೇತಕೇತುವಿಗೆ ಉಪದೇಶಿಸಿದರು. ಸದ್ವಿದ್ಯೆಯ ನಿರೂಪಣೆ ಇಲ್ಲಿದೆ. "ತತ್ತ್ವಮಸಿ" ಎಂಬ ವಿಶ್ವವಿಖ್ಯಾತವಾದ ಉಪದೇಶ ಇರುವುದು ಇಲ್ಲಿಯೇ. ಏಳನೆಯ ಅಧ್ಯಾಯದಲ್ಲಿ ನಾರದನಿಗೆ ಸನತ್ಕುಮಾರನು ಮಾಡಿದ ಆತ್ಮವಿದ್ಯೋಪದೇಶದ ವಿವರಣೆ ಇದೆ. ಭೂಮವಿದ್ಯೆಯ ಉಲ್ಲೇಖ ಇಲ್ಲಿ ಬರುತ್ತದೆ– 'ಯತ್ರನಾವ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ' ಎಂದು. ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಆತ್ಮವನ್ನು ಕಾಣುವನು ಆತ್ಮಾನಂದನಾಗಿ ಸ್ವರಾಟ್ ಆಗುವನು'–ಆತ್ಮೈವೇದಂ ಸರ್ವಮಿತಿ ಸ ವಾ ಏಷ ಏವಂ ಪಶ್ಯನ್ನೇದಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮ ಕ್ರೀಡ ಆತ್ಮಮಿಥುನ ಆತ್ಮಾನಂದಃ ಸ ಸ್ವರಾಡ್ ಭವತಿ ತಸ್ಯ ಸರ್ವೇಷುಲೋಕೇಷು ಕಾಮಚಾರೋ ಭವತಿ |'

ಎಂಟನೆಯ ಅಧ್ಯಾಯದಲ್ಲಿ ಮೊಟ್ಟಮೊದಲಾಗಿ ದಹರ ವಿದ್ಯೆಯ ಉಪದೇಶವಿದೆ– 'ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಂ' ಎಂದು. ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳ ನಿರೂಪಣೆಯನ್ನು ಇಲ್ಲಿ ಮಾಡಿದೆ. ಈ ಉಪನಿಷತ್ತಿನ ಶಿಖರಪ್ರಾಯವಾಗಿದೆ ಈ ಅಧ್ಯಾಯ. ಪ್ರಜಾಪತಿ ಮತ್ತು ಅವನ ಶಿಷ್ಯರಾದ ಇಂದ್ರ ಮತ್ತು ವೈರೋಚನರ ವೃತ್ತಾಂತ ಇಲ್ಲಿದೆ. ಪ್ರಜಾಪತಿಯಿಂದ ಆತ್ಮೋಪದೇಶವನ್ನು ಇಂದ್ರನು ಪಡೆಯುತ್ತಾನೆ. ಅವನನ್ನು ತನ್ನ ವಿಮರ್ಶನ ಬುದ್ಧಿಯಿಂದಲೂ, ಶುಶ್ರೂಷೆಯಿಂದಲೂ ತೃಪ್ತಿಪಡಿಸಿ.

ಈ ಉಪನಿಷತ್ತಿನ ಅಧ್ಯಯನದಿಂದ ಗೊತ್ತಾಗುವ ಕೆಲವು ಸ್ವಾರಸ್ಯಕರವಾದ ಅಂಶಗಳನ್ನು ಈಗ ಸೂಚಿಸಬಹುದು.

1. ಋಗ್ವೇದ ಸಾಮವೇದಗಳು ಸಂಕಲಿತವಾಗಿದ್ದುವಲ್ಲದೆ ಅವುಗಳನ್ನು ಅಧ್ಯಯನ ಮಾಡುತ್ತಿದ್ದರು.

2. ಪ್ರತಿಯೊಂದು ಸಾಮದ ಸ್ವರವನ್ನೂ, ಋಷಿಯನ್ನೂ ದೇವತೆಗಳನ್ನೂ ನಿರ್ಧರಿಸಲಾಗಿತ್ತು–'ತತ್ಸಾಮ ತಂ ಋಷಿಂ ತಾಂ ದೇವತಾಮುಪಧಾವೇತ್'.

3. ಸಾಮುಗಾನವನ್ನು ವೀಣಾಗಾನದೊಡನೆ ಮಾಡುತ್ತಿದ್ದರು–'ವೀಣಾಯಾಂ ಗಾಯಂತ್ಯೇತಂ ತೇ ಗಾಯಂತಿ ತಸ್ಮಾತ್ತೇ ಧನಸನಯಃ' (1-7-6).

4. ಓಂ, ಹಾಉ, ಹೋ ಈ ಮುಂತಾದ ಸ್ತೋಭಪದಗಳು ಬೇರೆ ಬೇರೆ ದೇವತೆಗಳನ್ನು ಸೂಚಿಸುವುವೆಂದು ಹೇಳಲಾಗಿದೆ.

5. 'ಸಂವತ್ಸರಂ ಮಜ್ಜೋ ನಾಶ್ನೀಯಾತ್' ಎಂಬುದು ಮಾಂಸ ಭಕ್ಷಣ ನಿಷೇಧವನ್ನು

ಸೂಚಿಸುತ್ತದೆ. 'ಬ್ರಾಹ್ಮಣಾನ್ ನ ನಿಂದೇತ್' ಎಂಬುದು ಸಾಮಾಜಿಕ ಸ್ಥಿತಿಯನ್ನು ತೋರಿಸುತ್ತದೆ.

6. 'ಸರ್ವೇ ಸ್ವರಾ ಘೋಷವಂತೋ ಬಲವಂತೋವಕ್ತವ್ಯಾಃ' ಎಂಬುದರಿಂದ ಆಗಲೇ ವ್ಯಾಕರಣದ ಅಧ್ಯಯನ ಆರಂಭವಾಗಿತ್ತೆಂದೂ, ಸ್ವರ, ಊಷ್ಮ, ಸ್ಪರ್ಶ ಎಂಬ ವಿಭಾಗಗಳಿತ್ತೆಂದೂ, ಉಚ್ಚಾರಣಾ ವಿಧಾನ ಗೊತ್ತಾಗಿತ್ತೆಂದೂ ಗೊತ್ತಾಗುತ್ತದೆ.

7. ಮಹಿದಾಸ ಐತರೇಯನು 116 ವರ್ಷಗಳು ಬದುಕಿದ್ದನೆಂಬುದೂ–'ಸ ಹ ಷೋಡಶಂ ವರ್ಷಶತಮಜೀವತ್'–ಘೋರ ಆಂಗಿರಸನು ದೇವಕೀಪುತ್ರನಾದ ಕೃಷ್ಣನಿಗೆ ಉಪದೇಶಿಸಿದನೆಂಬುದೂ ಸ್ವಾರಸ್ಯವಾಗಿವೆ.

8. ಗುರುವಿನ ಆವಶ್ಯಕತೆಯನ್ನು ಒತ್ತಿ ಹೇಳಲಾಗಿದೆ. 'ಆಚಾರ್ಯಾದ್ಧೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತಿ' ಎಂದು.

9. ಗೋತ್ರಪದ್ಧತಿ ದೃಢವಾಗಿತ್ತು. ಹೆಸರುಗಳನ್ನು ಹೇಳುವಾಗ ವ್ಯಕ್ತಿಯ ಹೆಸರನ್ನೂ ತಂದೆಯ ಹೆಸರನ್ನೂ ಹೇಳುವ ವಾಡಿಕೆಯಿತ್ತು. ಉದಾಹರಣೆಗೆ ಉದ್ದಾಲಕ ಆರುಣಿ, ಬುಡಿಲ ಆಶ್ವತರಾಶ್ವಿ ಮುಂತಾದುವನ್ನು ಹೇಳಬಹುದು. ಗೋತ್ರಕ್ಕನುಸಾರ ಉದ್ದಾಲಕನನ್ನು ಗೌತಮನೆಂದೂ, ಬುಡಿಲನನ್ನು ವೈಯ್ಯಾಘ್ರ ಪದ್ಯನೆಂದೂ ಉಲ್ಲೇಖಿಸಿದೆ.

10. ಅಧ್ಯಯನ ಮಾಡುತ್ತಿದ್ದ ಅನೇಕಾನೇಕ ವಿದ್ಯೆಗಳ ಉಲ್ಲೇಖ ಏಳನೇ ಅಧ್ಯಾಯದಲ್ಲಿದೆ.

## ಬೃಹದಾರಣ್ಯಕೋಪನಿಷತ್ತು

ಬೃಹದಾರಣ್ಯಕೋಪನಿಷತ್ತು ಛಾಂದೋಗ್ಯೋಪನಿಷತ್ತಿಗಿಂತ ಸ್ವಲ್ಪ ಈಚಿನದೆಂದು ಹೇಳುತ್ತಾರೆ. ಇದರ ಕೆಲವು ಭಾಗಗಳು ಛಾಂದೋಗ್ಯೋಪನಿಷತ್ತಿಗಿಂತಲೂ ಪ್ರಾಚೀನವಾಗಿವೆ. ಇದನ್ನೂ ಬೇರೆ ಬೇರೆ ಕಾಲದಲ್ಲಿದ್ದ ಅನೇಕರು ರಚಿಸಿದ್ದಾರೆ. ಕೊನೆಗೆ ಇದರ ಸಂಗ್ರಹವಾಯಿತು. ಬೃಹದಾರಣ್ಯಕವೆಂಬ ಹೆಸರು ಅರ್ವಾಚೀನವಾದುದು. ಪಾಣಿನಿಗಳ ಕಾಲಕ್ಕಿಂತ ಈಚಿನದು ಈ ಶಬ್ದ. ಇದರ ಅವಾಂತರ ಭಾಗಗಳಿಗೆ ಬ್ರಾಹ್ಮಣಗಳೆಂಬ ಹೆಸರು ರೂಢಿಯಲ್ಲಿದೆ. ಇವು ಶತಪಥ ಬ್ರಾಹ್ಮಣದ ಖಿಲ ಭಾಗಗಳೆಂದು ಎಣಿಸಲ್ಪಟ್ಟಿದ್ದವು.

ಈ ಬ್ರಾಹ್ಮಣ ಭಾಗಗಳನ್ನೆಲ್ಲಾ ಒಂದುಗೂಡಿಸಿ ಆರು ಅಧ್ಯಾಯಗಳಲ್ಲಿ ಅಡಕಗೊಳಿಸಲಾಗಿದೆ. ಈ ಆರು ಅಧ್ಯಾಯಗಳಲ್ಲಿನ ಬ್ರಾಹ್ಮಣಗಳ ಸಂಖ್ಯೆಗಳು ಹೀಗಿವೆ.

| ಅಧ್ಯಾಯ | | ಬ್ರಾಹ್ಮಣಗಳು |
|---|---|---|
| 1 | – | 6 |
| 2 | – | 6 |
| 3 | – | 9 |
| 4 | – | 16 |
| 5 | – | 15 |
| 6 | – | 5 |
| ಒಟ್ಟು | | 57 |

'ಪೂರ್ಣಮದಃ ಪೂರ್ಣಮಿದಂ' ಎಂಬುದು ಈ ಉಪನಿಷತ್ತಿನ ಶಾಂತಿ ಮಂತ್ರವಾಗಿದೆ. ಐದನೇ ಅಧ್ಯಾಯದ ಆರಂಭದಲ್ಲಿ ಇದು ಕಂಡುಬರುತ್ತದೆ. ಎರಡು, ನಾಲ್ಕು ಮತ್ತು ಆರನೆಯ ಅಧ್ಯಾಯದ ಕೊನೆಯಲ್ಲಿ ಬರುವ ವಂಶ ವಿವರಣೆಗಳು ಭಿನ್ನ ಭಿನ್ನವಾಗಿವೆ. ಈ ಉಪನಿಷತ್ತು ಗದ್ಯಮಯವಾಗಿದೆ. ಒಂದೊಂದು ಬ್ರಾಹ್ಮಣದಲ್ಲಿ ಅನೇಕಾನೇಕ ವಾಕ್ಯಖಂಡಗಳಿವೆ. ಮಧ್ಯೆ ಮಧ್ಯೆ ಪ್ರಮಾಣ ಶ್ಲೋಕಗಳನ್ನು ಉದಾಹರಿಸಲಾಗಿದೆ.

ಇದರ ಪ್ರಥಮಾಧ್ಯಾಯವು ಅಶ್ವಮೇಧ ಸಂಕೇತದ ವರ್ಣನೆಯೊಡನೆ ಆರಂಭವಾಗುತ್ತದೆ; ಅಶ್ವದ ಶಿರಸ್ಸು ಉಷೆ; ಸೂರ್ಯ ಕಣ್ಣು; ವಾತವು ಪ್ರಾಣ; ಸಂವತ್ಸರ ಆತ್ಮಾ; ದ್ಯುಲೋಕ ಪೃಷ್ಠ ; ಅಂತರಿಕ್ಷ ಉದರ. ಹೀಗೆ ವಿಶ್ವವೇ ಆ ಅಶ್ವದ ರೂಪವೆಂದು ವರ್ಣಿಸಿದೆ. ಮೃತ್ಯುರೂಪಿಯಾದ ಆತ್ಮನಿಂದ ವಿಶ್ವಸೃಷ್ಟಿಯ ವಿಚಾರವು ಪ್ರಸ್ತುತವಾಗಿದೆ. ಪ್ರಾಣದ ಶ್ರೇಷ್ಠತೆಯನ್ನು ಪ್ರತಿಪಾದಿಸುವ ಸುಂದರವಾದ ಆಖ್ಯಾನವೊಂದು ಅನಂತರ ಬಂದಿದೆ. ಆತ್ಮವಸ್ತು ಸರ್ವವಸ್ತುಗಳಿಗಿಂತ ಶ್ರೇಷ್ಠವಾದುದೆಂಬುದನ್ನು ಸುಂದರವಾಗಿ ವರ್ಣಿಸಿದೆ. ಎಲ್ಲದಕ್ಕಿಂತ ಅದು ಪ್ರೇಯ. ಆದ್ದರಿಂದಲೇ 'ಆತ್ಮಾನಮೇವ ಪ್ರಿಯಮುಪಾಸೀತ ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ನ ಹಾಸ್ಯಪ್ರಿಯಂ ಪ್ರಮಾಯುಕಂ ಭವತಿ' ಎಂದು ಉಪದೇಶ ಮಾಡಿದೆ. ಎರಡನೆಯ ಅಧ್ಯಾಯದ ಆರಂಭದಲ್ಲಿ ದೃಪ್ತಬಾಲಾಕಿ, ಗಾರ್ಗ್ಯ ಮತ್ತು ಕಾಶಿಯ ಅಜಾತಶತ್ರುಗಳ ಸಂವಾದವಿದೆ. ಜಾಗ್ರತ್‌ಸ್ವಪ್ನ ಸುಷುಪ್ತ್ಯಾದ್ಯವಸ್ಥೆಗಳಲ್ಲಿ ಆತ್ಮನ ಸ್ವರೂಪವರ್ಣನೆ ಇಲ್ಲಿದೆ. ಲೋಕದಲ್ಲಿನ ಸಮಸ್ತಕ್ಕೂ ಭಗವಂತನೇ ಕಾರಣವೆಂಬುದನ್ನು ಜೇಡರ ಹುಳುವಿನ ನಿದರ್ಶನದಿಂದ ವರ್ಣಿಸಿದೆ–"ಸ ಯಥೋರ್ಣನಾಭಿಃ ತಂತುನೋಚ್ಚರೇದ್ಯಥಾಽಗ್ನೇಃ ಕ್ಷುದ್ರಾಃ ವಿಸ್ಫುಲಿಂಗಾಃ ವ್ಯುಚ್ಚರಂತಿ ಏವಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ ಸರ್ವೇ ಲೋಕಾಃ ಸರ್ವೇದೇವಾಃ ಸರ್ವಾಣಿ ಭೂತಾನಿ ವ್ಯುಚ್ಚರಂತಿ ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್ ।"

ಈ ಅಧ್ಯಾಯದ ಮೂರನೆಯ ಬ್ರಾಹ್ಮಣದಲ್ಲಿ ಮೂರ್ತಾಮೂರ್ತ ಬ್ರಹ್ಮದ ವಿಚಾರ ಪ್ರಸ್ತುತವಾಗಿದೆ. 'ಅಥಾತ ಆದೇಶೋ ನೇತಿನೇತಿ' ಎಂಬ ಸುಪ್ರಸಿದ್ಧವಾದ ಉಪದೇಶ ಈ ಬ್ರಾಹ್ಮಣದ ಕೊನೆಯಲ್ಲಿದೆ. ನಾಲ್ಕನೆಯ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯರು ಮತ್ತು ಮೈತ್ರೇಯಿ ಇವರ ಸುಂದರ ಸಂವಾದವಿದೆ. ಯಾಜ್ಞವಲ್ಕ್ಯರು ತಮ್ಮ ಪತ್ನಿ ಮೈತ್ರೇಯಿಗೆ ಬ್ರಹ್ಮಸ್ವರೂಪವನ್ನು ಕುರಿತು ಉಪದೇಶಿಸುವರು. 'ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತ್ರವ್ಯೋ ನಿದಿಧ್ಯಾಸಿತವ್ಯಃ' ಎಂಬ ವಿಖ್ಯಾತವಾದ ಉಪದೇಶ ಇಲ್ಲಿದೆ. ಅನೇಕ ಸುಂದರವಾದ ಉಪಮಾನಗಳಿಂದ ಯಾಜ್ಞವಲ್ಕ್ಯರು ಬ್ರಹ್ಮವು ಸರ್ವಕ್ಕೂ ಏಕಾಯನವಾಗಿದೆ ಎಂಬುದನ್ನು ವರ್ಣಿಸುತ್ತಾರೆ. 'ಯತ್ರ ವಾ ಅಸ್ಯ ಸರ್ವಂ ಆತ್ಮೈವಾಭೂತ್ತತ್ಕೇನ ಕಂ ಜಿಘ್ರೇತ್ತತ್ಕೇನ ಕಂಪಶ್ಯೇತ್ತತ್ಕೇನ ಕಂಶ್ರುಣುಯಾತ್ ತತ್ಕೇನ ಕಮಭಿವದೇತ್ ತತ್ಕೇನ ಕಂಮನ್ವೀತ ತತ್ಕೇನಕಂ ವಿಜಾನೀಯಾತ್ ವಿಜ್ಞಾತಾರಮರೇ ಕೇನ ವಿಜಾನೀಯಾತ್' ಎಂಬ ಮಹೋನ್ನತವಾದ ಉಪದೇಶವನ್ನು ಯಾಜ್ಞವಲ್ಕ್ಯರು ನೀಡುತ್ತಾರೆ. ಮುಂದಿನ ಬ್ರಾಹ್ಮಣದಲ್ಲಿ ದಧ್ಯನ್ ಆಥರ್ವಣನ ಮಧುವಿದ್ಯೆಯ ವಿವರಣೆ ಬರುತ್ತದೆ. ಈ ಅಧ್ಯಾಯದ ಕೊನೆಯ ಬ್ರಾಹ್ಮಣದಲ್ಲಿ ವಂಶಕ್ರಮದ ನಿರೂಪಣೆ ಇದೆ.

ಮೂರನೆಯ ಅಧ್ಯಾಯದಲ್ಲಿ ಜನಕರಾಜನ ಸಭೆಯಲ್ಲಿ ಯಾಜ್ಞವಲ್ಕ್ಯರಿಗೂ ಇತರ ಬ್ರಹ್ಮವಾದಿಗಳಿಗೂ ನಡೆದ ವಾಗ್ವಿವಾದದ ಸುಂದರ ನಿರೂಪಣೆ ಇದೆ. ತನಗೆ ಬಗೆಬಗೆಯಾದ

ಪ್ರಶ್ನೆಗಳನ್ನು ಹಾಕಿದ ಬ್ರಹ್ಮವಾದಿಗಳನ್ನೆಲ್ಲಾ ಯಾಜ್ಞವಲ್ಕ್ಯರು ಪರಾಭವಗೊಳಿಸುತ್ತಾರೆ. ಗಾರ್ಗೀವಾಚಕ್ನವೀ ಎಂಬ ಬ್ರಹ್ಮವಾದಿನಿಯೂ ಯಾಜ್ಞವಲ್ಕ್ಯರಿಗೆ ಪ್ರಶ್ನೆಗಳನ್ನು ಹಾಕುತ್ತಾಳೆ. ಜನಕರಾಜನ ಅಮೂಲ್ಯವಾದ ಸಂಭಾವನೆ ಯಾಜ್ಞವಲ್ಕ್ಯರಿಗೆ ಸಲ್ಲುವುದು.

ನಾಲ್ಕನೆಯ ಅಧ್ಯಾಯದಲ್ಲಿ ಯಾಜ್ಞವಲ್ಕ್ಯರು ಜನಕರಾಜನಿಗೆ ತತ್ತ್ವಜ್ಞಾನದ ಉಪದೇಶವನ್ನು ನೀಡುತ್ತಾರೆ. ಆತ್ಮತತ್ತ್ವ ವಿವರಣೆಯಲ್ಲಿ ಈ ಭಾಗ ಉಪನಿಷದ್ಭಾಗಕ್ಕೇ ಕಿರೀಟಪ್ರಾಯವಾಗಿದೆ. 'ಸ ವಾ ಅಯಮಾತ್ಮಾ ಬ್ರಹ್ಮ' ಎಂಬ ಉಪದೇಶವಿಲ್ಲಿದೆ. 'ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ', 'ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬಾಹ್ಮಣಃ' 'ಸ ಏಷ ನೇತಿ ನೇತಿ' ಮುಂತಾದ ಉಪದೇಶಗಳು ಇಲ್ಲಿ ಬರುತ್ತವೆ. ಈ ಅಧ್ಯಾಯದ ಐದನೆಯ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯ ಮೈತ್ರೇಯಿಗಳ ವೃತ್ತಾಂತ ಮತ್ತೆ ಬಂದಿದೆ. ಅಧ್ಯಾಯದ ಕೊನೆಯಲ್ಲಿ ಎರಡನೆಯ ವಂಶ ಪ್ರಕ್ರಮವನ್ನು ಕೊಡಲಾಗಿದೆ.

ಐದನೆಯ ಅಧ್ಯಾಯದ ಆರಂಭದಲ್ಲಿ 'ಪೂರ್ಣಮದಃ' ಎಂಬ ಶಾಂತಿ ಮಂತ್ರ ಆವೃತ್ತವಾಗಿದೆ. ಎರಡನೆಯ ಬ್ರಾಹ್ಮಣದಲ್ಲಿ ದಯೆ, ದಾನ, ದಮ ಇವುಗಳನ್ನು ಪ್ರಶಂಸಿಸುವ ರೋಚಕವಾದ ಆಖ್ಯಾನವಿದೆ. ಈ ಅಧ್ಯಾಯದಲ್ಲಿ ನೀತಿ ವಿಷಯಕವಾದ, ಸೃಷ್ಟಿ ವಿಷಯಕವಾದ ಮತ್ತು ಪರಲೋಕ ವಿಷಯಕವಾದ ಅನೇಕ ವಿಚಾರಗಳು ಪ್ರಸ್ತುತವಾಗಿವೆ.

ಆರನೆಯ ಅಧ್ಯಾಯದ ಮೊದಲ ಬ್ರಾಹ್ಮಣದಲ್ಲಿ ಇಂದ್ರಿಯಗಳಲ್ಲಿ ಶ್ರೇಷ್ಠವಾದುದು ಯಾವುದೆಂಬುದನ್ನು ಕುರಿತ ವಿವಾದದ ಕಥೆ ಬಂದಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿಯೂ ಈ ಕಥೆ ಪ್ರಸ್ತುತವಾಗಿರುವುದನ್ನು ನೋಡಬಹುದು. ಮುಂದೆ ಶ್ವೇತಕೇತು ಆರುಣಿ ಮತ್ತು ಪ್ರವಾಹಣ ಜೈವಲಿಗಳ ದಾರ್ಶನಿಕ ಸಂವಾದವಿದೆ. ಜೈಬಲಿ ಪಂಚಾಗ್ನಿ ವಿದ್ಯೆಯನ್ನು ವಿಸ್ತಾರವಾಗಿ ಉಪದೇಶಿಸುತ್ತಾರೆ. ಇದೂ ಛಾಂದೋಗ್ಯದಲ್ಲಿ ಬರುವ ಕಥೆಯೇ ಆಗಿದೆ. ಮುಂದೆ ಯಾಜ್ಞಿಕವಾದ ಮಹತ್ವವುಳ್ಳ ಎರಡು ಬ್ರಾಹ್ಮಣಗಳಾದ ನಂತರ ಮೂರನೆಯ ವಂಶ ಪ್ರಕ್ರಮದ ವಿಸ್ತಾರವಾದ ನಿರೂಪಣೆ ಬಂದಿದೆ.

ಈ ಉಪನಿಷತ್ತಿನಲ್ಲಿ ಬರುವ ಪ್ರಮುಖವಾದ ವಿಚಾರಗಳನ್ನು ಹೀಗೆ ನಿರೂಪಿಸಬಹುದು:

1. 'ಇತಿ ಹಸ್ಮಾಹ ಯಾಜ್ಞವಲ್ಕ್ಯಃ' ಎಂದಿರುವುದರಿಂದ ಈ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯರು ಪ್ರಮಾಣವಾಗಿ ನಿರೂಪಿಸಲ್ಪಟ್ಟಿದ್ದರೂ ಇದರ ಕರ್ತೃಗಳು, ಅವರಿರಲಾರರು.

2. ದೇವತೆಗಳನ್ನು ವರ್ಣಗಳಿಗನುಸಾರವಾಗಿ ವಿಂಗಡಿಸಿದ್ದರು. ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಯಮ, ಮೃತ್ಯು ಮತ್ತು ಈಶಾನರು ಕ್ಷತ್ರಿಯರು. ರಾಜಸೂಯದಲ್ಲಿ ಬ್ರಾಹ್ಮಣನೂ ಕ್ಷತ್ರಿಯನನ್ನು ಸೇವಿಸುವನಾದ ಕಾರಣ ಕ್ಷತ್ರಿಯನು ಸರ್ವಶ್ರೇಷ್ಠನೆಂಬ ಭಾವವಿದೆ–'ಬ್ರಾಹ್ಮಣಃ ಕ್ಷತ್ರಿಯಂ ಅಧಸ್ತಾದುಪಾಸ್ತೇ ರಾಜಸೂಯೇ.' ಆದರೆ ಬ್ರಾಹ್ಮಣನನ್ನು ಹಿಂಸಿಸುವುದು ಪಾಪವೆಂಬ ನಂಬಿಕೆ ಇತ್ತು. ವಸುಗಳು, ರುದ್ರರು, ಆದಿತ್ಯರು, ವಿಶ್ವೇದೇವತೆಗಳು, ಮರುತ್ತುಗಳು, ವೈಶ್ಯರು. ಪೂಷ್ಣದೇವತೆಯೊಬ್ಬನೇ ಶೂದ್ರ, ಅಗ್ನಿ ಬ್ರಾಹ್ಮಣ.

3. 'ತಸ್ಮಾದೇತಾಂ ರಾತ್ರಿಂ ಪ್ರಾಣಭೃತಃ ಪ್ರಾಣಂ ನ ವಿಚ್ಛಿಂದ್ಯಾದಪಿವಾ ಕೃಕಲಾಸಸ್ಯ' ಎಂಬುವುದರಿಂದ ಅಹಿಂಸೆಯೇ ಪರಮಧರ್ಮವಾಗುತ್ತ ಬಂದುದು ಗೊತ್ತಾಗುತ್ತದೆ.

4. 'ಉಪನಿಷತ್' ಎಂಬ ಶಬ್ದದ ಪ್ರಯೋಗ ಇಲ್ಲಿ ಸಾಭಿಪ್ರಾಯವಾಗಿದೆ. ಗುರುಗಳು ಶಿಷ್ಯರಿಗೆ ಉಪದೇಶಿಸುವ ಆಧ್ಯಾತ್ಮಿಕಗ್ರಂಥಭಾಗಗಳು ಎಂಬ ಅರ್ಥದಲ್ಲಿ ಈ ಶಬ್ದವನ್ನು

ಬಳಸಿದೆ. ಬ್ರಹ್ಮವಿದ್ಯೆಗೆ ಉಪನಿಷತ್ ಎಂಬ ಪದಪ್ರಯೋಗವೂ ಇದೆ.

5. ಉಪನಿಷತ್ತುಗಳು 'ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ' ಎಂದು ಹೇಳಿರುವಂತೆ ಬ್ರಹ್ಮಸ್ವರೂಪವನ್ನೇ ವಿವೇಚಿಸುತ್ತವೆ.

6. ಇಲ್ಲಿ ಉದಾಹರಿಸಿರುವ ಅನೇಕಾನೇಕ ಶ್ಲೋಕಗಳು ಸಂಹಿತೆಗಳಿಂದ ತೆಗೆದು ಕೊಂಡವಾಗಿರದೆ ಬ್ರಹ್ಮವಾದಿಗಳೂ ಆಚಾರ್ಯರುಗಳೂ ರಚಿಸಿದವಾಗಿವೆ.

## ಶ್ವೇತಾಶ್ವತರೋಪನಿಷತ್ತು

ಇದು ಕೃಷ್ಣಯಜುರ್ವೇದಕ್ಕೆ ಸೇರಿದುದು. 'ಸಹನಾವವತು' ಎಂಬುದು ಇದರ ಶಾಂತಿ ಮಂತ್ರ. ಇದರಲ್ಲಿ ಆರು ಅಧ್ಯಾಯಗಳಿವೆ. ಇವುಗಳಲ್ಲಿ ಕ್ರಮವಾಗಿ 16, 17, 21, 22, 14, 23 ಮಂತ್ರಗಳಿವೆ. ಈ ಉಪನಿಷತ್ತಿನ ಮಂತ್ರಗಳೆಲ್ಲಾ ಪದ್ಯಮಯವಾಗಿವೆ. ಒಟ್ಟು ಇದರ ಮಂತ್ರ ಸಂಖ್ಯೆ 113. ಇತರ ಉಪನಿಷತ್ತುಗಳಿಂದಲೂ ಸಂಹಿತೆಗಳಿಂದಲೂ ತೆಗೆದುಕೊಂಡ ಮಂತ್ರಗಳೂ ಇದರಲ್ಲಿ ಅಡಕವಾಗಿವೆ. ಇದು ಬಹಳ ಓಜಸ್ವಿಯಾಗಿಯೂ ವಿಚಾರ ಪರಿಪ್ಲುತವಾಗಿಯೂ ಇದೆ.

ಮೊದಲನೆಯ ಅಧ್ಯಾಯದ ಮೊದಲ ಮಂತ್ರವೇ ಉಪನಿಷತ್ತಿನ ವಿಷಯವನ್ನು ಸೂಚಿಸುತ್ತದೆ. ಜಗತ್ಕಾರಣ ಯಾವುದು ? ನಾವು ಎಲ್ಲಿಂದ ಬಂದೆವು ? ಯಾರ ಕಟ್ಟಳೆಗೊಳಗಾಗಿ ಸುಖದುಃಖಗಳುಂಟಾಗುವುವು ? ಇಂಥ ಪ್ರಶ್ನೆಗಳ ಮಾಲೆಯೇ ಅಲ್ಲಿದೆ. ಈ ಅಧ್ಯಾಯದಲ್ಲಿ ಜ್ಞ ಮತ್ತು ಅಜ್ಞ ಅಥವ ಜೀವ ಬ್ರಹ್ಮರ ವಿಚಾರ ಪ್ರಸ್ತುತವಾಗಿದೆ. 'ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ' ಜ್ಞಾಜ್ಞೌದ್ವಾವಜಾವೀಶನೀಶೌ' 'ಕ್ಷರಂ ಪ್ರಧಾನಮಮೃತಾಕ್ಷರಂ ಹರಃ' ಮುಂತಾದ ಭೇದವಾಕ್ಯಗಳು ಈ ಅಧ್ಯಾಯದಲ್ಲಿವೆ.

ಎರಡನೆಯ ಅಧ್ಯಾಯದಲ್ಲಿ ಪ್ರಸ್ತುತವಾಗಿರುವ ವಿಚಾರ ಯೋಗ. ಇಲ್ಲಿ ಬರುವ ಯೋಗ ಪಾತಂಜಲಯೋಗದ ಪೂರ್ವಪೀಠಿಕೆಯಾಗಿದೆ. ಮನಸ್ಸನ್ನು ಏಕಾಗ್ರವಾಗಿಸುವ ವಿಧಾನದ ವಿವರಣೆ ಇಲ್ಲಿದೆ. 'ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ಹೃದೀಂದ್ರಿಯಾಣಿ ಮನಸಾ ಸಂನಿವೇಶ್ಯ' 'ಮನೋನುಕೂಲೇ ನ ತು ಚಕ್ಷುಪೀಡನೇ ಗುಹಾನಿ ವಾತಾಶ್ರಯಣೇ ಪ್ರಯೋಜಯೇತ್' ಮುಂತಾದವು ಇಂಥ ವಾಕ್ಯಗಳು. ಯೋಗಾನುಭವದ ನಿರೂಪಣೆ 'ಏತಾನಿ ರೂಪಾಣಿ ಪುರಃ ಸರಾಣಿ ಬ್ರಹ್ಮಣ್ಯಭಿವ್ಯಕ್ತಿಕರಾಣಿ ಯೋಗೇ' ಎಂಬಲ್ಲಿ ಬಂದಿದೆ.

ಮೂರನೆಯ ಅಧ್ಯಾಯದಲ್ಲಿ ರುದ್ರಾಧ್ಯಾಯದ, ಪುರುಷಸೂಕ್ತದ ಮತ್ತು ಇತರ ವೇದಭಾಗಗಳ ಮಂತ್ರಗಳನ್ನು ಉಲ್ಲೇಖಿಸಿದೆ. 'ಯಾ ತೇ ರುದ್ರ ಶಿವಾತನೂಃ' ಎಂಬುದು ರುದ್ರಾಧ್ಯಾಯದ ಮಂತ್ರ. ಬ್ರಹ್ಮತತ್ವದ ಹಾಗೂ ಆತ್ಮ ತತ್ತ್ವದ ಸ್ವರೂಪ ನಿರೂಪಣೆ ಈ ಅಧ್ಯಾಯದಲ್ಲಿದೆ.

ನಾಲ್ಕನೆಯ ಅಧ್ಯಾಯವೂ ಜೀವಬ್ರಹ್ಮರ ವಿಚಾರವನ್ನು ವಿವೇಚಿಸುತ್ತದೆ. ಬ್ರಹ್ಮವಸ್ತುವನ್ನು ಇಲ್ಲಿ ಮಹೇಶ್ವರ ಎಂದು ಕರೆದಿದೆ. ಬ್ರಹ್ಮವಸ್ತುವನ್ನರಿತವರು ಅಮೃತತ್ವವನ್ನು ಹೊಂದುವರು ಎಂಬುದನ್ನು 'ಯ ಏನಮೇವಂ ವಿದುರಮೃತಾಸ್ತೇ ಭವಂತಿ' ಎಂಬಲ್ಲಿ ತಿಳಿಸಿದೆ. ಐದನೆಯ ಅಧ್ಯಾಯದಲ್ಲಿ ಕಪಿಲ ಋಷಿಯ ಹಾಗೂ ಸಾಂಖ್ಯತತ್ತ್ವದ ಉಲ್ಲೇಖವಿದೆ–'ಋಷಿಂ ಪ್ರಸೂತಂ ಕಪಿಲಂ' ಎಂಬುದಾಗಿ. 'ತ್ರಿಗುಣ' ಶಬ್ದದ ಉಲ್ಲೇಖವೂ ಇದೆ. ಆದರೂ ಇಲ್ಲಿ ಸಾಂಖ್ಯರ ನಿರೀಶ್ವರ ಸಿದ್ಧಾಂತದ ಛಾಯೆ ಇಲ್ಲ. ಎಲ್ಲದಕ್ಕೂ ಏಕೈಕಕಾರಣನೂ, ಸರ್ವಾಧಿಪನೂ, ಮಹಾತ್ಮನೂ ಆದ ಅದ್ವಿತೀಯನನ್ನು ಅರಿತರೆ ಸರ್ವಪಾಶಗಳಿಂದ ಮುಕ್ತನಾಗಬಹುದೆಂದು ಹೇಳಿದೆ.

'ಅನಾದ್ಯನಂತಂ ಕಲಿಲಸ್ಯಮಧ್ಯೇ
ವಿಶ್ವಸ್ಯ ಸ್ರಷ್ಟಾರಮನೇಕರೂಪಮ್ |
ವಿಶ್ವಸ್ಯೈಕಂ ಪರಿವೇಷ್ಟಿತಾರಂ
ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ||'

ಎಂಬಲ್ಲಿ ಇದನ್ನು ಕಾಣಬಹುದು.

ಆರನೆಯ ಅಧ್ಯಾಯ ಕರ್ಮಸಿದ್ಧಾಂತವನ್ನು ವಿವೇಚಿಸುತ್ತದೆ. ಲೋಕವು ತನ್ನ ಕರ್ಮಕ್ಕನು ಗುಣವಾಗಿ ಬಂಧಮೋಕ್ಷಾದಿಗಳಿಗೊಳಗಾಗುವುದು. ಕರ್ಮಕ್ಷಯದಿಂದ ಮೋಕ್ಷ. ಆದರೆ ಈಶ್ವರನು ಕರ್ಮಾಧ್ಯಕ್ಷನಾಗಿದ್ದಾನೆ. ಕರ್ಮಚಕ್ರದಿಂದ ಹೊರಗಿದ್ದಾನೆ. ಈಶ್ವರರಿಗೆ ಮಹೇಶ್ವರನಾಗಿದ್ದಾನೆ. ದೇವದೇವನಾಗಿದ್ದಾನೆ–'ಕರ್ಮಾಧ್ಯಕ್ಷಃ ಸರ್ವಭೂತಾದಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ'. ಸಾಂಖ್ಯ ಹಾಗೂ ಯೋಗದ ಉಲ್ಲೇಖ ಇಲ್ಲಿ ಸ್ಪಷ್ಟವಾಗಿ ಬಂದಿದೆ. ಮಹಾಮಹಿಮರಾದ ಶ್ವೇತಾಶ್ವತರರು ತಪಸ್ಸಿನ ಪ್ರಭಾವದಿಂದಲೂ ಭಗವತ್ಪ್ರಸಾದ ದಿಂದಲೂ ಅತ್ಯಾಶ್ರಮಿಗಳಿಗೆ ಪರಮಪವಿತ್ರವಾದ ಬ್ರಹ್ಮತತ್ತ್ವವನ್ನುಪದೇಶಿಸಿದರು. ಪ್ರಶಾಂತರಲ್ಲದವರಿಗೆ ಇದನ್ನು ಉಪದೇಶಿಸಬಾರದೆಂದು ಕೊನೆಯಲ್ಲಿ ಸೂಚನೆ ಇದೆ. ಪರಮತತ್ತ್ವದ ಸಾಕ್ಷಾತ್ಕಾರಕ್ಕೆ ಎಲ್ಲಕ್ಕೂ ಮೊದಲಾಗಿ ಗುರುಭಕ್ತಿ ಇರಬೇಕೆಂಬುದನ್ನು ಕೊನೆಯಲ್ಲಿ 'ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾಗುರೌ |' ಎಂಬಲ್ಲಿ ಒತ್ತಿ ಹೇಳಿದೆ.

ಇಲ್ಲಿ ಬರುವ ಈ ಸಂಕೀರ್ಣ ವಿಚಾರಗಳ ಆಧಾರದಿಂದ ಇದು ಇತರ ಉಪನಿಷತ್ತುಗಳಿಗಿಂತ ಈಚಿನದೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

**ಕೌಷೀತಕಿ ಉಪನಿಷತ್ತು**

ಇದು ಋಗ್ವೇದಕ್ಕೆ ಸೇರಿದ ಉಪನಿಷತ್ತು. 'ವಾಙ್ಮೇ ಮನಸಿ ಪ್ರತಿಷ್ಠಿತಾ' ಎಂಬುದು ಇದರ ಶಾಂತಿ ಮಂತ್ರ. ಇದು ಗದ್ಯಮಯವಾಗಿದೆ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ ಒಂದೊಂದು ಅಧ್ಯಾಯದಲ್ಲಿ ದೊಡ್ಡ ದೊಡ್ಡ ಗದ್ಯಮಂತ್ರಗಳಿವೆ. ಒಟ್ಟಿನಲ್ಲಿ 51 ಗದ್ಯಮಂತ್ರಗಳಿವೆ. (7+15+9+20). ವಂಶ ಪ್ರಕ್ರಮವನ್ನು ಎಲ್ಲಿಯೂ ಹೇಳಿಲ್ಲ. 'ಪ್ರಾಣೋ ಬ್ರಹ್ಮೇತಿಸ್ಮಾಹ ಕೌಷೀತಕಿಃ' ಎಂಬಲ್ಲಿ ಕೌಷೀತಕಿ ಎಂಬುವರು ಆಚಾರ್ಯರೆಂದು ಹೇಳಿದೆ. ಪ್ರಾಚೀನ ಉಪನಿಷತ್ತುಗಳಲ್ಲಿ ಬರುವ ವಿಚಾರವನ್ನೇ ಹೆಚ್ಚಿನ ವಿವರಣೆಗಳೊಡನೆ ಇಲ್ಲಿ ವಿವೇಚಿಸಲಾಗಿದೆ. ಮೊದಲ ಅಧ್ಯಾಯ ದೇವಯಾನ ಮತ್ತು ಪಿತೃಯಾನದ ವಿಸ್ತಾರವಾದ ವರ್ಣನೆಯನ್ನು ಕೊಡುತ್ತದೆ. ದೇವಯಾನದಲ್ಲಿ ಹೋಗುವವನು ಅಗ್ನಿಲೋಕ, ವಾಯುಲೋಕ, ಆದಿತ್ಯಲೋಕ, ವರುಣಲೋಕ, ಇಂದ್ರಲೋಕ, ಪ್ರಜಾಪತಿಲೋಕಗಳನ್ನು ದಾಟಿ ಬ್ರಹ್ಮಲೋಕಕ್ಕೆ ಬರುವನು. ಆಗ ವಿರಜಾ ನದಿಗೆ ಬರುವುದು, ಅವನನ್ನು ಐನೂರು ಮಂದಿ ಅಪ್ಸರ ಸ್ತ್ರೀಯರು ಪುಷ್ಪಮಾಲೆಗಳು, ಅಂಜನ, ಚೂರ್ಣ, ವಸ್ತ್ರ, ಫಲಗಳನ್ನು ತೆಗೆದುಕೊಂಡು ಬಂದು ಅವನಿಗೆ ಬ್ರಹ್ಮಾಲಂಕಾರ ಮಾಡುವುದು, ಮುಂದೆ ಅವನಿಗೆ ಬ್ರಹ್ಮಗಂಧ ಬರುವುದು, ಬ್ರಹ್ಮತೇಜಸ್ಸುಂಟಾಗುವುದು ಮುಂತಾದವೆಲ್ಲಾ ಇಲ್ಲಿ ಬರುವ ಹೆಚ್ಚಿನ ವಿವರಗಳು.

ಎರಡನೆಯ ಅಧ್ಯಾಯದಲ್ಲಿ ಪ್ರಾಣವಿದ್ಯೆಯ ವಿವೇಚನೆ ಇದೆ. 'ಪೈಂಗ್ಯರು ಪ್ರಾಣವು ಬ್ರಹ್ಮವೆಂದು ಉಪದೇಶಿಸಿದರೆಂದು ಪೈಂಗ್ಯರ ಉಲ್ಲೇಖ ಇಲ್ಲಿದೆ. ಪೈಂಗ್ಯರೂ ಕೌಷೀತಕಿಗಳೂ ಸಂನ್ಯಾಸಾಶ್ರಮಕ್ಕೆ ಹೆಚ್ಚಿನ ಬೆಲೆಯನ್ನು ಕೊಟ್ಟಿದ್ದರು. ಸಂನ್ಯಾಸ ಧರ್ಮದ ಪ್ರಶಂಸೆ ಇಲ್ಲಿ ಬಂದಿದೆ–'ತದ್ಯಥಾ ಗ್ರಾಮಂಭಿಕ್ಷಿತ್ವಾ' ಎಂದು. 'ಏಕಧನ' 'ದೈವಸ್ಮರ' ಮುಂತಾದ

(ದುರೂಹವಾದ) ವಿಷಯಗಳ ಉಲ್ಲೇಖ ಇಲ್ಲಿದೆ. ಸಾಧಕರು ಅನುಸರಿಸಬೇಕಾದ ವ್ರತಗಳ ವಿವರಣೆ ಇಲ್ಲಿ ಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪ್ರತರ್ದನ ದೈವೋದಾಸಿ ಮತ್ತು ಇಂದ್ರ ಇವರ ಸಂವಾದವಿದೆ. ಬೃಹದಾರಣ್ಯಕ ಮತ್ತು ಛಾಂದೋಗ್ಯ ಉಪನಿಷತ್ತುಗಳಲ್ಲಿ ಬರುವ ಅನೇಕಾನೇಕ ವಾಕ್ಯಖಂಡಗಳನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಗಾರ್ಗ್ಯ ಬಾಲಾಕಿ ಮತ್ತು ಕಾಶ್ಯ ಅಜಾತಶತ್ರುಗಳ ಸಂವಾದವಿದೆ. ಇದನ್ನೂ ಛಾಂದೋಗ್ಯೋಪನಿಷತ್ತಿನಿಂದ ತೆಗೆದುಕೊಳ್ಳಲಾಗಿದೆ.

## ಮೈತ್ರಾಯಣೀಯೋಪನಿಷತ್ತು

ಕೃಷ್ಣಯಜುರ್ವೇದದ ಮೈತ್ರೀ ಶಾಖೆಗೆ ಸೇರಿದುದು ಈ ಉಪನಿಷತ್ತು. 'ಇಯಂ ಬ್ರಹ್ಮವಿದ್ಯಾ ರಾಜನ್ನಸ್ಮಾಕಂ ಭಗವತಾ ಮೈತ್ರಿಣಾ ಖ್ಯಾತಾ' ಎಂದು ಹೇಳಿರುವಂತೆ ಮೈತ್ರಿ ಋಷಿಗಳಿಂದ ಉಪದಿಷ್ಟವಾದುದು ಈ ಉಪನಿಷತ್ತು. ಇದರಲ್ಲಿ ಏಳು ಪ್ರಪಾಠಕಗಳಿವೆ. ಕೊನೆಯ ಎರಡು ಪ್ರಪಾಠಕಗಳು ಖಿಲಗಳೆಂದು ಪರಿಗಣಿಸಲ್ಪಟ್ಟಿವೆ. ಬೃಹದ್ರಥ ಮತ್ತು ಶಾಕಯನರ ಸಂವಾದದಿಂದ ಇದು ಆರಂಭವಾಗುತ್ತದೆ. ಮೈತ್ರೀ ಋಷಿಗಳು ಉಪದೇಶಿಸಿದಂತೆ ಬ್ರಹ್ಮತತ್ತ್ವವನ್ನು ಶಾಕಾಯನರು ಉಪದೇಶಿಸುತ್ತಾರೆ. ವಾಲಖಿಲ್ಯ ಮತ್ತು ಪ್ರಜಾಪತಿಗಳ ಸಂವಾದವನ್ನು ಇಲ್ಲಿ ಉಲ್ಲೇಖಿಸಲಾಗಿದೆ. ವಿಮರ್ಶಕರು ಇದನ್ನು ಮೂರುಭಾಗಗಳಾಗಿ ವಿಭಾಗಿಸಿದ್ದಾರೆ. ಮೊದಲ ಭಾಗ ಬಹಳ ಹಳೆಯದಾಗಿ ಮೊದಲ ನಾಲ್ಕು ಅಧ್ಯಾಯಗಳನ್ನೊಳಗೊಂಡಿದೆ. ಎರಡನೆಯ ಭಾಗ ಆರನೆಯ ಅಧ್ಯಾಯದ 29ನೇ ಖಂಡದವರೆಗೆ ಇದೆ. ಮೂರನೆಯದು ಏಳನೇ ಅಧ್ಯಾಯದ ಪೂರ್ತಾ ಇರುವುದು. ಜ್ಯೋತಿಶ್ಶಾಸ್ತ್ರದ ವಿಚಾರವಾದ ಉಲ್ಲೇಖ ಈ ಉಪನಿಷತ್ತಿನಲ್ಲಿ ನಡುವಣ ಭಾಗದಲ್ಲಿ ಬರುತ್ತದೆ. ಇದರ ಆಧಾರದಿಂದ ಇದರ ಕಾಲ ಸುಮಾರು ಕ್ರಿ. ಪೂ. 1900 ಎಂದು ವಿಮರ್ಶಕರು ನಿರ್ಣಯಿಸಿದ್ದಾರೆ. ಈ ಉಪನಿಷತ್ತಿನಲ್ಲಿ ಇತರ ಉಪನಿಷತ್ತುಗಳ ವಾಕ್ಯಗಳನ್ನು 'ಅಥಾಹ' 'ಅನ್ಯತ್ರಾಹ' ಎಂಬ ಮಾತುಗಳಿಂದ ಉದ್ಧರಿಸಲಾಗಿದೆ. ಛಾಂದೋಗ್ಯ ಉಪನಿಷತ್ತು, ಕಠೋಪನಿಷತ್ತು, ಪ್ರಶ್ನೋಪನಿಷತ್ತು ಮುಂತಾದ ಉಪನಿಷತ್ತುಗಳಿಂದ ವಾಕ್ಯಖಂಡಗಳನ್ನು ಇಲ್ಲಿ ಉದಾಹರಿಸಲಾಗಿದೆ. ಇದರಿಂದ ಇತರ ಉಪನಿಷತ್ತುಗಳು ಇನ್ನು ಬಹಳ ಪ್ರಾಚೀನವಾಗಿ ಕ್ರಿ. ಪೂ. 2000ಕ್ಕೂ ಹಿಂದಿನವಾಗಿರಬೇಕೆಂದು ವಿಮರ್ಶಕರು ಊಹಿಸಿದ್ದಾರೆ.[13] ಇಲ್ಲಿ ಬರುವ ಮುಖ್ಯವಾದ ಅಂಶಗಳು ಹೀಗಿವೆ.

1. ಚಂದ್ರವಂಶದ ಹಾಗೂ ಸೂರ್ಯವಂಶದ ರಾಜರುಗಳನ್ನು ಬೇರೆ ಬೇರೆಯಾಗಿ ಹೇಳಿರುವುದು.

2. 'ಧ್ರುವಸ್ಯ ಚಲನಂ ದೃಷ್ಟಂ' ಎಂಬ ವಾಕ್ಯದಿಂದ ಜ್ಯೋತಿರ್ಗಣದ ನಿರೀಕ್ಷಣೆ ಸೂಕ್ಷ್ಮವಾಗಿ ನಡೆಯುತ್ತಿದ್ದಿರಬೇಕೆಂದು ಗೊತ್ತಾಗುತ್ತದೆ.

3. 'ಗುಣಮಯೇನ ಪಟೇನ ಆತ್ಮಾನಮಂತರ್ಧಾಯ' ಎಂಬುದರಿಂದ ಸಾಂಖ್ಯಸಿದ್ಧಾಂತ ಪರಿಚಯ ಚೆನ್ನಾಗಿದ್ದಿತು.

4. 'ನಟ ಇವ ಕ್ಷಣವೇಷಃ', 'ಚಿತ್ರಭಿತ್ತಿ' ಮುಂತಾದುವುಗಳಿಂದ ಅಭಿನಯ ಹಾಗೂ ಚಿತ್ರಕಲೆಗಳು ಅವರಿಗೆ ಪರಿಚಿತವಾಗಿದ್ದವೆಂದು ಗೊತ್ತಾಗುತ್ತದೆ.

13. *History of Sanskrit Literature*, C. V. Vaidya, pp. 222-223.

5. ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣಾ, ತರ್ಕ ಮತ್ತು ಸಮಾಧಿ– ಇವುಗಳನ್ನುಳ್ಳ ಷಡಂಗಯೋಗದ ವಿಚಾರ ಇಲ್ಲಿ ಪ್ರಸ್ತುತವಾಗಿದೆ. ಇದು ಪಾತಂಜಲ ಯೋಗಕ್ಕಿಂತ ಬೇರೆಯಾದುದು. ಯೋಗಮಾರ್ಗ ದಶೋಪನಿಷತ್ತುಗಳಷ್ಟೇ ಪ್ರಾಚೀನವಾದು ದೆಂದು ಗೊತ್ತಾಗುತ್ತದೆ.

6. ತ್ರಿಮೂರ್ತಿಗಳನ್ನೂ ಅವರ ಕೆಲಸಗಳನ್ನೂ ಹೇಳುವ 'ರುದ್ರಾಸ್ತಾಮಸೋಂಶಃ ಬ್ರಹ್ಮಾ ರಾಜಸಃ ವಿಷ್ಣುಃ ಸಾತ್ವಿಕಃ' ಮುಂತಾದುವು ಆರು ಏಳನೇ ಅಧ್ಯಾಯಗಳಲ್ಲಿ ಬರುತ್ತವೆ. ಈ ಅಧ್ಯಾಯಗಳು ಅರ್ವಾಚೀನವಾದವೆಂದು ಇದರಿಂದ ಗೊತ್ತಾಗುತ್ತದೆ.

### ಇತರ ಉಪನಿಷತ್ತುಗಳು

ಉಪನಿಷತ್ತುಗಳ ಸಂಖ್ಯೆ ಅನಂತವೆಂದು ಹೇಳುತ್ತಾರೆ. 1008 ಎಂದೂ 108 ಎಂದೂ 28 ಎಂದೂ ಮುಖ್ಯವಾಗಿ ನಿರ್ದೇಶಿಸುವುದು ಉಂಟು. ಅವುಗಳಲ್ಲಿ ಪ್ರಧಾನವಾದ ಹದಿಮೂರು ಉಪನಿಷತ್ತುಗಳ ವಿವರಗಳನ್ನು ಇದುವರೆಗೂ ವಿವೇಚಿಸಲಾಯಿತು. ಉಳಿದ ಉಪನಿಷತ್ತುಗಳಲ್ಲಿ ಅತ್ಯಂತ ಮುಖ್ಯವಾದುದು ನಾರಾಯಣೀಯ ಉಪನಿಷತ್ತು. ಇದು ತೈತ್ತಿರೀಯ ಆರಣ್ಯಕಕ್ಕೆ ಸೇರಿದ ಹತ್ತನೆಯ ಆರಣವಾಗಿದೆ. ಇದು ಖಿಲವೆಂದು ಎಣಿಸಲ್ಪಟ್ಟಿದೆ. ಸಹನಾವವತು ಎಂಬುದು ಇದರ ಶಾಂತಿಮಂತ್ರ. ಸಂಹಿತೆಗಳಿಂದ ತೆಗೆದುಕೊಳ್ಳಲ್ಪಟ್ಟ ಅನೇಕಾನೇಕ ಮಂತ್ರಗಳು ಈ ಉಪನಿಷತ್ತಿನಲ್ಲಿವೆ. ತ್ರಿಸುಪರ್ಣ, ಮಧುಮತೀ ಮಂತ್ರಗಳೂ ಸಂಧ್ಯಾಮಂತ್ರಗಳೂ ಇಲ್ಲಿ ಸೇರಿವೆ. ಗಾಯತ್ರೀ ಮಂತ್ರದಲ್ಲಿಯೇ ಇತರ ದೇವತೆಗಳನ್ನು ಸ್ತುತಿಸುವ ಮಂತ್ರಗಳಿವೆ. ಬಹಳ ದೀರ್ಘವಾದ ಈ ಉಪನಿಷತ್ತಿನಲ್ಲಿ 25 ಖಂಡಗಳಿವೆ. ಇಪ್ಪತ್ತಮೂರು ಮತ್ತು ಇಪ್ಪತ್ತನಾಲ್ಕನೆಯ ಖಂಡಗಳಲ್ಲಿ ನ್ಯಾಸಪರವಾದ ಮಂತ್ರಗಳಿವೆ. ಕೊನೆಯ ಖಂಡದಲ್ಲಿ ಆತ್ಮಯಾಗದ ಸುಂದರ ರೂಪಣವಿದೆ.

ಕೈವಲ್ಯೋಪನಿಷತ್ತು ಕೃಷ್ಣಯಜುರ್ವೇದಕ್ಕೇ ಸೇರಿದುದು. ಇದು ಗಾತ್ರದಲ್ಲಿ ಚಿಕ್ಕದು. ಆಶ್ವಲಾಯನ ಮತ್ತು ಪ್ರಜಾಪತಿ—ಇವರ ಸಂವಾದ ರೂಪವಾಗಿದೆ ಇದು. ಇದರಲ್ಲಿ ಎರಡು ಖಂಡಗಳೂ 24 ಮಂತ್ರಗಳೂ ಇವೆ. 'ಅಂತ್ಯಾಶ್ರಮಸ್ಥಃ ಸ್ವಗುರುಂ ಪ್ರಣಮ್ಯ' ಎಂದು ಹೇಳಿ ಮೋಕ್ಷಕ್ಕೆ ಸಂನ್ಯಾಸಾಶ್ರಮ ಮತ್ತು ಗುರು ಮುಖ್ಯವೆಂದು ಇದು ಒತ್ತಿಹೇಳುತ್ತದೆ. ಶೈವಪರವಾದುದು ಈ ಉಪನಿಷತ್ತು. ಇದರಲ್ಲಿ ಗೀತೆಯ ಅನೇಕ ಶ್ಲೋಕಗಳೂ ಸೇರಿಕೊಂಡಿವೆ.

ಜಾಬಾಲೋಪನಿಷತ್ತು ಶುಕ್ಲಯಜುರ್ವೇದಕ್ಕೆ ಸೇರಿದೆ. ಇದು ಗದ್ಯದಲ್ಲಿದೆ. ಯಾಜ್ಞವಲ್ಕ್ಯರ ಉಪದೇಶ ಇಲ್ಲಿದೆ. ಶತರುದ್ರೀಯ ಜಪವನ್ನು ಇದು ವಿಧಿಸುತ್ತದೆ. ಇದು ಶಿವಪರವಾದುದು. ಸಂನ್ಯಾಸವನ್ನೂ ಏಕಾಂತವಾಸವನ್ನೂ ಇದು 'ಸಂನ್ಯಾಸೇನ ದೇಹ ತ್ಯಾಗಂ ಕರೋತಿ ಸ ಪರಮಹಂಸಃ' ಎಂದೂ 'ಶೂನ್ಯಾಗಾರ ದೇವಗೃಹ ತೃಣಕೂಟವಲ್ಮೀಕ' ಎಂದು ಹೇಳಿ ವಿಧಿಸುತ್ತದೆ.

ಬೃಹಜ್ಜಾಬಾಲ ಎಂಬ ಉಪನಿಷತ್ತು ಅಥರ್ವಶಾಖೆಗೆ ಸೇರಿದ್ದು. 'ಭದ್ರಂ ಕರ್ಣೇಭಿಃ' ಎಂಬುದು ಇದರ ಶಾಂತಿಮಂತ್ರ. ಇದರಲ್ಲಿ ಎಂಟು ಬ್ರಾಹ್ಮಣಗಳಿವೆ. ಇದರ ಕೆಲವು ಭಾಗಗಳು ಗದ್ಯದಲ್ಲಿಯೂ ಕೆಲವು ಪದ್ಯದಲ್ಲಿಯೂ ಇವೆ. ಭಸ್ಮಧಾರಣೆಯ ಮಹತ್ವವನ್ನು ಕುರಿತು ಭುಸುಂಡ ಮತ್ತು ಕಾಲಾಗ್ನಿರುದ್ರರಿಗೆ ನಡೆದ ಸಂಭಾಷಣೆಯ ರೂಪದಲ್ಲಿ ಇದು ಇದೆ. 'ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಪಂಚನಾಮಾನಿ ಭಸ್ಮನಃ' ಎಂದು ಭಸ್ಮದ ಹೆಸರುಗಳನ್ನು ಹೇಳಿದೆ. ಅನೇಕ ಪರಮಹಂಸರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಿದೆ. ಅವುಗಳಲ್ಲಿ

ದೂರ್ವಾಸ, ಋಭು, ನಿದಾಘ, ಜಡಭರತ, ದತ್ತಾತ್ರೇಯ, ರೈವತಕ, ಭುಸುಂಡ ಮುಂತಾದ ಪೌರಾಣಿಕ ನಾಮಗಳೂ ಸೇರಿವೆ.

ಜಾಬಾಲೀ ಉಪನಿಷತ್ತು ಎಂಬುದು ಸಾಮವೇದಕ್ಕೆ ಸೇರಿದೆ. ಜಾಬಾಲೀ ಮತ್ತು ಪೈಪ್ಪಲಾದಿಗಳ ಸಂವಾದ ರೂಪದಲ್ಲಿ ಇದು ಇದೆ. ಜೀವನನ್ನು ಪಶುವೆಂದೂ ಈಶನನ್ನು ಪಶುಪತಿ ಎಂದೂ ಇದು ಕರೆಯುತ್ತದೆ. ಭಸ್ಮಧಾರಣೆಯ ವಿಚಾರವೂ ಇಲ್ಲಿ ಬರುತ್ತದೆ. ನಾಮಜಪಕ್ಕೆ ಇದು ಪ್ರಾಶಸ್ತ್ಯ ಕೊಡುತ್ತದೆ.

ಮುಕ್ತಿಕೋಪನಿಷತ್ತಿನಲ್ಲಿ ನೂರೆಂಟು ಉಪನಿಷತ್ತುಗಳ ನಾಮ ನಿರ್ದೇಶವಿದೆ. ಋಗ್ವೇದಕ್ಕೆ 10, ಶುಕ್ಲಯಜುರ್ವೇದಕ್ಕೆ 19, ಕೃಷ್ಣಯಜುರ್ವೇದಕ್ಕೆ 32, ಸಾಮವೇದಕ್ಕೆ 16 ಮತ್ತು ಅಥರ್ವವೇದಕ್ಕೆ 31 ಉಪನಿಷತ್ತುಗಳು ಸೇರಿವೆಯೆಂದು ಇಲ್ಲಿ ಹೇಳಿದೆ.

ಈ ಉಪನಿಷತ್ತುಗಳಲ್ಲದೆ ಇನ್ನೂ ಅನೇಕ ಉಪನಿಷತ್ತುಗಳು ವಿಶಿಷ್ಟವಾದ ದೇವತೆಗಳ ಉಪಾಸನೆಗೇ ಮೀಸಲಾಗಿವೆ. ಪ್ರಧಾನವಾದ ಉಪನಿಷತ್ತುಗಳ ವಿಷಯ ವಿವೇಚನೆಯನ್ನು ಇದುವರೆಗೆ ಮಾಡಲಾಯಿತು. ಮುಂದಿನ ಪ್ರಕರಣದಲ್ಲಿ ಉಪನಿಷದ್ದರ್ಶನದ ಸ್ವರೂಪವನ್ನು ವಿವರಿಸಲಾಗುವುದು.

## ಉಪನಿಷದ್ದರ್ಶನ

ಬ್ರಾಹ್ಮಣ ಗ್ರಂಥಗಳು ಕರ್ಮಕಾಂಡವನ್ನು ಪ್ರತಿಪಾದಿಸಿದರೆ ಇದಕ್ಕೆ ಬದಲಾಗಿ ಉಪನಿಷತ್ತುಗಳು ಜ್ಞಾನಕ್ಕೆ ಪ್ರಾಧಾನ್ಯ ಕೊಡುತ್ತವೆ. ಸಕಾಮವಾಗಿ ಮಾಡುವ ಯಾಗಾದಿಗಳಿಂದ ಬರುವ ಫಲ ಅಲ್ಪವೂ ಅಸ್ಥಿರವೂ ಆದುದೆಂದು ಪ್ರತಿಪಾದಿಸಿ ಆ ಕಾರಣದಿಂದಲೇ ಇವುಗಳಲ್ಲಿ ನಿರತರಾಗದೆ ಬ್ರಹ್ಮಜ್ಞಾನವನ್ನು ಸಂಪಾದಿಸಿ ಸಂಸಾರದ ಕ್ಲೇಶಗಳಿಂದ ಮುಕ್ತರಾಗಬೇಕೆಂದು ಉಪನಿಷತ್ತು ಉಪದೇಶಿಸುವುದು. ವಿದ್ಯೆಗಳು 'ಅಪರಾವಿದ್ಯಾ' ಮತ್ತು 'ಪರಾವಿದ್ಯಾ' ಎಂದು ಎರಡು. ಕೇವಲ ಋಗ್ವೇದ ಯಜುರ್ವೇದ ಸಾಮವೇದಾದಿಗಳು ಅಪರಾವಿದ್ಯೆ ಎನಿಸುವುವು. ಬ್ರಹ್ಮಜ್ಞಾನವನ್ನುಂಟುಮಾಡಿಕೊಡುವ ಭಾಗಗಳೇ ಪರಾವಿದ್ಯೆ ಎನ್ನಿಸುವುವು.[14] ಇದನ್ನೇ 'ಅಥ ಪರಾ ಯಯಾತದಕ್ಷರಮಧಿಗಮ್ಯತೇ' ಎಂದು ಹೇಳಲಾಗಿದೆ. ಈ ಬ್ರಹ್ಮವಿದ್ಯೆ ಸರ್ವ ಶ್ರೇಷ್ಠವಾದುದು. 'ನ ವೇದಾಂತಾತ್ಪರಂ ಶಾಸ್ತ್ರಂ' ಎಂದು ಆ ಕಾರಣದಿಂದಲೇ ಹಿರಿಯರು ಸಾರಿದ್ದಾರೆ. ಹೀಗೆ ಉಪನಿಷತ್ತುಗಳು ಬ್ರಾಹ್ಮಣ ಗ್ರಂಥಗಳೊಡನೆ ಸೇರಿಕೊಂಡಿದ್ದರೂ ಇವುಗಳ ವಿಚಾರಧಾರೆ ಬೇರೆಯಾಗಿದೆ. ಯಾಗಾದಿಗಳ ಪ್ರತಿಪಾದನೆ ಬ್ರಾಹ್ಮಣ ಗ್ರಂಥಗಳ ವಿಷಯವಾದರೆ ಆ ಯಾಗಾದಿಗಳನ್ನು ನಿಂದಿಸಿ ಅಂಥ ಕಾಮ್ಯಕರ್ಮಗಳಿಂದ ಎಂದಿಗೂ ಆತ್ಮೋದ್ಧಾರವಿಲ್ಲ ವೆಂಬುದನ್ನು ಉಪನಿಷತ್ತು ಸಿದ್ಧಾಂತಿಸುವುದು. ಇದು ಬಾಹ್ಯಯಜ್ಞವನ್ನು ರೂಪಣಮಾಡಿ ಅದು ಆತ್ಮಯಜ್ಞದ ಪ್ರತೀಕವೆಂದೂ ಸಾರುತ್ತದೆ.[15] ಈ ರೀತಿಯಲ್ಲಿ ಭಾರತೀಯ ವಿಚಾರಸರಣಿ ಈ ಕಾಲದಲ್ಲಿ ಗಮನಾರ್ಹವಾಗಿ ಬದಲಾಯಿತು.

ಉಪನಿಷತ್ತು ಎಂದರೇನು ? ಉಪನಿಷತ್ತೆಂದರೆ ರಹಸ್ಯವಾದ ವಿದ್ಯೆ. 'ಏಷಾ ವೇದೋಪನಿಷತ್' ಎಂದು ಇದನ್ನೇ ಹೇಳಲಾಗಿದೆ.[16] ಗುರುವಿನ ಸಮೀಪದಲ್ಲಿ ಕುಳಿತು

---

14. ಮುಂಡಕ ಉ. 1-1-15 15. ಬೃ. ಉ. 1-1-2 ; ಮಹಾನಾರಾಯಣ ಉ. 25-1 ; ಛಾಂ. ಉ. 3. 16. ಉಪನಿಷತ್ತೆಂಬ ಪದಕ್ಕೆ ಮುಖ್ಯಾರ್ಥ ಬ್ರಹ್ಮವಿದ್ಯೆ ಎಂದು ಶಂಕರಾಚಾರ್ಯರ ಅಭಿಪ್ರಾಯ. ವಿವರಗಳಿಗೆ ಕಠೋಪನಿಷತ್-ಶಂಕರ ಭಾಷ್ಯದ ಪೀಠಿಕೆ ನೋಡಿ.

ಗುರುವಿನಿಂದ ಅರಿಯಬೇಕಾದ ರಹಸ್ಯತಮವಾದ ಜ್ಞಾನವೇ ಉಪನಿಷತ್ತು. ಈ ಜ್ಞಾನವನ್ನು ಸುಮ್ಮನೆ ಎಲ್ಲರಿಗೂ ಉಪದೇಶಿಸಿಬಿಡಬಾರದೆಂಬುದು ಶ್ರುತಿಯ ಆಣತಿ. ಶಿಷ್ಯನನ್ನು ವಿಧವಿಧವಾದ ಪರೀಕ್ಷೆಗೊಳಪಡಿಸಿ ಅವನು ಈ ಜ್ಞಾನಕ್ಕಾಗಿ ಬಹಳವಾಗಿ ಆಸಕ್ತಿಯನ್ನು ಹೊಂದಿದ್ದರೆ ಮಾತ್ರ ಅವನಿಗೆ ಉಪದೇಶಿಸಬೇಕು. ಈ ಲೋಕ ಕರ್ಮಕ್ಕೊಳಗಾಗಿ ಜನನಮರಣಗಳಿಗೀಡಾಗಿರುವುದನ್ನು ಕಂಡು ಇದರ ಪರಿಹಾರಕ್ಕೆ ಉಪಾಯವನ್ನು ಕಾಣದ ಖಿನ್ನನಾದವನು ಇದನ್ನುಪದೇಶಿಸಬಲ್ಲ ಗುರುವನ್ನು ಹುಡುಕಿಕೊಂಡು ಹೋಗಬೇಕೆಂದೂ, ಅಂಥ ಸಮ್ಯಗುಪಸನ್ನನೂ, ಪ್ರಶಾಂತಚಿತ್ತನೂ, ಶಮಾನ್ವಿತನೂ ಆದ ಶಿಷ್ಯನಿಗೆ ಗುರುವು ಆ ಬ್ರಹ್ಮವಿದ್ಯೆಯನ್ನು ಯಥಾರ್ಥವಾಗಿ ಉಪದೇಶಿಸಬೇಕೆಂದೂ ಮುಂಡಕೋಪನಿಷತ್ತು ವಿಧಿಸುತ್ತದೆ.[17] ಈ ವಿಧವಾದ ಕಠಿಣ ಪರೀಕ್ಷೆಗಳನ್ನೇಕೆ ಮಾಡುತ್ತಿದ್ದರೆಂಬುದು ನಮ್ಮ ಮುಂದೆ ಬರುವ ಪ್ರಶ್ನೆ. ಈ ಅಮೂಲ್ಯವಾದ ಬ್ರಹ್ಮವಿದ್ಯೆಯನ್ನು ಪಾತ್ರಾಪಾತ್ರ ವಿವೇಚನೆಯಿಲ್ಲದೆ ಎಲ್ಲರಿಗೂ ಸಹಸಾ ತಿಳಿಸಿಬಿಟ್ಟದ್ದರೆ ಅದರಿಂದ ಉಪಕಾರವಾಗುವ ಬದಲು ಅಪಕಾರವೇ ಆಗುತ್ತಿತ್ತೆಂಬುದು ಸಿದ್ಧವಾದ ವಿಚಾರ. ಈ ವಿಧವಾದ ದುರುಪಯೋಗಗಳನ್ನು ತಪ್ಪಿಸಿ, ಈ ಅಮೂಲ್ಯವಾದ ಬ್ರಹ್ಮವಿದ್ಯೆಯನ್ನು ಉಜ್ವಲವಾಗಿಟ್ಟು ಇದನ್ನು ಪಡೆಯಲು ಆತುರರಾದ ಜ್ಞಾನಪಿಪಾಸುಗಳಿಗೆ ಮಾತ್ರ ಇದನ್ನು ನಿರ್ವಂಚನೆಯಿಂದ ಧಾರೆಯೆರೆಯಬೇಕೆಂಬ ಉನ್ನತವಾದ ಆದರ್ಶವನ್ನಿಟ್ಟುಕೊಂಡು ಈ ಬಗೆಯ ಕಟ್ಟುಪಾಡುಗಳಿಗಿದನ್ನು ಒಳಪಡಿಸಿದರು.[18]

ಮಾನವ ಜೀವನದ ಮತ್ತು ವಿಶ್ವಕಾರಣದ ವಿಚಾರದಲ್ಲಿ ವಿವೇಚನೆ ನಡೆಸುವ ಇವು ಆಧ್ಯಾತ್ಮಿಕ ಭಾವನೆಗಳ ಇತಿಹಾಸದಲ್ಲಿ ಅತಿ ಮುಖ್ಯವಾದ ಪ್ರಘಟ್ಟವಾಗಿವೆ. ಭವ್ಯವೂ, ಸಾರ್ವಜನೀನವೂ ಆದ ವಿಚಾರ ಸರಣಿಯಿಂದಲೂ ಅತ್ಯಪೂರ್ವವಾದ ಮೋಹಕ ಶೈಲಿಯಿಂದಲೂ, ಸರಳ ಸುಂದರವಾದ ಸಂವಾದಗಳಿಂದಲೂ ಇವು ಮಾನವ ಕೋಟಿಯ ಮೇಲೆಯೇ ತಮ್ಮ ಪ್ರಭಾವ ಬೀರಿವೆ. ಗಾಢವೂ, ಗೂಢವೂ ಆದಂತೆಯೇ ಸರಳವೂ ಸುಂದರವೂ ಆದವು ಇವು. ಈ ಉಪನಿಷತ್ತುಗಳೆಲ್ಲಾ ಸಾಮಾನ್ಯವಾಗಿ ಸಂವಾದಗಳ ರೂಪದಲ್ಲಿವೆ. ಇವು ಕೇವಲ ಮುಖ್ಯಸ್ಥವಾಗಿಯೇ ಬಳಕೆಯಲ್ಲಿ ಇದ್ದ ಕಾರಣ ಅನೇಕ ಕಡೆ ಇದ್ದಿರಬಹುದಾದ ವಿವರಣೆಗಳು ಈಗ ಕಳೆದುಹೋಗಿವೆ. ಪ್ರವಚನ ಕಾಲದಲ್ಲಿ ಸಂಪ್ರದಾಯಕ್ಕನುಸಾರ ಆಚಾರ್ಯರುಗಳು ಅವುಗಳನ್ನೇ ವಿವರಿಸುತ್ತಿದ್ದರು. ಹೀಗೆ ಸೂತ್ರರೂಪದಲ್ಲಿರುವ ಅನೇಕ ವಾಕ್ಯಗಳನ್ನು ಇವು ಒಳಗೊಂಡಿರುವ ಕಾರಣವೇ ಉಪನಿಷತ್ತುಗಳಿಗೆ ಬಗೆಬಗೆಯಾದ ಅರ್ಥವ್ಯಕ್ತಿಗಳನ್ನು ಹೇಳಲವಕಾಶವಾಗಿದೆ. ಬಹಳ ಪ್ರಧಾನವಾದ ವಿಚಾರಗಳಲ್ಲಿ ಉಪನಿಷತ್ತಿನ ಉಪದೇಶ ಹೀಗೆ ಗೂಢವಾಗಿಯೇ ಉಳಿದುಹೋಗಿದೆ.

ಉಪನಿಷತ್ತುಗಳು ಒಂದೇ ತತ್ತ್ವವನ್ನು ಉಪದೇಶಿಸುವುವೇ ? ಅಥವಾ ಬೇರೆ ಬೇರೆ ಅನೇಕ ತತ್ತ್ವಗಳನ್ನು ಉಪದೇಶಿಸುವುವೇ ? ಇದು ಮುಖ್ಯವಾದ ಪ್ರಶ್ನೆ. ಸಾಂಖ್ಯ, ಯೋಗ ಮೊದಲಾದ ದರ್ಶನಗಳ ಹಲಕೆಲವು ಅಂಶಗಳು ಅಲ್ಲಿ ಬರುತ್ತವೆ.[19] ಪಂಚತನ್ಮಾತ್ರೆಗಳೇ ಮೊದಲಾದುವುಗಳೊಡನೆ ಕೂಡಿದ ಪದಾರ್ಥ ವಿಭಜನೆಯ ಉಲ್ಲೇಖ ಭಾರತೀಯ ದರ್ಶನದಲ್ಲಿ ಮೊಟ್ಟಮೊದಲಾಗಿ ಉಪನಿಷತ್ತುಗಳಲ್ಲಿ ಬರುತ್ತದೆ. ಇವೆಲ್ಲದರಿಂದ ಉಪನಿಷತ್ತು ಕೇವಲ ಒಂದಲ್ಲ ಹಲವಾರು ಸಿದ್ಧಾಂತಗಳನ್ನು ಉಪದೇಶಿಸುವುವೆಂದು ಅರಿಯಬಹುದು.

17. ಉ. 1-2-12, 13 ;
18. ವಿವರಗಳಿಗೆ ನೋಡಿ Foreword to *The Hymns to the Mystic Fire*, Aurobindo.
19. ಸಾಂಖ್ಯ ದರ್ಶನದ ವಿಚಾರಕ್ಕೆ ನೋಡಿ : ಛಾಂ. 6-9 ; ಶ್ವೇ. ಉ. 4-5.

ಭಿನ್ನ ಭಿನ್ನಕಾಲದಲ್ಲಿ ಭಿನ್ನ ಭಿನ್ನ ದೇಶಗಳಲ್ಲಿದ್ದ ಬೇರೆ ಬೇರೆ ಅನುಭಾವಿಗಳ ಅನುಭವ ಸಾರವನ್ನೊಳಗೊಂಡು ಕೊನೆಗೆ ಒಂದುಗೂಡಿಸಲಾದ ಈ ಉಪನಿಷದ್ಗ್ರಂಥಗಳು ಖುಕ್ಸಂಹಿತೆಯಂತೆಯೇ ಸಂಗ್ರಹಗಳಾದ ಕಾರಣ ಹಲವಾರು ಸಿದ್ಧಾಂತಗಳನ್ನು ಪ್ರತಿಪಾದಿಸುವುವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[20]

ಪೂರ್ವಗ್ರಹವಿಲ್ಲದೆ ಇವುಗಳನ್ನು ಓದಿದರೆ ಈ ಅಂಶ ಸ್ಪಷ್ಟವಾದೀತು! ಉಪನಿಷತ್ತುಗಳು ಶ್ರುತಿಗಳ ಕೋಟಿಯಲ್ಲಿ ಸೇರಿ ಪರಮ ಪ್ರಮಾಣವಾದುವೆಂಬ ಅಂಶದಲ್ಲಿ ಎಲ್ಲರಿಗೂ ಒಮ್ಮತವಿದ್ದರೂ ಉಪನಿಷತ್ತಿನ ಉಪದೇಶಗಳ ಮತ್ತು ಸಿದ್ಧಾಂತಗಳ ವಿಚಾರದಲ್ಲಿ ಏಕಾಭಿಪ್ರಾಯವಿಲ್ಲ. ಔಪನಿಷದಸಿದ್ಧಾಂತದ ವಿಚಾರದಲ್ಲಿ ಬಹಳ ಹಿಂದಿನ ಕಾಲದಿಂದಲೂ ಭಿನ್ನಾಭಿಪ್ರಾಯಗಳಿದ್ದವೆಂಬ ಅಂಶವನ್ನು ಬ್ರಹ್ಮಸೂತ್ರಗಳಲ್ಲಿ ಬಾದರಾಯಣರು ಇತರ ಆಚಾರ್ಯರುಗಳ ಅಭಿಪ್ರಾಯವನ್ನು ಉದಾಹರಿಸುವುದರಿಂದಲೂ ತಿಳಿಯಬಹುದು.

ಹೀಗೆ ಉಪನಿಷತ್ತುಗಳಲ್ಲಿ ಅನೇಕ ಸಿದ್ಧಾಂತಗಳ ಉಲ್ಲೇಖವಿದ್ದರೂ ಅವುಗಳೆಲ್ಲಕ್ಕೂ ಸಮಪ್ರಾಧಾನ್ಯ ದೊರಕಿಲ್ಲ. ಕೆಲವು ಅಂಶಗಳು ಮಿಂಚಿನಂತೆ ತೋರಿ ಮಾಯವಾಗುವುವು. ಮತ್ತೆ ಕೆಲವು ಸಂಗ್ರಹವಾಗಿ ಹೇಳಲ್ಪಟ್ಟಿವೆ. ಆದರೆ ಇವುಗಳೆಲ್ಲೆಲ್ಲಾ ಪ್ರಧಾನತಮವಾದುದು ವೇದಾಂತ ದರ್ಶನದ ಪ್ರತಿಪಾದನೆ. ಬ್ರಹ್ಮ ತತ್ತ್ವವನ್ನು ನಿರೂಪಿಸುವ ತತ್ತ್ವ ಪದ್ಧತಿಯೇ ವೇದಾಂತ ದರ್ಶನ. ಇದನ್ನು ಪ್ರತಿಪಾದಿಸುವುದರಿಂದಲೂ, ಇವು ವೇದಗಳ ಕೊನೆಯ ಭಾಗಗಳಾಗಿರುವುದರಿಂದಲೂ ಇವಕ್ಕೆ ವೇದಾಂತಗಳೆಂಬ ಹೆಸರೂ ರೂಢಿಗೆ ಬಂದಿತು.

ಉಪನಿಷತ್ತುಗಳಲ್ಲಿ ಬರುವ ವಿಚಾರವೇನು ? ಇಲ್ಲಿ ಬರುವ ವಿಚಾರ ಸತ್ಯದ ಅನ್ವೇಷಣೆಯೇ ! ಜಗತ್ಕಾರಣವು ಯಾವುದು ? ನಾವು ಎಲ್ಲಿಂದ ಬಂದೆವು ? ಯಾರ ಕಟ್ಟಳೆಗಳೊಳಗಾಗಿ ಇಲ್ಲಿ ಸುಖದುಃಖಗಳನ್ನನುಭವಿಸುತ್ತಾ ತೊಳಲುವೆವು? ಇಲ್ಲಿಂದ ಮುಂದೆ ನಾವು ಹೋಗುವುದಾದರೂ ಎಲ್ಲಿಗೆ? ಈ ಬಗೆಯಾದ ತತ್ತ್ವ ವಿವೇಚನೆ ಉಪನಿಷತ್ತಿನಲ್ಲಿದೆ. ಶ್ವೇತಾಶ್ವತರ ಉಪನಿಷತ್ತು ಈ ಅಂಶವನ್ನೇ

'ಕಿಂಕಾರಣಂ ಬ್ರಹ್ಮ ಕುತಃ ಸ್ಮ ಜಾತಾ
ಜೀವಾಮ ಕೇನ ಕ್ವಚ ಸಂಪ್ರತಿಷ್ಠಾಃ |
ಅಧಿಷ್ಠಿತಾಃ ಕೇನ ಸುಖೇತರೇಷು
ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಂ ||' (ಶ್ವೇ. ಉ. 1-1)

ಎಂದು ಹೇಳುತ್ತದೆ.

ಈ ಲೋಕದಲ್ಲಿ ನಮ್ಮ ದಿನ ದಿನದ ವ್ಯವಹಾರಕ್ಕೆ ಗೋಚರವಾಗುತ್ತಿರುವ ವಿಚಾರಗಳೂ, ಸುಖದುಃಖಗಳೂ ನಿತ್ಯವೇ ಅಲ್ಲವೇ ಎಂಬ ಜಿಜ್ಞಾಸೆ ಇಲ್ಲಿ ಬೆಳೆದು ಇವುಗಳೆಲ್ಲಾ ತೋರಿಕೆಗಳಾಗಿ ಅಲ್ಪವೂ, ಅಸ್ಥಿರವೂ ಆದುವುಗಳೆಂಬ ಅರಿವು ಮಾಡಿದೆ. ಇವುಗಳ ಹಿನ್ನೆಲೆಯಲ್ಲಿ ಯಾವುದೋ ಒಂದು ಸತ್ಯಸ್ಥಿತಿಯಿದೆಯೆಂದೂ, ಅದನ್ನು ಪಡೆದರೆ ಮನಃಶಾಂತಿಯೊದಗುವುದೆಂದೂ ತಿಳಿಸಲಾಗಿದೆ. ಈಗಿನ ಸ್ಥಿತಿಯಲ್ಲಿ ನಮ್ಮ ಅರಿವು ಅಜ್ಞಾನದಿಂದ ಮರೆಯಾಗಿರುವುದೆಂದು

20. (a) Vaishnavism, Saivism and minor religious systems R. G. Bandarkar, p. 1.

(b) 'The upanishads do not embody a single doctrine and the doubt is confirmed by an independent study of these ardent works there are not two or three discordent views in the upanishads but several.'–*Outlines of Indian Philosophy*, M. Hiriyanna, p. 53.

ನಾವರಿಯುವೆವು. ಪ್ರಪಂಚದ ಸಕಲ ವಿಧವಾದ ಭೋಗಗಳನ್ನೂ ಜರಾಮೃತ್ಯುಗಳು ಕೊನೆಗಾಣಿಸುವುವು. ಆದರಿಂದ ಈ ಸಂಸಾರದಲ್ಲಿ ಸುಖ ಕಡಿಮೆ. ಆ ಕಾರಣದಿಂದಲೇ ನಿರತಿಶಯವಾದ ಆನಂದವನ್ನು ಪಡೆಯಲು ನಾವು ಯತ್ನಿಸಬೇಕು. ಈ ಗುರಿ ನಮ್ಮ ಮುಂದೆ ನಿಂತಾಗ ಆತ್ಮಾನ್ವೇಷಣೆಯ ಮತ್ತು ಸತ್ಯಸಾಕ್ಷಾತ್ಕಾರದ ಮಹತ್ವ ಗೋಚರಿಸುವುದು. ಆಗಲೀಗ ಮನಃಪೂರ್ವಕವಾಗಿ ನಾವು

ಅಸತೋ ಮಾ ಸದ್ಗಮಯ |
ತಮಸೋ ಮಾ ಜ್ಯೋತಿರ್ಗಮಯ |
ಮೃತ್ಯೋರ್ಮಾ ಅಮೃತಂಗಮಯ || (ಬೃ. ಉ. 1-3-27)

ಎಂದು ಬೇಡಿಕೆಯನ್ನು ಸಲ್ಲಿಸುವೆವು.

ಮೇಲೆ ಹೇಳಿದಂತೆ ಉಪನಿಷತ್ತುಗಳಲ್ಲಿ ಬ್ರಹ್ಮವಿಚಾರ ಮತ್ತು ಆತ್ಮವಿಚಾರ ಮಾಡಲಾಗಿದೆ. ಭಾರತೀಯ ದರ್ಶನ ನಿಂತಿರುವುದಾದರೂ ಬ್ರಹ್ಮ ಮತ್ತು ಆತ್ಮ ಎಂಬ ಇವೆರಡು ಸ್ತಂಭಗಳ ಮೇಲೆಯೇ ![21] ಬ್ರಹ್ಮಶಬ್ದ ಜಗತ್ಕಾರಣವಾದ ಪರವಸ್ತುವಿಗೆ ಅನ್ವಯಿಸುವುದು. ಆತ್ಮಶಬ್ದವಾದರೋ ದೇಹಾಂತರ್ಗತನಾದ ಜೀವನನ್ನು ಹೇಳುತ್ತದೆ. ಈ ಬಗೆಯ ಜೀವಬ್ರಹ್ಮರುಗಳ ಭಾವನೆ ಬಹಳ ಪ್ರಾಚೀನವಾದುದು. ವೇದಸಂಹಿತೆಗಳಲ್ಲಿಯೂ ಈ ಭಾವವಿದೆ. ಪ್ರಣಿಧಾನವು ತೀವ್ರವಾದಂತೆಲ್ಲಾ, ಅನುಭವವು ಗಾಢವಾದಂತೆಲ್ಲಾ ಅನುಭಾವಿಗಳು ಬ್ರಹ್ಮನಿಗೂ ಜೀವನಿಗೂ ಸಂಬಂಧವಿರಲೇಬೇಕೆಂದು ಅರಿತು ಜೀವಬ್ರಹ್ಮರುಗಳ ಸಂಬಂಧವನ್ನು ಸಾರಿ ಹೇಳಿದರು.[22] ಈ ರೀತಿಯಾಗಿ ಜೀವಬ್ರಹ್ಮರ ಸಂಬಂಧವನ್ನು ಉಪನಿಷತ್ತು ಬಗೆಬಗೆಯಾಗಿ ಹೇಳುತ್ತದೆ. ಈ ಭಾವಗಳು ಸಂದಿಗ್ಧವಾಗಿ ಹೋದ ಕಾರಣ ನಾನಾ ಬಗೆಯ ಅರ್ಥ ಕಲ್ಪನೆಗೆ ಅವಕಾಶವಾಗಿದೆ. ಜೀವಪರಮರಿಗೆ ಐಕ್ಯವನ್ನು ಕೆಲವು ವಾಕ್ಯಗಳು ಹೇಳಿರುವುದೂ, ಇನ್ನೂ ಕೆಲವು ವಾಕ್ಯಗಳು ಅವುಗಳಿಗೆ ಭೇದವನ್ನು ಹೇಳಿರುವುದೂ ಈ ಬಗೆಯ ಸಂಶಯಗಳಿಗೆ ಮೂಲವಾಗಿದೆ.

## ಬ್ರಹ್ಮ

ಉಪನಿಷತ್ತು ಜಗತ್ಕಾರಣವಾದ ಪರವಸ್ತುವನ್ನು ನಾನಾ ಹೆಸರುಗಳಿಂದ ಕರೆಯುತ್ತದೆ. ಸತ್, ಆತ್ಮಾ, ಬ್ರಹ್ಮ, ಅಕ್ಷರ, ಆಕಾಶ ಮೊದಲಾದ ಶಬ್ದಗಳನ್ನು ಇದು ಬಳಸುತ್ತದೆ. ಸಮಸ್ತ ಲೋಕಗಳ ವ್ಯವಹಾರವೂ ಈ ಬ್ರಹ್ಮವಸ್ತುವಿಗೆ ಧೀನವಾಗಿದೆಯೆಂದೂ, ಇದರಿಂದಲೇ ಲೋಕಗಳ ಸೃಷ್ಟಿ, ಸ್ಥಿತಿ ಮತ್ತು ಲಯಗಳೆಂದೂ ಇವು ಹೇಳುತ್ತವೆ.[23] ಸರ್ವಕಾರಣಕ್ಕೂ ಕಾರಣನಾದ ಈ ಪರಮಾತ್ಮನು ಸರ್ವವನ್ನತಿಶಯಿಸಿದವನೂ, ನಿಸ್ಸಮಾಭ್ಯಧಿಕನೂ, ಸರ್ವಶಕ್ತನೂ ಆದವನು. ಮಹತ್ತಿಗಿಂತ ಮಹತ್ತಮನೂ ಅಣುವಿಗೀತ ಅಣುವೂ ಆದ ಇವನೇ,[24] ಸರ್ವಭೂತಗಳಿಗೂ ಅಂತರಾತ್ಮನಾಗಿದ್ದಾನೆ.[25] ಇವನು ಸರ್ವವನ್ನೂ ವ್ಯಾಪಿಸಿದ್ದಾನೆ.[26] ಎಲ್ಲರ ಹೃದಯಗುಹೆಯನ್ನು ಪ್ರವೇಶಿಸಿರುವ ಇವನು ದುರ್ದರ್ಶ

21. These terms are two 'Brahman' and 'Atman' which have been described as 'the two pillars on which rests nearly the whole edifice of Indian philosophy'—*Outlines of Indian Philosophy,* M. Hiriyanna, p. 54

22. *Outlines of Indian Philosophy,* M.Hiriyanna, p. 56

23. ತೈ. ಉ. 3-1 24. ಕಠ 1-2-20

25. ಕಠ 2-2-12 26. ಈಶಾವಾಸ್ಯ 1

ನಾಗಿದ್ದಾನೆ.[27] ಸರ್ವಭೂತಗಳೊಳಗೆ ವಾಸಿಸುವ ಇವನು ಎಲ್ಲ ಭೂತಜಾತಕಗಳೊಳಗೇ ಇದ್ದರೂ ಅವುಗಳು ಇವನನ್ನರಿಯವು. ಇವನಿಗೆ ಸರ್ವಭೂತಗಳೂ ಶರೀರವಾಗಿವೆ. ಇವನು ಸಕಲಭೂತಜಾತಗಳನ್ನೂ ನಿಯಮಿಸುತ್ತಾನೆ. ಹೀಗೆ ಇವನು ಎಲ್ಲ ಭೂತಜಾತಗಳಿಗೂ ಅಂತರ್ಯಾಮಿಯಾಗಿದ್ದಾನೆ.[28] ಇವನು ಸರ್ವವಸ್ತುಗಳ ಸ್ವರೂಪವನ್ನೂ ಪ್ರಕಾರವನ್ನೂ ಅರಿಯಬಲ್ಲವನು. ಇವನ ತಪಸ್ಸು ಜ್ಞಾನಮಯವಾದುದು.[29] ಪಾಪ, ಜರಾ, ಮೃತ್ಯು, ಶೋಕ, ಹಸಿವು ಮತ್ತು ಬಾಯಾರಿಕೆಗಳಿಂದ ದೂರನಾದ ಇವನು ಪೂರ್ಣಕಾಮನೂ, ಸತ್ಯಸಂಕಲ್ಪನೂ ಆಗಿದ್ದಾನೆ. ವಿಶ್ವಕ್ಕೆ ಪತಿಯವನು. ಎಲ್ಲ ಆತ್ಮರುಗಳಿಗೂ ಈಶ್ವರನಿವನು. ಶಾಶ್ವತನೂ, ಮಂಗಳಕರನೂ, ಚ್ಯುತಿಯಿಲ್ಲದವನೂ ಆದವನಿವನು.[31] ಈಶ್ವರರಿಗೂ ಪರಮಮಹೇಶ್ವರನೂ, ದೇವತೆಗಳಿಗೆ ಪರಮದೇವನೂ ಆಗಿದ್ದಾನೆ.[32] ಸರ್ವವೂ ಇವನ ವಶದಲ್ಲಿದೆ ; ಎಲ್ಲನನ್ನೂ ಆಳುವವನು ಈತನೇ.[33] ಸತ್ಯಸ್ವರೂಪನೂ, ಜ್ಞಾನಸ್ವರೂಪನೂ, ಅನಂತನೂ ಆಗಿದ್ದಾನೆ.[34] ನಿರವದ್ಯನೂ, ನಿರಂಜನನನೂ, ವಿಜ್ಞಾನಸ್ವರೂಪಿಯೂ, ಆನಂದನೂ, ನಿರ್ವಿಕಾರನೂ, ನಿಷ್ಕಲನೂ, ನಿಷ್ಕ್ರಿಯನೂ, ಶಾಂತನೂ, ನಿರ್ಗುಣನೂ ಆದವನಿವನು. ಇವನು ಸಕಲ ಜಗತ್ತಿಗೂ ಪತಿಯಾಗಿದ್ದಾನೆ. ಆದರೆ ಇವನಿಗೆ ಒಡೆಯರಾರೂ ಇಲ್ಲ.[35]

ತನ್ನನ್ನು ಭಜಿಸುವ ಭಕ್ತರಿಗೆ ಪರಮ ಫಲವನ್ನು ದೊರಕಿಸಿಕೊಡುವ ಸೇತುವಾಗಿದ್ದಾನೆ.[36] ಸರ್ವಭೂತಗಳಿಗೂ ಒಡೆಯನೂ ರಾಜನೂ ಆದ ಈ ಆತ್ಮನಲ್ಲಿ ಸರ್ವಭೂತಗಳೂ, ಸರ್ವ ದೇವತೆಗಳೂ, ಎಲ್ಲ ಲೋಕಗಳೂ, ಎಲ್ಲ ಆತ್ಮರುಗಳೂ ಸಹ ಚಕ್ರದ ಅರೆಕಾಲುಗಳು ನೇಮಿ ಮತ್ತು ನಾಭಿಯಲ್ಲಿ ಅಡಕವಾಗಿರುವಂತೆ ಅಡಕವಾಗಿದ್ದಾರೆ.

> 'ಸವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ
> ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾಃ
> ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ ಸರ್ವೇಲೋಕಾಃ
> ಸರ್ವೇ ಪ್ರಾಣಾಃ ಸರ್ವ ಏತ ಆತ್ಮಾನಃ ಸಮರ್ಪಿತಾಃ' (ಬೃ. ಉ. 2-5-15)

ನೀರಿನಲ್ಲಿ ಕರಗಿದ ಲವಣವು ಸರ್ವತ್ರ ವ್ಯಾಪಿಸುವಂತೆ ಆತ್ಮನೂ ಸಹ ಸರ್ವವನ್ನೂ ವ್ಯಾಪಿಸಿದ್ದಾನೆ. ಅಗ್ನಿಯಿಂದ ಅಗ್ನಿಕಣಗಳು ಹೇಗೋ ಹಾಗೆ, ಜೇಡನಿಂದ ದಾರದ ಎಳೆಗಳು ಹೇಗೋ ಹಾಗೆ, ವೇಣುವಿನಿಂದ ನಾದವು ಹೇಗೋ ಹಾಗೆ, ಎಲ್ಲ ಭೂತಜಾತಗಳೂ ಆ ಬ್ರಹ್ಮನಿಂದ ಉದ್ಭವಿಸುತ್ತವೆ. ಎಲ್ಲ ಜಲಕ್ಕೂ ಸಾಗರವು ಏಕಾಯನವಾಗಿರುವಂತೆ, ಎಲ್ಲ ಸ್ಪರ್ಶಗಳಿಗೂ ತ್ವಗಿಂದ್ರಿಯವು ಹೇಗೆ ಏಕಾಯನವೋ ಹಾಗೆ, ಎಲ್ಲ ಸಂಕಲ್ಪಗಳಿಗೂ ಮನಸ್ಸು ಹೇಗೋ ಹಾಗೆ, ಎಲ್ಲ ರೂಪಗಳಿಗೂ ನೇತ್ರವು ಹೇಗೋ ಹಾಗೆ, ಎಲ್ಲ ವಿದ್ಯೆಗಳಿಗೂ ಹೃದಯವು ಹೇಗೋ ಹಾಗೆ, ಎಲ್ಲರಸಗಳಿಗೂ ನಾಲಗೆಯು ಹೇಗೋ ಹಾಗೆ, ಎಲ್ಲ ಶಬ್ದಗಳಿಗೂ ಕಿವಿಗಳು ಹೇಗೋ ಹಾಗೆ, ಎಲ್ಲ ಭೂತಜಾತಗಳಿಗೂ ಈ ಸರ್ವಾತ್ಮನು ಏಕಾಯನನಾಗಿದ್ದಾನೆ.[37] ರಸಘನನೂ ಪ್ರಜ್ಞಾನಘನನೂ ಆದವನಿವನು.[38]

27. ಕಠ ಉ. 1-2-12
28. ಬೃ. ಉ. 3-7-15
29. ಮುಂ. ಉ. 1-1-9
30. ಛಾಂ. ಉ. 8-7-1
31. ಮಹಾನಾ. 11
32. ಶ್ವೇ. ಉ. 6-13
33. ಬೃ. ಉ. 6-4-22
34. ತೈ. ಉ. 2-1
35. ಮಹಾನಾ. 1.
36. ಕಠ 1-3-2
37. ಬೃ. ಉ. 4-5
38. ಬೃ. ಉ. 4-5-13

ಜನಕರಾಜನ ಸಭೆಯಲ್ಲಿ ವಾಚಕ್ನವೀ ಗಾರ್ಗಿಯು ಯಾಜ್ಞವಲ್ಕ್ಯರನ್ನು ಎಲ್ಲ ಲೋಕಗಳೂ, ದ್ಯಾವಾಪೃಥಿವೀಗಳೂ, ಭೂತ ಭವ್ಯಭವಿಷ್ಯತ್ತುಗಳೂ ಯಾವುದರಲ್ಲಿ ಓತ ಪ್ರೋತವಾಗಿದೆಯೆಂದು ಕೇಳಿದಳು. ಆಗ ಅವರು ಸರ್ವವೂ ಅಕ್ಷರ ಶಬ್ದ ವಾಚ್ಯನಾದ ವಿಶ್ವಾತ್ಮನಲ್ಲಿ ಓತಪ್ರೋತವಾಗಿದೆಯೆಂದು ಹೇಳಿ ಆ ವಿಶ್ವಾತ್ಮನ ಸ್ವರೂಪವನ್ನು ಹೀಗೆ ತಿಳಿಸಿದರು:

"ಎಲೌ ಗಾರ್ಗಿ, ಈ ಅಕ್ಷರ ರೂಪಿಯು ಸ್ಥೂಲನಲ್ಲ, ಅಣುವಲ್ಲ, ಹ್ರಸ್ವನಲ್ಲ, ದೀರ್ಘನಲ್ಲ, ಅಗ್ನಿಯಂತೆ ಕೆಂಪಾಗಿಲ್ಲ, ಜಲದಂತೆ ಹರಿಯುವ ಸ್ವಭಾವನಲ್ಲ, ನೆರಳಲ್ಲ, ಕತ್ತಲೆಯಲ್ಲ, ವಾಯುವಾಗಲೀ ಆಕಾಶವಾಗಲೀ ಅಲ್ಲ, ಸಂಸರ್ಗವುಳ್ಳದಲ್ಲ, ರಸವಲ್ಲ, ಗಂಧವಲ್ಲ, ಅದಕ್ಕೆ ಕಣ್ಣುಗಳಿಲ್ಲ, ಕಿವಿಗಳಿಲ್ಲ, ಅದು ಮಾತಲ್ಲ, ಮನಸ್ಸಲ್ಲ, ತೇಜಯುಕ್ತವಲ್ಲ, ಪ್ರಾಣವಲ್ಲ, ಮುಖವಲ್ಲ, ಅಳತೆಗೊಳಗಾದುದಲ್ಲ, ಒಳಗಿಲ್ಲ, ಹೊರಗಿಲ್ಲ, ತಿನ್ನುವುದಿಲ್ಲ, ತಿನ್ನಲ್ಪಡುವುದಿಲ್ಲ.

"ಹೇ ಗಾರ್ಗಿ, ಈ ಅಕ್ಷರ ರೂಪಿಯ ಆಜ್ಞೆಗೊಳಗಾಗಿ ಸೂರ್ಯಚಂದ್ರರು ನಿಯಮಿತರಾಗಿ ನಿಂತಿದ್ದಾರೆ ; ಇವನ ಆಜ್ಞೆಯಿಂದಲೇ ದ್ಯುಲೋಕವೂ, ಪೃಥಿವೀಲೋಕವೂ ವ್ಯವಸ್ಥಿತವಾಗಿ ನಿಂತಿವೆ ; ಇವನ ಆಣತಿಗೊಳಗಾಗಿಯೇ ನಿಮೇಷ, ಮುಹೂರ್ತ, ಹಗಲು, ರಾತ್ರಿ, ಪಕ್ಷ, ಮಾಸ, ಋತು, ಸಂವತ್ಸರ ಮೊದಲಾದ ಕಾಲವಿಶೇಷಗಳು ವ್ಯವಸ್ಥಿತವಾಗಿ ನಿಂತಿವೆ ; ಇವನ ಅಪ್ಪಣೆಯಿಂದಲೇ ಶ್ವೇತಪರ್ವತದಿಂದ ಪೂರ್ವಕ್ಕೆ ನದಿಗಳು ಹರಿಯುತ್ತವೆ, ಹಾಗೆಯೇ ಪಶ್ಚಿಮ ಮತ್ತು ಇತರ ದಿಕ್ಕುಗಳಿಗೂ ಹರಿಯುವುವು. ಇವನ ಶಾಸನದಿಂದಲೇ ದಾನಮಾಡುವ ಯಜಮಾನನನ್ನು ಮನುಷ್ಯರೂ. ದೇವತೆಗಳೂ, ಪಿತೃಗಳೂ ಪ್ರಸಂಸಿಸುತ್ತಾರೆ.

"ಹೀಗೆ ಅಕ್ಷರ ರೂಪಿಯಾದ ಪರಬ್ರಹ್ಮನನ್ನರಿಯದೆ ಈ ಲೋಕದಲ್ಲಿ ಅನೇಕ ಸಹಸ್ರವರ್ಷಗಳು ಯಾಗ ಮಾಡಿದರೂ, ತಪಸ್ಸಾಚರಿಸಿದರೂ ಅವರ ಫಲ ಭೋಗಾಂತದಲ್ಲಿ ಕ್ಷಯಿಸುವುದು. ಎಲೌ ಗಾರ್ಗಿ, ಈ ಅಕ್ಷರನನ್ನು ತಿಳಿಯದೆ ಮೃತಿಹೊಂದಿದವನು ಶೋಚ್ಯನಾಗುತ್ತಾನೆ. ಆದರೆ ಯಾವನು ಈ ಅಕ್ಷರನನ್ನು ತಿಳಿದು ಈ ಲೋಕವನ್ನೇ ಬಿಡುವನೋ ಅವನು ಬ್ರಹ್ಮಜ್ಞನೆನಿಸುವನು.

"ಎಲೌ ಗಾರ್ಗಿ, ಈ ಅಕ್ಷರ ರೂಪಿ ಎಲ್ಲರನ್ನೂ ನೋಡುವುದು, ಆದರೆ ಅದು ಎಲ್ಲರಿಗೂ ಕಾಣಿಸದು. ಅದು ಕೇಳುವುದು, ಕೇಳಲ್ಪಡದು. ಅದು ತಿಳಿಯುವುದು, ಆದರೆ ತಿಳಿಯಲ್ಪಡದು. ಅದು ಅರಿಯುವುದು, ಅರಿಯಲ್ಪಡದು. ನೋಡುವವನೂ, ಮನನ ಮಾಡುವವನೂ, ಅರಿಯುವವನೂ ಅದಲ್ಲದೆ ಬೇರಿಲ್ಲ. ಈ ಅಕ್ಷರನಲ್ಲಿ ಎಲ್ಲವೂ ಓತಪ್ರೋತವಾಗಿದೆ."[39]

"ಇದರಿಂದ ಆ ಜಗತ್ಕಾರಣ ರೂಪಿಯನ್ನು ಹೀಗೆಂದು ವರ್ಣಿಸುವುದು ಅಸಾಧ್ಯವೆಂಬುದು ಗೋಚರಿಸುವುದು. ವಾಕ್ಕಿಗೂ ಮನಸ್ಸಿಗೂ ಅವನು ದೂರನಾಗಿದ್ದಾನೆ. ವಿಶ್ವತಶ್ಚಕ್ಷುವೂ ವಿಶ್ವತೋಮುಖನೂ ಆದ ಈ ಸರ್ವಶಕ್ತನು ದಯಾಮಯನೂ ಆಗಿದ್ದಾನೆ. ಈ ಬಂಧನದಿಂದ ನಮ್ಮನ್ನು ಬಿಡುಗಡೆ ಮಾಡುವುದಕ್ಕೆ ಕಾರಣವಾಗುವುದು ಅವನ ದಯೆಯೇ."[40]

39. ಬೃ. ಉ. 3-8-8 ರಿಂದ 3-8-11
40. ಮು. ಉ. 3-2-3 ; ಕಠ 1-2-20

**ಸೃಷ್ಟಿ**

ನಾನಾವಿಧವಾಗಿ ನಮಗೆ ಕಂಡುಬರುವ ಈ ವಿಚಿತ್ರವಾದ ಜಗತ್ತನ್ನು ಸೃಜಿಸಿದವ ನಾರು ? ಉಪನಿಷತ್ತುಗಳು ಈ ನಾಮ ರೂಪಾತ್ಮಕವಾದ ಜಗತ್ತು ಆ ಪರಮಾತ್ಮನಿಂದಲೇ ಆಯಿತೆಂದು ಹೇಳುವುವು.

"ಸಚ್ಛಬ್ದವಾಚ್ಯನಾದ ಪರಮಾತ್ಮನೊಬ್ಬನೇ ಈ ಪ್ರಪಂಚದ ಸೃಷ್ಟಿಗೆ ಮೊದಲು ಇದ್ದನು. 'ಸದೇವಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ'[41] ಎಂದು ಹೇಳಿ ಛಾಂದೋಗ್ಯ ಉಪನಿಷತ್ತು 'ಏಕಮೇವ' ಮತ್ತು 'ಅದ್ವಿತೀಯಂ' ಎಂಬ ಎರಡು ಪದಗಳ ಪ್ರಯೋಗದಿಂದ ತನಗಿಂತ ಬೇರೆಯಾದುದೊಂದೂ ಇಲ್ಲದ ಬ್ರಹ್ಮವೊಂದೇ ಮೊದಲು ಇದ್ದಿತೆಂದೂ, ನಾಮರೂಪಗಳನ್ನು ಹೊಂದಿ ಅನೇಕ ವಿಧವಾಗಿರುವ ಈ ಜಗತ್ತು ಆ ಬ್ರಹ್ಮನೇ ಆಗಿದ್ದಿತೆಂದೂ[42] ಹೇಳುತ್ತದೆ. ಆಗ ಆ ಬ್ರಹ್ಮವು ಅನೇಕವಾಗಬೇಕೆಂದು ಬಯಸಿತು. ಹೀಗೆ ಸಂಕಲ್ಪಿಸಿದ ಅದು ತೇಜಸ್ಸನ್ನು ಸೃಜಿಸಿತು. ಆ ತೇಜಸ್ಸೂ ಸಹ ಅನೇಕವಾಗಬೇಕೆಂದು ಸಂಕಲ್ಪಿಸಿ ಜಲವನ್ನು ಸೃಜಿಸಿತು. ಆ ಜಲಗಳೂ ಬಹುವಾಗಿ ಆಗಲು ಸಂಕಲ್ಪಿಸಿ ಅನ್ನವನ್ನು ಸೃಜಿಸಿದವು.

> 'ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ | ತತ್ತೇಜೋಽಸೃಜತ | ತತ್ತೇಜ ಐಕ್ಷತ ಬಹುಸ್ಯಾಂ ಪ್ರಜಾಯೇಯೇತಿ | ತದಪೋಽಸೃಜತ |' (ಛಾಂ. ಉ. 6-2-3)
> 'ತಾ ಆಪ ಐಕ್ಷಂತ ಬಹ್ವ್ಯಸ್ಯಾಮ ಪ್ರಜಾಯೇ ಮಹೀತಿ | ತಾ ಅನ್ನಮಸೃಜಂತ |' (ಛಾಂ. ಉ. 6-2-4)

ಹೀಗೆ ಈ ಮೂರು ಭೂತಗಳಾದ ತೇಜಸ್ಸು, ಜಲ ಮತ್ತು ಅನ್ನಗಳೇ ಇತರ ಸಕಲ ಭೂತ ಜಾತಗಳಿಗೆ ಮೂಲಕಾರಣಗಳಾಗಿವೆ. ಪಕ್ಷಿಗಳು, ಸರ್ಪಗಳು, ಮೊದಲಾದ ಅಂಡಜಗಳೂ, ಗರ್ಭವೇಷ್ಟನದ ಲಕ್ಷಣವನ್ನು ಹೊಂದಿದ ಪುರುಷರು, ಪಶುಗಳು ಮೊದಲಾದ ಜೀವಜಗಳೂ ಸ್ಥಾವರಗಳಾದ ಉದ್ಭಿಜ್ಜಗಳೂ[43] ಈ ಮೂರು ಭೂತಗಳಿಂದಲೇ ಆಗಿರುವರು.

ಹೀಗೆ ತೇಜಸ್ಸು, ಜಲ ಮತ್ತು ಅನ್ನಗಳೆಂಬ ಮೂರು ದೇವತೆಗಳನ್ನು ಸೃಜಿಸಿದ ಮೇಲೆ ಈ ಮೂರು ದೇವತೆಗಳನ್ನೂ ಒಂದುಗೂಡಿಸಿ ಅವುಗಳೊಡನೆ ಜೀವನೊಡನೆ ಪ್ರವೇಶಿಸಿ ನಾಮರೂಪಾತ್ಮಕವಾದ ಜಗತ್ತನ್ನು ಸೃಜಿಸಲೂ ಬ್ರಹ್ಮವು ಸಂಕಲ್ಪಿಸಿತು.

> 'ಸೇಯಂ ದೇವ ತೈಕ್ಷತ ಹುಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ |' (ಛಾಂ. ಉ. 6-3-2)

ಹೀಗೆ ಈ ಮೂರು ಭೂತಗಳ ತ್ರಿವೃತ್ಕರಣದಿಂದಲೂ, ಜೀವನ ಅನುಪ್ರವೇಶದಿಂದಲೂ ನಾಮರೂಪಾತ್ಮಕವಾದ ಈ ಪ್ರಪಂಚವು ರೂಪುಗೊಂಡಿತು. ಬ್ರಹ್ಮವಸ್ತುವಿಗಿಂತ ಬೇರೆ ಮತ್ತೊಂದು ವಸ್ತುವೂ ಇರಲಿಲ್ಲವೆಂದು ಸಾರಿರುವ ಕಾರಣ ಈ ಜಗತ್ತಿಗೆ ಬ್ರಹ್ಮವೇ ಉಪಾದಾನ

---

41. ಛಾಂ. ಉ. 6-2-1

42. ಅದ್ವೈತ ಸಿದ್ಧಾಂತಕ್ಕನುಗುಣವಾಗಿ ಬ್ರಹ್ಮವೇ ನಾಮರೂಪಗಳನ್ನು ಹೊಂದಿದಂತೆ ಕಾಣುವುದು. ವಿಶಿಷ್ಟಾದ್ವೈತಕ್ಕನುಗುಣವಾಗಿ ಚೇತನಾಚೇತನಗಳಿಂದ ವಿಶಿಷ್ಟವಾದ ಬ್ರಹ್ಮವೊಂದೇ ಸೂಕ್ಷ್ಮಾವಸ್ಥೆಯಲ್ಲಿತ್ತು. ದ್ವೈತಸಿದ್ಧಾಂತವು ಪ್ರಕೃತಿಯೂ, ಜೀವರೂ ಬ್ರಹ್ಮವೂ ಬೇರೆ ಬೇರೆಯಾಗಿದ್ದರೆಂದು ಹೇಳುತ್ತದೆ.

43. ಸ್ವೇದಜಗಳು ಕೊನೆಯದಾದ ಉದ್ಭಿಜ್ಜದಲ್ಲಿ ಸೇರಿವೆಯೆಂದು 'ತೃತೀಯ ಶಬ್ದಾವರೋಧಸ್ಸಂಶೋಕಜಸ್ಯ' ಎಂಬ ಸೂತ್ರ ಹೇಳುತ್ತದೆ.

ಕಾರಣವೂ, ನಿಮಿತ್ತಕಾರಣವೂ ಆಗಿದೆ. ಪರಮಾತ್ಮನ ಸಂಕಲ್ಪದಿಂದ ಸೃಷ್ಟಿಯೆಂದೂ, ಅವುಗಳೊಳಗೆ ಪರಮಾತ್ಮನು ಅಂತಃಪ್ರವೇಶ ಮಾಡಿರುವನೆಂದೂ ಉಪನಿಷತ್ತುಗಳ ಸಿದ್ಧಾಂತ. ಈ ಅಂಶವನ್ನು

"ಸೋಽಕಾಮಯತ |ಬಹುಸ್ಯಾಂ ಪ್ರಜಾಯೇಯೇತಿ | ಸತಪೋಽತಪ್ಯತ | ಸತಪಸ್ತಪ್ತ್ವಾ | ಇದಂ ಸರ್ವಮಸೃಜತ |ಯದಿದಂಕಿಂಚ |ತ ತ್ಸೃಷ್ಟ್ವಾ | ತದೇ ವಾನುಪ್ರಾವಿಶತ್ | ತದನುಪ್ರವಿಶ್ಯ | ಸಚ್ಚತ್ಯಚ್ಚಾಭವತ್ |" ಎಂದು ತೈತ್ತಿರೀಯ ಉಪನಿಷತ್ತು ಹೇಳುವುದು.[44] ಐತರೇಯೋ ಪನಿಷತ್ತಿನಲ್ಲಿಯೂ ಇದೇ ಭಾವವಿದೆ.[45] ಹೀಗೆ ವಿವಿಧವಾಗಿಯೂ, ವಿಚಿತ್ರವಾಗಿಯೂ ತೋರುತ್ತಿರುವ ಜಗತ್ತು ಮೊದಲ 'ಸದೇವ' ಆಗಿದ್ದಿತೆಂಬುದು ಸಿದ್ಧವಾಗುತ್ತದೆ. ಕಾರಣರೂಪಿ ಯಾದ ಈ ಬ್ರಹ್ಮವನ್ನು ತಿಳಿದವನು ಅದರಿಂದಾದ ಕಾರ್ಯವಾದ ಜಗತ್ತನ್ನು ಅರಿಯುವನು.

ಆರುಣಿ ಉದ್ದಾಲಕರ ಮಗನಾದ ಶ್ವೇತಕೇತುವು ಹನ್ನೆರಡು ವರ್ಷಗಳ ಕಾಲ ಗುರುಕುಲ ವಾಸವನ್ನು ಮಾಡಿ ಎಲ್ಲ ವೇದಗಳನ್ನೂ ಅಧ್ಯಯನ ಮಾಡಿ ಮನೆಗೆ ಹಿಂತಿರುಗಿದನು. ತಾನು ಪರಿಪೂರ್ಣನೆಂಬ ಭಾವ ಅವನಿಗಿತ್ತು. ಆಗ ತಂದೆ ಕೇಳಿದರು, 'ಕುಮಾರ ನೀನು ಪರಿಪೂರ್ಣ ನಂತೆ ತೋರುವಿ. ಯಾವುದೊಂದನ್ನು ಕೇಳಿದರೆ ಉಳಿದುದೆಲ್ಲವನ್ನೂ ಕೇಳಿದಂತೆಯೋ, ಯಾವುದೊಂದನ್ನು ಮನನಮಾಡಿದರೆ ಉಳಿದುದೆಲ್ಲವನ್ನೂ ಮನನಮಾಡಿದಂತೆಯೋ, ಯಾವುದೊಂದನ್ನು ಅರಿತರೆ ಉಳಿದುದೆಲ್ಲವನ್ನೂ ಅರಿತಂತಾಗುವುದೋ ಆ ಆದೇಶವನ್ನೂ ತಿಳಿದಿರುವಿಯಷ್ಟೇ?' ಎಂದು. ಶ್ವೇತಕೇತುವಿಗೆ ಅದು ಗೊತ್ತಿರಲಿಲ್ಲ. ಅದು ಯಾವುದೆಂಬುದನ್ನು ತಂದೆ ಮತ್ತೂ ವಿವರಿಸಿದರು. 'ಮಣ್ಣನ್ನು ತಿಳಿದರೆ ಮಣ್ಣಿನಿಂದಾದ ಸಕಲ ಪದಾರ್ಥಗಳನ್ನೂ ತಿಳಿಯುವಂತೆ, ಲೋಹಮಣಿಯನ್ನು ತಿಳಿದರೆ ಆ ಲೋಹದಿಂದಾದ ಸರ್ವವನ್ನೂ ತಿಳಿಯುವಂತೆ, ಮೂಲಕಾರಣವನ್ನು ತಿಳಿದರೆ ಅದರಿಂದಾದ ಕಾರ್ಯಗಳನ್ನೆಲ್ಲಾ ತಿಳಿಯಬಹುದು. ಅಂಥ ಮೂಲಕಾರಣವನ್ನು ನೀನು ತಿಳಿದಿರುವಿಯಾ?' ಎಂದು.

ಶ್ವೇತಕೇತುವಿಗೆ ಇದು ತಿಳಿದಿರಲಿಲ್ಲ. ಆಗ ಅವನು ಆ ವಿದ್ಯೆಯನ್ನು ತನಗೆ ಉಪದೇಶಿಸ ಬೇಕೆಂದು ತಂದೆಯನ್ನು ಬೇಡಿದನು. ಆಗ ಆರುಣಿ ಉದ್ದಾಲಕರು ಜಗತ್ತಿಗೆ ಬ್ರಹ್ಮ ಮೂಲಕಾರಣವೆಂದು ಅರುಹಿದರು.

'ಸನ್ಮೂಲಾಃ ಸೋಮ್ಯೇಮಾಸ್ಸರ್ವಾಃ ಪ್ರಜಾಸ್ಸದಾಯತನಾಃ ಸತ್ಪ್ರತಿಷ್ಠಾಃ ಯಥಾ ತು ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ ತ್ರಿವೃತ್ ಏಕೈಕಾ ಭವತಿ.'[46]

ಸಜೀವವಾದ ಈ ಜಗತ್ತು ಸಚ್ಛಬ್ದಾಭಿಧೇಯವಾದ ಬ್ರಹ್ಮವನ್ನೇ ಕಾರಣವನ್ನಾಗಿ ಹೊಂದಿದೆ. ಈ ಜಗತ್ತಿನ ಉತ್ಪತ್ತಿ ಬ್ರಹ್ಮಾಧೀನ ಮತ್ತು ಈ ಜಗತ್ತು ಲಯವಾಗಿ ಬ್ರಹ್ಮವನ್ನೇ ಸೇರುತ್ತದೆ. ಈ ಜಗತ್ತಿಗೆ ಬ್ರಹ್ಮ ಆಧಾರವಾಗಿದೆ. ಹೀಗೆ ಸಜೀವವಾದ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳು ಬ್ರಹ್ಮ ವಸ್ತುವಿಗೆ ಅಧೀನವಾಗಿವೆ. ಪರಮಾತ್ಮನು ಜಗತ್ತಿಗೆ ಉಪಾದಾನ ಕಾರಣನೆಂಬುವುದನ್ನು 'ಸನ್ಮೂಲಾಃ ಸತ್ಪ್ರತಿಷ್ಠಾಃ' ಎಂಬ ಪದಗಳೂ, ಅವನು ಎಲ್ಲಕ್ಕೂ ಅಂತರ್ಯಾಮಿಯಾಗಿರುವನೆಂಬುದನ್ನು 'ಸದಾಯತನಾಃ' ಎಂಬ ಪದವೂ ಸೂಚಿಸುತ್ತವೆ. ಇಂಥ ಪರಮಾತ್ಮನು ಅಣುವಿನಂತೆ ದುರ್ವಿಜ್ಞೇಯನೆಂದೂ, ಲೋಕದಲ್ಲಿರುವ ಸಮಸ್ತ ಪದಾರ್ಥಗಳೂ ಅವನನ್ನೇ ಆತ್ಮನನ್ನಾಗಿ ಹೊಂದಿವೆಯೆಂದೂ ತಿಳಿಸಿ, ನೀನೂ ಅವನೇ ಆಗಿದ್ದೀಯೆ ಎಂದು

44. ತೈ. ಉ. 2-6 45. ಐತರೇಯ ಉ. 1-1
46. ಛಾಂ. ಉ. 6-8-6

ಉಪದೇಶಿಸಿ ಸರ್ವತ್ರ ಪ್ರಸಿದ್ಧವಾದ ಸದಾತ್ಮಕತ್ವವನ್ನು ಶ್ವೇತಕೇತುವಿಗೂ ಅನ್ವಯಿಸಿ ಆರುಣಿಗಳು ತಮ್ಮ ಉಪದೇಶವನ್ನು ಉಪಸಂಹಾರಗೊಳಿಸಿದರು.

'ಸ ಯ ಏಷೋಽಣಿಮಾ ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ.'[47]

ಉಪನಿಷದ್ದರ್ಶನಕ್ಕೆ ಈ ಪ್ರಕರಣ ಕಿರೀಟಪ್ರಾಯವಾಗಿದೆ. ಆ ಪರಮಾತ್ಮನು ಸಕಲಕ್ಕೂ ಆತ್ಮನೆಂದು ಘೋಷಿಸಿ ಆರುಣಿಗಳು ಅನೇಕ ನಿದರ್ಶನಗಳೊಡನೆ ಈ ಉಪದೇಶವನ್ನು ಒಂಭತ್ತು ಸಾರಿ ನೀಡಿದ್ದಾರೆ.

## ಬ್ರಹ್ಮ ಮತ್ತು ಜಗತ್ತು

ಸೃಷ್ಟಿಗೆ ಮೊದಲು ಒಬ್ಬನೇ ಆಗಿದ್ದ ಪರಮಾತ್ಮನು ತನ್ನ ಸಂಕಲ್ಪಕ್ಕನುಸಾರ ಅನೇಕವಾಗಿ ನಾಮರೂಪಾತ್ಮಕವಾದ ಜಗತ್ತಿನ ರೂಪವನ್ನು ಹೊಂದಿದನೆಂದು ಮೇಲಿನ ಪ್ರಕರಣದಿಂದ ನಾವು ತಿಳಿಯುತ್ತೇವೆ. ಹಾಗಾದರೆ ಪ್ರಪಂಚಕ್ಕೂ ಬ್ರಹ್ಮಕ್ಕೂ ಇರುವ ಸಂಬಂಧವೇನು ? ಈ ಪ್ರಶ್ನೆಯನ್ನು ಬಗೆ ಬಗೆಯಾಗಿ ದಾರ್ಶನಿಕರು ವಿವರಿಸಿದ್ದಾರೆ. ಭೇದ ದರ್ಶನಗಳು ಪ್ರಪಂಚವೂ ಪರಮಾತ್ಮನೂ ಬೇರೆ ಬೇರೆಯೆಂದು ಹೇಳಿ ಎಲ್ಲವೂ ಸತ್ಯವೆಂದು ಸಾರುತ್ತವೆ. ಪ್ರಕೃತಿಯು ಉಪಾದಾನ ಕಾರಣವೆಂದೂ, ಬ್ರಹ್ಮ ನಿಮಿತ್ತ ಕಾರಣವೆಂದೂ ಇವರು ಹೇಳುವರು. ಬ್ರಹ್ಮಾತ್ಮಕವಾದ ಪ್ರಕೃತಿಗೆ ಜಗತ್ಕಾರಣತ್ವವನ್ನು ವಿಶಿಷ್ಟಾದ್ವೈತ ದರ್ಶನ ಹೇಳಿ, ಸೂಕ್ಷ್ಮ ಚಿದಚಿದ್ವಿಶಿಷ್ಟವಾದ ಬ್ರಹ್ಮವೇ ಸ್ಥೂಲಚಿದಚಿದ್ವಿಶಿಷ್ಟವಾಗುವುದೆಂದು ಸಾರಿ, ಅಚೇತನಾಂಶಕ್ಕೆ ಮಾತ್ರ ವಿಕಾರವನ್ನೂ, ಜೀವನಿಗೆ ಜ್ಞಾನಸಂಕೋಚವನ್ನೂ ಬ್ರಹ್ಮ ವಸ್ತುವಿಗೆ ಅವಿಕಾರತ್ವವನ್ನೂ ಸಾರುತ್ತದೆ. ಅದ್ವೈತ ಸಿದ್ಧಾಂತವಾದರೂ ಬ್ರಹ್ಮ ಮತ್ತು ಜಗತ್ತಿನ ಸಂಬಂಧವನ್ನು ಎರಡು ಬಗೆಯಾಗಿ ಹೇಳುತ್ತದೆ. ಇವು ಸಪ್ರಪಂಚವಾದ ಮತ್ತು ನಿಷ್ಪ್ರಪಂಚವಾದಗಳಾಗಿವೆ.

ಛಾಂದೋಗ್ಯ ಉಪನಿಷತ್ತು 'ಸರ್ವಂಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ'[48] ಎಂದು ಉಪದೇಶಿಸಿ, ಪ್ರಪಂಚದ ಜನ್ಮ, ಸ್ಥಿತಿ ಮತ್ತು ಲಯಗಳಿಗೆ ಬ್ರಹ್ಮ ಕಾರಣವೆಂದೂ, ಇಂಥ ಬ್ರಹ್ಮವು ಹೃದಯ ಪುಂಡರೀಕದಲ್ಲಿ ಆತ್ಮನಾಗಿರುವುದೆಂದೂ ಸಾರುತ್ತದೆ. ಈ ಶ್ರುತಿಗನುಗುಣವಾಗಿ ಸರ್ವವೂ ಬ್ರಹ್ಮವೇ ಆದ ಕಾರಣ ಪ್ರಪಂಚವೂ ಬ್ರಹ್ಮವೇ ಎಂಬ ಸಿದ್ಧಾಂತ ಫಲಿಸುವುದು. ಸೃಷ್ಟಿಗೆ ಮೊದಲು ಇದ್ದುದಾದರೂ ಬ್ರಹ್ಮವೊಂದೇ. ಈ ಜಗತ್ತು ಆ ಬ್ರಹ್ಮದಿಂದ ಆದಕಾರಣ ಇದೂ ಬ್ರಹ್ಮಮಯವೇ.'[49] ಹೀಗೆ ಜಗತ್ತು ಬ್ರಹ್ಮ ಪರಿಣಾಮ ವಾದುದರಿಂದ ಎಲ್ಲವೂ ಬ್ರಹ್ಮವೇ ಆಗುವುದು. ಇದು ಸಪ್ರಪಂಚವಾದವೆಂದು ಪ್ರಸಿದ್ಧವಾಗಿದೆ.

ಬೃಹದಾರಣ್ಯಕೋಪನಿಷತ್ತು 'ನೇತಿ ನೇತಿ' ಎಂದು ಹೇಳಿ ಬ್ರಹ್ಮದ ಸ್ವರೂಪವನ್ನು ತಿಳಿಸಲೆತ್ನಿಸುತ್ತದೆ. ಯಾಜ್ಞವಲ್ಕ್ಯರು ಗಾರ್ಗಿಗೆ ಮಾಡಿರುವ ಉಪದೇಶ ನಿಷ್ಪ್ರಪಂಚವಾದಕ್ಕೆ

---

47. ಛಾಂ. ಉ. 6-7-8. ತತ್ತ್ವಮಸಿ ಎಂಬ ಮಹಾವಾಕ್ಯದ ಅರ್ಥ ವಿವರಣೆ ಬಹುಮುಖವಾಗಿ ಮಾಡಿದ್ದಾರೆ. ಸ್ವರೂಪೈಕ್ಯವು ಅದ್ವೈತದರ್ಶನದ ಸಿದ್ಧಾಂತ. ಅಂತರ್ಯಾಮ್ಯೈಕ್ಯವು ವಿಶಿಷ್ಟಾದ್ವೈತದ ನೆಲೆ. ಸಂಪೂರ್ಣ ಭೇದವನ್ನು 'ಅತತ್' ಎಂಬ ಪದ ವಿಭಾಗದೊಡನೆ ಸಾಧಿಸಿದ ದ್ವೈತದರ್ಶನ.

48. ಛಾಂ. ಉ. 3-14, ಬೃ. ಉ. 3-8

49. 'It is Tadatmya or oneness between Brahman and the world that is conveyed in all this wealth of symbol and image'-*Phil. of Upanishads*, Dr.S. R. p. 59.

ಆಧಾರವಾಗಿದೆ. ಶ್ರುತಿಗಳಲ್ಲಿ ಕೆಲವು ಬ್ರಹ್ಮ ಪ್ರಪಂಚದಿಂದ ಬೇರೆಯಾದುದೆಂದು ಹೇಳುವುವು. ಮತ್ತೆ ಕೆಲವು ಶ್ರುತಿಗಳು ಬ್ರಹ್ಮವೂ ಪ್ರಪಂಚವೂ ಒಂದೇ ಎಂದು ಹೇಳುವುವು. ಇವೆರಡನ್ನೂ ಒಟ್ಟಿಗೆ ನಾವು ಸಾಧಿಸುವುದಕ್ಕಾಗದು. ಒಂದೇ ಕಾಲದಲ್ಲಿ ಎರಡು ಪದಾರ್ಥಗಳು ಒಂದೇ ಆಗಿ ಬೇರೆ ಬೇರೆಯಾಗಿಯೂ ಇರಲಾರವು. ಆದರಿಂದ ಇವೆರಡರಲ್ಲಿ ಒಂದು ಮಾತ್ರ ಸತ್ಯವಾದೀತು. ಜಗತ್ತನ್ನು ತಳ್ಳಿ ನಾವು ಬ್ರಹ್ಮವನ್ನು ಒಪ್ಪಿಕೊಳ್ಳುವುದಾದರೆ ವ್ಯವಹಾರ ಗೋಚರವಾದ ಜಗತ್ತು ಇಲ್ಲವಾಗುವುದು. ಆಗ ಹಗ್ಗದಲ್ಲಿ ಹಾವು ತೋರಿದಂತೆ ಬ್ರಹ್ಮದಲ್ಲಿ ಜಗತ್ತು ಅಧ್ಯಸ್ತವಾಗಿ ಲೋಕವು ಬ್ರಹ್ಮವಿವರ್ತವಾಗುವುದು. ಇದು ನಿಷ್ಪ್ರಪಂಚವಾದ. ಇದಕ್ಕನುಗುಣವಾಗಿ ಬ್ರಹ್ಮವೊಂದೇ ಸತ್ಯವಾಗಿ ಜಗತ್ತು ಮಿಥ್ಯೆಯಾಗುವುದು.

ಉಪನಿಷತ್ತುಗಳಲ್ಲಿ ಹೀಗೆ ಎರಡು ಬಗೆಯ ಅಭಿಪ್ರಾಯಗಳಿಗೂ ಎಡೆಯಿದೆ. ಜಗತ್ತು ಬ್ರಹ್ಮಭಿನ್ನವೇ ಅಲ್ಲವೇ ಎಂಬ ಪ್ರಶ್ನೆಗೆ ನೇರವಾಗಿಯಾಗಲೀ, ನಿರ್ಣಾಯಕವಾಗಿಯಾಗಲೀ ಉತ್ತರ ಬಂದಿಲ್ಲ. ಮೇಲೆ ಸೂಚಿಸಿದಂತೆ ಕೆಲವು ವಾಕ್ಯಗಳು ಐಕ್ಯವನ್ನು ಹೇಳಿದರೆ ಮತ್ತೆ ಕೆಲವು ವಾಕ್ಯಗಳು ಬ್ರಹ್ಮವೂ, ಜಗತ್ತೂ ಬೇರೆ ಬೇರೆಯೆಂದು ಹೇಳುವುವು. ತತ್ವವಾವುದೆಂಬುದನ್ನು ನಿರ್ದಿಷ್ಟವಾಗಿ ಅದು ಹೇಳದು. ಆದರೆ ಬ್ರಹ್ಮ ವಸ್ತು ಜಗತ್ತಿನ ಸಕಲವಸ್ತುಗಳಿಗೂ ಸೂತ್ರವಾಗಿದೆಯೆಂಬುದನ್ನೂ, ಎಲ್ಲವನ್ನೂ ತನ್ನಲ್ಲಿ ಒಂದುಗೂಡಿಸಿಕೊಂಡಿದೆಯೆಂಬುದನ್ನೂ ಉಪನಿಷತ್ತು ನಿರ್ದಿಷ್ಟವಾಗಿ ಹೇಳುತ್ತದೆ.[50]

ಬ್ರಹ್ಮವಸ್ತುವಿಗೂ ಜಗತ್ತಿಗೂ ಇರುವ ಸಂಬಂಧವನ್ನು ನಿರ್ದಿಷ್ಟವಾಗಿ ಹೇಳುವುದು ಅಸಾಧ್ಯ. ಇವೆರಡಕ್ಕೂ ಸಂಬಂಧವಿರಲೇಬೇಕು. ಆದರೆ ಇದೆಂಥ ಸಂಬಂಧವೆಂಬುದು ನಮಗೆ ಗೊತ್ತಾಗದು. ಬ್ರಹ್ಮವಸ್ತು ಜಗತ್ತಿಗೆ ನಿಮಿತ್ತಕಾರಣ ಮತ್ತು ಉಪಾದಾನ ಕಾರಣವೆಂದು ಹೇಳಿರಬೇಕಾದರೆ ಇವುಗಳಿಗೆ ಸಂಬಂಧವಿದೆಯೆಂಬುದಂತೂ ಸಿದ್ಧವಾದಂತೆಯೇ. 'ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ'[51] ಎಂದು ಗೀತೆ ಹೇಳಿದಂತೆ ಬ್ರಹ್ಮವಸ್ತು ಜಗತ್ತಿನ ಸಕಲವಿಧವಾದ ಚೇತನಾ ಚೇತನ ಪದಾರ್ಥಗಳನ್ನು ಒಂದುಗೂಡಿಸುವ ಸೂತ್ರವಾಗಿದೆ ಯೆಂದು ಹೇಳಬಹುದು.[52] ಈ ಸಂಬಂಧವನ್ನು ಕುರಿತು ವಿವಿಧ ದರ್ಶನಗಳು ವಿವಿಧ ರೀತಿಯಲ್ಲಿ ವಿವೇಚನೆ ನಡೆಸಿವೆ.

---

50. "The Upanishads are decisive about the principle that Brahman is the sole source of life in all the lives, the single thread binding the whole plurality into a single unity. When the problem of the co-existence of the plurality and unity is taken up, the Upanishads speak in the languages of similies and symbols, but do not give any definite answer." -*Phil. of Upanishads,* Dr. S. R. p. 59.

51. ಭಗವದ್ಗೀತೆ 7-7.

52. 'The ultimate fact is the self-sufficiency of Brahman, and we cannot say how the world is related to it. If we insist on some explanation the most satisfactory one is to make the absolute a unity with a difference or a concrete dynamic spirit. We, then reach the self and the not-self, which interact and develop the whole universe.

–*Phil. of Upanishads,* Dr. S. R. p. 61 ; Refer also to p. 60, 66 and 67.

## ಜೀವಾತ್ಮನು

ಬ್ರಹ್ಮಸ್ವರೂಪವನ್ನು ಹೇಳಿದಂತೆ, ಉಪನಿಷತ್ತು ಜೀವಾತ್ಮನ ಸ್ವರೂಪವನ್ನೂ ವಿವರಿಸುತ್ತದೆ. "ಸಮಾನಗುಣಕರೂ, ಸಖರೂ ಆದ ಎರಡು ಹಕ್ಕಿಗಳು ಒಂದೇ ಮರದಲ್ಲಿವೆ. ಒಂದು ಪಕ್ಷಿ ಸ್ವಾದುವಾದ ಪಿಪ್ಪಲಫಲವನ್ನು ತಿನ್ನುತ್ತದೆ. ಆದರೆ ಮತ್ತೊಂದು ಅದನ್ನು ನೋಡುತ್ತಾ ತಾನು ತಿನ್ನದೆಯೇ ಪ್ರಕಾಶಿಸುತ್ತಿದೆ[53]. ಪ್ರಪಂಚದಲ್ಲಿ ಜೀವರು ದೇವನೊಡನೆ ವಾಸಿಸುತ್ತಿದ್ದಾರೆ. ಶರೀರವೆಂಬ ವೃಕ್ಷದಲ್ಲಿ ಜೀವನು ಈಶ್ವರನೊಡನೆ ವಾಸಿಸುತ್ತಿದ್ದಾನೆ. ದುಃಖಾಭಿಭೂತನಾಗಿ ಮೋಹಗೊಂಡು ತನ್ನ ಅಸಹಾಯಕತೆಗೂ, ದುಃಸ್ಥಿತಿಗೂ ಜೀವನು ಶೋಕಿಸುತ್ತಿದ್ದಾನೆ. ಆದರೆ ಮತ್ತೊಬ್ಬನಾದ ಆ ಈಶ್ವರನನ್ನು, ತನಗೆ ಸುಖವನ್ನೀಯುವ ಪ್ರಭುವನ್ನು ಕಂಡಾಗ, ಅವನ ಶೋಕಗಳು ಕಳೆದು ಹೋಗುವುವು. ಈ ಜೀವಾತ್ಮನು ಜನ್ಮ ರಹಿತನೂ, ಮರಣವಿಲ್ಲದವನೂ ಆಗಿ ನಿತ್ಯನಾಗಿದ್ದಾನೆ.

'ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನಬಭೂವ ಕಶ್ಚಿತ್ |
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ||'
(ಕಠ. ಉ. 1-3-18)

ಉಪನಿಷತ್ತುಗಳಿಗನುಸಾರವಾಗಿ ಜೀವಾತ್ಮನೂ ಸತ್ಯಭೂತನಾಗಿದ್ದಾನೆ[54] ದೇಹ, ಇಂದ್ರಿಯ, ಮನಸ್ಸು, ಪ್ರಾಣ ಮತ್ತು ಬುದ್ಧಿಗಳಿಗಿಂತ ಬೇರೆಯಾದವನಿವನು. ಆತ್ಮನ ಸ್ವರೂಪಸ್ವಭಾವಗಳನ್ನು ಛಾಂದೋಗ್ಯಉಪನಿಷತ್ತು ಪ್ರಜಾಪತಿ ಮತ್ತು ಇಂದ್ರರ ಸಂವಾದರೂಪದಲ್ಲಿ ವಿವರಿಸುತ್ತದೆ. ದೇವತೆಗಳ ಕಡೆಯಿಂದ ಇಂದ್ರನೂ, ಅಸುರರ ಕಡೆಯಿಂದ ವಿರೋಚನನೂ ಪ್ರಜಾಪತಿಯ ಶಿಷ್ಯರಾಗಿ 32 ವರ್ಷಗಳ ಕಾಲ ಬ್ರಹ್ಮಚರ್ಯವನ್ನನುಷ್ಠಿಸಿದರು. ಸುಪ್ರೀತರಾದ ಗುರುಗಳು 'ಯ ಏಷೋಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ'[55] ಎಂದರೆ, 'ಮತ್ತೊಬ್ಬರ ಕಣ್ಣನ್ನಾಗಲೀ, ಕನ್ನಡಿಯನ್ನಾಗಲೀ, ಜಲಕುಂಭವನ್ನಾಗಲೀ ನೋಡಿದಾಗ ಅಲ್ಲಿ ಕಾಣುವುದು ಆತ್ಮಾ' ಎಂದು ಉಪದೇಶಿಸಿದರು ಮೊದಲನೆಯ ಹಂತದಲ್ಲಿ. ಚೆನ್ನಾಗಿ ಅಲಂಕರಿಸಿಕೊಂಡು ಜಲಕುಂಭದಲ್ಲಿ ನೋಡಿರೆಂದು ಪ್ರಜಾಪತಿ ಹೇಳಲು ಶಿಷ್ಯರು ಹಾಗೆಯೇ ಮಾಡಿದರು. ಆಗ ಉತ್ತಮವಾದ ಅಲಂಕಾರಗಳಿಂದೊಡಗೂಡಿದ ಬಿಂಬವನ್ನು ಕಂಡರು. ವಿರೋಚನನು ಶಾಂತಹೃದಯನಾಗಿ ಹಿಂತಿರುಗಿದನು ಮತ್ತು ತನ್ನ ಒಡನಾಡಿಗಳಾದ ಅಸುರರೊಡನೆ ದೇಹವೇ ಆತ್ಮವೆಂದು ಸಾರಿದನು. ಆದರೆ ಇಂದ್ರನು ಯೋಚಿಸಿದನು—'ತನ್ನ ದೇಹದಂತೆಯೇ ಪ್ರತಿಬಿಂಬವೂ ಕಂಡಕಾರಣ ದೇಹ ಕುರುಡಾದರೆ, ಕುಂಟಾದರೆ, ಅಂಗವಿಕಲವಾದರೆ ಆತ್ಮನೂ ಹಾಗೆಯೇ ಆಗಬೇಕಾದೀತು! ದೇಹ ನಾಶವಾದರೆ ಆತ್ಮನೂ ನಾಶವಾಗಬೇಕಾದೀತು! ಇದು ಒಳ್ಳೆಯದಲ್ಲ' ಎಂದು. ಹೀಗೆ ಚಿಂತಿಸಿದ ಅವನು ಗುರುಗಳ ಬಳಿ ಸಾರಿ ಮತ್ತೆ ಉಪದೇಶಮಾಡಲು ಬೇಡಿದನು. ಮೂವತ್ತೆರಡು ವರ್ಷಗಳ ನಂತರ ಪ್ರಜಾಪತಿಯು 'ಯ ಏಷ ಸಪ್ನೇ ಮಹೀಯಮಾನಶ್ಚರತ್ಯೇಷ ಆತ್ಮಾ'[56] ಎಂದರೆ 'ಸ್ವಪ್ನದಲ್ಲಿ ಸುಖವಾಗಿ ಸಂಚರಿಸುವವನು ಆತ್ಮನು' ಎಂದು ತಿಳಿಸಿದರು. ಬಾಹ್ಯವಾದ ತೊಂದರೆಗಳ

53. ಮುಂ. ಉ. 3-1-2.

54. The Upanishads make out that of the finite objects the individual self has the highest reality. *–Phil. of Upanishads,* Dr. S. R. p. 60

55. ಛಾಂ. ಉ. 8-7-4

56. ಛಾಂ. ಉ. 8-10-1

ಗೊಳಗಾದ ದೇಹವು ಆತ್ಮನಲ್ಲವೆಂದು ಹೇಳಿ ಸ್ವಪ್ನವನ್ನನುಭವಿಸುವವನು ಆತ್ಮನೆಂದಂತೆ ಆಯಿತು. ಸ್ವಾಪ್ನಪುರುಷನಿಗೆ ದೇಹದ ವೈಕಲ್ಯಗಳೇನೂ ಒದಗುವುದಿಲ್ಲ. ಆದರೆ ಇವನಿಗ ಇನ್ನು ಕೆಲವು ಆಘಾತಗಳೊದಗುವುವು. ಅವನೂ ದುಃಖಕ್ಕೊಳಗಾಗಿ ಅಳುವನು. ಆ ಕಾರಣ ಇದೂ ಸರಿಯಾಗದು ಎಂದು ಚಿಂತಿಸಿದ ಇಂದ್ರನು ಮತ್ತೊಮ್ಮೆ ಪ್ರಜಾಪತಿಯ ಬಳಿಗೇ ಬಂದು ನಿಂತನು. ಮತ್ತೆ ಮೂವತ್ತೆರಡು ವರ್ಷಗಳುರುಳಿದವು. ಆಗ ಅವರು-'ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮಾ'[57] ಎಂದರೆ 'ಮನುಷ್ಯನು ನಿದ್ರಿಸಿದಾಗ ಕನಸನ್ನು ಕಾಣದ ಸುಷುಪ್ತಿಯ ಅವಸ್ಥೆಯನ್ನು ಹೊಂದಿರುವನು. ಅವನು ಆತ್ಮನೆಂದು ತಿಳಿ' ಎಂದು ಉಪದೇಶಿಸಿದರು. ಈ ಉಪದೇಶದಿಂದಲೂ ಇಂದ್ರನಿಗೆ ತೃಪ್ತಿಯುಂಟಾಗಲಿಲ್ಲ. ಅರಿವೇ ಇಲ್ಲದಿರುವ ಅವಸ್ಥೆಯೇ ಎಂತು ಆತ್ಮನಾದೀತು ? ತಾನಿರುವೆನೆಂದಾಗಲೀ, ಬೇರೆ ಯಾವುದಾದರೂ ಇದೆಯೆಂದಾಗಲೀ ತಿಳಿಯದಿದ್ದರೆ ವಿನಾಶವನ್ನು ಹೊಂದಿದಂತೆಯೇ ತಾನೇ? ಆದರಿಂದ ಇದೂ ಶುಭವಲ್ಲವೆಂದು ಚಿಂತಿಸಿ ಮತ್ತೆ ಪ್ರಜಾಪತಿಯ ಬಳಿಗೇ ಬಂದ. ಇಂದ್ರನು ಮತ್ತೆ ಐದು ವರ್ಷಗಳ ಕಾಲ ಅಲ್ಲಿದ್ದು ಅನಂತರ ತನ್ನ ಶ್ರದ್ಧೆ ಮತ್ತು ಆಸಕ್ತಿಗಳಿಂದ ಪ್ರೀತರಾದ ಗುರುಗಳಿಂದ ಉಪದೇಶ ಪಡೆದನು. ಇದು ಪ್ರಜಾಪತಿಯ ಉಪದೇಶ :

> 'ಮಘವನ್ ಮರ್ತ್ಯಂ ವಾ ಇದಂ ಶರೀರಮಾತ್ತಂ ಮೃತ್ಯುನಾ ತದಸ್ಯಾಮೃತಸ್ಯಾ-
> ಶರೀರಸ್ಯಾತ್ಮನೋಽಧಿಷ್ಠಾನಮಾತ್ತೋ ವೈ ಸಶರೀರಃ ಪ್ರಿಯಾಪ್ರಿಯಾಭ್ಯಾಂ
> ನ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತ್ಯ ಶರೀರಂ ವಾವ ಸಂತಂ
> ನ ಪ್ರಿಯಾಪ್ರಿಯೇ ಸ್ಪೃಶತಃ |' 'ಏಷ ಸಂಪ್ರಸಾದೋಽಸ್ಮಾಚ್ಛರೀ-
> ರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ||[58]

ದೇಹವು ನಶ್ವರ. ಅದು ಮರಣಕ್ಕೊಳಗಾಗುವುದು. ಆತ್ಮನ ನೈಜವಾದ ಸ್ವರೂಪವಾದರೋ ದೇಹವಿಲ್ಲದಿರುವುದೇ ಆಗಿದೆ. ಅಮೃತ ಸ್ವರೂಪಿಯೂ, ಅಶರೀರಿಯೂ ಆದ ಆತ್ಮನಿಗೆ ಅವನ ಕರ್ಮಾನುಗುಣವಾಗಿ ಈ ದೇಹವು ವಾಸಸ್ಥಾನವಾಗುವುದು. ದೇಹಯೋಗವನ್ನು ಪಡೆದು ಪ್ರಿಯ ಮತ್ತು ಅಪ್ರಿಯಗಳಿಂದ ಆವೃತನಾಗುವನು. ದೇಹಸಂಬಂಧವಿರುವವರೆಗೂ ಸುಖಾಸುಖಗಳು ತಪ್ಪವು. ಶರೀರ ರಹಿತನಾದಾಗ ಪ್ರಿಯಾಪ್ರಿಯಗಳು ಅವನನ್ನು ಮುಟ್ಟವು. ಜೀವನು ಈ ದೇಹದಿಂದ ಹೊರಹೊರಟು ಆ ಪರಂಜ್ಯೋತಿಯನ್ನು ಸೇರಿ ತನ್ನ ಸಹಜವಾದ ರೂಪದಿಂದ ಪ್ರಕಾಶಿಸುತ್ತಾನೆ.'

ಪ್ರಜಾಪತಿಯು ಹೀಗೆ ಆತ್ಮರೂಪವನ್ನು ಇಂದ್ರನಿಗೆ ತಿಳಿಸಿ 'ಇದನ್ನು ನೋಡುವೆನು' 'ವಾಸನೆ ನೋಡುವೆನು' 'ತಿಳಿಯುವೆನು' ಎಂದು ಯಾವನು ತಿಳಿಯುವನೋ ಅವನೇ ಆತ್ಮನು ಎಂದು ಆತ್ಮನ ಸ್ವರೂಪವನ್ನು ಇಂದ್ರನಿಗೆ ವಿವರಿಸಿ ಹೇಳಿದನು.[59]

ಹೀಗೆ ನಿತ್ಯನಾದ ಜೀವನು ಜನಿಸಲು ಕಾರಣವೇನೆಂಬ ಜಿಜ್ಞಾಸೆಗೆ ಉತ್ತರವು ಯಾಜ್ಞವಲ್ಕ್ಯ ಮತ್ತು ಜಾರತ್ಕಾರವ ಆರ್ತಭಾಗರ ಸಂವಾದದಲ್ಲಿದೆ.[60] ಜನನ ಮರಣಗಳ ಪರಂಪರೆಗೆ ಕಾರಣ ಅವರವರ ಕರ್ಮವೆಂದು ಇಲ್ಲಿ ಹೇಳಿದೆ.

---

57. ಛಾಂ. ಉ. 8-11-1　58. ಛಾಂ. ಉ. 8-12-1 ಮತ್ತು 8-12-3
59. ಛಾಂ. ಉ. 8-12-4　60. ಬೃ. ಉ. 3-2-13

'ತೌ ಹೋತ್ಕಮ್ಯ ಮಂತ್ರ ಯಾಂಚಕ್ರಾತೇ ತೌಹ ಯದೂಚತುಃ ಕರ್ಮಹೈವ ತದೂಚತುಃ ಅಥ ಯತ್ಪ್ರಶಶಂಸತುಃ ಕರ್ಮ ಹೈವ ತತ್ಪ್ರಶಶಂಸತುಃ ಪುಣ್ಯೋವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನೇತಿ'

ಇದೇ ಭಾವ ಕಠೋಪನಿಷತ್ತಿನಲ್ಲಿಯೂ ಬಂದಿದೆ.[61]

ಹೀಗೆ ಜೀವರುಗಳು. ತಾವು ಮಾಡಿದ ಪುಣ್ಯಪಾಪಕರ್ಮಗಳ ಸಂಕೋಲೆಗಳಿಂದ ಬಂಧಿತರಾಗಿ ಈ ಲೋಕದಲ್ಲಿ ಜನನಮರಣಗಳ ಪರಂಪರೆಯಲ್ಲಿ ತೊಳಲುವರು. ಜೀವರುಗಳು ಈ ಲೋಕಕ್ಕೆ ಬಂದು ಜನಿಸುವುದು ಬಹಳ ಕಷ್ಟಕರವೆಂದೂ ಇಂಥ ತೊಂದರೆಯನ್ನು ತಪ್ಪಿಸಿ ಕೊಳ್ಳಬೇಕೆಂದೂ ಮನಗಾಣಿಸಲು ಜೀವರು ಈ ಲೋಕಕ್ಕೆ ಬರುವ ಕ್ರಮವನ್ನು ಉಪನಿಷತ್ತು ವಿವರಿಸುವುದು. ಈ ವಿಧಾನವನ್ನು ಪಂಚಾಗ್ನಿ ವಿದ್ಯೆಯೂ ತಿಳಿಸುತ್ತದೆ.

ಆರುಣಿಯ ಪುತ್ರನಾದ ಶ್ವೇತಕೇತುವು ಜೈಬಲಿ ಎಂಬ ಪಾಂಚಾಲ ರಾಜನ ಆಸ್ಥಾನಕ್ಕೆ ಸ್ವಪಾಂಡಿತ್ಯಪ್ರದರ್ಶನಕ್ಕಾಗಿ ಬಂದನು. ಆಗ ಮಹಾರಾಜನು ಕೇಳಿದ ಐದು ಪ್ರಶ್ನೆಗಳಿಗೆ ಉತ್ತರಗಳು ತನಗೆ ಗೊತ್ತಾಗದಿರಲು ಅವನು ತನ್ನ ತಂದೆಯನ್ನು ಸಮೀಪಿಸಿ ಅವುಗಳ ಉತ್ತರಗಳನ್ನು ಕೇಳಿದನು. ಅವನ ತಂದೆಗೂ ಅವು ಗೊತ್ತಿರದ ಕಾರಣ ತಂದೆ ಮಕ್ಕಳಿಬ್ಬರೂ ಜೈಬಲಿ ರಾಜನಲ್ಲಿಗೆ ಬಂದು ಅವನಿಂದ ಆ ಉಪದೇಶವನ್ನು ಪಡೆದರು. ರಾಜನು ಕೇಳಿದ ಐದು ಪ್ರಶ್ನೆಗಳಿವು :

೧. ಈ ಜನರು ಮೃತರಾದ ಮೇಲೆ ಹೋಗುವ ಮಾರ್ಗಗಳಲ್ಲಿ ವ್ಯತ್ಯಾಸವಿದೆಯೇ?

೨. ಈ ಲೋಕಕ್ಕೆ ಜನರು ಹೇಗೆ ಬಂದು ಸೇರುತ್ತಾರೆ?

೩. ಮತ್ತೆ ಮತ್ತೆ ಮೃತರಾಗಿ ಬರುವ ಜನರಿಂದ ಈ ಲೋಕವೇಕೆ ತುಂಬಿ ಹೋಗದು?

೪. ಜಲವು ಪುರುಷ ಶಬ್ದ ವಾಚ್ಯವಾಗಿ ಪುರುಷಾಕಾರವನ್ನು ಪಡೆಯಬೇಕಾದರೆ ಎಷ್ಟನೆಯ ಆಹುತಿಯಲ್ಲಿ ಹೋಮಮಾಡಬೇಕು?

೫. ದೇವಯಾನ ಮತ್ತು ಪಿತೃಯಾನಗಳ ಸಾಧನವಾವುದು?

ಇವೈದು ಪ್ರಶ್ನೆಗಳಿಗೂ ರಾಜನು ಉಪದೇಶಿಸಿದ ಉತ್ತರಗಳನ್ನು ಹೀಗೆ ಸಂಗ್ರಹಿಸಬಹುದು:

೧. ಜನರು ಮೃತರಾದ ಮೇಲೆ ಸಾರುವ ಮಾರ್ಗಗಳು ಎರಡು, ದೇವಯಾನ ಮತ್ತು ಪಿತೃಯಾನವೆಂದು. ದೇವಯಾನ ಮಾರ್ಗದಲ್ಲಿ ಹೋಗುವ ಪುಣ್ಯಶಾಲಿಗಳು ಅಗ್ನಿ, ಹಗಲು, ಶುಕ್ಲಪಕ್ಷ, ಉತ್ತರಾಯಣ, ದೇವಲೋಕ ಮೊದಲಾದುವುಗಳ ಅಭಿಮಾನಿ ದೇವತೆಗಳಿಂದ ದಾರಿ ತೋರಲ್ಪಟ್ಟವರಾಗಿ ಆದಿತ್ಯನನ್ನು, ವಿದ್ಯುದಭಿಮಾನಿ ದೇವತೆಯನ್ನು ಸೇರಿ ಕೊನೆಗೆ ಅಮಾನವನೆಂಬ ದಿವ್ಯಪುರುಷನಿಂದ ಬ್ರಹ್ಮಲೋಕಕ್ಕೆ ಕರೆದೊಯ್ಯಲ್ಪಡುವರು. ಅಲ್ಲಿ ನಿರತಿಶಯವಾದ ಆನಂದೈಶ್ವರ್ಯಶಾಲಿಗಳಾಗಿ ಪರಮಾತ್ಮಸನಾಥರಾಗಿ ಅವರು ವಾಸಿಸುವರು. ಅವರಿಗೆ ಸಂಸಾರಬಂಧ ಮತ್ತೆ ಉಂಟಾಗದು. ಇನ್ನೊಂದು ಪಿತೃಯಾನ ಅಥವಾ ಧೂಮಮಾರ್ಗ. ಇದರಲ್ಲಿ ಹೋಗುವವರು ಧೂಮಾಭಿಮಾನಿಯಾದ ದೇವತೆಯನ್ನು ಸೇರಿ ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ, ಪಿತೃಲೋಕ ಮತ್ತು ಚಂದ್ರನೇ ಮೊದಲಾದ ಅಭಿಮಾನಿ ದೇವತೆಗಳಿಂದ ದಾರಿ ತೋರಲ್ಪಟ್ಟು ಚಂದ್ರಲೋಕದ ಆಜಾನ ದೇವರುಗಳಿಗೆ ಭೋಗೋಪಕರಣರಾಗುತ್ತಾರೆ. ಇವರು ಕರ್ಮಫಲ ಮುಗಿಯಲು ಮತ್ತೆ ಭೂಮಿಯಲ್ಲಿ ಜನಿಸುವರು.

೨. ಪಿತೃಯಾನದಲ್ಲಿ ಹೋದವರು ಅವರ ಕರ್ಮವು ಕ್ಷಯಿಸಿದ ನಂತರ ಪ್ರಲೀನರೂ,

61. ಕಠ. ಉ. 2-2-7

ಸೂಕ್ಷ್ಮರೂ ಆಗಿ ಆಕಾಶಸದೃಶರಾಗಿ ಆಕಾಶವನ್ನು ಸೇರಿ ಅಲ್ಲಿಂದ ವಾಯುವನ್ನೂ ಅಲ್ಲಿಂದ ಮುಂದೆ ವೃಷ್ಟಿಯ ಮೂಲಕ ಪೃಥ್ವಿಯನ್ನು ಸೇರಿ ಓಷಧಿ ವನಸ್ಪತಿಗಳ ಸಂಸರ್ಗವನ್ನು ಹೊಂದುವರು. ಅನಂತರ ಪುರುಷನನ್ನು ಸೇರಿ ತದ್ವಾರಾ ಸ್ತ್ರೀಯನ್ನು ಸೇರಿ ಪುರುಷಾಕಾರಯುಕ್ತರಾಗಿ ಜನಿಸುವರು. ಹೀಗೆ ಇವರಿಗೆ ಗತಾಗತಿಯುಂಟು.

೩. ಧೂಮಮಾರ್ಗ ಮತ್ತು ಅರ್ಚಿರಾದಿಗಳೆಂಬ ಇವೆರಡು ಮಾರ್ಗಗಳನ್ನೂ ಅರಿಯದವರು ಮಾರ್ಗದ್ವಯ ಪ್ರಭ್ರಷ್ಟರಾಗಿ ಕೀಟ ಪಕ್ಷಿ ದಂಶಮಶಕಾದಿ ರೂಪದಿಂದ ಪರಿಭ್ರಮಿಸುತ್ತಿರುವುದರಿಂದ ಈ ಲೋಕವು ಮತ್ತೆ ಮತ್ತೆ ಮೃತರಾಗಿ ಸಾಯುವವರಿಂದ ತುಂಬಿ ಹೋಗದು.

೪. ಭೂತ ಸೂಕ್ಷ್ಮಗಳಿಂದ ಕೂಡಿದ ಆತ್ಮರುಗಳನ್ನು ದೇವತೆಗಳು ದ್ಯುಲೋಕವೆಂಬ ಅಗ್ನಿಯಲ್ಲಿ ಆಹುತಿರೂಪವಾಗಿ ಬಿಡುವರು. ಅನಂತರ ಇವರು ಪರ್ಜನ್ಯನೆಂಬ ಅಗ್ನಿಯನ್ನೂ, ಮುಂದೆ ಪೃಥ್ವಿಯನ್ನೂ ಸೇರಿ ಅನ್ನವಾಗುವರು. ಅನಂತರ ಪುರುಷನನ್ನು ಸೇರಿ ರೇತಸ್ಸಾಗಿ ಪುರುಷನಿಂದ ಸ್ತ್ರೀಯನ್ನು ಸೇರಿ ಪುರುಷ ಶಬ್ದವಾಚ್ಯರಾಗುವರು. ಹೀಗೆ ಐದನೆಯ ಆಹುತಿಯಲ್ಲಿ ಹೋಮ ಮಾಡಿದಾಗ ಜಲಗಳು ಪುರುಷ ಶಬ್ದವಾಚ್ಯವಾಗುತ್ತವೆ.

೫. ಪಂಚಾಗ್ನಿ ವಿದ್ಯೆಯನ್ನು ತಿಳಿದು ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ರೇತೋ ರೂಪದಲ್ಲಿ ಸಂಚರಿಸುವ ಆತ್ಮನನ್ನು ಯಥಾವತ್ತಾಗಿ ತಿಳಿದು ಉಪಾಸಿಸುವವರೂ ಅರಣ್ಯದಲ್ಲಿ ನಿಂತು ಶ್ರದ್ಧೆಯನ್ನು ಪುರಸ್ಕರಿಸಿ ಸತ್ಯಶಬ್ದವಾಚ್ಯನಾದ ಪರಮಾತ್ಮನ ಉಪಾಸನೆ ಮಾಡುವವರೂ ಉತ್ಕ್ರಮಣಾನಂತರ ಅರ್ಚಿರಾದಿ ಮಾರ್ಗದಲ್ಲಿ ಚರಿಸುವರು. ಬ್ರಹ್ಮೋಪಾಸನೆಯನ್ನು ಮಾಡದೆ ಯಜ್ಞದಾನ ಮೊದಲಾದ ಕರ್ಮಗಳಲ್ಲಿ ನಿರತರಾದವರು ಧೂಮಮಾರ್ಗದಲ್ಲಿ ಚರಿಸುವರು[62] ಹೀಗೆ ಉಪನಿಷತ್ತುಗಳು ಜೀವರುಗಳ ಸ್ವರೂಪ ಸ್ವಭಾವಗಳನ್ನೂ, ಜನ್ಮಕಾರಣವನ್ನೂ ಜನಿಸುವ ಬಗೆಯನ್ನೂ ಹೇಳುತ್ತವೆ. ಅನಾದಿಯಾದ ಅವಿದ್ಯೆಯಿಂದಾದ ಪುಣ್ಯಪಾಪರೂಪವಾದ ಕರ್ಮಪ್ರವಾಹದ ಕಾರಣ ವಿಧವಿಧವಾದ ದೇಹಯೋಗವುಂಟಾಗುವುದೆಂದು ಇಲ್ಲಿ ಸಿದ್ಧಾಂತಿತ ವಾಗಿದೆ. ಸ್ವಭಾವತಃ ಅಜರೂ, ನಿತ್ಯರೂ ಆದ ಜೀವರುಗಳು 'ಅನೃತೇನ್ಯವ ಹಿ ಪ್ರತ್ಯೂಢಾಃ' ಆದಕಾರಣ ತಮ್ಮ ನಿಜಸ್ವರೂಪವನ್ನರಿಯಲಾರರೆಂದೂ ಸಂಸಾರಚಕ್ರದೊಳಗೆ ಸಿಕ್ಕಿ ಹೋಗಿರುವರೆಂದೂ ಉಪನಿಷತ್ತುಗಳು ಸಾರುತ್ತವೆ.

ಹೀಗೆ ಶೋಚನೀಯವಾದ ಸ್ಥಿತಿಯಲ್ಲಿರುವ ಮಾನವರ ಗುರಿ ಏನಾಗಬೇಕು ? ಬ್ರಹ್ಮ ಸಾಕ್ಷಾತ್ಕಾರವೇ ನಮ್ಮ ಧ್ಯೇಯವಾಗಬೇಕೆಂಬುದು ಉಪನಿಷತ್ತುಗಳ ಅಭಿಪ್ರಾಯ. ಈ ಲೋಕ ದುಃಖ ಭೂಯಿಷ್ಠವಾದುದು. ಬ್ರಹ್ಮಲೋಕವು ಒಂದೇ ಪರಮಾನಂದಕರವಾದುದು.[63] ಹಕ್ಕಿಗಳೆಲ್ಲ ವೃಕ್ಷವನ್ನಾಶ್ರಯಿಸುವಂತೆ ಲೋಕದಲ್ಲಿರುವ ಸಮಸ್ತವೂ ಆ ಪರಮಾತ್ಮನನ್ನೇ ಆಶ್ರಯಿಸಿದೆ. 'ಆನಂದಂ ಬ್ರಹ್ಮಣೋ ವಿದ್ವಾನ್ ನಬಿಭೇತಿ ಕದಾಚನೇತಿ'[64] ಎಂದು ಹೇಳಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡವನು ಭಯವಿಮುಕ್ತನಾಗುವನೆಂದು ಹೇಳುತ್ತದೆ

62. ಬೃ. ಉ. 6-2 ಛಾಂ. ಉ. 5-3ರಿಂದ 5-10
63. ಬೃ. ಉ. 4-3-32
64. ತೈ. ಉ. 2-4 65. ತೈ. ಉ. 1-6

ಉಪನಿಷತ್ತು. ಸಂಸಾರದಲ್ಲಿ ತೊಳಲುವುದಕ್ಕೆ ಯಾವುದು ಕಾರಣವಾಗಿದೆಯೋ ಅದನ್ನು ತೊಡೆದು ಹಾಕಬೇಕು. ಆಗ 'ಪ್ರಾಣಾರಾಮಂ ಮನ ಆನಂದಂ. ಶಾಂತಿ ಸಮೃದ್ಧಮಮೃತಂ'[65] ಎಂದು ಹೇಳಿದ ಪರಮಾನಂದವು ಪ್ರಾಪ್ತವಾಗುವುದು. ಈ ಲೋಕದಲ್ಲಿ ನಮಗೆ ಲಭಿಸುವ ಸುಖಗಳೂ ಮನಸ್ಸಿಗೂ ಇಂದ್ರಿಯಗಳಿಗೂ ತಾತ್ಕಾಲಿಕವಾಗಿ ಆಪ್ಯಾಯಮಾನವಾಗಿರಬಹುದು. ಆದರೆ ಇವು ಸ್ಥಿರವಲ್ಲ. ಈ ಐಹಿಕ ಸುಖಗಳು ಪ್ರೇಯವೇ ವಿನಾ ಶ್ರೇಯವಲ್ಲ. ಆದರಿಂದಲೇ ಅನ್ಯಚ್ಛ್ರೇಯೋಽನ್ಯದು ತೈವ ಪ್ರೇಯಃ[66] ಎಂದು ಉಪನಿಷತ್ತು ವಿಭಾಗ ಮಾಡಿತು. ಇವುಗಳೆರಡರಲ್ಲಿ ಶ್ರೇಯಸ್ಸನ್ನು ಆರಿಸಿಕೊಂಡವರಿಗೆ ಮಂಗಳವೇ ವಿನಾ ಪ್ರೇಯವನ್ನಾರಿಸಿ ಕೊಂಡವರಿಗಿಲ್ಲ. 'ತ್ರಯೋ ಶ್ರೇಯ ಆದದಾನಸ್ಯ ಸಾಧು ಭವತಿ ಹೀಯತೇ ಅರ್ಥಾದ್ಯ ಉ ಪ್ರೇ ಯೋ ವೃಣೀತೇ'[66] ಎಂದು ಇದನ್ನೇ ಹೇಳಿದೆ. ಕೇವಲ ಐಹಿಕವಾದ ಸುಖ ಸಂಪದಗಳು ಮಾನವನಿಗೆ ನಿರತಿಶಯವಾದ ಆನಂದವನ್ನುಂಟುಮಾಡವು–'ನ ವಿತ್ತೇನ ತರ್ಪಣೀಯೋ ಮನುಷ್ಯಃ'[67], ಆದರಿಂದ ಭಗವತ್ಸಾಕ್ಷಾತ್ಕಾರವನ್ನು ಪಡೆದುಕೊಳ್ಳುವುದೇ ಮಾನವನ ಗುರಿಯಾಗಬೇಕೆಂಬುದು ಉಪನಿಷತ್ತುಗಳ ನಿರ್ಣಯ.

ಸಂಸಾರ ಚಕ್ರದಿಂದ ದೂರವಾಗಿ ಅಮೃತತ್ವವನ್ನು ಪಡೆಯಲು ಸರ್ವರೂ ಪ್ರಯತ್ನಿಸಬೇಕೆಂದು ಉಪನಿಷತ್ತುಗಳು ಸಂದೇಶ. ಸಂಸಾರದ ಬಂಧನದಿಂದ, ಅಜ್ಞಾನದ ಬಲೆಯಿಂದ, ಮುಕ್ತರಾಗುವುದೇ ಮೋಕ್ಷವೆನಿಸುವುದು: ಭಗವಂತನು ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ಇದ್ದರೂ ಅವನನ್ನು ನಾವು ಪಡೆಯುವುದು ಸುಲಭವಲ್ಲ ಅದಕ್ಕಾಗಿ ಮಾನವನ ಆದ್ಯಕರ್ತವ್ಯವಾದರೋ ಆ ಸರ್ವಾಂತರ್ಯಾಮಿಯನ್ನು ಸರ್ವಥಾ ಸಾಧಿಸುವುದೇ ಆಗಿದೆ.

ಯಾಜ್ಞವಲ್ಕ್ಯರು ಪ್ರವಜನಕ್ಕೆ ಹೊರಡುವ ಸಂದರ್ಭದಲ್ಲಿ ತಮ್ಮ ಪತ್ನಿಯರಾದ ಕಾತ್ಯಾಯನೀ ಮತ್ತು ಮೈತ್ರೇಯಿಗಳಿಗೆ ತಮ್ಮಲ್ಲಿದ್ದ ಹಣವನ್ನು ವಿಭಾಗ ಮಾಡಿ ಹೊರಡಲಿಚ್ಛಿಸಿದರು. ವಿತ್ತಪೂರ್ಣವಾದ ಸಕಲ ಭೂಮಂಡಲವನ್ನೂ ಹೊಂದಿದರೆ ತಾನು ಅಮೃತಳಾಗಬಲ್ಲೆನೇ ಎಂದು ಮೈತ್ರೇಯೀಯು ಪತಿಯನ್ನು ಕೇಳಿದಳು. ಇಲ್ಲವೆಂಬುದು ಯಾಜ್ಞ ವಲ್ಕ್ಯರ ಮರುನುಡಿಯಾಯಿತು. ಬಗೆಬಗೆಯಾದ ಸಾಧನ ಸಂಪತ್ತುಗಳನ್ನು ಹೊಂದಿದವರ ಜೀವನದಂತೆ ನಿನ್ನ ಜೀವನವೂ ಆಗುವುದೇ ವಿನಾ ವಿತ್ತದಿಂದ ಅಮೃತತ್ವ ಲಭಿಸುವುದೆಂಬ ಆಸೆ ಎಳ್ಳಷ್ಟೂ ಬೇಡವೆಂದು ಯಾಜ್ಞವಲ್ಕ್ಯರು ತಿಳಿಸಿದರು. ಅಮೃತಳಾಗಲಾರದ ಅಂಥ ಧನದಿಂದ ತನಗೇನೂ ಆಗಬೇಕಾದುದಿಲ್ಲವೆಂದು ಮೈತ್ರೀಯಿ ಧನದಲ್ಲಿ ಅನಾಸಕ್ತಳಾಗಿ, ತನಗೆ ಬ್ರಹ್ಮೋಪದೇಶವನ್ನು ಮಾಡಬೇಕೆಂದು ಬೇಡಿದಳು. ಪತ್ನಿಯ ಈ ಪರಮನಿಷ್ಠೆಯಿಂದ ಸುಪ್ರೀತರಾದ ಯಾಜ್ಞವಲ್ಕ್ಯರು–'ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ | ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ ಮೈತ್ರೇಯ್ಯಾತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತೇ ಇದಂ ಸರ್ವಂ ವಿದಿತಂ'[68] ಎಂದು ಉಪದೇಶಿಸಿದರು. ಲೋಕದ ಸಮಸ್ತ ಪದಾರ್ಥಗಳೂ

66. ಕಠ ಉ. 1-2-1    67. ಕಠ ಉ. 1-1-27

68. ಬೃ. ಉ. 4-5-6

ಆಯಾ ಪದಾರ್ಥಗಳಿಗೋಸ್ಕರವೇ ಪ್ರಿಯವಾಗಿಲ್ಲವೆಂದೂ, ಅವುಗಳಲ್ಲಿ ನೆಲಸಿರುವ ಆತ್ಮನಿಗಾಗಿ ಪ್ರಿಯವಾಗಿವೆಯೆಂದೂ ಹೇಳಿದರವರು. ಸರ್ವತ್ರ ಭಗವಂತನು ಆತ್ಮನಾಗಿರುವುದರಿಂದ ನಾವು ಸಕಲಪದಾರ್ಥಗಳನ್ನೂ ಪ್ರೀತಿಸಬೇಕು. ಅದರಿಂದಲೇ ಆ ಸರ್ವಾಂತರ್ಯಾಮಿಯನ್ನು ಧ್ಯಾನಿಸಿ ತಿಳಿಯಬೇಕೆಂದೂ ಅವನೊಬ್ಬನನ್ನು ತಿಳಿದು ಧ್ಯಾನಿಸಿದರೆ ಸರ್ವವನ್ನೂ ತಿಳಿದಂತಾಗುವುದೆಂದೂ ಉಪದೇಶಿಸಿದರು.

ಈ ಬಗೆಯಾಗಿ ಉಪನಿಷತ್ತು ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದೇ ಮಾನವನ ಗುರಿಯಾಗಬೇಕೆಂದು ಸಾರಿ ಸಾರಿ ಹೇಳಿ ಆ ಸರ್ವಕಾರಣಕಾರಣನೂ, ಸರ್ವಾಂತರ್ಯಾಮಿಯೂ, ಪರಮುದಯಾಕರನೂ ಆದ ಪರಮಾತ್ಮನನ್ನು ಭಜಿಸಿ ಕೃತಾರ್ಥರಾಗಬೇಕೆಂದು ಉಪದೇಶಿಸುತ್ತಿದ್ದರು.[69]

ಪರಮಪುರುಷಾರ್ಥವಾದ ಅಮೃತತ್ವ ಪ್ರಾಪ್ತಿಗೆ ಉಪಾಯವನ್ನೂ ಉಪನಿಷತ್ತು ಹೇಳಿದೆ. ಮೋಕ್ಷೋಪಾಯವಾವುದು ? ಕೆಲವು ಶ್ರುತಿಗಳು ಜ್ಞಾನವೇ ಮೋಕ್ಷೋಪಾಯವೆಂದು ಹೇಳುತ್ತವೆ. 'ತರತಿ ಶೋಕಂ ಆತ್ಮವಿತ್' 'ಬ್ರಹ್ಮವಿತ್ ಬ್ರಹ್ಮೈವ ಭವತಿ' 'ಯ ಏತದ್ವಿದುರಮೃತಾ ಯೇ ಭವಂತಿ' 'ತಮೇವಂ ವಿದ್ವಾನ್' ಮೊದಲಾದ ವಾಕ್ಯಗಳು ಜ್ಞಾನವನ್ನು ಮೋಕ್ಷೋಪಾಯವನ್ನಾಗಿ ಹೇಳುವುವು. ಹೀಗೆಯೇ ಉಪಾಸನೆ ಅಥವಾ ಭಕ್ತಿಯನ್ನು ಮೋಕ್ಷೋಪಾಯವನ್ನಾಗಿ ಕೆಲವು ಶ್ರುತಿಗಳು ಹೇಳುವುವು. 'ತದ್ಬ್ರಹ್ಮೇತ್ಯುಪಾಸೀತ'[70] 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ'[71] ಮೊದಲಾದುವು ಈ ಬಗೆಯವು. ವೇದನ, ಜ್ಞಾನ ಮೊದಲಾದ ಶಬ್ದಗಳು ಉಪಾಸನ ಶಬ್ದಕ್ಕೆ ಪರ್ಯಾಯವಾಗಿ ಬಳಸಿರುವುದರಿಂದ ಭಕ್ತಿಪರವಾಗಿ ಬಳಸಲಾಗಿವೆಯೆಂದು ಹೇಳಲಾಗಿದೆ. ಹೀಗೆ ಮೋಕ್ಷೋಪಾಯವನ್ನು ವಿಧಿಸುವ ವಾಕ್ಯಗಳಲ್ಲಿ[72] ಜ್ಞಾನ ಮತ್ತು ಭಕ್ತಿಗಳೆಂಬ ಎರಡು ಮಾರ್ಗಗಳಿಗೆ ಅವಕಾಶವಾಗಿದೆ. ಕರ್ಮ ಮತ್ತು ಭಕ್ತಿಗಳನ್ನು ಅಂಗಗಳಾಗಿ ಹೊಂದಿದ ಆತ್ಮೈಕ್ಯಜ್ಞಾನವೇ ಮೋಕ್ಷಕ್ಕೆ ಸಾಧನವೆಂಬುದು ಅದ್ವೈತ ಸಿದ್ಧಾಂತದ ನಿರ್ಣಯ. ತೈಲಧಾರಾವಚ್ಛಿನ್ನವಾದ ಸ್ಮೃತಿಸಂತತಿರೂಪವಾದ ಭಕ್ತಿಯೇ ಮೋಕ್ಷಕ್ಕೆ ಸಾಧನವೆಂದೂ ಕರ್ಮ ಮತ್ತು ಜ್ಞಾನಗಳು ಇದಕ್ಕೆ ಅಂಗಗಳೆಂದೂ ಇತರ ದಾರ್ಶನಿಕರ ಸಿದ್ಧಾಂತ. ಇವೆರಡು ಮಾರ್ಗಗಳಿಗೂ ಉಪನಿಷತ್ತಿನ ವಾಕ್ಯಗಳೇ ಆಧಾರವಾಗಿವೆ.

ನಾವು ಸಂಸಾರದ ಬಂಧನದಿಂದ ಮುಕ್ತರಾಗಲು ಜ್ಞಾನದ ಜೊತೆಗೆ ಶುದ್ಧವಾದ ಕರ್ಮವೂ ಆವಶ್ಯಕವೆಂದು ಉಪನಿಷತ್ತುಗಳಿಂದ ತಿಳಿದುಬರುತ್ತದೆ. ಆತ್ಮಸಾಕ್ಷಾತ್ಕಾರಕ್ಕೆ ನಾವು ಅರ್ಹರಾಗಬೇಕಾದರೆ ನೀತಿ ಮತ್ತು ಧರ್ಮವನ್ನನುಸರಿಸಬೇಕು.

ಪರಿಶುದ್ಧವಾದ ನಡತೆ, ಶುದ್ಧವಾದ ಜೀವನ ಮತ್ತು ಇಂದ್ರಿಯ ನಿಗ್ರಹ ಅತ್ಯಂತ ಆವಶ್ಯಕವಾದುದು. ಇದನ್ನೇ ಕಠೋಪನಿಷತ್ತು–

---

69. ಮುಂ. ಉ. 2-2-5 ; ಬೃ. ಉ. 4-4-23 ; ಬೃ. ಉ. 2-4-5 ಕಠ. 2-3-9 ; ತೈ. ಉ. 3-10.
70. ತೈ. ಉ. 3-10 71. ಬೃ. ಉ. 2-4-5
72. ಶ್ವೇ. ಉ. 1-6 ; ಶ್ವೇ. ಉ. 2-15 ; ಈಶಾವಾಸ್ಯ. 11 ; ಬೃ. ಉ. 4-4-21 ; ಕಠ 1-2-12

'ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಽಶುಚಿಃ |
ನಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ || (ಕಠ. ಉ. 1-3-7) ಎಂದು ಹೇಳುತ್ತದೆ. ಆತ್ಮಸಂಯಮ ಆಗಬೇಕು. ನಮ್ಮ ಆಶಾಪಾಶಗಳನ್ನು ನಾವು ಹತೋಟಿಯಲ್ಲಿಡಬೇಕು. ರಾಗದ್ವೇಷಾದಿಗಳನ್ನು ದಮನಮಾಡಿ ದಾನ ಮತ್ತು ಪರೋಪಕಾರಗಳಿಂದ ಭಗವಂತನ ಆರಾಧನೆಯನ್ನು ಮಾಡಬೇಕು. ಈ ಲೋಕದಲ್ಲಿರುವ ಸಮಸ್ತ ಪದಾರ್ಥಗಳೂ ಪರಮಾತ್ಮನಿಗೆ ಸೇರಿ ಅವನಿಂದ ಯುಕ್ತವಾಗಿವೆಯೆಂದು ಅರಿಯಬೇಕು. 'ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಸ್ವಿದ್ಧನಂ'[73] ಎಂದು ಹೇಳಿ ಈಶಾವಾಸ್ಯೋಪನಿಷತ್ತು ಅಹಂಕಾರ ಮಮಕಾರಗಳಿಂದ ದೂರವಾಗಿ ಮತ್ತೊಬ್ಬರ ಸ್ವತ್ತಿಗೆ ಆಸೆಪಡದ ನಿರ್ಮಲ ಜೀವನವನ್ನು ನಡೆಸಬೇಕೆಂದು ಎಚ್ಚರಿಸುತ್ತದೆ. ಬಲಿಷ್ಠವಾದ ಆಸೆಗೆ ಇತಿಮಿತಿಗಳಿಲ್ಲ. ಕೇವಲ ಕಾಮಕಾಮಿಗಳಾಗಿ ಆಶೆಗಳಿಗೆ ಬಲಿಯಾದವರು 'ತೇ ಮೃತ್ಯೋಃ ಯಂತಿ ವಿತತಸ್ಯಪಾಶಂ'[74] ಹರಡಿದ ಮೃತ್ಯುವಿನ ಬಲೆಗೆ ಬೀಳುವರು. ಅದರಿಂದ ನಿತ್ಯಾನಿತ್ಯವಸ್ತುವಿವೇಕವನ್ನು ಪಡೆದವರು ಅನಿತ್ಯವಾದವುಗಳನ್ನೆಂದೂ ಬಯಸರು–'ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ.'[75]

ಉಪನಿಷತ್ತುಗಳು ಆತ್ಮಸಾಕ್ಷಾತ್ಕಾರಕ್ಕೆ ಮೊದಲನೆಯ ಹಂತವಾಗಿ ಅಂತಃಶುದ್ಧಿಯನ್ನು ವಿಧಿಸುತ್ತವೆ. ಆಸೆ, ದ್ವೇಷ, ಕೋಪ, ಮತ್ಸರ ಮೊದಲಾದವುಗಳನ್ನು ನಿರ್ಮೂಲ ಮಾಡಿ ಮನಸ್ಸನ್ನು ಶುದ್ಧಗೊಳಿಸಬೇಕೆಂಬುದು ಇದರ ಉಪದೇಶ. ಇಂದ್ರಿಯ ಜಯವನ್ನು ಸಂಪಾದಿಸಿ ಸಿದ್ಧಿಯನ್ನು ಪಡೆಯಬೇಕು.[76] ದುಶ್ಚರಿತದಿಂದ ದೂರವಾಗದವನೂ, ಅಶಾಂತನೂ, ಅಸಮಾಹಿತನೂ ಆದವನು ಆತ್ಮಸಾಕ್ಷಾತ್ಕಾರ ಪಡೆಯನು.

'ನಾವಿರತೋ ದುಶ್ಚರಿತಾತ್ ನಾಽಶಾಂತೋ ನಾಽಸಮಾಹಿತಃ |
ನಾಽಶಾಂತಮಾನಸೋ ವಾಽಪಿ ಪ್ರಜ್ಞಾನೇನೈನಮಾಪ್ನುಯಾತ್ ||'[77]

ನಿಜವಾದ ಯೋಗಿಯನ್ನು ಉಪನಿಷತ್ತು ಶಾಂತ, ದಾಂತ, ತಿತಿಕ್ಷು, ಉಪರತ ಸಮಾಹಿತ ಎಂದು ವರ್ಣಿಸುತ್ತದೆ. ಕರ್ಮಫಲದಲ್ಲಿ ಆಸಕ್ತಿಯನ್ನು ಹೊಂದದೆ ತ್ಯಾಗ ಬುದ್ಧಿಯನ್ನು ಬೆಳೆಸಿಕೊಳ್ಳಬೇಕೆಂದು ಉಪನಿಷತ್ತು ಸಾರುತ್ತದೆ. ಉಪನಿಷತ್ತು ನಿವೃತ್ತಿ ಮಾರ್ಗವನ್ನು ಬೋಧಿಸುವುದೆಂದರೆ ಫಲದಲ್ಲಿ ಆಸಕ್ತಿಯನ್ನು ಬಿಡಬೇಕೆಂದು ಹೇಳುವುದೇ ಆಗಿದೆ.[78]

73. ಈಶಾವಾಸ್ಯ ಉ. 1
74. ಕಠ. ಉ. 2-1-1
75. ಕಠ. ಉ. 2-1-2
76. ಕಠ. ಉ. 1-3-6
77. ಕಠ. ಉ. 1-2-24
78. "The righteous man is not he who leaves the world and retires to a cloister, but he who lives in the world and loves the objects of the world not for their own sake, but for the sake of the infinite they contain, the universal they conceal." -*Phil of Upanishads*, Dr. S. R. p. 93.

ಉಪನಿಷತ್ತು ಧರ್ಮ ಮತ್ತು ನೀತಿಗೆ ಪ್ರಾಧಾನ್ಯ ಕೊಟ್ಟಿರುವಂತೆ ನಮ್ಮ ಕರ್ತವ್ಯಗಳನ್ನು ಹೇಳುತ್ತಿದೆ. ಬೃಹದಾರಣ್ಯಕ ಉಪನಿಷತ್ತು 'ದತ್ತ, ದಾಮ್ಯತ, ದಯಧ್ವಂ'[79] ದಾನಮಾಡಿ, ಇಂದ್ರಿಯ ನಿಗ್ರಹಮಾಡಿ, ದಯೆತೋರಿ ಎಂದು ಮೂರು ಮಾತಿನಲ್ಲಿ ನಮ್ಮ ಕರ್ತವ್ಯವನ್ನೆಲ್ಲಾ ಅತ್ಯಂತ ಪ್ರಭಾವಶಾಲಿಯಾಗಿ ಹೇಳಿದೆ. ತೈತ್ತಿರೀಯ ಉಪನಿಷತ್ತು 'ಶ್ರದ್ಧಯಾ ದೇಯಂ । ಅಶ್ರದ್ಧಯಾಽದೇಯಂ । ಶ್ರಿಯಾ ದೇಯಂ । ಹ್ರಿಯಾ ದೇಯಂ । ಭಿಯಾದೇಯಂ । ಸಂವಿದಾದೇಯಂ ।'[80] ಎಂದು ಹೇಳಿತು. 'ಶ್ರದ್ಧೆಯಿಂದ ಕೊಡಬೇಕು. ಅಶ್ರದ್ಧೆಯಿಂದ ಕೊಡಬಾರದು. ಹೆಚ್ಚು ಕೊಡಬೇಕು. ಲಜ್ಜೆಯಿಂದ ಕೊಡಬೇಕು. ಭಯದಿಂದ ಕೊಡಬೇಕು. ತಿಳಿದು ಕೊಡಬೇಕು'. ಛಾಂದೋಗ್ಯ ಉಪನಿಷತ್ತು-"ಅಥ ಯತ್ತಪೋ ದಾನಂ ಆರ್ಜವಂ ಅಹಿಂಸಾ ಸತ್ಯವಚನಂ ಇತಿ ತಾ ಅಸ್ಯ ದಕ್ಷಿಣಾಃ" (ಛಾಂ. ಉ. 3-17-4) ಎಂದು ವಿಧಿಸುತ್ತದೆ. ಆಶ್ರಮ ಧರ್ಮಕ್ಕೆ ಪ್ರಾಧಾನ್ಯ ಕೊಟ್ಟು, ನಾಲ್ಕು ಆಶ್ರಮಗಳೂ ಜೀವನನ್ನು ಶುದ್ಧಿಗೊಳಿಸಿ ಅಮೃತತ್ವ ಪ್ರಾಪ್ತಿಗೆ ಅರ್ಹನನ್ನಾಗಿಸುವುವೆಂದು ಹೇಳಲಾಗಿದೆ.[81] ಸಂನ್ಯಾಸಕ್ಕಂತೂ ಹೆಚ್ಚಿನ ಪ್ರಾಮುಖ್ಯ ಕೊಡಲಾಗಿದೆ. ವರ್ಣಧರ್ಮ ರೂಢಮೂಲವಾಗಿದ್ದರೂ ಬ್ರಾಹ್ಮಣ ಶೀಲದಿಂದ ಸಂಪಾದ್ಯವಾಗಿದ್ದಿತೆಂಬುದು ಸತ್ಯಕಾಮ ಜಾಬಾಲನ ವೃತ್ತಾಂತದಿಂದ[82] ಗೊತ್ತಾಗುತ್ತದೆ. ಜನಕ, ಜೈವಲಿ ಮೊದಲಾದ ಕ್ಷತ್ರಿಯರುಗಳಿಂದಲೂ ಬ್ರಹ್ಮವಿದ್ಯೆಯು ಉಪದೇಶಿಸಲ್ಪಟ್ಟಿತು. ಇದರಿಂದ ಕ್ಷತ್ರಿಯರು ಬ್ರಹ್ಮಜಿಜ್ಞಾಸೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರುತ್ತಿದ್ದರೆಂದು ತಿಳಿಯಬಹುದು. ಹೀಗೆ ಬ್ರಹ್ಮಪ್ರಾಪ್ತಿಗೆ ಮಾರ್ಗವನ್ನೂ ಉಪನಿಷತ್ತು ಅದ್ಭುತವಾಗಿ ತೋರಿದೆ.

ಮೇಲೆ ಹೇಳಿದಂತೆ ಜ್ಞಾನ ಮತ್ತು ಉಪಾಸನೆಗಳೆಂಬ ಎರಡು ಮಾರ್ಗಗಳನ್ನು ಉಪನಿಷತ್ತು ಮೋಕ್ಷಕ್ಕೆ ಉಪಾಯಗಳೆಂದು ಹೇಳುತ್ತದೆ. ಉಪಾಸನೆಗಳು ಬಗೆಬಗೆಯಾಗಿ ಸಂಖ್ಯೆಯಲ್ಲಿ ಮೂವತ್ತೆರಡೆಂದು ಹೇಳಲಾಗಿದೆ. ಹಾಗೆಯೇ ಶರಣಾಗತಿಯೆನ್ನುವ ಉಪಾಯವೊಂದನ್ನೂ ಇದು ಹೇಳುತ್ತದೆ. ಇದು ನ್ಯಾಸ ವಿದ್ಯೆ ಎನ್ನಿಸುವುದು. 'ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ'[83] ಎಂದು ಶ್ರುತಿ ಇದಕ್ಕೆ ಆಧಾರವಾಗಿದೆ.

ಮುಕ್ತನ ಸ್ವರೂಪವೇನು ? ಉಪನಿಷತ್ತುಗಳಿಗನುಸಾರ ಮೋಕ್ಷ ಸ್ವರೂಪ ಶೂನ್ಯವಲ್ಲ[84]. ಮುಕ್ತರು ನಾಮರೂಪಗಳಿಂದ ದೂರರಾಗಿ ಆ ಸರ್ವಾತ್ಮನನ್ನು ಸೇರುವರು, ನದಿಗಳು ನಾಮರೂಪಗಳನ್ನು ಕಳೆದುಕೊಂಡು ಸಾಗರವನ್ನು ಸೇರುವಂತೆ.

'ಯಥಾ ನದ್ಯಃ ಸ್ಯಂದಮಾನಾ ಸಮುದ್ರೇಽಸ್ತಂಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥'[85]

ಮೋಕ್ಷ ಸ್ವರೂಪವು ನಿರತಿಶಯವಾದ ಆನಂದದಿಂದ ಕೂಡಿದೆ. ಇಲ್ಲಿಯ ಸುಖ ಅತ್ಯಲ್ಪವಾದರೆ ಮುಕ್ತನ ಆನಂದವು ನಿತ್ಯವೂ ಅಕ್ಷಯವೂ ಆದುದು. ಅನಾದಿಯಾಗಿದ್ದ

79. ಬೃ. ಉ. 5-2
80. ತೈ. ಉ. 1-11
81. Phil. of Up. Dr. S. R. p. 96
82. ಛಾಂ. ಉ. 4-1-4
83. ಶ್ವೇ. ಉ. 6-18
84. Phil. of Up. Dr. S. R. p. 112
85. ಮುಂ. ಉ. 3-2-8.

ಕರ್ಮಲೇಪವು ಪೂರ್ಣವಾಗಿ ತೊಳೆದು ಹೋಗಿ ಮುಕ್ತನಿಗೆ ಸ್ವಸ್ವರೂಪಾವಿರ್ಭಾವವಾಗುವುದು. ಸಂಕೋಚವನ್ನು ಹೊಂದಿದ್ದ ಜ್ಞಾನವು ಆಗ ಪೂರ್ಣವಾಗಿ ವಿಕಾಸಗೊಂಡು ಪ್ರಜ್ವಲಿಸುವುದು. ಮುಕ್ತರು ಪಾಪದೂರರಾಗಿ, ಮುಪ್ಪು, ಸಾವು, ದುಃಖ ಹಸಿವು, ಬಾಯಾರಿಕೆ ಮೊದಲಾದ ದೋಷಗಳಿಲ್ಲದವರಾಗಿ, ಸತ್ಯಕಾಮರೂ, ಸತ್ಯಸಂಕಲ್ಪರೂ ಆಗುವರು. ಮುಕ್ತರು (ಭಗವದನು ಭವದ) ಆನಂದಸಾಗರದಲ್ಲಿ ಮಗ್ನರಾಗುವರು. ಮೋಕ್ಷವೆಂಬುದು ಆತ್ಮನಾಶವಲ್ಲ. ಆದರೆ ಆತ್ಮನ ಪರಿಪೂರ್ಣವಾದ ವಿಕಾಸವೇ.[86]

ಮುಕ್ತನ ಸ್ವರೂಪದ ವಿಚಾರದಲ್ಲಿಯೂ ಉಪನಿಷತ್ತು ಎರಡು ಬಗೆಯಾಗಿ ಹೇಳುತ್ತದೆ. ಕೆಲವು ಶ್ರುತಿಗಳು ಮುಕ್ತರು ಪರಮಾತ್ಮನಿಗೆ ಸಮನಾಗುವರು ಎಂದು ಸಾರುತ್ತವೆ. ಕೆಳಗಿನವು ಈ ಬಗೆಯ ವಾಕ್ಯಗಳು :

'ನಿರಂಜನಃ ಪರಮಂ ಸಾಮ್ಯಮುಪೈತಿ' (ಮುಂ. ಉ. 3-1-3)
'ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾಃ ಪರಿಮುಚ್ಯಂತಿ ಸರ್ವೇ' (ಮು. ಉ. 3-2-6)

ಮತ್ತೆ ಕೆಲವು ಶ್ರುತಿಗಳು ಮುಕ್ತರು ಪರಮಾತ್ಮನೊಡನೆ ಸೇರಿ ಹೋಗುವರೆಂದು ಹೇಳುತ್ತವೆ

'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ.' (ಮುಂ. ಉ. 3-2-5)
'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ' (ಕಠ. ಉ. 2-15)
'ಸ ಸರ್ವಜ್ಞಃ ಸರ್ವೋ ಭವತಿ.' (ಪ್ರ. ಉ. 4-10)

ಹೀಗೆ ಇವೆರಡು ಅಭಿಪ್ರಾಯಗಳೂ ಉಪನಿಷತ್ತುಗಳಲ್ಲಿವೆ. ಆದರಿಂದ ಮುಕ್ತ ಸ್ವರೂಪವೂ ಹೀಗೆಯೇ ಎಂದು ನಿರ್ಣಯ ಮಾಡುವುದು ಅಸಾಧ್ಯವಾಗಿದೆ.

ವೇದಾಂತ ದರ್ಶನದ ಹಲವಾರು ಪಂಥಗಳಿಗೂ ಉಪನಿಷತ್ತುಗಳು ಪರಮಾಧಾರವಾಗಿವೆ. ಉಪನಿಷತ್ತುಗಳಲ್ಲಿ ಕೆಲವು ವಾಕ್ಯಗಳು ಜೀವಪರಮಾತ್ಮರಿಗೆ ಐಕ್ಯವನ್ನು ಹೇಳುತ್ತವೆ.

'ಮೃತ್ಯೋಃಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ', 'ಯತ್ರ ತ್ವಸ್ಯಸರ್ವ ಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ ತತ್ಕೇನ ಕಂ ವಿಜಾನೀಯಾತ್' 'ಅಯಮಾತ್ಮಾ ಬ್ರಹ್ಮ', 'ತತ್ವಮಸಿ,' 'ಸರ್ವಂಖಲ್ವಿದಂ ಬ್ರಹ್ಮ' ಮೊದಲಾದ ವಾಕ್ಯಗಳು ಇದಕ್ಕೆ ನಿದರ್ಶನಗಳಾಗಿವೆ. ಕೆಲವು ವಾಕ್ಯಗಳು ಜೀವ ಪರಮರಿಗೆ ಭೇದವನ್ನು ಹೇಳುತ್ತವೆ. ಅವುಗಳು ಯಾವುವೆಂದರೆ— "ಭೋಕ್ತಾಭೋಗ್ಯಂ ಪ್ರೇರಿತಾರಂಚಮತ್ವಾ", 'ದ್ವಾಸುಪರ್ಣಾ ಸಯುಜಾ ಸಖಾಯಾ', 'ಜ್ಞಾಜ್ಞೌ ದ್ವಾವಜಾವೀಶ ನೀಶೌ', 'ಪತಿಂ ವಿಶ್ವಸ್ಯಾತ್ಮೇಶ್ವರಂ', 'ತಮೀಶ್ವರಾಣಾಂ ಪರಮಂ ಮಹೇಶ್ವರಂ', 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ' ಮೊದಲಾದವು.

---

86. "After all our troubles in the sea of life we do not reach a desertshore where we are obliged to die of hunger. The liberated condition must be looked upon as the fullest expression of the self, the ascent to God will be a lapse into the void or the abyss, if the ultimate Brahman is itself looked upon as an abstraction. Then the goal of man is annihilation." –*Phil. of Upanishads* Dr. S. R. p. 113.

ಮತ್ತೆ ಕೆಲವು ಶ್ರುತಿಗಳು ಇವುಗಳೆರಡನ್ನೂ ಕೂಡಿಸುವ ಘಟಕಶ್ರುತಿಗಳಾಗಿವೆ. 'ಏಷ ತ ಆತ್ಮಾ ಅಂತರ್ಯಾಮ್ಯಮೃತಃ', 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ' 'ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಂ ಸರ್ವಾತ್ಮಾ' ಮೊದಲಾದುವು ಇದಕ್ಕೆ ಉದಾಹರಣೆಗಳು.

ಇವುಗಳಲ್ಲಿ ಅಭೇದ ಶ್ರುತಿಗಳು ಅದ್ವೈತ ದರ್ಶನಕ್ಕೂ, ಭೇದ ಶ್ರುತಿಗಳು ಭೇದ ದರ್ಶನಕ್ಕೂ ಆಧಾರಗಳಾಗಿವೆ. ಭೇದಾಭೇದ ದರ್ಶನಗಳು ಭೇದ ಮತ್ತು ಅಭೇದ ಶ್ರುತಿಗಳೆರಡನ್ನೂ ಪುರಸ್ಕರಿಸುತ್ತವೆ.

'ಯಃ ಸರ್ವಜ್ಞಃ ಸರ್ವವಿತ್', 'ವಿಜ್ಞಾತಾರಂ' ಅಪಹತಪಾಪ್ಮಾ ವಿಜರೋ ವಿಮೃತ್ಯು ರ್ವಿಶೋಕೋ ವಿಜಿಘತ್ಸುಃ ಅಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ' ಮೊದಲಾದ ಶ್ರುತಿಗಳು ಸಗುಣ ಪ್ರತಿಪಾದಕಗಳಾಗಿವೆ. ಆದರೆ 'ನಿರವದ್ಯಂ ನಿರಂಜನಂ' 'ನಿರ್ಗುಣಂ', 'ನಿಷ್ಕ್ರಿಯಂ', 'ನಿರ್ವಿಕಾರಂ' ಮೊದಲಾದುವು ಪರಬ್ರಹ್ಮನು ನಿರ್ಗುಣನೆಂದು ಹೇಳುತ್ತವೆ. ಇವುಗಳಲ್ಲಿ ಸಗುಣ ಶ್ರುತಿಗಳಿಗೆ ಪ್ರಾಧಾನ್ಯ ಕೊಡುವ ದರ್ಶನಗಳು ನಿರ್ಗುಣ ಶ್ರುತಿಗಳಿಗೆ ಹೇಯಗುಣರಾಹಿತ್ಯವೆಂದು ವಿವರಣೆ ಕೊಡುತ್ತವೆ. ನಿರ್ಗುಣ ಶ್ರುತಿಗಳಿಗೇ ಪ್ರಾಧಾನ್ಯಕೊಡುವ ದರ್ಶನಗಳು ಸಗುಣ ಶ್ರುತಿಗಳು ಉಪಾಸನಾರ್ಥವಾಗಿ ಬಂದಿವೆಯೆಂದೂ, ಇವುಗಳಿಗೆ ಪಾಶ್ಚಾತ್ತ್ಯನ ಬಾಧೆಯಿರುವುದರಿಂದ ನಿರ್ಗುಣ ಶ್ರುತಿಗಳೇ ಪರಮಾಧಾರವೆಂದೂ ಹೇಳುತ್ತವೆ.

ಹೀಗೆ ಭೇದ ದರ್ಶನ, ಅಭೇದದರ್ಶನ ಮತ್ತು ಭೇದಾಭೇದ ದರ್ಶನಗಳಿಗೆಲ್ಲಾ ಉಪನಿಷತ್ತುಗಳೇ ಪರಮಾಧಾರವಾಗಿವೆ. ಮೂಲ ಒಂದೇ ಆದರೂ ದೃಷ್ಟಿ ಭೇದದಿಂದ ದರ್ಶನಗಳು ಹಲವಾಗಿವೆ.

ಇದುವರೆಗೆ ಸಂಗ್ರಹವಾಗಿ ಉಪನಿಷದ್ದರ್ಶನದ ರೂಪು ರೇಖೆಗಳನ್ನು ತೋರಿಸಲಾಯಿತು. ಉಪನಿಷತ್ತುಗಳ ಗುರಿ ಅಮೃತತ್ವ ಪ್ರಾಪ್ತಿ. ಅದಕ್ಕಾಗಿ ನಾವು ಅರಿಯಬೇಕಾದುದನ್ನು, ನಾವು ಆಚರಿಸಬೇಕಾದುದನ್ನು ಇವು ಸಾರುತ್ತಿವೆ. ಸರ್ವರಿಗೂ ಮಾನ್ಯವಾಗುವ ರೀತಿಯಲ್ಲಿ ಸರಳ ಸುಂದರವಾಗಿ ಅತ್ಯಂತ ಗಹನವಾದ ವಿಚಾರಗಳನ್ನು ವಿವೇಚಿಸಿರುವ ಉಪನಿಷತ್ತುಗಳು ಎಂದೆಂದಿಗೂ ಮಾನವ ಕೋಟಿಗೆ ಸ್ಫೂರ್ತಿದಾಯಕಗಳಾಗಿವೆ. ಅಜ್ಞಾನದ ಕತ್ತಲೆಯಲ್ಲಿ ತಡವರಿಸುವ ಮಾನವನಿಗೆ ಇವು ಉಜ್ಜ್ವಲವಾದ ಕಾಂತಿಯನ್ನು ಚೆಲ್ಲುವ ರತ್ನದೀಪಗಳಾಗಿವೆ.

# ಮೂರನೆಯ ಪ್ರಕರಣ

## ವೇದಾಂಗಗಳು

ಅಂಗ ಎಂಬ ಶಬ್ದಕ್ಕೆ ಉಪಕಾರಕ ಎಂಬ ಅರ್ಥವಿದೆ. ಇದನ್ನು 'ಅಂಗ್ಯಂತೇ ಜ್ಞಾಯಂತೇ ಅಮೀಭಿಃ ಇತಿ ಅಂಗಾನಿ' ಎಂದು ವಿವರಿಸಬಹುದು. ಯಾವುದಾದರೊಂದು ವಸ್ತುವಿನ ಸ್ವರೂಪವನ್ನು ತಿಳಿಯಲು ಯಾವುದು ಸಹಾಯಕವಾಗುವುದೋ ಅದಕ್ಕೆ ಅಂಗವೆನ್ನುತ್ತೇವೆ. ವೇದವು ಮೊದಲೇ ದುರೂಹವಾದುದು. ಭಾಷೆ ಕ್ಲಿಷ್ಟವಾದುದು. ಆದುದರಿಂದಲೇ ವೇದಗಳ ಅರ್ಥವನ್ನರಿಯಲೂ, ಅದು ಪ್ರತಿಪಾದಿಸುವ ಕರ್ಮಕಾಂಡವನ್ನು ಯಥಾಕ್ರಮವಾಗಿ ಅನುಷ್ಠಾನಕ್ಕೆ ತರಲೂ ಸಹಾಯ ಆವಶ್ಯಕವಾಗಿರಬೇಕು. ಹೀಗೆ ಸಹಾಯವೆಸಗುವ ಶಾಸ್ತ್ರಕ್ಕೆ ವೇದಾಂಗವೆಂಬ ಹೆಸರು ರೂಢಿಯಲ್ಲಿ ಬಂದಿದೆ.

ವೇದಾಂಗಗಳು ಆರು–ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಎಂದು. ಇವು ಒಂದೊಂದೂ ವೇದಪ್ರತಿಪಾದ್ಯವಾದ ವಿಷಯವನ್ನರಿಯಲೂ ಅದರಂತೆ ಅನುಷ್ಠಿಸಲೂ ಸಹಾಯ ಮಾಡುತ್ತವೆ. ವೇದದ ಯಥಾರ್ಥಜ್ಞಾನವನ್ನು ಪಡೆಯಲು ಇವುಗಳ ಸಹಾಯ ಆವಶ್ಯಕ. ವೇದೋಕ್ತವಾದ ಕರ್ಮಗಳನ್ನು ಅನುಷ್ಠಿಸಲು ಈ ಆರು ಅಂಗಗಳೂ ಮುಖ್ಯವಾದುವು.

ಮೊಟ್ಟಮೊದಲಾಗಿ ವೇದಮಂತ್ರಗಳನ್ನು ಯಥಾರ್ಥವಾಗಿ ಉಚ್ಚರಿಸಬೇಕು. ವೇದಮಂತ್ರಗಳ ಉಚ್ಚಾರಣೆಯಲ್ಲಿ ತಪ್ಪುಗಳು ಸಂಭವಿಸಿದರೆ, ಸ್ವರವರ್ಣಗಳು ವಿಕಲವಾದರೆ ಅರ್ಥವ್ಯತ್ಯಾಸವುಂಟಾಗಿ ಅನರ್ಥವುಂಟಾಗುವುದು. ವೇದಮಂತ್ರಗಳ ಸ್ವರವರ್ಣ ವಿಚಾರಗಳನ್ನು ವಿವೇಚಿಸುವ ವೇದಾಂಗವೇ ಶಿಕ್ಷಾ.

ವೇದದ ಮುಖ್ಯವಾದ ಪ್ರಯೋಜನ ಯಾಗಾದಿ ಕರ್ಮಗಳ ಅನುಷ್ಠಾನ. ಯಜ್ಞಗಳ ಯಥಾರ್ಥವಾದ ಅನುಷ್ಠಾನಕ್ಕೆ ಕಲ್ಪ ಅತ್ಯಂತ ಆವಶ್ಯಕ. ಇದನ್ನು 'ಕಲ್ಪ್ಯತೇ ಸಮರ್ಥ್ಯತೇ ಯಾಗಪ್ರಯೋಗಃ ಅತ್ರ' ಎಂದು ವಿವರಿಸಿದ್ದಾರೆ.

ಪದಗಳ ಪ್ರಕೃತಿ ಪ್ರತ್ಯಯಗಳ ಸ್ವರೂಪವನ್ನುಪದೇಶಿಸುವ ವ್ಯಾಕರಣವೂ ಪ್ರಧಾನವಾದ ಅಂಗವಾಗಿದೆ. ಪದಸ್ವರೂಪನಿರ್ಣಯಕ್ಕೂ ಪದಾರ್ಥನಿಶ್ಚಯಕ್ಕೂ ಇದು ಅತ್ಯಂತ ಆವಶ್ಯಕ. ಮುಖ್ಯವಾಗಿ ಶುದ್ಧವಾದ ವಿಭಕ್ತಿ ಪ್ರಯೋಗಗಳಿಗೆ ಇದು ಬೇಕೆಬೇಕು. ಆದ್ದರಿಂದಲೇ ವ್ಯಾಕರಣವೂ ವೇದಾಂಗಗಳಲ್ಲಿ ಒಂದಾಗಿದೆ.

ಮಂತ್ರಗಳ ಉಚ್ಚಾರಣೆಗೆ ಛಂದಸ್ಸೂ ಅತ್ಯಂತ ಆವಶ್ಯಕ. ಋಷಿ, ದೇವತೆ, ಛಂದಸ್ಸು ಮುಂತಾದುವನ್ನು ಅರಿಯದೆ ಮಂತ್ರೋಚ್ಚಾರ ಮಾಡುವುದು ಪಾಪಕರವೆಂಬ ವಿಧಿ ಇದೆ. ವೇದವು ಛಂದೋಮಯವಾದ ವಾಣಿ. ಛಂದಸ್ಸುಗಳ ಪರಿಚಯವನ್ನು ಪಡೆದುಕೊಂಡಿದ್ದರೇನೇ ಮಂತ್ರಗಳ ಉಚ್ಚಾರಣೆ ಹಾಗೂ ಮಂತ್ರಪಾಠದ ಜ್ಞಾನ ಚೆನ್ನಾಗಿ ಆಗಬಲ್ಲುದು. ಆ ಕಾರಣ ಇದೂ ಒಂದು ವೇದಾಂಗವಾಗಿದೆ.

ಯಜ್ಞಗಳನ್ನಾಚರಿಸಲು ಉಚಿತವಾದ ಸಮಯ ನಿರ್ದೇಶವನ್ನು ಮಾಡಿರುವ ಕಾರಣ

ಜ್ಯೋತಿಷವೂ ಒಂದು ವೇದಾಂಗವಾಗಿದೆ. ಶ್ರೌತಯಾಗವನ್ನು ವಿಶಿಷ್ಟವಾದ ಋತುವಿನಲ್ಲಿಯೇ ಮಾಡಬೇಕು. ಅಕಾಲದಲ್ಲಿಯೇ ಅಥವಾ ಕಾಲತಿಕ್ರಮದಲ್ಲಿಯೋ ಅದನ್ನಾಚರಿಸಿದರೆ ಫಲಬಾರದು. ಆ ಕಾರಣ ಯುಕ್ತವಾದ ಕಾಲದಲ್ಲಿ ಈ ಶ್ರೌತಕರ್ಮಗಳನ್ನು ಮಾಡಬೇಕಾದ ಕಾರಣ ಜ್ಯೋತಿಷವು ಒಂದು ವೇದಾಂಗವಾಯಿತು.

ಇವುಗಳೆಲ್ಲಕ್ಕೂ ಮೂರ್ಧನ್ಯಪ್ರಾಯವಾದುದು ನಿರುಕ್ತ. ಪದಗಳ ಅರ್ಥವಿವೇಚನೆಯನ್ನು ಮಾಡಿ ವೇದಮಂತ್ರಗಳ ಅರ್ಥಾನುಸಂಧಾನಕ್ಕೆ ಸಹಾಯಮಾಡುವ ಶಾಸ್ತ್ರ ಇದು. ವೇದಮಂತ್ರಗಳು ಅರ್ಥಸಂಪತ್ತಿಯನ್ನು ಹೊಂದಿವೆ. ಅವುಗಳನ್ನು ಉಚ್ಚರಿಸುವಾಗ, ಪ್ರಯೋಗಿಸುವಾಗ ಅರ್ಥಾನುಸಂಧಾನದೊಡನೆ ಬಳಸಬೇಕು. ಅರ್ಥವನ್ನರಿಯದೆ ಬಳಸುವುದು ಹೆಚ್ಚು ಪ್ರಯೋಜನಕಾರಿಯಾಗದು. ಹೀಗೆ ವೇದಮಂತ್ರಗಳ ಅರ್ಥಾನುಸಂಧಾನಕ್ಕೇ ಮೀಸಲಾದ ನಿರುಕ್ತ ವೇದಾಂಗಗಳೆಲ್ಲೆಲ್ಲಾ ಮೊದಲನೆಯ ಸ್ಥಾನವನ್ನು ಪಡೆದಿದೆ.

ಪವಿತ್ರವಾದ ವೇದರಾಶಿಯನ್ನು ಅಖಂಡವಾಗಿ ಸಂರಕ್ಷಿಸಲೂ ಅದರಿಂದ ಅಪಾರವಾದ ಪ್ರಯೋಜನವನ್ನು ಪಡೆಯಲೂ ಈ ವೇದಾಂಗಗಳು ಉಪಕಾರವಮಾಡಿವೆ. ಈ ಸಹಾಯಕಸಾಹಿತ್ಯದ ಉದಯ ಉಪನಿಷತ್ಕಾಲದಲ್ಲಿಯೇ ಆಯಿತು. ವೇದಗಳನಂತರ ಬರುವ ಈ ವೇದಾಂಗಗಳ ವಿಚಾರವನ್ನು ವಿವರವಾಗಿ ಮುಂದೆ ವಿವೇಚಿಸಲಾಗಿದೆ.

## ಶಿಕ್ಷಾ

ವೇದಾಂಗಗಳಲ್ಲಿ ಶಿಕ್ಷೆಗೆ ಮಹತ್ತ್ವಪೂರ್ಣವಾದ ಸ್ಥಾನವಿದೆ. 'ಶಿಕ್ಷಾಘ್ರಾಣಂ ತು ವೇದಸ್ಯ' ಎಂದು ಇದನ್ನೇ ಸೂಚಿಸಿದ್ದಾರೆ. ಸಾಯಣರು ತಮ್ಮ ಋಗ್ವೇದಭಾಷ್ಯಭೂಮಿಕೆಯಲ್ಲಿ 'ಸ್ವರವರ್ಣಾದ್ಯುಚ್ಚಾರಣಪ್ರಕಾರೋ ಯತ್ರ ಶಿಕ್ಷ್ಯತೇ ಉಪದಿಶ್ಯತೇ ಸಾ ಶಿಕ್ಷಾ' ಎಂದು ಇವನ್ನು ವರ್ಣಿಸಿದ್ದಾರೆ. ವೇದಭಾಗವನ್ನು ಶಿಷ್ಯರು ಗುರುವಿನ ಉಚ್ಚಾರಣೆಗನುಸಾರವಾಗಿ ಅವರು ಹೇಳಿಕೊಟ್ಟಂತೆ ಹೇಳಿ ಕಲಿಯುತ್ತಿದ್ದರು. ಈ ವಾಙ್ಮಯಕ್ಕೆ 'ಅನುಶ್ರವ' ಎಂಬ ಹೆಸರು ಆ ಕಾರಣದಿಂದಲೇ ಬಂದಿತು. ಗುರುಮುಖೇನ ಕಲಿಯುವುದರಿಂದ ಶುದ್ಧವಾದ ಉಚ್ಚಾರಣೆ ಗೊತ್ತಾಗುತ್ತಿತ್ತು. ವೇದಮಂತ್ರಗಳನ್ನು ಶುದ್ಧವಾಗಿ ತಪ್ಪಿಲ್ಲದೆ ಉಚ್ಚರಿಸಬೇಕು.

> ಮಂತ್ರೋ ಹೀನಃ ಸ್ವರತೋ ವರ್ಣತೋ ವಾ
> ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ।
> ಸ ವಾಗ್ವಜ್ರೋ ಯಜಮಾನಂ ಹಿನಸ್ತಿ
> ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥ (ಪಾ. ಶಿ. ಶ್ಲೋ. 52)

ಎಂಬ ಶ್ಲೋಕ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಸ್ವರವರ್ಣವ್ಯತ್ಯಾಸದಿಂದ ಅರ್ಥ ವ್ಯತ್ಯಾಸವೂ ಸಂಭವಿಸುವ ಕಾರಣ ಬಹಳ ಎಚ್ಚರಿಕೆಯನ್ನು ಇವುಗಳ ವಿಚಾರದಲ್ಲಿ ವಹಿಸಬೇಕು. ' ಇಂದ್ರಶತ್ರುರ್ವರ್ಧಸ್ವ' ಎಂದರೆ ಇಂದ್ರನ ಶತ್ರುವರ್ಧಿಸಲಿ ಎಂಬ ಮಂತ್ರವನ್ನು 'ಅಂತೋದಾತ್ತ'ವಾಗಿ ಹೇಳಬೇಕಾಗಿತ್ತು. ಅಜಾಗರೂಕತೆಯಿಂದ ಈ ಮಂತ್ರವನ್ನು 'ಆದಿಉದಾತ್ತ'ವಾಗಿ ಹೇಳಿದ ಕಾರಣ ಅರ್ಥ ವ್ಯತ್ಯಾಸವಾಗಿ 'ಇಂದ್ರಃ ಶತ್ರುಃ ಯಸ್ಯಸಃ' ಎಂದರೆ 'ಇಂದ್ರನು ಯಾರಿಗೆ ಶತ್ರುವ್ವೋ ಅವನು' ಎಂಬ ಅರ್ಥ ಬಂದುಬಿಟ್ಟು ವೃತ್ರಾಸುರನು ಇಂದ್ರನನ್ನು ಕೊಲ್ಲುವ ಬದಲು ಇಂದ್ರನಿಂದ ಕೊಲ್ಲಲ್ಪಟ್ಟನೆಂಬ ಆಖ್ಯಾಯಿಕೆಯನ್ನು ಹೇಳುತ್ತಾರೆ. ಉಚ್ಚಾರಣೆಯಲ್ಲಿ ವ್ಯತ್ಯಾಸವಾದರೆ ಹೇಗೆ ಅನರ್ಥವುಂಟಾಗುವುದೆಂಬುದನ್ನು ಇದು ಸೂಚಿಸುತ್ತದೆ. ಮಂತ್ರಗಳನ್ನು

ಯಾಗ ಕಾಲದಲ್ಲಿ ಹೇಗೆ ಹೇಳಬೇಕು, ಇತರ ಕಾಲಗಳಲ್ಲಿ ಹೇಗೆ ಹೇಳಬೇಕು, ಪದಗಳನ್ನು ಕೂಡಿಸಿದಾಗ ಅಥವಾ ಬಿಡಿಸಿ ಹೇಳಿದಾಗ ಹೇಗೆ ಸ್ವರ ವ್ಯತ್ಯಾಸ ಮಾಡಬೇಕು ಇವುಗಳನ್ನೆಲ್ಲಾ ವಿವೇಚಿಸುವ ಶಿಕ್ಷಾಶಾಸ್ತ್ರ ಬಹುಮುಖ್ಯವಾದುದು. ಶಿಷ್ಯೋಪಾಧ್ಯಾಯಿಕವಾದ ರೀತಿಯಲ್ಲಿ ಅಧ್ಯಯನ ನಡೆಯುತ್ತಿದ್ದುದರಿಂದ ಶಿಷ್ಯನು ತಪ್ಪಾಗಿ ಉಚ್ಚರಿಸಿದರೆ ಗುರುಗಳು ದಂಡಿಸಿ ಸರಿಪಡಿಸುತ್ತಿದ್ದರು. 'ಉದಾತ್ತಸ್ಯ ಸ್ಥಾನೇ ಅನುದಾತ್ತಂ ಬ್ರೂತೇ ಖಂಡಿಕೋಪಾಧ್ಯಾಯಃ ತಸ್ಮೈ ಶಿಷ್ಯಾಯ ಚಪೇಟಿಕಾಂ ದದಾತಿ' ಎಂದು ಪತಂಜಲಿಗಳೂ ಇದನ್ನು ಹೇಳುತ್ತಾರೆ. ಈ ಬಗೆಯ ಎಚ್ಚರಿಕೆಯನ್ನು ತೆಗೆದುಕೊಂಡ ಕಾರಣವೇ ವೇದರಾಶಿಯು ಸ್ವರವರ್ಣ ವಿಕಲವಾಗದೆ ಸುರಕ್ಷಿತವಾಗಿ ಉಳಿಯಿತು.

ಈ ವೇದಾಂಗವು ಬಹಳ ಹಿಂದಿನ ಕಾಲದಿಂದಲೂ ಬೆಳೆದು ಬಂದಿತು. ಬ್ರಾಹ್ಮಣ ಗ್ರಂಥಗಳಲ್ಲೇ ಅಲ್ಲಲ್ಲಿ ಶಿಕ್ಷಾಸಂಬಂಧವಾದ ನಿಯಮಗಳು ಕಂಡುಬರುತ್ತವೆ. ತೈತ್ತಿರೀಯೋಪನಿಷತ್ತಿನ ಮೊದಲವಲ್ಲಿಗೆ 'ಶಿಕ್ಷಾವಲ್ಲೀ' ಎಂಬ ಹೆಸರೇ ಇದೆ. ಶಿಕ್ಷಾಶಾಸ್ತ್ರದ ಮೂಲ ಸಿದ್ಧಾಂತಗಳನ್ನೆಲ್ಲಾ ಇಲ್ಲಿ ಉಲ್ಲೇಖಿಸಲಾಗಿದೆ—"ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಃ ಸ್ವರಃ । ಮಾತ್ರಾ ಬಲಮ್ । ಸಾಮ ಸಂತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ ।।" ಎಂದು ಈ ಉಪನಿಷತ್ತು ಶಿಕ್ಷೆಯ ವಿಚಾರ ವಿವೇಚಿಸುತ್ತದೆ. ಇಲ್ಲಿ 1. ವರ್ಣ 2. ಸ್ವರ 3. ಮಾತ್ರಾ 4. ಬಲ 5. ಸಾಮ ಮತ್ತು 6. ಸಂತಾನ ಎಂಬ ಆರು ಅಂಶಗಳನ್ನು ಹೇಳಿದೆ.

ವರ್ಣ ಎಂಬುದು ಅಕ್ಷರಗಳಿಗೆ ಸಂಬಂಧಿಸಿದೆ. ವೇದವನ್ನರಿಯಲು ಸಂಸ್ಕೃತ ವರ್ಣಮಾಲೆಯನ್ನರಿಯುವುದು ಆವಶ್ಯಕ. ಪಾಣಿನೀಯ ಶಿಕ್ಷೆಗನುಸಾರವಾಗಿ ಸಂಸ್ಕೃತ ವರ್ಣಮಾಲೆಯಲ್ಲಿ 63 ಅಥವಾ 64 ವರ್ಣಗಳನ್ನು ನಿರ್ಧರಿಸಲಾಗಿದೆ. ಸ್ವರವು ಉದಾತ್ತ, ಅನುದಾತ್ತ ಮತ್ತು ಸ್ವರಿತ ಎಂದು ಮೂರು ವಿಧ. ಸ್ವರಗಳ ಮಹತ್ವವನ್ನೂ ಲಕ್ಷಣವನ್ನೂ ವಿವರಿಸಲಾಗಿದೆ.

ಮಾತ್ರಾ ಎಂಬುವುದು ಸ್ವರೋಚ್ಚಾರಣೆಯಲ್ಲಿ ಬೇಕಾಗುವ ಕಾಲವನ್ನು ಸೂಚಿಸುತ್ತದೆ. ಇದು ಹ್ರಸ್ವ, ದೀರ್ಘ ಮತ್ತು ಪ್ಲುತ ಎಂದು ಮೂರು ಬಗೆ. ಏಕ ಮಾತ್ರೆಯನ್ನು ಉಚ್ಚರಿಸಲು ಬೇಕಾದ ಸಮಯವನ್ನು ಹ್ರಸ್ವವೆಂದೂ ಎರಡು ಮಾತ್ರೆಯ ಉಚ್ಚಾರಣೆಯ ಕಾಲಕ್ಕೆ ದೀರ್ಘವೆಂದೂ, ಮೂರು ಮಾತ್ರೆಯ ಉಚ್ಚಾರಣೆಗೆ ಬೇಕಾಗುವ ಕಾಲಕ್ಕೆ ಪ್ಲುತವೆಂದೂ ಹೇಳಿದ್ದಾರೆ.

ಬಲ ಎಂಬುವುದು ಸ್ಥಾನ ಮತ್ತು ಪ್ರಯತ್ನಕ್ಕೆ ಅನ್ವಯಿಸುವುದು. ಸ್ವರ ಮತ್ತು ವ್ಯಂಜನಗಳನ್ನು ಉಚ್ಚರಿಸುವಾಗ ವಾಯುವು ಮುಖದ ಯಾವ ಯಾವ ಸ್ಥಾನಗಳಿಂದ ಹೊರಬರುವುದೋ ಅವುಗಳನ್ನು ಆ ವರ್ಣಗಳ ಸ್ಥಾನಗಳೆಂದು ಹೇಳುತ್ತಾರೆ. ಇಂಥ ಸ್ಥಾನಗಳು ಎಂಟಿವೆ. ಅಕ್ಷರೋಚ್ಚಾರಣೆಯಲ್ಲಿ ಮಾಡುವ ಪ್ರಯಾಸವನ್ನು ಪ್ರಯತ್ನವೆಂದು ಹೇಳುತ್ತಾರೆ. ಈ ಪ್ರಯತ್ನ ಆಭ್ಯಂತರ ಮತ್ತು ಬಾಹ್ಯ ಎಂದು ಎರಡು ಬಗೆಯಾಗಿದೆ. ಆಭ್ಯಂತರ ಪ್ರಯತ್ನವು ಸ್ಪೃಷ್ಟ, ಈಷತ್ಸ್ಪೃಷ್ಟ, ವಿವೃತ ಮತ್ತು ಸಂವೃತ ಎಂದು ನಾಲ್ಕು ವಿಧ. ಬಾಹ್ಯಪ್ರಯತ್ನವಾದರೋ ವಿವಾರ, ಸಂವಾರ, ಶ್ವಾಸ, ನಾದ, ಘೋಷ, ಅಘೋಷ, ಅಲ್ಪಪ್ರಾಣ, ಮಹಾಪ್ರಾಣ, ಉದಾತ್ತ, ಅನುದಾತ್ತ ಮತ್ತು ಸ್ವರಿತ ಎಂದು ಹನ್ನೊಂದು ಬಗೆಯಾಗಿದೆ.

ಸಾಮವೆಂಬುದಕ್ಕೆ ಸಾಮ್ಯವೆಂಬ ಅರ್ಥವಿದೆ. ಉಚ್ಚಾರಣೆ ದೋಷರಹಿತವಾಗಿ ಮಾಧುರ್ಯಾದಿ ಗುಣಯುಕ್ತವಾಗಿರುವುದಕ್ಕೆ ಸಾಮವೆಂದು ಹೆಸರು. ಅಕ್ಷರೋಚ್ಚಾರಣೆಯಲ್ಲಿ ಸಂಭವಿಸುವ ದೋಷಗಳನ್ನು ಶಿಕ್ಷಾಗ್ರಂಥಗಳಲ್ಲಿ ಶಾಸ್ತ್ರೀಯವಾಗಿ ವಿವೇಚಿಸಿದ್ದಾರೆ. ಪಾಣಿನಿಯ

ಶಿಕ್ಷೆಯಲ್ಲಿ ಪಾಠಕಾಧಮರ ಪ್ರಕಾರಗಳನ್ನು

'ಗೀತೀ ಶೀಘ್ರೀ ಶಿರಃಕಂಪೀ ತಥಾ ಲಿಖಿತಪಾಠಕಃ ।
ಅನರ್ಥಜ್ಞಃ ಅಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥' (ಪಾ.ಶಿ. 32)

ಎಂದು ಹೇಳಿದೆ. ಇದಲ್ಲದೆ ನಿಂದನೀಯವಾದ ಪಾಠಕ್ರಮವನ್ನೂ ಅವರು ತಿಳಿಸುತ್ತಾರೆ:

ಶಂಕಿತಂ ಭೀತಂ ಉತ್ಕೃಷ್ಟಮ್ ಅವ್ಯಕ್ತಂ ಅನುನಾಸಿಕಮ್ ।
ಕಾಕಸ್ವರಂ ಶಿರಸಿಗತಂ ತಥಾ ಸ್ಥಾನವಿವರ್ಜಿತಮ್ ॥
ಉಪಾಂಶುದಷ್ಟಂ ತ್ವರಿತಂ ನಿರಸ್ತಂ
ವಿಲಂಬಿತಂ ಗದ್ಗದಿತಂ ಪ್ರಗೀತಂ ।
ನಿಷ್ಪೀಡಿತಂ ಗ್ರಸ್ತಪದಾಕ್ಷರಂ ಚ
ವದೇನ್ನದೀನಂ ನ ತು ಸಾನುನಾಸ್ಯಮ್ ॥ (ಪಾ. ಶಿ. 34, 35)

ಹಾಡಿನಂತೆ ಪಠಿಸಬಾರದು. ಅತ್ಯಂತ ಶೀಘ್ರವಾಗಿಯಾಗಲೀ ತಲೆಯನ್ನು ಅಲ್ಲಾಡಿಸುತ್ತಾ ಆಗಲೀ ಲಿಪಿಬದ್ಧವಾದ ಪುಸ್ತಕದಿಂದಾಗಲೀ ವೇದಪಠಣ ಮಾಡಬಾರದು. ಅರ್ಥವನ್ನರಿಯದೆ ಹೇಳಬಾರದು. ಹಾಗಾದರೆ ಸುಂದರವಾಗಿ ಓದುವ ಬಗೆಯಾವುದು? ಪಾಣಿನಿ ತಮ್ಮ ಶಿಕ್ಷೆಯಲ್ಲಿ ಅದನ್ನು ಹೀಗೆ ಹೇಳಿದ್ದಾರೆ :

'ಮಾಧುರ್ಯಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ ।
ಧೈರ್ಯಂ ಲಯಸಮರ್ಥಂ ಚ ಷಡೇತೇ ಪಾಠಕಾ ಗುಣಾಃ ॥'

ಮಧುರವಾಗಿ ಹೇಳುವುದು. ಅಕ್ಷರಗಳನ್ನು ಬಿಡಿಸಿ ಸ್ಪಷ್ಟವಾಗಿ ಹೇಳುವುದು, ಪದಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬಿಡಿಸಿ ಹೇಳುವುದು, ಸುಂದರವಾದ ಸ್ವರದೊಡನೆ ಹೇಳುವುದು, ಧೈರ್ಯದಿಂದ ಹೇಳುವುದು ಮತ್ತು ಲಯಬದ್ಧವಾಗಿ ಹೇಳುವುದು—ಇವು ಪಾಠಕನ ಗುಣಗಳು ಮೇಲೆ ಹೇಳಿರುವ ಈ ಸೂಚನೆಗಳೆಲ್ಲಾ ವೈದಿಕಮಂತ್ರಗಳ ಪಠಣಕ್ಕೆ ಅನ್ವಯಿಸುತ್ತವೆ.

### ಸಂತಾನ

ಈ ಶಬ್ದಕ್ಕೆ ಸಂಹಿತಾ ಅಥವಾ ಅತಿಶಯವಾದ ಸನ್ನಿಧಿ ಎಂಬ ಅರ್ಥವಾಗುತ್ತದೆ. ಎರಡು ಪದಗಳನ್ನು ಒಂದುಗೂಡಿಸಿ ವಿಚ್ಛೇದವಿಲ್ಲದೆ ಉಚ್ಚರಿಸುವುದು ಸಂಹಿತೆ ಎನಿಸುವುದು. ಇಂಥ ಸಂದರ್ಭದಲ್ಲಿ ಸಂಧಿ ನಿಯಮಗಳು ಅನ್ವಯಿಸುತ್ತವೆ. ಸಂಧಿಕಾರ್ಯ ಯಾವಾಗ ಆಗಬೇಕು, ಪ್ರಕೃತಿಭಾವ ಯಾವಾಗ ಆಗಬೇಕು ಮುಂತಾದುವನ್ನೆಲ್ಲಾ ವಿಶೇಷವಾಗಿ ವ್ಯಾಕರಣಶಾಸ್ತ್ರ ವಿವೇಚಿಸುತ್ತದೆ. ಪ್ರಾತಿಶಾಖ್ಯಗಳು ಈ ವಿಚಾರವನ್ನು ಚರ್ಚಿಸುತ್ತವೆ.

ಈ ವಿಚಾರಗಳೆಲ್ಲಾ ಶಿಕ್ಷಾಗ್ರಂಥಗಳ ವ್ಯಾಪ್ತಿಗೆ ಒಳಪಟ್ಟಿವೆ. ವೇದ ಸಂಹಿತೆಯ ಉಚ್ಚಾರಣಕ್ರಮ, ಸ್ವರವರ್ಣವಿಚಾರ ಮುಂತಾದುವನ್ನು ಇವು ಚರ್ಚಿಸುತ್ತವೆ. ಒಂದೊಂದು ವೇದದಲ್ಲಿಯೂ ಉಚ್ಚಾರಣೆಯಕ್ರಮ ಒಂದೊಂದು ಕ್ರಮದಲ್ಲಿರುವುದು. ಆದ್ದರಿಂದ ಒಂದೊಂದೂ ವೇದಕ್ಕೂ ಸೇರಿದಂತೆ ಬೇರೆ ಬೇರೆ ಶಿಕ್ಷಾಗ್ರಂಥಗಳಿವೆ.

### ಪ್ರಾತಿಶಾಖ್ಯಗಳು

ಈ ಶಿಕ್ಷಾಗ್ರಂಥಗಳ ಅತ್ಯಂತ ಪ್ರಾಚೀನತಮವಾದ ಪ್ರತಿನಿಧಿಗಳೇ ಪ್ರಾತಿಶಾಖ್ಯಗಳು. ಸಂಹಿತೆಯ ಒಂದೊಂದು ಶಾಖೆಗೂ ಸೇರಿದಂತೆ ಪ್ರತ್ಯೇಕವಾದ ಪ್ರಾತಿಶಾಖ್ಯಗಳಿವೆ. ಪ್ರಾತಿಶಾಖ್ಯವೆಂಬ ಹೆಸರೇ ಅದು ಪ್ರತಿಶಾಖೆಗೂ ಸಂಬಂಧಿಸಿದುದೆಂಬ ಅರ್ಥವನ್ನು ಕೊಡುತ್ತದೆ

ಸಂಹಿತಾ ಪಾಠಗಳಿಗೆ ಸಂಬಂಧಿಸಿರುವ ಎಲ್ಲಾ ವಿಚಾರಗಳನ್ನೂ ಪ್ರಾತಿಶಾಖ್ಯಗಳು ವಿವೇಚಿಸುತ್ತವೆ. ಉಚ್ಚಾರಣೆ, ಸ್ವರ ವಿಧಾನ, ಸಂಧಿಗಳು, ಸ್ಥಾನಸ್ಥಾನಗಳಲ್ಲಿ ಹ್ರಸ್ವದ ದೀರ್ಘವಿಧಾನ ಮುಂತಾದುವನ್ನೆಲ್ಲಾ ಇವು ಚರ್ಚಿಸುತ್ತವೆ. ಸಂಹಿತಾಪಾಠಕ್ಕೆ ಪದಪಾಠವನ್ನು ಹೇಳುವಾಗ ಅನ್ವಯಿಸುವ ನಿಯಮಗಳ ಪರಿಶೀಲನೆಯನ್ನೂ ಇವು ಮಾಡುತ್ತವೆ. ಈ ಪ್ರಾತಿಶಾಖ್ಯಗಳು ಬಹಳ ಶಾಸ್ತ್ರೀಯವಾಗಿವೆ. ವೇದಸಂಹಿತೆಯ ಹಾಗೂ ಪದಪಾಠದ ಸಮಗ್ರಪರಿಚಯ ಇವುಗಳ ಕರ್ತೃಗಳಿಗಿದೆ. ಸಂಹಿತೆಗಳಿಂದ ಮಂತ್ರಗಳನ್ನು ಇವರು ಉದಾಹರಿಸಿ ವಿಶೇಷವಾಗಿ ಸಮೀಕ್ಷಿಸಿದ್ದಾರೆ. ಕೆಲವು ಪ್ರಾತಿಶಾಖ್ಯಗಳಲ್ಲಿ ಛಂದಸ್ಸಿನ ವಿಚಾರವನ್ನೂ ಮಾಡಿದ್ದಾರೆ. ಈ ಪ್ರಾತಿಶಾಖ್ಯಗಳಿಗೆ ದ್ವಿಮುಖವಾದ ಮಹತ್ತ್ವವುಂಟು.

೧. ವ್ಯಾಕರಣಶಾಸ್ತ್ರಕ್ಕೆ ಸಂಬಂಧಿಸಿರುವ ಮಹತ್ತ್ವ.

೨. ವೈದಿಕ ಸಂಹಿತೆಗಳ ಪಾಠ ಹಾಗೂ ಸ್ವರೂಪಕ್ಕೆ ಸಂಬಂಧಿಸಿದ ಮಹತ್ತ್ವ.

ನಮ್ಮ ದೇಶದಲ್ಲಿ ಸಂಸ್ಕೃತ ಭಾಷೆಯ ವ್ಯಾಕರಣ ಈ ಪ್ರಾತಿಶಾಖ್ಯಗಳಿಂದ ಆರಂಭವಾಗುತ್ತದೆ. ಇಲ್ಲಿ ವ್ಯಾಕರಣ ಸಮ್ಮತವಾದ ಅನೇಕ ಸಿದ್ಧಾಂತಗಳ ಸುಂದರ ಪ್ರತಿಪಾದನೆ ಇದೆ. ಅನೇಕ ಪ್ರಾಚೀನವೈಯ್ಯಾಕರಣರ ಮತ್ತು ಅವರ ಗ್ರಂಥಗಳ ಉಲ್ಲೇಖ ಇಲ್ಲಿ ಉಪಲಬ್ಧವಾಗಿವೆ. ವ್ಯಾಕರಣಶಾಸ್ತ್ರದ ಅನೇಕಾನೇಕ ಪಾರಿಭಾಷಿಕ ಶಬ್ದಗಳೂ ಇಲ್ಲಿವೆ. ಇವುಗಳ ಕಾಲಕ್ಕೆ ಮೊದಲೇ ವ್ಯಾಕರಣದ ಆವಿರ್ಭಾವ ಆಗಿತ್ತೆಂಬುದನ್ನು ಇವು ಸೂಚಿಸುತ್ತವೆ. ವೇದಸಂಹಿತೆಗಳ ಸ್ವರೂಪ ಹಾಗೂ ಪಾಠವು ಆ ಕಾಲದೊಳಗೇ ನಿರ್ಧರವಾಗಿತ್ತೆಂದೂ ಅವಿಕಲವಾಗಿತ್ತೆಂದೂ ಗೊತ್ತಾಗುತ್ತದೆ. ವೇದಪಾಠ ಸ್ವರವರ್ಣ ವಿಕಲವಾಗದೆ, ಒಂದಕ್ಷರದಷ್ಟೂ ಬದಲಾಗದೆ ಇಂದು ನಮಗೆ ಉಪಲಬ್ಧವಾಗಿರುವ ರೀತಿಯಲ್ಲಿ ಅಖಂಡವಾಗಿ ಅಂದೇ ಸಂರಕ್ಷಿಸಲ್ಪಟ್ಟಿದ್ದಿತೆಂದೂ ಇದರಿಂದ ಗೊತ್ತಾಗುತ್ತದೆ.

**ಋಕ್‌ಪ್ರಾತಿಶಾಖ್ಯ**

ಇದು ಬಹಳ ಪ್ರಾಚೀನವಾದುದು ಹಾಗೂ ಮಹತ್ತ್ವಪೂರ್ಣವಾದುದು. ಇದಕ್ಕೆ 'ಶಿಕ್ಷಾಶಾಸ್ತ್ರ'ವೆಂಬ ಹೆಸರೂ ಪ್ರಸಿದ್ಧವಾಗಿದೆ. ಇದನ್ನು ರಚಿಸಿದವರು ಶೌನಕರು. ಇವರು ಆಶ್ವಲಾಯನರ ಗುರುಗಳು. ಈ ಕೃತಿಗೆ 'ಪಾರ್ಷದ' ಎಂಬ ಹೆಸರೂ ರೂಢಿಯಲ್ಲಿತ್ತು. ಈ ಪ್ರಾತಿಶಾಖ್ಯವು ಐತರೇಯ ಆರಣ್ಯಕದ ಸಂಹಿತೋಪನಿಷತ್ತನ್ನು ಅಕ್ಷರಶಃ ಅನುಸರಿಸುತ್ತದೆ. ಆರಣ್ಯಕದಲ್ಲಿ ನಿರ್ದಿಷ್ಟರಾಗಿರುವ ಮಾಂಡೂಕೇಯ, ಮಾಕ್ಷವ್ಯ, ಅಗಸ್ತ್ಯ, ಶೂರವೀರ ಮುಂತಾದ ಆಚಾರ್ಯರುಗಳ ಅಭಿಪ್ರಾಯಗಳನ್ನು ಇದು ನಿರೂಪಿಸುತ್ತದೆ. ಈ ಗ್ರಂಥ ಸಮಗ್ರವಾಗಿ ಸೂತ್ರರೂಪದಲ್ಲಿದೆ. ಇದು ಕಾರಿಕಾಬದ್ಧವೆಂದು ಕೆಲವರು ಭಾವಿಸುತ್ತಾರೆ. ಈ ಪ್ರಾತಿಶಾಖ್ಯಕ್ಕೆ ಆಚಾರ್ಯ ಉವಟರ ಭಾಷ್ಯವಿದೆ. ಆರಂಭದ ಎರಡು ವರ್ಗಗಳಿಗೆ ಮಾತ್ರ ವಿಷ್ಣು ಮಿತ್ರರ ವೃತ್ತಿ ಇದೆ.

ಈ ಪ್ರಾತಿಶಾಖ್ಯದಲ್ಲಿ 18 ಪಟಲಗಳಿವೆ. ಪ್ರಥಮಪಟಲವೇ ಸಂಜ್ಞಾಪ್ರಕರಣವಾಗಿದೆ. ಇಲ್ಲಿ ಶಬ್ದಸ್ವರ, ವ್ಯಂಜನ, ಸ್ವರಭಕ್ತಿ, ರಕ್ತ, ನಾಭಿ, ಪ್ರಗೃಹ್ಯ ಮುಂತಾದ ಅನೇಕಾನೇಕ ಪಾರಿಭಾಷಿಕ ಶಬ್ದಗಳ ವಿವರಣೆ ಇದೆ. ಎರಡನೇ ಪಟಲದಲ್ಲಿ ಪ್ರಶಿಷ್ಟ, ಕ್ಷೈಪ್ರ, ಉದ್ಗ್ರಾಹ, ಭುಗ್ನ ಮುಂತಾದ ಸಂಧಿಗಳ ಲಕ್ಷಣ ಮತ್ತು ಉದಾಹರಣೆಗಳಿವೆ. ತೃತೀಯಪಟಲದಲ್ಲಿ ಸ್ವರಪರಿಚಯ, ನಾಲ್ಕನೆಯ ಪಟಲದಿಂದ ಒಂಭತ್ತರ ಪೂರ್ತಾ ವಿಸರ್ಜನೀಯಸಂಧಿ, ನತಿಸಂಧಿ, ಕ್ರಮಸಂಧಿ, (ವರ್ಣದ ದ್ವಿರ್ವಚನ) ವ್ಯಂಜನಸಂಧಿ, ಪ್ಲುತಸಂಧಿ ಮುಂತಾದ

ಅನೇಕ ಬಗೆಯ ಸಂಧಿಗಳ ವಿಚಾರ ಬರುತ್ತದೆ. ಹತ್ತು ಹನ್ನೊಂದನೇ ಪಟಲಗಳಲ್ಲಿ ಕ್ರಮ ಪಾಠದ ವಿವರಣೆ ಇದೆ. ಉದಾತ್ತಾದಿ ಸ್ವರಗಳ ಪರಿವರ್ತನ ನಿಯಮಗಳನ್ನಿಲ್ಲಿ ವಿವರವಾಗಿ ವಿವೇಚಿಸಿದೆ. ಹದಿಮೂರನೇ ಪಟಲದಲ್ಲಿ ವ್ಯಂಜನಗಳ ರೂಪ ಮತ್ತು ಲಕ್ಷಣಗಳ ವಿಚಾರವಿದೆ. ಅನೇಕ ಪ್ರಾಚೀನಾಚಾರ್ಯರುಗಳ ಅಭಿಪ್ರಾಯಗಳನ್ನು ಇಲ್ಲಿ ನಾವು ನೋಡಬಹುದು. ಹದಿನಾಲ್ಕರಲ್ಲಿ ವರ್ಣೋಚ್ಚಾರಣೆಯಲ್ಲಿ ಸಂಭವಿಸುವ ದೋಷಗಳ ನಿರೂಪಣೆಯೂ ಹದಿನೈದರಲ್ಲಿ ವೇದಪಾರಾಯಣದ ಪದ್ಧತಿಯ ಪರಿಚಯವೂ ಇದೆ. ಕೊನೆಯ ಮೂರು ಪಟಲಗಳಲ್ಲಿ ಗಾಯತ್ರೀ, ಉಷ್ಣಿಕ್, ಬೃಹತೀ, ಪಂಕ್ತಿ ಮುಂತಾದ ಛಂದಸ್ಸುಗಳ ವಿವರಣೆ ಇದೆ. ಹೀಗೆ ಇಲ್ಲಿ ಸ್ವರ, ವರ್ಣ, ಸಂಧಿ, ಛಂದಸ್ಸು ಮುಂತಾದುವುಗಳ ಸುಂದರ ವ್ಯಾಖ್ಯಾನವಿದೆ. ವೇದಸಮೀಕ್ಷೆಗೆ ಬಹಳ ಉಪಕಾರವಾಗಿದೆ.

### ಸಾಮವೇದ ಪ್ರಾತಿಶಾಖ್ಯಗಳು

ಸಾಮವೇದಕ್ಕೆ ಸೇರಿದ ಪ್ರಾತಿಶಾಖ್ಯಗಳಲ್ಲಿ ಪುಷ್ಪಸೂತ್ರ ಮತ್ತು ಋಕ್‌ತಂತ್ರಗಳು ಮುಖ್ಯವಾದುವು.

### ಪುಷ್ಪಸೂತ್ರ

ಈ ಹೆಸರು ಈ ಪ್ರಾತಿಶಾಖ್ಯಕ್ಕೆ ಬರುವುದಕ್ಕೆ ಪುಷ್ಪಋಷಿಗಳಿಂದ ಇದು ಪ್ರಣೀತವಾಗಿರುವುದೇ ಕಾರಣ. ಈ ಪ್ರಾತಿಶಾಖ್ಯದಲ್ಲಿ ಹತ್ತು ಪ್ರಪಾಠಕಗಳಿವೆ. ಇದಕ್ಕೆ ಉಪಾಧ್ಯಾಯ ಅಜಾತಶತ್ರುವಿನ ಭಾಷ್ಯವಿದೆ. ಈ ಸಾಮಪ್ರಾತಿಶಾಖ್ಯ ಗಾನ ಸಂಹಿತೆಗೆ ಸಂಬಂಧಿಸಿದೆ. ಆ ಕಾರಣದಿಂದಲೇ ಸ್ತೋಭವನ್ನು ವಿಶೇಷವಾಗಿ ವಿವೇಚಿಸುತ್ತದೆ. ಸ್ತೋಭದ ಸ್ಥಲಗಳನ್ನೂ ಮಂತ್ರಗಳನ್ನೂ ಉಲ್ಲೇಖಿಸುತ್ತದೆ. ಸ್ತೋಭವಿಧಾನವನ್ನು ವಿವರಿಸುತ್ತದೆ. ಸ್ತೋಭಗಳು ಎಲ್ಲಿ ಬರುವುದಿಲ್ಲವೆಂಬುದನ್ನೂ ಇದು ತಿಳಿಸುತ್ತದೆ. ಸಾಮಗಾನಕ್ಕೆ ಉಪಯುಕ್ತವಾದ ಸಾಮಗ್ರಿಗಳನ್ನು ಒಂದು ಕಡೆ ಕೂಡಿಸಿಕೊಟ್ಟಿರುವ ಈ ಕೃತಿ ಬಹಳ ಮಹತ್ವವನ್ನು ಹೊಂದಿದೆ. ವೇಯಗಾನ ಮತ್ತು ಅರಣ್ಯಗೇಯಗಾನದಲ್ಲಿ ಪ್ರಯುಕ್ತವಾದ ಸಾಮಗಳ ಊಹನವನ್ನು ಇತರ ಮಂತ್ರಗಳಿಗೆ ಹೇಗೆ ಅನ್ವಯಿಸುವುದೆಂಬುದನ್ನೂ ಇದು ವಿಸ್ತಾರವಾಗಿ ತಿಳಿಸುತ್ತದೆ.

### ಋಕ್ ತಂತ್ರ

ಸಾಮವೇದದ ಕೌಥುಮಶಾಖೆಗೆ ಸೇರಿದುದು ಈ ಪ್ರಾತಿಶಾಖ್ಯ. ಇದಕ್ಕೆ 'ಋಕ್‌ತಂತ್ರ ವ್ಯಾಕರಣ' ಎಂಬ ಹೆಸರನ್ನೂ ಕೊಡಲಾಗಿದೆ. ಗ್ರಂಥ ಸೂತ್ರರೂಪದಲ್ಲಿದೆ. 287 ಸೂತ್ರಗಳು 5 ಪ್ರಪಾಠಕಗಳಲ್ಲಿವೆ. ಇದರ ಕರ್ತೃ ಶಾಕಟಾಯನ. ಯಾಸ್ಕ ಪಾಣಿನಿಗಳು ಇವರನ್ನೇ ಉಲ್ಲೇಖಿಸಿದ್ದಾರೆಂದು ತೋರುತ್ತದೆ. ಇದರಲ್ಲಿ ಅಕ್ಷರಗಳ ಉದಯವನ್ನೂ ಅವುಗಳ ಪ್ರಕಾರಗಳನ್ನೂ ಮೊದಲು ವರ್ಣಿಸಿದೆ. ಮುಂದೆ ವಿಶಿಷ್ಟವಾದ ಪಾರಿಭಾಷಿಕ ಶಬ್ದಗಳ ವಿವರಣೆ ಇದೆ. ಅಕ್ಷರೋಚ್ಚಾರಣೆಯ ಸ್ಥಾನಗಳ ವಿವರಣೆಯ ನಂತರ ಸಂಧಿವಿವರಣೆ ಬಂದಿದೆ.

ಈ ಪ್ರಾತಿಶಾಖ್ಯ ಪಾಣಿನಿಯ ಕೃತಿಗಿಂತ ಪೂರ್ವವರ್ತಿಯಾದುದು. ಇದರ ಪ್ರಭಾವ ಪಾಣಿನಿಯ ಮೇಲೆ ಗಮನಾರ್ಹವಾಗಿ ಆಗಿದೆ.

### ತೈತ್ತಿರೀಯ ಪ್ರಾತಿಶಾಖ್ಯ

ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಎರಡು ಪ್ರಶ್ನಗಳಿವೆ. ಒಂದೊಂದು ಪ್ರಶ್ನದಲ್ಲಿಯೂ 12 ಅಧ್ಯಾಯಗಳಿವೆ. ಇದೂ ಪೂರ್ಣವಾಗಿ ಸೂತ್ರಾತ್ಮಕವಾಗಿದೆ. ಪ್ರಥಮ ಪ್ರಶ್ನದಲ್ಲಿ

ವರ್ಣಸಮಾಮ್ನಾಯ, ಶಬ್ದಸ್ಥಾನ, ಶಬ್ದೋತ್ಪತ್ತಿಪ್ರಕಾರ ನಾನಾ ವಿಧವಾದ ಸ್ವರಗಳು, ವಿಸರ್ಗಸಂಧಿ, ಮೂರ್ಧನ್ಯವಿಧಾನ ಮುಂತಾದ ವಿಚಾರಗಳಿವೆ. ಎರಡನೆಯ ಪ್ರಶ್ನದಲ್ಲಿ ಣತ್ವವಿಧಾನ, ಅನುಸ್ವಾರ, ಅನುನಾಸಿಕ, ಸ್ವರಿತಭೇದ, ಸಂಹಿತಾ ಸ್ವರೂಪ ಮುಂತಾದ ಅನೇಕ ಮುಖ್ಯವಿಚಾರಗಳ ಪ್ರತಿಪಾದನೆ ಇದೆ. ಇಲ್ಲಿ ತೈತ್ತಿರೀಯ ಸಂಹಿತೆಯಿಂದಲೇ ಉದಾಹರಣೆಗಳನ್ನು ಆರಿಸಿಕೊಟ್ಟಿದೆ. ಈ ಪ್ರಾತಿಶಾಖ್ಯಕ್ಕೆ ಅನೇಕ ವ್ಯಾಖ್ಯಾನಗಳಿವೆ. ಮಾಹಿಷೇಯಕೃತ 'ಪದಕ್ರಮ-ಸದನ' ಎಂಬುದು ಪ್ರಾಚೀನತಮವಾದ ಭಾಷ್ಯ. ಇದು ಸಂಗ್ರಹವಾಗಿ ಪ್ರಭಾವಪೂರ್ಣವಾಗಿದೆ. ಪದ ಮತ್ತು ಕ್ರಮಪಾಠಕ್ಕೆ ಅನ್ವಯಿಸುವ ಪ್ರಕೃತಿಪಾಠವನ್ನೂ ಅದಕ್ಕನ್ವಯಿಸುವ ಸ್ವರಸಂಧಿ ವಿಚಾರಗಳನ್ನೂ ಈ ಪ್ರಾತಿಶಾಖ್ಯ ವಿವೇಚಿಸುವುದರಿಂದ ಈ ಭಾಷ್ಯಕ್ಕೆ 'ಪದಕ್ರಮ-ಸದನ' ಎಂಬ ಹೆಸರನ್ನು ಕೊಟ್ಟಿರುವುದು ಅನ್ವರ್ಥವಾಗಿದೆ. ಸೋಮಯಾರ್ಯರ 'ತ್ರಿಭಾಷ್ಯರತ್ನ' ಮತ್ತು ಗೋಪಾಲಯಜ್ವಾವಿರಚಿತ 'ವೈದಿಕಾಭರಣ' ಎಂಬವು ಇತರ ಮುಖ್ಯ ವ್ಯಾಖ್ಯಾನಗಳಾಗಿವೆ.

### ವಾಜಸನೇಯಿ ಪ್ರಾತಿಶಾಖ್ಯ

ಶುಕ್ಲ ಯಜುರ್ವೇದ ಪ್ರಾತಿಶಾಖ್ಯವನ್ನು ರಚಿಸಿದವರು ಕಾತ್ಯಾಯನ ಮುನಿಗಳು. ಇವರು ಪಾಣಿನಿಗಿಂತ ಪ್ರಾಚೀನರು. ಅಷ್ಟಾಧ್ಯಾಯೀ ವಾರ್ತಿಕಕಾರ ಕಾತ್ಯಾಯನರಿಗಿಂತ ಭಿನ್ನರಾದವರು. ಈ ಪ್ರಾತಿಶಾಖ್ಯದಲ್ಲಿ ಎಂಟು ಅಧ್ಯಾಯಗಳಿವೆ. ಇವುಗಳಲ್ಲಿ ಪರಿಭಾಷಾ, ಸ್ವರ ಮತ್ತು ಸಂಸ್ಕಾರಗಳ ವಿಸ್ತೃತ ವಿವೇಚನೆ ಇದೆ. ಕಾತ್ಯಾಯನರಿಗೆ 'ಸ್ವರ-ಸಂಸ್ಕಾರ-ಪ್ರತಿಷ್ಠಾಪಯಿತಾ' ಎಂಬ ಬಿರುದು ಅನ್ವರ್ಥವಾಗಿ ಬಂದಿತ್ತೆಂದು ತಿಳಿಯುತ್ತದೆ. ಪ್ರಥಮಾಧ್ಯಾಯದಲ್ಲಿ ಪಾರಿಭಾಷಿಕ ಶಬ್ದಗಳ ಲಕ್ಷಣಾದಿಗಳನ್ನೂ ಎರಡನೆಯ ಅಧ್ಯಾಯದಲ್ಲಿ ತ್ರಿವಿಧಸ್ವರಗಳ ಲಕ್ಷಣ ವಿಶೇಷಗಳನ್ನೂ ಮೂರರಿಂದ ಏಳನೆಯ ಅಧ್ಯಾಯಪರ್ಯಂತ ಸಂಸ್ಕಾರ (ಸಂಧಿಗಳು)ದ ವಿಶದವರ್ಣನೆಯನ್ನೂ ಕೊಡಲಾಗಿದೆ. ನಾನಾ ಪ್ರಕಾರದ ಸಂಧಿಗಳನ್ನೂ, ಪದಪಾಠರಚನೆಯ ನಿಯಮಗಳನ್ನೂ ವಿಶೇಷ ಸ್ವರವಿಧಾನಗಳನ್ನೂ ಇಲ್ಲಿ ಕಾಣಬಹುದು. ಎಂಟನೆಯ ಅಧ್ಯಾಯಕ್ಕೆ 'ವರ್ಣಸಮಾಮ್ನಾಯ' ಎಂಬ ಸಂಜ್ಞೆಯನ್ನು ಕೊಟ್ಟಿದೆ. ಇಲ್ಲಿ ವರ್ಣಗಣನೆ, ಸ್ವರೂಪ ಮತ್ತು ವೈಶಿಷ್ಟ್ಯಗಳನ್ನು ವಿವೇಚಿಸಿದೆ. ಪ್ರಾಚೀನಾಚಾರ್ಯರುಗಳ ಅಭಿಪ್ರಾಯಗಳ ಉಲ್ಲೇಖವೂ ಅಲ್ಲಲ್ಲಿ ಕಂಡುಬರುತ್ತದೆ. ಶಾಕಲ್ಯ, ಕಾಶ್ಯಪ, ಶಾಕಟಾಯನ ಮುಂತಾದವರ ಹೆಸರುಗಳನ್ನು ಉಲ್ಲೇಖಿಸಿದೆ. ಈ ಪ್ರಾತಿಶಾಖ್ಯದಲ್ಲಿ ಬರುವ ಅನೇಕ ಪಾರಿಭಾಷಿಕ ಶಬ್ದಗಳನ್ನು ಪಾಣಿನಿ ತೆಗೆದುಕೊಂಡಿದ್ದಾರೆ, ಉಪಧಾ, ಅನುದಾತ್ತ, ಉದಾತ್ತ, ಸ್ವರಿತ, ಆಮ್ರೇಡಿತ, ಲೋಪ, ಅಪೃಕ್ತ ಮುಂತಾದ ಪಾರಿಭಾಷಿಕ ಶಬ್ದಗಳನ್ನು ಉದಾಹರಣೆಗೆ ಸೂಚಿಸಬಹುದು. ಇಲ್ಲಿನ ಕೆಲವು ಸೂತ್ರಗಳೂ ಅಷ್ಟಾಧ್ಯಾಯಿಯಲ್ಲಿ ಕಂಡುಬರುತ್ತವೆ. ಪಾಣಿನಿ ಇಲ್ಲಿಂದ ಅಂಥ ಸೂತ್ರಗಳನ್ನು ಅಖಂಡವಾಗಿ ತೆಗೆದುಕೊಂಡಿದ್ದಾರೆಂದು ವಿಮರ್ಶಕರ ಅಭಿಪ್ರಾಯ. ಹೀಗೆ ಈ ಪ್ರಾತಿಶಾಖ್ಯವು ಪಾಣಿನಿಗಿಂತ ಪೂರ್ವಕಾಲೀನವಾಗಿ ಪಾಣಿನಿಯ ಮೇಲೆ ಪ್ರಭಾವ ಬೀರಿತೆಂದು ಗೊತ್ತಾಗುತ್ತದೆ.

### ಪಾಣಿನೀಯ ಶಿಕ್ಷಾ

ಈ ಶಿಕ್ಷಾ ಗ್ರಂಥವು ಲೋಕ ಮತ್ತು ವೇದಶಾಸ್ತ್ರಗಳೆರಡಕ್ಕೂ ಉಪಯುಕ್ತವಾಗಿ ಮಹತ್ವವುಳ್ಳದಾಗಿದೆ. ಇದರಲ್ಲಿ 60 ಶ್ಲೋಕಗಳಿವೆ. ಉಚ್ಚಾರಣಾವಿಧಿಗೆ ಸಂಬಂಧಿಸಿದಂತೆ

ಇಲ್ಲಿ ಕೊಡುವ ಸೂಚನೆಗಳು ಬಹಳ ಉಪಾದೇಯವಾಗಿವೆ. ಈ ಗ್ರಂಥದ ಕರ್ತೃಗಳಾರೆಂಬುದು ನಿರ್ದಿಷ್ಟವಾಗಿ ಗೊತ್ತಾಗಿಲ್ಲ. ಗ್ರಂಥಾಂತ್ಯದಲ್ಲಿ

**ಶಂಕರಃ ಶಾಂಕರೀಂ ಪ್ರಾದಾತ್ ದಾಕ್ಷೀಪುತ್ರಾಯ ಧೀಮತೇ ।**
**ವಾಙ್ಮಯೇಭ್ಯಃ ಸಮಾಹೃತ್ಯ ದೇವೀಂ ವಾಚಮಿತಿ ಸ್ಥಿತಿಃ ॥** (ಪಾ. ಶಿ. 56)

ಎಂಬ ಶ್ಲೋಕದಲ್ಲಿ ದಾಕ್ಷಿಪುತ್ರ ಎಂಬುದಾಗಿ ಪಾಣಿನಿಯ ಉಲ್ಲೇಖವಿದೆ. ಇದರಿಂದಲೂ ಇದರ ಕರ್ತೃ ಪಾಣಿನಿ ಇರಲಾರರೆಂದು ತೋರುತ್ತದೆ. ಪಾಣಿನಿ ಮತಾನುಯಾಯಿಯಾದ ಯಾವನೋ ವೈಯ್ಯಾಕರಣ ಇದನ್ನು ರಚಿಸಿರಬಹುದು. ಇದರ ಮೇಲೆ ಅನೇಕ ಟೀಕೆಗಳೂ ಹುಟ್ಟಿಕೊಂಡಿವೆ. ಈ ಕೃತಿ ಬಹಳ ಚಿಕ್ಕದಾದರೂ ಬಹಳ ಸಾರಗರ್ಭಿತವಾಗಿ ಸಂಸ್ಕೃತ ಭಾಷಾಧ್ಯಯನಕ್ಕೆ ಉಪಯುಕ್ತವಾಗಿದೆ.

ಪ್ರಾತಿಶಾಖ್ಯಗಳ ವಿಷಯವನ್ನು ತೆಗೆದುಕೊಂಡು ಅನೇಕರು ಕಾರಿಕೆಗಳ ರೂಪದಲ್ಲಿ ಗ್ರಂಥ ನಿರ್ಮಾಣಮಾಡಿದ್ದಾರೆ. ವೇದಾಂಗದೊಡನೆ ಸಂಬಂಧಿಸಿದ ಕಾರಣ ಇವುಗಳನ್ನು 'ಶಿಕ್ಷಾ' ಎಂದೇ ಕರೆದಿದ್ದಾರೆ. ಇಂಥ ಗ್ರಂಥಗಳ ಸಂಖ್ಯೆ ಅಪಾರವಾಗಿದೆ. 'ಶಿಕ್ಷಾ ಸಂಗ್ರಹ' ಎಂಬ ಗ್ರಂಥದಲ್ಲಿ ಬೇರೆ ಬೇರೆ ವೇದಶಾಖೆಗಳಿಗೆ ಸೇರಿದ ಚಿಕ್ಕ ದೊಡ್ಡ 32 ಶಿಕ್ಷಾ ಗ್ರಂಥಗಳು ಸಂಗ್ರಹೀತವಾಗಿವೆ. ಈ ಕೃತಿ ಬನಾರಸ್ ಸಂಸ್ಕೃತ ಮಾಲೆಯಲ್ಲಿ ಯುಗಲ್‌ಕಿಶೋರಪಾಠಕ್ ಎಂಬುವರಿಂದ ಪ್ರಕಾಶಿತವಾಗಿದೆ. ಇಲ್ಲಿ ಬರುವ ಶಿಕ್ಷೆಗಳು ಹೀಗಿವೆ:

ಯಾಜ್ಞವಲ್ಕ್ಯ ಶಿಕ್ಷಾ (ಇದರಲ್ಲಿ 232 ಶ್ಲೋಕಗಳಿವೆ. ಶುಕ್ಲಯಜುರ್ವೇದದ ವಾಜಸನೇಯೀ ಶಾಖೆಗೆ ಸೇರಿದುದು ಇದು).

ವಾಸಿಷ್ಠೀ ಶಿಕ್ಷಾ, (ಇದೂ ವಾಜಸನೇಯೀ ಶಾಖೆಗೆ ಸೇರಿದುದು).

ಕಾತ್ಯಾಯಿನೀ ಶಿಕ್ಷಾ, ಪಾರಾಶರೀ ಶಿಕ್ಷಾ, ಮಾಂಡವ್ಯ ಶಿಕ್ಷಾ, ಅಮೋಘಾನಂದಿನೀಶಿಕ್ಷಾ ಮಾಧ್ಯಂದಿನೀ ಶಿಕ್ಷಾ, ವರ್ಣರತ್ನ ಪ್ರದೀಪಿಕಾ, ಕೇಶವೀ ಶಿಕ್ಷಾ, ಮಲ್ಲಶರ್ಮ ಶಿಕ್ಷಾ, ಸ್ವರಾಂಕುಶ ಶಿಕ್ಷಾ, ಷೋಡಶ ಶ್ಲೋಕೀ ಶಿಕ್ಷಾ, ಅವಸಾನ ನಿರ್ಣಯ ಶಿಕ್ಷಾ, ಸ್ವರಭಕ್ತಿ ಲಕ್ಷಣ ಶಿಕ್ಷಾ, ಪ್ರಾತಿಶಾಖ್ಯಪ್ರದೀಪ ಶಿಕ್ಷಾ, ನಾರದೀಯ ಶಿಕ್ಷಾ, ಮಾಂಡೂಕೀ ಶಿಕ್ಷಾ ಕ್ರಮಸಂಧಾನ ಶಿಕ್ಷಾ, ಗಲದೃಕ್ ಶಿಕ್ಷಾ ಮುಂತಾದವು ಇವುಗಳಲ್ಲಿ ಮುಖ್ಯವಾದುವು.

ಇವುಗಳಲ್ಲದೆ ಶಿಕ್ಷಾ ಸೂತ್ರವೆಂಬ ಗ್ರಂಥವೊಂದೂ ಉಪಲಬ್ಧವಾಗಿದೆ. ಇದು ಈ ಶಿಕ್ಷಾಗ್ರಂಥಗಳಿಗಿಂತ ಪ್ರಾಚೀನವಾದುದು.

ಈ ಶಿಕ್ಷಾ ಗ್ರಂಥಗಳ ಪರೀಕ್ಷಣದಿಂದ ಶಿಕ್ಷಾ ಶಾಸ್ತ್ರದ ಮಹತ್ವ ಗೊತ್ತಾಗುತ್ತದೆ. ಪ್ರಾಚೀನ ಋಷಿಗಳು ಭಾಷಾ ಶಾಸ್ತ್ರದ ಈ ವಿಭಾಗವನ್ನು ಎಷ್ಟು ಶಾಸ್ತ್ರೀಯವಾಗಿ, ವೈಜ್ಞಾನಿಕವಾಗಿ ಅಧ್ಯಯನ ಮಾಡಿದ್ದರೆಂಬುದು ಇದರಿಂದ ನಮಗೆ ಗೋಚರಿಸುತ್ತದೆ. ಪ್ರಾಚೀನ ಭಾರತದಲ್ಲಿ ಸ್ವರೋತ್ಪತ್ತಿ, ಸ್ವರಸ್ಥಾನ ಹಾಗೂ ಉಚ್ಚಾರಣ ಸ್ವರೂಪಗಳನ್ನು ಎಷ್ಟು ಶಾಸ್ತ್ರೀಯವಾದ ರೀತಿಯಲ್ಲಿ ಅವರು ವಿವೇಚಿಸಿದ್ದಾರೆಂಬುದನ್ನು ಅಧ್ಯಯನ ಮಾಡಿದಾಗ ನಮಗೆ ಅವರ ಪ್ರತಿಭೆಯ ಬಗ್ಗೆ ಆಶ್ಚರ್ಯವಾಗದಿರದು.[1] ಇಂದಿಗೂ ವೇದ ಸಂಹಿತೆಗಳ ಪಾಠ ಸಹಸ್ರಾರು ವರ್ಷಗಳ ಹಿಂದೆ ಇದ್ದಂತೆ ಅಖಂಡವಾಗಿ ಅವಿಚ್ಛಿನ್ನವಾಗಿ ನಮಗೆ ಉಪಲಬ್ಧವಾಗಿರುವುದು ಈ ಶಿಕ್ಷಾ ಗ್ರಂಥಗಳ ಸಹಾಯದಿಂದಲೇ. ಇಂದೇ ಈ ವೇದಾಂಗದ ಮಹತ್ವವನ್ನು ತೋರಿಸಿಕೊಡುತ್ತದೆ.

1. See *Phonetic Observation of Ancient Hindus.* –Dr. Siddhesvar Varma

## ವ್ಯಾಕರಣ

ಪ್ರಕೃತಿ ಮತ್ತು ಪ್ರತ್ಯಯಗಳ ವಿಚಾರವನ್ನು ವಿವೇಚಿಸಿ ಪದಗಳ ಸ್ವರೂಪ ಮತ್ತು ಅರ್ಥವನ್ನು ನಿರ್ಣಯಿಸಲು ವ್ಯಾಕರಣ ಸಹಾಯವಾಗುತ್ತದೆ. 'ವ್ಯಾಕ್ರಿಯಂತೇ ಶಬ್ದಾ ಅನೇನ ಇತಿ ವ್ಯಾಕರಣಮ್' ಎಂದು ಇದನ್ನು ವಿವರಿಸುತ್ತಾರೆ. ಇದು ವೇದಪುರುಷನ ಮುಖ. 'ಮುಖಂ ವ್ಯಾಕರಣಂ ಸ್ಮೃತಂ' ಎಂದು ಇದರ ಮಹತ್ತ್ವವನ್ನು ಹೇಳಿದ್ದಾರೆ. ವ್ಯಾಕರಣವಿಲ್ಲದೆ ವೇದವಾಙ್ಮಯದ ರಕ್ಷಣೆ ಆಗದು.

ಋಕ್ಸಂಹಿತೆಯಲ್ಲಿ ವ್ಯಾಕರಣಶಾಸ್ತ್ರದ ಪ್ರಶಂಸೆ ಇದೆ.

ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ
ದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ ।
ತ್ರಿಧಾ ಬದ್ಧೋ ವೃಷಭೋ ರೋರವೀತಿ
ಮಹೋ ದೇವೋ ಮರ್ತ್ಯಾನ್ ಆವಿವೇಶ ॥ (ಋ. ಸಂ. 4-58-6)

ಎಂಬ ಸೂತ್ರದಲ್ಲಿ ಇದನ್ನು ಕಾಣಬಹುದು. ವ್ಯಾಕರಣವನ್ನು ವೃಷಭವೆಂದು ರೂಪಣಮಾಡಿದ್ದಾರೆ ಇಲ್ಲಿ. ಅಭೀಷ್ಟಗಳನ್ನೆಲ್ಲಾ ಇದು ಪೂರ್ತಿಗೊಳಿಸುವುದೆಂದು ಇದನ್ನು 'ವೃಷಭ' ಅಥವಾ ಕಾಮವರ್ಷಕವೆಂದು ಕರೆಯಲಾಗಿದೆ. ಇದಕ್ಕೆ ನಾಲ್ಕು ಶೃಂಗಗಳಿವೆ. ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ ಎಂದು. ಭೂತ, ವರ್ತಮಾನ ಮತ್ತು ಭವಿಷ್ಯವೆಂಬ ಮೂರು ಪಾದಗಳಿವೆ. ಸುಪ್ ಮತ್ತು ತಿ ಙ್ ಎಂಬ ಎರಡು ಶಿರಸ್ಸುಗಳಿವೆ. ಪ್ರಥಮಾ, ದ್ವಿತೀಯಾ ಮುಂತಾದ ಸಪ್ತವಿಭಕ್ತಿಗಳೆಂಬ ಏಳು ಹಸ್ತಗಳಿವೆ. ಇದು ಮೂರು ಸ್ಥಾನಗಳಲ್ಲಿ—ಉರಸ್ಸು, ಕಂಠ ಮತ್ತು ಶಿರಸ್ಸು ಎಂಬುವುಗಳಲ್ಲಿ ಬದ್ಧವಾಗಿವೆ. ಮನುಷ್ಯರಲ್ಲಿ ಪ್ರವೇಶಿಸಿರುವ ಮಹಾದೇವನಿವನು. ಹೀಗೆ ವ್ಯಾಕರಣದ ಪ್ರಶಂಸೆ ಇಲ್ಲಿದೆ. ಮತ್ತೊಂದು ಮಂತ್ರದಲ್ಲಿ ವಿಶೇಷಜ್ಞಾನ ಪ್ರಶಂಸೆ ಇದೆ. ವ್ಯಾಕರಣವನ್ನರಿಯದವನು ವಾಣಿಯನ್ನು ನೋಡಿದರೂ ನೋಡಲಾರ ; ಕೇಳಿದರೂ ಕೇಳುವುದಿಲ್ಲ. ಆದರೆ ವ್ಯಾಕರಣವನ್ನು ತಿಳಿದವನಿಗೆ ವಾಣಿಯು ಅದೇ ರೂಪದಲ್ಲಿ ಸಾಕ್ಷಾತ್ಕರಿಸುವಳು.

'ಉತ ತ್ವಃ ಪಶ್ಯನ್ ನ ದದರ್ಶ ವಾಚಂ
ಉತ ತ್ವಃ ಶೃಣ್ವನ್ ನ ಶೃಣೋತ್ಯೇನಾಮ್ ।
ಉತೋ ತ್ವಸ್ಮೈ ತನ್ವಂ ವಿಸಸ್ರೇ
ಜಾಯೇವ ಪತ್ಯ ಉಶತೀ ಸುವಾಸಾಃ ॥' (ಋ. ಸಂ 10-71-4)

ವ್ಯಾಕರಣದ ಅಧ್ಯಯನದಿಂದ ಆಗುವ ಪ್ರಯೋಜನಗಳೇನು ? ಇದನ್ನು ಆಚಾರ್ಯ ವರರುಚಿಗಳೂ ಮಹರ್ಷಿ ಪತಂಜಲಿಗಳೂ ವಿಸ್ತಾರವಾಗಿ ವಿವೇಚಿಸಿದ್ದಾರೆ. ವರರುಚಿಗಳ ಅಭಿಪ್ರಾಯದಂತೆ ಐದು ಪ್ರಯೋಜನಗಳು ಗಮನಾರ್ಹವಾಗಿವೆ. ಅವು ಯಾವುವೆಂದರೆ: 1. ರಕ್ಷಾ 2. ಊಹ 3. ಆಗಮ 4. ಲಘು 5. ಅಸಂದೇಹ.

ವ್ಯಾಕರಣದ ಅಧ್ಯಯನದ ಪ್ರಧಾನಲಕ್ಷ್ಯ ವೇದರಕ್ಷಣೆಯೇ. ಮಂತ್ರಗಳಲ್ಲಿನ ಪದಸ್ವರೂಪವನ್ನರಿಯಲೂ, ಅರ್ಥವನ್ನು ತಿಳಿಯಲೂ, ಮಂತ್ರವಿನಿಯೋಗವನ್ನು ಸಾಧಿಸಲೂ ವ್ಯಾಕರಣದ ಸಹಾಯ ಆವಶ್ಯಕ. ಯಜ್ಞದ ಸಂಬಂಧದಲ್ಲಿ ಮಂತ್ರಗಳಲ್ಲಿ ಬರುವ ಶಬ್ದಗಳನ್ನು ಬೇರೆ ಬೇರೆ ಲಿಂಗಗಳಲ್ಲಿ, ವಿಭಕ್ತಿಗಳಲ್ಲಿ ಬಳಸಬೇಕಾಗುವುದು. ವ್ಯಾಕರಣವನ್ನು ತಿಳಿದವನು ಮಾತ್ರ ಇಂತಹ ವಿಪರಿಣಾಮ ಮಾಡಬಲ್ಲ. ಇದು ಊಹ ಎನ್ನಿಸುವುದು. ಆಗಮ ಅಥವಾ

ವೇದವೇ ಹೇಳುತ್ತಿದೆ ವ್ಯಾಕರಣವನ್ನು ಅಧ್ಯಯನ ಮಾಡಬೇಕೆಂದು. ಅಂಗಸಹಿತವಾದ ವೇದಗಳ ಅಧ್ಯಯನವನ್ನು ವಿಧಿಸುತ್ತದೆ ವೇದ. ಆ ಕಾರಣ ಇದರ ಅಧ್ಯಯನ ಆವಶ್ಯಕವಾಗುವುದು. ಶಬ್ದವಾರಿಧಿ ಅಪಾರವಾದುದು. ನಮ್ಮ ಮನೋರಥವನ್ನು ನಾವು ಸಾಧಿಸಲು ನಾವು ಆಶ್ರಯಿಸಬೇಕಾದುದು ವ್ಯಾಕರಣವೆಂಬ ಲಘೂಪಾಯವನ್ನೇ. ವೈದಿಕ ಶಬ್ದಗಳಲ್ಲಿ ಉಂಟಾಗುವ ಸಂದೇಹ ನಿವಾರಣೆಯನ್ನು ವ್ಯಾಕರಣದಿಂದ ನಾವು ಮಾಡಿಕೊಳ್ಳಬಹುದು. ಹೀಗೆ ವ್ಯಾಕರಣದಿಂದ ಬಹುಮುಖವಾದ ಪ್ರಯೋಜನವಿದೆ. ಪತಂಜಲಿಗಳು ಇದರ ಜೊತೆಗೆ ಇನ್ನೂ ಅನೇಕ ಪ್ರಯೋಜನಗಳನ್ನು ಹೇಳುತ್ತಾರೆ. ಅವುಗಳಲ್ಲಿ ಅಪಭಾಷಣ, ದುಷ್ಟಶಬ್ದ, ಅರ್ಥಜ್ಞಾನ, ಧರ್ಮಲಾಭ, ನಾಮಕರಣ ಮುಂತಾದವು ಕೆಲವು.

ಗೋಪಥ ಬ್ರಾಹ್ಮಣದಲ್ಲಿ ವ್ಯಾಕರಣನಿರ್ದೇಶ ಸ್ಪಷ್ಟವಾಗಿದೆ (1-24). ಧಾತು, ಪ್ರಾತಿಪದಿಕ, ನಾಮ, ಆಖ್ಯಾತ, ಲಿಂಗ, ವಚನ, ವಿಭಕ್ತಿ, ಪ್ರತ್ಯಯ, ಸ್ವರ, ಉಪಸರ್ಗ, ನಿಪಾತ, ಮಾತ್ರಾ, ವರ್ಣ, ಅಕ್ಷರ, ಪದಸಂಯೋಗ, ಸ್ಥಾನಾನುಪ್ರಧಾನ ಮುಂತಾದ ಪಾರಿಭಾಷಿಕ ಶಬ್ದಗಳ ಪ್ರಯೋಗ ಅಲ್ಲಿದೆ.

ವೇದಾಂಗವೆಂದು ಎಣಿಸಲ್ಪಟ್ಟ ವ್ಯಾಕರಣಶಾಸ್ತ್ರದ ಪ್ರತಿನಿಧಿಗ್ರಂಥ ಯಾವುದು ಎಂಬುದು ವಿಚಾರಣೀಯವಾದ ವಿಷಯ. ಇಂದು ಪ್ರಚಲಿತವಾಗಿರುವ ವ್ಯಾಕರಣಗಳಲ್ಲೆಲ್ಲಾ ಪಾಣಿನಿಯ ವ್ಯಾಕರಣ ಪ್ರಾಚೀನತಮವಾದುದು. ಆದಾಗ್ಲೂ ಇದು ಕ್ರಿ. ಶ. ನಾಲ್ಕನೇ ಶತಮಾನಕ್ಕೆ ಸೇರುವುದರಿಂದಲೂ, ಇದಕ್ಕಿಂತ ಪ್ರಾಚೀನವಾದ ನಿರುಕ್ತದಲ್ಲಿ ವೈಯ್ಯಾಕರಣರ ನಿರ್ದೇಶವಿರುವುದರಿಂದಲೂ ಪಾಣಿನಿಗಿಂತ ಪ್ರಾಚೀನರಾದ ವೈಯ್ಯಾಕರಣರ ಕೃತಿಗಳು ಈ ಗುಂಪಿಗೆ ಸೇರಿದ್ದಿರಬೇಕು. 'ಐಂದ್ರವ್ಯಾಕರಣ' ಪಾಣಿನಿಗಿಂತ ಹಿಂದಿನದು ಎಂದು ನಾವು ಅರಿಯುತ್ತೇವೆ. ಈಗ ಇದು ಉಪಲಬ್ಧವಾಗಿಲ್ಲದಿರುವುದು ನಮ್ಮ ದುರ್ದೈವ. ಐಂದ್ರ ವ್ಯಾಕರಣದ ಮಹತ್ವವನ್ನು ಅನೇಕ ಕಡೆ ಉಲ್ಲೇಖಿಸಿರುವುದನ್ನು ನಾವು ಕಾಣಬಹುದು. ಮಹರ್ಷಿ ಶಾಕಟಾಯನ ತನ್ನ ಋಕ್‌ತಂತ್ರದಲ್ಲಿ ವ್ಯಾಕರಣ ಶಾಸ್ತ್ರವನ್ನು ಮೊದಲಾಗಿ ಬ್ರಹ್ಮನು ಬೃಹಸ್ಪತಿಗೆ ಉಪದೇಶಿಸಿದನೆಂದೂ ಅನಂತರ ಅವನು ಇಂದ್ರನಿಗೆ ಹೇಳಿದನೆಂದೂ ಮುಂದೆ ಭಾರದ್ವಾಜ, ಋಷಿಗಳು, ಬ್ರಾಹ್ಮಣರು ಇವರ ಮುಖಾಂತರ ಪ್ರವರ್ತಿತವಾಯಿತೆಂದೂ ತಿಳಿಸುತ್ತಾರೆ. ತೈತ್ತಿರೀಯ ಸಂಹಿತೆಯಲ್ಲಿ,

ವಾಗ್ವೈ ಪರಾಚ್ಯವ್ಯಾಕೃತಾಽವದತ್ । ತೇ ದೇವಾ ಇಂದ್ರಂ ಅಬ್ರುವನ್ ಇಮಾಂ ನೋ ವಾಚಂ ವ್ಯಾಕುರ್ವೀತ । ಸೋಬ್ರವೀತ್ ವರಂವೃಣ, ಮಹ್ಯಂ ಚೈವೈಷ ವಾಯವೇ ಚ ಸಹ ಗೃಹ್ಯಾತಾ ಇತಿ । ತಸ್ಮಾತ್ ಐಂದ್ರವಾಯವಃ ಸಹ ಗೃಹ್ಯತೇ । ತಾಯಿಂದ್ರೋ ಮಧ್ಯ ತೋಽವಕ್ರಮ್ಯ ವ್ಯಾಕರೋತ್ । ತಸ್ಮಾದಿಯಂ ವ್ಯಾಕೃತಾ ವಾಗುದ್ಯತೇ।' (ತೈ. ಸಂ. 6-4-7-3) ಎಂದು ಹೇಳಿರುವುದರಲ್ಲಿಯೂ ಇಂದ್ರನ ಉಲ್ಲೇಖವಿರುವುದು ಗಮನಾರ್ಹವಾಗಿದೆ.

ಪ್ರಾಚೀನವಾದ ಐಂದ್ರವ್ಯಾಕರಣ ಇಂದು ಅನುಪಲಬ್ಧ. ಇಂದು ವ್ಯಾಕರಣ ರೂಪೀ ವೇದಾಂಗದ ಪ್ರತಿನಿಧಿ ಪಾಣಿನೀಯ ವ್ಯಾಕರಣವೇ ಆಗಿದೆ. ಪಾಣಿನಿಗಳು ಸುಮಾರು 4000 ಸೂತ್ರಗಳುಳ್ಳ ಅಷ್ಟಾಧ್ಯಾಯೀ ಗ್ರಂಥವನ್ನು ರಚಿಸಿದ್ದಾರೆ. ಇದಕ್ಕೆ ಮುಂದಿನ ಕಾಲಗಳಲ್ಲಿ ವರರುಚಿಗಳ ವಾರ್ತಿಕಗಳೂ, ಪತಂಜಲಿಗಳ ಮಹಾಭಾಷ್ಯವೂ ನಿರ್ಮಾಣವಾದವು. ಪಾಣಿನೀಯ ಅಷ್ಟಾಧ್ಯಾಯಿಯಲ್ಲಿ ಸ್ವರವೈದಿಕ ಪ್ರಕ್ರಿಯಾಭಾಗ ಮುಖ್ಯವಾದುದು. ಇದು ವೇದವಾಙ್ಮಯದ ಶಬ್ದರೂಪ, ಸ್ವರ, ಸಂಧಿ ಮುಂತಾದುವನ್ನು ವಿವೇಚಿಸುತ್ತದೆ. ಪಾಣಿನಿಗಳ ಕಾಲದಲ್ಲಿ

ವೇದವಾಙ್ಮಯದ ಭಾಷೆಗೂ ವ್ಯವಹಾರದಲ್ಲಿದ್ದ ಸಂಸ್ಕೃತ ಭಾಷೆಗೂ ಬಹಳ ಅಂತರ ಬೆಳೆದಿತ್ತು. ಇದನ್ನು ಪಾಣಿನಿಗಳು ಭಾಷಾಯಾಂ, ಛಂದಸಿ ಎಂದು ನಿರ್ದೇಶಿಸಿದ್ದಾರೆ. ಮುಂದಿನ ಕಾಲದಲ್ಲಿ ವ್ಯಾಕರಣಶಾಸ್ತ್ರ ಅಪಾರವಾಗಿ ಬೆಳೆಯಿತು. ಹೀಗೆ ವ್ಯಾಕರಣ ಪ್ರಧಾನವಾದ ವೇದಾಂಗವಾಗಿ ವೇದಾರ್ಥಪರಿಜ್ಞಾನಕ್ಕೆ ಅತ್ಯಂತ ಉಪಕಾರಕವಾಗಿದೆ.

## ಛಂದಸ್ಸು

ಛಂದಸ್ಸು ಮುಖ್ಯವಾದ ವೇದಾಂಗ. ವೇದ ಮಂತ್ರಗಳನ್ನು ತಪ್ಪಿಲ್ಲದೆಯೂ ಚೆನ್ನಾಗಿಯೂ ಪಠಿಸುವುದಕ್ಕೆ ಛಂದಸ್ಸಿನ ತಿಳಿವಳಿಕೆ ಅತ್ಯಂತ ಆವಶ್ಯಕ. ಒಂದೊಂದು ಸೂಕ್ತದ ಋಷಿ, ಛಂದಸ್ಸು ಮತ್ತು ದೇವತೆಗಳನ್ನು ತಿಳಿದುಕೊಂಡೇ ಆಯಾ ಸೂಕ್ತವನ್ನು ಹೇಳಬೇಕೆಂಬ ವಿಧಿ ಇದೆ. ಇವುಗಳ ಜ್ಞಾನವಿಲ್ಲದೆ ಯಾಗ ಮಾಡಿದರೆ ಅಥವಾ ಮಾಡಿಸಿದರೆ, ಓದಿದರೆ ಅಥವಾ ಓದಿಸಿದರೆ ಅದೆಲ್ಲವೂ ವ್ಯರ್ಥವೆಂದು ತಿಳಿಸಲಾಗಿದೆ.

'ಯೋಹ ವಾ ಅವಿದಿತಾರ್ಷೇಯಚ್ಛಂದೋ ದೈವತ ಬ್ರಾಹ್ಮಣೇನ ಮಂತ್ರೇಣ ಯಾಜಯತಿ ವಾ ಅಧ್ಯಾಪಯತಿ ವಾ ಸ್ಥಾಣುಂ ವರ್ಚ್ಛತಿ ಗರ್ತೇ ವಾ ಪಾತ್ಯತೇಪ್ರಮೀಯತೇ ವಾ ಪಾಪೀಯಾನ್ ಭವತಿ.' (ಸರ್ವಾನುಕ್ರಮಣೀ 1-1)

ಛಂದಸ್ಸು ಸಂಹಿತೆಗಳ ಕಾಲದಲ್ಲಿಯೇ ವೇದಾಂಗವಾಗಿದ್ದಿರಬೇಕೆಂಬುದನ್ನೂ ಇದರ ಕಡೆ ಲಕ್ಷ್ಯ ಪೂರ್ಣವಾಗಿತ್ತೆಂಬುದನ್ನೂ ನಾವು ವೇದಸಂಹಿತೆ ಬ್ರಾಹ್ಮಣಗಳಲ್ಲಿ ಬರುವ ಪ್ರಧಾನವಾದ ಛಂದಸ್ಸುಗಳ ನಾಮನಿರ್ದೇಶದಿಂದ ಅರಿಯಬಹುದು. ಈ ವೇದಾಂಗದ ಪ್ರತಿನಿಧಿಗ್ರಂಥ ಪಿಂಗಳಾಚಾರ್ಯರ 'ಛಂದಸ್ಸೂತ್ರ'. ಈ ಗ್ರಂಥ ಸೂತ್ರರೂಪದಲ್ಲಿದೆ. ಇದರಲ್ಲಿ 8 ಅಧ್ಯಾಯಗಳಿವೆ. ಇದರಲ್ಲಿ ವೈದಿಕ ಮತ್ತು ಲೌಕಿಕ ಛಂದಸ್ಸುಗಳ ವಿವರಣೆ ಇರುವುದು ಗಮನಾರ್ಹವಾಗಿದೆ. ಮೊದಲಿನಿಂದ ಹಿಡಿದು ನಾಲ್ಕನೇ ಅಧ್ಯಾಯದ 7ನೇ ಸೂತ್ರದವರೆಗೆ ವೈದಿಕ ಛಂದಸ್ಸಿನ ವಿವರಣೆಯೂ ಅಲ್ಲಿಂದ ಮುಂದೆ ಲೌಕಿಕ ಛಂದಸ್ಸುಗಳ ವಿವೇಚನೆಯೂ ಕಂಡು ಬರುತ್ತದೆ. ಇದಕ್ಕೆ 'ಮೃತಸಂಜೀವಿನೀ' ಎಂಬ ವ್ಯಾಖ್ಯಾನವನ್ನು ಭಟ್ಟಹಲಾಯುಧ ರಚಿಸಿದ್ದಾನೆ.

ವೈದಿಕ ಸಂಹಿತೆಗಳೆಲ್ಲಾ ಬಹುತರವಾಗಿ ಛಂದೋಬದ್ಧವಾಗಿವೆ. ಕೃಷ್ಣಯಜುರ್ವೇದ ಸಂಹಿತೆ ಹಾಗೂ ಅಥರ್ವವೇದ ಸಂಹಿತೆಗಳಲ್ಲಿ ಮಾತ್ರ ಮಧ್ಯೇ ಮಧ್ಯೇ ಗದ್ಯಭಾಗಗಳಿವೆ. ಆದ್ದರಿಂದ ವೈದಿಕ ಸಂಹಿತೆಗಳನ್ನು 'ಛಂದೋಮಯೀ ವಾಕ್' ಎಂದು ನಾವು ವ್ಯವಹರಿಸುತ್ತೇವೆ. ಛಂದೋಬದ್ಧವಾದ ಕೃತಿಗಳಲ್ಲಿ ಕೋಮಲವಾದ ಭಾವಗಳ ಅಭಿವ್ಯಕ್ತಿ ಸಹಜವಾಗಿಯೇ ಆಗುವುದು. ಮಂತ್ರಗಳ ಪ್ರಧಾನವಾದ ಉದ್ದೇಶವಾದರೂ ದೇವತೆಗಳ ಪ್ರಸಾದಸಂಪಾದನೆಯೇ ಆಗಿದೆ. ವಿಶೇಷವಾಗಿ ಮಂತ್ರ ಗಾಯನದಿಂದ ದೇವತಾ ಪ್ರಸಾದ ಲಭಿಸಬಹುದು. ಈ ದೃಷ್ಟಿಯಿಂದ ನಾವು ನೋಡಿದಾಗ ಮಂತ್ರಗಳ ಛಂದಸ್ಸುಗಳಿಗೆ ಹೆಚ್ಚಿನ ಮಹತ್ವ ಏಕಿತ್ತೆಂಬುದು ಅರಿವಾಗುತ್ತದೆ. ಪಾಣಿನೀಯ ಶಿಕ್ಷೆಯಲ್ಲಿ 'ಛಂದಃ ಪಾದೌ ತು ವೇದಸ್ಯ' ಎಂದು ಹೇಳಿದೆ. ವ್ಯಕ್ತಿಯು ನಿಲ್ಲುವುದಕ್ಕೂ ನಡೆಯುವುದಕ್ಕೂ ಹೇಗೆ ಪಾದಗಳು ಪ್ರಧಾನಸಾಧನವೋ ಹಾಗೆಯೇ ವೇದಗಳ ಪ್ರಯೋಜನವನ್ನು ಪಡೆಯುವುದಕ್ಕೂ ವೇದಾರ್ಥ ಪ್ರವರ್ತನಕ್ಕೂ ಛಂದಸ್ಸು ಮುಖ್ಯವಾದುದು. 'ಛಂದಾಂಸಿ ಛಾದನಾತ್' ಎಂದು ಯಾಸ್ಕರು ಈ ಶಬ್ದವನ್ನು ವಿವರಿಸಿದ್ದಾರೆ. ಇವು ವೇದಗಳಿಗೆ ಆವರಣವೆಂದು ಅವರ ಆಶಯ. ಕಾಲಕ್ರಮದಲ್ಲಿ ವೈದಿಕ ಭಾಷೆಯನ್ನು

ಛಂದಸ್ ಎಂದು ಕರೆದರು. ಪಾಣಿನಿಯ ಸೂತ್ರಗಳಲ್ಲಿ ಇಂಥ ಪ್ರಯೋಗಗಳು ಕಂಡು ಬರುತ್ತವೆ.[2]

'ಯದಕ್ಷರಪರಿಮಾಣಂ ತಚ್ಛಂದಃ' ಎಂದು ಕಾತ್ಯಾಯನರು ತಮ್ಮ ಸರ್ವಾನುಕ್ರಮಣಿಯಲ್ಲಿ ಹೇಳುತ್ತಾರೆ. ಛಂದಸ್ಸುಗಳು ಅಕ್ಷರಗಣನೆಗೆ ಅನುಗುಣವಾಗಿದ್ದವೇ ವಿನಾ ಗುರುಲಘುಗಳ ನಿಯಮಗಳನ್ನೊಳಗೊಂಡಿರಲಿಲ್ಲ. ಲೌಕಿಕ ಸಂಸ್ಕೃತದ ಛಂದಸ್ಸುಗಳು ಹೀಗಿಲ್ಲ. ವೃತ್ತಗಳ ಅಕ್ಷರಗಳಲ್ಲಿ ಗುರುಲಘುಗಳ ನಿಯಮಗಳನ್ನು ಕಟ್ಟುನಿಟ್ಟಾಗಿ ಅನ್ವಯಿಸಿದೆ. ವೈದಿಕ ಛಂದುಸ್ಸುಗಳಿಂದಲೇ ಲೌಕಿಕ ಸಂಸ್ಕೃತದ ಛಂದಸ್ಸುಗಳು ಅನೇಕ ಕಾಲಾನಂತರ ಹುಟ್ಟಿದವೆಂದು ಈ ಸಂದರ್ಭದಲ್ಲಿ ನಾವು ಸ್ಮರಿಸಿಕೊಳ್ಳಬಹುದು.

ವೇದದ ಛಂದಸ್ಸುಗಳಲ್ಲಿ ಇಷ್ಟೇ ಪಾದಗಳಿರಬೇಕೆಂಬ ನಿಯಮವೂ ಇಲ್ಲ. ಒಂದು ಎರಡು ಪಾದಗಳ ಛಂದುಸ್ಸುಗಳೂ ಇವೆ. ಮೂರು ಪಾದಗಳುಳ್ಳ ಛಂದಸ್ಸುಗಳು ಅಧಿಕವಾಗಿವೆ. ಗಾಯತ್ರೀ ಮತ್ತು ಉಷ್ಣಿಕ್ ಮೂರು ಪಾದಗಳುಳ್ಳವಾಗಿವೆ. ನಾಲ್ಕು ಪಾದಗಳ ಛಂದಸ್ಸಲ್ಲದೆ ಐದು ಪಾದಗಳುಳ್ಳ ಪಂಕ್ತಿ ಎಂಬುದೂ ರೂಢಿಯಲ್ಲಿದೆ. ಹೀಗೆ ವೈದಿಕ ಛಂದಸ್ಸಿನಲ್ಲಿ ವೈವಿಧ್ಯ ಮತ್ತು ವಿಸ್ತಾರಗಳನ್ನು ನಾವು ಕಾಣುತ್ತೇವೆ.

ಪ್ರಧಾನವಾದ ವೈದಿಕ ಛಂದಸ್ಸುಗಳು

| | | | | |
|---|---|---|---|---|
| ಗಾಯತ್ರಿ | – | 3 ಪಾದಗಳು | = | 24 ಅಕ್ಷರಗಳು |
| ಉಷ್ಣಿಕ್ | – | 8 + 8 + 12 | = | 28 " |
| ಪುರ ಉಷ್ಣಿಕ್ | – | 12 + 8 + 8 | = | 28 " |
| ಕಕುಪ್ | – | 8 + 12 + 8 | = | 28 " |
| ಅನುಷ್ಟುಪ್ | – | 4 ಪಾದಗಳು | = | 32 " |
| ಬೃಹತೀ | – | " | = | 36 " |
| ಸತೋಬೃಹತೀ | – | " | = | 40 " |
| ಪಂಕ್ತಿ | – | 5 " | = | 40 " |
| ಪ್ರಸ್ತಾರ ಪಂಕ್ತಿ | - | 12+12+8+8 | = | 40 " |
| ತ್ರಿಷ್ಟುಪ್ | - | 4 ಪಾದಗಳು | = | 44 " |
| ಜಗತೀ | - | 4 " | = | 48 " |

ಇದಲ್ಲದೆ ಅನೇಕ ಅವಾಂತರ ಭೇದಗಳುಳ್ಳ ಛಂದುಸ್ಸುಗಳಿವೆ. ಅನುಕ್ರಮಣಿಗಳಲ್ಲಿ ಇವುಗಳ ವಿಚಾರವನ್ನು ವಿಸ್ತಾರವಾಗಿ ವಿವೇಚಿಸಿದ್ದಾರೆ. ಯಾವುದಾದರೂ ಛಂದಸ್ಸಿನ ಮಂತ್ರದ ಪಾದವೊಂದರಲ್ಲಿ ಒಂದು ಅಕ್ಷರ ಕಡಿಮೆಯಾಗಿರಬಹುದು ಅಥವಾ ಅಧಿಕವಾಗಿರಬಹುದು. ಆಗ ಅದಕ್ಕೆ 'ನಿಚೃತ್' ಮತ್ತು 'ಭೂರಿಕ್' ಎಂಬ ಹೆಸರನ್ನು ಕೊಡಲಾಗುವುದು. ಗಾಯತ್ರೀ ಛಂದಸ್ಸಿನಲ್ಲಿ 8 ಅಕ್ಷರಗಳುಳ್ಳ ಮೂರು ಪಾದಗಳಿವೆ. ಯಾವ ಮಂತ್ರದಲ್ಲಿ ಒಂದು ಅಕ್ಷರ ಕಡಿಮೆಯಾಗಿ 23 ಅಕ್ಷರಗಳಿದೆಯೋ ಅದಕ್ಕೆ 'ನಿಚೃತ್ ಗಾಯತ್ರೀ' ಎಂದೂ 25 ಅಕ್ಷರಗಳಿದ್ದಲ್ಲಿ 'ಭೂರಿಕ್ ಗಾಯತ್ರೀ' ಎಂದೂ ಹೆಸರನ್ನು ಕೊಡಲಾಗಿದೆ. ಹೀಗೆಯೇ ಎರಡು ಅಕ್ಷರಗಳು

2. 'ಬಹುಲಂ ಛಂದಸಿ' (7–1–8)

ಕಡಿಮೆಯಾಗಿದ್ದರೆ 'ವಿರಾಟ್' ಎಂದೂ ಎರಡು ಅಕ್ಷರಗಳು ಹೆಚ್ಚಾಗಿದ್ದರೆ 'ಸ್ವರಾಟ್' ಎಂದೂ ಕರೆಯುತ್ತಾರೆ. ಉದಾ. ವಿರಾಟ್ ಗಾಯತ್ರಿಯಲ್ಲಿ 24-2=22 ಅಕ್ಷರಗಳೂ ಸ್ವರಾಟ್ ಗಾಯತ್ರಿಯಲ್ಲಿ 24+2=26 ಅಕ್ಷರಗಳೂ ಇವೆ. ಹೀಗೆ ಇವೆಲ್ಲ ಅಂಶಗಳ ವಿವರಣೆ ಇಲ್ಲಿದೆ.

ವೈದಿಕ ಛಂದಸ್ಸುಗಳಿಂದಲೇ ಲೌಕಿಕ ಸಂಸ್ಕೃತದ ಛಂದಸ್ಸುಗಳು ವಿಕಾಸಗೊಂಡಿವೆ. ಈ ಲೌಕಿಕ ಛಂದಸ್ಸುಗಳ ವಿಚಾರವೂ ಪಿಂಗಳರ ಛಂದಸ್ಸೂತ್ರದಲ್ಲಿದೆ.

## ನಿರುಕ್ತ

ವೇದಾಂಗಗಳಲ್ಲೆಲ್ಲಾ ಇದು ಬಹಳ ಮುಖ್ಯವಾದುದು.[3] ವೇದಮಂತ್ರಗಳ ಅರ್ಥಾನುಸಂಧಾನವೇ ಇದರ ಗುರಿ. ಅನರ್ಥಜ್ಞನು ವೇದವಿಹಿತವಾದ ಕರ್ಮಗಳ ಪೂರ್ಣ ಪ್ರಯೋಜನವನ್ನು ಪಡೆಯಲಾರ. ವೇದವಾಙ್ಮಯದಲ್ಲಿ ಕ್ಲಿಷ್ಟವಾದ ಶಬ್ದಗಳ ಸಂಗ್ರಹಮಾಡಿ ಅವುಗಳ ಅರ್ಥ ವಿವರಣೆ ಇಲ್ಲಿ ಮಾಡಲಾಗಿದೆ. ಕ್ಲಿಷ್ಟವಾದ ವೈದಿಕ ಶಬ್ದಗಳ ಸಂಗ್ರಹ ಮೊದಲ ಹೆಜ್ಜೆಯಲ್ಲಿ ಆಯಿತು. ಈ ಸಂಗ್ರಹಕ್ಕೆ ನಿಘಂಟು ಎಂದು ಹೆಸರು ಪ್ರಸಿದ್ಧವಾಗಿದೆ. ಈ ನಿಘಂಟುವೂ ವೇದ ಸಮಾನವಾಗಿ ಪವಿತ್ರವಾಗಿದೆ. ಈ ನಿಘಂಟುವಿನ ಮೇಲಿನ ವಿವರಣೆಯೇ ನಿರುಕ್ತ. ನಮಗೆ ಉಪಲಬ್ಧವಾಗಿರುವುದು ಯಾಸ್ಕರ ನಿರುಕ್ತವೊಂದೇ ಆದರೂ ಇದಕ್ಕೂ ಹಿಂದೆ ಅನೇಕ ನಿರುಕ್ತಗಳಿದ್ದವೆಂದು ಯಾಸ್ಕರ ಉಲ್ಲೇಖಗಳಿಂದ ಗೊತ್ತಾಗುತ್ತದೆ.

ನಿಘಂಟುಗಳನ್ನು ಸಂಗ್ರಹಿಸಿದವರು ಯಾಸ್ಕರಿಗಿಂತ ಬೇರೆಯಾದವರು. 'ಸಮಾಮ್ನಾಯಃ ಸಮಾಮ್ನಾತಃ' ಎಂದು ಯಾಸ್ಕರು ನಿಘಂಟುವನ್ನುದ್ದೇಶಿಸಿ ಹೇಳುತ್ತಾರೆ.

ನಿರುಕ್ತದ ವಿಷಯವನ್ನರಿಯುವ ಮೊದಲು ಅದಕ್ಕೆ ಆಧಾರವಾಗಿರುವ ನಿಘಂಟುವಿನ ವಿಷಯವನ್ನರಿಯಬೇಕು.

ನಿಘಂಟು ಐದು ಅಧ್ಯಾಯಗಳಲ್ಲಿದೆ. ಮೊದಲ ಮೂರು ಅಧ್ಯಾಯಗಳಿಗೆ ನೈಘಂಟುಕ ಕಾಂಡವೆಂದೂ, ನಾಲ್ಕನೇ ಅಧ್ಯಾಯಕ್ಕೆ ನೈಗಮಕಾಂಡವೆಂದೂ, ಐದನೇ ಅಧ್ಯಾಯಕ್ಕೆ ದೈವತ ಕಾಂಡವೆಂದೂ ಹೆಸರು.

ನೈಘಂಟುಕ ಕಾಂಡದಲ್ಲಿ ಒಂದೇ ಅರ್ಥವುಳ್ಳ ಅನೇಕಾನೇಕ ಪದಗಳ 69 ಗಣಗಳಿವೆ. ಒಟ್ಟು 1341 ಪದಗಳಿವೆ. ನೈಗಮಕಾಂಡದಲ್ಲಿ ಏಕಪದಿಕಗಳೆಂದು ಹೆಸರುಳ್ಳ 278 ಪದಗಳಿವೆ. ದೈವತಕಾಂಡದಲ್ಲಿ ಪೃಥ್ವೀಸ್ಥಾನ ಅಂತರಿಕ್ಷಸ್ಥಾನ ಮತ್ತು ದ್ಯುಸ್ಥಾನದೇವತೆಗಳ ಹೆಸರುಗಳ ಆರುಗಣಗಳಿಂದ 151 ಪದಗಳ ಸಂಗ್ರಹವಿದೆ ಒಟ್ಟು ನಿಘಂಟುವಿನಲ್ಲಿ 1770 ಪದಗಳ ಸಮೂಹವಿದೆ.

ಈ ಶಬ್ದಸಂಗ್ರಹದ ಮೇಲೆ ವ್ಯಾಖ್ಯಾನವೇ ನಿರುಕ್ತ. ನಿರುಕ್ತದ ಕರ್ತೃಗಳು ಯಾಸ್ಕರು.

3. ಪ್ರಧಾನಂ ಚೇದಂ ಇತರೇಭ್ಯೋ ಅಂಗೇಭ್ಯಃ ಸರ್ವಶಾಸ್ತ್ರೇಭ್ಯಶ್ಚ ಅರ್ಥಪರಿಜ್ಞಾನಾಭಿನಿವೇಶಾತ್ । ಅರ್ಥೋಹಿಪ್ರಧಾನಂ ತದ್ಗುಣಃ ಶಬ್ದಃ ಸ ಚ ಇತರೇಷು ವ್ಯಾಕರಣಾದೀಷು ಚಿಂತ್ಯತೇ । ಯಥಾ ಶಬ್ದ ಲಕ್ಷಣ ಪರಿಜ್ಞಾನಂ ಸರ್ವಶಾಸ್ತ್ರೇಷು ವ್ಯಾಕರಣಾತ್ ಏವಂ ಶಬ್ದಾರ್ಥ ನಿರ್ವಚನ ಪರಿಜ್ಞಾನಂ ನಿರುಕ್ತಾತ್ ।'

ದುರ್ಗಾಚಾರ್ಯವೃತ್ತಿ

ಇವರು ಈ ಶಬ್ದ ರಾಶಿಯಲ್ಲಿ ನೈಘಂಟುಕ ಕಾಂಡದ ಗಣಗಳಲ್ಲಿ ಮುಖ್ಯವಾದ ಪದಗಳಿಗೂ ನೈಗಮ ಮತ್ತು ದೈವತ ಕಾಂಡದ ಪ್ರತಿಯೊಂದು ಪದಕ್ಕೂ ನಿರ್ವಚನ ಹೇಳಿ ಮಂತ್ರಗಳಿಂದ ಉದಾಹರಿಸಿ ಅರ್ಥವಿವರಣೆ ಮಾಡಿದ್ದಾರೆ.

ನಿರುಕ್ತವು ಸೂತ್ರ ಗ್ರಂಥ. ವೈದಿಕ ನಿಘಂಟುವಿಗೆ ವಿವರಣೆ ಕೊಡುವುದರ ಜೊತೆಗೆ ಯಾಸ್ಕರು ಅನೇಕ ಮುಖ್ಯ ವಿಚಾರಗಳನ್ನೂ ವಿವೇಚಿಸಿದ್ದಾರೆ. ಪೀಠಿಕಾ ಪ್ರಕರಣದಲ್ಲಿ ಶಬ್ದ ಸ್ವರೂಪ, ವೇದ ಮಂತ್ರಗಳ ಅರ್ಥ ವಿಚಾರ, ನಿರ್ವಚನ ಕ್ರಮ ಮುಂತಾದುವನ್ನು ಚರ್ಚಿಸಿದ್ದಾರೆ—ದೇವತೆಗಳ ಸ್ವರೂಪ ರೂಪ ಕರ್ತವ್ಯಗಳ ವಿಚಾರವನ್ನು ದೇವತಾ ಕಾಂಡದ ಪೀಠಿಕೆಯಲ್ಲಿ ಚರ್ಚಿಸುತ್ತಾರೆ. ಪ್ರಸಂಗವಶಾತ್ ಅವರು ಮಂತ್ರಗಳನ್ನು ಉದಾಹರಿಸಿ ಅವುಗಳ ಅರ್ಥವನ್ನೂ ಹೇಳುವುದರಿಂದ ನಿರುಕ್ತ ಮೊಟ್ಟ ಮೊದಲ ವೇದಭಾಷ್ಯವೆನಿಸಿದೆ. ಅನೇಕ ವ್ಯಾಕರಣಾಂಶಗಳನ್ನು ಪ್ರಸ್ತಾಪಿಸುವುದರಿಂದ ವ್ಯಾಕರಣ ಶಾಸ್ತ್ರದ ಇತಿಹಾಸವನ್ನರಿಯಲೂ ಉಪಕಾರವಾಗಿದೆ.

ಯಾಸ್ಕರ ನಿರುಕ್ತದಲ್ಲಿ 14 ಅಧ್ಯಾಯಗಳಿವೆ. ಇವುಗಳಲ್ಲಿ ಕೊನೆಯ ಎರಡು ಅಧ್ಯಾಯಗಳು ಪರಿಶಿಷ್ಟಗಳೆನಿಸಿವೆ. ಉಳಿದ ಹನ್ನೆರಡು ಅಧ್ಯಾಯಗಳನ್ನು ಎರಡು ಭಾಗಗಳನ್ನಾಗಿ ಮಾಡಿದ್ದಾರೆ. ಪೂರ್ವಷಟ್ಕ ಮತ್ತು ಉತ್ತರಷಟ್ಕ ಎಂಬುದಾಗಿ. ಮೊದಲ ಆರು ಅಧ್ಯಾಯಗಳಲ್ಲಿ ಮೊದಲ ಅಧ್ಯಾಯ ಭೂಮಿಕೆಯಾಗಿದೆ. ಎರಡರಿಂದ ಆರು ಅಧ್ಯಾಯಗಳು ಪೂರ್ತಾ ನೈಘಂಟುಕ ಮತ್ತು ನೈಗಮಕಾಂಡದ ಶಬ್ದಗಳ ವಿವೇಚನೆಯನ್ನು ನಡೆಸುವುದು. ಏಳನೇ ಅಧ್ಯಾಯದಲ್ಲಿ ದೇವತಾವಿಷಯಕವಾದ ಭೂಮಿಕೆ ಇದೆ. ಹನ್ನೆರಡನೇ ಅಧ್ಯಾಯದ ಪೂರ್ತಾ ದೈವತಾಕಾಂಡದ ಶಬ್ದಗಳ ನಿರ್ವಚನವಿದೆ. ಪರಿಶಿಷ್ಟಗಳೆನಿಸಿದ 13 ಮತ್ತು 14ನೇ ಅಧ್ಯಾಯಗಳು ಪ್ರಕ್ಷಿಪ್ತ ಭಾಗಗಳಾಗಿ ಈಚೆಗೆ ಸೇರಿಸಿದವುಗಳೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ನಿರುಕ್ತಕಾರರಾದ ಯಾಸ್ಕರು ಕ್ರಿ. ಪೂ. 700ರ ಸುಮಾರಿಗೆ ಸೇರಿದವರೆಂದು ವಿಮರ್ಶಕರು ಸಾಮಾನ್ಯವಾಗಿ ಒಪ್ಪುತ್ತಾರೆ.

ನಿರುಕ್ತದಲ್ಲಿ ಬರುವ ವಿಚಾರಗಳನ್ನು ಹೀಗೆ ಸಂಗ್ರಹಿಸುವುದು—ನಾಮಪದ ಕ್ರಿಯಾಪದ ಉಪಸರ್ಗ ನಿಪಾತಗಳ ಲಕ್ಷಣ-ಭಾವ ವಿಕಾರ ಲಕ್ಷಣ—ನಾಮಪದಗಳು ಧಾತುಜಗಳೆಂಬ ನಿರ್ಣಯ—ಮಂತ್ರಗಳ ಅರ್ಥವತ್ತ್ವ ಸ್ಥಾಪನೆ—ಮಂತ್ರಗಳ ದೇವತಾ ಪರಿಜ್ಞಾನ ವಿಚಾರ—ಅರ್ಥಜ್ಞ ಪ್ರಶಂಸೆ ಹಾಗೂ ಅನರ್ಥಜ್ಞ ನಿಂದೆ—ನಿರ್ವಚನ ಕ್ರಮ ನಿರೂಪಣೆ—ನೈಘಂಟುಕ ಪ್ರಕರಣದ ಶಬ್ದಗಳ ನಿರ್ವಚನ—ಏಕ ಪದಿಕಗಳ ನಿರ್ವಚನ—ಮಂತ್ರ ಲಕ್ಷಣ—ಪರೋಕ್ಷ ಪ್ರತ್ಯಕ್ಷ ಆಧ್ಯಾತ್ಮಿಕ ವಿಭಾಗ–ಸ್ತುತಿ, ಆಶೀರ್ವಾದ, ಶಪಥ, ಅಭಿಶಾಪ, ಆಚಿಖ್ಯಾಸಾ, ಪರಿದೇವನ, ನಿಂದಾ, ಪ್ರಶಂಸಾ ಮುಂತಾದುವುಗಳಿಂದ ಮಂತ್ರಾಭಿವ್ಯಕ್ತಿ–ದೇವತೆಗಳ ಶಕ್ತಿಮತ್ತ್ವ–ದೇವತಾ ವಿಭಾಗ–ದೇವತೆಗಳ ಅನೇಕ ನಾಮಧೇಯಗಳ ಯೋಗ—ದೇವತೆಗಳ ಆಕಾರ ಚಿಂತನೆ–ತ್ರಿಸ್ಥಾನದ ದೇವತೆಗಳ ಹೆಸರುಗಳ ನಿರ್ವಚನ–ಮಂತ್ರಾರ್ಥ ನಿರ್ವಚನ ವಿಚಾರ—ಮುಂತಾದುವು.

ಯಾಸ್ಕರ ನಿರುಕ್ತಕ್ಕೆ ಬಹುಮುಖವಾದ ಪ್ರಾಧಾನ್ಯವಿದೆ. ಇದರಿಂದ ಪ್ರಾಚೀನವಾದ ನಿರ್ವಚನಕ್ರಮದ ಪರಿಚಯ ಆಗುವುದು. ಯಾಸ್ಕಾಚಾರ್ಯರ ಕಾಲಕ್ಕೆ ಸಂಸ್ಕೃತ ವ್ಯವಹಾರದಲ್ಲಿತ್ತೆಂಬುದು ಅವರ ಅನೇಕಾನೇಕ ಸೂಚನೆಗಳಿಂದ ಗೊತ್ತಾಗುತ್ತದೆ. ಅಂದಿನ ಜನಜೀವನದ ವಿಚಾರವೂ ನಮಗೆ ಇದರಿಂದ ಗೊತ್ತಾಗುತ್ತದೆ. ಇವರಿಗಿಂತ ಹಿಂದೆಯೇ

ವ್ಯಾಕರಣಶಾಸ್ತ್ರವೂ ನಿರುಕ್ತಶಾಸ್ತ್ರವೂ ಪುಷ್ಕಲವಾಗಿ ಬೆಳೆದಿದ್ದವೆಂಬುದನ್ನೂ ಅರಿಯುತ್ತೇವೆ. ಪ್ರಾಸಂಗಿಕವಾಗಿ ಯಾಸ್ಕರು ವಿವೇಚಿಸುವ ಅನೇಕಾನೇಕ ಅಂಶಗಳು ಅವರ ವ್ಯಕ್ತಿತ್ವದ ಮೇಲೆ ಬೆಳಕನ್ನು ಬೀರುವುವು. "ಅಪಾರವಾದ ವೇದ ಸಾಹಿತ್ಯದ ಸಮಗ್ರ ಜ್ಞಾನ, ನಾನಾ ದೃಷ್ಟಿಗಳಿಂದ ಅದರ ವಿಮರ್ಶೆ, ನಿಷ್ಪೃಷ್ಟವಾದ ವ್ಯಾಕರಣ ಜ್ಞಾನ, ಪ್ರಾಸಂಗಿಕವಾದ ಇತಿಹಾಸ ಕಥನ, ವೇದರಾಶಿಯ ಗೂಢಾರ್ಥ ವಿವರಣೆ, ಶಾಸ್ತ್ರೀಯವಾದ ನಿರ್ವಚನ ಪದ್ಧತಿ, ಸ್ವತಂತ್ರವೂ ಸರ್ವಸಮ್ಮತವೂ ಆದ ಸಮನ್ವಯ–ಇವೆಲ್ಲಾ ಯಾಸ್ಕರ ವೈಶಿಷ್ಟ್ಯ."

ಯಾಸ್ಕರ ಮತದಂತೆ ಶಬ್ದಗಳೆಲ್ಲಾ ಧಾತುಜಗಳಾದುವು. ತತ್ರ ನಾಮಾನಿ ಆಖ್ಯಾತಜಾನೀತಿ ಶಾಕಟಾಯನೋ ನಿರುಕ್ತ ಸಮಯಶ್ಚ' ಎಂದು ಯಾಸ್ಕರು ಇದನ್ನು ಉಲ್ಲೇಖಿಸುತ್ತಾರೆ. ಪ್ರತಿಯೊಂದು ಸಂಜ್ಞಾಪದವೂ ಧಾತುವಿನಿಂದ ಉತ್ಪನ್ನವಾಗಿದೆಯೆಂದು ನಿರುಕ್ತಕಾರರ ನಿರ್ಣಯ. ಬಹಳ ಪ್ರಾಚೀನಕಾಲದಲ್ಲಿಯೇ ಎಷ್ಟು ಶಾಸ್ತ್ರೀಯವಾಗಿ ಈ ವಿಚಾರವನ್ನು ನಿರ್ಣಯಿಸಿದ್ದರೆಂಬುದು ಆಶ್ಚರ್ಯಕರವಾಗಿದೆ. ಭಾಷಾ ಶಾಸ್ತ್ರದ ದೃಷ್ಟಿಯಿಂದ ನಿರುಕ್ತ ಅನುಪಮವಾದ ರತ್ನವಾಗಿದೆ.

## ಜ್ಯೌತಿಷ

ವೇದಾಂಗಗಳಲ್ಲಿ ಜೌತಿಷವೂ ಒಂದು. ಯಜ್ಞ ವಿಧಾನವು ನಿರ್ದಿಷ್ಟವಾದ ಕಾಲಗಳಲ್ಲಿ ಆಗಬೇಕಾಗಿತ್ತು. ಸಮಯ ಶುದ್ಧಿ ಬಹಳ ಆವಶ್ಯಕವಾಗಿತ್ತು. ಸಂವತ್ಸರದ ಬೇರೆ ಬೇರೆ ಋತುಗಳಲ್ಲಿ ಬೇರೆ ಬೇರೆ ವರ್ಣದವರು ವಿಶಿಷ್ಟವಾದ ಕರ್ಮಗಳನ್ನು ಮಾಡಬೇಕೆಂದು ವಿಧಿಸಿದೆ–'ವಸಂತೇ ಬ್ರಾಹ್ಮಣಃ ಅಗ್ನಿಮಾದಧೀತ, ಗ್ರೀಷ್ಮೇ ರಾಜನ್ಯಃ ಆದಧೀತ, ಶರದಿವೈಶ್ಯಃ ಆದಧೀತ' ಎಂದು (ತೈ. ಬ್ರಾ. 1-1) ಅಗ್ನ್ಯಾಧಾನದ ವಿಚಾರವನ್ನು ಹೇಳಿರುವಂತೆಯೇ ದೀಕ್ಷಾ ವಿಧಾನವನ್ನು 'ಏಕಾಷ್ಟಕಾಯಾಂ ದೀಕ್ಷೇರನ್ ಫಲ್ಗುನೀ ಪೂರ್ಣಮಾಸೇ ದೀಕ್ಷೇರನ್' ಎಂಬುದಾಗಿ ತಿಳಿಸಿದೆ. ನಕ್ಷತ್ರ, ತಿಥಿ, ಪಕ್ಷ, ಮಾಸ, ಋತು ಹಾಗೆಯೇ ಸಂವತ್ಸರಗಳ ಉಲ್ಲೇಖಮಾಡಿ ಆಯಾ ಕಾಲಗಳಲ್ಲಿ ಯಾಗ ಮಾಡಬೇಕೆಂದು ವೇದದಲ್ಲಿ ವಿಧಿಸಿದೆ. ಆದುದರಿಂದ ಯಾಗಾದಿಕರಣ ಕಾಲವನ್ನರಿಯಲು ಜ್ಯೋತಿಷ ಶಾಸ್ತ್ರದ ಆವಶ್ಯಕತೆ ಇದೆ. ಇದನ್ನೇ ವೇದಾಂಗ ಜ್ಯೋತಿಷದಲ್ಲಿ,

ವೇದಾ ಹಿ ಯಜ್ಞಾರ್ಥಮಭಿಪ್ರವೃತ್ತಾಃ
ಕಾಲಾನಿ ಪೂರ್ವಾ ವಿಹಿತಾಶ್ಚ ಯಜ್ಞಾಃ ।
ತಸ್ಮಾದಿದಂ ಕಾಲವಿಧಾನ ಶಾಸ್ತ್ರಂ
ಯೋ ಜ್ಯೋತಿಷಂ ವೇದ ಸ ವೇದ ಯಜ್ಞಂ ॥ ವೇ. ಜ್ಯೌ.

ಎಂಬುದಾಗಿ ತಿಳಿಸಿದೆ. ಉಚಿತ ಸಮಯದಲ್ಲಿ ಉಚಿತ ನಕ್ಷತ್ರದಲ್ಲಿ ಉಚಿತ ದಕ್ಷಿಣೆಯೊಡನೆ ಮಾಡಿದ ಯಾಗ ಸಾರ್ಥಕವಾಗಿ ದೇವತೆಗಳ ಪ್ರಸನ್ನತೆಯನ್ನು ಪಡೆಯುತ್ತದೆ. ಯಾಗವಿಧಿಯಲ್ಲಿ ಜ್ಯೋತಿಷಕ್ಕೆ ಹೀಗೆ ಪ್ರಧಾನವಾದ ಸ್ಥಾನವಿದೆ. ಇದನ್ನೇ ಭಾಸ್ಕರಾಚಾರ್ಯರು

'ವೇದಾಸ್ತಾವತ್ ಯಜ್ಞಕರ್ಮಪ್ರವೃತ್ತಾಃ ಯಜ್ಞಾಃ ಪ್ರೋಕ್ತಾಸ್ತೇತು ಕಾಲಾಶ್ರಯೇಣ ।
ಶಾಸ್ತ್ರಾದಸ್ಮಾತ್ ಕಾಲಬೋಧೋ ಯತಃ ಸ್ಯಾತ್ ವೇದಾಂಗತ್ವಂ
ಜ್ಯೋತಿಷಸ್ಯೋಕ್ತಮಸ್ಮಾತ್ ॥' (ಸಿದ್ಧಾಂತ ಶಿರೋಮಣಿ)

ಎಂದು ತಿಳಿಸಿದ್ದಾರೆ. ವೇದಾಂಗಗಳಲ್ಲೆಲ್ಲಾ ಜ್ಯೋತಿಷಕ್ಕೆ ಹೀಗೆ ಪ್ರಧಾನಸ್ಥಾನವಿದೆ.

'ಯಥಾ ಶಿಖಾ ಮಯೂರಾಣಾಂ ನಾಗಾನಾಂ ಮಣಯೋ ಯಥಾ ।

ತದ್ವದ್ವೇದಾಂಗಶಾಸ್ತ್ರಾಣಾಂ ಗಣಿತಂ ಮೂರ್ಧನಿ ಸ್ಥಿತಮ್ ॥' (ವೇ. ಜ್ಯೋ. 4)

ಎಂದು ಇದನ್ನು ಹೇಳಿದ್ದಾರೆ. ಜ್ಯೋತಿಷವನ್ನು ವೇದಪುರುಷನ ಚಕ್ಷುಸ್ಸೆಂದು ವರ್ಣಿಸಿದ್ದಾರೆ.

ವೇದಾಂಗ ಜ್ಯೌತಿಷದ ಪ್ರತಿನಿಧಿಗಳಾಗಿ ಎರಡು ಗ್ರಂಥಗಳು ಉಪಲಬ್ಧವಾಗಿವೆ. ಯಜುರ್ವೇದಕ್ಕೆ ಸಂಬಂಧಿಸಿದ 'ಯಾಜುಷ ಜ್ಯೌತಿಷ'ದಲ್ಲಿ 43 ಶ್ಲೋಕಗಳಿವೆ. ಋಗ್ವೇದಕ್ಕೆ ಸೇರಿದ 'ಆರ್ಚ ಜ್ಯೌತಿಷ'ದಲ್ಲಿ 36 ಶ್ಲೋಕಗಳಿವೆ. ಎರಡು ಗ್ರಂಥಗಳಲ್ಲಿಯೂ ಅನೇಕ ಶ್ಲೋಕಗಳು ಸಮಾನವಾಗಿವೆ. ವೇದಕಾಲದ ಪ್ರಾಚೀನಜ್ಯೋತಿಷ ಶಾಸ್ತ್ರದವರ್ಣನೆ ಇವುಗಳಲ್ಲಿದೆ. ಈ ಶ್ಲೋಕಗಳು ಬಹಳ ಗೂಢವಾಗಿ ಕ್ಲಿಷ್ಟವಾಗಿರುವ ಕಾರಣ ಇಂದಿಗೂ ಅನೇಕ ಶ್ಲೋಕಗಳ ಅರ್ಥ ರಹಸ್ಯವಾಗಿಯೇ ಉಳಿದಿದೆ. ಈ ಶ್ಲೋಕಗಳಲ್ಲಿ ಅಡಗಿರುವ ಜ್ಞಾನವನ್ನರಿಯಲು ವಿದ್ವಾಂಸರು ಪ್ರಯತ್ನಿಸುತ್ತಲೇ ಇದ್ದಾರೆ. ವೇದಾಂಗ ಜ್ಯೌತಿಷದಲ್ಲಿನ ಜ್ಯೌತಿಷಶಾಸ್ತ್ರದ ಜ್ಞಾನ ಭಾರತೀಯ ಅಂದಿನ ಉನ್ನತ ನಾಗರೀಕತೆಯನ್ನು ಸೂಚಿಸುತ್ತದೆ. ಕಾಶೀನಿವಾಸಿಯಾದ ಸೋಮಾಕರನೆಂಬ ದಾಕ್ಷಿಣಾತ್ಯ ಪಂಡಿತನು ಇದಕ್ಕೆ ಭಾಷ್ಯವೊಂದನ್ನು ಬರೆದಿದ್ದಾನೆ. ಆದರೆ ಈ ಸೋಮಾಕರನ ಜೀವನಚರಿತೆಯಾಗಲೀ ಕಾಲವಾಗಲೀ ಸ್ಪಷ್ಟವಾಗಿ ನಮಗೆ ಗೊತ್ತಾಗಿಲ್ಲ.

ವೇದಾಂಗ ಜ್ಯೌತಿಷದ ಕರ್ತೃ 'ಲಗಧ' ಎಂಬುವರು. ಈತನು ಯಾರು, ಯಾವ ಕಾಲದವನು ಎಂಬುದು ನಮಗೆ ಗೊತ್ತಾಗಿಲ್ಲ. ಈತನ ಹೆಸರು ಆರ್ಚ ಜ್ಯೌತಿಷದಲ್ಲಿ ಬರುವ

ಪ್ರಣಮ್ಯ ಶಿರಸಾ ಕಾಲಮಭಿವಾದ್ಯ ಸರಸ್ವತೀಮ್ ।
ಕಾಲಜ್ಞಾನಂ ಪ್ರವಕ್ಷ್ಯಾಮಿ ಲಗಧಸ್ಯ ಮಹಾತ್ಮನಃ ॥

ಎಂಬುವ ಶ್ಲೋಕದಿಂದ ಗೊತ್ತಾಗುತ್ತದೆ.

ಆರ್ಚಜ್ಯೌತಿಷದಲ್ಲಿ 36 ಶ್ಲೋಕಗಳಿವೆ. ಐದೈದು ಶ್ಲೋಕಗಳ ಏಳು ಖಂಡಗಳಾಗಿ ಇವುಗಳನ್ನು ವಿಭಾಗಿಸಿದೆ—ಕೊನೆಯಲ್ಲಿ ಒಂದು ಶ್ಲೋಕ ಉಳಿಯುತ್ತದೆ. ವೈದಿಕಕಾಲದ ಜ್ಯೋತಿಷ್ಕರೂ, ಗಣಿತ ಶಾಸ್ತ್ರಜ್ಞರೂ ಎಷ್ಟು ನಿರೀಕ್ಷಣ ನಿಪುಣರಾಗಿದ್ದರೆಂಬುದು ಇದರಿಂದ ಗೊತ್ತಾಗುತ್ತದ. ತಿಥಿ, ಪರ್ವ, ವಿಷುವನ್‌ಗಳನ್ನು ಗುಣಿಸುವ ಸೂತ್ರಗಳು ಇಲ್ಲಿವೆ. ಆರಂಭದಲ್ಲಿನ ಶ್ಲೋಕ ಹೀಗಿದೆ :

'ಜ್ಯೋತಿಷಾಮಯನಂ ಕೃತ್ಸ್ನಂ ಪ್ರವಕ್ಷ್ಯಾಮ್ಯನುಪೂರ್ವಶಃ ।
ವಿಪ್ರಾಣಾಂ ಸಂಮತಂ ಲೋಕೇ ಯಜ್ಞಕಾಲಾರ್ಥಸಿದ್ಧಯೇ ॥'

'ಯೋ ಜ್ಯೋತಿಷಂ ವೇದ ಸ ವೇದಯಜ್ಞಂ' ಎಂದು ಇದು ಕೊನೆಗೊಳ್ಳುತ್ತದೆ.

ಪ್ರಾಚೀನಾರ್ಯರು ಆ ಕಾಲದಲ್ಲಿಯೇ ಸೂರ್ಯಚಂದ್ರರ ಭಾವೀಗತಿಗಳನ್ನು ಗುರುತಿಸುತ್ತಿದ್ದರು. ಈ ಬಗೆಯ ಗಣನೆಗೆ ಅವರು ಐದು ವರ್ಷಗಳ ಚಕ್ರವನ್ನು ಅಂಗೀಕರಿಸಿದ್ದರು. ಸೌರಮಾನವತ್ಸರ 366 ದಿನಗಳನ್ನೊಳಗೊಂಡಿದ್ದಿತು. ಐದು ವರ್ಷಗಳಲ್ಲಿ ಎಂದರೆ 1,830 ದಿನಗಳಲ್ಲಿ 124 ಪೂರ್ಣ ಪರ್ವಗಳು (62 ಪೌರ್ಣಮೆಗಳೂ 62 ಅಮಾವಾಸ್ಯೆಗಳು) ಇರುತ್ತವೆ. ದರ್ಶಪೂರ್ಣಮಾಸ ಯಾಗಗಳು ಬಹಳ ಪ್ರಧಾನವಾಗಿದ್ದ ಕಾರಣ ವೇದಕಾಲದಲ್ಲಿ ವರ್ಷ ಸೌರವಾಗಿಯೇ ಇರುತ್ತಿತ್ತು. ಈ ಐದು ವರ್ಷಗಳ ಯುಗ 62 ಚಾಂದ್ರ ಮಾಸಗಳನ್ನೊಳಗೊಂಡಿದ್ದ ಕಾರಣ ಅಂಥ ಐದು ಚಾಂದ್ರಮಾನ ವರ್ಷಗಳಿಗೆ ಎರಡು

ತಿಂಗಳುಗಳನ್ನು ಸೇರಿಸಿ ಸೌರಯುಗವನ್ನಾಗಿ ಮಾಡಿಕೊಳ್ಳಬೇಕಾಗಿತ್ತು. ಈ ಐದು ವರ್ಷಗಳ ಚಕ್ರದಲ್ಲಿನ ವತ್ಸರಗಳಿಗೆ ಕ್ರಮವಾಗಿ 'ಸಂವತ್ಸರ, ಪರಿವತ್ಸರ, ಇದಾವತ್ಸರ, ಅನುವತ್ಸರ ಮತ್ತು ಇದ್ವತ್ಸರ' ಎಂಬ ಹೆಸರುಗಳಿದ್ದವು. ಈ ವರ್ಷಾರಂಭ ಮಾಘಮಾಸ ಶುಕ್ಲಪಕ್ಷದಿಂದ, ಉತ್ತರಾಯಣದಿಂದ ಆಗುತ್ತಿತ್ತು. ಈ ಅಂಶವನ್ನು ಕೆಳಗಿನ ಶ್ಲೋಕದಲ್ಲಿ ಹೇಳಿದೆ:

ಸ್ವರಾಕ್ರಮೇತೇ ಸೋಮಾರ್ಕೌ ಯದಾ ಸಾಕಂ ಸವಾಸವೌ ।
ತದಾದಿಯುಗಂ ಮಾಘಸ್ತಪಃ ಶುಕ್ಲೋಽಯನಂ ಹ್ಯುದಕ್ ॥ (ಯಜು. ಪಾಠ)

ಸೂರ್ಯನ ಉತ್ತರಾಯಣ ಆರಂಭದಲ್ಲಿ ಮಾಘ ಪ್ರತಿಪದೆಯಂದು ಧನಿಷ್ಠಾ ನಕ್ಷತ್ರದೊಡನೆ ಸೂರ್ಯಚಂದ್ರರು ಕೂಡಿದಾಗ ವರ್ಷಾರಂಭವಾಗುತ್ತಿತ್ತು. ಈ ಶ್ಲೋಕ ಬಹಳ ಮುಖ್ಯವಾದುದು. ಇದರ ಆಧಾರದಿಂದ ಈ ಕೃತಿಯ ಕಾಲ ನಿರ್ಣಯವನ್ನು ಮಾಡಲು ವಿದ್ವಾಂಸರು ಯತ್ನಿಸಿದ್ದಾರೆ. ಸುಪ್ರಸಿದ್ಧ ವಿದ್ವಾಂಸರಾದ ಸುಧಾಕರ ದ್ವಿವೇದಿ, ಬಾರ್ಹಸ್ಪತ್ಯ, ಎಸ್. ಬಿ. ದೀಕ್ಷಿತ್, ಬಾಲಗಂಗಾಧರ ತಿಲಕ್, ಥೀಬೋ ಮುಂತಾದವರು ಈ ಸೂತ್ರಗಳನ್ನು ವಿವರಿಸಿದ್ದಾರೆ. ಆದರೆ ಒಮ್ಮತವಾದ ನಿರ್ಣಯಕ್ಕೆ ಬಂದಿಲ್ಲ.[4]

ಜ್ಯೌತಿಶ್ಶಾಸ್ತ್ರದ ಬೆಳವಣಿಗೆ ಬಹಳ ಮುಂದುವರಿದಿರುವ ಕಾರಣವೂ ವೇದಾಂಗ ಜ್ಯೋತಿಷದಲ್ಲಿನ ಸೂತ್ರಗಳು ಮುಂದೆ ಬದಲಾಗಿರುವುದರಿಂದಲೂ ಇಲ್ಲಿನ ಅಂಶಗಳನ್ನು ನಿರ್ಧರಿಸುವುದು ಕಠಿಣವಾಗಿದೆ.

(i) ವೇದಾಂಗ ಜ್ಯೋತಿಷದ ಪಂಚಾಂಗ (Calendar)ದ ಬಳಕೆ ಕ್ರಿ. ಪೂ. ಒಂದನೇ ಶತಮಾನದ ವೇಳೆಗೆ ಪ್ರಚಾರಕ್ಕೆ ಬಂದ ಜ್ಯೋತಿಶ್ಶಾಸ್ತ್ರ ಸಿದ್ಧಾಂತಗಳ ಕಾಲದಲ್ಲಿ ತಪ್ಪಿಹೋಯಿತು.

(ii) ವೇದಾಂಗ ಜ್ಯೋತಿಷವನ್ನು ಎಲ್ಲ ಗಣಕರೂ ಬಳಸುತ್ತಿರಲಿಲ್ಲ. ಇದು ಪವಿತ್ರವಾಗಿ ಬಿಟ್ಟ ಕಾರಣ ಅರ್ಥ ತಿಳಿದೋ ತಿಳಿಯದೆಯೋ ಇದನ್ನು ಹೇಳುತ್ತಿದ್ದುದು ಮಾತ್ರ ಉಂಟು.

(iii) ವೇದಾಂಗಜ್ಯೋತಿಷ ವೇದಕಾಲದ 27 ನಕ್ಷತ್ರಗಳ ಆಧಾರದಿಂದ ರಚಿತವಾಗಿದೆಯೇ ವಿನಾ ಮುಂದೆ ಬಳಕೆಗೆ ಬಂದ ದ್ವಾದಶ ರಾಶಿಗಳ ಆಧಾರದಿಂದಲ್ಲ. ಗ್ರೀಕರ ಆಗಮನಾನಂತರ ರಾಶಿಗಳ ಬಳಕೆ ರೂಢಿಗೆ ಬಂದಿತು.

(iv) ವೇದಾಂಗ ಜ್ಯೋತಿಷಕ್ಕೂ ಮುಂದಿನ ಸಿದ್ಧಾಂತಗಳಿಗೂ ಹಲವಾರು ಅಂಶಗಳಲ್ಲಿ ವ್ಯತ್ಯಾಸವಿದೆ. ವೇದಾಂಗ ಜ್ಯೋತಿಷದ ಕ್ರಮಕ್ಕನುಸಾರವಾಗಿ ಒಂದೊಂದು ನಕ್ಷತ್ರವನ್ನೂ 124 ಅಂಶಗಳನ್ನಾಗಿ ವಿಭಾಗಮಾಡಲಾಗಿದೆ. ಒಂದು ದಿನವನ್ನು 30 ಮುಹೂರ್ತಗಳಾಗಿಯೂ, ಮುಹೂರ್ತವೊಂದೊಂದನ್ನೂ ಎರಡೆರಡು ನಾಡಿಗಳನ್ನಾಗಿಯೂ, ಒಂದೊಂದು ನಾಡಿಯನ್ನೂ 10 1/20 ಕಲೆಗಳನ್ನಾಗಿಯೂ ವಿಭಾಗಿಸಿದೆ. ಸಿದ್ಧಾಂತಗಳಿಗನುಸಾರವಾಗಿ ಒಂದು ದಿನವನ್ನು 60 ಘಟೀಗಳನ್ನಾಗಿಯೂ ಒಂದೊಂದು ಘಟಿಯನ್ನು 60 ಪಲಗಳನ್ನಾಗಿಯೂ ವಿಭಾಗಿಸಲಾಗುತ್ತಿದೆ.

ಎಸ್. ಬಿ. ದೀಕ್ಷಿತ್ ಅವರು ಈ ಕೃತಿಯ ಕಾಲವಿಚಾರವಾಗಿ ವಿಸ್ತಾರವಾಗಿ ಚರ್ಚಿಸಿದ್ದಾರೆ.

---

4. 'The last word on this vedanga has yet to be uttered' p. 104, *Vedic Chronology Vedanga Jyothisha*–B. G. Tilak.

ಹಾಗೂ ಇದು ಕ್ರಿ. ಪೂ. 1400 ಸುಮಾರಿಗೆ ಸೇರಿದುದೆಂದು ನಿರ್ಣಯಿಸುತ್ತಾರೆ. ಇದರಲ್ಲಿ ಬರುವ ಜ್ಯೋತಿಶ್ಶಾಸ್ತ್ರದ ಉಲ್ಲೇಖಗಳಿಂದ ಆ ನಿರ್ಣಯಕ್ಕೆ ಅವರು ಬರುತ್ತಾರೆ. 'ಸ್ವರಾಕ್ರಮೇತೇ ಸೋಮಾರ್ಕೌ' ಎಂಬ ಪೂರ್ವೋದಾಹೃತ ಶ್ಲೋಕವೇ ಇದಕ್ಕೆ ಆಧಾರವಾಗಿದೆ. 'ಪ್ರಪದ್ಯತೇ ಶ್ರವಿಷ್ಠಾದೌ ಸೂರ್ಯಾಚಂದ್ರಮಸಾವುದಕ್' ಎಂಬ ಮುಂದಿನ ಶ್ಲೋಕವೂ ಇದನ್ನು ದೃಢಪಡಿಸುತ್ತದೆ. ಇವುಗಳ ಆಧಾರದಿಂದ ಆರ್ಚಿಬಿಷಪ್ ಪ್ರಾಟ್ ಅವರು ನಿರ್ಧರಿಸಿದಂತೆ ಇದು ಕ್ರಿ. ಪೂ. 1200 ಕ್ಕೂ ಹಿಂದಿನದೆಂದೂ ವಿದ್ವಾಂಸರು ನಿರ್ಧರಿಸಿದ್ದಾರೆ. ಇದು ಪದ್ಯಮಯವಾಗಿರುವುದರಿಂದ ಈಚಿನದೆಂದು ವಾದಿಸುವುದು ಸಾಧುವಾಗದು. ಇದರಲ್ಲಿ ಅನೇಕ ಪ್ರಾಚೀನ ಪದಪ್ರಯೋಗಗಳಿವೆ. ಧನಿಷ್ಠಾ ಎಂಬುವುದಕ್ಕೆ ಶ್ರವಿಷ್ಠಾ ಎಂದೂ, ಅಶ್ವಿನಿಗೆ ಅಶ್ವಯುಕ್ ಎಂದೂ, ಶತತಾರಕಾ ಎಂಬುವುದಕ್ಕೆ ಶತಭಿಷಕ್ ಎಂದೂ ಪ್ರಯೋಗ ಇಲ್ಲಿದೆ. ಯಾಸ್ಕ ಮತ್ತು ಪಾಣಿನಿಗಳ ಕಾಲದಲ್ಲಿ ಬಳಕೆ ತಪ್ಪಿದ್ದ 'ಘರ್ಮ' ಎಂಬ ಪದವನ್ನು 'ದಿವಸ' ಎಂಬ ಅರ್ಥದಲ್ಲಿ ಇಲ್ಲಿ ಪ್ರಯೋಗಿಸಿದೆ. ಇವೆಲ್ಲಾ ಇದರ ಪ್ರಾಚೀನತೆಗೆ ಕುರುಹುಗಳಾಗಿವೆ.

ಋಗ್ವೇದ ಮತ್ತು ಯಜುರ್ವೇದಕ್ಕೆ ಸೇರಿದ ಜ್ಯೋತಿಷ ಗ್ರಂಥಗಳಿರುವಂತೆ ಅಥರ್ವವೇದಕ್ಕೆ ಸೇರಿದಂತೆ ಅಥರ್ವ ಜ್ಯೌತಿಷ ಒಂದಿದೆ. ಇದು ಇತರಾಪೇಕ್ಷಯಾ ಈಚಿನದು. ಇದರಲ್ಲಿ 162 ಪದ್ಯಗಳಿವೆ, 17 ಪ್ರಕರಣಗಳು ಇದರಲ್ಲಿವೆ. ಮೂಹೂರ್ತ, ತಿಥಿ, ಕರಣ, ಯೋಗ, ವಾರ ಇವುಗಳ ಉಲ್ಲೇಖ ಇಲ್ಲಿದೆ. ವೇದಗಳ ಕಾಲಾನಂತರ ಇದರ ರಚನೆಯಾಗಿರಬಹುದೆಂದು ವಿದ್ವಾಂಸರ ಮತ. ಇದರಲ್ಲಿಯೂ ದ್ವಾದಶರಾಶಿಗಳ ಉಲ್ಲೇಖವಿಲ್ಲದೆ ಇರುವುದರಿಂದ ಸಿದ್ಧಾಂತಗಳಿಗಿಂತ ಇದು ಪ್ರಾಚೀನವಾದುದೇ ಆಗಿರಬೇಕು.

## ಕಲ್ಪ

ವೇದಾಂಗಗಳಲ್ಲಿ ಇದಕ್ಕೆ ಬಹಳ ಮಹತ್ವವಿದೆ. 'ಕಲ್ಪೋ ವೇದಹಿತಾನಾಂ ಕರ್ಮಣಾಂ ಆನುಪೂರ್ವ್ಯೇಣ ಕಲ್ಪನಾಶಾಸ್ತ್ರಮ್' ಎಂದು ಇದನ್ನು ವಿವರಿಸಿದ್ದಾರೆ. ವೇದದಲ್ಲಿ ಅನೇಕ ಕರ್ಮಗಳು ವಿಹಿತವಾಗಿವೆ. ಅವುಗಳನ್ನು ಕ್ರಮಪೂರ್ವಕವಾಗಿ ವ್ಯವಸ್ಥಿತವಾಗಿ ವಿವರಿಸುವ ಶಾಸ್ತ್ರ ಇದು. ವೇದಗಳಲ್ಲಿ ಯಾಗಾದಿಗಳ ವರ್ಣನೆ ವಿಪುಲವಾಗಿಯೂ ಸಂಕೀರ್ಣವಾಗಿಯೂ ಮಾಡಿರುವ ಕಾರಣ ಆ ನಿಯಮಗಳನ್ನೆಲ್ಲಾ ಸಂಗ್ರಹಿಸಿ ಸೂಚಿಸಬೇಕಾದ ಆವಶ್ಯಕತೆ ಒದಗಿತು. ಈ ಮಹತ್ಕಾರ್ಯವನ್ನು ಕಲ್ಪಗಳು ಮಾಡುತ್ತವೆ. ಇವು ಆದ್ದರಿಂದಲೇ ಸೂತ್ರರೂಪವಾಗಿವೆ. ಬ್ರಾಹ್ಮಣ ಯುಗದಲ್ಲಿ ಯಾಗಗಳೇ ಪ್ರಧಾನವಾದ ಧಾರ್ಮಿಕ ಕೃತ್ಯವಾಗಿತ್ತು. ಈ ವಿಧಾನ ಬಹಳ ವಿಸ್ತೃತವಾಗಿ ವರ್ಣಿಸಲಾದ ಕಾರಣ ಅವುಗಳನ್ನು ಸಮಗ್ರವಾಗಿ ವಿಮರ್ಶಿಸಿ ಋತ್ವಿಕ್ಕುಗಳಿಗೆ ಪ್ರಯೋಗಮಾಡಲು ಅನುಕೂಲಿಸುವಂತೆ ಸಂಕ್ಷೇಪವಾಗಿ ಸೂಚನೆ ಕೊಡುತ್ತವೆ ಈ ಕಲ್ಪಸೂತ್ರಗಳು.

ಕಲ್ಪಸೂತ್ರಗಳು ಪ್ರಧಾನವಾಗಿ ನಾಲ್ಕು ಬಗೆಯಾಗಿವೆ :

೧. ಶ್ರೌತಸೂತ್ರಗಳು
೨. ಗೃಹ್ಯಸೂತ್ರಗಳು
೩. ಧರ್ಮಸೂತ್ರಗಳು
೪. ಶುಲ್ಬಸೂತ್ರಗಳು

ಶ್ರೌತಸೂತ್ರಗಳು ಬ್ರಾಹ್ಮಣಗ್ರಂಥಗಳಲ್ಲಿ ವರ್ಣಿಸಿರುವ ಶ್ರೌತಗ್ನಿಯಿಂದ ಮಾಡಬೇಕಾದ

ಯಾಗಾದಿಗಳ ಅನುಷ್ಠಾನ ಕ್ರಮಗಳನ್ನೂ ನಿಯಮಗಳನ್ನೂ ವಿವರಿಸುತ್ತವೆ. ಗೃಹ್ಯಸೂತ್ರಗಳು ಗೃಹ್ಯಾಗ್ನಿಯಿಂದ ಮಾಡಬೇಕಾದ ವಿವಾಹೋಪನಯನ ಶ್ರಾದ್ಧಾದಿ ಗೃಹ್ಯಕರ್ಮಗಳ ಕ್ರಮವನ್ನು ನಿರೂಪಿಸುತ್ತವೆ. ಧರ್ಮಸೂತ್ರಗಳು ವರ್ಣಾಶ್ರಮ ಕರ್ತವ್ಯಗಳನ್ನೂ ರಾಜಧರ್ಮಾದಿಗಳನ್ನೂ ವಿವೇಚಿಸುತ್ತವೆ. ಕಲ್ಪಸೂತ್ರಗಳಲ್ಲಿ ಇವು ಬಹಳ ಪ್ರಧಾನವಾದುವು. ವೇದಿಯ ನಿರ್ಮಾಣ ಕ್ರಮವೇ ಮುಂತಾದ ವಿಚಾರಗಳು ಶುಲ್ಬಸೂತ್ರ ವಿಷಯ.

ಈ ನಾಲ್ಕು ಬಗೆಯ ಸೂತ್ರಗಳು ಪ್ರತಿವೇದಕ್ಕೂ ಶಾಖೆಗೂ ಸೇರಿದಂತೆ ಬೆಳೆದ ಕಾರಣ ಶಾಖೆಗಳು ಬೆಳೆದಂತೆ ಇವೂ ಅಪಾರವಾಗಿ ಬೆಳೆದವು.

ಈ ನಾಲ್ಕು ಬಗೆಯ ಸೂತ್ರಗಳಲ್ಲಿ ಶ್ರೌತಸೂತ್ರಗಳು ಬಹಳ ಪ್ರಾಚೀನವಾದವೆಂದು ವಿಮರ್ಶಕರ ಭಾವ. ಈ ಶ್ರೌತಸೂತ್ರಗಳ ಭಾಷೆ ಪಾಣಿನಿಯ ಕಾಲದ ಭಾಷೆಗಿಂತ ಹಿಂದಿನ ಕಾಲದ್ದೆಂದು ಸಾಮಾನ್ಯವಾಗಿ ಎಲ್ಲರೂ ಅಂಗೀಕರಿಸಿದ್ದಾರೆ. ಇವುಗಳ ಕಾಲವನ್ನು ನಿರ್ಧರಿಸುವಾಗ ಎರಡು ಅಂಶಗಳನ್ನು ನಾವು ನೆನಪಿನಲ್ಲಿಡಬೇಕು. ಮೊದಲನೆಯದಾಗಿ ಇವು ಉಪನಿಷತ್ತುಗಳ ಅನಂತರ ಕಾಲಕ್ಕೆ ಸೇರಿದವು. ಪಾಣಿನಿಗಳ ಕಾಲಕ್ಕೆ ಹಿಂದಿನವು. ಅರ್ಥಾತ್ ಇವು ಶ್ರುತಿಯುಗದ ಕೊನೆಯ ಭಾಗಕ್ಕೆ ಸೇರಿದವು. ವಿಮರ್ಶಕರು ಇವುಗಳ ಕಾಲವನ್ನು ಕ್ರಿ. ಪೂ. 1900 ರಿಂದ 1000 ವರೆಗೆ ಎಂದು ಸೂಚಿಸುತ್ತಾರೆ.[5] ಮೂರ್ತಿ ಪೂಜೆಯ ವಿಚಾರ ಇಲ್ಲಿ ಪ್ರಸ್ತುತವಾಗಿಲ್ಲವೆಂಬುದನ್ನೂ, ಪ್ರಾಣಿಗಳ ವಧೆಯನ್ನು ಇವು ಯಾಗಗಳಲ್ಲಿ ಅನುಮೋದಿಸುತ್ತವೆಂಬುದನ್ನೂ ಇದಕ್ಕೆ ಪೋಷಕವಾಗಿ ಹೇಳುತ್ತಾರೆ.

ಕಲ್ಪವೆಂಬ ಪದಕ್ಕೆ ಪ್ರಯೋಗ ಎಂಬ ಅರ್ಥವಿದೆ. ಆಪಸ್ತಂಬರು ಈ ಅರ್ಥದಲ್ಲಿ ಈ ಪದವನ್ನು ಬಳಸುತ್ತಾರೆ (ಆಪಸ್ತಂಬ 6-18-11). ವೈದ್ಯಶಾಸ್ತ್ರದಲ್ಲಿಯೂ ಈ ಶಬ್ದಕ್ಕೆ ಇದೇ ಅರ್ಥವ್ಯಾಪ್ತಿಯಿದೆ. ಮುಂಡಕೋಪನಿಷತ್ತಿನಲ್ಲಿ ಕಲ್ಪವೆಂಬುದು ಯಾಗ ವಿಧಾನವನ್ನು ವಿಧಿಸುವ ಗ್ರಂಥಭಾಗವೆಂಬ ಅರ್ಥದಲ್ಲಿ ಬಳಸಿದೆ. ಪಾಣಿನಿಗಳೂ ಇದೇ ಅರ್ಥದಲ್ಲಿ ಇದನ್ನು ಉಪಯೋಗಿಸುತ್ತಾರೆ. ಕಲ್ಪವೆಂಬ ಪದ ಬಹಳ ಪ್ರಾಚೀನವಾದುದು. ಪಾಣಿನಿಯ 'ಪುರಾಣ ಪ್ರೋಕ್ತೇಷು ಬ್ರಾಹ್ಮಣ ಕಲ್ಪೇಷು' ಎಂಬ ಸೂತ್ರ ಹಳೆಯ ಮತ್ತು ಹೊಸಕಲ್ಪಗಳ ಸೂಚನೆಯನ್ನು ಕೊಡುತ್ತದೆ. ಈಗ ಉಪಲಬ್ಧವಾಗಿರುವ ಕಲ್ಪಗಳಿಗಿಂತ ಹಿಂದಿನ ಕಲ್ಪಗಳಿದ್ದಿರಬೇಕೆಂದು ನಾವು ಊಹಿಸಬಹುದು. ಅವುಗಳೆಲ್ಲಾ ಪ್ರಾಯಃ ನಷ್ಟವಾಗಿಹೋಗಿರ ಬಹುದು. ಮೆಕ್ಡಾನಲ್‌ರು ಹೇಳುವಂತೆ ಬೌದ್ಧಧರ್ಮಕ್ಕೆ ವಿರುದ್ಧವಾಗಿ ಯಾಗಾದಿಗಳನ್ನು ಸಮರ್ಥಿಸಲು ಈ ಗ್ರಂಥಗಳನ್ನು ನಿರ್ಮಾಣಮಾಡಿದರೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಬುದ್ಧನಿಗಿಂತ ಬಹಳ ಹಿಂದೆಯೇ ಯಾಗವಿಧಾನದ ವ್ಯವಸ್ಥಿತ ನಿರೂಪಣೆ ಆಯಿತೆಂಬುದು ಸಹಜ. ಮುಂದೆ ಬುದ್ಧನ ವಿಚಾರವಾಹಿನಿಗೆ ಇದು ಕಾರಣವಾಯಿತೆಂದು ಸಹಜವಾಗಿ ನಾವು ಊಹಿಸಬಹುದು. ಮುಂದಿನ ಕಾಲಗಳಲ್ಲಿ ಕಲ್ಪಸೂತ್ರಗಳೆಲ್ಲದರ ಆಧಾರದ ಮೇಲೆ ಪೂರ್ವಮೀಮಾಂಸದರ್ಶನದ ನಿರೂಪಣೆ ಜೈಮಿನಿಗಳಿಂದ ಆಯಿತು.

ಶ್ರೌತಸೂತ್ರಗಳು ಮಾತ್ರವಲ್ಲದೆ ಧರ್ಮಸೂತ್ರಗಳೂ ಸಹ ಬೌದ್ಧಧರ್ಮದ ಉದಯಕ್ಕೂ ಮೊದಲೇ ರಚಿತವಾಗಿದ್ದವು. ಪಾಣಿನಿ ಯಾಸ್ಕರಿಗಿಂತ ಇವು ಪ್ರಾಚೀನವಾದವು. ಯಾಸ್ಕರು ಧರ್ಮಸೂತ್ರಗಳಿಂದ ಉಲ್ಲೇಖಿಸಿದ್ದಾರೆಂಬುದು ಇದನ್ನು ಸಮರ್ಥಿಸುತ್ತದೆ.

---

5. ನೋಡಿ ಸಿ. ವಿ. ವೈದ್ಯ, ಪುಟ 12

ಶ್ರೌತಸೂತ್ರಗಳು ಶ್ರುತಿಪ್ರತಿಪಾದಿತವಾದ ಯಾಗಗಳ ಕ್ರಮಬದ್ಧವಾದ ವರ್ಣನೆಯನ್ನು ಮಾಡುವುವೆಂದು ತಿಳಿಸಲಾಯಿತು. ದರ್ಶ, ಪೂರ್ಣಮಾಸ, ಪಿಂಡ ಪಿತೃಯಾಗ, ಆಗ್ರಯಣೇಷ್ಟಿ, ಚಾತುರ್ಮಾಸ್ಯ, ನಿರೂಢಪಶು, ಸೋಮಯಾಗ, ಸತ್ರ, ಗವಾಮಯನ, ವಾಜಪೇಯ, ರಾಜಸೂಯ, ಸೌತ್ರಾಮಣಿ, ಅಶ್ವಮೇಧ, ಪುರುಷ ಮೇಧ ಯಾಗ, ಅಹೀನ ಮುಂತಾದ ಯಾಗಗಳ ವಿಚಾರಗಳು ಇಲ್ಲಿವೆ. ಅಗ್ನಿಚಯನ ಹಾಗೂ ಪುನರಾಧನದ ವರ್ಣನೆ ಇಲ್ಲಿ ಮುಖ್ಯವಾಗಿ ಬಂದಿದೆ. ಮೇಲೆ ಹೇಳಿದ ಯಾಗಗಳ ಹೆಸರುಗಳಿಂದಲೇ ಶ್ರೌತಸೂತ್ರಗಳ ವಿಚಾರ ಬಹಳ ಕ್ಲಿಷ್ಟವಾದುದೆಂದು ಊಹಿಸಬಾರದು. ಇಲ್ಲಿ ಪ್ರಸ್ತುತವಾಗಿರುವ ಧಾರ್ಮಿಕ ವಿಚಾರಗಳು ಬಹಳ ಮಹತ್ವವನ್ನು ಹೊಂದಿವೆ. ಶ್ರೌತಯಾಗಗಳ ಅನುಷ್ಠಾನ ಈಗ ಅತ್ಯಂತ ವಿರಳವಾಗಿದೆ. ಆ ಕಾಲದ ಧಾರ್ಮಿಕ ರೂಢಿಗಳ ಪರಿಚಯವನ್ನು ನಾವು ಇವುಗಳಿಂದ ಪಡೆಬಹುದು.

### ಶ್ರೌತಸೂತ್ರಗಳು

ಋಗ್ವೇದಕ್ಕೆ ಸೇರಿದಂತೆ ಅಶ್ವಲಾಯನ ಮತ್ತು ಶಾಂಖಾಯನ ಶ್ರೌತಸೂತ್ರಗಳಿವೆ. ಯಾಗಗಳಲ್ಲಿ ಹೋತೃವಿನ ಕರ್ತವ್ಯಗಳನ್ನು ಪ್ರಾಧಾನವಾಗಿ ಇವು ಅನುಲಕ್ಷಿಸುತ್ತವೆ. ಪುರೋನುವಾಕ್ಯಾ, ಯಜ್ಯಾ ಹಾಗೂ ಶಸ್ತ್ರಗಳ ಅನುಷ್ಠಾನಪ್ರಕಾರ ನಿರೂಪಣೆ ಇಲ್ಲಿದೆ. ಅಶ್ವಲಾಯನ ಶ್ರೌತಸೂತ್ರದಲ್ಲಿ 12 ಅಧ್ಯಾಯಗಳಿವೆ. ಆಶ್ವಲಾಯನರು ಶೌನಕರ ಶಿಷ್ಯರಾಗಿದ್ದರು. ಪುನರುಕ್ತಿಗಳಿಲ್ಲದೆ, ಆವಶ್ಯಕವಾದ ಶಬ್ದಗಳನ್ನು ಮಾತ್ರ ಬಳಸುವ ಇದರ ಶೈಲಿ ನೇರವಾಗಿ ಮಾರ್ಮಿಕವಾಗಿದೆ. ಈ ಸೂತ್ರಗಳು ಪೂರ್ವಾರ್ಧ ಮತ್ತು ಉತ್ತರಾರ್ಧ ಎಂದು ಎರಡು ಭಾಗಗಳಲ್ಲಿವೆ. ಒಂದೊಂದರಲ್ಲಿಯೂ ಆರಾರು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದ್ದಲಿ ಹಲವಾರು ಖಂಡಗಳಿವೆ. ಒಟ್ಟು (96+68) 164 ಖಂಡಗಳಿವೆ. ಸಾಮಾನ್ಯವಾಗಿ ಒಂದೊಂದು ಖಂಡವೂ ಒಂದೊಂದು ದೀರ್ಘವಾದ ವಾಕ್ಯವಾಗಿದೆ. 'ನಮ ಆಚಾರ್ಯೇಭ್ಯೋನಮಃ ಶೌನಕಾಯ' ಎಂದು ಶೌನಕರ ಉಲ್ಲೇಖವಿಲ್ಲದೆ. ಇತರ ಆಚಾರ್ಯರುಗಳ ಅಭಿಪ್ರಾಯಗಳನ್ನು ಅಲ್ಲಲ್ಲಿ ಉಲ್ಲೇಖಿಸಿದೆ. ಇವರೆಲ್ಲ ಪ್ರಾಯಃ ಋಗ್ವೇದದ ಆಚಾರ್ಯರುಗಳೇ ಆಗಿದ್ದಾರೆ. ಋಗ್ವೇದಸಂಹಿತೆಯ ಮಂತ್ರಗಳನ್ನು ಅವುಗಳ ಮೊದಲ ಶಬ್ದಗಳಿಂದ ಉದಾಹರಿಸಿದೆ. ಇಂಥ ಸೂಕ್ತದಿಂದ ಇಷ್ಟು ಋಕ್ಕುಗಳು ಎಂದು ಉಲ್ಲೇಖಿಸುವ ಪದ್ಧತಿಯದೆ ದರ್ಶಪೂರ್ಣಮಾಸ, ಅಗ್ನ್ಯಾಧಾನಗಳಿಂದ ಆರಂಭವಾಗಿ ಕ್ರಮವಾಗಿ ಒಂದೊಂದನ್ನಾಗಿ ವಿವೇಚಿಸಿ ಉತ್ತರಾರ್ಧದಲ್ಲಿ ಉತ್ತಮ ಸತ್ರಗಳನ್ನೇ ಇಲ್ಲಿ ವಿವೇಚಿಸಿದ್ದಾರೆ.

ಇದರ ಮೊದಲ ಅಧ್ಯಾಯದಲ್ಲಿ ದರ್ಶಪೂರ್ಣಮಾಸದ ವಿಚಾರವಿದೆ. 'ಇತ್ಯೇವ ಜಪಿತ್ವಾ ಕೌತ್ಸೋ ಹಿಂಕರೋತಿ' ಎಂಬುದು ಸಾಮವಿಧಾನವನ್ನಿದು ಅಲಕ್ಷ್ಯಮಾಡಿಲ್ಲವೆಂಬುದನ್ನು ತೋರಿಸುತ್ತದೆ. ಪ್ರವರಗಳ ಉಲ್ಲೇಖ ವಿಚಾರ 'ಯಜಮಾನಸ ಆರ್ಷೇಯಾನ್ ಪ್ರವೃಣೀತೇ ಯಾವಂತಃ ಸ್ಯುಃ' ಎಂಬಲ್ಲಿದೆ. ಎರಡನೆಯ ಅಧ್ಯಾಯದ ವಿಷಯ ಅಗ್ನ್ಯಾಧಾನ. ಇದಕ್ಕೆ ಯುಕ್ತವಾದ ನಕ್ಷತ್ರಗಳ ವಿಚಾರವನ್ನಿಲ್ಲಿ ಕೊಟ್ಟಿದೆ. ಬ್ರಾಹ್ಮಣರಿಗೆ ವಸಂತಋತುವೂ, ಕ್ಷತ್ರಿಯ ವೈಶ್ಯೋಪಕ್ರುಷ್ಟರಿಗೆ 'ಗ್ರೀಷ್ಮ ವರ್ಷಾಶರದಃ' ಋತುಗಳೂ ವಿಧಿಸಲ್ಪಟ್ಟಿವೆ. ಪಿಂಡಪಿತೃ ಯಜ್ಞದವಿಚಾರ ಮುಂದಿದೆ. ಆಗ್ರಯಣ, ಕಾರೀರೀಇಷ್ಟಿ, ಚಾತುರ್ಮಾಸ್ಯ ಇವುಗಳ ವಿಚಾರ ಕ್ರಮವಾಗಿ ಇಲ್ಲಿ ಬಂದಿದೆ. ಮೂರನೇ ಅಧ್ಯಾಯದಲ್ಲಿ ಇಷ್ಟಿಯ ವರ್ಣನೆ ಇದೆ. 'ಸಮಿಧಮಿತಿ ವಸಿಷ್ಠಾನಾಮ್' ಎಂಬುವ ವಾಕ್ಯಗಳಿಂದ ಬೇರೆ ಬೇರೆ ಗೋತ್ರಗಳವರಲ್ಲಿ ಸಂಪ್ರದಾಯ

ಭೇದಗಳು ಉದ್ಭವಿಸಿದ್ದವೆಂಬುದನ್ನು ತೋರುತ್ತದೆ. ಸೌತ್ರಾಮಣಿಯ ವರ್ಣನೆ ಸಂಗ್ರಹವಾಗಿ ಬಂದಿದೆ—ಆದರೆ ಸುರಾಪಾನದ ಅವಕಾಶವನ್ನು ತಪ್ಪಿಸಲಾಗಿದೆ. 'ವಿಧ್ಯಪರಾಧೇ ಪ್ರಾಯಶ್ಚಿತ್ತಂ' ಎಂದು ಸೂಚಿಸಿ ಪ್ರಾಯಶ್ಚಿತ್ತಾದಿಗಳನ್ನು ತಿಳಿಸಿದ್ದಾರೆ. ನಾಲ್ಕನೇ ಅಧ್ಯಾಯದಲ್ಲಿ ಸೋಮಯಾಗ ನಿರೂಪಣೆ ಮಾಡಿದೆ. ಐದನೇ ಅಧ್ಯಾಯದಲ್ಲಿ ಪ್ರಾತಃಸವನ, ಮಾಧ್ಯಂದಿನ ಸವನ ಮತ್ತು ಸಾಯಂ ಸವನಗಳ ವಿಚಾರವೂ, ಆರರಲ್ಲಿ ಉಕ್ಥ ಮತ್ತು ಇತರ ಸಪ್ತ ಸಂಸ್ಥೆಗಳ ವಿಚಾರವೂ ವರ್ಣಿತವಾಗಿದೆ. ಉತ್ತರಾರ್ಧದಲ್ಲಿ ಹಲವಾರು ಸತ್ರಗಳ ವಿಷಯ ಚರ್ಚಿತವಾಗಿದೆ.

ಶುಕ್ಲಯಜುರ್ವೇದಕ್ಕೆ ಸೇರಿರುವ ಶ್ರೌತಸೂತ್ರ ಒಂದೇ ಒಂದು. ಇದು ಕಾತ್ಯಾಯನ ಶ್ರೌತಸೂತ್ರ. ಇದು ಗಾತ್ರದಲ್ಲಿ ದೊಡ್ಡದು. ಇದರಲ್ಲಿ 26 ಅಧ್ಯಾಯಗಳಿವೆ. ಶತಪಥ ಬ್ರಾಹ್ಮಣದಲ್ಲಿ ನಿರೂಪಿಸಿರುವ ಯಾಗಕ್ರಮವನ್ನಿಲ್ಲಿ ಅನುಸರಿಸಿದೆ. ಇದರ ರಹಸ್ಯಾರ್ಥಗಳನ್ನು ವಿಶದಪಡಿಸುವ ಕರ್ಕಾಚಾರ್ಯ ಕೃತವಾದ, 'ಕರ್ಕಭಾಷ್ಯ' ಪ್ರಸಿದ್ಧವಾಗಿದೆ.

ಬೋಧಾಯನ ಶ್ರೌತಸೂತ್ರ, ಆಪಸ್ತಂಬ ಶ್ರೌತಸೂತ್ರ, ಸತ್ಯಾಷಾಢ ವೈಖಾನಸ, ಭಾರದ್ವಾಜ ಮತ್ತು ಮಾನವ ಶ್ರೌತಸೂತ್ರಗಳು ಕೃಷ್ಣಯಜುರ್ವೇದಕ್ಕೆ ಸೇರಿವೆ. ಮಾನವ ಶ್ರೌತಸೂತ್ರ ಮೈತ್ರಾಯಣೀಯ ಶಾಖೆಗೆ ಸಂಬಂಧಿಸಿದೆ. ಉಳಿದವು ತೈತ್ತಿರೀಯ ಶಾಖೆಗೆ ಸಂಬಂಧಿಸಿವೆ. ಇವುಗಳಲ್ಲಿ ಬೋಧಾಯನ ಮತ್ತು ಆಪಸ್ತಂಬ ಶಾಖೆಗಳಿಗೆ ಸೇರಿದಂತೆ ಶ್ರೌತ, ಗೃಹ್ಯ, ಧರ್ಮ ಮತ್ತು ಶುಲ್ಬ ಸೂತ್ರಗಳು ಸಮಗ್ರವಾಗಿ ಉಪಲಬ್ಧವಾಗಿವೆ.

ಬೋಧಾಯನ ಶ್ರೌತಸೂತ್ರ ಅತ್ಯಂತ ಪ್ರಾಚೀನವಾದುದೆಂದು ಎಣಿಸಲಾಗಿದೆ. ಇದರಲ್ಲಿ 30 ಪ್ರಶ್ನಗಳಿವೆ ಅನೇಕ ಅಧ್ಯಾಯಗಳನ್ನಾಗಿ ಇವುಗಳನ್ನು ಜೋಡಿಸಿದೆ. ಅನೇಕಾನೇಕ ಕಂಡಿಕೆಗಳು ಅಧ್ಯಾಯದಲ್ಲಿವೆ. ಬ್ರಾಹ್ಮಣ ಗ್ರಂಥಗಳ ಶೈಲಿಯಲ್ಲಿರುವ ದೀರ್ಘವಾದ ಒಂದೊಂದು ವಾಕ್ಯ ಕಂಡಿಕೆಯಾಗಿದೆ ಗದ್ಯಶೈಲಿ ಸರಳವಾಗಿದೆ. ಸೂಕ್ಷ್ಮವಾದ ವಿವರಣೆಗಳನ್ನು ಇವು ಹೊಂದಿವೆ. ಇದರಲ್ಲಿ ಬರುವ ವಿಷಯ ಆಧಾನ ಪುನರಾಧಾನ, ಅಗ್ನಿಹೋತ್ರ, ದರ್ಶಪೂರ್ಣಮಾಸ, ಚಾತುರ್ಮಾಸ್ಯ, ಪಶುಬಂಧ, ವಾಜಪೇಯ, ರಾಜಸೂಯ, ಇಷ್ಟಿಗಳು, ಸೋಮ, ಅಶ್ವಮೇಧ, ದ್ವಾದಶಾಹ, ಅತಿರಾತ್ರ, ಬೃಹಸ್ಪತಿಸವ, ಸಾವಿತ್ರಚಯನ ಮುಂತಾದುವು. ಕೊನೆಯ ಪ್ರಶ್ನವೇ ಶುಲ್ಬ ಸೂತ್ರವಾಗಿದೆ. ಆಪಸ್ತಂಬ ಶ್ರೌತಸೂತ್ರ ಸರಳ ಸುಲಭವಾದ ಭಾಷೆಯಲ್ಲಿದೆ. ಇದರಲ್ಲಿ 25 ಪ್ರಶ್ನಗಳಿವೆ. ಒಂದೊಂದು ಪ್ರಶ್ನದಲ್ಲಿಯೂ ಹಲವಾರು ಕಂಡಿಕೆಗಳಿವೆ. ಒಂದೊಂದು ಕಂಡಿಕೆಯಲ್ಲಿ ಸುಮಾರು ಹನ್ನೆರಡು ಹದಿಮೂರು ಸೂತ್ರಗಳಿವೆ. ಒಟ್ಟು 588 ಕಂಡಿಕೆಗಳೂ 7,590 ಸೂತ್ರಗಳೂ ಇವೆ. ತೈತ್ತಿರೀಯ ಬ್ರಾಹ್ಮಣದಲ್ಲಿ ಚರ್ಚಿಸಿರುವ ಯಾಗಗಳ ವಿಚಾರವನ್ನು ಈ ಸೂತ್ರಗ್ರಂಥ ಅನುಲಕ್ಷಿಸುತ್ತದೆ. ಇದರಲ್ಲಿ ಋಗ್ವೇದ ಸಂಹಿತೆ, ಕೌಷೀತಕಿ ಬ್ರಾಹ್ಮಣ, ಪಂಚವಿಂಶ ಬ್ರಾಹ್ಮಣ, ಅಥರ್ವವೇದ ಹಾಗೂ ಅನೇಕ ಪ್ರಾಚೀನ ಬ್ರಾಹ್ಮಣಗಳಿಂದ ವಾಕ್ಯಗಳನ್ನು ಉದ್ಧರಿಸಿದೆ. ಕೆಲವು ಪ್ರಾಚೀನವಾದ ಆದರೆ ಈಗ ಉಪಲಬ್ಧವಿಲ್ಲದಿರುವ ಬ್ರಾಹ್ಮಣಗಳ ಹೆಸರುಗಳಿವೆ. ಕಂಕತಿ, ಕಾಲಬವಿ, ಶಾಟ್ಯಾಯನಿ, ಭಾಲ್ಲವಿಕ, ಕಳಿಂಗಾಯನಿಕ ಮುಂತಾದುವು ಇವುಗಳಲ್ಲಿ ಕೆಲವು. ಈ ಸೂತ್ರಗ್ರಂಥ ದರ್ಶಪೂರ್ಣಮಾಸದಿಂದ ಹಿಡಿದು ಅಶ್ವಮೇಧ, ಪುರುಷಮೇಧದವರೆಗಿನ ಎಲ್ಲ ಶ್ರೌತಯಾಗಗಳನ್ನು ವಿಸ್ತಾರವಾಗಿ ವಿವೇಚಿಸುತ್ತದೆ.

ಯಾಗ ಮಾಡುವವರು ಎಂದಿನಂತೆ ಪಶು, ಪ್ರಜೆ, ಅನ್ನೈಶ್ವರ್ಯಗಳನ್ನು ಬೇಡುತ್ತಿದ್ದರು— 'ರಾಯಸ್ಪೋಷಾಯ ಸುಪ್ರಜಾಸ್ತ್ವಾಯ. ಸುವೀರ್ಯಾಯೇತಿ ತೇಷ್ವಗ್ನಿಹೋತ್ರಮ್.'

ಯಾಗದಲ್ಲಿ ಪತ್ನಿಗೆ ಮುಖ್ಯವಾದ ಸ್ಥಾನವಿತ್ತು. ಯಾಗ ದೀಕ್ಷೆಯಲ್ಲಿ ಅವಳಿಗೂ ಭಾಗವಿತ್ತು. ದಕ್ಷಿಣೆಯ ಪ್ರದಾನ ಮುಖ್ಯವಾಗಿತ್ತು. 'ವಾಸೋ ಮಿಥುನಂ ಗಾವೌ ನವಂಚ ರಥಂ ದದಾತಿ ಸಾಧಾರಣಾನಿ ಸರ್ವೇಷಾಮ್' ಬಹಳ ಬಡವನಾದವನು ಒಂದು ಹಸುವನ್ನೇ ದಕ್ಷಿಣೆಯನ್ನಾಗಿ ಕೊಡಬಹುದಾಗಿತ್ತು. ಅನುಕೂಲವಿದ್ದವರು ಇದಕ್ಕೆ ಆರರಷ್ಟು ಅಥವಾ ಹನ್ನೆರಡರಷ್ಟು ಕೊಡಬಹುದಾಗಿತ್ತು. ಹಿರಣ್ಯಕೇಶೀ ಶ್ರೌತಸೂತ್ರಕ್ಕೇ ಸತ್ಯಾಷಾಢವೆಂಬ ಹೆಸರಿದೆ. ಇದು ಆಪಸ್ತಂಬಸೂತ್ರಕ್ಕಿಂತ ಅರ್ವಾಚೀನವಾದುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಸಾಮವೇದಕ್ಕೆ ಸೇರಿದ ಕಲ್ಪಸೂತ್ರಗಳಲ್ಲಿ ಅತ್ಯಂತ ಪ್ರಾಚೀನವಾದುದು ಆರ್ಷೇಯ ಕಲ್ಪಸೂತ್ರ. ಇದನ್ನು ರಚಿಸಿದ ಮಶಕರ ಹೆಸರಿನಿಂದ ಇದನ್ನು ಮಶಕಕಲ್ಪಸೂತ್ರವೆಂದೂ ಕರೆಯುತ್ತಾರೆ. ಸಾಮಗಾನದ ಹಾಗೂ ವಿಶಿಷ್ಟಾನುಷ್ಠಾನಗಳ ವಿವರಣೆ ಇಲ್ಲಿ ದೊರೆಯುತ್ತದೆ. ಪಂಚವಿಂಶ ಬ್ರಾಹ್ಮಣದ ಯಾಗಕ್ರಮಕ್ಕೆ ಅನುಸಾರವಾಗಿ ಇದರ ವಿವರಣೆ ಬೆಳೆದಿದೆ. ಲಾಟ್ಯಾಯನ ಶ್ರೌತಸೂತ್ರಕ್ಕಿಂತ ಇದು ಪ್ರಾಚೀನತರವಾದುದು. ಸಾಮವೇದದ ಕೌಥುಮಶಾಖೆಗೆ ಸಂಬಂಧಿಸಿದಂತೆ ಲಾಟ್ಯಾಯನ ಶ್ರೌತಸೂತ್ರವೂ. ರಾಣಾಯನೀಯ ಶಾಖೆಯ ದ್ರಾಹ್ಯಾಯಣ ಶ್ರೌತಸೂತ್ರವೂ, ಜೈಮಿನಿ ಶಾಖೆಗೆ ಸೇರಿದ ಜೈಮಿನೀಯ ಶ್ರೌತಸೂತ್ರವೂ ಉಪಲಬ್ಧವಾಗಿವೆ.

ಅಥರ್ವವೇದಕ್ಕೆ ಸೇರಿದಂತೆ ವೈತಾನ ಶ್ರೌತಸೂತ್ರವೆಂಬುದಿದೆ. ಇದು ಪ್ರಾಚೀನತರವಾದುದಲ್ಲ. ವೈತಾನವೆಂಬ ಶಬ್ದ ತ್ರಿವಿಧವಾದ ಅಗ್ನಿಗೆ ಸಂಬಂಧಿಸಿದ ಗ್ರಂಥವೆಂಬ ಅರ್ಥವನ್ನು ಕೊಡುತ್ತದೆ. ಇದು ಗೋಪಥಬ್ರಾಹ್ಮಣಕ್ಕನುಸಾರ ಅನೇಕ ಅಂಶಗಳನ್ನು ವಿವರಿಸುತ್ತದೆ. ಕಾತ್ಯಾಯನ ಶ್ರೌತಸೂತ್ರದ ಪ್ರಭಾವ ಇದರ ಮೇಲೆ ಬಿದ್ದಿರುವುದು ಗಮನಾರ್ಹವಾಗಿದೆ.

## ಗೃಹ್ಯಸೂತ್ರಗಳು

ಋಗ್ವೇದಕ್ಕೆ ಸೇರಿದ ಗೃಹ್ಯಸೂತ್ರಗಳಲ್ಲಿ ಆಶ್ವಲಾಯನ ಮತ್ತು ಶಾಂಖಾಯನ ಗೃಹ್ಯಸೂತ್ರಗಳು ಸರ್ವತ್ರ ಪ್ರಸಿದ್ಧವಾಗಿವೆ. ಆಶ್ವಲಾಯನ ಗೃಹ್ಯಸೂತ್ರದಲ್ಲಿ ನಾಲ್ಕು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯದಲ್ಲಿಯೂ ಅನೇಕಾನೇಕ ಖಂಡಗಳಿವೆ. ಗೃಹ್ಯಕರ್ಮ ಮತ್ತು ಸಂಸ್ಕಾರಗಳ ವರ್ಣನೆ ಇದರ ವಿಷಯವಾಗಿದೆ. ಅಲ್ಲಲ್ಲಿ ಮಹತ್ತ್ವಪೂರ್ಣವಾದ ವಿಚಾರಗಳೂ ಇರುವುದುಂಟು. ಋಷಿತರ್ಪಣಪ್ರಸಂಗದಲ್ಲಿ ಪ್ರಾಚೀನಾಚಾರ್ಯರುಗಳ ಹೆಸರುಗಳನ್ನು ನಿರ್ದೇಶಿಸಲಾಗಿದೆ. ಮತ್ತೆಲ್ಲಿಯೂ ಉಪಲಬ್ಧವಾಗದ ಈ ಹೆಸರುಗಳು ನಮಗೆ ಇಲ್ಲಿ ದೊರೆಯುತ್ತವೆ. ಮೂರನೆಯ ಅಧ್ಯಾಯದಲ್ಲಿ ವೇದಾಧ್ಯಯನದ ನಿಯಮಾಳಿಗಳ ವರ್ಣನೆ ಇದೆ ; ಉಪಾಕರಣದ ವರ್ಣನೆಯೂ ಇದೆ.

ಶಾಂಖಾಯನ ಗೃಹ್ಯಸೂತ್ರದಲ್ಲಿ 6 ಅಧ್ಯಾಯಗಳಿವೆ. ಗೃಹ್ಯಕರ್ಮಗಳ ನಿರೂಪಣೆಯೇ ಇದರ ವಿಷಯ. ಗೃಹನಿರ್ಮಾಣ, ಗೃಹಪ್ರವೇಶ ಮುಂತಾದವುಗಳ ವಿವರಣೆಯೂ ಪ್ರಸಕ್ತಾನುಪ್ರಸಕ್ತವಾಗಿ ಬರುತ್ತದೆ. ಕೌಷೀತಕ ಶಾಖೆಗೆ ಸೇರಿದಂತೆ ಕೌಷೀತಕ ಗೃಹ್ಯಸೂತ್ರವೂ ಪ್ರಕಾಶಕ್ಕೆ ಬಂದಿದೆ. ಇದನ್ನು ರಚಿಸಿದವರು ಶಾಂಬವ್ಯರು. ಆ ಕಾರಣ ಇದಕ್ಕೆ ಶಾಂಬವ್ಯ ಗೃಹ್ಯಸೂತ್ರವೆಂಬ ಹೆಸರೂ ಇದೆ. ಇದರಲ್ಲಿ 5 ಅಧ್ಯಾಯಗಳಿವೆ. ಅಧ್ಯಾಯದಲ್ಲಿ ಅನೇಕಾನೇಕ ಸೂತ್ರಗಳಿವೆ. ಗ್ರಂಥಾರಂಭದಲ್ಲಿ ವಿವಾಹ ವರ್ಣನೆ ಇದೆ. ಉಪನಯನದ ವಿವರಣೆ ವಿಸ್ತಾರವಾಗಿದೆ. ವೈಶ್ವದೇವ, ಕೃಷಿಕರ್ಮ, ಶ್ರಾದ್ಧವರ್ಣನೆ ಇವುಗಳ ನಿರೂಪಣೆ ಇದೆ. ಶ್ರಾದ್ಧವು ಗೃಹ್ಯಕರ್ಮವಾದ ಕಾರಣ ಕೊನೆಯಲ್ಲಿ ಬಂದಿರುವುದು ಸಕ್ರಮವಾಗಿಯೂ, ಸಯುಕ್ತಿಕ

ವಾಗಿಯೂ ಇದೆ.

ಶುಕ್ಲಯಜುರ್ವೇದಕ್ಕೆ ಸೇರಿದ ಏಕಮಾತ್ರ ಗೃಹ್ಯಸೂತ್ರ 'ಪಾರಸ್ಕರ ಗೃಹ್ಯಸೂತ್ರ'. ಇದರ ಮೂರು ಕಾಂಡಗಳಲ್ಲಿ ಪ್ರಥಮ ಕಾಂಡದಲ್ಲಿ ಅವಸಥ್ಯ ಅಗ್ನಿಯ ಆಧಾನ, ವಿವಾಹ, ಗರ್ಭಧಾರಣದಿಂದ ಅನ್ನಪ್ರಾಶನದವರೆಗಿನ ಸಂಸ್ಕಾರಗಳ ವರ್ಣನೆ ಇದೆ. ದ್ವಿತೀಯಕಾಂಡದಲ್ಲಿ ಚೂಡಾಕರಣ, ಉಪನಯನ, ಸಮಾವರ್ತನ, ಪಂಚಮಹಾಯಜ್ಞ, ಸೀತಾಯಜ್ಞಾದಿಗಳ ವಿವೇಚನೆಯೂ, ತೃತೀಯ ಕಾಂಡದಲ್ಲಿ ಶ್ರಾದ್ಧಕಲ್ಪ ಹಾಗೂ ಅವಕೀರ್ಣ ಪ್ರಾಯಶ್ಚಿತ್ತಾದಿಗಳ ನಿರೂಪಣೆಯೂ ಇದೆ. ಈ ಗ್ರಂಥಕ್ಕೆ ವ್ಯಾಖ್ಯಾನಗಳು ಅಪಾರವಾಗಿ ಬೆಳೆದಿವೆ. ಕರ್ಕಾಚಾರ್ಯರು, ಜಯರಾಮ, ಹರಿಹರ, ಗದಾಧರ ಮತ್ತು ವಿಶ್ವನಾಥರೆಂಬ ಐದು ಜನ ಭಾಷ್ಯಕಾರರು ಈ ಗೃಹ್ಯಸೂತ್ರಕ್ಕೆ ಪ್ರಸಿದ್ಧವಾದ ಭಾಷ್ಯ ಬರೆದಿದ್ದಾರೆ.

ಕೃಷ್ಣಯಜುರ್ವೇದಕ್ಕೆ ಸೇರಿದಂತೆ ಬೋಧಾಯನ ಗೃಹ್ಯಸೂತ್ರ, ಆಪಸ್ತಂಬ ಗೃಹ್ಯಸೂತ್ರ, ಭರದ್ವಾಜ ಗೃಹ್ಯಸೂತ್ರಗಳು ಪ್ರಸಿದ್ಧವಾಗಿವೆ. ಆಪಸ್ತಂಬಗೃಹ್ಯಸೂತ್ರದಲ್ಲಿ 23 ಖಂಡಗಳಿವೆ. ವಿವಾಹ, ಉಪನಯನ, ಉಪಾಕರ್ಮೋತ್ಸರ್ಜನ, ಸಮಾವರ್ತನ, ಮಧುಪರ್ಕ, ಸೀಮಂತೋನ್ನಯನ ಮುಂತಾದ ಅನೇಕಾನೇಕ ಸಂಸ್ಕಾರಗಳ ವಿವರಣೆ ಇದೆ. ಇದಕ್ಕೆ ಮುಖ್ಯಸೂತ್ರವೆಂಬ ಹೆಸರೂ ಉಂಟು. ಹೇಮಾದ್ರಿಯೇ ಮೊದಲಾದವರು ತಮ್ಮ ತಮ್ಮ ಗ್ರಂಥಗಳಲ್ಲಿ ಇದರಿಂದ ಉದಾಹರಿಸಿದ್ದಾರೆ. ಇದರಲ್ಲಿ ಐದು ದೊಡ್ಡ ದೊಡ್ಡ ಖಂಡಗಳು ಅಥವಾ ಅಧ್ಯಾಯಗಳು ಇರುವ ಕಾರಣ ಇದನ್ನು 'ಗೃಹ್ಯಪಂಚಿಕಾ' ಎಂದು ಕರೆಯುತ್ತಿದ್ದರು. ಇದಕ್ಕೆ ಆದಿತ್ಯದರ್ಶನ, ಬ್ರಾಹ್ಮಣಬಲ ಮತ್ತು ದೇವಪಾಲರು ಬರೆದ ಟೀಕೆಗಳಿವೆ.

ಸಾಮವೇದಕ್ಕೆ ಸೇರಿದಂತೆ ಕೌಥುಮಶಾಖೆಯ ಗೋಭಿಲ ಗೃಹ್ಯಸೂತ್ರ ಪ್ರಸಿದ್ಧವಾದುದು. ಅನೇಕ ದೃಷ್ಟಿಗಳಿಂದ ಇದು ಪೂರ್ಣತಮವಾಗಿ ಮಹತ್ವಯುತವಾಗಿದೆ. 'ಖಾದಿರಗೃಹ್ಯಸೂತ್ರ' ಗೋಭಿಲಕ್ಕಿಂತ ಸಂಕ್ಷೇಪವಾಗಿದೆ. ಇದು ರಾಣಾಯನೀಯ ಶಾಖೆಗೆ ಸೇರಿದೆ; ಜೈಮಿನೀಯ ಗೃಹ್ಯಸೂತ್ರವೂ ಸುಂದರವಾಗಿದೆ. ಇದರಲ್ಲಿ ಎರಡು ಖಂಡಗಳಿವೆ. ಮೊದಲ ಖಂಡದಲ್ಲಿ 24 ಕಂಡಿಕೆಗಳೂ ಎರಡನೆಯದರಲ್ಲಿ ಒಂಭತ್ತು ಕಂಡಿಕೆಗಳೂ ಇವೆ. ಇದಕ್ಕೆ ಶ್ರೀನಿವಾಸಾಧ್ವರಿಯ ಟೀಕೆ ಇದೆ.

ಕೌಶಿಕ ಗೃಹ್ಯಸೂತ್ರವೆಂಬುದು ಅಥರ್ವವೇದಕ್ಕೆ ಸಂಬಂಧಿಸಿದೆ. ಇದರಲ್ಲಿ 14 ಅಧ್ಯಾಯ ಗಳಿವೆ. ಇದಕ್ಕೆ ಹಾರಿಲ ಮತ್ತು ಕೇಶವರ ವ್ಯಾಖ್ಯೆಗಳಿವೆ. ಪ್ರಾಚೀನ ಭಾರತದ ಯಾತುವಿದ್ಯೆಯ ಪರಿಚಯ ಇಲ್ಲಿ ಆಗುತ್ತದೆ. ಅಥರ್ವವೇದದ ನಾನಾ ವಿಧವಾದ ಅನುಷ್ಠಾನಗಳ ವಿಧಿ ವಿಧಾನವನ್ನಿದು ಪೂರ್ಣರೂಪದಿಂದ ವಿವರಿಸುತ್ತದೆ. ವೈದ್ಯಶಾಸ್ತ್ರದ ಗಿಡಮೂಲಿಕೆಗಳ ವಿಚಾರ ವನ್ನು ತಿಳಿಸುವ ಅಪೂರ್ವ ಗ್ರಂಥ ಇದಾಗಿದೆ.

## ಧರ್ಮಸೂತ್ರಗಳು

ಧರ್ಮಸೂತ್ರಗಳು ಕಲ್ಪದ ಮುಖ್ಯವಾದ ಅಂಗ. ವೇದದ ಒಂದೊಂದು ಶಾಖೆಗೂ ಸೇರಿ ದಂತೆ ಕಲ್ಪಗಳಿದ್ದವು. ಒಂದೊಂದು ವೇದಕ್ಕೂ ಸೇರಿದಂತೆ ಶ್ರೌತ ಗೃಹ್ಯ ಮತ್ತು ಧರ್ಮಸೂತ್ರಗಳು ಬೆಳೆದಿದ್ದವು. ಕೆಲವು ಶಾಖೆಗಳ ಧರ್ಮಸೂತ್ರಗಳು ಇಂದು ನಮಗೆ ದೊರಕಿಲ್ಲ. ಆಶ್ವಲಾಯನ, ಶಾಂಖಾಯನ ಮತ್ತು ಮಾನವಶಾಖೆಗಳಿಗೆ ಸೇರಿದಂತೆ ಶ್ರೌತಸೂತ್ರಗಳೂ ಗೃಹ್ಯಸೂತ್ರಗಳೂ ಉಪಲಬ್ಧವಾಗಿವೆ. ಧರ್ಮಸೂತ್ರಗಳು ಉಪಲಬ್ಧವಾಗಿಲ್ಲ. ಬೋಧಾಯನ, ಆಪಸ್ತಂಬ ಹಾಗೂ ಹಿರಣ್ಯಕೇಶೀ ಕಲ್ಪಸೂತ್ರಗಳಿಗೆ

ಸೇರಿದಂತೆ ಆಯಾ ಧರ್ಮಸೂತ್ರಗಳು ದೊರಕಿವೆ. ಆದರೆ ಬೇರೆ ಬೇರೆ ವೇದಗಳ ಧರ್ಮಸೂತ್ರಗಳ ಉಲ್ಲೇಖವನ್ನು ಪ್ರಾಚೀನರು ಮಾಡಿದ್ದಾರೆ. ಗೃಹ್ಯಸೂತ್ರಗಳಿಗೂ ಧರ್ಮಸೂತ್ರಗಳಿಗೂ ಇರುವ ವೈಲಕ್ಷಣ್ಯವೇನು ? ಪಾಕ ಯಜ್ಞಗಳು ಮತ್ತು ಸಂಸ್ಕಾರಗಳು ಅದರಲ್ಲೂ ಮುಖ್ಯವಾಗಿ ವಿವಾಹೋಪನಯನಾದಿಗಳ ಅನುಷ್ಠಾನ ಪ್ರಕಾರಗಳನ್ನೂ ವಿಧಿವಿಧಾನಗಳನ್ನೂ ಗೃಹ್ಯಸೂತ್ರಗಳು ವಿವರವಾಗಿ ವಿವೇಚಿಸುತ್ತವೆ. ಇಲ್ಲಿ ಪ್ರಯೋಗ ಅಥವಾ ಅನುಷ್ಠಾನಕ್ಕೆ ಹೆಚ್ಚಿನ ಪ್ರಾಧಾನ್ಯವಿದೆ. ಧರ್ಮಸೂತ್ರಗಳೂ ಈ ವಿಚಾರಗಳನ್ನೇ ವಿವೇಚಿಸಿದರೂ ಅವುಗಳ ದೃಷ್ಟಿ ಬೇರೆಯಾಗಿದೆ. ಇವು ಆಚಾರಗಳಿಗೂ, ಕರ್ತವ್ಯಕರ್ಮಗಳಿಗೂ ವ್ಯವಹಾರಕ್ಕೂ ಹೆಚ್ಚಿನ ಮಹತ್ವ ಕೊಡುತ್ತವೆ. ಚಾತುರ್ವರ್ಣ್ಯಗಳ ಕರ್ತವ್ಯಗಳು ಹಾಗೂ ಆಶ್ರಮಧರ್ಮಗಳು ಇವುಗಳನ್ನು ವಿಶೇಷವಾಗಿ ಧರ್ಮಸೂತ್ರಗಳು ವಿವೇಚಿಸುತ್ತವೆ. ಇದಲ್ಲದೆ ರಾಜಧರ್ಮವನ್ನು ಕುರಿತು ಅದು ವಿಚಾರ ನಡೆಸುತ್ತದೆ. ರಾಜನ ಕರ್ತವ್ಯಗಳು, ರಾಜ-ಪ್ರಜೆಗಳ ಸಂಬಂಧ, ವ್ಯವಹಾರ ನಿಯಮಗಳು, ಪ್ರಾಯಶ್ಚಿತ್ತ ವಿಧಾನಗಳು ಇವುಗಳೆಲ್ಲಾ ಧರ್ಮಸೂತ್ರದಲ್ಲಿ ಬರುವ ವಿಶೇಷಾಂಶಗಳು.

ಉಪಲಬ್ಧವಾಗಿರುವ ಧರ್ಮಸೂತ್ರಗಳಲ್ಲೆಲ್ಲಾ ಗೌತಮಧರ್ಮಸೂತ್ರ ಪ್ರಾಚೀನ ತಮವಾದುದು. ಇದು ಸಾಮವೇದಕ್ಕೆ ಸೇರಿದುದು. ರಾಣಾಯನೀಯ ಶಾಖೆಗೆ ಸೇರಿದ ಅವಾಂತರ ಶಾಖೆಗಳಲ್ಲಿ ಗೌತಮಶಾಖೆಯೂ ಒಂದು. ಇದರಲ್ಲಿ 28 ಅಧ್ಯಾಯಗಳಿವೆ. ವರ್ಣಧರ್ಮ, ರಾಜಧರ್ಮ, ನಿತ್ಯಕರ್ಮ ಮತ್ತು ಪ್ರಾಯಶ್ಚಿತ್ತಗಳು ಇವುಗಳ ಪ್ರತಿಪಾದನೆ ಇಲ್ಲಿದೆ. ಯಾಜ್ಞವಲ್ಕ್ಯ, ಕುಮಾರಿಲ, ಶಂಕರರು ಮುಂತಾದವರು ಇದರ ನಿರ್ದೇಶ ಮಾಡಿದ್ದಾರೆ. ಗೌತಮರು ಎಂಟು ಆತ್ಮ ಗುಣಗಳು ಪ್ರಧಾನವೆಂದು ಸಾರಿ ಹೇಳಿ ಚತ್ವಾರಿಂಶತ್ ಸಂಸ್ಕಾರಗಳು (40 ಸಂಸ್ಕಾರಗಳು) ಈ ಆತ್ಮ ಗುಣವಿಕಾಸಕ್ಕೆ ಸಹಾಯಕವಾಗಬೇಕೆಂದು ಮೊತ್ತಮೊದಲಾಗಿ ಸಾರಿದ್ದಾರೆ. ಈ ಗ್ರಂಥಕ್ಕೆ ಮಸ್ಕರಿ ಭಾಷ್ಯವಿದೆ.

ಕೃಷ್ಣಯಜುರ್ವೇದಕ್ಕೆ ಸೇರಿದಂತೆ ಪ್ರಾಚೀನವಾದ ಧರ್ಮಸೂತ್ರ ಬೋಧಾಯನರದು. ಇವರ ಗೃಹ್ಯಸೂತ್ರದಲ್ಲಿ ಧರ್ಮಸೂತ್ರದ ಉಲ್ಲೇಖ ಸೂಚಿತವಾಗಿದೆ. ಈ ಗ್ರಂಥ 4 ಪ್ರಶ್ನ ಅಥವಾ ಖಂಡಗಳಲ್ಲಿದೆ. ಇದರ ಭಾಷೆಯೂ ಪ್ರಾಚೀನ ಪ್ರಯೋಗಗಳಿಂದ ಕೂಡಿ ಈ ಗ್ರಂಥದ ಪ್ರಾಚೀನತೆಯನ್ನು ಸಮರ್ಥಿಸುತ್ತದೆ. ಬೋಧಾಯನರ ಅನೇಕ ಸೂತ್ರಗಳು ಆಪಸ್ತಂಬ ಮತ್ತು ವಸಿಷ್ಠ ಧರ್ಮಸೂತ್ರಗಳಲ್ಲಿ ಅಕ್ಷರಶಃ ದೊರಕುತ್ತವೆ. ಇದಕ್ಕೆ ಗೋವಿಂದಸ್ವಾಮಿಗಳ ಭಾಷ್ಯವಿದೆ.

ಆಪಸ್ತಂಬ ಕಲ್ಪಸೂತ್ರದ 28 ಮತ್ತು 29ನೇ ಪ್ರಶ್ನಗಳು ಆಪಸ್ತಂಬ ಧರ್ಮಸೂತ್ರಗಳೆಂದು ವಿಖ್ಯಾತವಾಗಿವೆ. ಇದರ ಭಾಷೆಯು ಬಹಳ ಪ್ರಾಚೀನವಾದುದು. ಅಪಾಣಿನೀಯ ಪ್ರಯೋಗಗಳು ಇಲ್ಲಿ ಅಧಿಕವಾಗಿವೆ. ಅಪೂರ್ವವಾದ ಅನೇಕ ಶಬ್ದಗಳ ಪ್ರಯೋಗ ನಮಗೆ ಇಲ್ಲಿ ಗೋಚರಿಸುತ್ತದೆ. ಇದೆಲ್ಲದರಿಂದ ಇದರ ಪ್ರಾಚೀನತೆ ಸ್ವತಃ ಸಿದ್ಧವಾಗುತ್ತದೆ. ಕಾಣ್ವ, ಕುಣಿಕ, ಕುತ್ಸ, ಕೌತ್ಸ, ಪುಷ್ಕರಸಾದಿ, ವಾರ್ಷ್ಯಾಯಣಿ, ಶ್ವೇತಕೇತು, ಹಾರೀತ ಮುಂತಾದ ಪ್ರಾಚೀನ ಧರ್ಮಸೂತ್ರಕಾರರುಗಳ ಉಲ್ಲೇಖವನ್ನು ಆಪಸ್ತಂಬರು ಮಾಡಿದ್ದಾರೆ. ಮೀಮಾಂಸಾಶಾಸ್ತ್ರದ ಅನೇಕ ಪಾರಿಭಾಷಿಕ ಶಬ್ದಗಳೂ ಇಲ್ಲಿವೆ. ಅನೇಕ ವಿಷಯಗಳಲ್ಲಿ ಜೈಮಿನಿಗಳ ನಿರ್ಣಯವನ್ನು ಸೂಚಿಸಲಾಗಿದೆ. ಇಲ್ಲಿ ಧರ್ಮಶಾಸ್ತ್ರದ ಅನೇಕ ಮಾನ್ಯಸಿದ್ಧಾಂತಗಳ ಸುಂದರ ನಿರೂಪಣೆ ಇದೆ.

ಆಪಸ್ತಂಬರು ದಕ್ಷಿಣ ಭಾರತಕ್ಕೆ ಸೇರಿದವರೇ ಅಥವಾ ಉತ್ತರ ಭಾರತಕ್ಕೆ ಸೇರಿದವರೇ

ಎಂಬ ವಿಚಾರದಲ್ಲಿ ವಿದ್ವಾಂಸರಲ್ಲಿ ಮತಭೇದವಿದೆ. 'ಉದೀಚ್ಯವೃತ್ತಿಶ್ಚೇದಾಸನ ಗತೇಷೂದಪಾತ್ರಾಸಯನಮ್' ಎಂಬುವುದರಿಂದ ಇವರು ದಾಕ್ಷಿಣಾತ್ಯರೆಂದು ಡಾ|| ಭ್ಯೂಲರ್ ಮೊದಲಾದವರ ಅಭಿಪ್ರಾಯವಾದರೆ ಇವರು ಉತ್ತರದೇಶದವರೆಂದು ಮತ್ತು ಕೆಲವರು ವಿದ್ವಾಂಸರು ಸೀಮಂತ ಪ್ರಕರಣದಲ್ಲಿ ಉದಾಹರಿಸಿದ ಮಂತ್ರದ್ವಯದಲ್ಲಿ ಬರುವ ಸಾಲ್ವದೇಶ, ಯಮುನಾ, ಯೌಗಂಧರಿ ಮುಂತಾದ ಶಬ್ದಗಳ ಆಧಾರವನ್ನು ಹೇಳಿ, ಅಭಿಪ್ರಾಯಪಡುತ್ತಾರೆ. (ಆಪ. ಗೃಹ್ಯ-14-3)

ಹಿರಣ್ಯಕೇಶೀ ಧರ್ಮಸೂತ್ರ ಇದೇ ಶಾಖೆಯ ಕಲ್ಪಸೂತ್ರದ 26 ಮತ್ತು 27ನೇ ಪ್ರಶ್ನಗಳಾಗಿವೆ. ಆಪಸ್ತಂಬ ಧರ್ಮಸೂತ್ರದ ಸಂಕ್ಷಿಪ್ತರೂಪ ಇದು. ಆಪಸ್ತಂಬರ ಅನೇಕ ಸೂತ್ರಗಳನ್ನು ಇಲ್ಲಿ ಅಖಂಡವಾಗಿ ತೆಗೆದುಕೊಂಡಿದೆ. ಇದಕ್ಕೆ ಮಹಾದೇವನ ಟೀಕೆ ಇದೆ.

ನಮ್ಮ ಸ್ಮೃತಿಕಾರರಲ್ಲಿ ವಸಿಷ್ಠರು ಉನ್ನತವಾದ ಸ್ಥಾನವನ್ನು ಹೊಂದಿದ್ದಾರೆ. ಇವರ ಧರ್ಮಶಾಸ್ತ್ರ ಮಹತ್ವಪೂರ್ಣವಾಗಿದೆ. ಕುಮಾರಿಲರು ತಂತ್ರವಾರ್ತಿಕದಲ್ಲಿ ವಸಿಷ್ಠಧರ್ಮಶಾಸ್ತ್ರ ಋಗ್ವೇದಕ್ಕೆ ಸಂಬಂಧಿಸಿದೆಯೆಂದು ಹೇಳುತ್ತಾರೆ. ಋಗ್ವೇದದ ಅಸ್ಯವಾಮೀಯಸೂಕ್ತ, ಹವಿಷ್ಮಾಂತೀಯ ಹಾಗೂ ಅಘಮರ್ಷಣ ಸೂಕ್ತದಿಂದ ಮಂತ್ರಗಳನ್ನು ಇವರು ಉಲ್ಲೇಖಿಸಿರುವಂತೆ ತೈತ್ತಿರೀಯ ಸಂಹಿತೆಯಿಂದಲೂ ಅನೇಕ ಮಂತ್ರಗಳನ್ನು ಉದಾಹರಿಸಿದ್ದಾರೆ. ವಸಿಷ್ಠರ ಧರ್ಮಶಾಸ್ತ್ರ ಮುಂದಿನಕಾಲದಲ್ಲಿ ಪರಿವರ್ತಿತವಾಗಿ, ಪರಿವರ್ಧಿತವಾಗಿ ಪ್ರಚಾರಕ್ಕೆ ಬಂದಿತು. ಗೌತಮಧರ್ಮಸೂತ್ರಕ್ಕೂ ಇದಕ್ಕೂ ನಿಕಟವಾದ ಸಂಬಂಧವಿದೆ ಅರ್ಥಶಃ ಶಬ್ದಶಃ ಅನೇಕ ಸಾಮ್ಯಗಳು ಇವೆರಡಕ್ಕೂ ಇವೆ. ಯಾಜ್ಞವಲ್ಕ್ಯರು ವಸಿಷ್ಠರನ್ನು ಪ್ರಾಚೀನ ಸ್ಮೃತಿಕಾರರಲ್ಲೊಬ್ಬರೆಂದು (1-4) ಉದಾಹರಿಸಿದ್ದಾರೆ. ವೃದ್ಧವಸಿಷ್ಠರೆಂಬ ಸ್ಮೃತಿಕಾರರು ಈ ವಸಿಷ್ಠರಿಂದ ಬೇರೆಯಾದವರೆಂದು ಗೊತ್ತಾಗುತ್ತದೆ.

ಲೋಕದಲ್ಲಿ ಧರ್ಮವನ್ನಾಚರಿಸಬೇಕು. ಅಧರ್ಮವನ್ನು ಆಚರಿಸಬಾರದು. ಸತ್ಯಪರರಾಗಬೇಕು. ಅಸತ್ಯದೂರರಾಗಬೇಕು. ಜೀವನದ ಲಕ್ಷ್ಯ ಉನ್ನತವಾದ ವಿಚಾರಗಳ ಕಡೆ ಹರಿಯಬೇಕು. ಕ್ಷುದ್ರವಾದುದರ ಕಡೆ ಹೋಗಬಾರದು. ಉನ್ನತಾದರ್ಶಗಳ ಅನುಷ್ಠಾನ ಮತ್ತು ಪಾಲನೆಯಿಂದ ಸಮಾಜ ಮತ್ತು ವ್ಯಕ್ತಿಜೀವನ ಶುದ್ಧವಾಗಿ ಆಧ್ಯಾತ್ಮಿಕಸಿದ್ಧಿಗೆ ನೆರವಾಗಬೇಕು. ಇಂಥ ಜೀವನದರ್ಶನವನ್ನರಳಿಸುವ ಗುರಿ ಧರ್ಮಸೂತ್ರಗಳದು.

## ಶುಲ್ಬಸೂತ್ರ

ಕಾತ್ಯಾಯನ ರಚಿತವಾದ ಶುಲ್ಬಸೂತ್ರ ಕಾಶಿಯಲ್ಲಿ ಪ್ರಕಾಶಿತವಾಗಿದೆ. ಇದರಲ್ಲಿ 7 ಕಂಡಿಕೆಗಳಿವೆ. ಮೊದಲು ಬರುವುದು ಪರಿಭಾಷಾಪ್ರಕರಣ. ವೇದಿನಿರ್ಮಾಣ, ಚತುಸ್ರಾದಿಕ್ಷೇತ್ರ, ಹಾಗೆಯೇ ಚಿತಿ ಮುಂತಾದುವುಗಳ ನಿರೂಪಣೆ ಇಲ್ಲಿದೆ. ವೈದಿಕ ಯುಗದಲ್ಲಿ ರೂಢಿಯಲ್ಲಿದ್ದ ಜ್ಯಾಮಿತಿಯ ಪರಿಚಯ ನಮಗೆ ಇಲ್ಲಿ ಆಗುತ್ತದೆ. ಇವುಗಳ ವೈಜ್ಞಾನಿಕದೃಷ್ಟಿ ನಮ್ಮನ್ನು ಬೆರಗುಗೊಳಿಸುತ್ತದೆ.

ಹೀಗೆ ಕಲ್ಪಸೂತ್ರಗಳ ಪ್ರಪಂಚ ವಿಸ್ತಾರವಾಗಿ ವೈವಿಧ್ಯಪೂರ್ಣವಾಗಿದೆ. ಮೇಲೆ ಹೇಳಿದ ಆರು ವೇದಾಂಗಗಳೂ ವೇದೋಕ್ತವಾದ ಅನುಷ್ಠಾನಗಳನ್ನು ಆಚರಿಸುವುದರಲ್ಲಿ ಉಪಕಾರ ವಾಗಿರುವುದರಿಂದ ಇವು ವೇದಾಂಗಗಳೆಂಬ ಹೆಸರನ್ನು ಪಡೆದವು. ವೇದಗಳ ಉಪದೇಶ ವನ್ನರಿಯಲೂ ಹಾಗೆಯೇ ಆಚರಿಸಲೂ ಇವು ಅನಿವಾರ್ಯವಾಗಿವೆ.

## ಅನುಕ್ರಮಣಿಗಳು

ಕಾಲಾಂತರದಲ್ಲಿ ವೇದವಾಙ್ಮಯದ ರಕ್ಷಣೆಗಾಗಿ ಒಂದು ಹೊಸ ಶೈಲಿಯ ಗ್ರಂಥ ರಚನೆ ಆರಂಭವಾಯಿತು. ಅಪಾರವಾದ ವೇದಸೂಕ್ತಗಳೆಲ್ಲದರ ಋಷಿ ದೇವತೆ ಛಂದಸ್ಸು ಮೊದಲಾದವುಗಳನ್ನು ಹಾಗೆಯೇ ಸ್ಮರಣದಲ್ಲಿಟ್ಟುಕೊಳ್ಳುವುದು ಬಹಳ ಕಠಿಣವಾದ ಕಾರಣ ಇವುಗಳನ್ನೆಲ್ಲಾ ನೆನಪಿಗೆ ತಂದುಕೊಡಲು ಸಂಗ್ರಹರೂಪವಾದ ಸೂಚಿಕೆಗಳು ನಿರ್ಮಾಣವಾದವು. ಈ ಗ್ರಂಥಗಳಿಗೆ ಅನುಕ್ರಮಣಿಗಳೆಂಬ ಹೆಸರು ಪ್ರಸಿದ್ಧವಾಗಿದೆ. ಪ್ರತಿಯೊಂದು ವೇದಕ್ಕೂ ಅದಕ್ಕೆ ಸೇರಿದ ಅನುಕ್ರಮಣಿಗಳು ಬೆಳೆದವು. ಈ ಅನುಕ್ರಮಣಿಗಳಿಂದ ಅಪಾರವಾದ ಸಹಾಯವಾಯಿತು. ವೇದವಾಙ್ಮಯದ ಸಮಗ್ರವಾದ ರಕ್ಷಣೆ ಇದರಿಂದ ಸಾಧ್ಯವಾಯಿತು. ಇವು ವೇದಾಂಗಗಳಾಗದಿದ್ದರೂ ವೇದರಕ್ಷಣೆಗೆ ಮೀಸಲಾದ ಇವು ಅಲ್ಲಿರುವ ವಿಚಾರಗಳನ್ನು ವಿವೇಚಿಸುವ ಕಾರಣ ಮಹತ್ತ್ವವನ್ನು ಹೊಂದಿದವು. ವೇದವಾಙ್ಮಯ ಹೆಚ್ಚುಕಡಿಮೆಯಾಗದೆ ಅವಿಕಲವಾಗಿ ಅಂದು ಹೇಗೋ ಹಾಗೆಯೇ ಇಂದೂ ಉಪಲಬ್ಧವಾಗಲಿದು ಸಹಾಯಮಾಡಿತು.

ಅನುಕ್ರಮಣಿಗಳನ್ನು ರಚಿಸಿದವರಲ್ಲಿ ಶೌನಕರು ಮತ್ತು ಕಾತ್ಯಾಯನರು ಸುಪ್ರಸಿದ್ಧರು. ಈ ಆಚಾರ್ಯರುಗಳು ಅವರ ಕಾಲದಲ್ಲಿ ಉಪಲಬ್ಧವಾಗಿದ್ದ ಆಯಾ ವೇದ ಭಾಗಗಳ ಆದ್ಯಂತಗಳನ್ನು ನಿರ್ಧರಗೊಳಿಸಿ ಒಂದೊಂದು ಸೂಕ್ತದ ದೇವತೆ, ಛಂದಸ್ಸು ಮುಂತಾದುವುಗಳನ್ನು ವಿವರಿಸಿ ಸೂಚಿಕೆಗಳನ್ನು ನಿರ್ಮಾಣಮಾಡಿದರು. ಷಡ್ಗುರು ಶಿಷ್ಯರು ಋಕ್ಸರ್ವಾನುಕ್ರಮಣಿಯ ವೃತ್ತಿಯ ಭೂಮಿಕೆಯಲ್ಲಿ ಶೌನಕರು ಬರೆದ ಹತ್ತು ಗ್ರಂಥಗಳನ್ನು ಆರ್ಷಾನುಕ್ರಮಣೀ, ಛಂದೋನುಕ್ರಮಣೀ, ದೇವತಾನುಕ್ರಮಣೀ, ಅನುವಾಕಾನುಕ್ರಮಣೀ, ಸೂಕ್ತಾನುಕ್ರಮಣೀ, ಋಗ್ವಿಧಾನ, ಪಾದವಿಧಾನ, ಬೃಹದ್ದೇವತಾ, ಪ್ರಾತಿಶಾಖ್ಯ ಮತ್ತು ಶೌನಕಸ್ಮೃತಿಗಳೆಂಬುದಾಗಿ ಉದಾಹರಿಸಿದ್ದಾರೆ.

ಋಕ್ಸಂಹಿತೆಯ ಹತ್ತು ಮಂಡಲಗಳಲ್ಲಿನ ಸೂಕ್ತಗಳ ಸಂಖ್ಯೆ, ಅವುಗಳ ದ್ರಷ್ಟಾರರಾದ ಋಷಿಗಳ ಹೆಸರುಗಳು, ಅವುಗಳ ಛಂದಸ್ಸು, ಅವುಗಳು ಉದ್ದೇಶಿಸುವ ದೇವತೆಗಳ ಹೆಸರುಗಳು, ಅಲ್ಲಿರುವ ಅನುವಾಕಗಳ ಸಂಖ್ಯೆ—ಇವುಗಳನ್ನೆಲ್ಲಾ ಸರಳವಾದ ಅನುಷ್ಟುಪ್ ಶ್ಲೋಕಗಳಲ್ಲಿ ಶೌನಕರು ತಮ್ಮ ಆರ್ಷಾನುಕ್ರಮಣೀ, ಛಂದೋನುಕ್ರಮಣೀ, ದೇವತಾನುಕ್ರಮಣೀ, ಅನುವಾಕಾನುಕ್ರಮಣೀ ಮತ್ತು ಸೂಕ್ತಾನುಕ್ರಮಣೀಗಳಲ್ಲಿ ತಿಳಿಸಿದ್ದಾರೆ.

ಋಗ್ವಿಧಾನವೆಂಬುದರಲ್ಲಿ ಋಗ್ವೇದ ಮಂತ್ರಗಳನ್ನು ಯಾವ ಯಾವ ಕಾರ್ಯಸಿದ್ಧಿಗಾಗಿ ಹೇಗೆ ಬಳಸಬೇಕೆಂಬುದನ್ನು ತಿಳಿಸಿದ್ದಾರೆ. ಸಾಮವೇದಕ್ಕೆ ಸೇರಿದಂತೆ ಸಾಮವಿಧಾನ ಬ್ರಾಹ್ಮಣ ಈ ಕೆಲಸವನ್ನು ನಿರ್ವಹಿಸುತ್ತದೆ.

### ಬೃಹದ್ದೇವತೆ

ಅನುಕ್ರಮಣಿಗಳ ಶ್ರೇಣಿಯಲ್ಲಿ ಇದಕ್ಕೆ ಅದ್ವಿತೀಯವಾದ ಸ್ಥಾನವಿದೆ. ಋಗ್ವೇದ ದೇವತೆಗಳ ರಹಸ್ಯವನ್ನಿದು ಪ್ರಕಾಶಪಡಿಸುತ್ತದೆ. ಇದರಲ್ಲಿ 8 ಅಧ್ಯಾಯಗಳಿವೆ. ಐದೈದು ಪದ್ಯಗಳ ವರ್ಗಗಳು, ಒಂದೊಂದು ಅಧ್ಯಾಯದಲ್ಲಿಯೂ ಇವೆ. ಇದರ ಮೊದಲನೆಯ ಮತ್ತು ಎರಡನೆಯ ಅಧ್ಯಾಯದಲ್ಲಿನ 125 ಶ್ಲೋಕಗಳು ಪೀಠಿಕಾರೂಪವಾಗಿವೆ. ಈ

ಭೂಮಿಕೆಯು ಬಹಳ ಮಹತ್ತ್ವವನ್ನು ಹೊಂದಿ ಅನೇಕ ವ್ಯಾಕರಣ ವಿಚಾರಗಳನ್ನು ಚರ್ಚಿಸುತ್ತದೆ. ನಿರುಕ್ತದಲ್ಲಿನ ವಿವೇಚನೆಯಂತೆ ಇಲ್ಲಿಯೂ ಶಬ್ದ ವಿಭಜನೆ. ನಿಪಾತ, ಅವ್ಯಯ, ಸರ್ವನಾಮ, ಸಂಜ್ಞೆ, ಸಮಾಸ ಮುಂತಾದವುಗಳ ವಿವರಣೆ ಬಂದಿದೆ. ಎರಡನೇ ಅಧ್ಯಾಯದ 26ನೇ ವರ್ಗದಿಂದ ಆರಂಭಿಸಿ ಗ್ರಂಥಾಂತ್ಯದವರೆಗೂ ಋಗ್ವೇದಸಂಹಿತೆಯ ಒಂದೊಂದು ಸೂಕ್ತದ ದೇವತೆಗಳ ನಿರ್ದೇಶವನ್ನು ಕ್ರಮವಾಗಿ ಮಾಡುತ್ತದೆ. ಕೆಲವು ಕಡೆ ಸೂಕ್ತಾಂತರ್ಗತವಾದ ಋಕ್ಕುಗಳ ದೇವತೆಗಳ ನಿರ್ದೇಶನವನ್ನೂ ಕೊಡಲಾಗಿದೆ. ಶೌನಕರು ಸುಮ್ಮನೆ ದೇವತೆಗಳ ಪಟ್ಟಿಯೊಂದನ್ನು ನೀರಸವಾಗಿ ನಿರೂಪಿಸುತ್ತಿಲ್ಲ. ಆಯಾ ಸೂಕ್ತಿಗಳ ವಿಚಾರದಲ್ಲಿ ಉಪಲಬ್ಧವಾದ ಆಖ್ಯಾನಗಳನ್ನು ಬಹಳ ಸುಂದರವಾಗಿ ನಿರೂಪಣೆ ಮಾಡುತ್ತಾರೆ. ಇಲ್ಲಿನ ವೈದಿಕಾಖ್ಯಾನಗಳ ನಿರೂಪಣೆ ಸೊಗಸಾಗಿ ಈ ಗ್ರಂಥಕ್ಕೆ ಜೀವನಾಡಿಯಂತೆ ಇದೆ. ಕಾವ್ಯಶೈಲಿಯಲ್ಲಿ ಮಾಡಿರುವ ಈ ನಿರೂಪಣೆಯ ಕಾರಣ ಇದು ಕಥಾಸಾಹಿತ್ಯದ ಆದಿಗ್ರಂಥವೆನಿಸಿಕೊಳ್ಳಲು ಅರ್ಹವಾಗಿದೆ.

ಯಾಸ್ಕಾಚಾರ್ಯರ ನಿರುಕ್ತಕ್ಕೂ ಕಾತ್ಯಾಯನರ ಸರ್ವಾನುಕ್ರಮಣಿಗೂ ನಡುವಿನ ಕಾಲಕ್ಕೆ ಈ ಕೃತಿ ಸೇರುತ್ತದೆ. ಶೌನಕರು ಯಾಸ್ಕರ ಅನೇಕ ಅಭಿಪ್ರಾಯಗಳನ್ನು ಅಖಂಡವಾಗಿ ತೆಗೆದುಕೊಂಡಿದ್ದಾರೆ. ಹಾಗೆಯೇ ಅವರ ಮಾತುಗಳನ್ನೂ ತೆಗೆದು ಹೇಳಿದ್ದಾರೆ. ಕಾತ್ಯಾಯನರು ತಮ್ಮ ಸರ್ವಾನುಕ್ರಮಣಿಯಲ್ಲಿ ಬೃಹದ್ದೇವತೆಯನ್ನು ಉಪಯೋಗಿಸಿಕೊಂಡಿದ್ದಾರೆ. ಸರ್ವಾನುಕ್ರಮಣಿಯನ್ನು ರಚಿಸಿದ ಕಾತ್ಯಾಯನರು ವೈಯ್ಯಾಕರಣ ಕಾತ್ಯಾಯನರಿಗಿಂತ ಭಿನ್ನರು. ಅನೇಕ ಅಪಾಣಿನೀಯ ಪ್ರಯೋಗಗಳು ಇದನ್ನು ಸೂಚಿಸಿರುವುವು ಈ ಕಾತ್ಯಾಯನರು ಪಾಣಿನಿಗಳಿಗಿಂತ ಹಿಂದಿನವರು. ಯಾಸ್ಕರು, ಶೌನಕರಿಗಿಂತ ಈಚಿನವರೆಂದು ಗೊತ್ತಾಗುತ್ತದೆ. ಬೃಹದ್ದೇವತೆ ಕ್ರಿ. ಪೂ. 500ರ ಸುಮಾರಿಗೆ ಸೇರಿದೆಯೆಂದು ವಿಮರ್ಶಕರು ಭಾವಿಸುತ್ತಾರೆ.

ಬೃಹದ್ದೇವತೆಯಲ್ಲಿಯೂ ಅನೇಕ ಪ್ರಾಚೀನಾಚಾರ್ಯರುಗಳ ಉಲ್ಲೇಖ ಬಂದಿದೆ. ಶಾಕಟಾಯನ, ಯಾಸ್ಕ, ಶಾಕಪೂಣಿ, ಗಾಲವ ಮುಂತಾದವರು ಇವರಲ್ಲಿ ಮುಖ್ಯರಾದವರು. ಬೃಹದ್ದೇವತೆಯಲ್ಲಿಯೂ 'ಆಚಾರ್ಯಶೌನಕ' ಎಂದು ಶೌನಕರ ಉಲ್ಲೇಖವಿರುವ ಕಾರಣ ಈ ಗ್ರಂಥವನ್ನು ಸ್ವತಃ ಶೌನಕರು ರಚಿಸಲಿಲ್ಲವೆಂದೂ, ಅವರ ಸಮಕಾಲೀನರಾದವರು ಮತ್ತೆ ಯಾರೋ ರಚಿಸಿರಬೇಕೆಂದೂ ಪ್ರೊ. ಮೆಕ್ಡಾನಲ್ ಅವರು ಅಭಿಪ್ರಾಯಪಡುತ್ತಾರೆ. ಆದರೆ ಷಡ್ಗುರುಶಿಷ್ಯರು ಈ ಕೃತಿಯನ್ನು ಶೌನಕರೇ ಬರೆದರೆಂದು ಸಮರ್ಥಿಸುತ್ತಾರೆ.

## ಸರ್ವಾನುಕ್ರಮಣೀ

ಕಾತ್ಯಾಯನರು ಇದನ್ನು ರಚಿಸಿದವರು. ಋಗ್ವೇದ ಸಂಬಂಧವಾದ ಎಲ್ಲ ಆವಶ್ಯಕ ವಿಚಾರಗಳನ್ನು ತಿಳಿಸುವ ಕಾರಣ ಇದು ಬಹಳ ಪ್ರಸಿದ್ಧವಾಗಿದೆ. ಇದು ಸೂತ್ರರೂಪದಲ್ಲಿದೆ. ಒಂದೊಂದು ಸೂಕ್ತದ ಮೊದಲ ಪದವನ್ನೂ ಅನಂತರ ಆ ಸೂಕ್ತದಲ್ಲಿರುವ ಋಕ್ಕುಗಳ ಸಂಖ್ಯೆಯನ್ನೂ, ಸೂಕ್ತ ಋಷಿಯ ಗೋತ್ರನಾಮವನ್ನೂ, ಸೂಕ್ತ ದೇವತೆಯ ಹೆಸರನ್ನೂ, ಮಂತ್ರಗಳ ಛಂದಸ್ಸುಗಳ ಉಲ್ಲೇಖವನ್ನೂ ಕ್ರಮವಾಗಿ ಕೊಡಲಾಗಿದೆ. ಋಗ್ವೇದಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಏಕತ್ರ ಸಂಕಲನಮಾಡಿ ಕೊಟ್ಟಿರುವುದು ಇದರ ವೈಶಿಷ್ಟ್ಯ.

ಮಾಧವಭಟ್ಟನೂ ಋಗ್ವೇದಾನುಕ್ರಮಣಿಯೊಂದನ್ನು ಬರೆದಿದ್ದಾನೆ.

ಶುಕ್ಲಯಜುಸ್ಸರ್ವಾನುಕ್ರಮ ಸೂತ್ರವನ್ನು ಕಾತ್ಯಾಯನರೇ ಬರೆದಿದ್ದಾರೆಂಬ ಪ್ರತೀತಿ

ಇದೆ. ಇದರಲ್ಲಿ 8 ಅಧ್ಯಾಯಗಳಿವೆ. ಸೂತ್ರಾರ್ಥವಿವರಣೆಗಾಗಿ ಭಾಷ್ಯವೊಂದೂ ವಿರಚಿತವಾಗಿದೆ. ಮಹಾಯಾಜ್ಞಿಕ ಶ್ರೀದೇವನೆಂಬುವನು ಈ ಭಾಷ್ಯವನ್ನು ಬರೆದಿದ್ದಾನೆ. ಇದರಲ್ಲಿ ಮಾಧ್ಯಂದಿನಸಂಹಿತೆಯ ದೇವತೆ, ಋಷಿ, ಛಂದಸ್ಸುಗಳ ವಿವರಣೆ ಇದೆ. ಗ್ರಂಥಾರಂಭದಲ್ಲಿ ಋಷಿ, ಛಂದಸ್ಸುಗಳ ಜ್ಞಾನದ ಮಹಿಮೆಯನ್ನು ತಿಳಿಸಿದೆ. ಋಷಿ, ದೇವತೆ, ಛಂದಸ್ಸುಗಳ ಜ್ಞಾನವಿಲ್ಲದೆ ವೇದ ಮಂತ್ರವನ್ನು ಹೇಳಿದವನು ಪಾಪಿಯಾಗುವನು ಹಾಗೂ ಮೃತ್ಯುವನ್ನು ಹೊಂದುವನು ಎಂದು ಹೇಳಿದೆ ಇದರಲ್ಲಿ ಯಾಗವಿಧಾನದ ವರ್ಣನೆಯೂ ಇದೆ.

ಸಾಮವೇದಕ್ಕೆ ಸೇರಿದಂತೆ ಶ್ರೌತಯಾಗಕ್ಕೆ ಸಂಬಂಧಿಸಿದ ಗ್ರಂಥಗಳು ಅನೇಕವಾಗಿ ಉಪಲಬ್ಧವಾಗಿವೆ. ಇವುಗಳಲ್ಲಿ ಅನೇಕ ಕೃತಿಗಳು ಇನ್ನೂ ಹಸ್ತಲಿಖಿತ ಪ್ರತಿಗಳಲ್ಲಿಯೇ ಇದೆ. ಇವುಗಳಲ್ಲಿ ಕಲ್ಪಾನುವಾದ ಸೂತ್ರ (ಕಾಶಿಯಲ್ಲಿ ಪ್ರಕಾಶಿತ), ನಿದಾನಸೂತ್ರ, ಪಂಚವಿಧಾನಸೂತ್ರ (ಜರ್ಮನಿಯಲ್ಲಿ) ಲಘುಋಕ್‌ತಂತ್ರ ಸಂಗ್ರಹ (ಲಾಹೋರಿನಲ್ಲಿ) ಮತ್ತು ಸಾಮಸಪ್ತಲಕ್ಷಣ (ಕಾಶೀ ಸಂಸ್ಕೃತ ಸೀರೀಸ್) ಇವು ಮುಖ್ಯವಾದವು.

ಅಥರ್ವವೇದಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳಿವೆ. ಅಥರ್ವಗಳ ವಿಭಾಗ ವಿಚಾರ, ಮಂತ್ರೋಚ್ಚಾರಣೆ ಹಾಗೂ ವಿನಿಯೋಗ ಮುಂತಾದ ಆವಶ್ಯಕ ವಿಚಾರಗಳು ಇಲ್ಲಿ ಉಪಲಬ್ಧವಾಗಿವೆ. ಅಥರ್ವವೇದೀಯ ಪರಿಶಿಷ್ಟದಲ್ಲಿನ 49ನೇ ಪರಿಶಿಷ್ಟ ಚರಣ ವ್ಯೂಹವಾಗಿದೆ. ಈ ವೇದಕ್ಕೆ ಐದು ಲಕ್ಷಣಗಳನ್ನು ಇದರಲ್ಲಿ ಹೀಗೆ ಹೇಳಿದೆ: 1. ಚತುರಧ್ಯಾಯೀ, 2. ಪ್ರಾತಿಶಾಖ್ಯ, 3. ಪಂಚಪಟಲಿಕಾ, 4. ದಂತ್ಯೋಷ್ಠವಿಧಿ ಮತ್ತು 5. ಬೃಹತ್ಸರ್ವಾನುಕ್ರಮಣೀ ಇವುಗಳಲ್ಲಿ ಪಂಚಪಟಲಿಕೆಯಲ್ಲಿನ ಐದು ಅಧ್ಯಾಯಗಳಲ್ಲಿ ಅಥರ್ವವೇದದ ಕಾಂಡಗಳ ಮತ್ತು ಅವುಗಳಲ್ಲಿರುವ ಮಂತ್ರ ಸಂಖ್ಯೆಗಳ ವಿವರಣೆ ಇದೆ. ಇದರಲ್ಲಿ 20 ಕಾಂಡಗಳಲ್ಲಿ ಸೂಕ್ತಸಂಖ್ಯೆ, ಋಷಿ, ದೇವತೆ ಇವರುಗಳ ನಿರ್ದೇಶವಿದೆ. ದಂತ್ಯೋಷ್ಠವಿಧಿಯು ಚಿಕ್ಕಗ್ರಂಥವಾಗಿದ್ದರೂ, ಬಹಳ ಮಹತ್ವವುಳ್ಳದು. ಅಥರ್ವವೇದೀಯ ಉಚ್ಚಾರಣೆಯ ವಿಚಾರವನ್ನು ತಿಳಿಸುವುದೇ ಇದರ ಮಹತ್ವ. ಶಬ್ದಗಳ ಸ್ವರೂಪ ವಿವೇಚನೆಯೂ ಇಲ್ಲಿದೆ. ಭಾಷಾಶಾಸ್ತ್ರದೃಷ್ಟಿಯಿಂದ ಇದಕ್ಕೆ ಬಹಳ ಮಹತ್ವವಿದೆ.

ಬೃಹತ್ಸರ್ವಾನುಕ್ರಮಣಿಯಲ್ಲಿ ಪ್ರತಿಯೊಂದು ಕಾಂಡದ ಸೂಕ್ತಗಳ ಮಂತ್ರ, ಋಷಿ, ದೇವತೆ ಮತ್ತು ಛಂದಸ್ಸು ಇವುಗಳೆಲ್ಲದರ ಪೂರ್ಣ ವಿವೇಚನೆ ಇದೆ. ಋಗ್ವೇದಕ್ಕೆ ಸರ್ವಾನುಕ್ರಮಣಿ ಹೇಗೋ ಹಾಗೆ ಇದು ಅಥರ್ವವೇದಕ್ಕೆ ಸೂಚಿಕೆಯಾಗಿದೆ.

ಸಾಯಣಾಚಾರ್ಯರು ತಮ್ಮ ಅಥರ್ವವೇದ ಭಾಷ್ಯಭೂಮಿಕೆಯಲ್ಲಿ ಕೌಶಿಕ ಸೂತ್ರ, ವೈತಾನಸೂತ್ರ, ನಕ್ಷತ್ರಕಲ್ಪ, ಆಂಗಿರಸಕಲ್ಪ ಮತ್ತು ಶಾಂತಿಕಲ್ಪಗಳ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಮೂವತ್ತು ಮಹಾಶಕ್ತಿಗಳ ನಿಮಿತ್ತಭೇದಗಳ ವರ್ಣನೆ ನಕ್ಷತ್ರಕಲ್ಪದಲ್ಲಿದೆ. ಅಭಿಚಾರ ಕ್ರಿಯೆಗಳ ಕಾಲ, ಸ್ಥಾನ, ಕರ್ತಾ, ಕಾರಯಿತಾ, ಸದಸ್ಯ, ಆತ್ಮರಕ್ಷೆ ಮುಂತಾದುವುಗಳನ್ನೂ ಇತರರು ಮಾಡಿದ ಅಭಿಚಾರಗಳ ನಿವಾರಣೋಪಾಯಗಳನ್ನೂ ತಿಳಿಸಿದೆ.

ವಿನಾಯಕ ಗ್ರಹದಿಂದ ಗೃಹೀತನಾದವನ ಲಕ್ಷಣ, ವೈನಾಯಕ ಶಾಂತಿಯ ಹೋಮಾದಿಗಳ ವಿಚಾರ ಇವು ಶಾಂತಿ ಕಲ್ಪದಲ್ಲಿ ಬರುವ ವಿಚಾರ. ಅಥರ್ವ ಪರಿಶಿಷ್ಟದಲ್ಲಿ ಇತರ ಅಥರ್ವವೇದೀಯ ವಿಷಯಗಳು ಪ್ರಸ್ತುತವಾಗಿವೆ. ಇವೆಲ್ಲಾ ಅಥರ್ವವೇದದ ವಿವರಣೆಗೆ ಬಹಳ ಉಪಕಾರವಾಗಿವೆ.

ಈ ಸಂಬಂಧದಲ್ಲಿ ಮತ್ತೆರಡು ಗ್ರಂಥಗಳ ವಿಚಾರವನ್ನು ನಾವರಿಯಬೇಕು. ಇವು

ಚರಣವ್ಯೂಹಸೂತ್ರ ಮತ್ತು ನೀತಿಮಂಜರೀ. ಚರಣವ್ಯೂಹಸೂತ್ರ ಶೌನಕ ಪ್ರಣೀತವಾದುದು. ಇದರಲ್ಲಿ 5 ಖಂಡಗಳಿವೆ. ಕ್ರಮವಾಗಿ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದದ ಶಾಖೆಗಳ ವಿವರಣೆ ಮೊದಲ ಖಂಡದಿಂದ ನಾಲ್ಕು ಖಂಡಗಳಲ್ಲಿ ಮಾಡಿದೆ. ಕೊನೆಯ ಖಂಡದಲ್ಲಿ ಫಲಶ್ರುತಿ ಇದೆ.

ಋಗ್ವೇದದಲ್ಲಿ ಉಪಲಬ್ಧವಾಗಿರುವ ಎಲ್ಲ ಆಖ್ಯಾನಗಳ ಸುಂದರ ಸಂಕಲನ ನೀತಿ ಮಂಜರಿಯಲ್ಲಿದೆ. ಅಷ್ಟಕಕ್ರಮದಲ್ಲಿ ಋಗ್ವೇದದ ಆಖ್ಯಾನಗಳನ್ನೆಲ್ಲಾ ಒಂದೆಡೆ ಕ್ರಮವಾಗಿ ಕೂಡಿಸಿದ್ದಾನೆ ದ್ಯಾದ್ವಿವೇದ ಈ ಕೃತಿಯಲ್ಲಿ. ಆಯಾ ಆಖ್ಯಾನಗಳಿಂದ ಕಲಿಯಬೇಕಾದ ನೀತಿಯನ್ನು ಸೂಚಿಸಿರುವುದು ಇದರ ವೈಶಿಷ್ಟ್ಯ.

ಈ ಕೃತಿ ಕ್ರಿ. ಶ. 15 ನೇ ಶತಮಾನದ ಕೊನೆಯ ಭಾಗಕ್ಕೆ ಸೇರಿದೆ. ಇದರಲ್ಲಿ ಋಗ್ವೇದ ಮಂತ್ರಗಳ ವ್ಯಾಖ್ಯಾನವೂ ನಮಗೆ ಅಲ್ಲಲ್ಲಿ ಉಪಲಬ್ಧವಾಗಿದೆ.

ಹೀಗೆ ಅಪಾರವಾದ ಈ ಸಾಹಿತ್ಯ ವೇದಪ್ರಚಾರಕ್ಕೂ ವೇದಾರ್ಥವಿಶದೀಕರಣಕ್ಕೂ ಪ್ರವೃತ್ತವಾಗಿ ಬೆಳೆಯಿತು. ಗಾಢವೂ ಗೂಢವೂ ಆದ ವೇದರಾಶಿಯ ರಕ್ಷಣೆಗೂ ಕಾರಣವಾಯಿತು.

# ಉಪಸಂಹಾರ

ವೇದವಾಙ್ಮಯದ ಸ್ಥೂಲಪರಿಚಯವನ್ನು ಇದುವರೆಗೆ ಮಾಡಿಕೊಡಲಾಯಿತು. ಅನೇಕ ಸಹಸ್ರಮಾನಗಳ ಕಾಲದಲ್ಲಿ ಅನೇಕ ಪ್ರಕಾರಗಳಲ್ಲಿ ಈ ವಾಙ್ಮಯದ ವಿಕಾಸವಾಯಿತು. ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ತುಗಳು ವಿಶಿಷ್ಟವಾದ ಲಕ್ಷಣಗಳನ್ನು ಹೊಂದಿ ಕರ್ಮ ಜ್ಞಾನ ಭಕ್ತಿಗಳನ್ನು ಪ್ರತಿಪಾದಿಸುತ್ತಿವೆ. ಈ ವಾಙ್ಮಯವೇ ಶ್ರುತಿಯೆಂದು ಪ್ರಸಿದ್ಧವಾಗಿದೆ. ಇವು ಅಪೌರುಷೇಯ, ಸ್ವತಃಸಿದ್ಧ ಮತ್ತು ಪರಮಪ್ರಮಾಣವಾಗಿ ಪವಿತ್ರವಾದವು ಎಂಬ ನಂಬಿಕೆ ನಮ್ಮಲ್ಲಿ ರೂಢಮೂಲವಾಗಿದೆ. ಈ ಪವಿತ್ರವಾದ ವಾಙ್ಮಯದ ರಕ್ಷಣೆಗಾಗಿಯೇ ವೇದಾಂಗಗಳು ಮತ್ತು ಅನುಕ್ರಮಣಿಕೆಗಳು ವಿರಚಿತವಾದವು. ವೇದಗಳಲ್ಲಿ ಬಳಸಿರುವ ಈ ಸಂಸ್ಕೃತ ಭಾಷೆಯೇ ಮುಂದೆ ಅನೇಕ ಕಾಲದ ನಂತರ ಮಹತ್ತರವಾದ ಪರಿವರ್ತನೆಗಳನ್ನು ಹೊಂದಿ ಕಾವ್ಯಸಂಸ್ಕೃತವಾಗಿ ಮೂಡಿ ಬಂದಿತು. ಈ ಕಾವ್ಯಸಂಸ್ಕೃತದಲ್ಲಿ ಇತಿಹಾಸಗಳು, ಪುರಾಣಗಳು, ಮಹಾಕಾವ್ಯಗಳು, ನಾಟಕಗಳು, ಶಾಸ್ತ್ರಗ್ರಂಥಗಳು, ಭಾಷ್ಯಗಳು, ವ್ಯಾಖ್ಯಾನಗಳು ಮೊದಲಾದುವೆಲ್ಲಾ ಮುಂದಿನ ಕಾಲಗಳಲ್ಲಿ ವಿರಚಿತವಾದವು. ಸಂಸ್ಕೃತ ವಾಙ್ಮಯದಲ್ಲಿ ರಸವತ್ಕೃತಿಗಳ ಸುಗ್ಗಿಯೇ ಆಯಿತು.

ಸಂಸ್ಕೃತ ವಾಙ್ಮಯ ಹೀಗೆ ವೇದಸಂಸ್ಕೃತ ಮತ್ತು ಕಾವ್ಯಸಂಸ್ಕೃತ ಎಂಬ ಎರಡು ಮುಖ್ಯವಾದ ಪ್ರಕಾರಗಳಲ್ಲಿ ಬೆಳೆದು ಬಂದಿದೆ. ಇವುಗಳಲ್ಲಿ ಮೊದಲನೆಯದಾದ ವೇದ ವಾಙ್ಮಯದ ಸ್ವರೂಪವನ್ನೂ ಪ್ರಕಾರಗಳನ್ನೂ ಇದುವರೆಗೆ ನಿರೂಪಿಸಲಾಯಿತು ವಿಶ್ವದಲ್ಲೇ ಅತಿ ಪ್ರಾಚೀನವಾದ ಈ ವೇದವಾಙ್ಮಯದ ವಿಸ್ತಾರವೈವಿಧ್ಯಗಳನ್ನೂ, ಎಲ್ಲೆಕಟ್ಟುಗಳನ್ನೂ ಇದರಿಂದ ತಿಳಿಯಬಹುದು.

ನಮ್ಮ ಪ್ರಾಚೀನಾರ್ಯರ ದೃಷ್ಟಿ ತಾತ್ತ್ವಿಕವಾದುದು. ಇದರ ಅರಿವು ಮತ್ತು ಅನುಷ್ಠಾನ ಮಾನವಕೋಟಿಯ ಮೇಲ್ಮೆಗೆ ಆವಶ್ಯಕ. ಇತರ ದೇಶಗಳಲ್ಲಿ ನಾಗರಿಕತೆಯ ಹೊಂಬೆಳಕು ಮೂಡುವ ಮೊದಲೇ ಇಲ್ಲಿನ ನಮ್ಮ ಋಷಿಗಳು ಎಂಥ ಭವ್ಯವಾದ ಆದರ್ಶಗಳನ್ನು ರೂಪಿಸಿಕೊಂಡಿದ್ದರೆಂಬುದನ್ನು ನಾವು ಯೋಚಿಸಿದಾಗ ಆಶ್ಚರ್ಯಪರವಶರಾಗುತ್ತೇವೆ. ಅವರು ಹಾಕಿಕೊಟ್ಟಿರುವ ಮಾರ್ಗ ಎಲ್ಲ ಕಾಲಕ್ಕೂ ಎಲ್ಲ ದೇಶಗಳಿಗೂ, ಎಲ್ಲ ಜನಾಂಗಗಳಿಗೂ ಅನ್ವಯಿಸುವಂಥದು. 'ಮಂತ್ರಶ್ರುತ್ಯ ಚರಾಮಸಿ' ಎಂದು ಹೇಳಿರುವಂತೆ ಮಂತ್ರಗಳಲ್ಲಿ ಹೇಳಿರುವ ಹಾಗೆ ನಾವು ನಡೆಯಬೇಕು. 'ಮಾಹಂ ರಾಜನ್ ಅನ್ಯಕೃತೇನ ಭೋಜಂ', ಇನ್ನೊಬ್ಬರ ದುಡಿಮೆಯಿಂದ ನಾವು ಬದುಕುವುದು ಸಲ್ಲದು, 'ತಾಂ ವಹಾಮಿ ಪ್ರತರಣೀಂ' ಆತ್ಮೋದ್ಧಾರ ಸಾಧನವಾದ ಕರ್ತವ್ಯಪಾಲನೆಯನ್ನು ಬಿಡುವುದಿಲ್ಲ. ಇವೇ ಮೊದಲಾದ ಮಾತುಗಳು ಯಾರಿಗೆ ತಾನೇ ಅನ್ವಯಿಸುವುದಿಲ್ಲ ? ಐಹಿಕದೊಡನೆ ಆಧ್ಯಾತ್ಮಿಕ ಜೀವನದ ಮೌಲ್ಯವನ್ನೂ ಸ್ಥಾಪಿಸುವ ಈ ವಾಙ್ಮಯ ಪರಮ ಪವಿತ್ರವೂ ಹೌದು ; ಪರಮೋಪಕಾರಕವೂ ಹೌದು.

ಈ ವಾಙ್ಮಯದ ಪ್ರಕಾರಗಳಲ್ಲಿ ಮುಖ್ಯವಾಗಿ ಎರಡು ಅಂಶಗಳು ಹಾಸುಹೊಕ್ಕಾಗಿ ಬೆರೆತಿರುವುದನ್ನು ನಾವು ಕಾಣುತ್ತೇವೆ. ಧಾರ್ಮಿಕ ಮತ್ತು ಲೌಕಿಕವಾದ ವಿಚಾರಗಳೇ ಅವಾಗಿವೆ. ಲೌಕಿಕ ವಿಚಾರದ ಅಡಿಮಣೆಯ ಮೇಲೆ ಧಾರ್ಮಿಕ ಮಹತ್ವಗಳ ಸಾಧನೆಯನ್ನು ಇದು

ಉದ್ದೇಶಿಸಿದೆ. ಬ್ರಾಹ್ಮಣ ಗ್ರಂಥಗಳೇ ಮೊದಲಾದುವಲ್ಲಿ ಬರುವ ಯಾಜ್ಞಿಕ ನಿರೂಪಣೆಗಳು ಆ ಕಾಲದ ಮನೋಧರ್ಮವನ್ನು ಚಿತ್ರಿಸುತ್ತವೆ. ಇಂದಿನ ಜನಜೀವನಕ್ಕೆ ಅವು ಅನ್ವಯಿಸದೆ ಇರಬಹುದು. ಆದರೂ ಕೆಲವು ವೇಳೆ ಅವು ರೂಪಕಪ್ರವಾದಗಳಾಗಿ ಆಧ್ಯಾತ್ಮಿಕ ವಿಚಾರಗಳನ್ನೇ ಗುರಿಯನ್ನಾಗಿ ಹೊಂದಿರುವುದೂ ಉಂಟು. ಇವುಗಳ ಜೊತೆಯಲ್ಲಿರುವ ಧಾರ್ಮಿಕ ಭಾವನೆಗಳಂತೂ ಎಲ್ಲ ಕಾಲಕ್ಕೂ ಉಪಕಾರಕವಾಗತಕ್ಕವು. ಇಲ್ಲಿ ಪ್ರತಿಪಾದಿಸಿರುವ ಧರ್ಮ ಸನಾತನವಾದುದು ; ನಿತ್ಯನೂತನವಾದುದು. ಸತ್ಯ, ಅಹಿಂಸೆ, ಆರ್ಜವ, ದಾನ, ಅಧ್ಯಯನ, ದೇವಪೂಜನ, ಯಜನ, ತಪಸ್ಸು ಮೊದಲಾದವು ಎಂದೆಂದೂ ಎಲ್ಲರಿಗೂ ಬೇಕಾದುವಾಗಿವೆ. ಉಪನಿಷತ್ತುಗಳ ಉಪದೇಶವಂತೂ ಸರ್ವಕಾಲಗಳಿಗೂ ಅನ್ವಯಿಸುವುದಾಗಿದೆ. ಇವುಗಳ ಪ್ರಭಾವಕ್ಕೆ ನಾವು ಎಷ್ಟರಮಟ್ಟಿಗೆ ಒಳಗಾದರೆ ಅಷ್ಟೂ ನಮಗೆ ಒಳ್ಳೆಯದೇ ಆಗುವುದರಲ್ಲಿ ಸಂದೇಹವಿಲ್ಲ.

ನಮ್ಮ ಸಂಸ್ಕೃತಿ, ನಾಗರಿಕತೆ ಮತ್ತು ಜೀವನ ದರ್ಶನ ಮೊದಲಾದವು ಈ ವೇದ ವಾಙ್ಮಯದಿಂದಲೇ ಪ್ರಭಾವಿತವಾಗಿವೆ. ಇಂದೂ ಒಂದು ರೀತಿಯಲ್ಲಿ ಅವ್ಯಕ್ತವಾಗಿ ಈ ವಾಙ್ಮಯ ನಮಗೆ ಪ್ರೇರಕಶಕ್ತಿಯಾಗಿಯೇ ಉಳಿದಿದೆ. ಆದುದರಿಂದ ಪ್ರತಿಯೊಬ್ಬ ಭಾರತೀಯನಿಗೂ ಈ ವಾಙ್ಮಯದ ಸ್ಥೂಲಪರಿಚಯವಾದರೂ ಇರಬೇಕಾದುದು ಅತ್ಯಂತ ಆವಶ್ಯಕ.

# ಪ್ರಮಾಣ ಗ್ರಂಥಾವಳೀ


ಋಗ್ವೇದ ಸಂಹಿತಾ (ಸಾಯಣಭಾಷ್ಯ ಸಹಿತ) ವೈದಿಕ ಸಂಶೋಧನ ಮಂಡಲ, ಪೂನಾ
ಸಾಮವೇದ ಸಂಹಿತಾ (ಸಾಯಣಭಾಷ್ಯ ಸಹಿತ) ಕಲ್ಕತ್ತಾ ಸಂಸ್ಕರಣ
ಕೃಷ್ಣಯಜುರ್ವೇದ ಸಂಹಿತಾ (ಸಾಯಣಭಾಷ್ಯ ಸಹಿತ) ಪೂನಾ ಸಂಸ್ಕರಣ
ಮೈತ್ರಾಯಣೀಯ ಸಂಹಿತಾ—ಸ್ವಾಧ್ಯಾಯ ಮಂಡಲ, ಔಂಧ್
ಶುಕ್ಲಯಜುರ್ವೇದ ಸಂಹಿತಾ (ಸಾಯಣಭಾಷ್ಯ ಸಹಿತ) ಕಾಶಿ ಸಂಸ್ಕರಣ
ಕಪಿಷ್ಠಲಕಠ ಸಂಹಿತಾ—ಲಾಹೋರ್ ಸಂಸ್ಕರಣ
ಅಥರ್ವವೇದ ಸಂಹಿತಾ (ಸಾಯಣಭಾಷ್ಯ ಸಹಿತ) ಬೊಂಬಾಯಿ ಸಂಸ್ಕರಣ
ಐತರೇಯ ಬ್ರಾಹ್ಮಣಮ್—ಬೊಂಬಾಯಿ ಸಂಸ್ಕರಣ
ಕೌಷೀತಕಿ ಬ್ರಾಹ್ಮಣಮ್—ಪೂನಾ ಸಂಸ್ಕರಣ
ಐತರೇಯ ಆರಣ್ಯಕ (ಸಾಯಣಭಾಷ್ಯ ಸಹಿತ) ಪೂನಾ ಸಂಸ್ಕರಣ
ತಾಂಡ್ಯಮಹಾ ಬ್ರಾಹ್ಮಣ—(ಸಾಯಣಭಾಷ್ಯ ಸಹಿತ) ಕಲ್ಕತ್ತಾ ಸಂಸ್ಕರಣ
ದೈವತ ಬ್ರಾಹ್ಮಣ— " "
ಷಡ್ವಿಂಶ ಬ್ರಾಹ್ಮಣ— " "
ಸಾಮವಿಧಾನ ಬ್ರಾಹ್ಮಣ " "
ತೈತ್ತಿರೀಯ ಬ್ರಾಹ್ಮಣ (ಸಾಯಣಭಾಷ್ಯ ಸಹಿತ) ಪೂನಾ ಸಂಸ್ಕರಣ
" (ಭಟ್ಟಭಾಸ್ಕರಭಾಷ್ಯ ಸಹಿತ) ಮೈಸೂರು ಸಂಸ್ಕರಣ
ತೈತ್ತಿರೀಯಾರಣ್ಯಕ (ಭಟ್ಟಭಾಸ್ಕರಭಾಷ್ಯ ಸಹಿತ) "
ಶತಪಥ ಬ್ರಾಹ್ಮಣ—ಬೊಂಬಾಯಿ ಸಂಸ್ಕರಣ
ಗೋಪಥ ಬ್ರಾಹ್ಮಣ—ವಿ. ಎಸ್. ಅಗರವಾಲಾರಿಂದ ಸಂಪಾದಿತ
ಈಶಾವಾಸ್ಯಾದಿ ಉಪನಿಷತ್ತುಗಳು—ಮದ್ರಾಸ್ ಸಂಸ್ಕರಣ
ಋಗ್ವೇದ ಪ್ರಾತಿಶಾಖ್ಯಾ—ಕಾಶೀ ಸಂಸ್ಕರಣ
ತೈತ್ತರೀಯ ಪ್ರಾತಿಶಾಖ್ಯ—ಮೈಸೂರು ಸಂಸ್ಕರಣ
ವಾಜಸನೇಯೀ ಪ್ರಾತಿಶಾಖ್ಯಾ—ಮದ್ರಾಸ್ ಸಂಸ್ಕರಣ
ನಾರದೀಯಶಿಕ್ಷಾ—ಮೈಸೂರು ಸಂಸ್ಕರಣ
ಯಾಸ್ಕರ ನಿರುಕ್ತ (ದುರ್ಗಭಾಷ್ಯ ಸಹಿತ) ಪೂನಾ ಸಂಸ್ಕರಣ
ಬೃಹದ್ದೇವತಾ (ಶೌನಕಕೃತ) Edited by Macdonell
ಪುಷ್ಪಸೂತ್ರಂ—ಕಾಶೀ ಸಂಸ್ಕರಣ
ಸರ್ವಾನುಕ್ರಮಣೀ—Oxford edition
ಆಪಸ್ತಂಬ ಶ್ರೌತಸೂತ್ರ—ಮೈಸೂರು ಸಂಸ್ಕರಣ
ಋಗ್ವಿಧಾನ—ಜಗದೀಶಲಾಲ್‌ಶಾಸ್ತ್ರಿ ಸಂಪಾದಿತ
ಆಪಸ್ತಂಬ ಗೃಹ್ಯಸೂತ್ರ—ಮೈಸೂರು ಸಂಸ್ಕರಣ

ಆಪಸ್ತಂಬ ಧರ್ಮಸೂತ್ರ—
ಗೌತಮ ಧರ್ಮಸೂತ್ರ—
*Vedic Religion*—L. D. Barnett
*Religion of the Rigveda*—Bloomfield
*Religion of the Rigveda*—Griswold
*On the Veda*—Aurobindo
*Hymns to the Mystic Fire*—Aurobindo
*Ghate's Lectures on Rigveda*—Sukthankar
*Orion*—B. G. Tilak.
*Quintessence of the Upanishads*—Desai
*Rigvedic Legends*—H. L. Hariyappa
*Vedic Religion and Philosophy*—Prabhavananda
*Six Systems of Indian Philosophy*—Max Muller
*History of Sanskrit Literature*— "
*History of Indian Literature*—A. Weber
*History of Indian Literature*—Winternitz
*History of Sanskrit Literature*—A. A. Macdonell
*Vedic Mythology*— "
*Vedic Reader* — "
*History of Vedic Literature*—C. V. Vaidya
*The Arctic Home in the Vedas*—B. G. Tilak
*Rigvedic India*—Avinasachandra Das
*Outlines of Indian Philosophy*—M. Hiriyanna
*Indian Philosophy*—Dr. S. Radhakrishnan
*Outlines of Indian Philosophy*—Deussen
*Essays on Indo-Aryan Mythology*—A. Narayana Iyengar
*Scripture of the Heavens*—C.V. Raghava Rao
*Vaisnavism, Saivism, and Minor Religious Systems*—Dr. Bhandarkar
*Phonetic Observation of Ancient Hindus*—Dr. Siddheswara Varma
*Vedic Chronology*—B. G. Tilak
*Studies in Brahmanas*—Banerjee
*Aitareya Brahmana*—Martin Haug
*Satapatha Brahmana*—Julius Eggeling
*Essays on the Rigveda and Other Topics*—D. K. Tamhankar
*Introduction to Nirukta*—Dr. Lakshman Svarup